# ಶ್ರೀ ಮಾಧವನ ಮಧುಚರಿತ್ರಾ ಮಹದ್ದರ್ಶನ

ಎಸ್.ವಿ. ನಾಗರತ್ನಮ್ಮ

ಪ್ರಕಾಶಕರು

ಎಸ್ ವಿ ನಾಗರತ್ನಮ್ಮ

240, 53ನೇ 'ಸಿ' ಅಡ್ಡರಸ್ತೆ ,

3ನೇ ಬ್ಲಾಕ್, ರಾಜಾಜಿನಗರ,

ಬೆಂಗಳೂರು-560 010.

**SRI MADHAVANA MADHUCHARITRA MAHADDARSHANA**
- written and published by S.V. Nagarathnamma, 240, 53rd 'C' Cross, III Block, Rajajinagar, Bangalore-560 010

ಮೊದಲನೆಯ ಮುದ್ರಣ : 1999

ಪ್ರತಿಗಳು : 1000

ಪುಟಗಳು : 383 + 8



ಮುಖಪುಟ ಚಿತ್ರ, ಕೃಪೆ : ಡಾ|| ವ್ಯಾಸನಕೆರೆ ಪ್ರಭಂಜನಾಚಾರ್ಯರು

ಬೆಲೆ : **ರೂ. 110-00**

ಮುದ್ರಕರು : ಚಂದನ ಪ್ರಿಂಟರ್
ರಾಮಾಂಜನೇಯ ರಸ್ತೆ, ಶ್ರೀನಗರ,
ಬೆಂಗಳೂರು-50.

---

"This book is published with the financial assistance of Tirumala Tirupati Devasthanas, under their SCHEME -AID TO PUBLISH RELIGIOUS BOOKS."



# ಶ್ರೀ ಶ್ರೀ ವಿಜ್ಞಾನ ತೀರ್ಥ ಶ್ರೀಪಾದರ ಅನುಗ್ರಹ

ಈ ಕೃತಿಕಾರರ ಮುಖ್ಯ ಉದ್ದೇಶ್ಯವಾದರೂ ದ್ವೈತಸಿದ್ಧಾಂತದ ವೈಶಿಷ್ಟ್ಯವನ್ನು ತಿಳಿಸಿ ಆ ಸಿದ್ಧಾಂತ ಬೆಳಕಿಗೆ ಬರುವ ಕಾರಣ-ಕಾರಣಕ್ಕೆ ಕಾರಣವಾದ ಎಲ್ಲ ವಿಷಯಗಳನ್ನು - ಶಾಸ್ತ್ರಾಧಾರದಿಂದಲೂ - ಐತಿಹಾಸಿಕ (ವಿಷಯ) ಘಟನೆಗಳು ನಿರೂಪಣೆಯಿಂದಲೂ ಸಾಮಾನ್ಯರಿಗೂ ಅರ್ಥವಾಗುವ ರೀತಿಯಲ್ಲಿ ಬಹುಶ್ರಮಪಟ್ಟು - ಅನೇಕ ಗ್ರಂಥಗಳ ಸಹಾಯ ಮತ್ತು ತಮಗೆ ಶ್ರವಣದಿಂದ ಪ್ರಾಪ್ತವಾದ ಜ್ಞಾನದಿಂದ ಈ **''ಶ್ರೀ ಮಾಧವನ ಮಧುಚರಿತ್ರಾ ಮಹದ್ದರ್ಶನ''** ಕೃತಿಯನ್ನು ಬರೆದಿರುತ್ತಾರೆ. ಈ ಕೃತಿಕರ್ತರು ಇನ್ನೂ ಅನೇಕ ಕೃತಿಗಳನ್ನು ಬರೆದು ಓದುಗರ ಮೆಚ್ಚಿಗೆ ಪಡೆದಿರುವಂತೆ ಈ ಕೃತಿಗೂ ಸಹ ವಿಶೇಷ ಮೆಚ್ಚಿಗೆ ಪ್ರಾಪ್ತವಾಗಲೆಂತ ಆಶಿಸುತ್ತೇವೆ. ಇವರ ಈ ಕೃತಿಯಿಂದ ನಾವು ತಿಳಿಯಬೇಕಾದ ಮುಖ್ಯ ವಿಷಯ ಅಂದರೆ - ಶ್ರದ್ಧೆ ಮತ್ತು ಭಕ್ತಿಯಿಂದ ಶ್ರವಣಾದಿಗಳನ್ನು ಮಾಡಿ ಗ್ರಂಥವುರಸ್ಸರ ಅಧ್ಯಯನವಿಲ್ಲದಿದ್ದರೂ ಇಂತಹ ಕೃತಿಗಳನ್ನು ಬರೆಯಲು ಸಾಧ್ಯವೆಂದು ತೋರಿಸಿಕೊಟ್ಟಿರುತ್ತಾರೆ ಎಂದು ತಿಳಿಸಲು ಹರ್ಷಿಸುತ್ತೇವೆ. ಇವರು ಈ ಕೃತಿಯಲ್ಲಿ ಅನುಸರಿಸಿರುವ ಕ್ರಮ ಶ್ಲಾಘನೀಯ. ಹೇಳಬೇಕಾದ ತಿಳಿಯಬೇಕಾದ ವಿಷಯಗಳನ್ನು ಯಾವಕ್ರಮದಲ್ಲಿ ಬರೆದು ತಿಳಿಸಿದರೆ ಓದುಗರ ಮೆಚ್ಚಿಗೆಗೆ ಸಾಧಕರೀತಿಯಲ್ಲಿ (cronological order)

ಕಲ್ಪನೆಯ ಪೂರ್ವಯೋಜಿತ ಕ್ರಮದಿಂದ ಬರೆದಿರುವುದು ಮೆಚ್ಚುವಂತಹದು.

ನಮ್ಮ ಆರಾಧ್ಯಮೂರ್ತಿ ಗೋಪೀನಾಥ ಇವರಿಗೆ ಇನ್ನೂ ಹೆಚ್ಚಿನ ರೀತಿಯಲ್ಲಿ ಸರ್ವಜ್ಞಾಚಾರ್ಯರ ಸೇವೆಮಾಡುವಂತಾಗಲೆಂದು ಪ್ರಾರ್ಥಿಸುತ್ತಾ ಮಾಡುವ ನಾರಾಯಣ ಸ್ಮರಣೆಗಳು.

ಬೆಂಗಳೂರು

ತಾ॥ 27-1-99

ಶ್ರೀ ಶ್ರೀ ವಿಜ್ಞಾನ ತೀರ್ಥ ಸ್ವಾಮಿಗಳು
ಶ್ರೀ ಪಾದರಾಜಮಠ

# ಶುಭ ನುಡಿ

ಮಹಾಭಾರತ, ಭರತಖಂಡದ, ಅಷ್ಟೇ ಏಕೆ ಇಡೀ ಜಗತ್ತಿನ ಜನಮನವನ್ನು ಸಹಸ್ರಾರು ವರ್ಷಗಳ ಕಾಲ ಆಕರ್ಷಿಸಿ, ಜನರನ್ನು ಸಾತ್ವಿಕಮಾರ್ಗದತ್ತ ತಿರುಗಿಸುವಲ್ಲಿ ಸಫಲವಾಗಿರುವ ಪರಿವರ್ತನಶೀಲ ಮಹಾಕಾವ್ಯ. ಇತಿಹಾಸ. ಮಹಾಭಾರತದ ಮೂಲಶ್ಲೋಕಗಳನ್ನು ಸರಿಯಾಗಿ ಅರ್ಥೈಸುವ ಕಾರ್ಯವೂ ಬಹುಕಾಲದಿಂದ ನಡೆದುಬಂದಿದೆ. ಆದರೆ ಮಹಾಭಾರತ ತಾತ್ಪರ್ಯದಲ್ಲಿರುವ ಸರಿಯಾದ ಅರ್ಥದ ಅಖಂಡ ಪ್ರತಿಫಲನ ಮೊದಲಬಾರಿಗೆ ದಿಟ್ಟವಾಗಿ, ದಟ್ಟವಾಗಿ ಮೂಡ್ಡಿಬಂದದ್ದು ಮಧ್ವಾಚಾರ್ಯರ 'ಮಹಾಭಾರತ ತಾತ್ಪರ್ಯನಿರ್ಣಯ' ಕೃತಿಯ ಮೂಲಕವೇ. ಈ ಕೃತಿ ಮೂಲಮಹಾಭಾರತದ ಮುಖ್ಯ ಸತ್ಯಗಳನ್ನು ಸತ್ವಪೂರ್ಣವಾಗಿ ಸಮರ್ಥನೆ ಮಾಡುತ್ತಾ, ಮೇಲುಮೇಲಕ್ಕೆ ಹೊಂದಾಣಿಕೆಯಾಗದ ವಿಷಯವೈವಿಧ್ಯವನ್ನು ಬುದ್ಧಿಬದ್ಧವಾಗಿ ಸಮನ್ವಯಮಾಡುತ್ತಾ, ಇದ್ದ ಪದಗಳಲ್ಲಿಯೇ ಅಡಗಿರುವ ಒಳಧ್ವನಿಶಕ್ತಿಯನ್ನು ಸಮರ್ಥವಾಗಿ ಹೊರಕಾಣಿಸುತ್ತಾ ಮುನ್ನಡೆಯುತ್ತದೆ. ಅಸಾಧಾರಣ ವಿಚಾರಗಳು ಈ ಕೃತಿಯ ಮೂಲಕ ಪ್ರಕಟಿಸಿದ್ದಾರೆ ಎಂದರೆ ಅತಿಶಯೋಕ್ತಿಯಲ್ಲ.

ಹಾಗಾಗಿಯೇ ರಾಮಾಯಣವೂ ಈ ಕೃತಿಯ ಭಾಗವಾಗಿಯೇ ಬಂದಿದೆ. ಮಹಾಭಾರತದ ತಾತ್ಪರ್ಯವನ್ನು ನಿರ್ಣಯಿಸಲು ರಾಮಾಯಣದ ನಿರ್ಣಯಗಳು ಸಹಕಾರಿಯಾಗಿರುವುದರಿಂದ ಅವು ಮೊದಲಲ್ಲೇ ಬಂದಿವೆ.

ಮಧ್ವಾಚಾರ್ಯರ ಈ ಅಪೂರ್ವಶಾಸ್ತ್ರೀಯ ಗ್ರಂಥವನ್ನು ಸಕಲಸಜ್ಜನರೂ ತಿಳಿಯಬೇಕೆನ್ನುವ ದೃಷ್ಟಿಯಿಂದ ನಾಡಿನ ಉತ್ತಮ ಸಾಹಿತಿಗಳಾಗಿರುವ ಶ್ರೀಮತಿ ಎಸ್.ನಾಗರತ್ನಮ್ಮ ಅವರು ಸರಳ ಕನ್ನಡದಲ್ಲಿ ತಾತ್ಪರ್ಯನಿರ್ಣಯದ ಭಾವಾರ್ಥವನ್ನು ಸುಂದರವಾಗಿ ಅನುವಾದ ಮಾಡುವಲ್ಲಿ ಯಶಸ್ವಿಯಾಗಿದ್ದಾರೆ. ಭಾರತ, ರಾಮಾಯಣ, ಭಾಗವತ, ಹರಿವಂಶ ಮುಂತಾದ ಶ್ರೇಷ್ಠಶಾಸ್ತ್ರೀಯ ಗ್ರಂಥಗಳನ್ನು ಕನ್ನಡದಲ್ಲಿ ಮೂಲದೃಷ್ಟಿಯ ಪಡಿಯಚ್ಚಿನಂತೆಯೇ ಪರಿಣಾಮಕಾರಿಯಾಗಿ ಸೃಷ್ಟಿಸುವಲ್ಲಿ ಶ್ರೀಮತಿ ನಾಗರತ್ನಮ್ಮನವರು ಯಶಸ್ವಿಯಾಗಿದ್ದಾರೆ. ಇವರ ಕೃತಿಗಳಲ್ಲಿ ಜ್ಞಾನ, ಭಕ್ತಿ, ಸಾತ್ವಿಕಪ್ರಚುರತೆ, ವಸ್ತುನಿಷ್ಠ ಅಭಿವ್ಯಕ್ತಿ ಇವೆಲ್ಲಾ ಸಮೃದ್ಧವಾಗಿದ್ದು, ಸಾಹಿತ್ಯವೂ ತತ್ವಜ್ಞಾನದ ಎತ್ತರಕ್ಕೆ ಏರಬಹುದೆಂಬ ಸಾಧ್ಯತೆಯನ್ನು ಈ ಕೃತಿಗಳು ನಿಜಮಾಡುವಲ್ಲಿ ಯಶಸ್ವಿಯಾಗಿವೆ. ಶ್ರೀಮತಿ ನಾಗರತ್ನಮ್ಮನವರ ಬರವಣಿಗೆಯೆಂದರೆ ಸಿದ್ಧಹಸ್ತದ ಚತುರರಚನೆ. ಆಧ್ಯಾತ್ಮಿಕಗ್ರಂಥಗಳ ಅಪಾರ ಅಧ್ಯಯನ

ಸಂಪತ್ತು ಇವರ ಕೃತಿಗಳ ಸಾರ್ಥಕತೆಗೆ ಮೂಲಕಾರಣ.

ಸ್ತ್ರೀಸಮಾಜವು ಆಧ್ಯಾತ್ಮದ ಅಂತರಂಗಕ್ಕೆ ಇಳಿಯುವಂತೆ ಪ್ರೇರೇಪಿಸಿ ಆ ಮೂಲಕ ಹೊಸದೊಂದು ಸುಸಂಸ್ಕೃತ ಸಮಾಜದ, ಸಾತ್ವಿಕ ಸಮಾಜದ, ಸಜ್ಜನಿಕೆಯ ಸಮುದಾಯದ ನಿರ್ಮಾಣಕಾರ್ಯದಲ್ಲಿ ಶ್ರೀಮತಿ ನಾಗರತ್ನಮ್ಮನವರ ಕೃತಿಗಳು ಕ್ರಿಯಾತ್ಮಕವಾಗಿ ತೊಡಗಿದ್ದು, ಶ್ರೀಮತಿಯವರ ಕನ್ನಡಸಾಹಿತ್ಯಸೇವೆ ವಿಶಿಷ್ಟವೆನಿಸುತ್ತದೆ. ಅವರ ಭಾಷೆ ಸುಲಿದ ಬಾಳೆಯ ಹಣ್ಣಿನಂತೆ ಆಕರ್ಷಕ, ಮೃದು, ಕೋಮಲ, ಅರ್ಥಪೂರ್ಣ, ಸತ್ವಪೂರ್ಣ ಹಾಗೂ ಸುಂದರ. ಕಥನಕಲೆ ಸಿದ್ಧಿಸಿರುವ ಇವರ ಶೈಲಿ ಓದುಗರನ್ನು ಸೆಳೆದಕೊಂಡು, ಜುಳಜುಳ ಹರಿವ ನೀರಿನಂತೆ ಹೊಳಪು, ತಂಪು, ಓಘ ಹಾಗೂ ತೇಜಸ್ಸನ್ನು ಪಡೆದಿದೆ. ಸರಾಗವಾಗಿ ಅವು ಓದಿಸಿಕೊಂಡು ಹೋಗುತ್ತವೆ.

ಶ್ರೀಮತಿ ನಾಗರತ್ನಮ್ಮನವರಿಂದ ಸಾಹಿತ್ಯಲೋಕ, ಆಧ್ಯಾತ್ಮಿಕ ಲೋಕ ಎರಡೂ, ಇಂತಹ ಮತ್ತಷ್ಟು ಮೌಲಿಕ ಕೃತಿಗಳನ್ನು ಪಡೆದುಕೊಂಡು ಸಮೃದ್ಧವಾಗಲಿ, ಧನ್ಯವಾಗಲಿ. ಈ ಕಾರ್ಯವನ್ನು ಯಶಸ್ವಿಯಾಗಿ ಮಾಡಲು ಭಗವಂತನು ಅವರಿಗೆ ಆಯಸ್ಸು, ಆರೋಗ್ಯ ಭಾಗ್ಯಗಳನ್ನು ನೀಡಿ ಪೂರ್ಣಾನುಗ್ರಹ ಮಾಡಲಿ ಎಂದು ಹಾರೈಸುವ

—ವಿದ್ಯಾವಾಚಸ್ಪತಿ ಡಾ। ಅರಳುಮಲ್ಲಿಗೆ ಪಾರ್ಥಸಾರಥಿ
ಅಧ್ಯಕ್ಷರು-ಹರಿದಾಸ ಅಕಾಡೆಮಿ, ಬೆಂಗಳೂರು

194-ಲಕ್ಷ್ಮೀನಿಲಯ
ರಾಘವೇಂದ್ರ, ಕಾಲೋನಿ
ಚಾಮರಾಜಪೇಟೆ,
ಬೆಂಗಳೂರು-18.

**ತಾ॥ 27-1-99**

# ಆದರದ ಅರ್ಪಣೆ

ಪರಮ ಪಾವನಮೂರ್ತಿ ಶ್ರೀವೇದವ್ಯಾಸ ದೇವರಿಂದ ವೇದದ ನಿಖಿಲಾರ್ಥಗಳ ಸವಿಸಾರವೂ ಲೋಕಕ್ಕೆ ಲಭ್ಯವಾಯಿತು. ಶ್ರೀಮನ್ಮಹಾಭಾರತಾದಿ ಅನೇಕ ರಸವಾಹಿನಿಗಳನ್ನು ಲೋಕೋದ್ಧಾರಕ್ಕಾಗಿ ರಚಿಸಿ ಮಂಗಳದ ಮಳೆ ಕರೆದ ಕಾರುಣ್ಯಶೀಲರವರು.

ದೇವದೇವೋತ್ತಮರಿಂದ ಒಡಮೂಡಿಬಂದ ಪುರಾಣಗ್ರಂಥಗಳಲ್ಲಿ ಹುದುಗಿರುವ ಅನೇಕ ರಹಸ್ಯಾರ್ಥಗಳನ್ನೂ ಸೂಕ್ಷ್ಮಧರ್ಮಗಳನ್ನೂ ಶ್ರೀಮದಾನಂದತೀರ್ಥಭಗವತ್ಪಾದರು ತಮ್ಮ ಸುಜ್ಞಾನಪ್ರಕಾಶದಿಂದ ಸೆಳೆದುಕೊಂಡು ಸ್ವಚ್ಛಜ್ಞಾನತೀರ್ಥವನ್ನು ಶುದ್ಧಾತ್ಮರಾದವರಿಗೆ ನೀಡಿ ಉಪಕಾರಮಾಡಿದರು. ಆ ಮಹಾತ್ಮರು ಲೋಕರಕ್ಷಣೆಗಾಗಿ ನಿಶ್ಪಕ್ಷಪಾತದಿಂದ ರಚಿಸಿದ ಮೂಲತತ್ತ್ವದ ರಹಸ್ಯಾರ್ಥಗಳು ಪಂಡಿತ ಶ್ರೇಷ್ಠರಿಗೆ ಮಾತ್ರ ಮೀಸಲಾಗಿ ಉಳಿಯದೆ ಸಮಸ್ತಸಜ್ಜನರೂ ಅಧ್ಯಯನಮಾಡಿ ಅನುಷ್ಠಾನಪರರಾಗಿ ಮುಕ್ತಿಯೋಗ್ಯರಾಗಬೇಕೆಂಬ ಸದ್ಭಾವನೆಯಿಂದ ಸುಲಭಶೈಲಿಯಲ್ಲಿ ಕನ್ನಡೀಕರಿಸಿ ಸಾಮಾನ್ಯಜನರಿಗೂ ಆ ಮಹಾಸಂಪತ್ತು ದೊರಕುವಂತೆ ಮಾಡಿರುವ ಭಗವತ್ಕಾರ್ಯಸಾಧಕರಾದ ವಿದ್ವಾಂಸರಿಗೆ ನಾವು ಎಷ್ಟು ಕೃತಜ್ಞತೆಯನ್ನು ಅರ್ಪಿಸಿದರೂ ಸಾಲದಂತಿದೆ.

ಶ್ರೀಕೃಷ್ಣಪರಮಾತ್ಮನ ಆಜ್ಞೆಯಂತೆ ಧರ್ಮಸಂರಕ್ಷಣಾರ್ಥವಾಗಿ ಅನೇಕದೇವತೆಗಳು ಮಾನವರೂಪದಿಂದ ಭೂವಲಯದಲ್ಲಿ ಅವತರಿಸಿಬಂದರು. ದೇವೋತ್ತಮನಾದ ಶ್ರೀಹರಿಯ ಆದೇಶಹೊತ್ತು ಅವನ ಸೇವೆಗಾಗಿಯೇ ಬಂದವರಾದರೂ, ಭೀಷ್ಮ-ದ್ರೋಣ, ಕೃಪ ಅಶ್ವತ್ಥಾಮ ಮೊದಲಾದ ದೇವತಾಪುರುಷರಿಂದಲೂ ಅವರಿಗೆ ಅರಿವಾಗದಂತೆಯೇ ಅವರಿಂದಲೇ ಅನೇಕ ಅಸುರಾಭಾವದ ಕಾರ್ಯಗಳನ್ನು ಮಾಡಿಸಿ ದೈತ್ಯಸಂಹಾರನಡೆಸಿದ ಅವನ ಸಚ್ಚರಿತ್ರೆಯ ಸವಿಯನ್ನು ಬಿಡಿಸಿ ಬಿಡಿಸಿ ಶ್ರೀಮದಾಚಾರ್ಯರು ಬಹಳ ಸುಂದರವಾಗಿ ತಿಳಿಸಿ ಲೋಕಕಲ್ಯಾಣ ಮಾಡಿರುವ ಅವರ ಸ್ಮರಣೆಮಾಡುವ ಸುಜನರಪಾದಧೂಳಿನ ಪ್ರಭಾವವೂ ಅವರ್ಣನೀಯವಾದದ್ದು.

ಪರಮಪೂಜ್ಯರಾದ ಶ್ರೀ ಶ್ರೀಪಾದರಾಜಮಠದ ಶ್ರೀಪಾದಂಗಳವರಾದ ಶ್ರೀ ವಿಜ್ಞಾನತೀರ್ಥಸ್ವಾಮಿಗಳವರು ನನ್ನ ಸತ್ಸಾಧನೆಗೆ ಹುರುಪು ಬರುವಂತೆ ಅನುಗ್ರಹಮಾಡಿ ತಮ್ಮ ಮಂಗಳ ದಾಯಕವಾದ ರಸನುಡಿಗಳನ್ನು ತಮ್ಮ ಅಮೃತಹಸ್ತದಿಂದ ಬರೆದುಕೊಟ್ಟಿರುವುದು ನನ್ನ ಜನ್ಮಾಂತರದ ಪುಣ್ಯವಿಶೇಷದಿಂದ ಎಂದು ಭಾವಿಸಿ ಕೃತಜ್ಞಳಾಗಿದ್ದೇನೆ. ಅನೇಕ ಧರ್ಮರಹಸ್ಯಗಳನ್ನು ತುಂಬಿಕೊಂಡಿರುವ ಮಡಿವಂತಿಕೆಯ ಇಂಥ ಮಹಾಗ್ರಂಥವನ್ನು ನಾನು ಬರೆದಿರುವುದು ಸರಿಯೋ? ತಪ್ಪೋ? ಎಂಬ ಸಂದೇಹದಿಂದ ಅಂಜಿಕೊಂಡು ಶ್ರೀಗಳವರ

ಪಾದದಡಿಯಲ್ಲಿನಿಂತು ನನ್ನ ಸಮಸ್ಯೆಯ ಸಂಕಟವನ್ನು ತೋಡಿಕೊಂಡಾಗ ಆ ಪೂಜ್ಯರ ಮಂದಹಾಸಯುಕ್ತವಾದ ಮುಖಕಮಲದಿಂದ ಹೊರಹೊಮ್ಮಿಬಂದ ಕರುಣಾರಸಪೂರಿತವಾದ ವೇದವಾಕ್ಯಗಳು ನನ್ನ ಭಾಗದ ದೇವತೆಗಳಾಗಿ ನನ್ನಲ್ಲಿಸೇರಿ ನನ್ನ ಈ ಮಹತ್ಸಾಧನೆಯನ್ನು ನೆರವೇರಿಸಿಕೊಟ್ಟಿತು. ಎಂಬ ನನ್ನ ಹುತ್ಪೂರ್ವಕವಾದ ಭಕ್ತಿಯುತಮಾತುಗಳನ್ನು ಶ್ರೀಪಾದರ ಪಾದಕಮಲಗಳಿಗರ್ಪಿಸಿ ಅನಂತಪ್ರಣಾಮಗಳನ್ನು ಅರ್ಪಿಸುತ್ತೇನೆ.

ಇನ್ನು ಪೂಜ್ಯರಾಗಿಯೂ ಸಕಲಜನಪ್ರಿಯರಾಗಿಯೂ ಇರುವ ಶ್ರೀ ಅರಳುಮಲ್ಲಿಗೆ ಪಾರ್ಥಸಾರಥಿಯವರು ಶುಭನುಡಿ ಬರೆದುಕೊಟ್ಟಿರುವ ಅವರ ವಿಶಾಲಭಾವನೆಯನ್ನು ಸ್ತುತಿಮಾಡಲಿಕ್ಕೆ ನನ್ನ ಅಲ್ಪಮತಿಗೆ ಪದಗಳೇ ಸಿಗುತ್ತಿಲ್ಲ. ಶ್ರೀಮಾರುತಿದೇವನು ಶ್ರೀರಾಮಚಂದ್ರನ ಶುಭಸಂದೇಶವನ್ನು ಶಿರದಲ್ಲಿ ಹೊತ್ತು ಕಡಲನ್ನು ಹಾರಿ ಲಂಕಾನಗರಿಗ್ಹಾರಿ ದೈತ್ಯರಾಜ್ಯದಲ್ಲಿ ಶ್ರೀಹರಿಸರ್ವೋತ್ತಮತ್ತ್ವವನ್ನು ಬಿತ್ತಿ ಮೂಲೆಮೂಲೆಗಳಲ್ಲೂ ಶ್ರೀರಾಮಶಬ್ದವನ್ನು ತುಂಬಿ ಶ್ರೀರಾಮನ ಪಾವನಪಾದಧೂಳಿ ಅಲ್ಲಿ ಸೇರುವಂತೆ ಮಾಡಿ ಮಂಗಳವನ್ನುಂಟುಮಾಡಿದಂತೆ ಪೂಜ್ಯರಾದ ಶ್ರೀ ಪಾರ್ಥಸಾರಥಿಯವರೂ ಶ್ರೀಮಧ್ವಗುರುಸಾರ್ವಭೌಮರ ಶುಭಸಂದೇಶವನ್ನು ಶಿರದಲ್ಲಿ ಹೊತ್ತು ಕಡಲಿನಾಚೆಗೂ ಹಾದುಹೋಗಿ ಶ್ರೀಹರಿಸರ್ವೋತ್ತಮತ್ತ್ವದ ಶುದ್ಧಶಾಸ್ತ್ರವನ್ನು ಪ್ರತಿಯೊಬ್ಬರ ಮನದಂಗಳಗಳಲ್ಲೂ ಅರಳಿಸಿ ಅದರ ಸುಗಂಧದ ಸುಖವನ್ನು ಸಮಸ್ತರಿಗೂ ಕರುಣಿಸಿರುವ ಸಾಧನಾಶೂರರು ಅರಳುಮಲ್ಲಿಗೆ ಪಾರ್ಥಸಾರಥಿಯವರು ತಮ್ಮ ಸಹಸ್ರಾರು ಕಾರ್ಯಚಟುವಟಿಕೆಗಳಲ್ಲೂ ಬಿಡುವುಮಾಡಿಕೊಂಡು ನನ್ನ ಕೃತಿಗೆ ತಮ್ಮ ಅಭಿಮಾನದ ಸುಂದರವಾದ ನುಡಿಕೊಡಿಗೆಗಳನ್ನು ಕೊಟ್ಟು ಉಪಕಾರಮಾಡಿರುವ ಅವರಿಗೆ ನನ್ನ ಕೃತಜ್ಞತಾಪೂರ್ವಕ ನಮಸ್ಕಾರಗಳನ್ನು ಸಲ್ಲಿಸುತ್ತೇನೆ.

ತಿರುಮಲಾ ತಿರುಪತಿ ದೇವಸ್ಥಾನದ ಆಧ್ಯಾತ್ಮಿಕ ಗ್ರಂಥ ಪ್ರಕಟನಾ ವಿಭಾಗದವರು ಗ್ರಂಥಮುದ್ರಣಕ್ಕಾಗಿ ಧನಸಹಾಯ ಮಾಡಿರುತ್ತಾರೆ. ಅವರಿಗೆ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಅರ್ಪಿಸುತ್ತೇನೆ.

ನನ್ನ ಮಗ ಚಿ। ಉಪೇಂದ್ರನು ಕೃತಿ ಬೆಳಕಿಗೆ ಬರಲಿಕ್ಕೆ ಬಹಳ ಶ್ರಮವಹಿಸಿದ್ದಾನೆ. ಅವನಿಗೆ ಭಗವಂತನ ಕೃಪಾಭಾಗ್ಯ ನಿರಂತರವಿರಲಿ ಎಂದು ಆಶೀರ್ವದಿಸುತ್ತೇನೆ.

ಶ್ರೀ ಚಂದನ ಪ್ರಿಂಟರ್ಸ್, ಶ್ರೀನಗರ, ಬೆಂಗಳೂರು ಇವರು ಸಕಾಲಕ್ಕೆ ಸರಿಯಾಗಿ, ಅಂದವಾಗಿ ಮುದ್ರಣ ಮಾಡಿಕೊಟ್ಟಿದ್ದಾರೆ. ಅವರಿಗೆ ಅಭಿಮಾನಪೂರ್ವಕವಾದ ವಂದನೆಗಳು

**ಬೆಂಗಳೂರು** ಎಸ್.ವಿ. ನಾಗರತ್ನಮ್ಮ

**ತಾ॥ 27-1-99** ಲೇಖಕಿ

# ಶ್ರೀ ಮಾಧವನ ಮಧುಚರಿತ್ರಾ ಮಹದ್ದರ್ಶನ

## ದೇವತಾ ಪ್ರಾರ್ಥನೆ

**ಸ್ವಾಮೀ** : ''ಕ್ಷರಾಕ್ಷರ ಪುರುಷೋತ್ತಮಾ, ನಾಶರಹಿತಾ, ನಿನ್ನ ಪಾದಪಲ್ಲವವನ್ನೇ ಆಶ್ರಯ ಪಡೆದಿರುವ ನಮಗೆ ಈಗ ಪರಿಶುದ್ಧವಾದ ಜ್ಞಾನದ ಬೆಳಕು ದೊರಕದೆ ಅಜ್ಞಾನದ ಕತ್ತಲಲ್ಲಿ ಕಾತರಿಸುತ್ತಿದ್ದೇವೆ. ಸಚ್ಛಾಸ್ತ್ರಗಳ ರಹಸ್ಯಾರ್ಥಗಳನ್ನು ತಿಳಿಯಲಾರದೆ ಮಂದಮತಿಗಳಾಗಿ ನೊಂದು ಬೆಂದು ನಿನ್ನ ಬಳಿಗೆ ಬಂದು ಮೊರೆಯಿಟ್ಟು ಪ್ರಾರ್ಥಿಸುತ್ತಿದ್ದೇವೆ. ಬ್ರಹ್ಮದೇವರ ಆಜ್ಞೆಯಂತೆ ನಮಗೆ ಒದಗಿರುವ ಈ ದುರ್ಭಾಗ್ಯದ ಕಾರಣವನ್ನೂ ಸರ್ವಜ್ಞಮೂರ್ತಿಯಾದ ನಿನ್ನ ಮುಂದೆ ತೋಡಿಕೊಳ್ಳಲು ಬಂದಿದ್ದೇವೆ'' ಎಂದು ಸಕಲ ದೇವತಾ ಪರಿವಾರವೂ ಮಹಾವಿಷ್ಣುವನ್ನು ಕುರಿತು ಹೇಳಿದರು.

ಸರ್ವಶಕ್ತನಾದ ಸರ್ವೇಶ್ವರಾ! ನಮ್ಮ ಸುಜ್ಞಾನ ಸಂಪತ್ತು ನಮ್ಮ ಅಪರಾಧದಿಂದಲೇ ದೂರವಾಯಿತು. ಕಾರಣವೇನೆಂದರೆ ತಪಸ್ಸು, ಯಾಗ, ಮೊದಲಾದ ನವವಿಧ ಭಕ್ತಿ ಕುಸುಮಗಳಿಂದಲೂ ನಾವು ನಿನ್ನ ಪಾದಮೂಲದಲ್ಲಿ ನಮ್ಮ ಮನಸ್ಸನ್ನು ಸೇರಿಸಿ ನಿನ್ನ ಸತ್ಯವಾದ ತತ್ವಾಮೃತವನ್ನು ಪಡೆದು ಪರಮಸಂತೋಷದಿಂದ ಇದ್ದೆವು. ಇದ್ದಕ್ಕಿದ್ದಂತೆಯೇ ಭಯಂಕರವಾದ ಬರಗಾಲ ಬಂದೊದಗಿತು. ಆಗ ನಮಗೆ ದೇವತಾಕಾರ್ಯಗಳನ್ನು ಆಚರಿಸಲಾಗದೆ ಆಶ್ರಮಧರ್ಮಗಳು ಅಲ್ಲೋಲಕಲ್ಲೋಲವಾಯಿತು. ನಮ್ಮ ಚಿತ್ತಾಕಾಶದಲ್ಲಿ ನಿನ್ನ ದರ್ಶನವಿಲ್ಲದೆ ಅನಾಥರಾದೆವು ಕಂಗಾಲಾಗಿ ಅಲೆಯುವಂತಾಗಲು, ಸರ್ವಜೀವಿಗಳಲ್ಲೂ ನಿಂತು ಸಕಲವನ್ನು ಮುಖ್ಯಪ್ರಾಣನೊಂದಿಗೆ ನಡೆಸತಕ್ಕವನಾದ ಸ್ವಾಮಿಯಾದ ನೀನು ಗೌತಮರ ಅಂತರ್ಗತನಾಗಿ ಅವರಿಂದ ನಮಗೆ ರಕ್ಷಣೆ ಕೊಡಿಸಿದಿ. ಗೌತಮರು ನಮ್ಮೆಲ್ಲರನ್ನೂ ತಮ್ಮ ಆಶ್ರಮದಲ್ಲಿಟ್ಟುಕೊಂಡು ಆನಂದಪಡಿಸುತ್ತಿದ್ದರು. ಸ್ವಾಮೀ! ನಿನ್ನ ಕರುಣಾಕಟಾಕ್ಷದಿಂದಲೂ ಗೌತಮರ ತಪೋಪುಣ್ಯದಿಂದಲೂ ನಮ್ಮ ಜಪತಪಾನುಷ್ಠಾನಗಳನ್ನೂ ಪಾಠಪ್ರವಚನಾದಿಗಳನ್ನೂ ಆನಂದದಿಂದ ಆಚರಿಸಿಕೊಂಡು ನಮ್ಮ ಸುಜ್ಞಾನ ಪ್ರಕಾಶದಲ್ಲಿ ನಿನ್ನ ದರ್ಶನ ಪಡೆದು ತಪೋವಿಹಾರದಲ್ಲಿ ಮೈಮರೆತಿದ್ದವು. ಸದ್ಧರ್ಮಾಚರಣೆಗಳು ಗೌತಮಮುನಿಗಳ ಬೆಂಬಲದಿಂದ ಹೇರಳವಾಗಿ ನಡೆಯುತ್ತಿರಲು ಸ್ವಚ್ಛವಾದ ಶಾಸ್ತ್ರಾಧ್ಯಯನಗಳಿಗೆ ಅಂಜಿದ ಬರಗಾಲ ಭಯಪಟ್ಟು ಓಡಿತು.

ಪರಮವೈಷ್ಣವ ಧರ್ಮವೂ ಬಯಂಕರವಾದ ಬರಗಾಲವೆಂಬ ಶತೃವನ್ನು ಧ್ವಂಸಮಾಡಿ ಶ್ರೀ ರಮಾದೇವಿಯರ ಕರುಣಾಕಟಾಕ್ಷ ದೊರಕಿಸಿಕೊಟ್ಟಿತು. ಬರಗಾಲದ ಭಯ ತಪ್ಪಿತು. ಇನ್ನು

ನಾವು ಗೌತಮರಿಗೆ ಭಾರವಾಗದೆ ಸ್ವತಂತ್ರರಾಗಿ ನಮ್ಮ ನಮ್ಮ ಸ್ಥಾನಗಳಿಗೆ ಹೋಗಿ ನಮ್ಮ ತಪೋಸಾಧನೆ ಮಾಡಿಕೊಳ್ಳಬೇಕೆಂಬ ಭಾವದಿಂದ ನಾವೆಲ್ಲರೂ ಗೌತಮರಿಗೆ ಕೃತಜ್ಞರಾಗಿ ಹೊರಡಲು ಅಪ್ಪಣೆ ಬೇಡಿದೆವು.

ಗೌತಮರು ಅದಕ್ಕೆ ಸಮ್ಮತಿಸಲಿಲ್ಲ. ಏಕೆಂದರೆ ಅವರಿಗೆ ನಮ್ಮಿಂದ ಏನೂ ಲಾಭವಿಲ್ಲದಿದ್ದರೂ ಭಗವಂತನ ಜ್ಞಾನಯಜ್ಞ ಯಥೇಚ್ಛವಾಗಿ ಭಾಗವತ ಸಮೂಹದೊಡನೆ ನಡೆಯಲಿ. ಭಗವದ್ದಾಸರ ಸೇವೆ ನಿರಂತರ ನಡೆಯಲಿ ಎಂಬ ಧ್ಯೇಯದಿಂದ ತಡೆಯುತ್ತಿದ್ದರು. ಆಗ ನಾವು ಗೌತಮರಿಂದ ತಪ್ಪಿಸಿಕೊಂಡು ಹೋಗುವ ಯೋಜನೆಯಲ್ಲಿ ಮುಳುಗಿದ್ದೆವು.

ಆ ಸಮಯದಲ್ಲಿ ಪರಮವೈಷ್ಣವ ಶಿಖಾಮಣಿಯಾದ ಈಶ್ವರನ ಪುತ್ರನಾದ ಗಣಪತಿಯು ನಮಗೆ ತಕ್ಕ ಬುದ್ಧಿ ಕಲಿಸಲಿಕ್ಕಾಗಿಯೇ ಬಂದನೋ ಎನ್ನುವಂತೆ ನಮ್ಮ ಬಳಿಗೆ ಬಂದು ''ವಿಪ್ರವರರೇ! ನೀವು ಋಷಿಬಂಧನದಿಂದ ಬಿಡುಗಡೆ ಆಗಲು ಒಂದು ಉಪಾಯ ಹೇಳುತ್ತೇನೆ. ಒಂದು ಹಸುವನ್ನು ನಿರ್ಮಿಸಿಕೊಡುತ್ತೇನೆ. ಅದನ್ನು ಗೌತಮರ ಹೊಲದಲ್ಲಿ ಮೇಯಲು ಬಿಟ್ಟಾಗ ಅದನ್ನು ಓಡಿಸಲು ಮುನಿಗಳು ಬಂದು ಸ್ಪರ್ಶಿಸಿದಾಗ ಅದು ಮಡಿದು ಮಲಗುತ್ತದೆ. ಆಗ ಋಷಿಗಳು ಪ್ರಾಯಶ್ಚಿತ್ತಾರ್ಥವಾಗಿ ತಪಸ್ಸಿಗೆ ತೊಡಗುತ್ತಾರೆ. ಆ ಸಮಯದಲ್ಲಿ ನೀವು ಇಲ್ಲಿಂದ ಪರಾರಿ ಆಗಬಹುದು'' ಎಂದು ಹೇಳಿದಂತೆ ಒಂದು ಹಸು ಸೃಷ್ಟಿಯಾಯಿತು. ಅದು ಗೌತಮರ ಹೊಲದಲ್ಲಿ ಬೆಳಸು ತಿನ್ನುತ್ತ ನಿಂತಿರುವುದನ್ನು ಕಂಡ ಗೌತಮರು ಶ್ರೀ ಹರಿ ಪ್ರೇರಣಾನುಸಾರ ಅದನ್ನು ಓಡಿಸಲು ಸ್ಪರ್ಷ ಮಾಡಿದ ಮಾತ್ರದಿಂದಲೇ ಅದು ಸತ್ತುಬಿದ್ದಿತು.

ಗೌತಮರೇನು ಅಜ್ಞಾನಿಗಳಲ್ಲ, ಹಸು ಕೃತಕವಾದದ್ದೆಂದು ತಿಳಿದರು. ಆದರೆ ಗೋರೂಪದಲ್ಲಿ ದೈವತಾಂಶವಿರುವುದರಿಂದ ಗೋಹತ್ಯಾದೋಶಪರಿಹಾರ್ಥವಾಗಿ ತಪಸ್ಸಿಗೆ ತೊಡಗಿದರು.

ಆಗ ಪರಮಾತ್ಮನ ಪರಮಭಕ್ತನಾದ ಪರಶಿವನು ತನ್ನ ಶಿರದಲ್ಲಿ ಧರಿಸಿಕೊಂಡಿದ್ದ ವಿಷ್ಣುಪಾದೋದಕವನ್ನು ಶ್ರೀ ಹರಿಯಾಜ್ಞೆಯಂತೆ ಸತ್ತ ಹಸುವಿನ ಮೇಲೆ ಹರಿಸಿದಾಗ ಹಸು ಬದುಕಿತು. ಗೌತಮರು ತಮ್ಮ ಜ್ಞಾನಚಕ್ಷಸ್ಸಿನಿಂದ ಹಸು ಸಜೀವವಾಗಿದ್ದನ್ನು ನೋಡಿ ಆನಂದಹೊಂದಿದರು.

ಬರಗಾಲದಲ್ಲಿ ಬೆಂದು ಬಸವಳಿದ ಬ್ರಾಹ್ಮಣರನ್ನು ಆದರದಿಂದ ಸ್ವಾಗತಿಸಿ ಸಂತೋಷಪಡಿಸಿ ಸತ್ಸಾಧನೆಗೆ ನೆರವಾದ ಮುನಿದೇವನಿಗೆ ದ್ರೋಹಮಾಡಿದ ನಮ್ಮ ಸುಜ್ಞಾನ ಸಂಪತ್ತೆಲ್ಲವನ್ನು ಅವರ ಮಹಿಮಾನ್ವಿತವಾದ ತಪೋಕಿರಣ ಸೆಳೆದಿತು. ಅಂದಿನಿಂದಲೂ ನಾವು ಮಂದಮತಿಗಳಾಗಿ ನಿಸ್ಸಾರವಾಗಿದ್ದೇವೆ.

ದೇವಾ; ನಮಗೆ ಅಜ್ಞಾನದ ಅಂಧತೆ ಉಂಟಾಗಲು ದೂರ್ವಾಸರ ಶಾಪವೂ ಒಂದು ಕಾರಣವಾಯಿತು. ದೂರ್ವಾಸರು ಸಂತಾನವೃಕ್ಷದ ದಿವ್ಯಕುಸುಮಮಾಲಿಕೆಯನ್ನು ದೇವೇಂದ್ರನಿಗೆ

ಕೊಟ್ಟಾಗ ದೇವೇಂದ್ರನು ಅದನ್ನು ತನ್ನ ಐರಾವತಕ್ಕೆ ಅಲಂಕರಿಸಿದನು. ಆನೆ ಮದೋದ್ರೇಕದಿಂದ ಅದನ್ನು ಹಿರಿದು ಬಿಸಾಡಿತು. ಅದರಿಂದ ದೂರ್ವಾಸರು ಕುಪಿತರಾಗಿ ಶ್ರೀಹರಿನಿರ್ಮಾಲ್ಯವನ್ನು ರಮಾದೇವಿಯರು ತಮ್ಮ ಮಂಗಳಹಸ್ತದಲ್ಲಿ ಧರಿಸಲು ಕಾದಿರುತ್ತಾರೆ. ಅಂಥ ಹರಿಪ್ರಸಾದಕ್ಕೆ ದೇವೇಂದ್ರ ಅಪಮಾನಗೊಳಿಸಿರುವುದರಿಂದ ಅವನಿಗೆ ಶ್ರೀ ಲಕ್ಷ್ಮಿ ಕಟಾಕ್ಷ ತಪ್ಪಲಿ'' ಎಂದು ಶಪಿಸಿದರು. ದ್ವಿಜವಾಕ್ಯವನ್ನು ಸತ್ಯ ಮಾಡಲಿಕ್ಕಾಗಿ ದೈತ್ಯರು ಸಂಪತ್ತೆಲ್ಲವನ್ನೂ ಅಪಹರಿಸುವಂತೆ ರಮಾರಮಣರೇ ಅವರಲ್ಲಿ ನಿಂತು ನಡೆಸಿದರು. ಸ್ವರ್ಗ ರಾಕ್ಷಸರ ಪಾಲಾಯಿತು. ಆಗ ಬ್ರಹ್ಮದೇವರ ಪ್ರಾರ್ಥನೆಯಂತೆ ಮಹಾವಿಷ್ಣು ಸಮುದ್ರಮಥನ ಕಾರ್ಯವನ್ನು ದೇವದಾನವರಿಂದ ತಾನೇ ನಿಂತು ಮಾಡಿಸಿದನು. ಮೊದಲು ಹಾಲಾಹಲ ವಿಷ ಉತ್ಪತ್ತಿಯಾಯಿತು. ಆ ವಿಷದ ಘಾಟಿನಿಂದ ಪ್ರಪಂಚವೇ ತಲ್ಲಣಗೊಳ್ಳುವಾಗ ಶ್ರೀಶನಾಜ್ಞೆಯಂತೆ ಮುಖ್ಯ ಪ್ರಾಣದೇವರು ಆ ವಿಷದ ಸಾರವನ್ನೂ ಹಿಂಡಿ ತಾವೇ ಅದನ್ನು ಪಾನಮಾಡಿ ಜಠರಾಗ್ನಿಯಲ್ಲಿ ಸೇರಿಸಿ ಸುಟ್ಟು ಹಾಕಿದರು. ಅವರು ಅರೆದಾಗ ಹೊರಟ ವಿಷಕಣಗಳು ನಮ್ಮಲ್ಲಿ ಸೇರಿ ಆಗಲೂ ನಮ್ಮ ಸ್ವಚ್ಛ ಜ್ಞಾನ ಮಲಿನವಾಗಲು ಕಾರಣವಾಯಿತು. ಸಾರತೆಗೆದ ವಿಷಪಾನವನ್ನು ರುದ್ರದೇವರು ಪಾನಮಾಡಿ ಸೇವೆ ಸಲ್ಲಿಸಿದರು. ದೇವಾ ಈ ಕಾರಣಗಳಿಂದ ನಮ್ಮ ಜ್ಞಾನಕುಸುಮ ಒಣಗಿಹೋಗಿದೆ. ಮರುಕದಲ್ಲಿ ಮುಳುಗಿರುವ ನಮ್ಮ ಮುದುಡಿದ ಮನೋಕೊಳದಲ್ಲಿ ಜ್ಞಾನಪುಷ್ಪ ವಿಕಸಿತಗೊಳ್ಳುವಂತೆ ನೀನು ಅನುಗ್ರಹಿಸು'' ಎಂದು ಪ್ರಾರ್ಥಿಸಿಕೊಂಡರು.

## ಕರುಣಾಳುವಿನ ಕೃಪಾಕವಚ

ಕೃಪಾಳು ಕೃಷ್ಣ ತನ್ನನ್ನೇ ಆಶ್ರಯಿಸಿಬಂದ ಭಕ್ತರನ್ನು ಬಿಡುವನೇ? ಎಲ್ಲರನ್ನೂ ಕರುಣಾದೃಷ್ಟಿಯಿಂದ ನೋಡಿ ತಪೋಶ್ರೇಷ್ಠರೇ! ನೀವು ಚಿಂತಿಸಬೇಡಿರಿ. ನಿಮಗೆ ಪರಿಶುದ್ಧವಾದ ಜ್ಞಾನ ಉದಯಿಸಲಿಕ್ಕಾಗಿ ಸಕಲ ಸಾರಭೂತವಾದ ವೇದಶಾಸ್ತ್ರಾದಿಗಳಲ್ಲಿ ಮಿಥ್ಯಾಜ್ಞಾನವುಂಟಾಗದಂತೆ ಬ್ರಹ್ಮಸೂತ್ರಾದಿ ಸಮೀಚೀನವಾದಂಥ ಶಾಸ್ತ್ರರತ್ನಗಳನ್ನೂ ಲೋಕದ ಸುಜೀವಿಗಳೆಲ್ಲರೂ ತಿಳಿಯುವಂತೆ ನಿರ್ಮಾಣ ಮಾಡಲಿಕ್ಕಾಗಿ ಮಹಾವಿಷ್ಣುವೇ ಪರಾಶರ ಮುನಿಯಲ್ಲಿ ಮಗನಾಗಿ ಅವತರಿಸಿಬಂದು ವೇದವ್ಯಾಸನೆಂಬ ಹೆಸರಿನಿಂದ ದಿವ್ಯಜ್ಞಾನ ಜ್ಯೋತಿಯನ್ನು ಜಗತ್ತಿನಲ್ಲಿ ಸ್ಥಾಪನೆಮಾಡಿ ಮಿಥ್ಯಾಜ್ಞಾನವನ್ನು ನಿವಾರಣೆಮಾಡಿ ಸಚ್ಛಾಸ್ತ್ರಸಂಪತ್ತು ವೃದ್ಧಿಯಾಗುತ್ತದೆ'' ಎಂದು ಅಭಯಪ್ರಧಾನ ಮಾಡಿದಂತೆ ಪರಾಶರಮುನಿಗಳಲ್ಲಿ ಅವತರಿಸಿ ನಡೆಸಿದ ಮಹಚ್ಚರಿತ್ರೆ ಅವರ್ಣನೀಯವಾದದ್ದು.

ಪರಾಶರ ಮುನಿಗಳನ್ನೇ ನಿಮಿತ್ತಮಾಡಿಕೊಂಡು ಗರ್ಭವಾಸರಹಿತನಾದ ಮಹಾವಿಷ್ಣು ಏತಕ್ಕಾಗಿ ಅವತರಿಸಿದನೆಂಬುದನ್ನು ಪರಾಶರರ ತಪೋಪುಣ್ಯದಿಂದಲೇ ಎಂಬ ಸಂಗತಿ ಬಹಳ ರಸಮಯವಾಗಿದೆ'' ಎಂದು ಹೇಳಿದರು. ವಿಶ್ವಾಮಿತ್ರರ ಅಸುರಾವೇಶದ ಮಾತ್ಸರ್ಯದ ಮಾರಿ

ವಸಿಷ್ಠರ ಪುತ್ರರೆಲ್ಲರನ್ನೂ ನಾಶಪಡಿಸಿತು. ಪಾಪ ವಸಿಷ್ಠರಿಗೆ ಉಂಟಾದ ಪುತ್ರಶೋಕ ಸಹಿಸಲಾರದಾದರೂ ವಸಿಷ್ಠರ ಕ್ಷಮೆ ಭೂದೇವಿಯ ಕ್ಷಮಾಗುಣಕ್ಕೆ ಸಮಾನವಾಗಿತ್ತು.

ವಂಶದ ಒಂದು ಕುಡಿಯೂ ಉಳಿಯದಂತೆ ನಿರ್ವಂಶವಾದಾಗ ವಸಿಷ್ಠರು ಅತೀವ ದುಃಖದಿಂದ ಮಕ್ಕಳಿಲ್ಲದ ಇಂಥ ಹಾಳುಮನೆಯಲ್ಲಿರುವುದಕ್ಕಿಂತಲೂ ಆತ್ಮಹತ್ಯೆಯೇ ಸರಿಯಾದ ಮಾರ್ಗ ಎಂದುಕೊಂಡು ಮೇರುಪರ್ವತದಿಂದ ಕೆಳಗೆಬಿದ್ದರು. ಕಾಡ್ಗಿಚ್ಚಿನಲ್ಲಿ ನುಗ್ಗಿದರು. ಪ್ರವಾಹದಲ್ಲಿ ಧುಮುಕಿದರು. ಏನುಮಾಡಿದರೂ ಭಗವಂತನ ಪ್ರಾಣಪ್ರೀಯರಾದ ಮುನಿದೇವರ ಅಂತರ್ಗತನಾದ ಮುಖ್ಯಪ್ರಾಣದೇವರು ಅವರನ್ನು ಬಿಟ್ಟಗಲದೆ ರಕ್ಷಿಸುತ್ತಿದ್ದನು. ಆಗ ವಸಿಷ್ಠರು ಎಲ್ಲವೂ ಹರಿಯ ಇಚ್ಛೆ ನಾವು ಅಸ್ವತಂತ್ರರಾದರೂ ಭಗವಂತನ ಲೀಲಾ ಯಾರನ್ನೂ ಬಿಡದೆ ವ್ಯಾಮೋಹದಲ್ಲಿ ಮುಳುಗಿಸುತ್ತದೆಂದು ತಿಳಿದು ಭಗವಚ್ಚಿಂತನೆಯಲ್ಲಿ ಬರುತ್ತಿದ್ದರು. ಆಶ್ರಮದ ಬಳಿ ವಸಿಷ್ಠರ ಹಿರಿಯ ಸೊಸೆ ಶಕ್ತಿ ಋಷಿಯ ಪತ್ನಿಯು ಗರ್ಭವತಿ ಆಗಿದ್ದಳು. ಆದ್ದರಿಂದ ಸಹಗಮನ ಮಾಡದೆ ಮಾವನವರ ಸೇವಾಶುಶ್ರೂಷೆಗಳನ್ನು ಮಾಡಿಕೊಂಡಿದ್ದಳು. ಗರ್ಭಿಣಿಯಾದ ಆಕೆಯ ಉದರದರಮನೆಯೊಳಗಿಂದ ಸುಶ್ರಾವ್ಯವಾದ ವೇದಧ್ವನಿ ಕೇಳಿ ಬರುತ್ತಿದ್ದುದನ್ನು ಕೇಳಿದ ವಸಿಷ್ಠರ ಆನಂದಕ್ಕೆ ಪಾರವೇ ಇಲ್ಲದಂತಾಯಿತು. ಆ ಶುಭಮುಹೂರ್ತದಿಂದಲೇ ಆತ್ಮಹತ್ಯೆಯ ವಿಚಾರ ಮರೆತರು. ವಂಶೋದ್ಧಾರಕನ ಆಗಮನವನ್ನೇ ಆನಂದದಿಂದ ಕಾಯುತ್ತ ತಪೋಲೋಕದಲ್ಲಿ ಶ್ರೀ ಹರಿಧ್ಯಾನಾಮೃತಪಾನಮತ್ತರಾಗಿರಲು ಒಂದು ಶುಭಮುಹೂರ್ತದಲ್ಲಿ ಋಷಿ ರಮಣಿಯು ಒಬ್ಬ ಮಹಾಪುರುಷನಿಗೆ ಜನ್ಮಕೊಟ್ಟಳು.

ವಸಿಷ್ಠರು ತಮ್ಮ ಕುಲದೀಪನಾದ ಮೊಮ್ಮಗನನ್ನು ನೋಡಿ ಆನಂದದಿಂದ ತಮ್ಮನ್ನು ಮರಣದಿಂದ ಪಾರುಮಾಡಿದ ವಂಶೋದ್ಧಾರಕನಿಗೆ ಪರಾಶರ ಎಂಬ ಹೆಸರಿಟ್ಟರು.

ಪರಾಶರರು ತಪೋಶೀಲರಾದ ವಸಿಷ್ಠರ ಆಶ್ರಯದಲ್ಲಿ ಸಕಲವಿದ್ಯಾಪಾರಗಂತನಾಗಿ ಪ್ರಸಿದ್ಧನಾದನು. ಪರಾಶರರಿಗೆ ತಮ್ಮ ತಂದೆಯು ಕಲ್ಮಾಷ ಪಾದನ ಅಸುರಾವೇಶದಿಂದ ಮೃತಪಟ್ಟ ವಿಷಯವನ್ನು ತಿಳಿದು ಬಹಳ ದುಃಖದಿಂದ ಈ ಕ್ಷಣವೇ ಸರ್ವಲೋಕವನ್ನು ನಾಶಮಾಡಿ ನನ್ನ ಪಿತೃ ಋಣದಿಂದ ಮುಕ್ತನಾಗುವೆನು. ನಿರಪರಾಧಿಯಾದ ಬ್ರಾಹ್ಮಣರನ್ನು ಹತ್ಯಮಾಡಿದ ಪಾಪಿಗಳನ್ನು ಉಳಿಸಬಾರದೆಂದು ಉಗ್ರರಾದರು. ಆಗ ವಸಿಷ್ಠರು ''ಮಗೂ; ನಮ್ಮ ತಪಸ್ಸನ್ನು ಲೋಕನಾಶಕ್ಕೆ ಉಪಯೋಗಿಸಬಾರದು ಕ್ರೋಧದ ಸಂಯಮ ಪುಣ್ಯ ಸಂಚಯಕ್ಕೆ ಕಾರಣವಾಗುತ್ತದೆ. ಬ್ರಾಹ್ಮಣನು ತಪಸ್ಸು ಮಾಡುವುದು ಎಷ್ಟು ಮುಖ್ಯವೋ ಸಂಪಾದಿಸಿದ ಪುಣ್ಯವನ್ನು ಉಳಿಸಿಕೊಳ್ಳುವುದೂ ಅಷ್ಟೇ ಮುಖ್ಯ'' ಎಂಬುದಾಗಿ ಅನೇಕ ಪ್ರಮಾಣ ಉಪಾಖ್ಯಾನಗಳನ್ನು ತಿಳಿಸಿ ಪರಾಶರರು ಪರಮೋನ್ನತ ತಪಸ್ವಿಯಾಗಲು ಕಾರಣರಾದರು.

## ಪರಾಶರರಿಗೆ ಪರಮಾತ್ಮನ ಪರಮಾನುಗ್ರಹ

ಪರಾಶರರು ಅನಂತಗುಣಪರಿಪೂರ್ಣನಾದ ಅನಾದಿಮೂರ್ತಿಯ ಗುಣಕಥನದ ಸಕಲ

ಮಹಿಮಾತತ್ವಸಾರವನ್ನೂ ವಸಿಷ್ಠರ ಮೂಲಕವಾಗಿ ಅರಿತು ಶ್ರೀ ಹರಿಯೇ ಸರ್ವಸ್ವತಂತ್ರನೆಂದು ಚೆನ್ನಾಗಿ ತಿಳಿದು ಅವನನ್ನೇ ತಮ್ಮ ಮನೋಮಾಣಿಕ್ಯ ಮಂಟಪದಲ್ಲಿ ಸ್ಥಾಪಿಸಿಕೊಂಡು ಎಡಬಿಡದೆ ಧ್ಯಾನಿಸುತ್ತಲಿದ್ದಾಗ ಭಕ್ತರ ಬಂಧುವಾದ ಕರುಣಾಸಿಂಧು ಶ್ರೀಹರಿ ಒಲಿದು ಬಂದು ''ವತ್ಸಾ! ನಿನ್ನ ಇಷ್ಟವೇನು? ಕೇಳಿದ್ದು ನೀಡಲು ಬಂದಿದ್ದೇನೆ'' ಎಂದನು. ಪರಾಶರನಿಗೆ ಭಗವದ್ದರ್ಶನದ ಆನಂದದ ಅಮಲಿನಲ್ಲಿ ತನ್ನನ್ನು ತಾನೇ ಮರೆತನು. ಮೈಮರೆತನು ಸ್ತುತಿಸತೊಡಗಿದನು. ಬಹಳ ಹೊತ್ತು ಸ್ತುತಿಸ್ತೋತ್ರಾದಿಗಳಿಂದ ಕೊಂಡಾಡಿ ಸ್ವಾಮಿಯ ಪಾದದಮೇಲೆ ತಲೆಯೂರಿ

''ದೇವಾ! ನನಗೆ ನಿನ್ನ ದರ್ಶನ ಧ್ಯಾನಕ್ಕಿಂತಲೂ ಬೇರೆ ಏನು ಬೇಕು? ನೀನೇ ನನಗೆ ಮಗನಾಗಿ ಬಂದು ಸದಾ ನನ್ನಿಂದ ಸ್ತುತಿ ಮಾಡಿಸಿಕೊಳ್ಳುತ್ತ ನಿನ್ನ ದರ್ಶನಾನಂದದ ಭಾಗ್ಯ ಕೊಡು'' ಎಂದು ಬೇಡಿಕೊಂಡನು. ಭಕ್ತರ ಹೃನ್ಮಂದಿರದಲ್ಲೇ ಸದಾನೆಲಸುವ ಶ್ರೀಹರಿ ಭಕ್ತನ ಬೇಡಿಕೆಗೆ ಒಪ್ಪಿದನು. ''ಮುನಿಶ್ರೇಷ್ಠಾ! ನಿನ್ನ ಇಷ್ಟದಂತೆಯೇ ನಾನು ನಿನಗೆ ಮಗನಾಗಿ ಅವತರಿಸಿ ವೇದದ ಗೋಪ್ಯವಾದ ತತ್ತ್ವಾರ್ಥಗಳನ್ನು ಭೂಮಿಯಲ್ಲಿ ಭಿತ್ತರಿಸಿ ಸುಜನರ ಉದ್ಧಾರಕ್ಕಾಗಿ ವೇದವ್ಯಾಸನೆಂಬ ಹೆಸರಿನಿಂದ ಸತ್ಯವಾದ ಶಾಸ್ತ್ರಾರ್ಥಗಳ ಗ್ರಂಥಗಳೆಂಬ ಮಂಗಳದ ಮಳೆಯನ್ನು ಕರೆಯುವೆನು'' ಎಂದು ಆಶ್ವಾಸನೆ ನೀಡಿ ಅಂತರ್ಧಾನನಾದನು'' ಎಂದು ಸೂತಾಚಾರ್ಯರು ಪರಾಶರಮುನಿಗಳ ಅಮೋಘವಾದ ತಪಸ್ಸಿನ ಮಹಿಮೆಯನ್ನೂ ಅವರಿಗೆ ಸ್ವಾಮಿಯ ಸಂದರ್ಶನ ಭಾಗ್ಯ ದೊರಕಿದ್ದನ್ನೂ ವರದ ವಿಷಯವನ್ನೂ ತಿಳಿಸಿದಾಗ ಶೌನಕಾದಿ ಮುನಿಗಳೆಲ್ಲರೂ ಕುತೂಹಲದಿಂದ ''ಆಚಾರ್ಯರೇ! ಪರಾಶರರಿಗೆ ಪರಮಾತ್ಮನು ಮಗನಾಗಿ ಅವತರಿಸಿದ ವಿಚಾರವನ್ನು ಸ್ವಾಮಿಯ ಅವತಾರಕ್ಕೆ ನಿಮಿತ್ತಮಾತ್ರಳಾದ ತಾಯಿ ಎನಿಸಿಕೊಳ್ಳುವ ಪುಣ್ಯಾತ್ಮಳಾರು? ಎಂಬುದನ್ನೂ ಕೇಳಬೇಕೆಂದು ನಮ್ಮ ಮನಸ್ಸು ತವಕಪಡುತ್ತಿದೆ. ಆ, ರಸದೌತಣವನ್ನು ನಮಗಿತ್ತು ನಮ್ಮನ್ನು ಉದ್ಧಾರಮಾಡಿರಿ'' ಎಂದು ಪ್ರಾರ್ಥಿಸಿಕೊಂಡರು. ಆಚಾರ್ಯರು ಆಗ ಪರಾಶರರು ವರಿಸಿದ ಸತ್ಯವತೀದೇವಿಯ ಮೂಲ ವೃತ್ತಾಂತವನ್ನು ಮೊದಲು ವಿವರಿಸಿದರು. ಭಗವದ್ಭಕ್ತರೇ! ಅಚ್ಛೋದಾದೇವಿಯು ಅಮೂರ್ತರಲ್ಲಿ ದ್ವಿತೀಯವರ್ಗದ ಪಿತೃಗಳಲ್ಲಿ ಮರೀಚಿಲೋಕದ ಅಗ್ನಿಷ್ವಾತ್ತರೆಂಬುವರ ಮಾನಸಪುತ್ರಿಯು. ಈಕೆಯಿಂದಲೇ ಹಿಮಾಲಯದಲ್ಲಿ ಅಚ್ಛೋದಾ ಎಂಬ ಸರೋವರವು ಉತ್ಪನ್ನವಾಯಿತು. ಒಮ್ಮೆ ಅಚ್ಛೋದಾ ತನ್ನ ಮಾನಸ ಪಿತೃಗಳ ದರ್ಶನ ಪಡೆಯಬೇಕೆಂಬ ಅಭಿಲಾಷೆಯಿಂದ ಆಕಾಶಾಂಗಣದಲ್ಲಿ ಅರಸುತ್ತ ಬರುತ್ತಿದ್ದಳು. ಬರುವಾಗ ಅಮೂರ್ತರಾದ ಅಗ್ನಿಷ್ವಾತ್ತರು ಮುಂಭಾಗದಲ್ಲೇ ಬರುತ್ತಿದ್ದರೂ ಅವರ ಸೂಕ್ಷ್ಮರೂಪ ಗೋಚರವಾಗದೆ ಅವರನ್ನು ಅತಿಕ್ರಮಿಸಿ ಮುಂದೆ ಬಂದುಬಿಟ್ಟಳು.

ಮುಂದೆನಡೆದ ಘಟನೆ ಏನೆಂದು ಹೇಳಲಿ? ಭಗವತ್ಸಂಕಲ್ಪದಂತೆ ಅಮಾವಸು ಎಂಬ ಗಂಧರ್ವನು ತನ್ನ ಪತ್ನಿ ಅದ್ರಿಕೆಯೊಂದಿಗೆ ವಿಹಾರಕ್ಕಾಗಿ ಹೊರಟಿದ್ದರೆ ಆತನನ್ನೇ ಪಿತೃವೆಂದು

ತಿಳಿದು ಭಕ್ತಿಭಾವದಿಂದ ಆಲಂಗಿಸಿಕೊಂಡಳು. ಆತ ಕ್ಷಣವೇ ಪಿತೃಗಳನ್ನು ಅತಿಕ್ರಮಣ ಮಾಡಿ ಗಂಧರ್ವರಾಜನನ್ನು ತಂದೆ ಎಂದು ತಿಳಿದ ದೋಶದಿಂದ ತನ್ನ ದಿವ್ಯಶಕ್ತಿಯನ್ನು ಕಳೆದುಕೊಂಡು ವಿಮಾನದಿಂದ ತಲೆಕೆಳಗಾಗಿ ಉರುಳುವಾಗ ಮಹಾತೇಜೋಭಾಸ್ಕರರಾದ ಪಿತೃಗಳ ದರ್ಶನವಾಯಿತು. ಆಗ ಪಶ್ಚಾತ್ತಾಪದಿಂದ ಪಿತೃಗಳೇ ಅಜ್ಞಾನದಿಂದ ಅಪರಾಧವಾಯಿತು. ನನ್ನನ್ನು ರಕ್ಷಿಸಿರಿ ಎಂದು ಪ್ರಾರ್ಥಿಸಿಕೊಂಡಾಗ ಪಿತೃದಯೆಯಿಂದ ಕೆಳಗುರುಳದೆ ಮಧ್ಯದಲ್ಲೇ ನಿಂತಿರಲು ಪಿತೃಗಳು ಆಕೆಯನ್ನು ಕರುಣಾದೃಷ್ಟಿಯಿಂದ ನೋಡಿ ಶ್ರೀಭಗವತ್ಸಂಕಲ್ಪವನ್ನು ತಿಳಿದ ಅಪರೋಕ್ಷಜ್ಞಾನಿಗಳಾದ ಅವರು ನೀನು ಮಾನವಜನ್ಮ ಹೊಂದು'' ಎಂದು ಶಾಪವಿತ್ತರು. ಅಚ್ಛೋದೆಯು ವ್ಯಾಕುಲಚಿತ್ತಳಾಗಿ ಮೊರೆಯಿಟ್ಟಳು.

## ಅಚ್ಛೋದಾ ಭಾಗ್ಯ

ಪಿತೃಗಳು ಅಚ್ಛೋದೆಯನ್ನು ಕುರಿತು ಮಗಳೇ! ನಿನಗೆ ನಮ್ಮ ಶಾಪ ವರವಾಗಿಯೇ ಪರಿಣಮಿಸುತ್ತದೆ. ನೀನು ಈಗ ಯಾರನ್ನು ತಂದೆ ಎಂದು ಭ್ರಮಿಸಿದೆಯೋ ಆವಸುರಾಜನೇ ನಿನಗೆ ತಂದೆಯಾಗುವನು. ನಿನ್ನ ತಪೋಪುಣ್ಯದಿಂದ ಶಕ್ತಿಮಹರ್ಷಿಯ ಮಗನಾದ ಪರಾಶರಮುನಿಯು ನಿನ್ನನ್ನು ವರಿಸಿದಾಗ ಶ್ರೀಮನ್ನಾರಾಯಣನು ಶ್ರೀವ್ಯಾಸನಾಮಕನಾಗಿ ನಿನ್ನ ನಿಮಿತ್ತವಿಟ್ಟು ಅವತರಿಸುವನು. ಭಗವಂತನಿಗೇ ತಾಯಿಯಾಗುವ ಭಾಗ್ಯ ನಿನ್ನದಾಗುತ್ತದೆ. ಜನನಮರಣರಹಿತನಾದ ಭಗವಂತನು ಅಸುರಜನರ ಮೋಹನಾರ್ಥವಾಗಿ ತಂದೆತಾಯಿಗಳಿಂದ ಬಂದವನಂತೆ ಲೀಲೆ ತೋರಿಸಲು ಪುಣ್ಯವಂತರಾದ ಪರಾಶರರು ಸತ್ಯವತೀದೇವಿಯರಲ್ಲಿ ಹುಟ್ಟಿಬರುವಂತಹ ಪುಣ್ಯ ನಿನ್ನದಾಗುತ್ತದೆ ಚಿಂತಿಸಬೇಡ'' ಎಂದು ಹೇಳಿದರು.

ಅಮಾವಸುರಾಜನು ದ್ವಾಪರಾಂತ್ಯದಲ್ಲಿ ಉಪರಿಚರವಸುವಾಗಿ ಜನಿಸಿದನು. ಈ ವಸುರಾಜನು ಅಮೋಘತಪಸ್ವಿಯಾಗಿದ್ದನು. ಶ್ರೀಹರಿಯ ಸಂಕಲ್ಪಾನುಸಾರ ದೇವೇಂದ್ರನು ಈತನನ್ನು ತಪಸ್ಸಿನಿಂದ ವಿಮುಖಗೊಳಿಸಲಿಕ್ಕಾಗಿ ಅವನ ಬಳಿಗೆ ಬಂದು ''ವಸುರಾಜಾ! ನೀನು ರಾಜನಾದ್ದರಿಂದ ರಾಜಧರ್ಮವನ್ನೇ ಪಾಲಿಸುವುದು ಭಗವದಾಜ್ಞೆ. ಅವರವರ ಧರ್ಮವನ್ನು ಆಚರಿಸದೆ ಅನ್ಯಧರ್ಮಾವಲಂಬಿಗಳಾದರೆ ಕರ್ಮಭ್ರಷ್ಟರಾಗಿ ಪಾಪಕ್ಕೆ ಈಡಾಗುತ್ತಾರೆ. ರಾಜನಾದವನು ತನ್ನ ರಾಜ್ಯದಲ್ಲಿ ವರ್ಣಾಶ್ರಮಧರ್ಮಗಳನ್ನು ನೆಲೆಗೊಳಿಸಿ ಸಚ್ಛಾಸ್ತ್ರಸಂಪನ್ನರಾದ ವಿದ್ವಾಂಸರಿಗೆ ಆಶ್ರಯನೀಡಿ ಸದ್ಧರ್ಮ ಸಂಸ್ಥಾಪನ ಮಾಡುವುದೇ ಒಂದು ದೊಡ್ಡ ತಪಸ್ಸಲ್ಲವೇ? ಇಂಥ ರಾಜರ್ಷಿಯಲ್ಲಿ ದೇವೋತ್ತಮನಾದ ಮಹಾವಿಷ್ಣು ವಿಶೇಷ ಸನ್ನಿಧಾನದಿಂದ ನೆಲೆಗೊಂಡಿರುತ್ತಾನೆ. ಆ ರಾಜ್ಯವೇ ರಾಮರಾಜ್ಯದಂತೆ ಶೋಭಿಸುತ್ತದೆ.

ವಸುರಾಜಾ! ನಿನ್ನ ತಪೋಪುಣ್ಯ ಅಮೋಘವಾದದ್ದು ಅದಕ್ಕೆ ಶುಭಫಲ ದೇವರು ಕೊಡಲಿಕ್ಕಾಗಿಯೇ ನನಗೆ ಪ್ರೇರೇಪಿಸಿ ನಿನ್ನ ಬಳಿಗೆ ಕಳುಹಿಸಿದ್ದಾನೆಂದು ತಿಳಿದುಕೊ.

ಪೃಥ್ವೀಮಂಡಲದಲ್ಲಿ ಚೇದೀರಾಜ್ಯವು ಎರಡನೆಯ ಸ್ವರ್ಗದಂತೆ ಇದೆ. ಅಲ್ಲಿ ಯಾವ ಬಗೆಯಾದ ಏರಿಳಿತಗಳೂ ಇಲ್ಲದೆ ಆ ರಾಜ್ಯದ ಪ್ರಜೆಗಳೂ ಸದಾ ಶಾಂತಮನಸ್ಸಿನಿಂದ ಭಗವದ್ಧ್ಯಾನಾಸಕ್ತರಾಗಿ ಸಂತೋಷದಿಂದಿದ್ದಾರೆ. ಚೇದೀರಾಜ್ಯ ಲಕ್ಷ್ಮಿಯು ನಿನ್ನ ಸ್ವಾಗತಕ್ಕಾಗಿ ಕಾಯುತ್ತಿದ್ದಾಳೆ. ಆ ರಾಜ್ಯಕ್ಕೆ ಅರಸನಾಗಿ ಆನಂದದ ಬೆಳ್ದಿಂಗಳಲ್ಲಿ ನಲಿದಾಡು. ನಿನ್ನ ತಪಸ್ಸಿಗೆ ಸಂತೋಷಟ್ಟ ನಾನು ನಾಲ್ಕು ವರಗಳನ್ನು ಕೊಡುತ್ತೇನೆ. ತಪೋವೀರನಾದ ನಿನಗೆ ಶ್ರೀಹರಿಪ್ರೇರಣಾನುಸಾರ ಒಂದು ದಿವ್ಯ ವಿಮಾನವನ್ನೂ ಕೊಡುತ್ತೇನೆ. ದೇವತಾಯೋಗ್ಯವಾದ ಆ ವಿಮಾನದಲ್ಲಿ ನೀನು ಎಲ್ಲಿಗೆ ಬೇಕಾದರೂ ಸಂಚಾರ ಹೊರಡಬಹುದು. ನಿನಗೆ ತ್ರಿಲೋಕಗಳಲ್ಲಿ ನಡೆಯತಕ್ಕ ಸಕಲ ಸಮಾಚಾರಗಳೂ ತಿಳಿಯುವಂತೆ ಪ್ರತ್ಯಕ್ಷ ಕಾಣುವಂತೆ ದಿವ್ಯದೃಷ್ಟಿಯನ್ನೂ ಕೊಟ್ಟಿದ್ದೇನೆ. ಅದು ನಿನಗೆ ಸದಾಸುಗಂಧದ ಸುಖವನ್ನೇ ಉಂಟುಮಾಡುತ್ತ ನಿನಗೆ ಯಾರಿಂದಲೂ ಅಪಾಯ ಸಂಭವಿಸದಂತೆ ರಕ್ಷಾಕವಚವಾಗಿ ಕಾಪಾಡುತ್ತದೆ. ಆಮೇಲೆ ನಿನಗೆ ಒಂದು ಬಿದುರಿನ ದಿವ್ಯಶಕ್ತಿಯುತವಾದ ದಂಡವನ್ನು ನೀಡುತ್ತೇನೆ. ಆ ದಿವ್ಯದಂಡವನ್ನು ನಿಷ್ಠೆಯಿಂದ ಪೂಜೆಮಾಡುವ ನಿನ್ನ ರಾಜ್ಯದಲ್ಲಿ ಶತೃಭಯ, ಕ್ಷಾಮ, ರೋಗರುಜಿನಾದಿ ಯಾವ ಬಗೆಯ ಉಪಟಳವೂ ಇಲ್ಲದೆ ಸುಖದ ರಾಜ್ಯವಾಗಿ ರಾರಾಜಿಸುತ್ತಲಿರುತ್ತದೆ'' ಎಂದು ಸುರಪತಿಯು ವಸುರಾಜನಿಗೆ ಅನುಗ್ರಹಮಾಡಿದನು.

ವಸುರಾಜನು ದೇವೇಂದ್ರನಿಂದ ಅನುಗ್ರಹಿತನಾಗಿ ಭಗವತ್ಕೃಪಾ ವಿಶೇಷದಿಂದ ಚೇದಿರಾಜ್ಯದ ರಾಜನಾಗಿ ಸಕಲಜನರನ್ನೂ ಸಂತೋಷಗೊಳಿಸುತ್ತಿದ್ದನು. ಧರ್ಮವಂತರಾದ ಐದು ಜನ ಪುತ್ರರನ್ನು ಪಡೆದು ಅವರಿಗೆ ರಾಜ್ಯವನ್ನು ಹಂಚಿ ತಾನು ರಾಜ್ಯಾಡಳಿತದಲ್ಲಿ ನಿವೃತ್ತನಾಗಿ ಸದಾ ವಿಮಾನ ಸಂಚಾರದಲ್ಲೇ ಆಸಕ್ತನಾಗಿದ್ದರಿಂದ ಉಪರಿಚರ ಎಂಬ ಹೆಸರನ್ನು ಪಡೆದು ಪ್ರಖ್ಯಾತನಾಗಿದ್ದ ವಸುರಾಜನು ಒಮ್ಮೆ ಸಂಚಾರ ಹೊರಟಾಗ ನಡೆದ ಸ್ವಾರಸ್ಯದ ಸಂಗತಿಯನ್ನು ಆಚಾರ್ಯರು ಸಂತೋಷದಿಂದ ತಿಳಿಸಿದರು.

## ನದೀದೇವತೆಯ ಆನಂದದ ಕಾಣಿಕೆ

ವಸುರಾಜನು ವಿಮಾನಸಂಚಾರ ಮಾಡುತ್ತಿದ್ದಾಗ ನಡೆದ ಒಂದು ಘಟನೆಯೇ ಲೋಕಕ್ಕೆ ಶುಭ ಹೊತ್ತುತರುವ ರಸಘಟನೆಯಾಯಿತು. ಅದನ್ನೇ ಈಗ ಹೇಳುತ್ತೇನೆ ಎಂದು ಆಚಾರ್ಯರು ತಮ್ಮ ವಾಕ್ಪ್ರವಾಹವನ್ನು ಹರಿಸಿದರು. ವಸುರಾಜನು ಆಕಾಶಗಾಮಿಯಾಗಿ ಹೋಗುತ್ತಿದ್ದರೆ ಶಕ್ತಿಮತಿ ಎಂಬ ಜಲಾಭಿಮಾನಿದೇವತೆ ಕೋಲಾಹಲ ಪರ್ವತರಾಜನಿಗೆ ಸೆರೆಸಿಕ್ಕು ತಡೆ ನಿಂತಿರುವುದನ್ನು ನೋಡಿದನು. ಪಾಪ ರಭಸಗಾಮಿಯಾಗಿ ಸ್ವೇಚ್ಛೆಯಿಂದ ವಿಹಾರಮಾಡುವ ಶಕ್ತಿಮತಿಯು ಕೋಲಾಹಲ ಪರ್ವತಕ್ಕೆ ಸಿಕ್ಕುಬಿದ್ದು ಬಂಧಿತಳಾಗಿದ್ದಾಳೆ. ಆ ಜಲದೇವತೆಯ ಬಂಧನ ಬಿಡುಗಡೆ ಮಾಡುತ್ತೇನೆ ಎಂದುಕೊಂಡು ನದಿಯ ಬಳಿಗೆ ಬಂದು ಅಡ್ಡವಾಗಿದ್ದ

ಪರ್ವತವನ್ನು ತನ್ನ ಪಾದಘಾತದಿಂದ ಇಬ್ಭಾಗವಾಗಿ ಸೀಳಿ ಸಲಿಲದೇವತೆ ಸರಾಗವಾಗಿ ಸರಿದು ಹರಿಯುವಂತೆ ಮಾಡಿದನು.

ಬಂಧಮುಕ್ತಳಾದ ಜಲದೇವತೆ ವಸುರಾಜನಿಗೆ ಕೃತಜ್ಞಳಾಗಿ ನಮಿಸಿ ''ವಸುರಾಜಾ ನನಗೆ ಪರ್ವತರಾಜನಿಂದ ಹುಟ್ಟಿದ ಗಿರಿಕೆ ಎಂಬ ಕನ್ಯಾರತ್ನವೂ ಒಬ್ಬ ಗಿರಿಕಾ ಎಂಬ ಕುವರನೂ ಇದ್ದಾರೆ. ಅವರನ್ನು ನಿನಗೆ ಕಾಣಿಕೆಯಾಗಿ ಅರ್ಪಿಸುತ್ತೇನೆ'' ಎಂದು ಹೇಳಿ ಒಪ್ಪಿಸಿದಳು. ವಸುರಾಜನು ಅತ್ಯಂತ ಸೌಂದರ್ಯವತಿಯಾಗಿದ್ದ ಗಿರಿಕೆಯನ್ನು ವಿವಾಹವಾದನು. ತೇಜಸ್ವಿಯೂ ಪರಾಕ್ರಮಶೂರನೂ ಆದ ಗಿರಿಕಾ ಎಂಬ ತರುಣನನ್ನು ಸೇನಾಧಿಪತಿಯನ್ನಾಗಿ ಮಾಡಿಕೊಂಡನು.

ಗಿರಿಕೆಯ ಸೌಶೀಲ್ಯಾದಿ ಸುಗುಣಗಳು ವಸುರಾಜನ ಮನಸ್ಸನ್ನು ಆಕರ್ಷಿಸಿ ದಂಪತಿಗಳು ಸಂತೋಷದಿಂದ ಗೃಹಸ್ಥಾಶ್ರಮದ ಧರ್ಮವನ್ನು ಪಾಲಿಸುತ್ತ ಅತಿಥಿ ಅಭ್ಯಾಗತರ ಪೂಜಾದಿಗಳಿಂದ ಸುಖಸಾಧನದ ಜೀವಿತದಿಂದಿದ್ದರು. ಹೀಗಿರುವಾಗ ಮುಂದೆ ಅಮಾವಸು ರಾಜನಿಂದ ಲೋಕ ಕಲ್ಯಾಣದ ಕಾರ್ಯವನ್ನು ಮಾಡಿಸಲಿಕ್ಕಾಗಿಯೇ ಬಂದರೋ ಎನ್ನುವಂತೆ ಅವನ ಅರಮನೆಗೆ ಅತಿಥಿಗಳ ಆಗಮನವಾಯಿತು. ಒಂದುದಿನ ಗಿರಿಕೆಯು ಋತುಸ್ನಾತೆಯಾಗಿದ್ದ ಸಮಯದಲ್ಲಿ ಧರ್ಮಶಾಸ್ತ್ರ ಸಂಪ್ರದಾಯದಂತೆ ಗರ್ಭಧಾರಣೆ ಆಗಬೇಕಾದ ಸಂದರ್ಭದಲ್ಲಿ ಸಾಕ್ಷಾತ್ತಾಗಿ ಪಿತೃದೇವತೆಗಳು ಆ ದಂಪತಿಗಳ ಸಮೀಪಕ್ಕೆ ಬಂದು ದಂಪತಿಗಳಿಂದ ಸೇವೆಯನ್ನು ಸ್ವೀಕಾರಮಾಡಿದ ನಂತರ ''ಉಪರಿಚರಾ! ನಾವಿಂದು ಪ್ರತ್ಯಕ್ಷವಾಗಿಯೇ ನಿನ್ನಿಂದ ಶ್ರಾದ್ಧಾನ್ನವನ್ನು ಸ್ವೀಕಾರಮಾಡಲು ಬಂದಿದ್ದೇವೆ'' ಎಂದರು.

ವಸುರಾಜನಿಗೆ ಆನಂದವಾಯಿತು. ಪಿತೃಶ್ರಾದ್ಧಕ್ಕೆ ತಾನೇ ಸಂಪಾದಿಸಿದ ಉತ್ತಮವಾದ ವಸ್ತುವನ್ನು ತಂದು ಶ್ರದ್ಧೆಯಿಂದ ಆಚರಿಸಬೇಕೆಂಬ ಭಾವದಿಂದ ಕಾಡಿನಕಡೆಗೆ ಹೊರಟನು. ಏಕೆಂದರೆ ಆಗ ಮಾಂಸವನ್ನು ಶ್ರಾದ್ಧಕ್ಕೆ ಉಪಯೋಗಿಸುತ್ತಿದ್ದರು. ಕಾಲಧರ್ಮದಂತೆ ಬೇಟೆಗೆ ಹೊರಟರೆ ಭಗವಂತನ ವಿಚಿತ್ರ ಸಂಕಲ್ಪದಂತೆ ಅವನಿಗೆ ಅಂದು ಹತ್ತಿರದ ಕಾಡಿನಲ್ಲಿ ಶ್ರಾದ್ಧಕ್ಕೆ ಯೋಗ್ಯವಾದಂಥ ಮಾಂಸವೇ ಸಿಗದಿರಲು ಬಹಳ ದೂರದ ಕಾಡಿಗೆ ಹೋಗಬೇಕಾಗಿ ಬಂದಿತು.

ಬೇಟೆ ಮುಗಿಸುವುದು ಬಹಳ ಸಮಯವಾದ್ದರಿಂದ ರಾಜ್ಯಕ್ಕೆ ಹಿಂದಿರುಗಲಾಗಲಿಲ್ಲ. ಅಂದು ಪಿತೃಶ್ರಾದ್ಧ ಮಾಡದಿದ್ದರೆ ಎಷ್ಟು ಪಾಪಸಂಘಟನೆಯೋ ಅಷ್ಟೇ ತನ್ನ ಸತಿಯ ಸಂಗ ತಪ್ಪಿದರೂ ದೋಷ ಬರುತ್ತದೆ ಭ್ರೂಣಹತ್ಯದ ಪಾಪಕ್ಕೆ ಈಡಾಗುತ್ತೇನೆ'' ಎಂಬ ಚಿಂತೆಗೆ ಒಳಗಾಗುತ್ತೇನೆ'' ಎಂದು ತಪಿಸುತ್ತ ಸ್ನಾನಾಹ್ನಿಕಗಳನ್ನು ಮುಗಿಸಿ ಪಿತೃಶ್ರಾದ್ಧವನ್ನು ಇದ್ದ ಜಾಗದಲ್ಲೇ ಮಾಡಿ ಪಿತೃಯಜ್ಞದನಂತರ ಗೃಹಸ್ಥ ಧರ್ಮಕ್ಕೆ ವಿರೋಧ ಬರದಂತೆ ತನ್ನ ಗರ್ಭಗತವಾದ ತೇಜಸ್ಸನ್ನು ವಿಸರ್ಜಿಸಿ ಒಂದು ಎಲೆಯ ಪೊಟ್ಟಣದೊಳಗಿಟ್ಟು ಹಾರುತ್ತಿದ್ದ ಗಿಡುಗ ಒಂದನ್ನು ಸಕಲಪ್ರಾಣಿ ಭಾಷಾ ಚತುರನಾಗಿದ್ದ ರಾಜನು ಕರೆದು ''ಓ ಪಕ್ಷೀ! ಈ ವಸ್ತುವನ್ನು ತೆಗೆದುಕೊಂಡು ಈಗಲೇ ಹೊರಟು ನನ್ನ ರಾಣಿಗೆ ತಲ್ಪಿಸು'' ಎಂದನು.

ವಸುರಾಜನ ರಾಜ್ಯದಲ್ಲಿ ಪಶುಪಕ್ಷಿಗಳೂ ರಾಜಾಜ್ಞೆಯನ್ನು ಪಾಲಿಸುವಂಥ ಜ್ಞಾನಹೊಂದಿದ್ದವೆಂದು ಇದರಿಂದ ತಿಳಿಯಬಹುದು!

ಪಕ್ಷಿಯು ರಾಜಾಜ್ಞೆಯಂತೆ ಎಲೆಯ ಪೊಟ್ಟಣವನ್ನು ಕೊಕ್ಕಿನಲ್ಲಿ ಕಚ್ಚಿಕೊಂಡು ಗಗನ ಮಂಡಲಕ್ಕೆ ಹಾರಿ ಹೊರಟಿತು. ಮಾರ್ಗದಲ್ಲಿ ಮತ್ತೊಂದು ಪಕ್ಷಿಯು ಇದನ್ನು ಕಂಡು ಅದು ಒಂದು ಅಮೂಲ್ಯ ಆಹಾರವೆಂದು ತಿಳಿದು ಕಸಿಯಲು ಅದರೊಡನೆ ಹೋರಾಟ ನಡೆಸಿತು.

ರಾಜನಿಂದ ತಂದಿರುವ ಆ ವಸ್ತು ರಾಣಿಗೆ ಸಲ್ಲಿಸುವುದು ತನ್ನ ಕರ್ತವ್ಯವೆಂಬ ಸೇವಾಭಾವದಿಂದ ಗಿಡಗವು ರಾಜನ ರೇತಸ್ಸನ್ನು ಉಳಿಸಿಕೊಳ್ಳಲು ಬಹುವಿಧವಾಗಿ ಹೋರಾಡಿ ಜೋಪಾನಮಾಡುತ್ತಿತ್ತು. ಏನು ಮಾಡಿದರೂ ಭಗವತ್ಸಂಕಲ್ಪವನ್ನು ಮೀರಲಾದೀತೇ?

## ಅಪ್ಸರಸ್ತ್ರೀ ಅದ್ರಿಕೆಗೆ ಸಿಕ್ಕ ಸೌಭಾಗ್ಯ

ಪಕ್ಷಿಗಳೆರಡೂ ಹೋರಾಡುವಾಗ ಗಿಡಗನ ಬಳಿ ಇದ್ದ ರಾಜನ ರೇತಸ್ಸು ಸಮುದ್ರದೊಳಗೆ ಸುರಿಯಿತು. ಇಂಥ ಶುಭಮುಹೂರ್ತಕ್ಕಾಗಿಯೇ ಶಾಪಗ್ರಸ್ಥಳಾದ ಅದ್ರಿಕೆಯು ಮೀನಿನ ದೇಹ ಧರಿಸಿ ಶಾಪವಿಮೋಚನೆಗಾಗಿ ಜಲವಾಸ ಮಾಡುತ್ತಿದ್ದಳು. ಇಂದು ತನಗೆ ಪ್ರಸಾದರೂಪದಲ್ಲಿ ಸಿಕ್ಕ ವಸುರಾಜನ ವೀರ್ಯವನ್ನು ಭಕ್ತಿಯಿಂದ ಭುಂಜಿಸಿದಳು. ಶ್ರೀಹರಿ ಸಂಕಲ್ಪದಂತೆ ಗರ್ಭಧರಿಸಿದಳು. ಹೆಣ್ಣುಮೀನು ಗರ್ಭಧರಿಸಿದ ನಂತರ ಅತ್ಯಂತ ಪ್ರಕಾಶಯುಕ್ತವಾಗಿ ಕಾಣುತ್ತಿತ್ತು. ಗರ್ಭದಲ್ಲಿ ಶಿಶುಪೂರ್ಣವಾಗಿ ಬೆಳೆದನಂತರ ಒಂದುದಿನ ಬೆಸ್ತರ ಬಲೆಯೊಳಗೆ ಸಿಕ್ಕುಬಿದ್ದಿತು. ಆ ಸುಂದರವಾದ ಮೀನನ್ನು ಬೆಸ್ತರು ಮನೆಗೆತಂದು ಅದರ ಗರ್ಭದೊಳಗಿನ ಮರಿಗಳಿಗೆ ಅಪಾಯವಾಗಬಾರದೆಂದು ಎಚ್ಚರದಿಂದ ಎರಡು ಭಾಗವಾಗಿ ಸೀಳಿದರು. ಆ ಕ್ಷಣವೇ ಅಪ್ಸರೆಗೆ ಶಾಪವಿಮೋಚನೆ ಆಗಿ ತನ್ನ ನಿಜರೂಪದಿಂದ ತನ್ನ ಮೂಲಸ್ಥಾನಕ್ಕೆ ಹೊರಟುಹೋದಳು. ಅಲ್ಲಿ ಸ್ತ್ರೀ ಮತ್ತು ಪುರುಷಾಕೃತಿಯ ಎರಡು ಮುದ್ದಾದ ಶಿಶುಗಳು ಕಂಡವು. ಇವರಾರೋ ದೇವತೆಗಳೇ ಇರಬಹುದೆಂದು ಊಹಿಸಿದ ಮೀನುಗಾರರು ಅವರಿಬ್ಬರನ್ನು ಆದರದಿಂದ ಕರತಂದು ವಸುರಾಜನಿಗೆ ಒಪ್ಪಿಸಲು ವಸುರಾಜನು ತನ್ನ ದಿವ್ಯದೃಷ್ಟಿಯಿಂದ ಆ ಮಕ್ಕಳ ಜನ್ಮರಹಸ್ಯವನ್ನು ಅರಿತು ಭಗವತ್ಸಂಕಲ್ಪದಂತೆ ಹೆಣ್ಣುಶಿಶುವನ್ನು ಬೆಸ್ತರಾಜನಿಗೆ ಕೊಟ್ಟು ಬಾಲಕನನ್ನು ತಾನೇ ಸಾಕಿಸಲಹಿ ವಿರಾಟರಾಜ್ಯದ ಅರಸನನ್ನಾಗಿ ಮಾಡಿದನು.

## ಮೀನಿನ ಮಗಳಾಗಿ ಬಂದ ಮತ್ಸ್ಯಗಂಧಿ

ವಸುರಾಜನ ದಿವ್ಯ ತೇಜಸ್ಸಿನಿಂದ ಮತ್ಸ್ಯದಲ್ಲಿ ಉತ್ಪನ್ನಳಾಗಿ ಬಂದು ಬೆಸ್ತರಾಜನ ಕೈಸೇರಿ ಮತ್ಸ್ಯಗಂಧಿ ಎಂದೆನಿಸಿಕೊಂಡು ಮೀನುಗಾರರಿಂದ ಪಾಲಿತಳಾಗಿದ್ದ ಬಾಲಿಕೆಯು ತನ್ನ ಸೌಜನ್ಯ, ಸೌಹಾರ್ದಗಳಿಂದಲೂ ಸ್ಫುರದ್ರೂಪದಿಂದಲೂ ಎಲ್ಲರ ಮನಸ್ಸನ್ನೂ ಸೆಳೆದು ದಿನದಿನಕ್ಕೂ

ದೇವತೆಯಂತೆ ಪ್ರಕಾಶಯುಕ್ತಳಾಗಿ ಮೆರೆಯುತ್ತಿದ್ದಳು. ಈಕೆಯ ಸತ್ಯಸಂಧತೆ, ಸೌಶೀಲ್ಯಾದಿ ಗುಣಗಳಿಗೆ ಆನಂದಪಟ್ಟ ಜನರೆಲ್ಲರೂ ಸತ್ಯವತಿ ಎಂಬ ಹೆಸರಿನಿಂದ ಈಕೆಯನ್ನು ಕರೆದು ಕೊಂಡಾಡುತ್ತಿದ್ದರು.

ಸತ್ಯವತಿಯು ಪಿತೃಗಣದಲ್ಲಿ ಅಗ್ನಿಷ್ವಾತ್ತರೆಂಬ ಪಿತೃಗಳ ಮಾನಸಪುತ್ರಿ ಎಂಬುದನ್ನು ಮರೆಯಬಾರದು. ಆದ್ದರಿಂದಲೇ ಈಕೆ ಸತ್ಯಗುಣಸಂಪನ್ನಳಾಗಿದ್ದಳು. ತನ್ನ ಸಾಕುತಂದೆಯಾದ ದಾಶರಾಜನು ವಿಶ್ರಾಂತಿಗಾಗಿ ಮನೆಗೆ ಬಂದಾಗ ತಾನೇ ಯಮುನಾನದಿಯ ಜಲಚಾಲಕಳಾಗಿ ಪ್ರಯಾಣಿಕರನ್ನು ಸಂತೋಷಪಡಿಸುತ್ತಿದ್ದಳು. ಹೀಗಿರುವಲ್ಲಿ ಒಂದುದಿನ ಸತ್ಯವತೀದೇವಿಗೆ ಶಕ್ತಿಯ ಪುತ್ರರೂ ವಸಿಷ್ಠರ ಪೌತ್ರರೂ ಆದ ಪರಾಶರ ಮುನಿಗಳ ಸಂಪರ್ಕವಾದ ಸತ್ಕಥನವನ್ನು ಹೇಳುತ್ತೇನೆ ಕೇಳಿರಿ''

## ವೇದವ್ಯಾಸರೆಂಬ ಜ್ಞಾನಸೂರ್ಯೋದಯ

ಮಹಾತಪೋವೀರರಾದ ಪರಾಶರರು ತೀರ್ಥಯಾತ್ರೆ ಹೊರಟವರು ಯಮುನೆಯ ಬಳಿಗೆ ಬಂದಾಗ ಅಲ್ಲಿ ಸತ್ಯವತೀದೇವಿಯನ್ನು ನೋಡಿದರು. ಆಗ ಅವರ ಮನಸ್ಸಿನಲ್ಲಿ ಸ್ವಚ್ಛವಾದ ಪ್ರೇಮ ಅಂಕುರಿಸಿತು. ವೈರಾಗ್ಯದ ನಿರ್ಲಿಪ್ತರಿಗೆ ಭಗವದಾಜ್ಞೆ ಇಲ್ಲದೆ ಎಂದೆಂದಿಗೂ ಸ್ತ್ರೀವ್ಯಾಮೋಹ ಉಂಟಾಗುವುದಿಲ್ಲ. ಮಾಧವನ ಪಾದಮೂಲದಲ್ಲಿ ಮನಸ್ಸು ಮಡಿಮಡಿಯಾಗಿ ನೆಲೆಗೊಂಡಿರುವಾಗ ಅದಕ್ಕೆ ಮಲಿನದ ಸೋಂಕೆಲ್ಲಿಯದು? ಎಂದು ತಮ್ಮ ಯೋಗದೃಷ್ಟಿಯಿಂದ ಈಕೆ ಸಾಮಾನ್ಯ ಭೋಗವಸ್ತುವಲ್ಲ ಶ್ರೀಮನ್ನಾರಾಯಣನನ್ನೇ ಜಗತ್ತಿಗೆ ತೋರಿಸುವುದಕ್ಕೆ ನಿಮಿತ್ತಮಾತ್ರವಾಗಿರುವ ಪುಣ್ಯಾತ್ಮಳು. ಶ್ರೀಮನ್ನಾರಾಯಣನ ಪ್ರೇರಣೆಯಿಂದಲೇ ನನ್ನ ಮನಸ್ಸು ಈಕೆಯ ಸಂಪರ್ಕಕ್ಕಾಗಿ ಸೆಳೆಯುತ್ತಿದೆ ಎಂದುಕೊಂಡರು. ಸಂತೋಷದಿಂದ ಸತ್ಯವತಿಯ ಮುಖಕಮಲದರ್ಶನ ಮಾಡಿ ''ದೇವೀ! ನನ್ನನ್ನು ವರಿಸು'' ಎದರು. ಸತ್ಯವತಿಯು ಮುನಿಗಳ ಮಾತಿಗೆ ಬೆಚ್ಚಿಬೆರಗಾದಳು. ಅಬ್ಬಾ ಈ ದೇವತಾಮೂರ್ತಿಯಿಂದ ಬಂದ ಮಾತೇ ಇದು? ಎಂದುಕೊಂಡಳು. ಮುನಿಯ ಮುಖಚಂದ್ರಿಕೆಯ ತಪೋತೇಜಸ್ಸು ಕಣ್ಣನ್ನು ಕುಕ್ಕಿಸಿತು. ಭಯಭಕ್ತಿಯಿಂದ ''ಮುನಿದೇವಾ! ನಾನು ತಂದೆತಾಯಿಗಳ ವಶವರ್ತಿನಿ ಅಲ್ಲವೇ? ಕ್ಷಮಿಸಬೇಕು'' ಎಂದಳು.

ಪರಾಶರರು ಇದು ಭಗವದಾಜ್ಞೆ ನನ್ನನ್ನು ವರಿಸಿದರೆ ಶ್ರೀಮನ್ನಾರಾಯಣಮೂರ್ತಿಯೇ ನಿನಗೆ ಮಗನಾಗುವನು. ಜನನಮರಣರಹಿತನನ್ನು ಪಡೆದ ನಿನಗೆ ಕನ್ಯತ್ವ ಕೆಡುತ್ತದೆಯೇ? ಎಂದು ಹೇಳುತ್ತಿದ್ದಂತೆಯೇ ಮತ್ಸ್ಯಗಂಧಿ ಎನಿಸಿದ ಸತ್ಯವತಿ ತನ್ನ ಪೂರ್ವಕರ್ಮಶೇಷವನ್ನು ಕಳೆದುಕೊಂಡು ಯೋಜನಗಂಧಿಯಾದಳು. ಅವಳಿಂದ ಪುಣ್ಯದ ಪರಿಮಳ ಹೊರಸೂಸಿ ಬಂದಿತು.

ಆಗ ವಸಿಷ್ಠರು, ಯಾಜ್ಞವಲ್ಕ್ಯರು ಮೊದಲಾದವರ ಸಮ್ಮುಖದಲ್ಲಿ ವಿವಾಹಹೋಮ ನಡೆಯಿತು. ನಂತರ ವಸುರಾಜನು ದಾರಾಪೂರ್ವಕವಾಗಿ ಪರಾಶರರಿಗೆ ಕನ್ಯಾದಾನ ಮಾಡಿದನು.

ಆಗ ದೋಣಿಯ ಸುತ್ತಲೂ ಕೋಟೆಕಟ್ಟಿದಂತೆ ಮಂಜು ಕವಿದುಕೊಂಡಾಗ ಪರಾಶರರು ಸತ್ಯವತೀದೇವಿಯೊಡನೆ ವಿವಾಹವಾದರು. ಆಗ ಜ್ಞಾನಾನಂದಸ್ವರೂಪನಾದ ಸ್ವಾಮಿಯು ದುಷ್ಟಜನರಿಗೆ ಅಜ್ಞಾನ ಕೊಡಲಿಕ್ಕಾಗಿಯೂ ಭಕ್ತನಿಗೆ ಇಷ್ಟಾರ್ಥ ನೀಡಲಿಕ್ಕಾಗಿಯೂ ಪರಾಶರ-ಸತ್ಯವತೀ ದೇವಿಯರಲ್ಲಿ ಜನಿಸಿದಂತೆ ಒಡಮೂಡಿ ಬಂದನು.

ಶ್ರೀ ನರಸಿಂಹದೇವ ಕಂಭದಿಂದ ಉದ್ಭವಿಸಿದಂತೆ ನಿತ್ಯದೇಹವುಳ್ಳ ಸರ್ವವ್ಯಾಪ್ತನಾದ ನಾರಾಯಣನು ವ್ಯಾಸನಾಗಿ ಸ್ತಂಭಸ್ಥಾನೀಯಳಾದ ಸತ್ಯವತಿಯಲ್ಲಿ ಹುಟ್ಟಿದಂತೆ ಲೀಲೆ ತೋರಿಸಿದನು.

ಪರಿಪೂರ್ಣ ಜ್ಞಾನಾನಂದರೂ ಬ್ರಹ್ಮಾದಿಗಳಿಗೆ ಸ್ವಾಮಿಯಾದವರೂ ಆದ ವೇದವ್ಯಾಸರು ಸಕಲಮುನಿಜನರನ್ನು ಆನಂದಪಡಿಸಲಿಕ್ಕಾಗಿ ತಂದೆ ಎನಿಸಿದ ಪರಾಶರರ ಕೈಲಿ ಉಪನಯನವನ್ನು ಮಾಡಿಸಿಕೊಂಡ ಅವರ ಲೀಲಾ ನಾಟಕದ ವರ್ಣನೆ ಎಷ್ಟು ಕೊಂಡಾಡಿದರೆ ತಾನೇ ಸಾಕಾದೀತು? ನಂತರ ತನ್ನನ್ನು ಪಡೆಯಲಿಕ್ಕಾಗಿ ಅಮೋಘತಸ್ಸು ಮಾಡಿ ತಂದೆ ಎನಿಸಿಕೊಂಡ ಪರಾಶರರಿಗೆ ತನ್ನ ವಿಷಯಕರವಾದ ಸುಜ್ಞಾನವನ್ನು ಅವರಿಗೆ ಗುರುದಕ್ಷಿಣೆಯಂತೆ ಅನುಗ್ರಹಿಸಿದರು.

ತಂದೆತಾಯಿಗಳೆನಿಸಿದ ಪರಾಶರರು-ಸತ್ಯವತೀದೇವಿಯರಿಗೆ ಲೋಕವಿಡಂಬನೆಗಾಗಿ ನಮಸ್ಕಾರ ಮಾಡಿದ್ದಲ್ಲದೆ ಸರ್ವಸ್ಥಳದಲ್ಲಿ ಸದಾವ್ಯಾಪ್ತನಾದ ದೇವನು ''ನಾನು ಬದರಿಕಾಶ್ರಮಕ್ಕೆ ತಪಸ್ಸಿಗಾಗಿ ಹೋಗುತ್ತೇನೆ. ನೀವು ಯಾವಾಗ ನನ್ನನ್ನು ಸ್ಮರಿಸಿದರೂ ಆಗ ನಿಮಗೆ ಪ್ರತ್ಯಕ್ಷನಾಗುವೆನು'' ಎಂದು ವರವನ್ನು ಕರುಣಿಸಿ ಅಂತರ್ಧಾನರಾದರು.

ಲೋಕದ ಸಜ್ಜನರೆಲ್ಲರೂ ಕುಮತಗಳ ಪೀಡೆಗೊಳಗಾಗಿ ಸತ್ಯವಾದ ಜ್ಞಾನವನ್ನೇ ಕಳೆದುಕೊಂಡು ಅಜ್ಞಾನವೆಂಬ ಭಯಂಕರ ಕಾಳಸರ್ಪದಿಂದ ಕಚ್ಚಿಸಿಕೊಂಡು ತಾಮಸಶಾಸ್ತ್ರವೆಂಬ ವಿಷದಿಂದ ಪೀಡಿತರಾಗಿರುವಾಗ ಅವರಿಗೆ ಹರಿಸರ್ವೋತ್ತಮತ್ವವೆಂಬ ಸುಜ್ಞಾನಕಿರಣದಿಂದ ಸ್ವಚ್ಛರಾಗುವಂತೆ ಮಾಡಿದ ಕರುಣಾಳುಗಳೇ ವೇದವ್ಯಾಸರು.

ಕಲ್ಯಾವೇಶದ ಅನೇಕ ಅಸುರಜನರು ವೇದದ ಧರ್ಮರಹಸ್ಯಗಳಿಗೆ ಮನಬಂದಂತೆ ಅಪಾರ್ಥಗಳನ್ನು ಮಾಡಿ ಕುಶಾಸ್ತ್ರಗಳನ್ನು ಪ್ರಚಾರಪಡಿಸುತ್ತಿದ್ದಾಗ ಅಪರಿಶುದ್ಧ ಶಾಸ್ತ್ರಗಳನ್ನು ಪುಟಕಿಟ್ಟ ಚಿನ್ನದಂತೆ ತಮ್ಮ ಜ್ಞಾನಪ್ರಕಾಶದಿಂದ ಶುದ್ಧಗೊಳಿಸಿಕೊಟ್ಟು ಲೋಕಕ್ಕೆ ಸತ್ಯವಾದ ಆನಂದ ಬೆಳಕನ್ನು ಹರಡಿದರು.

ಬ್ರಹ್ಮರುದ್ರಾದಿ ದೇವತೆಗಳಿಗೂ ಜೈಮಿನಿ ಮೊದಲಾದ ಋಷಿವರರಿಗೂ ಬ್ರಹ್ಮ-ಸೂತ್ರಾದಿಗಳನ್ನು ರಚಿಸಿ ವೇದಾಂತಸಾಮ್ರಾಜ್ಯದ ಸುಖದ ಸಾರವನ್ನು ಪಾನಮಾಡಿಸಿ ಸಂತೋಷಪಡಿಸಿದ ಕರುಣಾಳು ವೇದವ್ಯಾಸರನ್ನು ಎಷ್ಟು ಸ್ತುತಿಸಿದರೂ ಸಾಲದು.

ವೇದವ್ಯಾಸರು ವೇದಾಂತಜ್ಞಾನ ದಿಗ್ವಿಜಯಕ್ಕಾಗಿ ಹೊರಟು ಪರಿಶುದ್ಧವಾದ ಜ್ಞಾನಾರ್ಜನೆಗಾಗಿ ಬಂದವರೆಲ್ಲರಿಗೂ ಸ್ವಚ್ಛ ಜ್ಞಾನೋಪದೇಶಮಾಡಿದರು. ಅನೇಕ ಕುಮತಿಗಳು ಶ್ರೀಹರಿಸರ್ವೋತ್ತಮತ್ವಕ್ಕೆ ಕುಂದುಬರುವಂಥ ನಿಷೇಧ ಶಾಸ್ತ್ರಗಳಿಂದ ಸತ್ಯವನ್ನು ಮರೆಮಾಚಿ ನಿಶ್ಚಯವಾದ ಸುಖವೇ ಲೋಕಕ್ಕೆ ದೊರಕದಂತೆ ಮಾಡಿರಲು ಲೋಕದಲ್ಲಿ ಸುಜ್ಞಾನದ ಪ್ರಕಾಶವನ್ನು ಹರಡಿ ಆನಂದದ ಬೆಳಕನ್ನು ತಂದರು.

ಹೀಗೆ ವ್ಯಾಸರು ಭಕ್ತಜನರನ್ನು ಉದ್ಧಾರಮಾಡುತ್ತ ಬರುತ್ತಿರಲು ದಾರಿಯಲ್ಲಿ ಒಬ್ಬ ಭಕ್ತನು ಯಾವುದೋ ಒಂದು ದೋಶದಿಂದ ಕೀಟಯೋನಿಯಲ್ಲಿ ಬಂದಿರುವುದನ್ನು ಕಂಡ ದಯಾಮಯರು ತೋರಿದ ಕರುಣ ಎಷ್ಟು ಅಪಾರವಾದದ್ದು?

## ಕೀಟದ ಮೇಲೆ ಕರುಣಾದೃಷ್ಟಿ

ಶ್ರೀಹರಿ ಭಕ್ತನಾದ ಒಬ್ಬ ಶೂದ್ರನು ಭಗವತತ್ತ್ವವನ್ನು ಚೆನ್ನಾಗಿ ತಿಳಿದು ಪರಿಶುದ್ಧ ಜ್ಞಾನದಿಂದ ಭಗವತ್ಸೇವೆ ಮಾಡುತ್ತಿದ್ದನು. ಆದರೆ ಪರಮಲೋಭಿಯಾದ ಅವನು ರಾಜ್ಯವಾಳುವ ಪುಣ್ಯವನ್ನು ಪಡೆದಿದ್ದರೂ ಲೋಭತನದ ಪಾಪಶೇಷದಿಂದ ಒಂದು ಕೀಟ ಜನ್ಮತಾಳಿದನು.

ವೇದವ್ಯಾಸರು ಸಂಚಾರಹೊರಟಾಗ ಮಾರ್ಗಮಧ್ಯದಲ್ಲಿ ಕೀಟವು ಹರಿದುಹೋಗುವುದನ್ನು ನೋಡಿ ಅದರ ಪೂರ್ವಜನ್ಮದ ರಹಸ್ಯತಿಳಿದ ಸರ್ವಜ್ಞಮೂರ್ತಿಗಳಾದ ಅವರು ಆ ಕ್ರಿಮಿಯನ್ನು ಕುರಿತು ನಿನ್ನ ಪ್ರಾರಬ್ಧಕರ್ಮ ಸವೆದಿದೆ. ನಿನ್ನ ಕೀಟದೇಹವನ್ನು ತ್ಯಜಿಸಿ ರಾಜನಾಗು'' ಎಂದರು.

ಸಕಲಜೀವಿಗಳಿಗೂ ತಮ್ಮ ದೇಹದಮೇಲೆ ಬಹಳ ಅಭಿಮಾನವಿರುತ್ತದಾದ್ದರಿಂದ ಆ ಕ್ರಿಮಿಯೂ ''ದೇವಾ! ನಾನು ಈ ದೇಹ ಬಿಡಲು ಇಷ್ಟಪಡುವುದಿಲ್ಲ. ನಾನು ಬದುಕಿರಬೇಕು ಸಾಯಲಾರೆ'' ಎಂದಿತು.

ಆಗ ವೇದವ್ಯಾಸರು ಅಹುದು ಸಕಲಜೀವಿಗಳಿಗೂ ಕಾದೆಣ್ಣೆಯಲ್ಲಿನ ಸಂಡಿಗೆಯಂತೆ ದುಃಖದಲ್ಲಿ ಬೇಯುತ್ತಿದ್ದರೂ ಸಾಯಲು ಇಷ್ಟಪಡುವುದಿಲ್ಲ. ಇದು ಜೀವರುಗಳ ಸಹಜದೌರ್ಬಲ್ಯ ಎಂದು ಹೇಳಿ, ಆ ಕ್ರಮಿಗೆ ರಾಜ್ಯಪದವಿ ಕೊಡಿಸಿ ರಾಜ್ಯವಾಳಿಸಿದರು. ಸರ್ವಸ್ವತಂತ್ರರಾದ ವೇದವ್ಯಾಸರಿಗೆ ಅದಕ್ಕೆ ಆ ಜನ್ಮದಲ್ಲೇ ಮೋಕ್ಷವನ್ನು ಕೊಡಲು ಸಮರ್ಥರಾದರೂ ಬ್ರಾಹ್ಮಣನಾಗಿ ವೇದಾಂತಜ್ಞಾನದಿಂದ ಪರಿಪಕ್ವವಾದವರಿಗೇ ಮೋಕ್ಷಪ್ರಾಪ್ತಿ ಎಂದು ಧರ್ಮವಿರುವುದರಿಂದ ಲೋಕಶಿಕ್ಷಣದ ಸಲುವಾಗಿ ನಿನಗೆ ಬ್ರಾಹ್ಮಣ ಜನ್ಮ ಕೊಡುತ್ತೇನೆ ಜ್ಞಾನಸಂಪಾದನೆ ಮಾಡಿಕೊಂಡು ಮೋಕ್ಷವನ್ನು ಪಡೆ'' ಎಂದು ಅನುಗ್ರಹಮಾಡಿದ ಕರುಣಾಳುವಿನ ಕಥೆ ಎಷ್ಟು ಕೊಂಡಾಡಿದರೂ ಸಾಲದು'' ಎಂದು ಹೇಳಿ ಹೀಗೆ ವೇದವ್ಯಾಸರ ಪೂರ್ಣಾನುಗ್ರಹಕ್ಕೆ ಪಾತ್ರನಾದ ಆ ವ್ಯಕ್ತಿಯೇ ಮುಂದೆ 'ಕುಶಾರವ' ಎಂಬ ಮುನಿಯಿಂದ ಮಿತ್ರಾ ಎಂಬುವಳಲ್ಲಿ ಜನಿಸಿದ ಮೈತ್ರೇಯರು'' ಎಂದು ತಿಳಿಸಿದರು.

ರುದ್ರದೇವರು ಮಹಾವಿಷ್ಣುವನ್ನು ಕುರಿತು ತಪಸ್ಸುಮಾಡಿ ನೀನು ವೇದವ್ಯಾಸರೂಪದಲ್ಲಿ ಅವತರಿಸಿದಾಗ ''ನಾನು ನಿನಗೆ ಮಗನಾಗಬೇಕು''ಎಂದು ಭಗವಂತನ ಜ್ಞಾನಾರ್ಜನೆಗಾಗಿ ವರಬೇಡಿದನು. ವೈಷ್ಣವಶಿಖಾಮಣಿಯಾದ ರುದ್ರನಿಗೆ ವರವಿತ್ತಕಾರಣ ವೇದವ್ಯಾಸರು ಅಸುರಜನರ ಮೋಹನಾರ್ಥವಾಗಿ ತಾವು ಪುತ್ರನಿಗಾಗಿ ತಪಸ್ಸುಮಾಡಿದಂತೆ ಲೀಲೆ ಮಾಡಿದರು.

ಅಶ್ವತ್ಥ ಬನ್ನಿಕಾಷ್ಟದಿಂದ ಮಥನಮಾಡಿ ಅಗ್ನಿ ಉತ್ಪತ್ತಿಮಾಡಲು ತೊಡಗಿದಾಗ ಆ ತೇಜಸ್ಸಿನಿಂದ ಶುಕಮುನಿಯು ಹುಟ್ಟಿದರು.

ಶುಕರು ಉತ್ಪತ್ತಿಯಾದುದ್ದನ್ನು ನೋಡಿದ ಘೃತಾಚಿ ಎಂಬ ಅಪ್ಸರೆಯು ಗಿಳಿಯರೂಪದಿಂದ ಬಂದು ದರ್ಶನಪಡೆದು ತನ್ನ ಶಾಪವಿಮೋಚನೆಯಾಗಿ ನಿಜರೂಪ ಬಂದಮೇಲೆ ವೇದವ್ಯಾಸರಿಗೆ ನಮಸ್ಕಾರಮಾಡಿ ''ನನ್ನನ್ನು ಗಿಳಿಯರೂಪದಿಂದ ಶಾಪಮುಕ್ತನನ್ನಾಗಿ ಮಾಡಿದ ನಿಮ್ಮ ಪುತ್ರನಿಗೆ ಅದೇ ನಾಮಕರಣ ಮಾಡಿರಿ'' ಎಂದು ಕೇಳಿಕೊಂಡಾಗ ಅಗ್ನಿಮಥನ ಮಾಡುವಾಗ ಜನಿಸಿದ ಕುವರನನ್ನು ಶುಕನೆಂದೇ ಕರೆದರು.

ನಂತರ ವೇದವ್ಯಾಸರು ಶುಕನ ಯೋಗ್ಯತೆಗೆ ತಕ್ಕ ಶುಭಫಲ ಕೊಡಲಿಕ್ಕಾಗಿ ವಾಯುದೇವರು ಅವರಲ್ಲಿ ಆವೇಶಗೊಳ್ಳಲು ರುದ್ರದೇವರ ಅಭಿಲಾಷೆಯಂತೆ ವೇದವ್ಯಾಸರು ಶುಕನಿಗೆ ಸಕಲ ತತ್ತ್ವ ವಿಷಯಕವಾದಂಥ ಸಕಲವೇದೋಪನಿಷತ್ತುಗಳಿಗೂ ಸ್ಥಾನೀಯವಾದಂಥ ಭಾರತದ ಸಾರಭೂತವಾದ ಭಾಗವತವನ್ನು ಉಪದೇಶ ಮಾಡಿದರು.

ವೇದವ್ಯಾಸರು ಅಸುರರಿಗೆ ತಾಮಸಬುದ್ಧಿ ಹೆಚ್ಚಿಸಲಿಕ್ಕಾಗಿ ತಾಮಸ ಪುರಾಣಗಳನ್ನು ರಚಿಸಿದರು. ಸಜೀವಿಗಳಿಗೆ ಸುಜ್ಞಾನ ಸಂಪತ್ತನ್ನು ಹೇರಳವಾಗಿ ಅವರ ಸ್ವಚ್ಛಜ್ಞಾನವನ್ನು ಬೆಳಗಿಸಲಿಕ್ಕಾಗಿ ವಿಷ್ಣು ಮಹಿಮಾ ಪ್ರತಿಪಾದಕವಾದಂಥ ಪುರಾಣಗಳನ್ನು ರಚಿಸಿದರು. ಬ್ರಹ್ಮಪ್ರತಿಪಾದಕವಾದಂಥ ರಾಜಸಪುರಾಣಗಳನ್ನು ರಚಿಸಿದರು. ಹೀಗೆ ಲೋಕದ ಜನರ ಕ್ಷೇಮಕ್ಕಾಗಿ ಸಂಪತ್ತನ್ನು ನೀಡಿದರು. ಶ್ರೀವೇದವ್ಯಾಸರು ಮಾಡಿದಂಥ ಶಾಸ್ತ್ರಗ್ರಂಥಗಳ ಮೂಲವೇ ಎಲ್ಲೆಡೆಯಲ್ಲೂ ಹರಡಿ ತಾನೇತಾನಾಗಿ ಪ್ರಕಾಶಿಸಿತು.

ಶ್ರೀವೇದವ್ಯಾಸರಿಂದ ಉದ್ಭವಿಸಿಬಂದ ಅಪಾರ ಶಾಸ್ತ್ರಗ್ರಂಥಗಳೆಂಬ ವಾಕ್ತೀರ್ಥವೇ ಸಮಸ್ತ ಕಡೆಗಳಲ್ಲೂ ಹರಿದು ಸಜ್ಜನರ ಮನೋರಂಗದಲ್ಲಿ ನರ್ತನಮಾಡಿತು.

ಜಗತ್ಕಲ್ಯಾಣಕ್ಕಾಗಿ ಯಾವ ಪಕ್ಷಪಾತ ಪ್ರತಿಷ್ಠೆಗಳೂ ಇಲ್ಲದೆ ಸತ್ಯವಾದ ಸಚ್ಛಾಸ್ತ್ರವೆಂಬ ಸವಿತಿರಳನ್ನು ಕರುಣಿಸಿದ ಶ್ರೀವೇದವ್ಯಾಸರ ನಾಮಸ್ಮರಣೆ ಮಾಡಿದವರಿಗೆ ಲೌಕಿಕದ ಪಾರಮಾರ್ಥಿಕದ ಎಲ್ಲಾ ಸುಖಗಳೂ ಲಭಿಸುವುದರಲ್ಲಿ ಅನುಮಾನವೇನಿದೆ?

ಅವರ ಮಹಿಮಾಚರಿತ್ರೆಯನ್ನು ಸಂಪೂರ್ಣವಾಗಿ ಅರಿಯಲು ಬ್ರಹ್ಮಾದಿಗಳಿಗೆ ಸಾಧ್ಯ ವಿಲ್ಲದಿರುವಾಗ ಸಾಮಾನ್ಯರಿಗೆ ಹೇಗೆ ಸಾಧ್ಯ? ವೈರಾಗ್ಯವನ್ನವಲಂಬಿಸಿ ಭಗವತತ್ತ್ವಸಾರದಿಂದ

ಸಂತುಷ್ಠರಾದ ಭಗವದ್ಭಕ್ತರೇ ಲೋಕಹಿತಕ್ಕಾಗಿ ತಮ್ಮ ಜೀವನವನ್ನೇ ಮುಡುಪುಮಾಡಿ ದೀನ ದುಃಖಿಗಳ ಸಂಕಟವನ್ನು ಪರಿಹರಿಸಲೋಸುಗ ತಮ್ಮ ಅಪಾರ ಮಹಿಮೆಗಳನ್ನು ತೋರಿಸಿರುವಾಗ ಭಗವಂತನ ಮಹಿಮೆಗೆ ಆದಿ ಅಂತ್ಯ ಎಲ್ಲಿಯದು? ಪರಾಶರರು ತಮ್ಮ ತಪೋಪುಣ್ಯದಿಂದ ಜಗತ್ತಿನಲ್ಲಿ ಮಂಗಳದ ಮಳೆ ಕರೆಯಲಿಕ್ಕಾಗಿಯೇ ವೇದವ್ಯಾಸರೆಂಬ ಮಂಗಳ ಮೂರ್ತಿಯನ್ನು ನಮಗೆ ಕರುಣಿಸಿದರು.

## ಸಕಲರಾಜನಿಗೆ ಬ್ರಹ್ಮದೇವರ ಶಾಪ

ವೇದವ್ಯಾಸರಿಂದ ಹೊರಹೊಮ್ಮಿಬಂದ ಮಹಾಭಾರತದ ಸತ್ಕಥನದ ಸವಿಯನ್ನು ಅನುಭವಿಸುವ ಯೋಗ ನಿಮಗೆ ಲಭಿಸಿದೆ ಈಗ ಕುರುರಾಜನಾದ ಶಂತನು ಚಕ್ರವರ್ತಿಯ ಪುಣ್ಯ ಚರಿತ್ರೆಯ ಸ್ವಾರಸ್ಯ ಕೇಳಿರಿ ಒಮ್ಮೆ ಬ್ರಹ್ಮದೇವರು ಸಮುದ್ರದಡದಲ್ಲಿದ್ದಾಗ, ಗಂಗಾಸಂಗಮದ ಪೂರ್ಣಿಮೆಯ ಪರ್ವಕಾಲವಾದ್ದರಿಂದ ಸಮುದ್ರವು ಉಕ್ಕಿ ಜಲಬಿಂದುಗಳು ಬ್ರಹ್ಮದೇವರ ಮೇಲೆ ಎರಚಿತು.

ಬ್ರಹ್ಮದೇವರಿಗೆ ಅಜ್ಞಾನವಾಗಲಿ, ಅಸುರಾವೇಶವಾಗಲಿ, ಇಲ್ಲವಾದರೂ ಶ್ರೀಹರಿ ಪ್ರೇರಣಾನುಸಾರ ಸಮುದ್ರರಾಜನನ್ನು ಕುರಿತು ''ನೀನು ನನ್ನನ್ನು ಅವಮಾನಪಡಿಸಿರುವಿ. ನಿನ್ನ ಅರಸಿ ಗಂಗೆಯೊಂದಿಗೆ ಅಟ್ಟಹಾಸದಿಂದ ಭೋರ್ಗರೆಯುತ್ತ ಬಂದು ನನ್ನ ಮುಖಕ್ಕೆ ರಾಚಿಸಿದೆ. ಆದ್ದರಿಂದ ನೀನು ಭೂಮಂಡಲದಲ್ಲಿ ಕ್ಷತ್ರಿಯ ರಾಜನಾಗಿ ಮಹಾಭಿಷಕ್ ಎಂಬ ಹೆಸರಿನಿಂದ ರಾಜ್ಯಭಾರ ಮಾಡು ಎಂದು ಶಾಪವಿತ್ತರು.

## ಮಹಾನುಭಾವನಾದ ಮಹಾಭಿಷಕ್

ಬ್ರಹ್ಮದೇವರಿಂದ ಶಾಪಹೊಂದಿದ ಸಮುದ್ರರಾಜನು ಇಕ್ಷ್ವಾಕು ವಂಶದಲ್ಲಿ ಮಹಾಭಿಷಕ್ ಎಂಬ ಹೆಸರಿನ ರಾಜನಾದನು. ಹರಿಭಕ್ತನಾದ ಈ ರಾಜನು ಹಲವು ಕಾಲ ಧರ್ಮದಿಂದ ರಾಜ್ಯಭಾರ ಮಾಡಿದನು.

ಧರ್ಮಾತ್ಮನಾದ ಈ ರಾಜನು ಒಂದು ಸಾವಿರ ಅಶ್ವಮೇಧಯಾಗವನ್ನು ಒಂದುನೂರು ರಾಜಸೂರ್ಯಯಾಗವನ್ನು ಮಾಡಿದ್ದನು.

ಈ ಪುಣ್ಯಾತ್ಮನು ಸುರಲೋಕವನ್ನು ಸೇರಿ ನಂತರ ಬ್ರಹ್ಮಲೋಕಕ್ಕೂ ಹೋದ ಮಹಾತ್ಮನಾದ್ದರಿಂದಲೇ ಮುಂದೆ ನಡೆಯುವ ಭೂಭಾರಹರಣ ಕಾರ್ಯಕ್ಕೆ ಇವನನ್ನು ಮೂಲಕಾರಣನನ್ನಾಗಿ ಮಾಡಿದನು.

ಒಂದುದಿನ ಮಹಾಭಿಷಕ್ ಮಹಾರಾಜನು ಬ್ರಹ್ಮದೇವರ ಸಭೆಗೆ ಹೋದರು. ಅಲ್ಲಿ ಸಕಲದೇವತೆಗಳೂ ನೆರೆದಿದ್ದರು. ಅಲ್ಲಿಗೆ ಗಂಗಾದೇವಿಯೂ ಬಂದಳು.

## ನದೀನಾಥನು ನರನಾಥನಾದನು

ಗಂಗಾದೇವಿ ತನ್ನ ಮೂಲಪತಿಯನ್ನು ನೋಡಿ ಬಗ್ಗಿ ನಮಸ್ಕಾರಮಾಡುವಾಗ ಶ್ರೀಹರಿ ಸಂಕಲ್ಪದಂತೆ ಹೊದ್ದಸೆರಗು ಜಾರಿತು. ಆಗ ದೇವತೆಗಳೆಲ್ಲರೂ ತಲೆತಗ್ಗಿಸಿ ಕುಳಿತರು. ಮಹಾಭಿಷಕ್‌ರಾಜನು ತನ್ನ ಸತಿ ಗಂಗಾದೇವಿಯನ್ನು ಸಲಿಗೆಯಿಂದಲೇ ನೋಡುತ್ತಿದ್ದನು. ಗಂಗಾದೇವಿಯೂ ಸಂತೋಷದಿಂದ ಪತಿಯ ಮುಖದರ್ಶನದ ಆನಂದದಲ್ಲಿರುವಾಗ ಜಗತ್ತಿಗೆ ನೀತಿನಿಯಮಗಳನ್ನು ಶಿಕ್ಷಣ ಕೊಡಲಿಕ್ಕಾಗಿಯೇ ಭಗವಂತನಿಂದ ನಿಯಮಿತನಾದ ಬ್ರಹ್ಮನು ಪತಿಪತ್ನಿಯರೇ ಆದರೂ ಪರರ ಮುಂದೆ ಕ್ರೀಡಾವಿನೋದಗಳನ್ನೂ ಮಾಡಬಾರದೆಂದು ಉಪದೇಶ ಕೊಡಲಿಕ್ಕಾಗಿಯೂ ಶ್ರೀಹರಿಯ ಸಂಕಲ್ಪದಂತೆ ಮುಂದೆ ನಡೆಯಬೇಕಾದ ಲೋಕಕಲ್ಯಾಣದ ಕಾರ್ಯಕ್ಕಾಗಿಯೂ ಇಬ್ಬರಿಗೂ ಶಾಪವಿತ್ತನು. ಸಮುದ್ರರಾಜಾ! ನೀನು ಹಿಂದೆ ನನ್ನ ಮುಂದೆ ಅವಿನಯದಿಂದ ನಡೆದಾಗ ನನ್ನಿಂದ ಶಾಪಕ್ಕೀಡಾಗಿ ಮಹಾಭಿಷಕ್‌ರಾಜನಾಗಿ ಅವತರಿಸಬೇಕಾಯಿತು. ಈಗ ಮತ್ತೆ ನನ್ನ ದೇವಸಭೆಯ ಮುಂದೆ ನಿನ್ನ ಕಾಮಮತ್ತತೆಯನ್ನು ತೋರಿಸಿರುವಿ. ಆದ್ದರಿಂದ ನಿನಗೆ ಭೂಮಿಯಲ್ಲಿ ಪ್ರತೀಪರಾಜನ ಮಗನಾಗಿ ಶಂತನು ಎಂಬ ಹೆಸರಿನವಾಗು. ಗಂಗೆಯೂ ಈ ನಿಷೇಧಕಾರ್ಯಕ್ಕೆ ಕಾರಣಳಾದ್ದರಿಂದ ಅವಳು ಭೂಲೋಕದಲ್ಲಿ ನಿನಗೆ ಪತ್ನಿಯಾಗಿರುವಳು ಎಂದು ಶಾಪಕೊಟ್ಟಿರುವೆನು ಎಂದು ಹೇಳಿದನು.

## ಅವತಾರಕ್ಕೆ ಸಿದ್ಧಪಡಿಸಲು ಹೊರಟ ಗಂಗಾ

ಗಂಗಾದೇವಿಯು ಬ್ರಹ್ಮದೇವರ ಅಪ್ಪಣೆಯಂತೆ ಶಂತನು ಚಕ್ರವರ್ತಿಗೆ ಮಡದಿಯಾಗಲು ಮುಂದಿನ ಕಾರ್ಯಾಚರಣೆ ಮಾಡಿದಳು. ಮೊದಲೇ ಪ್ರತೀಪರಾಜನಿಂದ ವಾಗ್ದಾನ ಪಡೆದರೆತನಗೆ ನಿಯತಪತಿಯ ಸಮಾಗಮ ಸರಾಗವಾಗಿ ದೊರಕುತ್ತದೆಂಬ ಭಾವವಿಟ್ಟು ಪ್ರತೀಪರಾಜನ ಬಳಿಗೆ ಬಂದಳು. ಆ ರಾಜರ್ಷಿಯು ಭಗವಧ್ಯಾನನಿರತನಾಗಿ ಪದ್ಮಾಸನದಲ್ಲಿ ಕುಳಿತಿದ್ದನ್ನು ಕಂಡು ಬಲದೊಡೆಯ ಮೇಲೇರಿ ಕುಳಿತಳು. ರಾಜನು ಬೆಚ್ಚುಬಿದ್ದು ಕಣ್ತೆರೆದು ನೋಡಿದರೆ ಏಕಾಂಗಿಯಾದ ತನ್ನ ತೊಡೆಯಮೇಲೆ ಚೆಲುವಾಂಗಿ ಓರ್ವಳು ಕುಳಿತಿದ್ದರೆ ಭಯವೂ ಆಯಿತು. ಆಶ್ಚರ್ಯವೂ ಆಯಿತು. ಯೋಗನಿಷ್ಠನಾದ ರಾಜನು ನನ್ನ ಬಲತೊಡೆಯಮೇಲೆ ಮಗಳಂತೆ ಬಂದು ಕುಳಿತಿರುವ ನೀನು ನನಗೆ ಸೊಸೆಯಾಗಿ ಬಾ'' ಎಂದನು. ಆ ಮಾತಿಗಾಗಿಯೇ ಕಾಯುತ್ತಿದ್ದ ಭಾಗೀರಥಿದೇವಿಯು ''ಮಹಾರಾಜಾ! ನನಗೆ ನಿನ್ನ ಮಗ ಶಂತನು ರಾಜನೇ ಪತಿಯಾಗಬೇಕು. ಆತನು ನಾನು ಏನೇ ನಿಷೇಧ ಕಾರ್ಯ ಮಾಡಿದಾಗ್ಯೂ ಬೇಡವೆಂದು ತಡೆಯಬಾರದು. ನನ್ನನ್ನು ಯಾರು? ಎಂದು ತಿಳಿಯಲು ಯತ್ನಪಡಬಾರದು. ನನ್ನ ಅಕಾರ್ಯಕ್ಕೆ

ಕಾರಣ ಕೇಳಬಾರದು. ಈ ಮೂರು ಪ್ರತಿಜ್ಞೆಗೂ ನಿನ್ನಮಗ ಒಪ್ಪುವಂತೆ ಮಾಡುತ್ತೇನೆ ಎಂದು ವಾಗ್ದಾನಮಾಡು'' ಎಂದು ಕೇಳಿ ಮಾತುತೆಗೆದುಕೊಂಡು ಮುಂದಿನ ಕಾರ್ಯಕ್ಕಾಗಿ ಭೂಲೋಕಕ್ಕೆ ಬರುತ್ತಿರುವಾಗ ಮುಂದೆನಡೆದ ಅಷ್ಟವಸುಗಳ ಸಮಾಗಮವನ್ನೂ ಅವರ ಶಾಪವಿಮೋಚನೆಯ ಸಂಕಲ್ಪವನ್ನೂ ತಿಳಿಸುತ್ತೇನೆ. ರಸಸನ್ನಿವೇಶದ ಪುಣ್ಯಕಥೆಯನ್ನು ಶ್ರವಣ ಮಾಡಿರಿ'' ಎಂದು ಮುಂದುವರಿಸಿ ಹೇಳಿದರು. ಬ್ರಹ್ಮದೇವರಿಂದ ಉಂಟಾದ ಶಾಪದಂತೆ ಗಂಗಾದೇವಿ ಭೂಲೋಕದಲ್ಲಿ ಶಂತನುರಾಜನಿಗೆ ಮಡದಿಯಾಗಲು ಹೊರಟುಬರುತ್ತಿದ್ದರೆ ಬ್ರಹ್ಮದೇವರ ಶಾಪದಿಂದ ತೇಜೋಹೀನರಾಗಿ ಬರುತ್ತಿದ್ದ ಅಷ್ಟವಸುಗಳೂ ಅದೇ ಸಂದರ್ಭದಲ್ಲಿ ಭೂಲೋಕಕ್ಕೆ ಹೊರಟಿರಲು ಗಂಗೆಯ ಬಳಿ ಬಂದು ಶರಣಾಗಿ ತಾಯೇ ನಮ್ಮನ್ನು ನಿನ್ನ ಗರ್ಭಗುಡಿಯಲ್ಲಿ ಸೇರಿಸಿಕೊಂಡು ನಮ್ಮ ಜನ್ಮದಾತಳಾಗು. ನಾವು ಹುಟ್ಟಿದಾಕ್ಷಣವೇ ನೀರಿನಲ್ಲಿ ಎಸೆದು ನಮ್ಮ ಮೂಲಸ್ಥಾನದಲ್ಲಿ ಬಂದು ಸೇರುವಂತೆ ಉಪಕಾರ ಮಾಡು'' ಎಂದು ಪ್ರಾರ್ಥಿಸಿಕೊಂಡರು. ಗಂಗಾದೇವಿಯು ''ನಿಮ್ಮ ಮಾತಿನಂತೆ ನಾನು ನಡೆಯಬೇಕಾದರೆ ನನಗೆ ಹಸುಗೂಸುಗಳಾದ ನಿಮ್ಮನ್ನು ಕೊಂದ ಪಾಪತಟ್ಟಬಾರದು. ಮತ್ತು ಇದರಿಂದ ನಿಮಗೆ ನನ್ನಮೇಲೆ ವಿರೋಧಭಾವ ಉಂಟಾಗಬಾರದು. ಮೂರನೆಯದಾಗಿ ಎಂಟನೆಯ ವಸು ದೀರ್ಘಾಯುಷ್ಯವಂತನಾಗಿ ಭೂಲೋಕದಲ್ಲೇ ಇದ್ದು ಭಾಭಾರಹರಣಕಾರ್ಯದಲ್ಲಿ ಸ್ವಾಮಿಗೆ ಸೇವೆ ಸಲ್ಲಿಸಲಿ'' ಎಂದು ಹೇಳಿ ಮುಂದೆ ಹೊರಟಳು.'' ಎಂದಾಗ ಆಚಾರ್ಯರೇ ಅಷ್ಟವಸುಗಳಿಗೆ ಶಾಪಉಂಟಾಗಲು ಕಾರಣವೇನು?'' ಎಂದು ಕೇಳಿದಾಗ

## ಅಷ್ಟವಸುಗಳ ಅಸುರಾವೇಶ

ಧರ್ಮಪ್ರಜಾಪತಿಯಿಂದ ವಸು ಎಂಬುವಳಲ್ಲಿ ಅಷ್ಟವಸುಗಳು ಹುಟ್ಟಿದರು. ಇವರಲ್ಲಿ ಹಿರಿಯವಸುವಾದ ದ್ಯು ಎಂಬುವನು ವರಾಂಗಿ ಎಂಬುವಳನ್ನು ವಿವಾಹವಾಗಿದ್ದನು. ಆಕೆಗೆ ಭೂಲೋಕದ ರಾಜನಾದ ಸುಬಿಂದು ಎಂಬುವನ ಪತ್ನಿ ವರಾಂಗಿ ಎಂಬ ಮಹಾರಾಣಿಯೊಂದಿಗೆ ಅತ್ಯಂತ ಸ್ನೇಹದ ಬೆಸುಗೆ ಬೆಸೆದಿತ್ತು.

ವಸುಪತ್ನಿಗೆ ಭೂಲೋಕದಲ್ಲಿರುವ ತನ್ನ ಗೆಳತಿಗೂ ತನ್ನಂತೆಯೇ ಜರಾಮರಣಾದಿಗಳು ಬರದಂತೆ ಇರಬೇಕೆಂಬ ಅಭಿಮಾನದಿಂದ ಪತಿಯನ್ನು ಕುರಿತು ''ನನ್ನ ಗೆಳತಿಯೂ ಭೂಲೋಕದಲ್ಲಿ ನನ್ನಂತೆಯೇ ಜರಾಮರಣಾದಿ ಯಾವ ವಿಕಾರಗಳಿಗೂ ಒಳಗಾಗದೆ ಸದಾ ಸುಖಸಾರ ಜೀವನದಿಂದಿರಬೇಕೆಂಬ ನನ್ನ ಅಭಿಲಾಷೆಯನ್ನು ಈಡೇರಿಸಲಿಕ್ಕಾಗಿ ನೀವು ವಸಿಷ್ಠರ ಬಳಿ ಇರುವ ನಂದಿನಿ ಎಂಬ ಹೆಸರಿನ ಹಸುವನ್ನು ತಂದು ಕೊಡಿರಿ'' ಎಂದು ಹಠಹಿಡಿದಳು.

ವಸು ಹೆಂಡತಿಯ ಬಲಾತ್ಕಾರದಿಂದ ತಪ್ಪಿಸಿಕೊಳ್ಳಲಾಗದೆ ತನ್ನ ಏಳು ಜನ ಸಹೋದರರನ್ನು ಜೊತೆಗೆ ಕರೆದುಕೊಂಡು ಹೋಗಿ ವಸಿಷ್ಠರ ಆಶ್ರಮದಲ್ಲಿದ್ದ ಧೇನುವನ್ನು ಬಲಾತ್ಕಾರದಿಂದ

ಎಳೆತಂದು ತನ್ನ ಪತ್ನಿಗೆ ಒಪ್ಪಿಸಿದನು. ಇದರಿಂದ ವಸಿಷ್ಠರು ತಮ್ಮ ತಪೋದೃಷ್ಟಿಯಿಂದ ಶ್ರೀಹರಿಸಂಕಲ್ಪವನ್ನು ತಿಳಿದು ಬ್ರಹ್ಮದೇವರ ಪ್ರೇರಣೆಯಂತೆ ''ಎಂಟುಮಂದಿ ವಸುಗಳು ನರಯೋನಿಯಲ್ಲಿ ಜನಿಸಲಿ'' ಎಂದು ಶಾಪವಿತ್ತರು. ಅಷ್ಟೇಅಲ್ಲದೆ ಸುರಧೇನುವಿನ ಅಪಹರಣಕ್ಕೆ ಮೂಲಕಾರಣನಾದ ದ್ಯು ವಸುವಿಗೆ ತನ್ನ ಸಹೋದರರಾದ ಏಳುಮಂದಿ ವಸುಗಳ ಗರ್ಭವಾಸದ ಸಂಕಟವೂ ಮರಣಸಂಕಟವೂ ಅವನಿಗುಂಟಾಗಲಿ ಕ್ರೂರಬಾಣಗಳ ಮುಳ್ಳೇ ಅವನು ಮಲಗುವ ಹಾಸಿಗೆ ಆಗಲಿ'' ಎಂದು ಶಾಪವಿತ್ತರು.

ಅವನ ಪತ್ನಿ ವರಾಂಗಿ ಎಂಬುವಳು ಪತಿಯನ್ನು ಅಧರ್ಮದ ಮಾರ್ಗಕ್ಕೆ ಎಳೆದ ಮಹಾಪರಾಧದಿಂದ ರಾಜಪುತ್ರಿಯಾದರೂ ಪತಿಯ ಸುಖಾಶ್ರಯವಿಲ್ಲದೆ ಅನಾಥಳಂತೆ ಅಲೆಯುವಂತಾಗಲಿ'' ಎಂದು ಶಾಪವಿತ್ತರು. ಹೀಗೆ ಅಷ್ಟವಸು ಶಾಪಹೊಂದಿ ಗಂಗೆಯಿಂದ ತಮ್ಮ ಶಾಪವಿಮೋಚನೆ ಮಾಡಿಕೊಳ್ಳಲಿಕ್ಕಾಗಿ ಕಾಯುತ್ತ ನಿಂತಳು.

## ಸುರಗಂಗಾ ನರರಾಜನರಸಿಯಾದಳು

ಪುಣ್ಯಾತ್ಮಳಾದ ಗಂಗಾದೇವಿ ದೇವತಾಕಾರ್ಯದ ಸಲುವಾಗಿ ಭೂಲೋಕದತ್ತ ಬಂದರೂ ತನ್ನ ದೇವತಾಸ್ವರೂಪವನ್ನು ಮಾತ್ರ ತ್ಯಜಿಸದೆ ಸುರಸ್ತ್ರೀಯಾಗಿಯೇ ಶಂತನುರಾಜನ ಬಳಿಗೆ ಬಂದು ದರ್ಶನವಿತ್ತಳು.

ಶಂತನುರಾಜನು ತನ್ನ ತಂದೆಯ ಆಜ್ಞೆಯಂತೆ ಗಂಗಾದೇವಿಯ ಪ್ರತಿಜ್ಞೆಗಳಿಗೆ ಒಪ್ಪಿ ವಿವಾಹವಾದನು.

ಶಂತನುರಾಜ ಪತ್ನಿ ಗಂಗಾದೇವಿಯು ತನ್ನಲ್ಲಿ ಹುಟ್ಟಿದ ಏಳುಮಕ್ಕಳನ್ನೂ ನಿಶ್ಕರುಣದಿಂದ ಪ್ರವಾಹದೊಳಗೆ ಎಸೆದು ಕೊಂದುಹಾಕಿದರೂ ಮಹಾರಾಜನು ತನ್ನ ವಾಗ್ದಾನದಂತೆ ಏನನ್ನೂ ಕೇಳದೆ ಮೌನದುಃಖದಲ್ಲಿ ಕಾಲಕಳೆಯುತ್ತಿದ್ದನು. ಈಗ ಗಂಗಾದೇವಿ ಎಂಟನೆಯ ಮಗುವನ್ನು ಬಟ್ಟೆಯಲ್ಲಿ ಸುತ್ತಿ ಜಲಸಮಾಧಿಗಾಗಿ ಹೊರಟಾಗ ಚಕ್ರವರ್ತಿಯ ದುಃಖ ಉಕ್ಕಿಬಂದಿತು.

ಗಂಗಾ! ನೀನೇಕೆ ಇಂಥ ಕ್ರೂರಕೃತ್ಯ ಮಾಡುತ್ತಿರುವಿ? ದೇವತಾಸ್ತ್ರೀಯಂತೆ ಇರುವ ತೇಜಸ್ಸಿಗೆ ನನ್ನ ಮನಸ್ಸು ಆಕರ್ಶಣವಾಯಿತು. ನನಗೆ ನಿನ್ನಲ್ಲಿ ಒಲುಮೆ ಹುಟ್ಟಿರಲಿಕ್ಕೂ ನಿನ್ನ ಈ ಶಿಶುಹತ್ಯೆಗೂ ಏನೋ ಬಲವಾದ ಕಾರಣ ಇರಬೇಕೆಂದೇ ನಾನು ಊಹಿಸುತ್ತೇನೆ ಏನು ಬೇಗ ಹೇಳು ನನ್ನ ಮನಸ್ಸು ಇದನ್ನು ತಿಳಿಯಲಿಕ್ಕಾಗಿ ಕಳವಳಗೊಳ್ಳುತ್ತಿದೆ'' ಎಂದನು.

ಆಗ ಗಂಗೆಯು ಮಹಾರಾಜನ ಮುಂದೆ ಪೂರ್ವವೃತ್ತಾಂತವನ್ನು ಕೇಳುವೆಯಾದರೆ ನಿನ್ನ ಮೂಲರೂಪದ ಹಿನ್ನೆಲೆಯನ್ನು ಸ್ಮರಿಸಿಕೊ. ಬ್ರಹ್ಮದೇವರ ಶಾಪದಂತೆ ನೀನು ಪ್ರತೀಪರಾಜಪುತ್ರನಾಗಿ ಜನಿಸಿದಾಗ ನಾನು ನನ್ನ ನಿಯತಪತಿಯಾದ ನಿನ್ನನ್ನು ವರಿಸಿದೆನು ನೀನು

ಮಾನವ ದೇಹವನ್ನು ಧರಿಸಿರುವ ಕಾರಣದಿಂದ ನನ್ನ ಗುಹ್ಯಧರ್ಮವನ್ನು ನಿನ್ನೊಡನೆ ಇದ್ದು ಪಾಲಿಸಲು ಸಾಧ್ಯವಿಲ್ಲವೆಂಬ ಕಾರಣದಿಂದಲೂ ಅಷ್ಟವಸುಗಳ ಪ್ರಾರ್ಥನೆಯಂತೆ ಅವರನ್ನು ಜನಿಸಿ ಅವರ ಮೂಲಸ್ಥಾನಕ್ಕೆ ಕಳುಹಿಸುವ ನಿಮಿತ್ತದಿಂದಲೂ ನಿನ್ನಿಂದ ಹುಟ್ಟಿದ ಏಳುಮಕ್ಕಳನ್ನು ಕೊಂದು ಅವರನ್ನು ವಸುಲೋಕಕ್ಕೆ ಕಳುಹಿಸಿರುತ್ತೇನೆ. ಈ ಎಂಟನೆಯವನು ಭಗವಂತನ ಸಂಕಲ್ಪದಂತೆ ಚಿರಾಯುವೂ ಕೀರ್ತಿಶಾಲಿಯೂ ಆಗಿರುವುದರಿಂದ ಶ್ರೀಹರಿ ಸಂಕಲ್ಪಾನುಸಾರ ಇವನನ್ನು ಕೊಲ್ಲುವುದಿಲ್ಲ. ಈತನು ಸಕಲಶಾಸ್ತ್ರಗಳಲ್ಲೂ ಪರಿಣತನಾಗಿ ಅಮಾನುಷ ಕಾರ್ಯಗಳಿಂದ ಶ್ರೀಹರಿ ಸೇವೆಗಾಗಿಯೇ ಅವತರಿಸಿರುವುದರಿಂದ ಇವನನ್ನು ಸಕಲ ಜ್ಞಾನ ಪರಿಣತನನ್ನಾಗಿ ಮಾಡಿ ನಿನಗೆ ತಂದೊಪ್ಪಿಸುವೆನು ಎಂದು ಹೇಳಿ ವರುಣನ ಮಂದಿರವನ್ನು ಕುರಿತು ಹೊರಟುಹೋದಳು.

## ದಿವ್ಯಜ್ಞಾನ ಜ್ಯೋತಿ ದೇವವ್ರತ

ಭಾಗೀರಥೀದೇವಿಯು ತನ್ನ ಪತಿಯಿಂದ ಅಪ್ಪಣೆಪಡೆದು ದೇವವ್ರತನೆಂಬ ಪುತ್ರನನ್ನು ಶಿಕ್ಷಣಾರ್ಥವಾಗಿ ಕರೆತಂದು ದೇವಗುರುವಾದಂಥ ಬ್ರಹ್ಮಸ್ಪತ್ಯಾಚಾರ್ಯರ ಬಳಿ ವಿದ್ಯಾಭ್ಯಾಸಕ್ಕೆಂದು ಬಿಟ್ಟಳು. ದೇವವ್ರತನು ಬೃಹಸ್ಪತ್ಯಾಚಾರ್ಯರ ಬಳಿ ಐವತ್ತು ವರ್ಷಗಳ ಕಾಲ ವೇದಾಧ್ಯಯನವನ್ನು ಅಭ್ಯಾಸಮಾಡಿದನು.

ನಂತರ ಗಂಗಾದೇವಿಯು ಸುರಗುರುಗಳಿಂದ ಅಪ್ಪಣೆಪಡೆದು ಮಗನನ್ನು ಗುರುಕುಲದಿಂದ ಕರೆತಂದು ಮತ್ತೆ ದೋಶರಹಿತನಾಗಿ ಸಕಲವಿದ್ಯಾಪರಿಪೂರ್ಣನಾದ ಪರಶುರಾಮರ ಬಳಿ ವಿದ್ಯಾಭ್ಯಾಸಕ್ಕಾಗಿ ತಂದುಬಿಟ್ಟಳು. ಅಲ್ಲಿ ಪರಶುರಾಮರಿಂದ ವೇದಶಾಸ್ತ್ರಾಭ್ಯಾಸವನ್ನು ಐವತ್ತು ವರ್ಷಗಳ ಕಾಲ ಮಾಡಿದನಂತರ ಅಸ್ತ್ರವಿದ್ಯೆಯನ್ನೂ ಇಪ್ಪತ್ತೈದು ವರ್ಷಗಳಕಾಲ ಸಕಲ ನೀತಿಶಾಸ್ತ್ರಗಳನ್ನು ಉಪದೇಶಗೊಂಡು ಜ್ಞಾನಸಂಪನ್ನನಾಗಿರಲು ಗಂಗಾದೇವಿಯು ವಿದ್ಯಾವಂತನಾಗಿಯೂ ಲಕ್ಷಣಯುತನಾಗಿಯೂ ಇರುವ ಪುತ್ರನನ್ನು ನೋಡಿ ಬಹಳ ಸಂತೋಷಗೊಂಡು ಶ್ರೀಪರಶುರಾಮರ ಅನುಮತಿ ಪಡೆದು ತನ್ನ ಪತಿಯ ಬಳಿ ಬಿಡುವುದಕ್ಕಾಗಿ ಕರೆದುಕೊಂಡು ಬಂದಳು.

ದೇವವ್ರತನು ಮಾತೆಯಮುಂದೆ ತಾನು ಕಲಿತ ಅಸ್ತ್ರವಿದ್ಯೆಯನ್ನು ಅಮೋಘವಾಗಿ ತೋರಿಸುತ್ತ ಸಂತೋಷಪಡಿಸುತ್ತಿದ್ದನು. ತನ್ನ ಶರ ವಿದ್ಯಾಚಾತುರ್ಯದಿಂದ ಗಂಗಾಪ್ರವಾಹವನ್ನು ತಡೆಗಟ್ಟಿದನು. ರಭಸಗಾಮಿಯಾದ ಗಂಗೆ ನಿಂತಲ್ಲೇ ನಿಂತಿದ್ದರೆ ತನ್ನ ಮಗನ ಬಿಲ್ಲು ವಿದ್ಯಾಚಾತುರ್ಯಕ್ಕೆ ಚಕಿತಳಾಗಿ ನಿಂತುಬಿಟ್ಟಳೋ ಎನ್ನುವಂತಿತ್ತು. ಆ ಸಮಯದಲ್ಲಿಯೇ ಶಂತನುರಾಜನೂ ಬೇಟೆಯ ಆಯಾಸ ಪರಿಹಾರಕ್ಕಾಗಿ ಸಲಿಲ ಸಂತೋಷದಿಂದ ವಿಶ್ರಮಿಸಿಕೊಳ್ಳೋಣವೆಂದು ಬಂದರೆ ಗಂಗಾ ಚಲನವಲನಾದಿಗಳಿಲ್ಲದೆ ಅಚಲಳಾಗಿರಲು ರಾಜನು ಆಶ್ಚರ್ಯದಿಂದ ಸುತ್ತಮುತ್ತಲೂ

ನೋಡಿದರೆ ವೀರಕುಮಾರನೊಬ್ಬನು ಶಸ್ತ್ರಾಸ್ತ್ರಗಳನ್ನು ಧರಿಸಿ ದಿವ್ಯತೇಜಸ್ಸಿನಿಂದ ನಿಂತಿರುವುದನ್ನು ಕಂಡು ಶಂತನುರಾಜನು ಪುತ್ರವಾತ್ಸಲ್ಯದಿಂದ ಆಲಂಗಿಸಿಕೊಳ್ಳಲು ಸಮೀಪಕ್ಕೆ ಹೋದರೆ ಬಾಲಕನು ಅದೃಶ್ಯನಾದನು. ಕಣ್ಮುಂದೆ ಕಾಣಿಸಿದ ಹುಡುಗನು ಎಲ್ಲಿ ಮಾಯವಾದ? ಎಂದು ಬೆರಗಾಗಿ ನೋಡುತ್ತಿದ್ದರೆ ಗಂಗಾದೇವಿಯು ಆಗ ತನ್ನ ಪುತ್ರನೊಡನೆ ಮಹಾರಾಜನ ಮುಂದೆ ಬಂದು ಚಕ್ರವರ್ತಿ ನಿನ್ನ ಎಂಟನೆಯ ಮಗ ದೇವವ್ರತನೆಂಬುವನು ಈತನು. ಇವನು ವೈದಿಕಶಾಸ್ತ್ರವನ್ನು ಆಚಾರ್ಯರಲ್ಲಿ ಉಪದೇಶಗೊಂಡು ಧರ್ಮಶಾಸ್ತ್ರಗಳೆಲ್ಲವನ್ನೂ ಬಲ್ಲವನಾಗಿದ್ದಾನೆ. ಕ್ಷತ್ರಿಯರಿಗೆ ಅವಶ್ಯವಾದ ಧರ್ಮದಂತೆ ಶಸ್ತ್ರಾಸ್ತ್ರಗಳ ವಿದ್ಯೆಯನ್ನು ಶಾಸ್ತ್ರೋಕ್ತವಾಗಿ ಶ್ರೇಷ್ಠ ಗುರುಗಳಿಂದ ಉಪದೇಶ ಹೊಂದಿ ನಿನ್ನ ವಂಶಕ್ಕೆ ಕೀರ್ತಿಯನ್ನು ಕೊಟ್ಟು ನಿನಗೆ ಸುಖವನ್ನುಂಟು ಮಾಡತಕ್ಕ ಸತ್ಪುತ್ರನಾಗಿದ್ದಾನೆ. ನಿನ್ನಿಂದ ಹುಟ್ಟಿದ ಏಳುಮಕ್ಕಳಿಗೂ ತಾಯಿಯಾದ ನಾನೇ ಮೃತ್ಯುವಿನ ಬಾಯಿಗೆ ತುತ್ತುಕೊಟ್ಟೆನೆಂದು ತಿಳಿಯಬೇಡ ಅವರೆಲ್ಲರೂ ನಿನ್ನ ವೀರ್ಯದಿಂದ ನರಶಿಶುಗಳಾಗಿ ಹುಟ್ಟಿ ತಕ್ಷಣವೇ ತಮ್ಮ ದೇಹತ್ಯಾಗಮಾಡಿ ತಮ್ಮ ಮೂಲರೂಪವಾದ ವಸುಲೋಕದಲ್ಲಿ ಆನಂದದಿಂದಿದ್ದಾರೆ. ಶ್ರೀಮನ್ನಾರಾಯಣನ ಪಾದೋದಕದಲ್ಲಿ ಮುಳುಗಿದ ಅವರಿಗೆ ಪುಣ್ಯಲೋಕವೇ ಪ್ರಾಪ್ತವಾಗಿದೆ. ನೀನು ಶ್ರೀನಾರಾಯಣನ ಸಂಕಲ್ಪದಂತೆ ಸ್ವಾಮಿಯ ಆಜ್ಞೆಯನ್ನು ಪೂರೈಸಿ ನಿನ್ನ ಮೂಲರೂಪವನ್ನು ಸೇರು'' ಎಂದು ಹೇಳಿ ಅದೃಶ್ಯಳಾದಳು.

ಶಂತನು ಚಕ್ರವರ್ತಿಗೆ ಮಗನನ್ನು ನೋಡಿ ಮಹದಾನಂದವಾಯಿತು. ಅವನನ್ನೇ ಯುವರಾಜನನ್ನಾಗಿ ಮಾಡಿ ತಾನು ರಾಜ್ಯಾಡಳಿತದ ಹೊರೆಯನ್ನು ಕಡಿಮೆಮಾಡಿಕೊಂಡು ಭಗವಧ್ಯಾನತತ್ಪರನಾಗಿದ್ದನು.

ಕೆಲದಿನಗಳ ನಂತರ ದೇವವ್ರತನು ತಂದೆಯನ್ನು ಕುರಿತು ''ಅಪ್ಪಾಜೀ! ನನಗೆ ಇನ್ನೂ ಜ್ಞಾನಪಿಪಾಸೆ ನಿವಾರಣೆ ಆಗಲಿಲ್ಲ. ಬೃಹಸ್ಪತ್ಯಾಚಾರ್ಯರ ಬಳಿಗೆ ಹೋಗಿ ಅನೇಕ ಧರ್ಮಸೂಕ್ಷ್ಮಗಳನ್ನು ರಾಜನೀತಿಗಳನ್ನು ಭಗವತತ್ತ್ವಗಳನ್ನು ಉಪದೇಶ ಪಡೆದು ಬರುತ್ತೇನೆ ಅಪ್ಪಣೆಕೊಡಿರಿ'' ಎಂದು ಕೇಳಿ ಬೃಹಸ್ಪತ್ಯಾಚಾರ್ಯರ ಬಳಿ ಐವತ್ತು ವರ್ಷಗಳ ಕಾಲ ವೈದಿಕಶಾಸ್ತ್ರಾದಿ ಬ್ರಹ್ಮವಿದ್ಯೆಯನ್ನು ಕಲಿತು ಆಮೇಲೆ ಮತ್ತೆ ಪರಶುರಾಮರ ಬಳಿಗೆ ಬಂದನು. ಸಮಸ್ತವಿದ್ಯೆಗೂ ಅಧಿದೇವರಾಗಿಯೂ ಸಮಸ್ತವಿದ್ಯಾಪರಿಪೂರ್ಣರಾಗಿಯೂ ಇದ್ದ ಪರಶುರಾಮದೇವರ ಬಳಿ ಮುನ್ನೂರು ವರ್ಷಗಳಕಾಲ ಪರಮಾತ್ಮನ ವಿಷಯಕವಾದ ತತ್ವಶಾಸ್ತ್ರವನ್ನು ಉಪದೇಶ ಪಡೆದು ಶ್ರೀಪರಶುರಾಮರ ಪರಮಾನುಗ್ರಹದಿಂದ ಸಚ್ಛಾಸ್ತ್ರ ಸಂಪನ್ನನಾಗಿ ತಂದೆಯಾದ ಶಂತನುರಾಜನ ಬಳಿಗೆ ಬಂದು ರಾಜ್ಯಾಡಳಿತಕ್ಕೆ ತಾನೂ ನೆರವಾಗಿ ಧರ್ಮವೆಂಬ ಸಂತೋಷ ಹೂದೋಟದಲ್ಲಿ ಎಲ್ಲರನ್ನು ಆನಂದಪಡಿಸುತ್ತಿದ್ದನು. ತಪಸ್ಸೇ ತಮ್ಮ ಸರ್ವತ್ರಸಾಧನವೆಂದು ನಂಬಿ ಸಕಲಸುಖ ಸಂಪತ್ತುಗಳನ್ನು ನಿರಾಕರಿಸಿ ಭಗವಂತನ ಪಾದಮೂಲದಲ್ಲೇ ಸಕಲ ಸುಖಸಾರವನ್ನು ಅನುಭವಿಸುವ ಯೋಗಿಗಳಿಗೆ ಒಬ್ಬ ಕ್ಷುಲ್ಲಕ ಸ್ತ್ರೀರೂಪ ದರ್ಶನದಿಂದ ಕಾಮವಿಕಾರ ಎಂದಿಗೂ

ಮಾನವ ದೇಹವನ್ನು ಧರಿಸಿರುವ ಕಾರಣದಿಂದ ನನ್ನ ಗುಹ್ಯಧರ್ಮವನ್ನು ನಿನ್ನೊಡನೆ ಇದ್ದು ಪಾಲಿಸಲು ಸಾಧ್ಯವಿಲ್ಲವೆಂಬ ಕಾರಣದಿಂದಲೂ ಅಷ್ಟವಸುಗಳ ಪ್ರಾರ್ಥನೆಯಂತೆ ಅವರನ್ನು ಜನಿಸಿ ಅವರ ಮೂಲಸ್ಥಾನಕ್ಕೆ ಕಳುಹಿಸುವ ನಿಮಿತ್ತದಿಂದಲೂ ನಿನ್ನಿಂದ ಹುಟ್ಟಿದ ಏಳುಮಕ್ಕಳನ್ನು ಕೊಂದು ಅವರನ್ನು ವಸುಲೋಕಕ್ಕೆ ಕಳುಹಿಸಿರುತ್ತೇನೆ. ಈ ಎಂಟನೆಯವನು ಭಗವಂತನ ಸಂಕಲ್ಪದಂತೆ ಚಿರಾಯುವೂ ಕೀರ್ತಿಶಾಲಿಯೂ ಆಗಿರುವುದರಿಂದ ಶ್ರೀಹರಿ ಸಂಕಲ್ಪಾನುಸಾರ ಇವನನ್ನು ಕೊಲ್ಲುವುದಿಲ್ಲ. ಈತನು ಸಕಲಶಾಸ್ತ್ರಗಳಲ್ಲೂ ಪರಿಣತನಾಗಿ ಅಮಾನುಷ ಕಾರ್ಯಗಳಿಂದ ಶ್ರೀಹರಿ ಸೇವೆಗಾಗಿಯೇ ಅವತರಿಸಿರುವುದರಿಂದ ಇವನನ್ನು ಸಕಲ ಜ್ಞಾನ ಪರಿಣತನನ್ನಾಗಿ ಮಾಡಿ ನಿನಗೆ ತಂದೊಪ್ಪಿಸುವೆನು ಎಂದು ಹೇಳಿ ವರುಣನ ಮಂದಿರವನ್ನು ಕುರಿತು ಹೊರಟುಹೋದಳು.

# ದಿವ್ಯಜ್ಞಾನ ಜ್ಯೋತಿ ದೇವವ್ರತ

ಭಾಗೀರಥೀದೇವಿಯು ತನ್ನ ಪತಿಯಿಂದ ಅಪ್ಪಣೆಪಡೆದು ದೇವವ್ರತನೆಂಬ ಪುತ್ರನನ್ನು ಶಿಕ್ಷಣಾರ್ಥವಾಗಿ ಕರೆತಂದು ದೇವಗುರುವಾದಂಥ ಬ್ರಹ್ಮಸ್ಪತ್ಯಾಚಾರ್ಯರ ಬಳಿ ವಿದ್ಯಾಭ್ಯಾಸಕ್ಕೆಂದು ಬಿಟ್ಟಳು. ದೇವವ್ರತನು ಬೃಹಸ್ಪತ್ಯಾಚಾರ್ಯರ ಬಳಿ ಐವತ್ತು ವರ್ಷಗಳ ಕಾಲ ವೇದಾಧ್ಯಯನವನ್ನು ಅಭ್ಯಾಸಮಾಡಿದನು.

ನಂತರ ಗಂಗಾದೇವಿಯು ಸುರಗುರುಗಳಿಂದ ಅಪ್ಪಣೆಪಡೆದು ಮಗನನ್ನು ಗುರುಕುಲದಿಂದ ಕರೆತಂದು ಮತ್ತೆ ದೋಶರಹಿತನಾಗಿ ಸಕಲವಿದ್ಯಾಪರಿಪೂರ್ಣನಾದ ಪರಶುರಾಮರ ಬಳಿ ವಿದ್ಯಾಭ್ಯಾಸಕ್ಕಾಗಿ ತಂದುಬಿಟ್ಟಳು. ಅಲ್ಲಿ ಪರಶುರಾಮರಿಂದ ವೇದಶಾಸ್ತ್ರಾಭ್ಯಾಸವನ್ನು ಐವತ್ತು ವರ್ಷಗಳ ಕಾಲ ಮಾಡಿದನಂತರ ಅಸ್ತ್ರವಿದ್ಯೆಯನ್ನೂ ಇಪ್ಪತ್ತೈದು ವರ್ಷಗಳಕಾಲ ಸಕಲ ನೀತಿಶಾಸ್ತ್ರಗಳನ್ನು ಉಪದೇಶಗೊಂಡು ಜ್ಞಾನಸಂಪನ್ನನಾಗಿರಲು ಗಂಗಾದೇವಿಯು ವಿದ್ಯಾವಂತನಾಗಿಯೂ ಲಕ್ಷಣಯುತನಾಗಿಯೂ ಇರುವ ಪುತ್ರನನ್ನು ನೋಡಿ ಬಹಳ ಸಂತೋಷಗೊಂಡು ಶ್ರೀಪರಶುರಾಮರ ಅನುಮತಿ ಪಡೆದು ತನ್ನ ಪತಿಯ ಬಳಿ ಬಿಡುವುದಕ್ಕಾಗಿ ಕರೆದುಕೊಂಡು ಬಂದಳು.

ದೇವವ್ರತನು ಮಾತೆಯಮುಂದೆ ತಾನು ಕಲಿತ ಅಸ್ತ್ರವಿದ್ಯೆಯನ್ನು ಅಮೋಘವಾಗಿ ತೋರಿಸುತ್ತ ಸಂತೋಷಪಡಿಸುತ್ತಿದ್ದನು. ತನ್ನ ಶರ ವಿದ್ಯಾಚಾತುರ್ಯದಿಂದ ಗಂಗಾಪ್ರವಾಹವನ್ನು ತಡೆಗಟ್ಟಿದನು. ರಭಸಗಾಮಿಯಾದ ಗಂಗೆ ನಿಂತಲ್ಲೇ ನಿಂತಿದ್ದರೆ ತನ್ನ ಮಗನ ಬಿಲ್ಲು ವಿದ್ಯಾಚಾತುರ್ಯಕ್ಕೆ ಚಕಿತಳಾಗಿ ನಿಂತುಬಿಟ್ಟಳೋ ಎನ್ನುವಂತಿತ್ತು. ಆ ಸಮಯದಲ್ಲಿಯೇ ಶಂತನುರಾಜನೂ ಬೇಟೆಯ ಆಯಾಸ ಪರಿಹಾರಕ್ಕಾಗಿ ಸಲಿಲ ಸಂತೋಷದಿಂದ ವಿಶ್ರಮಿಸಿಕೊಳ್ಳೋಣವೆಂದು ಬಂದರೆ ಗಂಗಾ ಚಲನವಲನಾದಿಗಳಿಲ್ಲದೆ ಅಚಲಳಾಗಿರಲು ರಾಜನು ಆಶ್ಚರ್ಯದಿಂದ ಸುತ್ತಮುತ್ತಲೂ

ನೋಡಿದರೆ ವೀರಕುಮಾರನೊಬ್ಬನು ಶಸ್ತ್ರಾಸ್ತ್ರಗಳನ್ನು ಧರಿಸಿ ದಿವ್ಯತೇಜಸ್ಸಿನಿಂದ ನಿಂತಿರುವುದನ್ನು ಕಂಡು ಶಂತನುರಾಜನು ಪುತ್ರವಾತ್ಸಲ್ಯದಿಂದ ಆಲಂಗಿಸಿಕೊಳ್ಳಲು ಸಮೀಪಕ್ಕೆ ಹೋದರೆ ಬಾಲಕನು ಅದೃಶ್ಯನಾದನು. ಕಣ್ಮುಂದೆ ಕಾಣಿಸಿದ ಹುಡುಗನು ಎಲ್ಲಿ ಮಾಯವಾದ? ಎಂದು ಬೆರಗಾಗಿ ನೋಡುತ್ತಿದ್ದರೆ ಗಂಗಾದೇವಿಯು ಆಗ ತನ್ನ ಪುತ್ರನೊಡನೆ ಮಹಾರಾಜನ ಮುಂದೆ ಬಂದು ಚಕ್ರವರ್ತಿ ನಿನ್ನ ಎಂಟನೆಯ ಮಗ ದೇವವ್ರತನೆಂಬುವನು ಈತನು. ಇವನು ವೈದಿಕಶಾಸ್ತ್ರವನ್ನು ಆಚಾರ್ಯರಲ್ಲಿ ಉಪದೇಶಗೊಂಡು ಧರ್ಮಶಾಸ್ತ್ರಗಳೆಲ್ಲವನ್ನೂ ಬಲ್ಲವನಾಗಿದ್ದಾನೆ. ಕ್ಷತ್ರಿಯರಿಗೆ ಅವಶ್ಯವಾದ ಧರ್ಮದಂತೆ ಶಸ್ತ್ರಾಸ್ತ್ರಗಳ ವಿದ್ಯೆಯನ್ನು ಶಾಸ್ತ್ರೋಕ್ತವಾಗಿ ಶ್ರೇಷ್ಠ ಗುರುಗಳಿಂದ ಉಪದೇಶ ಹೊಂದಿ ನಿನ್ನ ವಂಶಕ್ಕೆ ಕೀರ್ತಿಯನ್ನು ಕೊಟ್ಟು ನಿನಗೆ ಸುಖವನ್ನುಂಟು ಮಾಡತಕ್ಕ ಸತ್ಪುತ್ರನಾಗಿದ್ದಾನೆ. ನಿನ್ನಿಂದ ಹುಟ್ಟಿದ ಏಳುಮಕ್ಕಳಿಗೂ ತಾಯಿಯಾದ ನಾನೇ ಮೃತ್ಯುವಿನ ಬಾಯಿಗೆ ತುತ್ತುಕೊಟ್ಟೆನೆಂದು ತಿಳಿಯಬೇಡ ಅವರೆಲ್ಲರೂ ನಿನ್ನ ವೀರ್ಯದಿಂದ ನರಶಿಶುಗಳಾಗಿ ಹುಟ್ಟಿ ತಕ್ಷಣವೇ ತಮ್ಮ ದೇಹತ್ಯಾಗಮಾಡಿ ತಮ್ಮ ಮೂಲರೂಪವಾದ ವಸುಲೋಕದಲ್ಲಿ ಆನಂದದಿಂದಿದ್ದಾರೆ. ಶ್ರೀಮನ್ನಾರಾಯಣನ ಪಾದೋದಕದಲ್ಲಿ ಮುಳುಗಿದ ಅವರಿಗೆ ಪುಣ್ಯಲೋಕವೇ ಪ್ರಾಪ್ತವಾಗಿದೆ. ನೀನು ಶ್ರೀನಾರಾಯಣನ ಸಂಕಲ್ಪದಂತೆ ಸ್ವಾಮಿಯ ಆಜ್ಞೆಯನ್ನು ಪೂರೈಸಿ ನಿನ್ನ ಮೂಲರೂಪವನ್ನು ಸೇರು'' ಎಂದು ಹೇಳಿ ಅದೃಶ್ಯಳಾದಳು.

ಶಂತನು ಚಕ್ರವರ್ತಿಗೆ ಮಗನನ್ನು ನೋಡಿ ಮಹದಾನಂದವಾಯಿತು. ಅವನನ್ನೇ ಯುವರಾಜನನ್ನಾಗಿ ಮಾಡಿ ತಾನು ರಾಜ್ಯಾಡಳಿತದ ಹೊರೆಯನ್ನು ಕಡಿಮೆಮಾಡಿಕೊಂಡು ಭಗವಧ್ಯಾನತತ್ಪರನಾಗಿದ್ದನು.

ಕೆಲದಿನಗಳ ನಂತರ ದೇವವ್ರತನು ತಂದೆಯನ್ನು ಕುರಿತು ''ಅಪ್ಪಾಜೀ! ನನಗೆ ಇನ್ನೂ ಜ್ಞಾನಪಿಪಾಸೆ ನಿವಾರಣೆ ಆಗಲಿಲ್ಲ. ಬೃಹಸ್ಪತ್ಯಾಚಾರ್ಯರ ಬಳಿಗೆ ಹೋಗಿ ಅನೇಕ ಧರ್ಮಸೂಕ್ಷ್ಮಗಳನ್ನು ರಾಜನೀತಿಗಳನ್ನು ಭಗವತತ್ತ್ವಗಳನ್ನು ಉಪದೇಶ ಪಡೆದು ಬರುತ್ತೇನೆ ಅಪ್ಪಣೆಕೊಡಿರಿ'' ಎಂದು ಕೇಳಿ ಬೃಹಸ್ಪತ್ಯಾಚಾರ್ಯರ ಬಳಿ ಐವತ್ತು ವರ್ಷಗಳ ಕಾಲ ವೈದಿಕಶಾಸ್ತ್ರಾದಿ ಬ್ರಹ್ಮವಿದ್ಯೆಯನ್ನು ಕಲಿತು ಆಮೇಲೆ ಮತ್ತೆ ಪರಶುರಾಮರ ಬಳಿಗೆ ಬಂದನು. ಸಮಸ್ತವಿದ್ಯೆಗೂ ಅಧಿದೇವರಾಗಿಯೂ ಸಮಸ್ತವಿದ್ಯಾಪರಿಪೂರ್ಣರಾಗಿಯೂ ಇದ್ದ ಪರಶುರಾಮದೇವರ ಬಳಿ ಮುನ್ನೂರು ವರ್ಷಗಳಕಾಲ ಪರಮಾತ್ಮನ ವಿಷಯಕವಾದ ತತ್ವಶಾಸ್ತ್ರವನ್ನು ಉಪದೇಶ ಪಡೆದು ಶ್ರೀಪರಶುರಾಮರ ಪರಮಾನುಗ್ರಹದಿಂದ ಸಚ್ಛಾಸ್ತ್ರ ಸಂಪನ್ನನಾಗಿ ತಂದೆಯಾದ ಶಂತನುರಾಜನ ಬಳಿಗೆ ಬಂದು ರಾಜ್ಯಾಡಳಿತಕ್ಕೆ ತಾನೂ ನೆರವಾಗಿ ಧರ್ಮವೆಂಬ ಸಂತೋಷ ಹೂದೋಟದಲ್ಲಿ ಎಲ್ಲರನ್ನು ಆನಂದಪಡಿಸುತ್ತಿದ್ದನು. ತಪಸ್ಸೇ ತಮ್ಮ ಸರ್ವತ್ರಸಾಧನವೆಂದು ನಂಬಿ ಸಕಲಸುಖ ಸಂಪತ್ತುಗಳನ್ನು ನಿರಾಕರಿಸಿ ಭಗವಂತನ ಪಾದಮೂಲದಲ್ಲೇ ಸಕಲ ಸುಖಸಾರವನ್ನು ಅನುಭವಿಸುವ ಯೋಗಿಗಳಿಗೆ ಒಬ್ಬ ಕ್ಷುಲ್ಲಕ ಸ್ತ್ರೀರೂಪ ದರ್ಶನದಿಂದ ಕಾಮವಿಕಾರ ಎಂದಿಗೂ

ಉಂಟಾಗುವುದಿಲ್ಲ. ಮಹಾಪುರುಷರು ತಮ್ಮ ಯೋಗಶಕ್ತಿಯಿಂದ ಸಕಲಕಾಮನೆಗಳನ್ನು ನಿಗ್ರಹಿಸಿ ಭಗವಂತನ ಜ್ಞಾನಸಾಮ್ರಾಜ್ಯದಲ್ಲಿ ಸಮಸ್ತಸುಖಗಳನ್ನು ಅನುಭವಿಸುತ್ತಲಿರುವ ಅವರಿಗೆ ಕ್ಷಣಿಕಸುಖದತ್ತ ಚಿತ್ತಭ್ರಮೆ ಉಂಟಾಯಿತೆಂದು ತಿಳಿಯಬಾರದು.

ಶರದ್ವಾನ್ನಾಮಕ ಋಷಿಯು ಮಹಾತಪೋವೀರನಾಗಿದ್ದನು. ಈ ಯೋಗಪುರುಷನಲ್ಲಿ ಏಕಾದಶರುದ್ರರಲ್ಲಿ ಒಬ್ಬನಾದ ವಿಶ್ವಂಭನೆಂಬುವ ರುದ್ರನೂ- ಬೃಹಸ್ಪತ್ಯಾಚಾರ್ಯರ ಪತ್ನಿ ತಾರಾದೇವಿಯೂ ಸೇರಿದ್ದರು. ಏಕೆಂದರೆ ಸ್ವಾಮಿ ಭೂಭಾರಹರಣಕ್ಕಾಗಿ ಅವತರಿಸುತ್ತಾನೆ. ಅವನ ಸೇವೆಗಾಗಿ ತಾವೂ ಭೂಮಂಡಲದಲ್ಲಿ ಹುಟ್ಟಬೇಕೆಂದು ಅವರ ಸಂಕಲ್ಪವಾಗಿತ್ತು.

ಒಂದುದಿನ ಊರ್ವಶಿ ಖೇಚರಮಾರ್ಗದಲ್ಲಿ ಹೊರಟುಬರುತ್ತಿದ್ದಳು. ದೇವಾಂಗನೆಯಾದ ಆಕೆಯೂ ತನ್ನ ಭಗವತ್ಸೇವೆಯ ಸಂಕಲ್ಪದಂತೆ ಋಷಿಗಳ ಅಂಥಃಕರಣವನ್ನು ಕರಗಿಸಿದಾಗ ಅವರ ತಪೋತೇಜಸ್ಸು ಗಿಡದಪೊದರಿನಲ್ಲಿ ವಿಸರ್ಜಿಸಿದಾಗ ಅವರಿಂದ ಒಂದು ಹೆಣ್ಣುಶಿಶುವೂ ಒಂದು ಗಂಡುಶಿಶುವೂ ಉತ್ಪತ್ತಿ ಆದವು. ದೈವೀಶಕ್ತಿಯನ್ನು ಹೊಂದಿದ ಯೋಗೀಶ್ವರರಿಗೆ ತಮ್ಮ ಆಂತರಿಕ ಸುಖದಲ್ಲೇ ಆನಂದತುಂಬಿರುವಾಗ ಸುಳ್ಳುಸುಖಕ್ಕಾಗಿ ಅವರೆಂದಿಗೂ ಚಪಲಚಿತ್ತ ಹೊಂದುವುದಿಲ್ಲ.

ದೇವರದೇವನ ವಿಚಿತ್ರಲೀಲೆಯಂತೆ ಅದೇ ಕ್ಷಣದಲ್ಲೇ ಶಂತನು ರಾಜನು ಬೇಟೆಗಾಗಿ ಅದೇಮಾರ್ಗದಲ್ಲಿ ಹೊರಟುಬರುತ್ತಿದ್ದನು. ಅಲ್ಲಿ ಆಗತಾನೇ ಜನಿಸಿದ ಹಸುಗೂಸುಗಳು ಅತ್ತ ಶಬ್ದ ಕೇಳಿಸಿತು. ಆಶ್ಚರ್ಯದಿಂದ ಸುತ್ತಮುತ್ತಲೂ ಹುಡುಕಿಸಿದನು. ಒಂದುಕಡೆ ಗಿಡದ ಪೊದರಿನಲ್ಲಿ ಎರಡು ಕಂದಮ್ಮಗಳು ಕಾಣಿಸಿದವು.

ಆ ಮಕ್ಕಳನ್ನು ಚಕ್ರವರ್ತಿಯು ಕೃಪಾದೃಷ್ಟಿಯಿಂದ ನೋಡಿ ಅರಮನೆಗೆ ಕರೆತಂದು ಸಾಕಿ ಸಲಹಿ ದೊಡ್ಡವರನ್ನಾಗಿ ಮಾಡಿ ಅವರಿಗೆ ವಿದ್ಯಾಬುದ್ಧಿಗಳನ್ನೂ ಕಲಿಸಿ ಕಾಪಾಡಿದನು. ಹೀಗೆ ಮಹಾರಾಜನ ಮಹತ್ಕೃಪೆಗೆ ಪಾತ್ರರಾದ ಆ ಬಾಲಕ ಬಾಲಕಿಯರಿಬ್ಬರೂ ಕೃಪಾ ಮತ್ತು ಕೃಪಿ ಎಂದು ಹೆಸರನ್ನು ಪಡೆದು ಪ್ರಸಿದ್ಧರಾದರು.

ಕೃಪಾಚಾರ್ಯರು ಶ್ರೀವಿಷ್ಣುವನ್ನು ಕುರಿತು ದೀರ್ಘತಪಸ್ಸನ್ನು ಆಚರಿಸಿ ಮನುಕಲ್ಪಪರಿಯಂತದಷ್ಟು ದೀರ್ಘಾಯಸ್ಸನ್ನು ಹೊಂದಿದನು. ಕೃಪಾಚಾರ್ಯರು ಸಪ್ತರ್ಷಿಗಳಲ್ಲೊಬ್ಬರಾಗುವಂತೆ ಮಹಾವಿಷ್ಣುವಿನಿಂದ ವರವನ್ನು ಪಡೆದಿದ್ದರೂ ಕೃಪಾಚಾರ್ಯರು ವೇದವ್ಯಾಸರ ಬಳಿಯಲ್ಲಿ ಅಮೋಘವಾದ ತತ್ತ್ವಶಾಸ್ತ್ರವನ್ನು ಅಧ್ಯಯನಮಾಡಿ ವಿಶ್ವಾಮಿತ್ರರ ಬಳಿಯಲ್ಲೂ ವೇದಶಾಸ್ತ್ರವನ್ನು ಕಲಿತು ಪಾಂಡಿತ್ಯವನ್ನು ಪಡೆದಿದ್ದರು. ಕೃಪಾಚಾರ್ಯರು ಶಂತನುರಾಜನಿಗೆ ಮಗನಂತೆ ಇದ್ದು ರಾಜನ ಮನ್ನಣೆಗೆ ಪಾತ್ರನಾಗಿ ತನ್ನತಂಗಿ ಕೃಪೀದೇವಿಯೊಂದಿಗೆ ರಾಜವೈಭವವನ್ನು ಅನುಭವಿಸುತ್ತಿದ್ದರು.

# ದ್ರೋಣರ ಅವತಾರ

ದೇವಗುರುಗಳಾದ ಬೃಹಸ್ಪತ್ಯಾಚಾರ್ಯರು ಭೂಭಾರ ಭೂತರಾದ ದೈತ್ಯರುಗಳ ಸಂಹಾರಕ್ಕಾಗಿ ಶ್ರೀನಾರಾಯಣನು ಧರಣೀಮಂಡಲದಲ್ಲಿ ಅವತಾರಮಾಡುತ್ತಾನೆ ಅವನ ಸೇವೆಗಾಗಿ ನಾವೂ ಅವತರಿಸಬೇಕೆಂಬ ಸಂಕಲ್ಪದಿಂದ ಭಾರದ್ವಾಜರಿಂದ ದ್ರೋಣರೆಂಬ ಹೆಸರಿನಿಂದ ಹುಟ್ಟಿದರು.

ದ್ರೋಣರು ಭೀಮಸೇನದೇವರಿಗೆ ಗರುಗಳಾಗಬೇಕಾಗುತ್ತದೆಂದು ಬ್ರಹ್ಮದೇವರು ಅವರಲ್ಲಿ ಸನ್ನಿಹಿತರಾಗಿದ್ದರು. ಆದ್ದರಿಂದಲೇ ದ್ರೋಣರು ಮುಂದೆ ಪಾಂಡವರಿಗೆ ಗುರುಗಳಾಗಲು ಯೋಗ್ಯರಾಗಿ ಹಸ್ತಿನಾವತಿಯ ರಾಜಕುಮಾರರೆಲ್ಲರಿಗೂ ಗುರುಗಳಾದರು. ಮುಖ್ಯವಾಗಿ ಭೀಮಸೇನದೇವರು ದ್ರೋಣರಲ್ಲಿ ಬ್ರಹ್ಮದೇವರ ಆದೇಶವಿದ್ದುದ್ದರಿಂದಲೇ ಗುರುವಾಗಿ ಅಂಗೀಕಾರಮಾಡಿದ್ದರು. ದ್ರೋಣನು ಹುಟ್ಟುವ ಸಮಯದಲ್ಲೇ ವೃಷತರಾಜನೂ ಅಲ್ಲಿ ಪುತ್ರಪ್ರಾಪ್ತಿಗಾಗಿ ತಪಸ್ಸುಮಾಡುತ್ತಿದ್ದನು. ಪಾಂಚಾಲದೇಶದರಸನಾದ ವೃಷತರಾಜನಿಗೂ ಆಗ ಒಬ್ಬ ಸುರಸುಂದರಿಯ ಸಂಪರ್ಕದಿಂದ ಹುಟ್ಟಿ ಆ ಪುತ್ರನು ದೃಪದರಾಜನೆಂದು ಪ್ರಸಿದ್ಧ ರಾಜನಾದನು. ಸಮವಯಸ್ಕರಾದ ದ್ರೋಣನೂ ದೃಪದನೂ ಇಬ್ಬರೂ ದ್ರೋಣನ ತಂದೆ ಭಾರದ್ವಾಜರಲ್ಲಿ ವಿದ್ಯಾಭ್ಯಾಸಮಾಡುತ್ತ ಇಬ್ಬರಿಗೂ ಗೆಳೆತನದ ಬೆಸುಗೆಯಾಗಿತ್ತು. ದೃಪದನು ತನ್ನ ಮಿತ್ರನಾದ ದ್ರೋಣನಿಗೆ "ಮಿತ್ರಾ! ನಾನು ನಿನ್ನನ್ನು ಎಂದಿಗೂ ಅಗಲಲು ಇಷ್ಟಪಡುವುದಿಲ್ಲ. ನಾವಿಬ್ಬರೂ ನನ್ನ ರಾಜ್ಯದಲ್ಲೇ ಅಣ್ಣತಮ್ಮಂದಿರಂತೆ ರಾಜ್ಯವನ್ನು ಸಮಭಾಗವಾಗಿ ಹಂಚಿಕೊಂಡು ಇರೋಣ" ಎಂದು ದ್ರೋಣನ ಎದುರಿಗೆ ಸದಾ ಹೇಳುತ್ತಲೇ ಇದ್ದು ವಾಗ್ದಾನವನ್ನು ಮಾಡಿದ್ದನು. ಆದರೆ ದ್ರೋಣರು ನಿಷ್ಕಾಮಿಗಳಾಗಿದ್ದರು. ದ್ರೋಣರು ಗುರುಹಿರಿಯರು ಹೇಳಿದಂತೆ ಕೃಪಾಚಾರ್ಯರ ತಂಗಿಯನ್ನು ವಿವಾಹವಾಗಿ ಗೃಹಸ್ಥಾಶ್ರಮ ಸ್ವೀಕಾರಮಾಡಿ ಅಶ್ವತ್ಥಾಮನೆಂಬ ಸತ್ಪುತ್ರನನ್ನು ಪಡೆದಿದ್ದರೂ ಯಾರಿಂದಲೂ ಏನನ್ನೂ ಅಪೇಕ್ಷೆಪಡದೆ ಶಿಲೋಂಛನವೃತ್ತಿಯಿಂದ ಜೀವನಯಾತ್ರೆಯನ್ನು ಸಾಗಿಸುತ್ತ ಕಾಮ್ಯಕರ್ಮರಹಿತವಾದ, ವಿಷ್ಣುಪ್ರೀತ್ಯರ್ಥ ಕರ್ಮನಿರತನಾಗಿ ಹಸ್ತಿನಾವತಿಯಲ್ಲಿ ವಾಸಮಾಡಿಕೊಂಡಿದ್ದರು. ಇತ್ತ ಶಂತನು ಚಕ್ರವರ್ತಿಯು ದೇವವ್ರತನಿಗೆ ಯುವರಾಜಪಟ್ಟವನ್ನು ಕಟ್ಟಿ ಸಕಲವಿದ್ಯಾಪಾರಂಗತನಾದ ಮಗನೊಡನೆ ಮಹದಾನಂದದಿಂದಿರಲು ಒಂದುದಿನ ಬೇಟೆಗಾಗಿ ಹೊರಟಾಗ ವಿಶ್ರಾಂತಿಗಾಗಿ ಒಂದೆಡೆ ಕುಳಿತನು. ಅಲ್ಲಿ ಸುಗಂಧತುಂಬಿಬರುತ್ತಿತ್ತು. ಆ ಪರಿಮಳ ಪರಾಶರರ ಪರಮಾನುಗ್ರಹಪಾತ್ರಳಾಗಿದ್ದ ಸತ್ಯವತೀದೇವಿಯ ದೇಹದಿಂದ ಹೊರಸೂಸು ಬರುವಂಥ ಪುಣ್ಯಕರವಾದ ಪರಿಮಳವೇ ಆಗಿತ್ತು.

ರಾಜನು ತನ್ನ ಮನಸ್ಸಿಗೆ ಆಹ್ಲಾದವನ್ನುಂಟುಮಾಡುವಂತಹ ಈ ಸುಗಂಧ ಎಲ್ಲಿಂದ ಬರುತ್ತದೆಂದು ವಿಚಾರಿಸಿದಾಗ ನಾವಿಕನ ಮಗಳಾದ ಸತ್ಯವತೀದೇವಿಯು ಯೋಜನಗಂಧಿ

ಎಂಬ ಪ್ರಸಿದ್ಧನಾಮವುಳ್ಳವಳಾಗಿ ತನ್ನ ದೇಹದಿಂದ ಎಲ್ಲೆಡೆಗಳಲ್ಲೂ ಸುಗಂಧವನ್ನು ಹರಡುತ್ತಿದ್ದಾಳೆಂಬುದು ತಿಳಿಯಿತು.

ನಾವಿಕನ ಮನೆಯಲ್ಲಿ ಬೆಳೆಯುತ್ತಿದ್ದ ಭಕ್ತ್ಯಾದಿ ಉತ್ತಮ ಗುಣಭರಿತಳೂ ದೇವಪಿತೃಗಳ ಪುತ್ರಿಯಾದವಳೂ ವಿಷ್ಣುಸಂಬಂಧಿಯಾದ ಉತ್ತಮವಾದ ತಪಸ್ಸನ್ನು ಬಹುಕಾಲ ಆಚರಿಸಿದವಳೂ ಪೂರ್ವಜನ್ಮದಲ್ಲಿ 'ಅಚ್ಛೋದಾ' ಎಂಬ ಹೆಸರಿನಿಂದ ಇದ್ದು ನಂತರ ವಸುರಾಜನ ತೇಜಸ್ಸಿನಿಂದ ಬಂದಿದ್ದ ಚೆಲುವಾಂಗಿಯನ್ನು ಶಂತನುರಾಜನು ಕಂಡನು.

ರಾಜನ ಮನಸ್ಸನ್ನು ಆಪುಣ್ಯಾತ್ಮಳು ಆಕರ್ಶಿಸಿದಳು. ಆಗ ರಾಜನು ತನ್ನನ್ನು ತಾನೇ ಪ್ರಶ್ನೆಮಾಡಿಕೊಂಡನು. ತಾನು ಪಾವನಾತ್ಮಳಾದ ಗಂಗಾದೇವಿಯಪತಿಯಾಗಿ ಸಾಧಾರಣ ಸ್ತ್ರೀರೂಪಕ್ಕೆ ಎಂದಿಗೂ ಮರುಳಾಗತಕ್ಕವನಲ್ಲ. ಆದಾಗ್ಯೂ ನನಗೆ ಈಕೆಯನ್ನು ನೋಡಿದಾಗಿನಿಂದಲೂ ಅವಳ ಸಂಪರ್ಕಸುಖಕ್ಕಾಗಿ ಮನಸ್ಸು ಕಳವಳಗೊಳ್ಳುತ್ತಿದೆ. ಇದಕ್ಕೆ ಕಾರಣವೇನಿರಬಹುದೆಂದು ದಿವ್ಯದೃಷ್ಟಿಯಿಂದ ತಿಳಿದನು.

ಈಕೆ ಸಾಮಾನ್ಯಳಲ್ಲಿ ಸತ್ಯವಾಚ್ಯನಾದ ನಾರಾಯಣನ ಪರಮಭಕ್ತಳಾದ್ದರಿಂದಲೇ ಸತ್ಯವತೀದೇವಿ ಎಂಬ ಹೆಸರಿನಿಂದ ನನ್ನ ಮುಂದೆ ಕಾಣಿಸಿ ನನ್ನ ಮನಸ್ಸನ್ನು ವಶೀಕರಿಸಿಕೊಂಡಿದ್ದಾಳೆ'' ಎಂದು ಮನಸ್ಸಾಕ್ಷಿಯಾಗಿ ಆಕೆಯನ್ನು ವರಿಸಿದನು.

ಕನ್ಯಾಪಿತೃವಾದ ದಾಶರಾಜನನ್ನು ಕರೆಸಿಕೊಂಡು ನಿನ್ನಮಗಳನ್ನು ನಾನು ವಿವಾಹವಾಗಲು ಇಚ್ಛಿಸಿರುತ್ತೇನೆ'' ಎಂದನು.

ಅದಕ್ಕೆ ಸತ್ಯವತಿಯ ಸಾಕುತಂದೆಯಾದ ದಾಸರಾಜನು ''ಅರಸರೇ! ತಾವು ನನ್ನಮಗಳಲ್ಲಿ ಹುಟ್ಟಿದ ಮಗನಿಗೇ ರಾಜ್ಯಾಭಿಷೇಕಮಾಡುತ್ತೇನೆ'' ಎಂದು ವಾಗ್ದಾನ ಮಾಡಿದರೆ ಆಗಬಹುದು'' ಎಂದನು.

ಶಂತನುವಿನ ಮನಸ್ಸು ಅದಕ್ಕೆ ಒಡಂಬಡಲಿಲ್ಲ. ನನ್ನ ಗಂಗಾಪುತ್ರನೇ ನನಗೆ ನಿಜವಾದ ಮಗ ಅವನನ್ನು ಬಿಟ್ಟು ಅನ್ಯರಿಗೆ ಈ ಸಿಂಹಾಸನ ಲಭ್ಯವಿಲ್ಲ'' ಎಂದು ಹೇಳಿ ಬಂದರೂ ಮಹರಾಜನ ಮನಸ್ಸು ಸತ್ಯವತಿಯನ್ನು ಬಿಟ್ಟು ಇರಲಾಗಲಿಲ್ಲ. ಹೆಣ್ಣನ್ನು ಬಿಡಲಾಗದೆ ಮಗನಮೇಲಿನ ಮೋಹವನ್ನು ತ್ಯಜಿಸಲಾರದೆ ಉಭಯಸಂಕಟದಿಂದ ದುರ್ಬಲನಾದ. ಬರಬರುತ್ತ ರಾಜ್ಯಾಡಳಿತದಲ್ಲೂ ನಿರಾಸಕ್ತನಾಗಿ ಸಂತಾಪದಿಂದ ಸಮೆಯುತ್ತಲಿರುವ ತಂದೆಯನ್ನು ನೋಡಿದ ದೇವವ್ರತನು ಸಂದೇಹದಿಂದ ಸಾರಥಿಯನ್ನು ಕುರಿತು ''ಸಾರಥೀ ನನ್ನ ತಂದೆ ಎಲ್ಲಿಹೋಗಿದ್ದರು? ಏನು ನಡೆಯಿತು? ಎಲ್ಲವನ್ನೂ ತಿಳಿಸು ಅವರು ಏನೋ ಚಿಂತೆಮಾಡುತ್ತಿದ್ದಾರೆ. ಕಾರಣವೇನು?'' ಎಂದು ಕೇಳಿದಾಗ, ''ಸಾರಥಿಯು ಶಂತನುರಾಜನಿಗೂ ದಾಶರಾಜನಿಗೂ ನಡೆದ ಸಂಭಾಷಣೆ. ಆದರ ಮೂಲ ಎಲ್ಲವನ್ನೂ ವಿವರವಾಗಿ ತಿಳಿಸಿದನು. ಮಹಾಜ್ಞಾನವಂತನಾದ ದೇವವ್ರತನು

ತಂದೆಯ ಮನೋವಿಕಾರಕ್ಕೆ ಸ್ವಲ್ಪವೂ ಖೇದಪಡಲಿಲ್ಲ. ತನ್ನ ಅಂತಃದೃಷ್ಟಿಯಿಂದ ಯೋಚಿಸಿ ನನ್ನತಂದೆ ಸಾಮಾನ್ಯ ಒಬ್ಬ ಚಪಲಚಿತ್ತದ ಕಾಮುಕನಲ್ಲ. ರಾಜರ್ಷಿ ಎಂದೆನಿಸಿ ನಿರ್ಲಿಪ್ತಮನದ ಮಹಾರಾಜನಾಗಿದ್ದಾನೆ. ಇಂಥ ಮಹಾಪುರುಷ ದಾಶರಾಜನ ಕುವರಿಯನ್ನು ಮೋಹಿಸಿದ್ದಾನೆಂದರೆ ಇದಕ್ಕೆ ಏನೋ ಬಲವಾದ ಕಾರಣವಿರಬೇಕು. ನನ್ನ ತಂದೆಯ ಮನಸ್ಸನ್ನು ವಶೀಕರಿಸಿಕೊಂಡ ಪುಣ್ಯಾತ್ಮಳು ದೇವತೆ ಆಗಿರಬೇಕು. ಈ ವಿವಾಹ ನಡೆಯುವಂತೆ ನಾನು ಮಾಡಿದರೆ ಶ್ರೀಹರಿ ಮೆಚ್ಚುತ್ತಾನೆ'' ಎಂದುಕೊಂಡು ಸಂಕಲ್ಪವನ್ನು ಮಾಡಿದನು.

ದಾಶರಾಜನನ್ನು ಕರೆಸಿಕೊಂಡು ನಿನ್ನ ಇಷ್ಟದಂತೆ ಹಸ್ತಿನಾವತಿಯನ್ನು ನಿನ್ನಮಗಳಲ್ಲಿ ಹುಟ್ಟಿದ ಮಕ್ಕಳೇ ಆಳಲಿ ಸಂದೇಹಪಡದೆ ನನ್ನ ತಂದೆಯ ಅಭಿಲಾಷೆಯಂತೆ ಮಹಾರಾಜರಿಗೆ ಮಗಳನ್ನು ಕೊಟ್ಟು ವಿವಾಹಮಾಡು'' ಎಂದನು.

ದಾಶರಾಜನು ನಗುತ್ತ ''ಯುವರಾಜರೇ! ತಾವು ರಾಜ್ಯವನ್ನು ಬೇಡವೆಂದು ಬಿಡಬಹುದು. ತಮ್ಮ ಮಕ್ಕಳು ಅಷ್ಟು ಸುಲಭವಾಗಿ ಬಿಡುವುದಿಲ್ಲ. ಮುಂದೆ ಆಸ್ತಿಗಾಗಿ ಕದನ ಕಾಲುಹಾಕುತ್ತದೆ. ಅಲ್ಲವೇ?'' ಎಂದನು.

ಅಯ್ಯಾ! ನಾನು ಎಂದಿಗೂ ಅಸತ್ಯವನ್ನು ನುಡಿಯುವುದಿಲ್ಲ. ನಿನಗೆ ಅಷ್ಟು ಅನುಮಾನವಾದರೆ ನಾನು ಊರ್ಧ್ವರೇತಸ್ಕನಾಗುವೆನು. ಜಗದ ನಾರಿಯರೆಲ್ಲರೂ ನನ್ನ ತಾಯಿ ಭಾಗೀರಥೀದೇವಿಗೆ ಸಮಾನರೆಂದು ತಿಳಿದು ಬ್ರಹ್ಮಚರ್ಯದಿಂದ ಇರುತ್ತೇನೆ ಎಂದು ಸೂರ್ಯ ಚಂದ್ರಾದಿಗಳ ದಿಕ್ಪಾಲಕರುಗಳ ಸರ್ವವ್ಯಾಪ್ತಶ್ರೀ ಹರಿಯ ಸಾಕ್ಷಿಯಾಗಿ ಪ್ರತಿಜ್ಞೆಮಾಡಿದಾಗ ಸಕಲದೇವತೆಗಳೂ ದೇವವ್ರತನ ಘೋರಪ್ರತಿಜ್ಞೆಗೆ ಸಂತೋಷಪಟ್ಟು ಭೀಷ್ಮ ಎಂಬುದಾಗಿ ಹೊಗಳಿ ಪೂಮಳೆ ಕರೆದರು. ದೇವವ್ರತನು ಪ್ರತಿಜ್ಞೆಮಾಡಿದನಂತರ ದಾಶರಾಜನು ತನ್ನ ಸಾಕುಮಗಳಾದ ಕಾಳೀನಾಮಕ ಕನ್ಯಾರತ್ನವನ್ನು ಶಂತನುರಾಜನಿಗೆ ಕೊಟ್ಟು ಸಂತೋಷದಿಂದ ವಿವಾಹಮಾಡಿದನು.

''ಭೀಷ್ಮಾ! ಲೋಕದಲ್ಲಿ ತಂದೆಯ ಮನದಿಂಗಿತವನ್ನು ಅರಿತು ಅವರ ಇಷ್ಟಾರ್ಥವನ್ನು ನೆರವೇರಿಸಿಕೊಡುವವನೇ ಸತ್ಪುತ್ರನು. ನೀನು ನನ್ನ ಅಂತರ್ಗತನಾದ ಶ್ರೀಹರಿಯನ್ನು ನಿನ್ನ ಜಿತಮನೋಪುಷ್ಪದಿಂದ ಆರಾಧಿಸಿ ಸಂತುಷ್ಟಿಪಡಿಸಿರುವಿ, ಶ್ರೀಹರಿಯು ಸದಾಸಂತುಷ್ಟನೇ ಆಗಿದ್ದರೂ ಆನಂದಸ್ವರೂಪಿಯೇ ಅವನಾಗಿದ್ದರೂ ಭಕ್ತರನ್ನು ಆನಂದಪಡಿಸಲಿಕ್ಕಾಗಿ ತಾನು ಆನಂದಪಟ್ಟವನಂತೆ ಲೀಲೆ ತೋರಿಸುತ್ತಾನೆ. ನನ್ನ ಆನಂದವೇ ಮೂರ್ತಿವೆತ್ತಿ ಬಂದಿದೆಯೋ ಎನ್ನುವಂತೆ ನೀನಿದ್ದರೂ ಇನ್ನೊಂದು ಹೊಸಆನಂದಕ್ಕೆ ಮನಸ್ಸು ಜರುಗಿತು. ಇದು ಮರ್ತ್ಯಲೋಕದ ವ್ಯಾಪಾರವಾದರೂ ಸಕಲ ಸ್ವತಂತ್ರನಾದ ಹರಿಯ ಇಚ್ಛೆಯೇ ಮೂಲಕಾರಣವೆಂದು ತಿಳಿದು ನಿನಗೆ ಆಶೀರ್ವಾದ ಮಾಡುತ್ತೇನೆ. ನೀನು ಇಚ್ಛಾಮರಣಿಯಾಗು. ನಿನಗೆ ಅಪಜಯ ಉಂಟಾಗದಿರಲಿ. ಶತೃಗಳ ಬಂಧನಕ್ಕೆ ನೀನು ಸಿಗದಂತಾಗಲಿ'' ಎಂದು ಮಗನಿಗೆ ವರಗಳನ್ನು ಕೊಟ್ಟು ಹರಸಿದನು.

ಶಂತನು ರಾಜನು ನರಲೋಕದಲ್ಲಿ ನರರಾಜನಾಗಿ ಅವತರಿಸಿದ್ದರೂ ಆತನಲ್ಲಿ ತತ್ತ್ವಾಭಿಮಾನಿದೇವತೆಗಳವಿಶೇಷ ಸನ್ನಿಧಾನವಿತ್ತು. ಅವರೆಲ್ಲರೂ ಶ್ರೀಹರಿಯ ಆಜ್ಞೆಯಂತೆ ಆಯಾಯಾ ಜೀವಿಗಳ ಕರ್ಮಾನುಸಾರವಾಗಿ ವರವನ್ನೂ ಶಾಪವನ್ನೂ ಅವನಿಂದನುಡಿಸಿ ಸಿದ್ಧಪಡಿಸುತ್ತಿದ್ದರು. ಭೀಷ್ಮನೂ ಶಂತನುರಾಜನಲ್ಲಿ ಸನ್ನಿಹಿತನಾದ ಭಗವಂತನನ್ನು ಸೇವಿಸಿ ಅನುಗ್ರಹಗೊಂಡು ಅಮರಕೀರ್ತಿಯಿಂದ ಮೆರೆದನು.

# ಮಹಾರಾಜನು ಮೂಲರೂಪ ಸೇರಿದನು

ಶಂತನುರಾಜನು ಅನೇಕ ವರ್ಷಗಳ ಕಾಲ ಧರ್ಮದಿಂದ ರಾಜ್ಯಭಾರಮಾಡಿ ಸತ್ಯವತೀದೇವಿಯೊಂದಿಗೆ ಸುಖಭೋಗವನ್ನು ಅನುಭವಿಸಿದನು. ಚಿತ್ರಾಂಗದ ವಿಚಿತ್ರವೀರ್ಯರೆಂಬ ಇಬ್ಬರು ಪುತ್ರರೂ ಆದರು. ಮಕ್ಕಳು ಇನ್ನೂ ಚಿಕ್ಕವರಾಗಿರುವಾಗಲೇ ಶಂತನುರಾಜನು ವೈರಾಗ್ಯಭಾವದಿಂದ ಮನಸ್ಸನ್ನು ಭಗವಚ್ಚಿಂತನೆಯ ಕಡೆಗೆ ಸೆಳೆದನು. ಎಷ್ಟು ಸುಖಭೋಗಗಳನ್ನು ಅನುಭವಿಸಿದರೂ ವಿಷಯಾಸಕ್ತಿ ದಿನದಿನಕ್ಕೂ ವೃದ್ಧಿಯಾಗುತ್ತಲೇ ಇರುತ್ತದೆ. ಇದಕ್ಕೆ ಕೊನೆಮೊದಲಿಲ್ಲ. ಪರಮಾತ್ಮನ ಮೋಹತಪ್ಪಿಸಿ ಸಂಸಾರಮೋಹ ಅಂಟುತ್ತದೆ. ಇದನ್ನು ಕಳಚಬೇಕೆಂದು ಜಿತಮನಸ್ಸಿನಿಂದ ತಪಸ್ಸಿಗೆ ಕುಳಿತನು. ಲಯಚಿಂತನದಿಂದ ಸ್ಥೂಲದೇಹತ್ಯಾಗಮಾಡಿ ತನ್ನಮೂಲರೂಪದ ವರುಣನನ್ನು ಸೇರಿದನು.

ಯೋಗಸಿದ್ಧಿಯನ್ನು ಪಡೆದವರಿಗೆ ಮರಣಬೇಕೆಂದಾಗ ಬರುತ್ತದೆ. ಹೊರಗಿನ ಕಾಮಾದಿ ವಾಸನೆಗಳಿಂದ ಬಿಡಿಸಿಕೊಂಡು ನಿರ್ಲಿಪ್ತಭಾವದಿಂದ ಭಗವಂತನ ಪಾದಮೂಲದಲ್ಲಿ ಮನಸ್ಸನ್ನು ಲೀನಗೊಳಿಸಿದವರು ಇಚ್ಛಾಮರಣರಾಗುತ್ತಾರೆ ಎಂಬುದಕ್ಕೆ ಸಂದೇಹವಿಲ್ಲ. ಶಂತನುರಾಜನ ಪುತ್ರರಿಬ್ಬರೂ ಕಾಮಕ್ರೋಧಾದಿಗಳಿಗೆ ವಶರಾಗಿ ಅಚ್ಯುತನ ಆದೇಶವನ್ನು ಮರೆತು ಚ್ಯುತರಾದರು.

ಚಿತ್ರಾಂಗದನು ತನಗಿಂತಲೂ ಪರಾಕ್ರಮಿಯಲ್ಲಿ ಕ್ರೋಧವನ್ನು ಮಾಡಿದ್ದರಿಂದ ಅವನಿಗೆ ಅರಿವಿಲ್ಲದಂತೆಯೇ ಮೃತ್ಯುದೇವತೆ ಬಂದು ಕೊಂಡುಹೋಯಿತು.

ವಿಚಿತ್ರವೀರ್ಯನು ಸ್ತ್ರೀಲಂಪಟನಾಗಿ ಕಾಮವಶನಾದ್ದರಿಂದ ಅವನ ಮರಣಕ್ಕೆ ಅವನೇ ಕಾರಣನಾಗಿ ನಾಶಹೊಂದಿದನು. ದಾಶರಾಜನ ಸಂಕಲ್ಪ ಸಾಕುಮಗಳ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ರಾಜರಾಗಿ ತಾನು ಅರಸರ ಅಧಿಪತಿಯಾಗಿರಬೇಕೆಂಬ ಸಂಕಲ್ಪವಾದರೆ, ಭಗವತ್ಸಂಕಲ್ಪವಾದರೋ ರಾಜಪುತ್ರರಿಬ್ಬರೂ ಹತರಾಗಬೇಕೆಂದಿತ್ತು. ಶ್ರೀಹರಿ ಒಬ್ಬನೇ ಪೂರ್ಣಸ್ವತಂತ್ರನೆಂಬ ಜ್ಞಾನದಿಂದ ಶಂತನುರಾಜನು ಪುಣ್ಯಜೀವಿಯಾಗಿ ಪರಲೋಕಯಾತ್ರೆಗೆ ಹೊರಟುಹೋದನು. ನಂತರ ಚಿತ್ರಾಂಗದನು ರಾಜನಾದನು. ಈತನು ಗಂಧರ್ವನೊಡನೆ ಯುದ್ಧಮಾಡಿ ಮಡಿದನಂತರ ವಿಚಿತ್ರವೀರ್ಯನಿಗೆ ಪಟ್ಟಗಟ್ಟಿದರು.

# ಅಂಬೆಯ ದುಷ್ಕರ್ಮ ದುಃಖ

ವಿಚಿತ್ರವೀರ್ಯನಿಗೆ ಪಟ್ಟಾಭಿಷೇಕಮಾಡಿ ಭೀಷ್ಮರೇ ರಾಜ್ಯಭಾರವನ್ನು ವಹಿಸಿ ಆಡಳಿತ ನಡೆಸುತ್ತಿದ್ದರು. ವಿಚಿತ್ರವೀರ್ಯನು ಪ್ರಾಯಭರಿತನಾದ್ದರಿಂದ ಅವನಿಗೆ ವಿವಾಹಮಾಡುವ ಯೋಚನೆಯಲ್ಲಿದ್ದಾಗ ಕಾಶೀರಾಜನು ತನ್ನ ಪುತ್ರಿಯರ ಸ್ವಯಂವರ ಏರ್ಪಡಿಸಿರುವುದು ತಿಳಿಯಿತು. ಹಸ್ತಿನಾವತಿಗೆ ಆಮಂತ್ರಣ ಕಳುಹಿಸಿರಲಿಲ್ಲ. ಸಾಲ್ವಾದಿದುಷ್ಟ ಕ್ಷತ್ರಿಯರ ಹರಿನಿಂದಕರಾದ ರಾಜರೆಲ್ಲರನ್ನು ಬಗ್ಗುಬಡಿದು ಅವರ ಸೊಕ್ಕನ್ನು ಅಡಗಿಸುವ ಧ್ಯೇಯದಿಂದ ಸ್ವಯಂವರದ ನೆಪವಿಟ್ಟು ವಿವಾಹಮಂಟಪಕ್ಕೆ ಬಂದನು.

ರಾಜಸಭೆಯಲ್ಲಿ ನುಗ್ಗಿ ಅಂಬಾ ಅಂಬಿಕೆ-ಅಂಬಾಲಿಕೆ ಎಂಬ ರಾಜಪುತ್ರಿಯರನ್ನು ಗೆದ್ದು ತನ್ನ ರಥದಲ್ಲಿ ಕೂಡಿಸಿಕೊಂಡು ಹಸ್ತಿನಾವತಿಯಕಡೆಗೆ ಹೊರಟು ಅರಮನೆಗೆ ಬಂದನು. ರಾಜಪುತ್ರಿಯರು ಭೀಷ್ಮನ ರೂಪ-ಗುಣ-ಸಾಹಸಗಳಿಗೆ ಮೆಚ್ಚಿ ಸಂತೋಷದಿಂದ ಅವನೇ ಪತಿಯಾಗುವನೆಂದು ತಿಳಿದಿದ್ದರು. ಆದರೆ ಅದು ತಿರವುಮುರವಾಗಿ ಭೀಷ್ಮನು ''ನಿಮ್ಮನ್ನು ಗೆದ್ದುತಂದಿರುವುದು ನನಗಾಗಿಅಲ್ಲ. ನನ್ನ ತಮ್ಮ ವಿಚಿತ್ರವೀರ್ಯನಿಗೆ ನೀವು ಮಡದಿಯರಾಗಬೇಕು'' ಎಂದು ಹೇಳಿದಾಗ ಅಂಬಿಕೆ-ಅಂಬಾಲಿಕೆಯರು ಪಾಲಿಗೆ ಬಂದದ್ದು ಪಂಚಾಂಮೃತ ಎಂಬ ಭಾವದಿಂದ ಒಪ್ಪಿವಿವಾಹವಾದರು. ಅಂಬಾದೇವಿ ಒಪ್ಪಲಿಲ್ಲ. ಈಕೆ ಪೂರ್ವಜನ್ಮದಲ್ಲಿ ಬ್ರಹ್ಮದೇವರ ಶಾಪಕ್ಕೊಳಗಾಗಿದ್ದರಿಂದ ದುಶ್ಕರ್ಮದಿಂದ ಅವಳು ಒಪ್ಪಲಿಲ್ಲ.

ಹಿಂದೆ ಭೀಷ್ಮನು ದ್ಯುನಾಮಕವಸುವಾಗಿದ್ದಾಗ ಅಂಬಾ ವರಾಂಗಿ ಎಂಬ ಹೆಸರಿನ ಪತ್ನಿಯಾಗಿದ್ದಳು. ಇಬ್ಬರಿಗೂ ದಾಂಪತ್ಯಸುಖ ಸಿಗಬಾರದೆಂಬ ಬ್ರಹ್ಮದೇವರ ಶಾಪದಂತೆ ಪಾಪಕರ್ಮಾನುಸಾರವಾಗಿ ''ಭೀಷ್ಮಾ! ನೀನು ನನ್ನನ್ನು ವರಿಸದಿದ್ದರೆ ಸಾಲ್ವನನ್ನು ವಿವಾಹವಾಗುತ್ತೇನೆ'' ಎಂದು ಕೇಳಿದಾಗ ಭೀಷ್ಮನು ಆಕೆಯನ್ನು ಸಾಲ್ವನಬಳಿಗೆ ಕಳುಹಿಸಿದನು. ಸಾಲ್ವನಿಗೆ ಭೀಷ್ಮನು ಗೆದ್ದಹೆಣ್ಣನ್ನು ತಾನು ಸ್ವೀಕಾರಮಾಡಿದರೆ ಭೀಷ್ಮನ ಬಾಣ ಬೆನ್ನಟ್ಟಿಬರುತ್ತದೆಂಬ ಭಯವಿದ್ದರೂ ಅದನ್ನು ತೋರ್ಪಡಿಸದೆ ''ನೀನು ಪರಪುರುಷನ ಹಿಂದೆ ಹೋದವಳು'' ಎಂದು ಅಲ್ಲಗಳೆದು ಅಟ್ಟಿಬಿಟ್ಟನು.

ಅಂಬಾ ಈಗ ಅನಾಥಳಂತೆ ಮತ್ತೆ ಹಸ್ತಿನಾವತಿಗೆ ಬಂದು ಭೀಷ್ಮನನ್ನು ಎಷ್ಟು ಪ್ರಾರ್ಥಿಸಿದರೂ ಬ್ರಹ್ಮಚಾರಿಯ ಮನಸ್ಸನ್ನು ವಶಪಡಿಸಿಕೊಳ್ಳಲಾಗಲಿಲ್ಲ. ಅಂಬಾದೇವಿ ಸ್ಫುರದ್ರೂಪಿ ವಿದ್ಯಾವತಿ, ರಾಜಪುತ್ರಿ. ಆದಾಗ್ಯೂ ಆಕೆಗೆ ಪತಿಯಭಾಗ್ಯ ಸಿಗದಂತಾಯಿತು.

ಅಬಲೆಯು ಅತೀವದುಃಖದಿಂದ ಪರಶುರಾಮರ ಬಳಿಗೆ ಬಂದು ಶರಣಾಗತಳಾಗಿ ತನಗೆ ಭೀಷ್ಮನು ಪತಿಯಾಗುವಂತೆ ಅನುಗ್ರಹ ಮಾಡಿರಿ'' ಎಂದು ಪ್ರಾರ್ಥಿಸಿಕೊಂಡಳು.

ಕರುಣಾಳು ಶ್ರೀಹರಿಯು ತನ್ನನ್ನು ಆಶ್ರಯಹೊಕ್ಕು ಬಂದವರನ್ನು ಕೈಬಿಡುವುದಿಲ್ಲ. ಆದರೆ

ತನ್ನ ಭಕ್ತನಾದ ಬ್ರಹ್ಮದೇವರ ಮಾತನ್ನೂ ಅಸತ್ಯಮಾಡುವಂತಿಲ್ಲ. ''ಅಂಬಾ! ನೀನು ಭೀಷ್ಮನನ್ನೇ ಹೊಂದಿ ಸುಖಿಸುವೆ'' ಎಂದುಹೇಳಿ ಅಭಯವಿತ್ತರು.

ಭೀಷ್ಮನು ಮುಂದೆ ವಸುಲೋಕಕ್ಕೆ ಸೇರಿದಾಗ ಅಂಬಾದೇವಿ ಆತನ ಸತಿಯಾದಳು.

ಈಗ ಅವಳ ಪಾಪಕರ್ಮದಂತೆ ಪರಶುರಾಮರು ಭೀಷ್ಮನೊಡನೆ ಯುದ್ಧಮಾಡಿದಾಗ ಸೋತವನಂತೆ ಅಂಬೆಗೆ ತೋರಿಸಿದನು. ಅಂಬಾದೇವಿ ತನ್ನ ದೋಷದಿಂದ ಸರ್ವಶಕ್ತನೂ ಅಚ್ಯುತನೂ ಆದ ಸ್ವಾಮಿಗೆ ಅಧಿಕರಿಲ್ಲವೆಂಬ ಸುಜ್ಞಾನನಾಶವಾಗಿ ಸೋತನೆಂದು ತಿಳಿದಕಾರಣ ಮತ್ತಷ್ಟು ಸತ್ವಹೀನಳಾದಳು. ಭೀಷ್ಮನನ್ನು ಗೆಲ್ಲಲು ನಾರಾಯಣನಿಗೂ ಸಾಧ್ಯವಾಗಲಿಲ್ಲ. ಆದ್ದರಿಂದ ಶ್ರೀಹರಿಗಿಂತಲೂ ಹರನೇ ದೊಡ್ಡವನೆಂಬ ಅಜ್ಞಾನ ಅವಳಲ್ಲಿ ತುಂಬಿತು. ಹರನನ್ನು ಕುರಿತು ಘೋರತಪಸ್ಸನ್ನು ಮಾಡಿದಳು. ಶಿವನು ಪ್ರತ್ಯಕ್ಷನಾಗಿ ''ನಿನಗೆ ಏನು ಬೇಕು ಕೇಳು?'' ಎಂದನು. ಅಂಬಾ ಮನಸ್ಸಿನಲ್ಲಿ ದ್ವೇಶಾಸೂಯೆಗಳನ್ನು ತುಂಬಿಕೊಂಡು ಸೇಡಿನಿಂದ ''ದೇವಾ! ಭೀಷ್ಮನು ನಾರಾಯಣನನ್ನು ಸೋಲಿಸಿದ್ದಾನೆ. ನಾನು ವೀರಪುರುಷನಾಗಿ ಅವನನ್ನು ಗೆಲ್ಲುವ ಸಾಮರ್ಥ್ಯ ಕೊಡು'' ಎಂದು ಬೇಡಿದಳು. ಈಗ ಅಂಬಾ ಶ್ರೀಮನ್ನಾರಾಯಣನಿಗಿಂತಲೂ ಸಮರ್ಥಳಾಗಬೇಕೆಂದು ಭಾವಿಸಿ ಮಾತನಾಡಿದ್ದಕ್ಕೆ ಅವಳ ಪಾಪ ಮತ್ತಷ್ಟು ಬಲವಾಯಿತು.

ರುದ್ರದೇವರು ಪರಮವೈಷ್ಣಶಿಖಾಮಣಿಯಾದ್ದರಿಂದ ಮಹಾವಿಷ್ಣುವಿಗೆ ವಿರೋಧವಾದ ವರ ಕೊಡಲು ಒಪ್ಪಲಿಲ್ಲ. ''ಅಂಬಾ! ನೀನು ಈಜನ್ಮದಲ್ಲಿ ಸ್ತ್ರೀಜನ್ಮತಾಳಿರುವುದು ಭಗವಂತನ ಸಂಕಲ್ಪವಾದ್ದರಿಂದ ಅದನ್ನು ತಪ್ಪಿಸಲು ನಾನು ಸಮರ್ಥನಲ್ಲ. ಮುಂದಿನ ಜನ್ಮದಲ್ಲಿ ನಿನಗೆ ಪುರುಷಜನ್ಮ ಪ್ರಾಪ್ತವಾಗಿ ಭೀಷ್ಮನ ಮರಣಕ್ಕೆ ಕಾರಣಳಾಗುತ್ತಿ'' ಎಂದನು. ಆಗ ಅಂಬಾದೇವಿಯು ''ದೇವಾ! ಭೀಷ್ಮನು ಸೋತು ಸೊಕ್ಕುಮುರಿಯುವಂಥ ರಾಜರನ್ನಾದರೂ ತೋರಿಸು'' ಎಂದಳು.

ಆಗ ಶಿವನು ಆಕೆಯಕೈಗೆ ಒಂದು ಮಾಲಿಕೆಯನ್ನು ಕೊಟ್ಟು ''ಈ ಮಾಲಿಕೆಯನ್ನು ನೀನು ತೆಗೆದುಕೊಂಡು ಸಕಲವೀರರಾಜರಿಗೂ ತೋರಿಸಿ ಯಾರು ಭೀಷ್ಮನನ್ನು ಸೋಲಿಸುವಂಥ ಸಮರ್ಥರಾಜರೋ ಅವರಿಗೆ ಈ ಮಾಲಿಕೆಯನ್ನು ಹಾಕುತ್ತೇನೆ ಎಂದು ಹೇಳು'' ಎಂದನು. ಅಂಬೆಯು ರುದ್ರನು ಕೊಟ್ಟಹಾರವನ್ನು ಸಕಲದೇಶದ ರಾಜರಿಗೂ ತೋರಿಸಿ ''ನೀವು ಭೀಷ್ಮನನ್ನು ಸೋಲಿಸಬಲ್ಲ ಪರಾಕ್ರಮಿಯಾಗಿದ್ದರೆ ನಿಮಗೆ ಈ ಮಾಲಿಕೆಯನ್ನು ಹಾಕುತ್ತೇನೆ'' ಎಂದು ಹೇಳುತ್ತಿದ್ದಳು. ಬೀಷ್ಮನು ಅಸಮ ಪರಾಕ್ರಮಿ ಎಂದು ಸಮಸ್ತರೂ ತಿಳಿದಿದ್ದ ಕಾರಣ ಯಾರೂ ಅಂಬೆಯಿಂದ ಹಾರ ಸ್ವೀಕಾರಮಾಡಲಿಲ್ಲ. ಅಂಬೆಯು ನಿರಾಸೆಯಿಂದ ಆಹಾರವನ್ನು ದೃಪಜರಾಜನ ಕುದುರೆಗೆ ಹಾಕಿ ಭೀಷ್ಮನನ್ನು ಕೊಂದೇಕೊಲ್ಲುತ್ತೇನೆಂಬ ಸೇಡಿನಿಂದ ತಪಸ್ಸಿನಲ್ಲಿ ತೊಡಗಿ ದೇಹತ್ಯಾಗಮಾಡಿದಳು.

ಅಂಬೆಯಿಂದ ಕುದುರೆಯ ಕೊರಳಿಗೆ ಬಿದ್ದ ಮಾಲಿಕೆಯನ್ನು ಕುದುರೆಯು ತೆಗೆದೆಸೆಯಲು

ಅದು ದೃಪದರಾಜನ ಭಂಡಾರದೊಳಗೆ ಬಿತ್ತು. ಆ ಸ್ವರ್ಣಮಾಲಿಕೆಯನ್ನೇ ದ್ರೌಪದಿಯು ಸ್ವಯಂವರದಲ್ಲಿ ಅರ್ಜುನನ ಕೊರಳಿಗೆ ಹಾಕಿದ ಕಾರಣದಿಂದ ಅರ್ಜುನನಿಂದ ಹೊಡೆಯಲ್ಪಟ್ಟ ಬಾಣದಿಂದ ಭೀಷ್ಮ ಕೆಳಗೆಬಿದ್ದನು.

ಅಂಬೆಯು ಮರಣಹೊಂದಿದನಂತರ ದೃಪದನು ತನಗೆ ಪುತ್ರ ಸಂತಾನವಾಗಬೇಕೆಂಬ ಆಸೆಯಿಂದ ಶಿವನನ್ನು ಕುರಿತು ತಪಸ್ಸು ಮಾಡಿದನು. ಶಿವನು ಪ್ರತ್ಯಕ್ಷನಾಗಿ ನಿನಗೆ ಮೊದಲು ಹೆಣ್ಣುಸಂತಾನವಾಗಿ ನಂತರ ಪುಂಸತ್ವವನ್ನು ಹೊಂದುತ್ತಾನೆ'' ಎಂದು ವರನೀಡಿದನು. ಅದರಂತೆ ಅಂಬೆಯೇ ದೃಪಜರಾಜನಲ್ಲಿ ಶಿಖಂಡಿಯಾಗಿ ಜನಿಸಿದಳು.

## ಪುರುಷವೇಷದ ಸ್ತ್ರೀ

ದೃಪದರಾಜನು ರುದ್ರದೇವರು ಕೊಟ್ಟ ವರವನ್ನು ನಂಬಿ ಹುಟ್ಟಿದಮಗು ಪುರುಷಾಕೃತಿಯ ಹೆಣ್ಣುಶಿಶುವಾಗಿದ್ದರೂ ಅದರ ರಹಸ್ಯವನ್ನು ಬಹಿರಂಗಪಡಿಸದೆ ತನಗೆ ಗಂಡುಮಗು ಜನನವಾಯಿತೆಂದು ಹೇಳಿ ಮಗುವಿಗೆ ಚೌಲ ಉಪನಯನಗಾದಿ ಸಂಸ್ಕಾರಗಳನ್ನು ಮಾಡಿದನು. ಶಿಖಂಡಿ ಎಂಬ ಹೆಸರಿನ ರಾಜಪುತ್ರನಂತೆ ನಟನೆಮಾಡುತ್ತಿದ್ದ ಆ ಸ್ತ್ರೀವ್ಯಕ್ತಿ ಶಿವನ ಅನುಗ್ರಹವಿರುವುದರಿಂದ ಪುರುಷತ್ವವನ್ನು ಖಂಡಿತ ಹೊಂದುತ್ತದೆಂಬ ದೃಢನಂಬಿಕೆಯಿಂದ ದೃಪದನು ದಕ್ಷಿಣದೇಶದರಸನಾದ ಹಿರಣ್ಯವರ್ಮನೆಂಬ ಪ್ರಸಿದ್ಧರಾಜನ ಮಗಳನ್ನು ಶಿಖಂಡಿಗೆ ಕೊಟ್ಟು ವಿವಾಹಕಾರ್ಯವನ್ನು ವೈಭವದಿಂದ ನಡೆಸಿದನು. ನವದಂಪತಿಗಳು ಏಕಾಂತದಲ್ಲಿರುವಾಗ ರಾಜಪುತ್ರಿಯು ತನ್ನ ಪತಿ ಪುರುಷಾಕೃತಿಯ ಸ್ತ್ರೀ ಎಂದುತಿಳಿದು ಬಹಳ ದುಃಖದಿಂದ ತನ್ನ ಆಪ್ತಸಖಿಗೆ ತಿಳಿಸಿದಳು. ಸೇವಕಿಯು ಮಹಾರಾಣಿಗೂ ಈ ಸುದ್ದಿಯನ್ನು ರಹಸ್ಯವಾಗಿ ತಿಳಿಸಿದಾಗ ಮಹಾರಾಜನಿಗೂ ತಕ್ಷಣ ಸುದ್ದಿಮುಟ್ಟಿತು. ರಾಜನು ಕೆರಳಿದ ಕೆಂಡದಂತಾಗಿ, ''ಎಲಾ ದೃಪದಾ! ನನಗೆ ಅವಮಾನಪಡಿಸಬೇಕೆಂಬ ಕುಯುಕ್ತಿಯಿಂದ ನಿನ್ನಮಗಳನ್ನು ರಾಜಪುತ್ರನಂತೆ ನನಗೆ ತೋರಿಸಿ ಮೋಸಮಾಡಿರುವ ನಿನ್ನನ್ನು ಈ ಕ್ಷಣದಲ್ಲೇ ನನ್ನ ಅಪಾರಸೇನಾಸಾಗರದೊಡನೆ ಬಂದು ನಿನ್ನನ್ನು ನಿನ್ನ ಬಂಧುವರ್ಗದವರೊಡನೆ ಧ್ವಂಸಮಾಡಿಬರುತ್ತೇನೆ. ಸುಳ್ಳುಹೇಳಿ ಹುಸಿವಿವಾಹೋತ್ಸವವನ್ನು ನಡೆಸಿದ ನಿನ್ನ ಮರಣ ಮಹೋತ್ಸವಕ್ಕೆ ಚತುರಂಗ ಸೇನೆಯೊಡನೆ ಹೊರಟಿದ್ದೇನೆ'' ಎಂದು ಬರೆದು ಓಲೆಯನ್ನು ಕಳುಹಿಸಿ ತಾನು ಸೇನಾಸಾಗರದೊಂದಿಗೆ ರಣದಬ್ಬರದಿಂದ ಯುದ್ಧಕ್ಕೆ ಪಾಂಚಾಲನಗರಕ್ಕೆ ಹೊರಟನು.

ದೃಪದನು ಆದರೂ ಧೈರ್ಯಗೆಡದೆ ರುದ್ರದೇವರ ವಾಕ್ಯ ಎಂದಿಗೂ ಸುಳ್ಳಾಗುವುದಿಲ್ಲ ಸಿದ್ಧಿಸಿಯೇ ಸಿದ್ಧಿಸುತ್ತದೆಂಬ ನಂಬಿಕೆಯಿಂದ ಹಿರಣ್ಯವರ್ಮರಾಜನಿಗೆ ''ನಿನಗೆ ರಾಜನೀತಿಯೇ ಸರಿಯಾಗಿ ತಿಳಿದಂತೆ ಕಾಣುತ್ತಿಲ್ಲ. ರಾಜನಾದವನು ಪ್ರತ್ಯಕ್ಷವಾಗಿ ಕಂಡು ಪ್ರಮಾಣ ಸಂಗತಿಯನ್ನು ತಿಳಿಯಬೇಕು. ರಾಜರಿಗೆ ಅನೇಕರೂಪದ ಶತೃಗಳು ಇರುತ್ತಾರೆ. ಎಲ್ಲರ ಮಾತಿಗೂ

ಕೋಲೆಬಸವನಂತೆ ತಲೆತೂಗಿದರೆ ನಮ್ಮನಮ್ಮಲ್ಲೇ ಭೇದಉಂಟಾಗಿ ಸಡಿಲ ಮೂರನೆಯವರ ಪಾಲಾಗುತ್ತದೆ. ಇದಕ್ಕೆ ಆಸ್ಪದಕೊಡದಂತೆ ನೀನೇ ಬಂದು ಪ ಸರಿಯಾದ ರೀತಿಯಲ್ಲಿ ಅರಿತು ನಿಜಸಂಗತಿಯನ್ನು ಅರಿತರೆ ಉಭಯತಾಪಿ ಇ ಕ್ಷೇಮ'' ಎಂದು ಓಲೆಯನ್ನು ಬರೆದು ದೂತರಕೈಲಿ ಕಳುಹಿಸಿದನು.

## ಹರನವರ ಹರಿನೆರವೇರಿಸಿದನು

ದೃಪದನಿಗೆ ಧೈರ್ಯಕುಗ್ಗಿತು. ಶಿವನನ್ನು ನಂಬಿದ ನನಗೆ ಇಂಥ ದುಃಖವೇ? ಪರಿತಪಿಸಿದನು. ಸ್ವಾಮಿ ಶ್ರೀಹರೀ! ನೀನೇ ಎಲ್ಲಾ ದೇವರಿಗೂ ಪ್ರಭುವಾದ್ದರಿಂ ವರ ಸತ್ಯವಾಗುವಂತೆಮಾಡಿ ನನ್ನನ್ನು ವಿಪತ್ತಿನಿಂದ ಕಾಪಾಡು ಸರ್ವಸ್ವತ ಸರ್ವಗುಣಪೂರ್ಣನೂ ಆದ ನಿನ್ನನ್ನು ಮರೆತು ಶಿವನೇ ಸರ್ವೋತ್ತಮನೆಂದು ನಂಬಿದ್ದ ತಕ್ಕ ಶಿಕ್ಷೆ ಒದಗಿತು. ಎಂದು ಶ್ರೀಮನ್ನಾರಾಯಣಮೂರ್ತಿಯನ್ನು ಸ್ತುತಿಸತೊಡಗಿ

ಶಿಖಂಡಿಗೆ ತನ್ನ ತಂದೆತಾಯಿಗಳು ಮಾನಪ್ರಾಣಗಳೆರಡೂ ಹರಣವಾಗುತ್ತಿರುವ ಒದಗಿತೆಂದು ಅತೀ ದುಃಖದಿಂದ ಪರಿತಪಿಸುವುದನ್ನು ಕಂಡು ''ನನ್ನಿಂದ ನನ್ನ ಮಾತಾ ಇಂಥ ಘೋರದುಃಖ ಒದಗಿತು. ನಾನು ಪ್ರಾಣತ್ಯಾಗ ಮಾಡಿದರೆ ಅವರಿಗೆ ಈ ದ ಬರುವುದಿಲ್ಲ'' ಎಂದು ಯೋಚಿಸಿ ಅರಣ್ಯದ ಕಡೆಗೆ ಹೊರಟುಹೋದನು.

ಮಾರ್ಗದಲ್ಲಿ ತುಂಬುರುನೆಂಬ ಗಂಧರ್ವನ ಭೇಟಿಯಾಯಿತು. ಶಿಖಂಡಿ ಕಂಡು ''ಏತಕ್ಕಾಗಿ ಘೋರಕಾಡಿನಲ್ಲಿ ಒಂಟಿಯಾಗಿ ಹೋಗುತ್ತಿರುವಿ?'' ಎಂದು ಕ ಶಿಖಂಡಿನಿಯು ದುಃಖದಿಂದ ''ನನ್ನ ತಂದೆ ತಪಸ್ಸು ಮಾಡಿ ಶಿವನನ್ನು ಒಲಿಸಿಕೊಂಡು ಪು ಬೇಡಿದಾಗ ಶಿವನು ''ನಿನಗೆ ಮಗಳು ಹುಟ್ಟುವಳು ಅವಳು ವಿವಾಹವಯಸ್ಕಳಾದ ಪುರುಷತ್ವ ಹೊಂದುತ್ತಾಳೆ'' ಎಂದು ವರನೀಡಿದ್ದರಿಂದ ನನ್ನ ತಂದೆ ನನ್ನನ್ನು ಮಗುವಿನಂತೆಯೇ ಬೆಳಸಿ ರಾಜಪುತ್ರಿಯನ್ನು ತಂದು ವಿವಾಹಮಾಡಿದನು. ಆದರೆ ವರದಂತೆ ನನ್ನ ಸ್ತ್ರೀ ದೇಹ ಪರಿವರ್ತಿಸಿ ಪುರುಷತ್ವ ಬರದಿರಲು ಈಗ ವಧುವಿ ಬಲಿಷ್ಠರಾಜನಾದ್ದರಿಂದ ನನ್ನ ತಂದೆ ತಾಯಿಗಳನ್ನು ಕೊಲ್ಲಲು ಸೇನಾಸಮೇತನಾಗಿ ಬರುತ್ತಿ ಅವರನ್ನು ವಿಪತ್ತಿನಿಂದ ಉಳಿಸಲಿಕ್ಕಾಗಿ ನಾನು ಪ್ರಾಣಹರಣದ ಯೋಚನೆಯಿಂದ ಹೊರಟ ಎಂದು ತಿಳಿಸಿದನು.

ಸ್ತ್ರೀಜನ್ಮ ಕಳೆದು ಪುರುಷಜನ್ಮ ಬರಬೇಕಾದರೆ ಮಹಾವಿಷ್ಣು ಒಬ್ಬ ಶರಣುಹೋಗಬೇಕು. ಬೇರೆ ಯಾವದೇವರನ್ನು ಉಪಾಶಿಸಿದರೂ ಯಾರೂ ಸಮರ್ಥ ಆದ್ದರಿಂದ ಶ್ರೀಹರಿಯು ತುಂಬುರುಗಂಧರ್ವನಲ್ಲಿ ನಿಂತು ಪ್ರೇರೇಪಿಸಿದಂತೆ ಆತನು ''ಅ ರಾಜಕುಮಾರಾ! ನಿನ್ನ ತಂದೆಯು ನಂಬಿದಂತೆ ಶಿವನಿಗೆ ನಿನ್ನನ್ನು ಪುರುಷನನ್ನಾಗಿ ಮಾ

ಸಾಧ್ಯವಿಲ್ಲ. ಮಹಾವಿಷ್ಣು ಒಬ್ಬನೇ ಅದಕ್ಕೆ ಸಮರ್ಥನು. ನೀನು ಸಾಯುವುದು ಸರಿಯಲ್ಲ. ಮಹಾವೈಷ್ಣವಾಗ್ರಣಿಯಾದ ಶಿವನ ಮಾತನ್ನು ಹರಿಯು ಎಂದಿಗೂ ಸುಳ್ಳುಮಾಡುವುದಿಲ್ಲ. ಆದ್ದರಿಂದ ತಕ್ಷಣ ನಿನ್ನ ತಂದೆಯ ವಿಪತ್ತನ್ನು ಪರಿಹರಿಸಲಿಕ್ಕಾಗಿ ನೀನು ನನ್ನಲ್ಲಿ ಪ್ರವೇಶ ಮಾಡು. ನಿನಗೆ ಪುರುಷತ್ವ ಉಂಟಾದರೂ ನಿನ್ನ ರೂಪ ಅಂದರೆ ಮುಖಚರ್ಯೆ ಬದಲಾಗದಂತೆ ಇರುತ್ತದೆ. ಅದೇ ನಿನಗೆ ಶಿವನ ವರಪ್ರಸಾದವೆಂದು ತಿಳಿ'' ಎಂದು ಹೇಳಿದನು.

ಅದರಂತೆ ಶಿಖಂಡಿನಿಗೆ ಗಂಧರ್ವನ ಅಂಶದಿಂದ ಅಧಿಷ್ಠಿತವಾದ ದೇಹಕ್ಕೆ ಪುರುಷಲಕ್ಷಣಗಳೇ ಒಡಮೂಡಿಬಂದವು. ಗಂಧರ್ವನಿಗೆ ಶಿಖಂಡಿನಿಯ ಅನಿದಿಷ್ಟಿತ ದೇಹವನ್ನು ಹೊಂದಿದ್ದರಿಂದ ಸ್ಥನ ಕೇಶಾದಿಲಕ್ಷಣಗಳುಳ್ಳ ಶಿಖಂಡಿನಿಯ ದೇಹವೇ ಉಂಟಾಯಿತು. ಇದು ಸರ್ವಸಂತ್ರ ಸ್ವತಂತ್ರನಾದ ಶ್ರೀಹರಿಯ ಮಹಿಮೆ ಎಂದೇ ತಿಳಿಯಬೇಕು.

ಗಂಧರ್ವನು ಶಿಖಂಡಿಗೆ ಪುರುಷದೇಹವನ್ನು ಕೊಟ್ಟು ''ರಾಜಕುಮಾರಾ! ಇಂದು ನಿನ್ನ ದೇಹ ಪರೀಕ್ಷೆ ನಡೆದು ಕನ್ಯಾಪಿತೃವಿಗೆ ನೀನು ಪುರುಷನೇ ಎಂದು ಖಚಿತವಾದನಂತರ ಮತ್ತೆ ನಾನು ನಿನ್ನ ಪುರುಷತ್ವವನ್ನು ತೆಗೆದುಕೊಂಡು ನಿನ್ನ ಸ್ತ್ರೀತ್ವವನ್ನು ನಿನಗೇ ಕೊಡುವೆನು'' ಎಂದು ಹೇಳಿ ಕಳುಹಿಸಿದನು.

ಗಂಧರ್ವನು ಶಿಖಂಡಿಯ ದೇಹದೊಳಗೆ ಪ್ರವೇಶಮಾಡಿ ಅದೇ ಸ್ಥಳದಲ್ಲಿ ರಹಸ್ಯವಾಗಿದ್ದನು. ದೇವರ ಕಾರ್ಯ ವಿಚಿತ್ರವಾದದ್ದು ಅದೇ ಸಮಯದಲ್ಲೇ ರುದ್ರದೇವರ ಪ್ರೇರಣೆಯಂತೆ ಕುಬೇರನು ಅಲ್ಲಿಗೆ ಬಂದನು. ತುಂಬುರು ಗಂಧರ್ವನು ಸ್ತ್ರೀದೇಹ ಧರಿಸಿದ್ದ ಕಾರಣದಿಂದ ಲಜ್ಜೆಯಿಂದ ಎದುರಿಗೆ ಬರದಿರಲು ಅವನ ಸಕಲ ಸಮಾಚಾರವನ್ನು ಕುಬೇರನು ತಿಳಿದು ನನ್ನ ಆಜ್ಞೆಯಿಲ್ಲದೆ ತಾನೇ ಸ್ವತಂತ್ರನಾಗಿ ಪರಕಾಯ ಪ್ರವೇಶಮಾಡಿದ್ದಾನೆ ಅವನ ಅಪರಾಧಕ್ಕಾಗಿ ದೀರ್ಘಕಾಲ ಸ್ತ್ರೀರೂಪದಲ್ಲೇ ಇರುವಂತಾಗಲಿ ಎಂದು ಶಪಿಸಿದನು. ತುಂಬುರು ಇದೆಲ್ಲವೂ ಹರಿಯ ಇಚ್ಛೆ ಎಂದುಕೊಂಡು ಅದೇ ವನದಲ್ಲಿ ಸ್ತ್ರೀರೂಪದಿಂದಲೇ ಇದ್ದು ತಪೋನಿರತನಾಗಿದ್ದನು.

ಶಿಖಂಡಿಯು ಗಂಧರ್ವನಿಂದ ಪುರುಷದೇಹವನ್ನು ಹೊಂದಿ ಪಟ್ಟಣಕ್ಕೆ ಹಿಂದಿರುಗಿ ತಂದೆತಾಯಿಗಳಿಗೆ ನಮಸ್ಕಾರಮಾಡಿ ನಡೆದಸಂಗತಿ ಎಲ್ಲವನ್ನೂ ತಿಳಿಸಿದನು. ದೃಪದನು ತನ್ನ ಮಗನನ್ನು ನೋಡಿ ಸಂತೋಷಗೊಂಡನು.

ಹಿರಣ್ಯವರ್ಮನಿಂದ ತನಗೆ ಸೋಲಿಲ್ಲವೆಂಬ ಧೈರ್ಯದಿಂದ ಮಗನನ್ನು ಪರೀಕ್ಷೆಮಾಡಲು ಅನುಮತಿನೀಡಿದನು.

ಹಿರಣ್ಯವರ್ಮರಾಜನು ರಾಜಕುಮಾರನನ್ನು ಪರೀಕ್ಷಿಸಲಿಕ್ಕಾಗಿ ವೇಶ್ಯೆಯರನ್ನು ಕಳುಹಿಸಿದನು.

ವಿಲಾಸಿನಿಯರು ರಾಜನ ಶಯ್ಯಾಗಾರದೊಳಗೆ ಪ್ರವೇಶಿಸಿದಾಗ ವೀರಕುಮಾರನ ಪುರುಷಲಕ್ಷಣದ ಅಂಗಾಂಗಗಳಿಗೂ ಅವನ ರತಿರಸಿಕತೆಗೂ ಸಂತೋಷಹೊಂದಿ ರಾಜಕುಮಾರನಲ್ಲಿ ಕ್ಷಮೆ ಕೇಳಿಕೊಂಡು ರಾಜನಬಳಿಗೆ ಬಂದು ''ಪ್ರಭೂ ತಮ್ಮ ಅಳಿಯನು ಸಾಮಾನ್ಯನಲ್ಲ. ಅತಿ ಸುಂದರಕಾಯನೂ, ಪುರುಷಸಿಂಹನೂ ಆಗಿದ್ದಾನೆ. ನಮ್ಮನ್ನು ರತಿವಿಲಾಸದಿಂದ ಬೆರಗುಗೊಳಿಸಿರುವನು. ನಿಮ್ಮ ಮಗಳಿಗೆ ತಕ್ಕ ಪತಿಯಾಗಿದ್ದಾನೆ'' ಎಂದು ಹೊಗಳಿದರು.

ಆಗ ಹಿರಣ್ಯವರ್ಮರಾಜನು ತಾನು ದುಡುಕಿದೆನೆಂಬ ಅವಮಾನದಿಂದ ತಲೆತಗ್ಗಿಸಿ ರಾಜನಿಗೆ ಶರಣಾಗಿ ರಾಜಪುತ್ರಿಯನ್ನು ನಿಂದಿಸಿ ಪತಿಗೃಹಕ್ಕೆ ಕಳುಹಿಸಿಕೊಟ್ಟನು.

ಶಿಖಂಡಿಯು ಅಂದು ರಾಜಕುಮಾರಿಯೊಡನೆ ರಾತ್ರಿಕಳೆದು ಮರುದಿನ ಗಂಧರ್ವನ ಬಳಿಗೆ ಬಂದು ಅವನಿಗೆ ಅಭಿನಂದಿಸಿ ನಿನ್ನ ದೇಹ ನೀನು ಪಡೆದು ನನ್ನ ದೇಹ ನನಗೆ ಕೊಡು'' ಎಂದನು.

ಗಂಧರ್ವನು ''ಅಯ್ಯಾ ರಾಜಕುಮಾರಾ! ನಿನಗೆ ಶಿವನ ವರ ಸುಳ್ಳಾಗಲಿಲ್ಲ. ನನ್ನ ಪೂರ್ವಜನ್ಮದ ಪಾಪಕರ್ಮದಿಂದ ಸ್ತ್ರೀಜನ್ಮವೇ ಸ್ಥಿರವಾಯಿತು. ಕುಬೇರನು ನನಗೆ ಸ್ತ್ರೀಜನ್ಮವೇ ನಿರಂತರ ಉಳಿಯಲೆಂದು ಶಾಪಕೊಟ್ಟಿದ್ದಾನೆ. ನಿನಗೆ ಪುರುಷತ್ವದ ಭಾಗ್ಯವೇ ಸ್ಥಿರವಾಯಿತು. ಇವೆಲ್ಲಕ್ಕೂ ನಾರಾಯಣನೇ ಮೂಲಕಾರಣನಾಗಿದ್ದಾನೆ. ನೀನು ಬಹುಕಾಲ ಸ್ತ್ರೀಭೋಗವನ್ನು ಅನುಭವಿಸಿ ಪುತ್ರರನ್ನು ಪಡೆದು ವೀರ ಶಿಖಂಡಿಯಾಗಿ ಪ್ರಸಿದ್ಧನಾಗೆಂದು ಅನುಗ್ರಹಿಸಿ ಕಳುಹಿಸಿದನು. ಈ ರೀತಿ ಅಂಬಾದೇವಿಯು ಪರಶುರಾಮದೇವರ ಅನುಗ್ರಹದಿಂದ ದ್ರುಪದನಲ್ಲಿ ಶಿಖಂಡಿಯಾಗಿ ಜನಿಸಿ ತನ್ನ ನಿಯತಪತಿಯಾದ ಭೀಷ್ಮನ ಅವಸಾನಕ್ಕೆ ಕಾರಣಳಾಗುವ ಮುಂದಿನ ರಸ ಟನೆಗಳ ಕಥೆಯ ಸ್ವಾರಸ್ಯವನ್ನು ಹೇಳುತ್ತೇನೆ ಕೇಳಿ ಧನ್ಯರಾಗಿರಿ'' ಎಂದು ಆಚಾರ್ಯರು ಮುಂದುವರಿಸಿ ಹೇಳಿದರು. ಅಂಬಾದೇವಿಯು ತಪಸ್ಸಿಗೆ ಹೊರಟುಹೋದಳು. ವಿಚಿತ್ರವೀರ್ಯನು ಅಂಬಿಕೆ-ಅಂಬಾಲಿಕೆಯರೊಡನೆ ವಿವಾಹವಾಗಿ ಸದಾ ಅಂತಃಪುರವನ್ನು ಸೇರಿ ಸ್ತ್ರೀಲಂಪಟನಾದಕಾರಣ ಕ್ಷಯರೋಗಪೀಡಿತನಾಗಿ ಮರಣಹೊಂದಿದನು. ವಿಚಿತ್ರವೀರ್ಯನು ದೇವಕುಮಾರನಾದಾಗ್ಯೂ ಭಗವದ್ಧರ್ಮಗಳನ್ನು ಮರೆತು ತುಚ್ಛಕಾಮಕ್ಕೊಳಗಾದ ಕಾರಣ ಅಕಾಲಮರಣ ಸಂಭವಿಸಿತು. ರಾಜ್ಯ ಅರಾಜಕವಾಯಿತು. ಮಹಾರಾಣಿಯಾದ ಸತ್ಯವತೀದೇವಿಗೆ ರಾಜ್ಯಭಾರ ಯಾರಿಗೆ ವಹಿಸುವುದು? ಎಂಬ ಚಿಂತೆ ಹತ್ತಿತು.

ಭೀಷ್ಮನಾದರೋ ತನ್ನ ಪ್ರತಿಜ್ಞೆಯನ್ನು ಬಲಮುಷ್ಟಿಯಲ್ಲಿ ಹಿಡಿದವನು ಅದನ್ನು ಸಡಿಸಲು ಯಾರಿಗೂ ಸಾಧ್ಯವಿಲ್ಲ. ಶ್ರೀಹರಿಯೇ ನನ್ನ ಈ ಸಮಸ್ಯೆಯನ್ನು ಪರಿಹಾರ ಮಾಡಬೇಕಲ್ಲದೆ ಮತ್ತಾರಿಗೂ ಸಾಧ್ಯವಿಲ್ಲ'' ಎಂದುಕೊಂಡು ವೇದವ್ಯಾಸರನ್ನು ಸ್ಮರಿಸಿದಳು.

ಸರ್ವವ್ಯಾಪ್ತನಾದ ದೇವನು ಕ್ಷಣಾರ್ಧದಲ್ಲಿ ಎದುರಿಗೆ ಬಂದಾಗ ಭೀಷ್ಮನು ವೇದವ್ಯಾಸರನ್ನು

ನೋಡಿ ಸತ್ಯವತೀದೇವಿಯು ಏನು ಪುಣ್ಯಮಾಡಿದ್ದಳೋ ತಪೋನಾಮನಾದ ಶ್ರೀವೇದವ್ಯಾಸದೇವನನ್ನೇ ಪುತ್ರನನ್ನಾಗಿ ಪಡೆದಿದ್ದಾಳೆ ಎಂದು ತಾಯಿಯನ್ನು ಹೊಗಳಿ ದೇವೋತ್ತಮನಿಗೆ ಪಾದಪೂಜೆಮಾಡಿ ನಮಸ್ಕಾರ ಮಾಡಿದಳು.

ವೇದವ್ಯಾಸರು ಸತ್ಯವತಿಯ ಕಡೆಗೆ ನೋಡಿ ''ನೀನು ಕರೆದ ಕಾರಣವೇನು?'' ಎಂದು ಕೇಳಿದರು.

ಆಗ ಸತ್ಯವತಿಯು ''ಸ್ವಾಮೀ! ನಿನಗೆ ತಿಳಿಯದ ವಿಷಯವಿಲ್ಲ. ನನ್ನ ಪತಿ ಮತ್ತು ಇಬ್ಬರು ಪುತ್ರರೂ ಇಹಲೋಕವನ್ನು ತ್ಯಜಿಸಿ ಹೊರಟುಹೋದರು. ರಾಜ್ಯ ಅನಾಥವಾಗಿ ರಾಜರೇ ಇಲ್ಲದಂತಾಗಿದೆ. ಭೀಷ್ಮಪ್ರತಿಜ್ಞೆಯನ್ನು ಯಾರಿಂದಲೂ ತಪ್ಪಿಸಲಾಗುತ್ತಿಲ್ಲ. ಆದ್ದರಿಂದ ಸರ್ವಸ್ವತಂತ್ರನೂ ಜಗತ್ಪತಿಯೂ ಆದ ನೀನು ನನ್ನ ಪುತ್ರನಾದ ವಿಚಿತ್ರವೀರ್ಯನ ಪತ್ನಿಯರಲ್ಲಿ ನಿಯೋಗಪದ್ಧತಿಯಂತೆ ಸಂತಾನವಾಗುವಂತೆ ಅನುಗ್ರಹಿಸಿ ವಂಶದ ಹೆಸರನ್ನು ಉಳಿಸು'' ಎಂದು ಪ್ರಾರ್ಥಿಸಿಕೊಂಡಳು.

ವೇದವ್ಯಾಸರು ಸತ್ಯವತಿಯನ್ನು ಕುರಿತು ''ನೀನು ಹೇಳಿದಂತೆ ನಾನು ನಡೆಯಬೇಕಾದರೆ ನಿನ್ನ ಸೊಸೆಯರು ಒಂದು ವರ್ಷಕಾಲ ವೈಷ್ಣವ ವ್ರತಾಚರಣೆ ಮಾಡಿದರೆ ಅವರಲ್ಲಿ ಲಕ್ಷ್ಮೀದೇವೀ ಆವೇಶವಾಗುತ್ತಾಳೆ. ಆಗ ನಾನು ಅವರನ್ನು ಸ್ಪರ್ಶಿಸಿ ಅವರಿಗೆ ಸಂತಾನವಾಗುವಂತೆ ಅನುಗ್ರಹಮಾಡುತ್ತೇನೆ'' ಎಂದರು ಸತ್ಯವತಿಗೆ ಅಷ್ಟು ತಾಳ್ಮೆ ಬರಲಿಲ್ಲ. ಇನ್ನು ಒಂದು ವರ್ಷ ಸಿಂಹಾಸನಕ್ಕೆ ಹಕ್ಕುದಾರರಿಲ್ಲದಿದ್ದರೆ ರಾಜ್ಯದಲ್ಲಿ ಬಿಕ್ಕಟ್ಟುತಪ್ಪಿ ಅನ್ಯಾಯ ಅಕ್ರಮಣಗಳಿಗೆ ಈಡಾಗುತ್ತದೆ. ಆದ್ದರಿಂದ ಈಗಲೇ ನನ್ನ ಸೊಸೆಯರಲ್ಲಿ ಪುತ್ರೋತ್ಪತ್ತಿ ಆಗುವಂತೆ ಅನುಗ್ರಹಿಸಿ ವಂಶೋದ್ಧಾರಮಾಡು'' ಎಂದು ಕೇಳಿಕೊಂಡಳು.

ವೇದವ್ಯಾಸರು ಪೂರ್ಣಸ್ವತಂತ್ರ. ಲಕ್ಷ್ಮೀನಾರಾಯಣರಿಗೆ ಭಿನ್ನಮತವಿಲ್ಲ. ಆದಾಗ್ಯೂ ಜ್ಞಾನಿಜನರ ಉದ್ಧಾರಕ್ಕಾಗಿಯೂ ಅಜ್ಞಾನಿಗಳಿಗೆ ಮೋಹವನ್ನುಂಟುಮಾಡಲಿಕ್ಕಾಗಿಯೂ ಹಾಗೆ ಹೇಳಿದರು. ಸತ್ಯವತೀದೇವಿಯು ಆಕ್ಷಣವೇ ತನ್ನ ಅಭಿಲಾಷೆ ನೆರವೇರಬೇಕೆಂದು ಕಾತುರದಿಂದ ಕೇಳುತ್ತಿದ್ದಾಗ ವೇದವ್ಯಾಸರು ''ಹಾಗಾದರೆ ನಾನು ರಮಾದೇವಿಯರಿಗೆ ಆನಂದತರುವಂಥ ಸೌಮ್ಯವಾದ ಸುಂದರರೂಪವನ್ನು ನಿನ್ನ ಸೊಸೆಯರಿಗೆ ತೋರಿಸಲಾಗುವುದಿಲ್ಲ. ಅವರವರ ಯೋಗ್ಯತೆಗನುಸಾರವಾಗಿ ನನ್ನ ಸ್ಪರ್ಶಸುಖವನ್ನನುಭವಿಸುತ್ತಾರೆ'' ಎಂದರು.

ಸತ್ಯವತೀದೇವಿಯು ಸಂತೋಷದಿಂದ ಸೊಸೆಯರನ್ನು ಕರೆದು ವೇದವ್ಯಾಸರು ನಿಮ್ಮ ಭಾವಂದಿರು. ಅವರ ಅನುಗ್ರಹಪಡೆದು ಪುತ್ರರನ್ನು ಜನಿಸಿ ರಾಜಮಾತೆಯರಾಗುವ ಸೌಭಾಗ್ಯ ಹೊಂದಿರಿ''ಎಂದು ಹೇಳಿದಳು. ಅತ್ತೆಯ ಆಜ್ಞೆಯಂತೆ ಅಂಬಿಕೆಯು ವೇದವ್ಯಾಸರ ಸನಿಹಕ್ಕೆ

ಬಂದಳು. ಅವರ ತೇಜಸ್ಸು ಅವರ ಘೋರರೂಪಗಳನ್ನು ನೋಡಲಾರದೆ ಕಣ್ಣು ಮುಚ್ಚಿಬಿಟ್ಟಳು. ಭಗವದ್ದರ್ಶನ ಪಡೆಯದ ಕಣ್ಣು ಇದ್ದರೂ ಇಲ್ಲದಂತಾಗಿ ಆಕೆಗೆ ಕುರುಡು ಪುತ್ರನೇ ಜನಿಸುವಂತಾಯಿತು. ಈಕೆಯಲ್ಲಿ ಹುಟ್ಟಿದ ಮಗನು ಗಂಧರ್ವಶ್ರೇಷ್ಠನಾದ ಧೃತರಾಷ್ಟ್ರನೆಂಬುವನಾಗಿದ್ದನು. ಮರುತಾಂಶನು, ಅಮಿತಬಲಸಾಲಿ. ಇವನಲ್ಲಿ ಕಲಿಪುರುಷನ ಅವತಾರವಾಗಬೇಕಾಗಿದ್ದರಿಂದ ಇವನು ಜ್ಞಾನಕುರುಡನೂ ಆಗಿದ್ದನು.

ಸತ್ಯವತೀದೇವಿಯು ವೇದವ್ಯಾಸರಿಂದ ಅಂಬಿಕೆಯಲ್ಲಿ ಹುಟ್ಟುವಮಗ ಕುರುಡನೆಂದು ತಿಳಿದು ದುಃಖದಿಂದ ''ಸ್ವಾಮೀ! ಕುರುಡನು ರಾಜ್ಯಭಾರಕ್ಕೆ ಯೋಗ್ಯನಲ್ಲ. ಅಂಬಾಲಿಕೆಯಲ್ಲಿ ಒಬ್ಬ ಸತ್ವಗುಣಸಂಪನ್ನನು ಹುಟ್ಟಿ ರಾಜ್ಯಕ್ಕೆ ಯೋಗ್ಯ ರಾಜಕುಮಾರನನ್ನು ಕರುಣಿಸಿ ಕಾಪಾಡು'' ಎಂದು ಕೇಳಿದಾಗ ವೇದವ್ಯಾಸರು ''ಆಕೆಯ ಯೋಗ್ಯತಾನುಸಾರ ಪುತ್ರನನ್ನು ಪಡೆಯಲಿ'' ಎಂದು ಹೇಳಿದರು.

ಅಂಬಾಲಿಕೆಯು ಸತ್ಯಸಂಕಲ್ಪನನ್ನು ನೋಡಿದಾಕ್ಷಣ ತನ್ನ ಧೈರ್ಯ ಸ್ಥೈರ್ಯವನ್ನು ಕಳೆದುಕೊಂಡಳು. ಮುನಿದೇವನ ಮುಖದಲ್ಲಿ ತುಂಬಿದ ತೇಜಸ್ಸು ಉಗ್ರತೆ ಘೋರ ರೂಪವನ್ನು ಆಕೆಗೂ ನೋಡಲಾಗಲಿಲ್ಲ. ಭಯದಿಂದ ಬಿಳಿಚಿಕೊಂಡಳು. ಪರಿಶುದ್ಧಮನದ ಭಗವದ್ಭಕ್ತನಾದರೂ ದೌರ್ಬಲ್ಯ ದೋಶ ಕಂಡುಬಂದಿತು.

ಇದರಿಂದ ಸತ್ಯವತಿಯು ''ಇಬ್ಬರೂ ದೋಷವುಳ್ಳವರೇ ಆದರು. ಇನ್ನೊಬ್ಬ ನಿರ್ದೋಷನಾದ ಮಗ ಹುಟ್ಟುವಂತೆ ಅನುಗ್ರಹಮಾಡು'' ಎಂದು ಕೇಳಿಕೊಂಡು ಸೊಸೆಯನ್ನು ಕುರಿತು ''ನಿಮ್ಮ ಭಾವ ಸಾಮಾನ್ಯನಲ್ಲ. ಸಾಕ್ಷಾತ್ತಾಗಿ ನಾರಾಯಣನೇ ಆಗಿರುವುದರಿಂದ ನೀವು ನಿಮ್ಮ ಭಕ್ತಿಭಾವದಿಂದ ಭವ್ಯಮೂರ್ತಿಯನ್ನು ನೋಡಿ ರಾಜ್ಯಭಾರಕ್ಕೆ ತಕ್ಕದಾದ ಮಗನನ್ನು ಪಡೆಹೋಗು'' ಎಂದಳು.

ವಿಚಿತ್ರವೀರ್ಯನ ಸತಿಗೆ ಮಹಾಮಹಿಮನ ದರ್ಶನ, ಸಾಮೀಪ್ಯಸುಖಗಳು ತನಗಿನ್ನು ಸಾಧ್ಯವಿಲ್ಲವೆಂಬ ಭಯದಿಂದ ದಾಸಿಯನ್ನು ಕುರಿತು ''ನೀನೇ ಈಗ ವೇದವ್ಯಾಸರ ಸಮೀಪಕ್ಕೆ ಹೋಗಿ ನನಗಾಗಿ ಒಬ್ಬ ಪುತ್ರನನ್ನು ಹಡೆದುಕೊಡು'' ಎಂದು ಹೇಳಿ ಕಳುಹಿಸಿದಳು.

ಆ ದಾಸಿಯು ಯೋಗ್ಯಚೇತನಳು. ಮಹಾಪ್ರಭುವಾದ ಸ್ರೀಮನ್ನಾರಾಯಣನೇ ವೇದವ್ಯಾಸರೂಪದಿಂದ ನಮಗೆ ಅನುಗ್ರಹಮಾಡಲು ಬಂದಿದ್ದಾರೆ. ಈ ಅವಕಾಶವನ್ನು ಬಿಡಬಾರದೆಂದು ಸಂತೋಷದಿಂದ ಭಗವಧ್ಯಾನದಲ್ಲಿ ಮನವಿರಿಸಿ ಹರ್ಷೋತ್ಸಾಹಗಳಿಂದ ವೇದವ್ಯಾಸರ ಮುಖ ಪದ್ಮವನ್ನು ನೋಡಿ ಅನುಸಂಧಾನಪೂರ್ವಕವಾಗಿ ದೇವರದೇವನ ಮಹದಾನಂದಕರವಾದ ಸ್ವರೂಪವನ್ನೇ ಚಿಂತಿಸುತ್ತ ಭಗವತ್ಸಾಮೀಪ್ಯ ಸುಖಾನುಭವಪಡೆದು ಸಂತುಷ್ಟಳಾಗಿ ನಮಸ್ಕಾರ ಮಾಡಿದಾಗ ಸ್ವಾಮಿಯು ''ನಿನಗೆ ಯಮಧರ್ಮರಾಜನ ಅಂಶದಿಂದ

ವಿದ್ಯಾಧರ್ಮದಲ್ಲಿ ನಿರತನಾಗಿ ವಿದುರನೆಂಬ ಹೆಸರಿನ ಮಹಾತ್ಮನು ಮಗನಾಗುವನು'' ಎಂದು ಅನುಗ್ರಹಮಾಡಿ ಕಳುಹಿಸಿದನು.

## ವಿದುರನ ಪೂರ್ವಜನ್ಮದ ಪುಣ್ಯಚರಿತ್ರೆ

ಸದ್ಧರ್ಮನಿರತನಾದ ತಪಸ್ವಿ ಮಾಂಡವ್ಯ ಋಷಿಯು ತನ್ನ ಯೋಗ್ಯತೆಗೂ ಮೀರಿದಂತಹ ವಸಿಷ್ಠಮುನಿಗಳ ಸಾಮ್ಯವನ್ನು ಪಡೆಯಲು ಘೋರತಪಸ್ಸಿಗೆ ತೊಡಗಿದನು. ದೋಶಯುಕ್ತವಾದ ತಪಸ್ಸನ್ನು ಭಂಗಪಡಿಸುವುದಕ್ಕಾಗಿ ಭಗವತ್ಸಂಕಲ್ಪದಂತೆ ಅವನ ಆಶ್ರಮದ ಬಳಿ ಒಂದು ಘಟನೆ ನಡೆಯಿತು. ಒಂದುದಿನ ತಪೋನಿರತನಾದ ಋಷಿಯ ಬಳಿ ಅರಸನ ಮನೆಯಿಂದ ಕಳ್ಳತನ ಮಾಡಿತಂದ ದಿವ್ಯಾಭರಣಗಳನ್ನು ಕಳ್ಳರು ಇರಿಸಿ ಓಡಿಹೋದರು.

ರಾಜದೂತರು ಕಳ್ಳರನ್ನು ಹಿಂಬಾಲಿಸಿ ಓಡಿಬರುವಾಗ ಮಾಂಡವ್ಯ ಋಷಿಗಳ ಪಕ್ಕದಲ್ಲಿ ಕಳ್ಳತನದ ವಸ್ತುಗಳು ಕಂಡುಬಂದವು. ದೂತರು ಕಳ್ಳತನದ ವಸ್ತುಗಳೊಂದಿಗೆ ಋಷಿಯನ್ನು ಎಳೆದುಕೊಂಡು ಹೋಗಿ ರಾಜನಮುಂದೆ ನಿಲ್ಲಿಸಿದರು.

ರಾಜನು ''ಈ ಕಳ್ಳಸನ್ಯಾಸಿಯನ್ನು ಶೂಲಕ್ಕೇರಿಸಿರಿ'' ಎಂದು ಆಜ್ಞೆ ಮಾಡಿದನು.

ಶೂಲದಲ್ಲಿ ಸಿಕ್ಕಿದ ಋಷಿಯು ಎಷ್ಟುದಿನವಾದರೂ ಸಾಯಲಿಲ್ಲ. ಅವನ ಬಳಿಗೆ ಎಲ್ಲಾ ಋಷಿಪುಂಗವರೂ ಬಂದು ನಮಸ್ಕಾರಮಾಡಿ ಮಾತನಾಡಿಸಿ ಹೋಗುತ್ತಿದ್ದರು. ಋಷಿಯು ಯೋಗಭ್ರಷ್ಟನಾಗದೆ ತನ್ನ ತಪಸ್ಸಿನಲ್ಲಿ ತಾನು ಮೊದಲಿನಂತೆಯೇ ಇದ್ದನು. ಮಾಂಡವ್ಯನು ತನ್ನ ಯೋಗಶಕ್ತಿಯಿಂದ ಯಮಧರ್ಮರಾಜನನ್ನು ಕಂಡು ನನ್ನ ಯಾವ ಅಪರಾಧದಿಂದ ನನಗೆ ಈ ಶೂಲದ ಯಾತನೆಯನ್ನುಂಟು ಮಾಡಿರುವಿರಿ'' ಎಂದು ಕೇಳಿದನು. ಯಮಧರ್ಮನು ಮುನಿಯ ಪಾಪ ಮತ್ತಷ್ಟು ಅದಿಕವಾಗಲೆಂದು ನೀನು ಬಾಲ್ಯದಲ್ಲಿ ನೊಣಗಳಿಗೆ ದರ್ಭೆಯಿಂದ ಚುಚ್ಚಿ ಪೀಡಿಸುತ್ತಿದ್ದ ಕಾರಣ ನಿನಗೂ ಈಗ ಅದೇ ವಿಧವಾದ ಯಾತನೆ ಕೊಟ್ಟಿದ್ದೇನೆ'' ಎಂದನು. ''ನೀನು ಸಮವರ್ತಿ ಎಂದೆನಿಸಿಕೊಂಡಿದ್ದರೂ ಪಕ್ಷಪಾತ ಮಾಡಿರುವಿ. ಬಾಲ್ಯದ ಚೇಷ್ಟೆಗೆ ಶಿಕ್ಷೆಯಿಲ್ಲವೆಂದು ಧರ್ಮಶಾಸನ ಹೇಳಿದೆ. ಅಜ್ಞಾನದಲ್ಲಿ ನಾನು ಮಾಡಿದ ಒಂದು ಸಣ್ಣತಪ್ಪಿಗೆ ಇಂಥ ಘೋರಶಿಕ್ಷೆ ವಿಧಿಸಿದ ನೀನು ಶೂದ್ರಯೋನಿಯಲ್ಲಿ ಮನುಷ್ಯನಾಗಿ ಹುಟ್ಟು'' ಎಂದು ಶಪಿಸಿದರು. ಋಷಿಯು ತನಗಿಂತಲೂ ಉತ್ತಮಸ್ಥಾನದ ಯಮಧರ್ಮನಿಗೆ ಶಾಪಕೊಟ್ಟಕಾರಣ ತಪೋಭ್ರಷ್ಟನಾದನು.

ಯಮಧರ್ಮರಾಜನು ಭಗವತ್ಸಂಕಲ್ಪದಂತೆ ಮಾಂಡವ್ಯರ ತಪಸ್ಸನ್ನು ಭಂಗಪಡಿಸಲಿಕ್ಕಾಗಿಯೂ ತಾನು ಭಗವತ್ಸೇವಾರ್ಥವಾಗಿ ಭೂಮಿಯಲ್ಲಿ ಅವತಾರ ಮಾಡುವುದಕ್ಕಾಗಿಯೂ ಋಷಿಶಾಪವನ್ನು ಅಂಗೀಕಾರಮಾಡಿ ತನ್ನ ಒಂದಂಶದಿಂದ ಭೂಮಿಯಲ್ಲಿ ವಿದುರನಾಮಕನಾಗಿ ವೇದವ್ಯಾಸ ಮಹರ್ಷಿಗಳ ಅನುಗ್ರಹದಿಂದ ಅವತರಿಸಿದನು. ಇದನ್ನು

ತಿಳಿದ ಸತ್ಯವತೀದೇವಿಯು ವೇದವ್ಯಾಸರಿಂದ ಮೂರುಜನ ಕುಮಾರರುದಿಸಿದರೂ ಎಲ್ಲರಲ್ಲೂ ಒಂದೊಂದು ದೋಶ ಉಂಟಾಗಿದೆ ಎಂಬ ಅಸಂತುಷ್ಠಿಯಿಂದ ಮತ್ತೆ ನಿರ್ದೋಶಿಯಾದ ಇನ್ನೊಬ್ಬ ಪುತ್ರನನ್ನು ಕರುಣಿಸು ಎಂದು ಕೇಳಿದಾಗ ಈಕೆಯ ಅಸಂತುಷ್ಠಿಗೆ ಅಪ್ರತ್ಯಕ್ಷವೇ ಸರಿಯಾದ ಫಲ ಎಂದುಕೊಂಡು ಅದೃಶ್ಯರಾದರು.

ಸತ್ಯವತಿಯು ಭಗವಂತನ ಇಚ್ಛೆಯಂತೆ ನಡೆಯಿತು ಎಂಬ ಜ್ಞಾನದಿಂದ ಹರಿಧ್ಯಾನನಿರತಳಾದಳು.

ಅರಮನೆಯಲ್ಲಿ ಪುತ್ರಜನನವೂ ಆಯಿತು. ವೇದವ್ಯಾಸರ ವರಬಲದಿಂದ ಹುಟ್ಟಿದ ಮೂರುಮಕ್ಕಳೂ ದಿನದಿನಕ್ಕೂ ವೃದ್ಧಿಹೊಂದಿ ಸಕಲವಿದ್ಯಾಪಾರಂಗತರಾದರು. ಭೀಷ್ಮರು ರಾಜಪುತ್ರರಿಗೆ ನಾಮಕರಣಾದಿ ಸಂಸ್ಕಾರಗಳನ್ನು ಮಾಡಿ ಅವರ ವಯಸ್ಸಿಗೆ ಯೋಗ್ಯವಾದ ಎಲ್ಲಾ ಶುಭಸಂಸ್ಕಾರಗಳನ್ನು ಮಾಡಿ ವೈದಿಕಶಾಸ್ತ್ರಗಳನ್ನು ಕ್ಷತ್ರಿಯವೀರರಿಗೆ ಯೋಗ್ಯವಾದ ಶಸ್ತ್ರಾಸ್ತ್ರ ವಿದ್ಯೆಗಳನ್ನು ಅಮೋಘವಾಗಿ ಅಭ್ಯಾಸಮಾಡಿಸಿದರು. ವಿದುರನು ಶೂದ್ರಸ್ತ್ರೀಯಲ್ಲಿ ಹುಟ್ಟಿದವನಾದರೂ ಸ್ವರೂಪೋತ್ತಮನಾದ್ದರಿಂದ ಅವನಿಗೂ ವೇದಾರ್ಥದ ಜ್ಞಾನ ಲಭ್ಯವಾಗಿ ಜ್ಞಾನವಂತನಾಗಿದ್ದನು. ಧೃತರಾಷ್ಟ್ರನು ಕುರುಡನಾದ್ದರಿಂದ ಪಾಂಡುವಿಗೇ ರಾಜ್ಯಭಾರ ವಹಿಸಿದರೂ ಹಿರಿಯನಾದ ಧೃತರಾಷ್ಟ್ರನಿಗೇ ಸಿಂಹಾಸನ ಮೀಸಲಾಗಿತ್ತು. ಪಾಂಡು ತಾನು ರಾಜನಾದರೂ ಸಕಲಗೌರವಗಳೂ ಅಣ್ಣನಿಗೇ ಸಲ್ಲತಕ್ಕದ್ದೆಂದು ಅವನಿಗೆ ಸಲ್ಲಿಸುತ್ತಿದ್ದನು.

ಪಾಂಡುರಾಜನು ಅಸಮಶೂರನಾಗಿ ದಿಗ್ವಿಜಯಕ್ಕೆ ಹೊರಟು ಸಕಲರಾಜರುಗಳನ್ನು ಗೆದ್ದು ಕಪ್ಪವನ್ನು ತಂದು ಅಣ್ಣನಿಗೆ ಒಪ್ಪಿಸಿದನು.

ಧೃತರಾಷ್ಟ್ರನು ಮಹಾಬಲಿಷ್ಠನಾದರೂ ಅಂಧತೆಯ ದೋಶದಿಂದ ಅವನ ಬಲಸಾಹಸವೆಲ್ಲವೂ ವ್ಯರ್ಥವಾಯಿತು. ಧೃತರಾಷ್ಟ್ರನಿಗೆ ಸಂಜಯನೆಂಬ ಮಿತ್ರನಿದ್ದನು. ಈತನು ವೇದವ್ಯಾಸರ ಶಿಷ್ಯನಾಗಿ ಧೃತರಾಷ್ಟ್ರನ ಸ್ನೇಹಕ್ಕೆ ಪಾತ್ರನಾದ ಈತನು ವಿಚಿತ್ರವೀರ್ಯನ ಸೂತನಾದಂಥ ಗಾವಲ್ಗಣನೆಂಬುವನ ಮಗ. ಈತನು ಪೂರ್ವಜನ್ಮದಲ್ಲಿ ಸಮಸ್ತ ಗಂಧರ್ವರಿಗೂ ಪತಿಯಾದ ತುಂಬುರು ಎಂಬ ನಾಮದ ಗಂಧರ್ವಶ್ರೇಷ್ಠನಾಗಿದ್ದನು. ಈತನೇ ಉಧ್ವಹ ಎಂಬ ಮರುತಾಂಶದಿಂದ ಹುಟ್ಟಿ ಸಂಜಯನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನು. ಈತನು ಇಂದ್ರಿಯಗಳನ್ನು ಹತೋಟಿ ತಪ್ಪದಂತೆ ತನ್ನ ವಶದಲ್ಲಿಟ್ಟುಕೊಂಡವನಾದ್ದರಿಂದ ಸಂಜಯ ಎಂಬ ಹೆಸರನ್ನು ಪಡೆದಿದ್ದ. ಈತನೂ ಧೃತರಾಷ್ಟ್ರರಾಯನ ವಯಸ್ಸಿನವನೇ ಆದ್ದರಿಂದ ಸಮವಯಸ್ಕರಾದ ಇವರಿಬ್ಬರಿಗೂ ಸ್ನೇಹದ ಬೆಸುಗೆ ಬಲವಾಗಿತ್ತು. ಧೃತರಾಷ್ಟ್ರನು ವಿವಾಹ ವಯಸ್ಕನಾದನು.

ಭೀಷ್ಮರು ಗಾಂಧಾರ ದೇಶದರಸನಾದ ಸುಬಲರಾಜನ ಪುತ್ರಿ ಗಾಂಧಾರಿಯನ್ನು ತಂದು ವಿವಾಹಮಾಡಿದನು. ಗಾಂಧಾರಿಗೆ ಶಕುನಿ ಎಂಬ ತಮ್ಮನಿದ್ದನು. ಈತನು ಮಿಥ್ಯಾಜ್ಞಾನಕ್ಕೆ

ಅಧಿಪತಿಯಂತಿದ್ದು ಮುಂದೆ ನಡೆಯಬೇಕಾದ ದೈತ್ಯನಾಶಕ್ಕೆ ಕಾರಣವಾದ ದ್ಯೂತವೇ ಮೊದಲಾದ ದುಷ್ಕಾರ್ಯಗಳಿಗೆ ನಾಯಕನಾಗಿ ದುಷ್ಟ ಜನರಿಗೆ ಪಾಪದ ಕಶಾಯವನ್ನು ಪಾನಮಾಡಿಸಿ ಭೂಭಾರ ಹರಣಕಾರ್ಯಕ್ಕೆ ಕಾರಣನಾಗುವುದಕ್ಕೆ ಭೂಮಿಯಲ್ಲಿ ಹುಟ್ಟಿ ಬಂದವನು.

ಹೀಗೆ ಸಕಲ ದೇವತೆಗಳೂ ದೈತ್ಯರೂ ಭೂಮಿಯಲ್ಲಿ ಅವರವರ ಯೋಗ್ಯತಾನುಸಾರ ಮಹಾವಿಷ್ಣುವಿನಿಂದ ನಡೆಯತಕ್ಕ ಭೂಭಾರ ಹರಣಕಾರ್ಯಕ್ಕೆ ಕಾರಣಕರ್ತರಾಗಿ ಭಗವಂತನ ಸಂಕಲ್ಪದಂತೆ ಬೇರೆ ಬೇರೆ ರೂಪದಿಂದ ಹುಟ್ಟಿದರು.

ಯಾದವ ವಂಶದಲ್ಲಿ ಶೂರರಾಜನೆಂಬುವನಿಗೆ ಕುಂತೀಭೋಜನೆಂಬ ಒಬ್ಬ ಆಪ್ತಮಿತ್ರನಿದ್ದನು. ಈತನಿಗೆ ಎಷ್ಟು ದಿನಗಳಾದರೂ ಮಕ್ಕಳಾಗದೇ ಇರಲು ಶೂರರಾಜನನ್ನು ಕುರಿತು ''ಮಿತ್ರಾ! ನಿನಗೆ ಹೆಣ್ಣು ಕೂಸಾದರೂ ಸರಿಯೆ. ಗಂಡು ಕೂಸಾದರೂ ಸರಿಯೆ ಹುಟ್ಟಿದ ಮಗುವನ್ನು ನನಗೆ ಕೊಡುತ್ತೇನೆಂದು ವಾಗ್ದಾನಮಾಡು ಎಂದು ಮಾತು ತೆಗೆದುಕೊಂಡಿದ್ದ ಕಾರಣದಿಂದ ಶೂರರಾಜನು ತನಗೆ ಹುಟ್ಟಿದ ಚೊಚ್ಚಲು ಹೆಣ್ಣುಕೂಸನ್ನು ಅವನಿಗೆ ಕೊಟ್ಟುಬಿಟ್ಟನು.

ಕುಂತೀಭೋಜನ ಸಾಕುಮಗಳಿಗೆ ಪೃಥಾ ಎಂದು ನಾಮಕರಣ ಮಾಡಿದ್ದರೂ ಆಕೆ ಕುಂತೀ ಎಂಬ ಹೆಸರಿನಿಂದಲೇ ಪ್ರಸಿದ್ಧಳಾಗಿದ್ದಳು. ಕುಂತಿಯು ಭಗವದ್ಧರ್ಮಗಳನ್ನು ಬಹಳ ಶ್ರದ್ಧೆಯಿಂದ ಕೇಳಿ ಅಭ್ಯಾಸಮಾಡಿದ್ದಳು. ಸುಜ್ಞಾನವಂತಳಾದ ಈಕೆಯು ತನ್ನ ಸೌಶೀಲ್ಯಾದಿ ಸುಗುಣಗಳಿಂದ ಎಲ್ಲರಿಗೂ ಪ್ರೀತಿಪಾತ್ರಳಾದ ಬಾಲಕಿಯಾಗಿ ಶೋಭಿಸುತ್ತಿದ್ದಳು.

ಕುಂತಿಯು ಪೂರ್ವದಲ್ಲಿ ಪರಾವಹನೆಂಬ ಮರುತನಿಗೆ ಪತ್ನಿಯಾಗಿದ್ದಳು. ಆತನೇ ಈಗ ವೇದವ್ಯಾಸರಿಂದ ಅಂಬಿಕೆಯಲ್ಲಿ 'ಪಾಂಡು' ಎಂಬ ಹೆಸರಿನಿಂದ ಹುಟ್ಟಿದನು.

ಕುಂತಿಯು ಕುಂತೀಭೋಜನ ಅರಮನೆಯಲ್ಲಿ ಹೀಗೆ ಎಲ್ಲರ ಕಣ್ಮಣಿಯಾಗಿ ಶೋಭಿಸುತ್ತಿರುವಾಗ ಒಂದುದಿನ ರುದ್ರಾಂಶಸಂಭೂತರಾದ ದೂರ್ವಾಸರು ಕುಂತೀಭೋಜನ ಅರಮನೆಯಲ್ಲಿ ಚಾತುರ್ಮಾಸ್ಯಪೂಜೆಗೆ ಕುಳಿತುಕೊಳ್ಳಲಿಚ್ಛಿಸಿ ಅರಮನೆಗೆ ಆಗಮಿಸಿದರು. ದೂರ್ವಾಸರ ಕೋಪವನ್ನು ತಿಳಿದ ಎಲ್ಲರೂ ಭಯಪಡುತ್ತಿದ್ದರು. ಕುಂತೀಭೋಜನು ಆಗ ಚಿಕ್ಕಬಾಲಕಿಯೂ ಗುರುಹಿರಿಯರ ಸೇವೆಯಲ್ಲಿ ಬಹಳ ಉತ್ಸಾಹವುಳ್ಳವಳೂ ಆದ ಕುಂತಿಯನ್ನು ಸನ್ಯಾಸಿದೇವರ ಸೇವೆಗೆ ನಿಯಮಿಸಿದರೆ ಒಳ್ಳೆಯದೆಂದು ಯೋಚಿಸಿ, ''ಮುನೀಶ್ವರಾ! ನನ್ನ ಮಗಳು ಕುಂತೀದೇವಿ ನಿಮ್ಮ ಸೇವಾಶುಶ್ರೂಷೆ ಮಾಡಬೇಕೆಂದು ಉತ್ಸಾಹದಿಂದಿದ್ದಾಳೆ. ಚಿಕ್ಕಬಾಲಕಿ ಏನಾದರೂ ಅಪರಾಧಮಾಡಿದರೂ ಕ್ಷಮಿಸಿ ತಾವು ದೇವತಾರಾಧನೆಗೆ ಪ್ರಾರಂಭಮಾಡಿ ನಮ್ಮನ್ನು ಪುನೀತರನ್ನಾಗಿ ಮಾಡಿರಿ'' ಎಂದು ಕೇಳಿಕೊಂಡನು.

ನಂತರ ''ಕುಂತೀ ದೂರ್ವಾಸರು ಮಹಾಉಗ್ರಕೋಪಿಷ್ಠರು. ಅವರನ್ನು ನೀನು ಶ್ರದ್ಧೆ, ಭಯ, ಭಕ್ತಿಗಳಿಂದ ಸೇವೆಮಾಡಿ ಅವರ ಅನುಗ್ರಹ ಸಂಪಾದಿಸಿದರೆ ನೀನೇ ಧನ್ಯಳು'' ಎಂದು

ಮಗಳಿಗೆ ಶುಭನುಡಿಗಳನ್ನು ಉಪದೇಶಮಾಡಿ ಸೇವೆಗೆ ನಿಯಾಮಕಮಾಡಿದನು. ಕುಂತೀದೇವಿಗೆ ಮುನಿವರರ ಪಾದಪೂಜೆಯ ಪುಣ್ಯ ಸಿಕ್ಕಿರುವುದು ತನ್ನ ಮಹತ್ಪುಣ್ಯದಿಂದ ಎಂದು ಆನಂದವಾಯಿತು.

ರೌದ್ರಮುನಿಗಳನ್ನು ಪ್ರಸನ್ನರನ್ನಾಗಿರಿಸಲು ಬಹಳ ಆಸಕ್ತಿ, ಉತ್ಸಾಹದಿಂದ ಸೇವೆ ಮಾಡುತ್ತಿದ್ದಳು. ಅವಳ ಸೇವಾಮನೋಭಾವ ಬಹಳ ಸ್ವಚ್ಛವಾಗಿತ್ತು. ಕಳಂಕವಿಲ್ಲದ ಕುಂತೀದೇವಿಯ ಸೇವಾಶಿಶ್ರೂಷಾದಿಗಳು ಬಹಳ ಅತಿಶಯವಾಗಿತ್ತು. ಪೂಜಾಸಿದ್ಧತೆಗಳ ವೈಶಿಷ್ಟ್ಯತೆ ಆಕೆಯ ಆದರಪೂರ್ವಕವಾದ ನುಡಿಗಳು ಕುಟೀರದ ಅಲಂಕಾರ ಎಲ್ಲವೂ ಒಂದಕ್ಕಿಂತಲೂ ಒಂದು ಮುನಿಗಳ ಮನಸ್ಸನ್ನು ಆಹ್ಲಾದಗೊಳಿಸುತ್ತಿದ್ದವು. ಒಂದೇ ಸಮನೆ, ಹದಿಮೂರು ವರ್ಷಗಳ ಕಾಲ ಯತಿಪೂಜೆಯನ್ನು ವ್ರತದಂತೆ ಮಾಡಿದಳು. ಒಂದುದಿನವೂ ಯಾವುದರಲ್ಲೂ ಕಿಂಚಿತ್ತಾದರೂ ಲೋಪದೋಶಗಳಿರದೆ ಮಾಡಿದ ಬಾಲಕಿಯ ಸೇವೆಗೆ ದೂರ್ವಾಸರು ಸಂತುಷ್ಠರಾದರು. ಅಪರೋಕ್ಷಜ್ಞಾನಿಗಳಾದ ದೂರ್ವಾಸರು ಮಹಾವಿಷ್ಣುವಿನ ಪ್ರೀತ್ಯರ್ಥವಾಗಿ ಸ್ವಾಮಿಯು ಮುಂದೆ ನಡೆಸಲಿರುವ ದೈತ್ಯಸಂಹಾರ ಕಾರ್ಯಕ್ಕೆ ತಾವೂ ಸೇವೆಸಲ್ಲಿಸಬೇಕೆಂದು ಸಂಕಲ್ಪಮಾಡಿ ಕುಂತಿಯನ್ನು ಕುರಿತು ''ಬಾಲಕಿ! ನೀನು ಮಾಡಿದ ಸೇವೆಗೆ ನಾನು ಪ್ರಸನ್ನನಾಗಿದ್ದೇನೆ. ನಿನಗೆ ಯಾವ ದೇವರ ಮೇಲೆ ಇಚ್ಛೆ ಆಗುತ್ತದೋ ಆ ದೇವರನ್ನು ಕುರಿತು ನಾನು ನಿನಗೆ ಉಪದೇಶಿಸುವ ಐದುಮಂತ್ರಗಳಲ್ಲಿ ಒಂದನ್ನು ಜಪಿಸಿ ಪ್ರಾರ್ಥಿಸಿದ ಆ ದೇವರು ಬಂದು ನಿನ್ನ ಮನೋಭೀಷ್ಟೆ ನೆರವೇರಿಸುತ್ತಾರೆ. ಅಂದರೆ ಪ್ರಧಾನದೇವರಾದ ಮಹಾವಿಷ್ಣುವಿನ ಪರಿವಾರ ದೇವತೆಗಳನ್ನು ಮಾತ್ರ ಕರೆಯಬೇಕು'' ಎಂದು ಮಹಾ ಅಮೂಲ್ಯವಾದ ಪಂಚಮಂತ್ರಗಳನ್ನು ಉಪದೇಶಮಾಡಿ ಸಂತೋಷದಿಂದ ಹೊರಟುಹೋದರು.

## ಅಬಲೆಗೆ ಆದಿತ್ಯ ದೇವನ ಅನುಗ್ರಹ

ಕುಂತಿಯು ದೂರ್ವಾಸರಿಂದ ಮಂತ್ರೋಪದೇಶ ಪಡೆದನಂತರ ಬಾಲಕಿಯರ ಹುಡುಗಾಟಿಕೆಯ ನೈಜಸ್ವಭಾವದಂತೆ ಆಕೆಗೆ ಮಂತ್ರದ ಮಹತ್ವವನ್ನು ನೋಡಬೇಕೆಂಬ ಕುತೂಹಲ ಉಂಟಾಯಿತು. ಋಷಿಗಳು ಯಾವ ದೇವತೆಯನ್ನು ನೀನು ಕುರಿತು ಪ್ರಾರ್ಥಿಸಿದರೆ ಆ ದೇವತೆ ನಿನ್ನ ಬಳಿಗೆ ಬರುತ್ತಾರೆಂದು ಹೇಳಿದರು. ಅಲ್ಲವೆ ಎಂದು ಚಿಂತಿಸಿ ಭಗವತ್ಪ್ರೇರಣಾನುಸಾರ ಎದುರಿಗೆ ಭಾನುಮಂಡಲದಲ್ಲಿ ಹೊಳೆವ ಗಗನಮಣಿಯನ್ನು ನೋಡಿ ಮಹದಾನಂದದಿಂದ ಉದ್ಯಾನವನದ ಸರೋವರದಲ್ಲಿ ಸ್ನಾನಮಾಡಿ ಧ್ಯಾನಜಪಾದಿಗಳಿಂದಲೂ ಯತಿಗಳಿಂದ ಪಡೆದ ಮಂತ್ರದಿಂದಲೂ ಸೂರ್ಯ ದೇವನನ್ನು ಕುರಿತು ಪ್ರಾರ್ಥಿಸಿದಳು. ದೂರ್ವಾಸರ ಮಂತ್ರಪ್ರಭಾವದಿಂದ ಸೂರ್ಯನು ಕುಂತಿಯ ಸಮೀಪಕ್ಕೆ ಬಂದನು. ''ಕುಂತೀ ನಿನ್ನ ಕರೆ ಸ್ವೀಕರಿಸಿ ಬಂದಿರುವೆನು. ನಿನ್ನ ಇಚ್ಛೆ ಏನು?'' ಎಂದನು. ಕುಂತಿಯು ತರುಣಿಯ ತಾಪವನ್ನು ತಡೆಯಲಾರದೆ ''ದೇವಾ! ಋಷಿಗಳಿಂದ ಉಪದೇಶಗೊಂಡ ಮಂತ್ರ ಪ್ರಭಾವವನ್ನು ನೋಡಬೇಕೆಂಬ

ಕುತೂಹಲದಿಂದ ಮಂತ್ರ ಜಪಿಸಿದೆನು ಅಷ್ಟೆ. ಇನ್ನು ನೀನು ನಿನ್ನ ಲೋಕಕ್ಕೆ ಹೋಗು'' ಎಂದು ನಮಸ್ಕಾರ ಮಾಡಿದಳು.

ಸೂರ್ಯನು ಕುಂತೀ ದೂರ್ವಾಸರಿಂದ ನೀನು ಪಡೆದ ಮಂತ್ರ ಎಂದಿಗೂ ವ್ಯರ್ಥವಾಗುವುದಿಲ್ಲ. ನಾನು ಬಂದಮೇಲೆ ಅನುಗ್ರಹಮಾಡಿಯೇ ಹೋಗಬೇಕು. ನಿನಗೆ ನನ್ನ ಅಂಶದ ಒಬ್ಬ ವೀರಕುವರನು ಜನಿಸುವನು. ಅದರಿಂದ ನಿನ್ನ ಕನ್ಯತ್ವಕ್ಕೆ ಕುಂದಿಲ್ಲ ಭಯಪಡಬೇಡ'' ಎಂದು ಹೇಳಿ ಸ್ಪರ್ಶಮಾಡಿದಾಗ ಆಕೆಯಿಂದ ಕವಚಕುಂಡಲಗಳಿಂದಲೂ ಅಪಾರಕಾಂತಿಯಿಂದಲೂ ಯುಕ್ತನಾದ ಪುತ್ರನು ಉತ್ಪನ್ನನಾದನು. ಕಣ್ಮಣಿಯಂತಿದ್ದ ಕಂದಮ್ಮನನ್ನು ನೋಡಿದ ಕುಂತಿಗೆ ದಿಕ್ಕೇ ತೋಚದಂತಾಯಿತು. ''ಸ್ವಾಮೀ! ನನಗೆ ಮುಂದೇನು ಗತಿ? ದೂರ್ವಾಸರು ನನ್ನಿಂದ ನೀನು ಉಪದೇಶಗೊಂಡ ಮಂತ್ರದ ರಹಸ್ಯವನ್ನು ಯಾರಿಗೂ ತಿಳಿಸಬೇಡ'' ಎಂದಿದ್ದಾರೆ. ಕೇಳಿದವರಿಗೆ ಏನು ಉತ್ತರ ಹೇಳಲಿ? ಮಗು ಯಾರದು? ಎಂದು ತಂದೆತಾಯಿಗಳು ಕೇಳಿದರೆ ಏನು ಹೇಳಲಿ. ದೇವರೇ ಮಹಾತ್ಮರನ್ನು ಪರೀಕ್ಷೆಮಾಡಲಿಕ್ಕೆ ನಾನು ಪ್ರಯೋಗಮಾಡಿದ ಸಿದ್ಧಿಮಂತ್ರವು ಈಗ ನನಗೇ ವಿಪತ್ತನ್ನು ತಂದಿತಲ್ಲಾ'' ಎಂದು ಗೋಳಾಡಿದಳು.

## ಒಡನೆಯೇ ಅವಳಿಗೆ ಹರಿಪ್ರೇರಣೆ ಆಯಿತು.

ಸೇವಕಿಯನ್ನು ಕಳುಹಿಸಿ ಬಂಗಾರದ ಒಂದು ಪೆಟ್ಟಿಗೆಯನ್ನು ತರಿಸಿ ಅದರಲ್ಲಿ ರತ್ನಗಳನ್ನು ಹರಡಿ ಹಾಸಿಗೆಯಂತೆ ಮಾಡಿ ಅದರಲ್ಲಿ ಮಗುವನ್ನು ಮಲಗಿಸಿ ''ಯಮುನಾ! ಇಗೋ ನನ್ನ ಕಂದನನ್ನು ನಿನ್ನ ಮಡಲಿಗೆ ಹಾಕಿದ್ದೇನೆ'' ಎಂದು ನೀರಿನಲ್ಲಿ ಬಿಟ್ಟಳು.

ಸೂರ್ಯನಿಂದ ಕುಂತಿಯಲ್ಲಿ ಜನಿಸಿದ ಈತನು ಹಿಂದಿನ ಯುಗದಲ್ಲಿ ರಾಮಾವತಾರ ಮಾಡಿದಾಗ ಸೂರ್ಯನು ಆಗ ಸುಗ್ರೀವನಾಗಿ ಹುಟ್ಟಿದ್ದನು. ಸುಗ್ರೀವನು ಶ್ರೀರಾಮಚಂದ್ರನಿಂದ ತನ್ನ ಅಣ್ಣನಾದ ವಾಲಿಯವಧೆ ಮಾಡಿಸಿದ್ದ ಕಾರಣದಿಂದ ಈತನಿಗೆ ಸಹಸ್ರವರ್ಮನೆಂಬ ಅಸುರಾವೇಶವಿತ್ತು. ಈತನು ಹಿಂದೆ ಶ್ರೀರಾಮಚಂದ್ರನ ಸೇವಾಪುಣ್ಯದಿಂದ ಸೂರ್ಯನಾರಾಯಣನ ಅಂಶದಿಂದ ಹುಟ್ಟಿದ್ದರೂ ದೈತ್ಯಾವೇಶವೂ ಇವನಲ್ಲಿದ್ದುದ್ದರಿಂದ ಮುಂದೆ ಇವನೇ ಕರ್ಣನೆಂಬ ಹೆಸರಿನಿಂದ ಶ್ರೀಕೃಷ್ಣನಲ್ಲಿ ದ್ವೇಶ ಮಾಡುವಂಥ ಪಾಪಕ್ಕೊಳಗಾಗಿ ಕಲಿಯ ಪಕ್ಷವಹಿಸಿ ಅನೇಕ ಪಾಪಕರ್ಮಗಳನ್ನು ಮಾಡುವಂಥಹವನಾಗುವನು.

ಕುಂತಿಯು ಯಮುನಾನದಿಯಲ್ಲಿ ಹಾಕಿದ ಪೆಟ್ಟಿಗೆಯು ಸೂತಕುವರನಾದ ಅತಿರಥನೆಂಬುವನಿಗೆ ಸಿಕ್ಕಿತು. ಅತಿರಥನು ನೀರಿನ ಮೇಲೆ ತೇಲಿಬಂದ ಪೆಟ್ಟಿಗೆಯನ್ನು ಆಶ್ಚರ್ಯದಿಂದ ತೆಗೆದುಕೊಂಡು ತೆರೆದುನೋಡಿದರೆ ಅದರಲ್ಲಿ ರತ್ನಪ್ರಕಾಶಮಾನವಾದ ಒಂದು

ಶಿಶು ಹಾಸುರತ್ನದ ಮೇಲೆ ಮಲಗಿತ್ತು. ಕವಚ ಕರ್ಣಕುಂಡಲಗಳು ಅಬೇಧ್ಯವಾಗಿದ್ದವು. ಈ ಶಿಶು ಸಾಮಾನ್ಯವಾದುದ್ದಲ್ಲ ದೇವಲೋಕದಿಂದಲೇ ಇಳಿದುಬಂದಿರಬಹುದೆಂದು ಆನಂದದಿಂದ ತೆಗೆದುಕೊಂಡು ಮನೆಗೆ ಬಂದು ಹೆಂಡತಿಯನ್ನು ಕುರಿತು ''ರಾಧಾ! ಈ ಮಗುವನ್ನು ದೇವರೇ ನಮಗೆ ಯಮುನೆಯಿಂದ ಕೊಡಿಸಿದ್ದಾನೆ. ನಿನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗುವೆಂದೇ ಭಾವಿಸಿ ಚೆನ್ನಾಗಿ ಪೋಶಿಸು'' ಎಂದು ಹೇಳಿಕೊಟ್ಟನು. ಮಗು ಸಾಕುತಾಯಿತಂದೆಗಳ ಪಾಲನೆ ಪೋಶಣೆಗಳ ಪ್ರಭಾವದಿಂದ ದಿನದಿನಕ್ಕೂ ವೃದ್ಧಿಹೊಂದಿತು.

ದ್ರವ್ಯಸಹಿತವಾಗಿ ಸಿಕ್ಕಿದ ಮಗುವಿಗೆ ವಸುಷೇಣನೆಂದು ನಾಮಕರಣ ಮಾಡಿದರು. ಇವನು ಬಹಳ ಸುಂದರಕಾಯ ಉಳ್ಳವನಾದ್ದರಿಂದ ಕರ್ಣನೆಂದೂ ಪ್ರಸಿದ್ಧಿ ಹೊಂದಿದನು. ಕರ್ಣನು ಸೂರ್ಯನ ಅಂಶದಿಂದ ಹುಟ್ಟಿದ ಕಾರಣ ಅವನಿಗೆ ವೇದಶಾಸ್ತ್ರಾದಿಗಳೆಲ್ಲವೂ ರಕ್ತಗತವಾಗಿ ಲಭಿಸಿದ್ದವು. ಕುಂತಿಯ ಕರ್ಣನು ಅತಿರಥನ ಮನೆಯಲ್ಲಿ ಬೆಳೆಯುತ್ತಿದ್ದನು. ಅತ್ತ ಕುಂತಿಯು ನಿಶ್ಚಿಂತೆಯಾಗಿ ಕುಂತೀಭೋಜನರ ಮನೆಯಲ್ಲಿ ವರಕನ್ಯಾಮಣಿಯಾಗಿ ಶೋಭಿಸುತ್ತಿದ್ದಳು.

ಭೀಷ್ಮರು ಕುಂತಿಯ ಸೌಶೀಲ್ಯ ಸೌಂದರ್ಯಾದಿಗಳಿಗೆ ಮೆಚ್ಚಿ ಹಸ್ತಿನಾವತಿಯ ರಾಜ ಪಾಂಡುವಿನೊಂದಿಗೆ ವಿವಾಹಮಾಡಿದರು. ಕುಂತಿಗೆ ವಿವಾಹವಾಗಿ ಬಹಳದಿನಗಳಾದರೂ ಮಕ್ಕಳಾಗದಿದ್ದ ಕಾರಣ ಭೀಷ್ಮರು ಪಾಂಡುವಿಗೆ ಶೀಘ್ರಪ್ರತ್ರೋತ್ಪತ್ತಿ ಆಗಬೇಕೆಂಬ ಆತುರದಿಂದ ಎರಡನೇ ವಿವಾಹ ಮಾಡಲಿಚ್ಛಿಸಿ ಮದ್ರದೇಶಾಧಿಪತಿಯಾದ ಋತಾಯನನೆಂಬ ರಾಜನ ಮಗಳಾದ ಮಾದ್ರಿ ಎಂಬುವಳೊಡನೆ ವಿವಾಹ ಮಾಡಿದನು.

ಋತಾಯನರಾಜನು ದೇವೇಂದ್ರನ ಸಮಾನನಾದ ಒಬ್ಬ ಮಗನೂ ಗುಣಶೀಲಳಾದ ಒಬ್ಬಮಗಳೂ ಹುಟ್ಟಬೇಕೆಂದು ಬ್ರಹ್ಮದೇವರನ್ನು ಕುರಿತು ತಪಸ್ಸುಮಾಡಿ ಶಲ್ಯನೆಂಬ ಒಬ್ಬ ಮಗನನ್ನು ಮಾದ್ರಿ ಎಂಬ ಒಬ್ಬ ಮಗಳನ್ನೂ ಪಡೆದಿದ್ದನು.

ಶಲ್ಯನು ವಾಯುದೇವರ ಆವೇಶವುಳ್ಳವನಾಗಿ ಬ್ರಹ್ಮದೇವರ ವರದಿಂದ ಅಧಿಕ ಬಲ ಉಳ್ಳವನಾಗಿದ್ದನು. ಮಾದ್ರಿಯು ಹಿಂದಿನಜನ್ಮದಲ್ಲಿ ಪರಾವಹ ಎಂಬ ಮರುತನಂಶದವನನ್ನು ಮದುವೆಯಾಗಿದ್ದಳು. ಆತನೇ ಈಗ ಪಾಂಡುರಾಜನಿಗೆ ವೇದವ್ಯಾಸರನುಗ್ರಹದಿಂದ ಹುಟ್ಟಿದವನನ್ನೇ ವಿವಾಹವಾಗಿದ್ದಳು.

ವಿದುರನಿಗೆ ಆರುಣಿ ಎಂಬುವಳೊಂದಿಗೆ ಭೀಷ್ಮರು ವಿವಾಹಮಾಡಿದರು. ಈಕೆಯು ಶೂರರಾಜನು ವರಿಸಿದ ಶೂದ್ರಸ್ತ್ರೀಯಲ್ಲಿ ಜನಿಸಿದವಳು. ಪಾಂಡುರಾಜನು ಮಹಾಪರಾಕ್ರಮಿಯಾಗಿ ಪ್ರಜಾರಂಜಕನಾಗಿ ರಾಜ್ಯಭಾರ ನಡೆಸುತ್ತಿದ್ದನು. ಆದರೂ ದುರ್ಮದನಾಗದೆ ಭೀಷ್ಮರನ್ನೂ ಧೃತರಾಷ್ಟ್ರನನ್ನೂ ಗೌರವದಿಂದ ಕಾಣುತ್ತ ಬಹಳ ವಿನಯಪರನಾಗಿ

ನಡೆದುಕೊಳ್ಳುತ್ತಿದ್ದನು. ಧೃತರಾಷ್ಟ್ರ ಮತ್ತು ಪಾಂಡು ಇಬ್ಬರೂ ಅನೇಕಯಾಗಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿಯೇ ವೈಭವದಿಂದ ಮಾಡಿದ್ದರು.

ಹೀಗೆ ರಾಜ್ಯ ಸುವ್ಯವಸ್ಥೆಯಲ್ಲಿ ನಡೆಯುತ್ತಿರುವುದನ್ನು ಸತ್ಯವತೀದೇವಿ ನೋಡಿ ಆನಂದಪಟ್ಟನಂತರ ಒಂದುದಿನ ವೇದವ್ಯಾಸರು ಪ್ರತ್ಯಕ್ಷರಾಗಿ ಬಂದು ಸತ್ಯವತೀದೇವಿಯನ್ನು ಕುರಿತು ''ತಾಯೇ! ಈ ಸಂತೋಷದ ದಿನಗಳು ಇನ್ನು ಹೆಚ್ಚು ಕಾಲ ಉಳಿಯುವುದಿಲ್ಲ. ಮುಂದೆ ಮಹಾಘೋರವಾದ ದುಶ್ಕಾಲ ಒದಗುವುದನ್ನು ನೀನು ನೋಡಿ ದುಃಖಪಡುವುದು ಬೇಡ. ನೀನಿನ್ನು ಎಲ್ಲವನ್ನೂ ತ್ಯಜಿಸಿ ಬದರಿಕಾಶ್ರಮಕ್ಕೆ ಹೊರಡು'' ಎಂದು ಹೇಳಿದರು. ಸತ್ಯವತೀದೇವಿಗೆ ನಾರಾಯಣನೇ ಪುತ್ರನಂತೆ ವಾತ್ಸಲ್ಯದಿಂದ ಹಿತೋಪದೇಶಮಾಡಿರುವಾಗ ಆಕೆಯ ಆನಂದಕ್ಕೆ ಪಾರವಿರಲಿಲ್ಲ. ಸಂತೋಷವಾಗಿ ಹೊರಟಳು.

ಆಗ ಅಂಬಿಕೆ ಅಂಬಾಲಿಕೆಯರೂ ವೇದವ್ಯಾಸರಿಗೆ ನಮಸ್ಕಾರಮಾಡಿ ನಾವೂ ನಮ್ಮ ಅತ್ತೆಯ ಜೊತೆಗೆ ಬದರಿಕಾಶ್ರಮಕ್ಕೆ ಹೊರಡಲು ಅಪ್ಪಣೆನೀಡಿ. ನಮ್ಮನ್ನು ಕಾಪಾಡಿರಿ'' ಎಂದು ಪ್ರಾರ್ಥಿಸಿಕೊಂಡು ಅನುಮತಿಪಡೆದು ತಾವೂ ಹೊರಟರು.

ಕರುಣಾಳುವಾದ ದೇವೋತ್ತಮನನ್ನು ಆಶ್ರಯಹೊಂದಿದ ಸತ್ಯವತೀದೇವಿಯು ಸ್ವಾಮಿಯನ್ನೇ ಅನುಸರಿಸಿ ಬಂದಾಗ ಆಕೆಗೆ ಸ್ವಚ್ಛಜ್ಞಾನವನ್ನು ನೀಡಿ ಪರಮಗತಿ ಕೊಡಲಿಕ್ಕಾಗಿ ವೇದವ್ಯಾಸರು ''ತಾಯೇ! ನನ್ನನ್ನು ನಿನ್ನ ಮಗನೆಂಬ ಮೋಹದಿಂದ ಮಾತ್ರ ಆಸಕ್ತಳಾಗದೆ ಜಗಜ್ಜನಕನಾದ ನನ್ನನ್ನು ಸಾಕ್ಷಾತ್ ಶ್ರೀಮನ್ನಾರಾಯಣನೆಂದು ಅರಿತು ನಿರ್ಲಿಪ್ತಮನೋಭಾವವಿಟ್ಟು ವೈರಾಗ್ಯದಿಂದ ಉಪಾಶಿಸಿ ಸರ್ವೋತ್ತಮನಾದ ನನ್ನ ಪಾದಮೂಲದಲ್ಲಿ ಸತ್ಯಪಾದ ಆನಂದಹೊಂದು'' ಎಂದು ಉಪದೇಶಮಾಡಿದಾಗ ಸತ್ಯವತೀದೇವಿಯ ಜ್ಞಾನಕುಸುಮ ವಿಕಸಿತಗೊಂಡಿತು. ತಪಸ್ವಿನಿಯಾದ ಸಾಧ್ವಿಯು ಸರ್ವಶಬ್ದವಾಚ್ಯನೂ ಸರ್ವಜ್ಞನೂ ಸರ್ವವ್ಯಾಪ್ತನೂ ಆದ ಶ್ರೀನಾರಾಯಣನನ್ನು ವೇದವ್ಯಾಸರಲ್ಲಿ ಕಂಡು ಅವನನ್ನೇ ಏಕಚಿತ್ತದಿಂದ ಶ್ರೀಹರಿಯನ್ನು ಉಪಾಶಿಸಿ ವೈಕುಂಠವನ್ನು ಸೇರಿದಳು. ಸೊಸೆಯರಾದ ಅಂಬಿಕೆ-ಅಂಬಾಲಿಕೆಯರೂ ತಮ್ಮ . ಯೋಗ್ಯತಾನುಸಾರ ತಪಃಸ್ಸಾಧನೆಮಾಡಿಕೊಂಡು ಮುಕ್ತಿಹೊಂದಿದರು

## ಅಲ್ಪದೋಷಕ್ಕೂ ಅಪಾರ ಅನರ್ಥ

ಪಾಂಡುರಾಜನು ಧರ್ಮದಿಂದ ಧರಣೀಪಾಲನೆಮಾಡುತ್ತಿದ್ದರೂ ಕಿಂಚಿತ್ ಪಾಪಶೇಷದಿಂದ ಒಂದು ದೊಡ್ಡ ವಿಪತ್ತೇ ಸಂಭವಿಸುವಂತಾಯಿತು. ರಾಜನು ಒಂದುದಿನ ಮೃಗಬೇಟೆಗಾಗಿ ಕಾಡಿಗೆ ಹೊರಟಾಗ ಅಲ್ಲಿ ಪ್ರಾರಬ್ಧಕರ್ಮವಶಾತ್ ಕಿಂದಮಋಷಿ ದಂಪತಿಗಳು ಚಿಗರಿ ರೂಪತಾಳಿ ರತಿವಿಲಾಸದಲ್ಲಿ ಮೈಮರೆತಿರಲು ಪಾಂಡುರಾಜನ ಅಸ್ತ್ರಘಾತಕ್ಕೊಳಗಾದನು.

ಮುನಿಯ ಹಗಲುಸಂಭೋಗದ ದೋಶದಿಂದ ಅವನಿಗೆ ಮರಣಪ್ರಾಪ್ತಿ ಆಗಿದ್ದು ಒಂದು ಕಾರಣ.

ಪಾಂಡುರಾಜನು ಪೂರ್ವಜನ್ಮದಲ್ಲಿ ಮರುದ್ದೇವತೆಗಳೊಂದಿಗೆ ದೇವೇಂದ್ರನ ದರ್ಶನಕ್ಕಾಗಿ ಹೋಗಿದ್ದಾಗ ದೇವೇಂದ್ರನು ಶಚೀದೇವಿಯೊಂದಿಗೆ ಆಗ ಏಕಾಂತ ಸುಖದಲ್ಲಿರಲು ವಿಘ್ನ ಉಂಟಾದ ದೋಶದಿಂದ ಈಗ ಬ್ರಾಹ್ಮಣವಧೆಯ ಪಾಪಕ್ಕೊಳಗಾಗಬೇಕಾಯಿತು. ಅಪರೋಕ್ಷಜ್ಞಾನಿಗಳಲ್ಲಿ ಅಲ್ಪ ಅಪರಾಧ ಮಾಡಿದರೂ ಅಪಾರದೋಶ ಸಂಭವಿಸುತ್ತದೆಂಬ ಧರ್ಮದಂತೆ ಪಾಂಡುರಾಜನಿಗೆ ಋಷಿಯು ''ಪಾಂಡುರಾಜಾ! ನನ್ನ ಸ್ತ್ರೀಸಂಭೋಗದ ಸಂತೋಷಸಮಯದಲ್ಲಿ ನೀನು ಮರಣಸಂಕಟಪ್ರಾಪ್ತವಾಗುವಂತೆ ಮಾಡಿದ ಕಾರಣ ನಿನಗೂ ಇಂತಹ ಸುಖಸಮಯದಲ್ಲೇ ಸಾವು ಸಂಭವಿಸಲಿ'' ಎಂದು ಶಾಪವಿತ್ತು ತನ್ನ ಸತಿಯೊಡನೆ ಪ್ರಾಣನೀಗಿದನು.

ಈ ಪಾಪಕ್ಕೆ ಪಶ್ಚಾತ್ತಾಪಹೊಂದಿದ ಪಾಂಡುರಾಜನು ಆಕ್ಷಣದಿಂದಲೇ ವೈರಾಗ್ಯಹೊಂದಿ ರಾಜ್ಯಭೋಗಗಳೆಲ್ಲವನ್ನೂ ತ್ಯಜಿಸಿ ಭೀಷ್ಮ ಮತ್ತು ಧೃತರಾಷ್ಟ್ರರಲ್ಲಿ ಅನುಮತಿಪಡೆದು ತಪಸ್ಸಿಗಾಗಿ ಬದರಿಕಾಶ್ರಮಕ್ಕೆ ಹೊರಟನು.

ಆಗ ಕುಂತಿಯು ಪತಿಯನ್ನು ಕುರಿತು ''ರಾಜಾ! ನಮಗೆ ಪತಿಯ ಸಾನಿಧ್ಯ ತಪ್ಪಿದರೆ ಪರಲೋಕಸಾಧನ ಮಾಡಿಕೊಂಡರೂ ಫಲವಿಲ್ಲ. ನಿನ್ನನ್ನೇ ಆಶ್ರಯಿಸಿರುವ ನಿನ್ನ ಪತ್ನಿಯರಾದ ನಮ್ಮನ್ನು ನಿನ್ನ ಜೊತೆಯಲ್ಲಿ ಕರೆದುಕೊಂಡು ಹೋಗುವುದೇ ಧರ್ಮವಲ್ಲವೇ? ನಿನ್ನ ಸೇವೆಮಾಡಿಕೊಂಡು ನಿನ್ನಂತರ್ಗತನಾದ ಶ್ರೀಹರಿಯು ಮೆಚ್ಚುವಂತೆ ನಾವೂ ಋಷಿರಮಣಿಯರಂತೆ ವೈರಾಗ್ಯವನ್ನವಲಂಬಿಸಿ ಪರಲೋಕ ಸಾಧನಮಾಡಿಕೊಳ್ಳಲು ನಮಗೂ ಅನುಮತಿ ಇತ್ತು ಉದ್ಧಾರಮಾಡು. ನಮ್ಮನ್ನಗಲಿ ಹೋಗಬೇಡ ಪತಿವಿರಹಿತರಾದ ಸತಿಯರ ಸಂಕಟ ಜನ್ಮಾಂತರದ ದುಷ್ಕರ್ಮದಿಂದ ಒದಗುತ್ತದೆ. ನಮಗೆ ಆಘೋರಸಂಕಟ ಪ್ರಾಪ್ತವಾಗದಂತೆ ರಕ್ಷಿಸು'' ಎಂದು ಸಾಧ್ವೀಮಣಿಯರು ಪ್ರಾರ್ಥಿಸಿ ಪತಿಯನ್ನು ಅನುಸರಿಸಿ ಹೊರಟರು.

ಪಾಂಡುರಾಜನು ಪತ್ನಿಯನ್ನು ಕರೆದುಕೊಂಡು ರಾಜ್ಯಾಡಳಿತದ ಭಾರವನ್ನು ವಿದುರನಿಗೆ ಒಪ್ಪಿಸಿ ರಾಜ್ಯವನ್ನು ತ್ಯಜಿಸಿ ಹೊರಹೊರಟನು. ಪಾಂಡುರಾಜನು ಯೋಗಾಚಾರ್ಯನಾಗಿ ಗೃಹಸ್ಥಾಶ್ರಮದಲ್ಲೇ ಇದ್ದು ಶ್ರೀವೇದವ್ಯಾಸರ ಪಾದಾಶ್ರಯ ಹೊಂದಿ ತನ್ನ ತಪೋಸಾಧನೆಯನ್ನು ದಿನದಿನಕ್ಕೂ ವೃದ್ಧಿಪಡಿಸಿಕೊಂಡು ತನ್ನ ಸತಿಯರೊಡಗೂಡಿ ಅನೇಕ ಋಷಿಮುನಿಗಳ ಬಳಿ ಭಗವಂತನ ಗುಣಕಥನಗಳನ್ನು ಶ್ರವಣಮಾಡುತ್ತ ಅನೇಕ ವಿಧವಾದ ತತ್ತ್ವೋಪದೇಶ ಪಡೆಯುತ್ತಿದ್ದನು. ತ್ರಿಕಾಲದಲ್ಲೂ ಸ್ನಾನಸಂಧ್ಯಾವಂದನಾದಿ ಆನ್ಹಿಕಗಳಿಂದಲೂ ಉಪವಾಸಾದಿ ವ್ರತನಿಯಮಗಳಿಂದಲೂ ವೈಷ್ಣವಧರ್ಮಾಚರಣೆಯಲ್ಲಿ ನಿರತನಾಗಿ ಪವಿತ್ರ ಸಲಿಲರೂಪಳಾದ ವಿಷ್ಣುಪಾದೋದ್ಭವಳಾದ ಭಾಗೀರಥಿ ಬಳಿ ಆನಂದದಿಂದಿದ್ದನು.

## ಶ್ರೀಹರಿ ಪ್ರೇರಣೆಯಿಂದ ಪಾಂಡುವಿಗೆ ಪುತ್ರಾಕಾಂಕ್ಷೆ

ಪಾಂಡುಚಕ್ರವರ್ತಿಯು ನಾರಾಯಣಾಶ್ರಮದಲ್ಲಿ ಅಲಕಾನದಿಯ ದಡದಲ್ಲಿ ಮಡದಿಯೊಡಗೂಡಿ ಮುಕುಂದ ಪಾದಾರವಿಂದ ಮನಸ್ಕನಾಗಿರುವಾಗ ಒಂದುದಿನ ಅಮಾವಾಸ್ಯೆ ಸೋಮವಾರದಂದು ಋಷಿಗಳೆಲ್ಲರೂ ಬ್ರಹ್ಮದೇವರ ದರ್ಶನಕ್ಕಾಗಿ ಹೊರಟರು. ಅವರಸಂಗಡ ಪಾಂಡುವೂ ದೇವರದರ್ಶನಕ್ಕಾಗಿ ಹೊರಡಲು ಋಷಿಗಳು ''ಪಾಂಡುರಾಜಾ! ನೀನು ಅಪುತ್ರವಂತನಾದ್ದರಿಂದ ನಿನಗೆ ಪರಗತಿ ದೊರಕಿಸಿಕೊಡಲಿಕ್ಕಾಗಿಯೂ ಭಗವತ್ಕಾರ್ಯಸಾಧನೆಗಾಗಿಯೂ ದೇವತೆಗಳೇ ನಿನಗೆ ಮಕ್ಕಳಾಗಿ ಅವತರಿಸಲಿದ್ದಾರೆ. ಆದ್ದರಿಂದ ನೀನು ಇಲ್ಲೇ ನಿನ್ನ ತಪಸ್ಸನ್ನು ಇನ್ನೂ ವೃದ್ಧಿಪಡಿಸಿಕೊಂಡು ಮುಂದೆ ಬರಲಿರುವ ಶುಭವನ್ನು ಸ್ವಾಗತಿಸು'' ಎಂದರು.

ಹೀಗೆ ಕೆಲವುದಿನಗಳು ಕಳೆದನಂತರ ಹಸ್ತಿನಾವತಿಯಿಂದ ಧೃತರಾಷ್ಟ್ರರಾಜಪತ್ನಿ ಗಾಂಧಾರಿಯು ಪುತ್ರವತಿ ಆಗಿದ್ದಾಳೆಂಬ ವರ್ತಮಾನ ಕುಂತಿ ಮಾದ್ರಿಯರಿಗೆ ದಾಸಿಯರು ಸುದ್ಧಿತಿಳಿಸಿದರು. ಗಾಂಧಾರಿಯ ಗರ್ಭಗುಹೆಯೊಳಗೆ ಮೂಲಕಲಿ ಅವತಾರಮಾಡಲು ಇಂದ್ರಜಿತು, ಪ್ರಹಸ್ಥ ಮೊದಲಾದ ಕಲಿಪುರುಷರು ನೆಲಸಿದರು. ಪಾಂಡುರಾಜನು ಕುಂತಿಯಿಂದ ಆಗಂಧಾರಿಯು ಗರ್ಭವತಿ ಆಗಿರುವ ವಿಷಯವನ್ನು ಆಕೆಯು ತನ್ನ ಜೀವಿತದ ನೀರಸದ ಭಾವವನ್ನು ವ್ಯಕ್ತಪಡಿಸುತ್ತ ಕುಂತಿ–ಗಾಂಧಾರಿಯ ಸೌಭಾಗ್ಯವನ್ನು ಉತ್ಸಾಹದಿಂದ ತಿಳಿಸುತ್ತಿದ್ದರೆ ಪಾಂಡುರಾಜನಿಗೆ ಹೃದಯವನ್ನು ಇರಿದಂತೆ ವ್ಯಥೆಯಾಯಿತು. ''ಪಾಪ! ರಾಜಪತ್ನಿಯರು ನನ್ನನ್ನೇ ಅನುಸರಿಸಿ ನನ್ನ ಸುಖಕ್ಕಾಗಿಯೇ ಜೀವವನ್ನು ಮುಡಿಪಾಗಿಟ್ಟುಕೊಂಡಿರುವರು. ಸೌಂದರ್ಯವತಿಯರು ಆದಾಗ್ಯೂ ಅಭಾಗಿನಿಯರಂತಿದ್ದಾರೆ. ಮಹಾಪರಾಕ್ರಮಿಯೂ ಸತ್ವಶಾಲಿಯೂ ಆಗಿ ಸಕಲರಾಜರಿಂದಲೂ ಸ್ತುತಿಪಾತ್ರನಾಗಿ ಮೆರೆಯುತ್ತಿರುವ ನನಗೆ ನನ್ನ ಕೈಹಿಡಿದುಬಂದ ಹೆಂಡತಿಯರಿಗೆ ಪತಿಸುಖವನ್ನು ನೀಡಿ ಸಂತೋಷಪಡಿಸುವಷ್ಟು ಸ್ವತಂತ್ರ ನನಗಿಲ್ಲವಾಯಿತು. ಶ್ರೀವಿಷ್ಣು ಒಬ್ಬನೇ ಸರ್ವಸ್ವತಂತ್ರ ಅವನ ಇಚ್ಛೆ ಇಲ್ಲದಿದ್ದರೆ ಮಾನವಾದಿ ಸಕಲರೂ ಒಂದು ತೃಣಕ್ಕಿಂತಲೂ ಕಡೆಗಾಗಬಹುದು'' ಎಂದು ದುಃಖಿಸಿ ಕುಂತಿಯನ್ನು ಕುರಿತು ''ನೀನು ಮಹಾಪತಿವ್ರತೆ. ಹರಿಯಲ್ಲಿ ಶುದ್ಧವಾದ ಭಕ್ತಿ ನಿನಗಿದೆ. ಆದ್ದರಿಂದ ಗುಣಾಧಿಕ್ಯದೇವರನ್ನು ಪುತ್ರಾರ್ಥಿಯಾಗಿ ಪ್ರಾರ್ಥಿಸಿಕೊಂಡು ಪುತ್ರನನ್ನು ಹಡೆದುಕೊಡು'' ಎಂದು ಹೇಳಿದನು.

ಕುಂತಿಯು ಪತಿಯ ಮಾತನ್ನು ಕೇಳಿ ಗುಳೋ ಎಂದು ಅಳತೊಡಗಿದಳು. ಇಂಥ ವೀರಪುರುಷನನ್ನು ನಾವು.

ಪತಿಯನ್ನಾಗಿ ಪಡೆದಿದ್ದರೂ ಅವರಿಂದ ಉದಿಸಿಬಂದ ಒಬ್ಬ ಕುವರನನ್ನು ಕಾಣುವ ಭಾಗ್ಯ ನಮಗಿಲ್ಲವಾಯಿತು. ನಮಗಿಂತಲೂ ನತದೃಷ್ಟರಾರಿದ್ದಾರೆ? ಎಂದು ಹಂಬಲಿಸುತ್ತ,

''ಸ್ವಾಮಿ! ನಿಮ್ಮ ಮಾತೇ ವೇದವಾಕ್ಯವೆಂದು ನಂಬಿರುವ ನನಗೆ ನಿಮ್ಮ ಆಜ್ಞೆಯಂತೆ ನಡೆಯಲು ಒಂದುಮಾರ್ಗ ಈಗ ನೆನಪಿಗೆ ಬಂದಿತು. ನಾನು ಹಿಂದೆ ದುರ್ವಾಸರನ್ನು ಅತ್ಯಂತ ಭಕ್ತಿಯಿಂದ ಸೇವಿಸಿದ್ದಕ್ಕೆ ಅವರು ನನಗೆ ''ಮಗಳೇ! ನಿನಗೆ ಬೇಕಾದಾಗ ನಿನಗೆ ಯಾವ ದೇವರನ್ನು ಬಳಿಗೆಕರೆದು ನೋಡಲು ಇಷ್ಟವಾಗುತ್ತದೋ ಆ ದೇವರನ್ನು ನಾನು ನಿನಗೆ ಉಪದೇಶಿಸುವ ಮಂತ್ರಗಳಿಂದ ಕರೆದರೆ ತಕ್ಷಣ ಬಂದು ನಿನಗೆ ಅನುಗ್ರಹಮಾಡುತ್ತಾರೆ'' ಎಂದು ಐದುಸಿದ್ಧಿ ಮಂತ್ರಗಳನ್ನು ಉಪದೇಶ ಮಾಡಿದ್ದಾರೆ. ಆ ಮಂತ್ರ ಪುನಶ್ಚರಣೆಯಿಂದ ನಮ್ಮ ಅಭಿಲಾಷೆಯನ್ನು ಈಡೇರಿಸಿಕೊಳ್ಳುವುದು ನಿಮಗೆ ಸರಿಎನಿಸಿದರೆ ಆಗಲಿ'' ಎಂದಳು.

ಪಾಂಡುರಾಜನಿಗೆ ಆನಂದವಾಯಿತು. ಸಕಲಮುನಿಗಳನ್ನು ಸೇರಿಸಿ ಕುಂತಿಗೆ ದೂರ್ವಾಸರಿಂದ ಲಭ್ಯವಾದ ವರವನ್ನು ತಿಳಿಸಿ ಎಲ್ಲರ ಒಪ್ಪಿಗೆಯಂತೆ ''ಕುಂತೀ! ದೊಡ್ಡಮಗ ಧರ್ಮವಂತನಾಗಬೇಕು. ಅವನಲ್ಲಿ ಪಿತೃಗುಣ ಇರಬೇಕು. ಆದ್ದರಿಂದ ಯಮಧರ್ಮರಾಜನನ್ನು ಕರೆ'' ಎಂದನು.

ಕುಂತಿಯು ಸಕಲದೇವರ ಸಾಕ್ಷಿಯಾಗಿ ದೇವೋತ್ತಮನಾದ ಶ್ರೀವಿಷ್ಣುವನ್ನು ಧ್ಯಾನಿಸಿ ಪತ್ಯಂತರ್ಗತ ಸ್ವಾಮಿಯ ಆಜ್ಞೆಯಂತೆ ಯಮಧರ್ಮರಾಜನನ್ನು ಮಂತ್ರಪುನಶ್ಚರಣೆಯಿಂದ ಪ್ರಾರ್ಥಿಸಲು ಯಮಧರ್ಮರಾಜನು ಬಂದು ಭಗವತ್ಪ್ರೇರಣಾನುಸಾರ ಕುಂತಿಯನ್ನು ಅನುಗ್ರಹಿಸಿ ಅವಳಲ್ಲಿ ಯಮಧರ್ಮನ ಅಂಶದಿಂದ ಒಬ್ಬಮಗನು ಹುಟ್ಟುತ್ತಾನೆ'' ಎಂದು ಹೇಳಿ ಅದೃಶ್ಯನಾದನು.

ಕುಂತೀದೇವಿಯಲ್ಲಿ ಯಮಧರ್ಮರಾಜನ ಅಂಶಾವತಾರನಾದ ಧರ್ಮರಾಜನು ಹುಟ್ಟಿದನು.

## ಅಸೂಯೆಯಿಂದ ಹೊರಬಂದ ಅಸುರರು

ಧರ್ಮರಾಜನ ಅವತಾರ ಆಗುತ್ತಲೇ ಇತ್ತ ಹಸ್ತಿನಾವತಿಯಲ್ಲಿ ''ಗಾಂಧಾರಿಗೆ ಗೂಢಚಾರರಿಂದ ಕುಂತೀದೇವಿಯು ಮಹತೇಜಸ್ವಿಯಾದ ಪುತ್ರನನ್ನು ದೇವತೆಗಳ ಸಂಪರ್ಕದಿಂದ ಪಡೆದಿದ್ದಾಳೆ'' ಎಂದು ತಿಳಿದಾಕ್ಷಣವೇ ಅಸೂಯೆಯಿಂದ ಆವೇಶಯುಕ್ತಳಾಗಿ ''ನಾನು ವೇದವ್ಯಾಸರ ವರದಿಂದ ಗರ್ಭವನ್ನು ಧರಿಸಿದ್ದು ವ್ಯರ್ಥವಾಯಿತು. ಹೊರಲಾರದ ಭಾರವನ್ನು ಹೊತ್ತು ಪುತ್ರವತಿ ಆಗುತ್ತೇನೆಂಬ ಆಸೆಯಿಂದ ಇದ್ದನನ್ನ ಆಸೆ ಛಿದ್ರವಾಯಿತು'' ಎಂದು ಸಿಟ್ಟಿನಿಂದ ಒಂದು ಕಲ್ಲಿನಿಂದ ಗರ್ಭವನ್ನು ಕುಟ್ಟಿಕೊಂಡಾಕ್ಷಣ ಒಂದು ದೊಡ್ಡ ಪಿಂಡಾಂಡ ಹೊರಬಿದ್ದಿತು. ''ಕುಂತೀದೇವಿ ಎಷ್ಟುಪುಣ್ಯಾತ್ಮಳು. ಶೀಘ್ರಗರ್ಭಧರಿಸಿ ಶೀಘ್ರದಲ್ಲೇ ಪುತ್ರನನ್ನೂ ಹಡೆದು ಸಕಲರನ್ನು ಆನಂದಪಡಿಸುತ್ತಿದ್ದಾಳಂತೆ. ನನಗೆ ಪುತ್ರಪ್ರಾಪ್ತಿ ಇಲ್ಲದಂತಾಯಿತು''

ಎಂದು ಗುಳೋ ಎಂದು ಅಳತೊಡಗಿದಳು. ಆಗ ವೇದವ್ಯಾಸರು ಆಕೆಯಮುಂದೆ ನಿಂತು "ಗಾಂಧಾರೀ! ದುಃಖಪಡಬೇಡ. ನಿನ್ನ ಗರ್ಭವ್ಯರ್ಥವಾಯಿತೆಂದು ತಿಳಿಯಬೇಡ. ನೀನು ಶತಪುತ್ರಮಾತೆಯಾಗುವಿ" ಎಂದು ನೂರೊಂದು ಕೊಡಗಳನ್ನು ತರಿಸಿ ಅದರಲ್ಲಿ ತುಪ್ಪವನ್ನು ತುಂಬಿ ನೂರೊಂದು ಮಾಂಸದ ತುಂಡುಗಳನ್ನು ಅದರಲ್ಲಿ ಹಾಕಿಸಿದರು. ಕೆಲವುದಿನಗಳನಂತರ ಆಕುಂಭದೊಳಗಿಂದ ಪುತ್ರರು ಹುಟ್ಟಿದರು. ನೂರುಜನ ಪುತ್ರರೂ ಒಬ್ಬಳು ಪುತ್ರಿಯೂಹುಟ್ಟಿದರು. ನೂರುಜನರೂ ದುರ್ಯೋಧನಾದಿ ನಾಮಕರಾಗಿ ಪ್ರಬಲರಾದರು. ದುಶ್ಯಲೆ ಎಂಬ ಒಬ್ಬ ಮಗಳೂ ಗಾಂಧಾರಿಯ ಇಷ್ಟದಂತೆ ಹುಟ್ಟಿದಳು.

ಇವರು ಪಾಪಿಗಳು. ಇಂಥವರನ್ನು ವೇದವ್ಯಾಸರು ಏಕೆ ಸೃಷ್ಟಿಸಿದರೆಂದರೆ ಪಾಪಿಗಳು ಹುಟ್ಟಿ ಸಜ್ಜನರನ್ನು ಪೀಡಿಸಿ ಪಾಪ ಅಧಿಕವಾದಾಗ ಭಗವಂತನು ಅವತರಿಸಿ ಸಜ್ಜನ-ಸದ್ಧರ್ಮಗಳನ್ನು ಕಾಪಾಡುವ ಸಂಕಲ್ಪದಿಂದ ಮೂಲಕಲಿ ದುರ್ಯೋಧನನೇ ಮೊದಲಾದವರು ಹುಟ್ಟಿದರು. ದುರ್ಯೋಧನನಲ್ಲಿ ಮುಖ್ಯ ಪ್ರಾಣನ ಸ್ವಲ್ಪ ಅಂಶವಿರುವುದರಿಂದ ಅವನು ಬಲಾಧಿಕನಾಗಿದ್ದನು. ಇಂದ್ರಜಿತನು ದುಶ್ಯಾಸನನಾಗಿಹುಟ್ಟಿದನು. ಅತಿಕಾಯ ವಿಕರ್ಣನಾದನು. ಹೀಗೆ ನೂರುಜನರೂ ದೈತ್ಯಾವೇಶದಿಂದ ಹುಟ್ಟಿದರು. ಅಮಾವಾಸ್ಯಾಭಿಮಾನಿದೇವತೆಯೇ ದುಶ್ಯಲೆ ಎಂಬ ಹೆಸರಿನ ಪುತ್ರಿಯಾದಳು. ಧೃತರಾಷ್ಟ್ರನು ವೈಶ್ಯಕನ್ನಿಕೆಯನ್ನು ವಿವಾಹವಾಗಿದ್ದನು. ಅವಳಲ್ಲಿ ಯುಯುತ್ಸು ಎಂಬ ಪುತ್ರನಾದನು.

ಸಮಸ್ತ ದೈತ್ಯರೂ ಭೂಮಂಡಲದಲ್ಲಿ ಹುಟ್ಟಿದನಂತರ ಶತಶೃಂಗ ಪರ್ವತದಲ್ಲಿದ್ದ ಪಾಂಡುವಿಗೆ ಸಾಕ್ಷಾತ್ತಾಗಿ ವಾಯುದೇವರೇ ಪುತ್ರನಾದ ಸ್ವಾರಸ್ಯವನ್ನು ಆಚಾರ್ಯರು ತಿಳಿಸಿದರು.

ಪಾಂಡುಚಕ್ರವರ್ತಿಯು ಪುತ್ರನ ಧರ್ಮತೇಜಸ್ಸು, ಅವನ ದಯಾ, ಕರುಣ, ಸೌಜನ್ಯ, ನಮ್ರತೆಗಳನ್ನು ನೋಡಿ ಯೋಚಿಸಿದನು. ಧರ್ಮನೆಂಬ ನನ್ನಪುತ್ರನು ಯಾರೊಂದಿಗೂ ವಿರೋಧಮಾಡುವವನಲ್ಲ. ಪರಾಕ್ರಮ ಅವನಲ್ಲಿದ್ದರೂ ಅದನ್ನು ಕ್ಷಾತ್ರಧರ್ಮದಂತೆ ರಣಚಂಡಿಯಾಗಿ ಹನನಮಾಡುವ ಹವ್ಯಾಸದವನಲ್ಲ. ಕ್ಷಮಾಮೂರ್ತಿ.

ಧರ್ಮಸಂರಕ್ಷಣೆ ಆಗಬೇಕಾದರೆ ಸಕಲಗುಣಗಳನ್ನೂ ಸಮಯಕ್ಕೆ ತಕ್ಕಂತೆ ಸತ್ಯಪರಾಕ್ರಮದಿಂದ ನಿಗ್ರಹ ಮಾಡುವಂಥ ಬಲವೀರ್ಯ ಸಾಹಸಗಳ ಪುರುಷಸಿಂಹನಾದ ಮಗನಾಗಬೇಕು. ಪಾಪದಕಿಡಿಗಳನ್ನು ಹೊಸಗಿಹಾಕಿ ಪುಣ್ಯದ ಪ್ರಕಾಶವನ್ನು ಬೆಳಗಿಸುವ ಪುತ್ರನು ಲಭಿಸುವಂತೆ ಒಬ್ಬ ದೇವಶ್ರೇಷ್ಠನನ್ನು ಕರೆದು ಕೀರ್ತಿಪಡೆ. ಆದರೆ ಸರ್ವೋತ್ತಮನಾದ ಶ್ರೀನಾರಾಯಣನನ್ನು ಕರೆಯುವಂತಿಲ್ಲ. ಏಕೆಂದರೆ ನನ್ನ ತಂದೆ ಶ್ರೀವೇದವ್ಯಾಸರೂಪವುಳ್ಳ ನಾರಾಯಣನೇ ಆಗಿರುವನೆಂದು ಲೋಕ ತಿಳಿದಿರುವುದರಿಂದ ಕುಂತಿಯು ಮಗಳ ಸಮಾನಳಾದಳು.

ಸರ್ವವ್ಯಾಪ್ತನಾದ ಸರ್ವಶಬ್ದವಾಚ್ಯನಾದ ಸಕಲಜೀವಿಗಳಲ್ಲೂ ಇದ್ದು ಅವನೇ ಎಲ್ಲವನ್ನು ನಡೆಸುವವನಾದಾಗ್ಯೂ ಅಜ್ಞಾನಿಜನರ ಮೋಹನಾರ್ಥವಾಗಿ ಸ್ವಾಮಿ ಲೌಕಿಕಲೀಲೆಯನ್ನು ತೋರಿಸುವವನಾದ್ದರಿಂದ ನಾರಾಯಣನ ವಿನಃ ಸಕಲದೇವತೆಗಳಲ್ಲಿ ಶ್ರೇಷ್ಠನಾದ ಮಾರುತಿಯನ್ನು ಕರೆದು ಬಲಶೌರ್ಯಸಾಹಸಗಳಲ್ಲಿ ಅಧಿಕನಾದ ಪುತ್ರನನ್ನು ಪಡೆ'' ಎಂದು ಹೇಳಲು, ಕುಂತಿಯು ದೂರ್ವಾಸರ ಮಂತ್ರೋಪದೇಶದಂತೆ ಸಕಲದೇವರಲ್ಲೂ ಅಂತರ್ಗತನಾದ ಶ್ರೀಹರಿಯನ್ನು ಧ್ಯಾನಮಾಡಿ ವಾಯುದೇವರನ್ನು ಪ್ರಾರ್ಥಿಸಿಕೊಂಡಳು.

ವಾಯುದೇವರು ಸ್ವಾಮಿಯು ರುದ್ರದೇವರಿಂದ ಕುಂತಿಗೆ ಉಪದೇಶಮಾಡಿಸಿದಂತೆ ಕುಂತಿಯು ತನ್ನನ್ನು ಕುರಿತು ಕರೆದಾಗ ತನ್ನ ಪ್ರಭುವಿನ ಆಜ್ಞೆಯಂತೆ ಕುಂತಿಯ ಬಳಿಗೆ ಬಂದು ಅವಳಿಗೆ ತನ್ನಂಶ ಸಂಭೂತನಾದ ಮಗನು ಹುಟ್ಟುವಂತೆ ಅನುಗ್ರಹಮಾಡಿದನು.

ಸದಾ ಹರಿಸ್ಮರಣ ನಿರತನಾದವನೂ, ಮಹಾಪರಾಕ್ರಮಿಯೂ, ದೈತ್ಯಸಂಹಾರಕನೂ ಆದ ವಾಯುಕುಮಾರನಿಗೆ ಭೀಮಸೇನನೆಂದು ನಾಮಕರಣಮಾಡಿದರು.

ಒಂದುದಿನ ಕುಂತಿಯು ಭೀಮಸೇನನ್ನು ಎತ್ತಿಕೊಂಡು ಒಂದು ಕಲ್ಲುಬಂಡೆಯ ಮೇಲೆ ಕುಳಿತಿದ್ದಳು. ಸುತ್ತಲೂ ಋಷಿರಮಣಿಯರು ಕುಳಿತು ಶಿಶುವಾದ ಭೀಮಸೇನನ ಸೌಂದರ್ಯ, ಅವನ ಆಟಪಾಠಗಳ ವರ್ಣನೆಮಾಡುತ್ತಿದ್ದರೆ ಅವನ ಗುಣಗಾನದಲ್ಲೇ ಎಲ್ಲರೂ ಮೈಮರೆತಿದ್ದಾಗ ಇದ್ದಕ್ಕಿದ್ದಂತೆಯೇ ಲೋಕವೇ ನಡುಗುವಂತೆ ಸಿಂಹಗರ್ಜನೆ ಕೇಳಿಸಿತು. ಆಗ ಭೀಮಸೇನದೇವರು ಸಂತೋಷದಿಂದ ಜಿಗಿದರೋ ಎನ್ನುವಂತೆ ಮಗುವನ್ನು ಎತ್ತಿಕೊಂಡಿದ್ದ ಕುಂತೀದೇವಿಯ ಕೈಗಳು ಆದುರಿ ಮಗು ಕೆಳಗೆಬಿದ್ದಿತು.

ಅಯ್ಯೋ ಮಗು ಕೆಳಗೆಬಿದ್ದು ಸತ್ತುಹೋಯಿತಲ್ಲಾ ಎಂದು ಎಲ್ಲರೂ ಗಾಬರಿಯಿಂದ ಓಡಿಹೋಗಿ ನೋಡಿದರೆ ಮಗು ತಾನುಬಿದ್ದ ಭಾರಕ್ಕೆ ಒಡೆದು ಶತಛಿದ್ರವಾಗಿದ್ದ ಕಲ್ಲುರಾಶಿಯಲ್ಲಿ ಮಲಗಿ ಆಟವಾಡುತ್ತಿತ್ತು. ಆಗ ಋಷಿಗಳು ಈ ಪರ್ವತಕ್ಕೆ ಶತಶೃಂಗವೆಂಬ ನಾಮವನ್ನು ಭೀಮಸೇನನು ಅನ್ವರ್ಥಗೊಳಿಸಿದನು'' ಎಂದು ಹೊಗಳಿ ಆನಂದದಿಂದ ಹಿಗ್ಗಿದರು.

ಭಗವತ್ಕಾರ್ಯಸಾಧನೆಗಾಗಿಯೇ ಅವತರಿಸಿದ ಭೀಮಗರ್ಜನೆಗೇ ಸಕಲ ರಾಕ್ಷಸರೂ ರಕ್ತಕಾರಿ ಸಾಯುತ್ತಾರೆಂದಮೇಲೆ ಭೀಮನು ಕಾಡುಮೃಗದ ಗರ್ಜನೆಗೆ ಭಯಪಟ್ಟು ಬೀಳುವವನೂ ಅಲ್ಲ. ವಜ್ರಕಾಯನ ದೇಹ ಕಲ್ಲಿಗೆ ತಗಲಿ ಹತವಾಗುವುದೂ ಇಲ್ಲವೆಂಬುದು ಪ್ರಮಾಣಪೂರ್ವಕವಾಗಿ ಆಚಾರ್ಯರು ಆನಂದದಿಂದ ತಿಳಿಸುತ್ತಿದ್ದರು.

ಭೀಮನು ಎಲ್ಲರಿಗೂ ಮೆಚ್ಚಿನ ಮನೋನ್ಮಣಿಯಾಗಿರಲು ಒಂದುದಿನ ಪಾಂಡುರಾಜನು ಕುಂತಿಯನ್ನು ಕುರಿತು ''ಕುಂತೀ! ಧರ್ಮಪೀಠವನ್ನು ಏರಲಿಕ್ಕೆ ಯೋಗ್ಯನಾದವನು ಧರ್ಮರಾಯ. ದಿಗ್ವಿಜಯಶೂರನೂ ಅಮಿತಬಲಾಢ್ಯನೂ ಭೀಮನು. ರಾಜನೀತಿಜ್ಞನಾಗಿ ದಕ್ಷತೆಯಿಂದ

ರಾಜ್ಯಭಾರಮಾಡಿ ಮೂರುಲೋಕಕ್ಕೂ ಕೀರ್ತಿಯನ್ನು ಪಸರಿಸಿ ಮೆರೆಯುವ ದೇವೇಂದ್ರನಂತಹ ಒಬ್ಬಮಗನನ್ನು ಪಡೆ'' ಎಂದು ಹೇಳಿದಾಗ ಕುಂತಿ ಆಗಲೂ ಪತಿಯಮಾತಿಗೆ ಪ್ರತಿಹೇಳದೆ ದೇವೇಂದ್ರನನ್ನು ಪ್ರಾರ್ಥಿಸಿಕೊಂಡಾಗ ಸುರಪತಿಯು ಕುಂತಿಯ ಅಭಿಲಾಷೆಯಂತೆ ಇಂದ್ರನ ಅಂಶದಿಂದ ನರಾವೇಶಯುಕ್ತನಾದ ಅರ್ಜುನನೆಂಬ ಮಗನನ್ನು ಕರುಣಿಸಿದನು.

ದೇವರಾಜನಂತೆ ಮೆರೆವ ಲಕ್ಷಣವಂತ ಮಗನನ್ನು ನೋಡಿ ಪಾಂಡು ಹಿಗ್ಗಿದನು. ಒಬ್ಬರಿಗಿಂತಲೂ ಒಬ್ಬರು ಸತ್ವಸಾಮರ್ಥ್ಯಶಾಲಿಗಳಾದ ಮಕ್ಕಳು ಪಾಂಡುರಾಜನ ಕಣ್ಣಿಗೆ ಹಬ್ಬದಂತಿದ್ದರು. ಯೋಗಾಚಾರ್ಯನಾಗಿ ವಿರಕ್ತನಾಗಿದ್ದ ಪಾಂಡು ಈಗ ಸಂಸಾರದ ಸುಖಸಾರದಲ್ಲಿ ಮುಳುಗಿ ಮೋಹಪಾಶಕ್ಕೆ ಸಿಕ್ಕುಬಿದ್ದನು.

## ಕುಂತಿಯ ಸುಜ್ಞಾನ

ಒಂದು ದಿನ ಮಕ್ಕಳು ಮುದ್ದಾಗಿ ತಮ್ಮ ತಮ್ಮ ಯೋಗ್ಯತಾನುಗುಣವಾಗಿ ಕ್ರೀಡೆ ತೋರಿಸುತ್ತಿದ್ದರೆ. ಪಾಂಡು ವಿನಮನಸ್ಸಿನಲ್ಲಿ ಇವರೆಲ್ಲರಿಗಿಂತಲೂ ಅಧಿಕನಾದ ಇನ್ನೊಬ್ಬಮಗನನ್ನು ಪಡೆಯಬೇಕೆಂಬ ಆಸೆ ಅಂಕುರಿಸಿತು. ''ಕುಂತಿ: ನನಗೆ ಇನ್ನೊಬ್ಬ ದೇವತಾಸ್ವರೂಪನಾದ ಮಗ ಬೇಕೆನ್ನಿಸುತ್ತಿದೆ ಯಾರಾದರೂ ಸುಂದರ ಮೂರ್ತಿಯಾದ ದೇವರನು ಕರೆದು ಕಂದನನು ಕರುಣಿಸುವಂತೆ ಕೇಳಿಕೊ'' ಎಂದನು.

ಕುಂತಿಯು ಅನೇಕ ತಪಸ್ವಿಗಳ ಸನಿಹದಲ್ಲಿ ಧರ್ಮಸೂಕ್ಷ್ಮವನ್ನು ಅನುಷ್ಠಾನಮಾಡಿದ ಸುಜ್ಞಾನಿಯಾಗಿದ್ದಳು. ಪತಿಗೆ ಸತಿಯು ಎಲ್ಲ ವಿಧದಲ್ಲೂ ಅನುಕೂಲಳಾಗಿರಬೇಕು. ಆದರೆ ಧರ್ಮ ಮಾರ್ಗಕ್ಕೆ ಕುಂದು ಬರುವಂತಾದರೆ ಪತ್ನಿಯು ತನ್ನ ಪತಿಯನ್ನು ಧರ್ಮದ ದಾರಿಗೆ ಖಂಡಿಸಿಯಾದರೂ ಕರೆದೊಯ್ಯಬೇಕೆಂಬ ಭಾವದಿಂದ ಮಹಾರಾಜ! ನಿಮ್ಮ ಮಾತಿನಂತೆ ನಡೆದು ಮೂರು ಮಕ್ಕಳನ್ನು ಪಡೆದೆನು ಧರ್ಮವಿರೋಧವಲ್ಲವೆಂಬ ನಂಬಿಕೆಯಿಂದ ದೈವೇಚ್ಛೆಯಂತೆ ನಡೆದನು. ಈಗ ಮತ್ತೆ ನಾಲ್ಕನೆಯ ದೇವರನ್ನು ಕರೆದು ಮಗನನ್ನು ಹಡೆದರೆ. ಅದು ದೇವತೆಗಳೇ ಆಗಿದ್ದರೂ ನನಗೆ ವ್ಯಭಚಾರದ ಪಾಪ ತಟ್ಟುತ್ತದೆ. ನನ್ನ ದುರಾಸೆಗೆ ದೇವತೆಗಳೂ ಅಗ್ರಹಗೊಂಡು ಶಾಪ ಕೊಡುತ್ತಾರೆ. ನಿನ್ನ ಬಂಧಕದ ಚಪಲಜ್ಞಾನವು ಪಾಪಕ್ಕೆ ಸಾಧನವಾದೀತು? ವಿಷಯಾಸಕ್ತರಿಗೆ ಆಸೆ ಕೊನೆಮೊದಲಿಲ್ಲದಂತೆ ವೃದ್ಧಿ ಯಾಗುತ್ತಲೇ ಇರುತ್ತದೆ. ಅಂತಹವರಿಗೆ ಭಗವಂತನ ವಿಸ್ಮರಣೆ ಉಂಟಾಗಿ ವಿನಾಶಕ್ಕೆ ಕಾರಣವಾಗುತ್ತದೆ. ಭಗವಂತನ ವಿಸ್ಮರಣೆಗಿಂತಲೂ ದು:ಖ ಮತ್ತೊಂದಿಲ್ಲ ಎಂದು ಜ್ಞಾನೋಪದೇಶ ಮಾಡಿ ಪತಿಯನ್ನು ಎಚ್ಚರಿಸಿದಳು.

## ಮಾದ್ರೀದೇವಿಯ ಪ್ರಾರ್ಥನೆ

ಧರ್ಮ-ಭೀಮ-ಅರ್ಜುನ ಮೂರು ಮಕ್ಕಳು ದಿನ ದಿನಕ್ಕೂ ಬೆಳೆದು ತಮ್ಮ ಬುದ್ಧಿ ಚಾತುರ್ಯದಿಂದ ಎಲ್ಲರ ಮನಸ್ಸನ್ನೂ ಆನಂದಪಡಿಸುತ್ತಿದ್ದರು. ಕುಂತೀದೇವಿಯು ಮಕ್ಕಳ ಲಾಲನೆ

ಪೋಷಣೆಗಳ ಸಂಭ್ರಮದಿಂದ ಸಂತೋಷವಾಗಿರುವುದನ್ನು ನೋಡಿದ ಮಾದ್ರೀದೇವಿಗೆ ತನ್ನ ಬರಡು ಜೀವಿನ ಬೇಸರವೆನಿಸಿತು. ತಾಯ್ತನದ ಸಿರಿಗಿಂತಲೂ ಮಿಗಿಲಾದ ಸಿರಿ ಇಲ್ಲ ಎಂದು ಕೊಂಡಳು ದು:ಖದಿಂದ ಅಳಲುತೊಡಿಗಿದಳು ಪಾಂಡು ಮಾದ್ರಿಯನ್ನು ಕುರಿತು ದು:ಖಕ್ಕೆ ಕಾರಣಕೇಳಿದರೆ, ಮಹಾರಾಜಾ! ಅಕ್ಕನು ಪುಣ್ಯವತಿ ಮಾಣಿಕ್ಯದಂತಹ ಮಕ್ಕಳನ್ನು ಪಡೆದು ಅವರ ಬಾಲ ಲೀಲೆಗಳನ್ನು ನೋಡಿ. ಆನಂದ ಪಡುವ ಸೌಭಾಗ್ಯ ಪಡೆದಳು.

ಅವಳ ಸಂಭ್ರಮ ಸಂತೋಷಗಳನ್ನು ನೋಡಿ ನನ್ನು ಬರಡು ಬಾಳಿಗೆ ದು:ಖ ಪಡುತ್ತಿದ್ದೇನೆ. ಕುಂತೀದೇವಿಗೆ ನೀವು ಹೇಳಿ ದೂರ್ವಾಸರಿಂದ ಆಕೆ ಉಪದೇಶಗೊಂಡ ಸಿದ್ಧಿಮಂತ್ರವನ್ನು ನನಗೂ ಉಪದೇಶಕೊಡಿಸಿ ತಾಯ್ತನದ ಸುಖ ದೊರಕಿಸಿಕೊಡಿರಿ ಎಂದು ಕೇಳಿಕೊಂಡಳು. ಪಾಂಡುವಿಗೆ ಮಾದ್ರಿಯು ಮಕ್ಕಳಿಗಾಗಿ ಹಂಬಲಿಸಿ ದು:ಖ ಪಡುವುದನ್ನು ಕಂಡು ಮರುಕದಿಂದ ತನ್ನ ದೌರ್ಭಾಗ್ಯವನ್ನು ಹಳಿದುಕೊಂಡು ಆಕೆಯನ್ನು ಸಮಾಧಾನಪಡಿಸಿ ಕಳುಹಿಸಿದ ನಂತರ ಕುಂತಿಯನ್ನು ಕುರಿತು ಕುಂತಿ! ನೀನು ಇನ್ನೊಬ್ಬ ಮಗನನ್ನು ಹಡೆದುಕೊಡು ಎಂದು ಕೇಳಿದರೆ ನೀನು ಒಪ್ಪಲಿಲ್ಲ ಅದು ದೋಷವೆಂದು ಹೇಳಿದಿ ಮಾದ್ರಿಗೆ ಮಕ್ಕಳಿಲ್ಲ ಆಕೆಗೂ ಸ್ತ್ರೀ ಸಹಜ ಸ್ವಭಾವದಂತೆ ಆಸೆ-ಆಕಾಂಕ್ಷೆಗಳು ಇರುತ್ತವೆ ಅವಳಿಗಾದರೂ ಒಂದು ಮಗು ಆಗುವಂತೆ ನಿನಗೆ ಋಷಿಯಿಂದ ಲಭ್ಯವಾದ ಮಂತ್ರವನ್ನು ಒಂದನ್ನು ಕೊಟ್ಟು ಅವಳ ಆಸೆ ಈಡೇರಿಸು ಎಂದನು

ನನಗೆ ಮಾದ್ರಿಯ ಮೇಲೆ ವಾತ್ಸಲ್ಯಕ್ಕಿಂತಲೂ ಅವಳ ಪ್ರಾಯ ಅವಳ ಸೌಂದರ್ಯಗಳ ನನ್ನ ಸೌಭಾಗ್ಯಕ್ಕೆ ಯಾವಾಗ ಧಕ್ಕೆ ತರುತ್ತದೋ ಎಂಬ ಚಿಂತೆಯೇ ನನಗೆ ಅಧಿಕವಾಗಿದೆ ನಿನ್ನ ಮಾತನ್ನು ಮೀರ ಬಾರದೆಂದು ಅವಳಿಗೂ ಒಂದು ಸಂತಾನ ಮಂತ್ರವನ್ನು ಉಪದೇ ಮಾಡುತ್ತೇನೆ. ಯೋಗ್ಯದೇವತೆಯನ್ನು ಕರೆದು ಸಂತಾನ ಸುಖ ಪಡೆಯಲಿ ಎಂದು ಹೇಳಿದಳು

ಮಾದ್ರಿಯನ್ನು ಕುರಿತು ನೀನು ನಾನು ಉಪದೇಶಕೊಡುವ ಮಂತ್ರ ಪ್ರಭಾವದಿಂ ನಿನಗೆ ಇಷ್ಟರಾದ ಉತ್ತಮ ದೇವರನ್ನೂ ಕರೆದು ಮಗನನ್ನು ಪಡೆ. ಆದರೆ ಮತ್ತೊಂ ಮಂತ್ರೋಪದೇಶವನ್ನು ಬೇಡ ಬಾರದು ಮತ್ತೊಬ್ಬಮಗ ಬೇಕೆಂಬ ಆಸೆ ನಿನಗೆ ಬರಬಾರ ಎಂದು ಮೊದಲೇ ತಿಳಿಸಿ ಮಂತ್ರೋಪದೇಶ ಮಾಡಿದಳು.

## ಮಾದ್ರಿಗೆ ಅಶ್ವಿನಿದೇವತೆಗಳ ಅನುಗ್ರಹ

ಮಾದ್ರಿಯು ಕುಂತಿಯಿಂದ ಮಂತ್ರೋಪದೇಶ ಪಡೆದ ನಂತರ ಅವಳಲ್ಲಿ ಲೋಭತ ಲೇಪವಾಯಿತು. ಕುಂತೀ ಒಂದೇ ಮಂತ್ರೋಪದೇಶಪಡೆದು ಒಬ್ಬನೇ ಮಗನನ್ನು ಪಡೆಯಬೇ ಎಂದು ಆಜ್ಞೆಮಾಡಿದ್ದಾಳೆ.

ಒಂದೇ ಮಂತ್ರದಲ್ಲಿ ಇಬ್ಬರು ದೇವತೆಗಳು ಬಂದು ನನಗೆ ಇಬ್ಬರು ಪುತ್ರರು ಜನಿಸು ಉಪಾಯವನ್ನೇ ಮಾಡುತ್ತೇನೆ ಎಂದುಕೊಂಡಳು. ಅಶ್ವಿನೀದೇವತೆಗಳನ್ನು ಕರೆದರೆ ಅವರಿಬ್ಬ

ಎರಡು ರೂಪದವರಾದರೂ ಒಂದೇ ಜೀವದಂತಿರುವರು. ಇಬ್ಬರಿಗೂ ವಿಯೋಗವಿಲ್ಲ ಒಂದೇ ಮಂತ್ರದಿಂದ ಕರೆದರೂ ಇಬ್ಬರೂ ಬರುತ್ತಾರೆ.

ಇವರಿಗೆ ಪ್ರತ್ಯೇಕವಾಗಿ ಮಂತ್ರೋಪದೇಶ ಬೇಕಾಗಿಲ್ಲ ಎಂಬ ಯುಕ್ತಿಯಿಂದ ಅಶ್ವಿನಿದೇವತೆಗಳನ್ನು ಕರೆದಳು. ಅವರ ಅನುಗ್ರಹದಿಂದ ಮಾದ್ರಿಗೆ ಒಂದೇ ಬಾರಿಗೆ ಎರಡು ಮಕ್ಕಳ ಫಲ ದೊರಕಿತು.

ಆದರೂ ಮಾದ್ರಿಗೆ ತೃಪ್ತಿ ಆಗಲಿಲ್ಲ. ಕುಂತಿ ಮೂರು ಮಕ್ಕಳನ್ನು ಪಡೆದಳು ನನಗೂ ಇನ್ನೊಬ್ಬ ಮಗನಾದರೆ ಆಕೆಗೆ ಸರಿಸಮಾನಲಾಗಬಹುದೆಂದು ಪ್ರತಿಷ್ಠೆ ಅವಳಲ್ಲಿ ಮೂಡಿತು.

ಪಾಂಡುವಿನ ಬಳಿಗೆ ಬಂದು ನನಗೆ ಮತ್ತೊಬ್ಬಮಗನಾಗುವಂತೆ ನೀನು ಕುಂತಿಯ ಮನಸ್ಸನ್ನೂ ಒಲಿಸಿಕೊಂಡು ಒಪ್ಪಿಸಿ ಇನ್ನೊಂದು ಮಂತ್ರೋಪದೇಶಕೊಡಿಸಿರಿ ಎಂದು ಕಾಡಿ ಬೇಡಿದಳು.

ಕುಂತಿ ! ಮಾದ್ರಿಯು ಮತ್ತೊಬ್ಬ ಮಗನಾಗ ಬೇಕೆಂದು ಬಹಳ ರೀತಿಯಲ್ಲಿ ಹಲುಬಿ ಹಂಬಲಿಸುತ್ತಿದ್ದಾಳೆ. ನಿನಗೆ ತಂಗಿ ಎಂಬ ವಾತ್ಸಲವಿಟ್ಟು ಆಕೆಯ ಮನೋರಥ ಈಡೇರಿಸು ಎಂದು ಪಾಂಡು ಹೇಳಿದಾಗ ಕುಂತಿಗೆ ಮಾದ್ರಿಯ ಸಂಕುಚಿತ ಸ್ವಭಾವ ತಿಳಿದು ಬಹಳ ಖೇದವಾಯಿತು. ನಿನ್ನ ಮನಸ್ಸಿಗೆ ನೋವಾಗಬಾರದೆಂಬ ಭಾವದಿಂದ ಮಾದ್ರಿಗೆ ಮಂತ್ರೋಪದೇಶಕೊಟ್ಟೆನು. ನೀನು ಉತ್ತಮ ದೇವರನ್ನು ಕರೆದು ಒಬ್ಬ ಮಗನನ್ನು ಮಾತ್ರ ಹಡೆಯಬೇಕೆಂದು ಹೇಳಿದೆನು.

ಆಕೆ ನನ್ನ ಮಾತಿಗೆ ಗೌರವ ಕೊಡಲಿಲ್ಲ ನನ್ನ ಸರಿಸಮಾನಳಂತೆ ತಾನೂ ಮೂರು ಜನ ಪುತ್ರರನ್ನೇ ಪಡೆಯಬೇಕೆಂಬ ಅಸುಯೆಯಿಂದ ಉತ್ತಮ ದೇವತೆಯನ್ನು ಕರೆಯದೆ ಧರ್ಮಾ ಅನಿಲ ಇಂದ್ರರಿಗಿಂತಲೂ ಕೆಳಕಕ್ಷಿಯ ದೇವರನ್ನು ಕರೆದು ಎರಡು ಮಕ್ಕಳನ್ನು ಹಡೆದು ತನ್ನ ಪ್ರತಿಷ್ಠೆ ವ್ಯಕ್ತಪಡಿಸಿದ್ದಾಳೆ. ಅಷ್ಟೇ ಅಲ್ಲದೆ ನನ್ನಂತೆಯೇ ತಾನೂ ಮೂರು ಮಕ್ಕಳನ್ನೇ ಪಡೆಯಬೇಕೆಂಬ ಅಹಂಭಾವದಿಂದ ಮತ್ತೋಬ್ಬಮಗ ಬೇಕೆನ್ನುತ್ತಿದ್ದಾಳೆ. ಆದ್ದರಿಂದ ಆಕೆ ಮಂತ್ರೋಪದೇಶಕ್ಕೆ ಯೋಗ್ಯಳಲ್ಲ ಎಂದು ಹೇಳಿದಳು. ದೂರ್ವಾಸರಿಂದ ತನಗೆ ಐದು ಮಂತ್ರಗಳು ಲಭಸಿದ್ದರೂ ಈಗ ನಾವು ಆಮಂತ್ರದ ಫಲಕ್ಕಾಗಿ ಯಾವ ದೇವರನ್ನೂ ಕರೆದರೂ ಕಾಮಕ್ಕಾಗಿ ಕರೆದಂತಾಗಿ ದೋಶಕ್ಕೊಳಗಾಗುವೆವು ಎಂದು ಹೇಳಿ ಸಿಕ್ಕಿನಿಂದ ಬಿಡಿಸಿಕೊಂಡಳು.

ಪತಿಯ ಅಂತರ್ಗತನಾದ ಶ್ರೀ ನಾರಾಯಣನಿಗೆ ಐದು ಮಂತ್ರಗಳಿಂದಲೂ ತಾನು ಪಡೆದಿರುವ ಫಲವನ್ನು ನಿರ್ವಂಚನೆಯಿಂದ ಅರ್ಪಣೆ ಮಾಡಿ ರುದ್ರಾಂಶ ಸಂಭೂತ ದೂರ್ವಾಸರಿಗೆ

ಮನಸಾ ಕೃಂತಾಂಜಲಿಯನ್ನು ಅರ್ಪಿಸಿದಳು. ಪಾಂಡು ರಾಜನಿಗೆ ದೇವತಾ ಮೂರ್ತಿಗಳ ಅನುಗ್ರಹದಿಂದ ಕುಂತಿಯಲ್ಲಿ ಲಭಿಸಿದ ಮಕ್ಕಳ ಅವತಾರ ಕಥೆ ಬಹಳ ಪುಣ್ಯಕರವಾದದ್ದು ಅವರ ಗುಣ ಕೀರ್ತನೆಗಳನ್ನು ಮಾಡಿದವರನ್ನು ಸ್ಮರಿಸಿದರೂ ಪೂಣ್ಯಾಧಿಕ್ಯ.

ವಾಯುದೇವರು ಸರ್ವ ವ್ಯಾಪ್ತನಾದ್ದರಿಂದ ಒಬ್ಬೊಬ್ಬರಲ್ಲಿ ಒಂದೊಂದು ವಿಶೇಷ ಸಾನಿಧ್ಯದಿಂದಿದ್ದನು. ಧರ್ಮರಾಜನಲ್ಲಿ ಸೌಮ್ಯರೂಪದಿಂದಿದ್ದನು. ಅರ್ಜುನನಲ್ಲಿ ಪರಾಕ್ರಮ ರೂಪದಲ್ಲಿದ್ದನು. ಸಹ ದೇವನಲ್ಲಿ ನೀತಿ ರೂಪದಲ್ಲಿದ್ದನು. ಹೀಗೆ ಮುಖ್ಯ ಪ್ರಾಣಾಂತರ್ಗತ ಶ್ರೀಮನ್ನಾರಾಯಣನು ದೂರ್ವಾಸ ಋಷಿಗಳ ಮಂತ್ರಗಳನ್ನು ಕುಂತೀದೇವಿಗೆ ಸಿದ್ಧಿಸುವಂತೆ ಅನುಗ್ರಹಿಸಿ ಐದು ಜನ ಇಂದ್ರರೂ ಭೂಮಿಯಲ್ಲಿ ಅವತರಿಸಿ ಬಂದರು.

ಉತ್ತಮ ಮನ್ವಂತರದಲ್ಲಿ ಇಂದ್ರ ಪದವಿಯಲ್ಲಿದ್ದ ಸತ್ಯ ಜಿತನೆಂಬುವನು ಧರ್ಮ ರಾಜನಾದನು. ಸ್ವಾರೂಚಿಷ ಮನ್ಮಂತರದಲ್ಲಿ ರೋಚನ ಎಂಬ ಮುಖ್ಯ ಪ್ರಾಣನು ಇಂದ್ರ ಪದವಿ ಆಳಿದ್ದನು. ಆತನೇ ಈಗ ಭೀಮಸೇನನಾಗಿ ಹುಟ್ಟಿದನು. ರೈವತ ತಾಪಸ ಮನ್ವಂತರಗಳಲ್ಲಿ ತ್ರಿಶಂಖು ಮತ್ತು ವಿಭು ಎಂಬುವರು ಇಂದ್ರ ಪದವಿ ಪಡೆದಿದ್ದರು. ಅವರು ಈಗ ನಕುಲ ಸಹದೇವರಾಗಿ ಅವತರಿಸಿದರು. ಚಾಕ್ಷುಷ ಮನ್ವಂತರದಲ್ಲಿ ಧೃಮ್ನನೆಂಬುವನು ಇಂದ್ರನಾಗಿದ್ದನು ಆ ಇಂದ್ರನೇ ಈಗ ಅರ್ಜುನನಾದನು.

ಹೀಗೆ ಅವತರಿಸಿದ ದೈವಾಂಶ ಸಂಭೂತರಾದ ಐದು ಮಂದಿ ಮಕ್ಕಳಿಗೂ ಪಾಂಡುರಾಜನು ಸಕಲ ಮುನೀಶರ ಸಮ್ಮುಖದಲ್ಲಿ ಅವರ ಅಭಿಪ್ರಾಯದಂತೆ ಜಾತ ಕರ್ಮ ನಾಮಕರಣಾದಿಗಳನ್ನು ವೇದೋಕ್ತ ವಿಧಿಯಂತೆ ನೆರವೇರಿಸಿದನು.

ಪ್ರಸಿದ್ಧರಾದ ದೇವತೆಗಳೈವರೂ ಪಾಂಡು ಪುತ್ರರೆನಿಸಿ ಕೊಂಡು ನರ ಲೋಕದಲ್ಲಿ ಭಗವತ್ಕಾರ್ಯ ಸಾದನೆಗಾಗಿ ಶ್ರೀ ಹರಿಪಾದಪದ್ಮದಲ್ಲಿ ಭ್ರಮರಗಳೋಪಾದಿಯಲ್ಲಿ ಸುಜ್ಞಾನ ಮಧುಪಾನ ಮತ್ತರಾಗಿರಲು ಅವತರಿಸಿದರು.

## ಪಾಂಡು ಮಹಾರಾಜನ ಮರಣ

ಶತಶೃಂಗ ಪರ್ವ ಶ್ರೇಣಿಯಲ್ಲಿ ಹುಟ್ಟಿದ ಪಾಂಡುಕುವರರು ಋಷಿಮುನಿಗಳ ಆಶ್ರಯದಲ್ಲಿ ಬೆಳೆದು ದೊಡ್ಡವರಾದರು. ಅರ್ಜುನನಿಗೆ ಹದಿನಾಲ್ಕನೆಯ ವರ್ಷದ ಹುಟ್ಟಿದ ಹಬ್ಬದಂದು ಕುಂತೀ ದೇವಿಯು ಬ್ರಾಹ್ಮಣ ಸಮಾರಾಧನೆ ದೇವತಾರಾಧನೆಗಳನ್ನೂ ಮಾಡಬೇಕೆಂದು ಆಸೆ ಪಟ್ಟಳು.

ಕುಂತೀ ದೇವಿಗೆ ಪತಿ ಪುತ್ರರ ಜವಬ್ದಾರಿ ಅಷ್ಟೇ ಅಲ್ಲದೆ ಮಾದ್ರಿಯು ತನ್ನ ಸೌಂದರ್ಯದ

ಆಕರ್ಷಣೆಯಿಂದ ಪತಿಯ ವಿಪತ್ತಿಗೆ ಎಲ್ಲಿ ಕಾರಣಳಾಗುವಳೋ ಎಂಬ ಚಿಂತೆ ಅವಳನ್ನು ಕಾಡುತ್ತಲೇ ಇತ್ತು. ಸದಾ ಅವಳನ್ನು ಪತಿಯ ಕಣ್ತಪ್ಪದೆ ಕಾಯುತ್ತಿದ್ದಳು.

ಭಗವ ದಿಕ್ಕು ತಪ್ಪಿಸಬಾರದೇಕೇ? ಎಂದು ತನ್ನ ಭವಿಷ್ಯದ ಚಿಂತೆಯನ್ನೇ ಮರೆತು ಮಹಾ ಸಂಭ್ರಮದ ಗಡಿಬಿಡಿಯಲ್ಲಿದ್ದು ಬಿಟ್ಟಳು.

ಮಾದ್ರಿ, ಹರೆಯದ ಬಾಲಕಿಯಲ್ಲ. ಅವಳಿಗೂ ಅಳಿವು ಉಳಿವುಗಳ ಯೋಚನೆ ಮಾಡುವಷ್ಟು ತಿಳುವಳಿಕೆ ಇತ್ತು. ಆದರೂ ಆದಿನ ಕುಂತಿಯ ಆಧೀನದಲಿಲ್ಲವೆಂಬ ಹೆಮ್ಮೆಯಿಂದ ಆಶ್ರಮದಿಂದ ಹೊರಭಾಗಕ್ಕೆ ಬಂದಳು. ಅರಳಿದ ಪುಷ್ಪಗಳನ್ನು ನೋಡಿ ಹಿಗ್ಗಿದಳು ವಿವಿಧ ವರ್ಣದ ಪುಷ್ಪದಿಂದ ಅನೇಕ ಬಗೆಯ ಆಭರಣಗಳನ್ನು ಮಾಡಿಕೊಂಡು ಅಲಂಕರಿಸಿಕೊಂಡಳು.

ಅವಳ ಸೌಭಾಗ್ಯದ ಅಂತ್ಯಕ್ಕಾಗಿಯೇ ಪುಷ್ಪಾಲಂಕಾರದ ಇಚ್ಛೆಯಾಯಿತೋ ಎನ್ನುವಂತೆ ಶೃಂಗಾರದ ಸಿರಿದೇವಿಯಂತಾಗಿ ನವಿಲಿನಂತೆ ನರ್ತನ ಮಾಡುತ್ತ ಕೋಗಿಲೆಯಂತೆ ಹಾಡುತ್ತ ಸ್ವೇಚ್ಛೆಯಿಂದಿರುವುದನ್ನು ಪಾಂಡು ನೋಡಿದನು. ಅವನ ಚಿತ್ತ ಸ್ಥೈರ್ಯ ಸಡಿಲ ಗೊಂಡಿತು. ಯೋಗನಿಷ್ಠನಾಗಿ ತಪಸ್ಸೇ ಶಾಶ್ವತಸುಖದ ಸಂಪತ್ತು ಎಂದು ಭಾವಿಸಿ ಪ್ರಪಂಚಿಕ ಕ್ಷಣಿಕ ಸುಖದ ಚಾಪಲ್ಯವಿಲ್ಲದೆ ಬ್ರಹ್ಮಚರ್ಯವನ್ನು ಸಂತೋಷದಿಂದಲೇ ಪಾಲಿಸುತ್ತಿದ್ದ ರಾಜನಿಗೆ ಮಾದ್ರಿಯನ್ನು ನೋಡಿದಾಕ್ಷಣವೇ ಇಂದ್ರಿಯನಿಗ್ರಶಕ್ತಿ ಬತ್ತಿ ಹೋಯಿತು. ಒಬ್ಬ ಸಾಮಾನ್ಯ ಕಾಮುಕನಂತೆ ಪತ್ನಿಯನ್ನು ತೆಕ್ಕೆಯಲ್ಲಿ ಸೇರಿಸಿಕೊಂಡು ಮರಣವನ್ನಪ್ಪಿದನು. ಮಾದ್ರಿ ಗಟ್ಟಿಯಾಗಿ ರೋಧಿಸತೊಡಗಿದಳು.

ಋಷಿಗಳೆಲ್ಲರೂ ಓಡಿ ಬಂದು ನೋಡಿದರೆ ಮಹಾರಾಜರು ಮರಣ ಶಯ್ಯೆಯಲ್ಲಿ ಮಲಗಿದ್ದನು.

ಪಾಂಡುರಾಜನು ಧರ್ಮಾತ್ಮನಾಗಿದ್ದನು. ಯಾವ ಸಮಯದಲ್ಲೂ ಆತನು ದೈವ ದ್ರೋಹ ಮಾಡಿದವನಲ್ಲ. ಅರಿಯದೆ ಬ್ರಹ್ಮಹತ್ಯ ನಡೆಯಿತು. ಅವನಿಗೆ ಅರಿಯದಂತೆ ಭಗವದ್ಭಕ್ತಿರಿಗೆ ಚಿತ್ತಕ್ಷೋಭ ಉಂಟಾಗುವಂತಾಯಿತು. ಶ್ರೀ ಹರಿಸಂಕಲ್ಪದ್ದಂತೆ ಅವನ ಆವತಾರ ಸಮಾಪ್ತಿ ಆಗ ಬೇಕಾಯಿತು. ದೇವತಾಮೂರ್ತಿಗಳನ್ನೇ ಮಕ್ಕಳನ್ನಾಗಿ ಪಡೆದು ಪುಣ್ಯ ಲೋಕ್ಕೆ ಪ್ರಯಾಣ ಮಾಡಿದನು.

ಮಾದ್ರಿಯು ತಾನೇ ಅಪರಾಧ ಮಾಡಿ ಪತಿಯ ಮರಣಕ್ಕೆ ಕಾರಣಳಾದನೆಂದು ಗೊಳೋ ಎಂದು ಅತ್ತಳು. ಕುಂತಿ ಬಂದು ನೋಡಿದಳು. ತಾನು ಏನು ಆಗ ಬಾರದೆಂದು ಹಗಲಿರಳೂ ಹಂಬಲಿಸಿ ಕಾಯುತ್ತಿದ್ದೆನೋ ಅದೇ ನನ್ನ ಕಣ್ತಪ್ಪಿಸಿ ಬಂದು ನನ್ನ ಪತಿಯನ್ನು ಕೊಂಡೊಯ್ದಿತು. ಮೃತ್ಯು ನಮ್ಮ ಆಧೀನವಲ್ಲ ಎಂದು ಸಮಾಧಾನತಂದು ಕೊಂಡರೂ ಮಾದ್ರಿ ಇದಕ್ಕೆ ಕಾರಣಳಾದಳೆಂಬ ದುಃಖ ಉಮ್ಮಳಿಸಿತು ಮಾದ್ರಿಯನ್ನು ಕೆಂಗಣ್ಣಿನಿಂಧ ನೋಡಿದಳು. ನೀನೇ

ಈಅನರ್ಥಕ್ಕೆ ಮೂಲ ಕಾರಣಳಾದಿ. ಪತಿಯು ಜೀವದಿಂದಿರುವಾಗಲೇ ನನ್ನ ಸಂಗಡ ಛದ್ಮಮಾಡಿ ನನ್ನ ಸರಿಸಮಾನಳಾಗಬೇಕೆಂಬ ಪ್ರತಿಷ್ಠೆಯಿಂದ ಒಂದೇ ಮಂತ್ರದಲ್ಲಿ ಇಬ್ಬರು ದೇವತೆಗಳನ್ನೂ ಕರೆದು ಎರಡು ಮಕ್ಕಳನ್ನು ಪಡೆದು ತಾರತಮ್ಯವನ್ನು ತಪ್ಪಿ ಉಪಾಸನೆಮಾಡಿದ ದೈವ ದ್ರೋಹದ ಪಾಪ ಮಾಡಿರುವಿ ನಿನ್ನ ದೋಷದಿಂದ ಪತಿಯು ಸ್ಥೈರ್ಯ ಸಡಿಲಗೊಳ್ಳುವಂತಾಯಿತು. ನೀನೂ ಕೆಟ್ಟಿ ನನ್ನನ್ನೂ ಕೆಡೆಸಿದಿ. ಹೆಂಗಸಿಗೆ ಮಾಂಗ್ಯಲಭಾಗ್ಯ ಕಳೆದ ಮೇಲೆ ಇದ್ದರೂ ಸತ್ತಂತೆಯೇ ಸರಿ. ತಂದೆಯನ್ನು ಕಳೆದುಕೊಂಡ ನನ್ನ ಮಕ್ಕಳು ಅರಸರಾಗಬೇಕಾದವರು ಅನಾಥರಂತೆ ವನಚಾರಿಗಳಾಗುವಂತಾಯಿತು. ಮಾದ್ರಿ ನಿನಗಿನ್ನೂ ಮಕ್ಕಳ ಜವಾಬ್ದಾರಿ ಇರುವುದರಿಂದ ನೀನು ಸಹಗಮನ ಮಾಡಬೇಡ ನಾನು ದೊಡ್ಡವಳು ಆದ್ದರಿಂದ ನನಗೆ ಸಹಗಮನಕ್ಕೆ ಅಪ್ಪಣೆ ನೀಡಿರಿ ಎಂದು ಋಷಿಗಳೆಲ್ಲರ ಸಮಕ್ಷಮದಲ್ಲಿ ಹೇಳಿದಳು. ಋಷಿಗಳು ಕುಂತೀದೇವಿಗೆ ಸಮಾಧಾನ ಮಾಡಿ ತಡೆದು ಅಮ್ಮಾ ನೀನು ಪಾತಿವ್ರತ್ಯದ ಧರ್ಮದಂತೆ ಮಾತನಾಡಿ ನಿನ್ನ ನಿರ್ಧಾರ ತಿಳಿಸಿರುವುದು ಧರ್ಮವಾದರೂ ಮಕ್ಕಳ ಸಂರಕ್ಷಣೆಗೆ ಸಮರ್ಥಳಾದವಳು ನೀನೇ ಆಗಿರುವುದರಿಂದ ನೀನು ಸಹಗಮನ ಮಾಡುವುದು ಸರಿಯಲ್ಲ. ಮಾದ್ರಿಯು ಪತಿಯ ಮರಣಕ್ಕೆ ನಿಮಿತ್ತಕಾರಣಗಳಾದ್ದರಿಂದ ಆ ಪ್ರಾಯಶ್ಚಿತ್ತಾರ್ಥವಾಗಿ ಆಕೆಯೇ ಸಹಗಮನ ಮಾಡುವುದು ಧರ್ಮ ಮಾದ್ರಿಯು ಹಿರಿಯಳಾದ ನಿನ್ನ ಮಾತನ್ನು ವಿರೋಧಿಸಿ ಸಾಮಾನ್ಯದೇವರ ಉಪಾಸನೆಮಾಡಿರುವುದೂ ಒಂದು ದೊಡ್ಡತಪ್ಪೆ ಆಗಿರುವುದರಿಂದ ಸಹಗಮನದ ಪ್ರಾಯಶ್ಚಿತ್ತದಿಂದ ದೇಹ ಮುಕ್ತಳಾಗಿ ಪತಿಯಲೋಕ ಸೇರಲಿ ಎಂಬ ಅಂತಃ ಕರುಣದಿಂದ ಮಾದ್ರಿಗೆ ಸಹಗಮನಕ್ಕೆ ಒಪ್ಪಿಗೆ ಕೊಟ್ಟುನೀನು ಮಕ್ಕಳ ಸಂರಕ್ಷಣೆಯ ಕರ್ತವ್ಯ ನಿಷ್ಠೆಯಿಂದ ಪತ್ಯಂತರ್ಗತ ಸರ್ವೋತ್ತಮ ಹರಿಗೆ ಪ್ರೀತಳಾಗು ಎಂದು ಹೇಳಿದರು.

ಆಗ ರಾಜಧರ್ಮದ ಪ್ರಕಾರ ಪಾಂಡುವಿಗೆ ದಹನಸಂಸ್ಕಾರ ನಡೆಸಿದರು. ಮಾದ್ರೀದೇವಿಯಯು ಗಂಡನೊಡನೆ ತಾನು ಪ್ರಾಣಾರ್ಪಣೆ ಮಾಡಿ ಪತಿಲೋಕವನ್ನು ಸೇರಿದಳು. ಪಾಂಡುಕುವರರು ವಿಧಿಪ್ರಕಾರ ತಂದೆಗೆ ಉತ್ತರ ಕ್ರಿಯೆಗಳನ್ನು ನಡೆಸಿದರು. ವೇದವ್ಯಾಸರಿಗೆ ಪುತ್ರನೆನಿಸದವನೂ ಧರ್ಮಾನಿಲೇಂದ್ರಾಶ್ವಿನೀ ದೇವತೆಗಳಿಗೆ ತಂದೆ ಎನಿಸಿದವನೂ ಆದ ಪುಣ್ಯಾತ್ಮನಾದ ಪಾಂಡುರಾಜನು ಪ್ರಾರಬ್ಧಕರ್ಮವ ಶಾತ್ ಸ್ತ್ರೀ ಸಂಗದಿಂದ ಮರಣ ಹೊಂದಿದ್ದರೂ ಅದು ದೋಷವಾಗದೆ ಮೋಕ್ಷಾಧಿಕಾರಿ ಆದನು.

ರಾಜರ್ಷಿಯಾದ ಪಾಂಡು ಸತ್ತ ನಂತರ ಪಂಚಪಾಂಡವರು ರಾಜತೇಜಸ್ವಿನಿಂದ ಕ್ಷತ್ರಿಯವೀರರಂತೆ ನಡೆಯುವ ಅವರ ಲಕ್ಷಣಗಳನ್ನು ಕಂಡ ಋಷಿವರರೆಲ್ಲರೂ ಅಪರೋಕ್ಷ ಜ್ಞಾನದಿಂದ ಅವರ ಭವಿಷ್ಯವನ್ನರಿತು ಮುಂದೆ ಇವರಿಂದಲೇ ಶ್ರೀ ಕೃಷ್ಣನು ದೈತ್ಯ ಸಂಹಾರ ಮಾಡಿಸಿ ಭೂ ಭಾರ ಹರಣ ಕಾರ್ಯ ಮಾಡಲಿದ್ದಾನೆ ಅದಕ್ಕಾಗಿಯೇ ಇವರ ಅವತಾರವಾಗಿದೆ ಎಂದು ತಿಳಿದು ಕುಂತಿಗೆ ಹೇಳಿದರು.

## ಗಜಪುರಿಗೆ ಪಾಂಡು ಪುತ್ರರ ಪ್ರವೇಶ

ತಾಯೇ! ನಿನ್ನ ಮಕ್ಕಳು ಮಹಾರಾಜರಾಗಿಯೂ ಪರಾಕ್ರಮಶೂರರಾಗಿಯೂ ಮೆರೆಯತಕ್ಕವರು ಇಂಥ ರಾಜಲಕ್ಷಣದ ದೇವತಾ ಮೂರ್ತಿಗಳು ವನಚಾರಿಗಳಾಗಬಾರದು. ಭಗವತ್ಸಂಕಲ್ಪದಂತೆ ನಾವೀಗ ಇವರನ್ನು ಹಸ್ತಿನಾವತಿಗೆ ಕರೆದುಕೊಂಡು ಹೋಗಿ ರಾಜರ ವಶಕ್ಕೆ ಒಪ್ಪಿಸುವುದು ನಮ್ಮ ಕರ್ತವ್ಯವಾಗಿದ್ದರಿಂದ ನೀನು ಅದಕ್ಕೆ ಸಮ್ಮತಿಸಿ ನಿನ್ನ ಮಕ್ಕಳ ಮುಂದಿನ ಭವಿಷ್ಯ ಸುಂದರವಾಗುವಂತೆ ಮಾಡಬೇಕು. ಎಂದು ಹೇಳಿ ಹಸ್ತಿನಾವತಿಗೆ ಋಷಿಗಳೆಲ್ಲರೂ ಸೇರಿ ಕುಂತಿಯನ್ನು ಪಾಂಡವರನ್ನು ಕರೆದುಕೊಂಡು ಹೋಗಿ ಭೀಷ್ಮಾದಿಗಳಿಗೆ ಹೇಳಿಕಳುಹಿಸಿದರು. ಪಾಂಡು ಪುತ್ರರನ್ನು ಕುಂತಿಯ ಸಂಗಡ ಕರೆದುಕೊಂಡು ಋಷಿಗಳೆಲ್ಲರೂ ಬಂದಿರುವರೆಂದು ತಿಳಿದಾಕ್ಷಣವೇ ಭೀಷ್ಮಾದಿಗಳೆಲ್ಲರೂ ಋಷಿಗಳಿಗೆ ಯೋಗ್ಯವಾದ ಮಂಗಲ ವಸ್ತುಗಳೊಡನೆ ಹೊರಟುಬಂದು ಸ್ವಾಗತಿಸಿ ಸತ್ಕಾರಗಳಿಂದ ಉಪಚರಿಸಿದರು.

ನಂತರ ಭೀಷ್ಮನಿಗೂ ಮತ್ತು ಧೃತರಾಷ್ಟ್ರನಿಗೂ ಋಷಿಗಳು ಪಾಂಡುರಾಜನ ಸಕಲ ವೃತ್ತಾಂತಗಳನ್ನು ತಿಳಿಸಿ ಕುಂತಿಯ ಐದು ಮಂದಿ ಪಾಂಡುಪುತ್ರರನ್ನು ತೋರಿಸಿ ''ಧೃತರಾಷ್ಟ್ರ ಮಹಾರಾಜರು ಪಾಂಡುಮಹಾರಾಜನಿಂದ ಕುಂತಿ ಉಪದೇಶಗೊಂಡ ಮಂತ್ರದಿಂದ ಯಮಧರ್ಮನಿಂದ ಧರ್ಮರಾಜನೂ, ವಾಯುದೇವರಿಂದ ಭೀಮನೂ, ದೇವೇಂದ್ರನಿಂದ ಅರ್ಜುನನೂ ಅವತರಿಸಿದರು. ಮಾದ್ರಿಯಲ್ಲಿ ಅಶ್ವಿನಿದೇವತೆಗಳ ವರಾನುಗ್ರಹದಿಂದ ನಕುಲಸಹದೇವರೂ ಹುಟ್ಟಿದ್ದಾರೆ. ಇದಕ್ಕೆ ಸಕಲ ದೇವತೆಗಳೂ ಋಷಿಮುನಿಗಳೂ ಸಾಕ್ಷಿಗಳಾಗಿದ್ದಾರೆ.

ಈ ಮಕ್ಕಳು ಕುಂತಿಯನ್ನು ಸಂರಕ್ಷಣೆ ಮಾಡುವ ಹೊಣೆ ನಿಮ್ಮದಾಗಿದೆ'' ಎಂದು ಹೇಳಿ ಅವರ ಕೈಗಳನ್ನು ಅವರ ಗೈಗಿತ್ತು ಒಪ್ಪಿಸಿದರು. ಧೃತರಾಷ್ಟ್ರನು ತಮ್ಮನ ಪರಾಕ್ರಮವನ್ನು ಸತ್ಯಸಂಧತೆ ಸೌಜನ್ಯವನ್ನೂ ಸ್ತುತಿ ಮಾಡುತ್ತ ದು:ಖದಿಂದ ಗೋಳಾಡಿದನು.

ಭೀಷ್ಮನು ಕಣ್ಣೀರು ಸುರಿಸುತ್ತ ದು:ಖದಿಂದ ಅಯ್ಯೋ ದೇವರೇ ತಮ್ಮನಾದ ವಿಚಿತ್ರವೀರ್ಯ ಸತ್ತು ಹೋದ ಅವನ ಮಕ್ಕಳನ್ನಾದರೂ ನೋಡಿಕೊಂಡಿರೋಣ ಎಂದರೆ ಅವನೂ ಸತ್ತುಹೋದ. ನನ್ನ ಮುಂದೆ ಚಿಕ್ಕವರೆಲ್ಲರೂ ಒಬ್ಬೊಬ್ಬರೇ ಎಲ್ಲರೂ ಹೋದರು ನಾನು ಮಾತ್ರ ಬದ್ದುಕಿದ್ದೇನೆ ಎಂದು ದು:ಖದಿಂದ ಪರಿತಪಿಸುವಾಗ ವಿದುರನು ಭೀಷ್ಮನನ್ನು ಸಮಾಧಾನಪಡಿಸುತ್ತ ''ಪಾಂಡು ಚಕ್ರವರ್ತಿ ಮರಣಹೊಂದಿದನೆಂದು ದು:ಖಪಡುವುದು ಬೇಡ ಅವನ ಸ್ಥಾನದಲ್ಲಿ ಅವನ ಮಕ್ಕಳಿದ್ದಾರೆ. ಭಗವದನುಗ್ರಹದಿಂದ ಐದು ಜನ ಮಕ್ಕಳು ಮಡದಿಯರಾದರೂ ಸುರಕ್ಷಿತರಾಗಿ ಬಂದು ಸೇರಿದರೆಂದು ಸಂತೋಷಪಟ್ಟು ದು:ಖವನ್ನು ಮರೆಯಬೇಕು'' ಎಂದು ಹೇಳಿದನು. ದುರ್ಯೋಧನಾದಿಗಳೆಲ್ಲರೂ ಪ್ರಬಲನಾದ ಪಾಂಡು ಸತ್ತನೆಂದೂ, ರಾಜ್ಯ ಇನ್ನು ತಮ್ಮ ಕೈವಶವಾಯಿತೆಂದು ಸಂತೋಷದಿಂದ ಕುಣಿದಾಡುತ್ತಿದ್ದಾಗ ಪಾಂಡವರು ಐದು ಜನ

ಬಂದಿರುವುದು ನೋಡಿ ಎಲ್ಲರೂ ಸೇರಿ ಈಗ ಪಾಂಡವರು ರಾಜ್ಯಕ್ಕೆ ಅನಧಿಕಾರಗಳೆಂದು ಪ್ರಚಾರಮಾಡಲಿಕ್ಕೆ ಅವರ ಮೇಲೆ ವ್ಯಭಿಚಾರದ ಆರೋಪ ಹೊರಸಿ ಓಡಿಸಿ ಬಿಡೋಣವೆಂದು ಕುಯುಕ್ತಿ ಮಾಡಿದರು.

ಶಕುನಿಯೇ ಮೊದಲಾದ ಪಾಪಿಗಳೆಲ್ಲರೂ ಸೇರಿ ನೀಚ ವಾಕ್ಯಗಳಿಂದ ಪಾಂಡವರನ್ನು ದೂಶಿಸುತ್ತ ಇವರು ಖಂಡಿತವಾಗಿಯೂ ಶಾಪ ಗ್ರಸ್ಥನಾದ ಪಾಂಡು ಚಕ್ರವರ್ತಿಗೆ ಹುಟ್ಟಿದ ಮಕ್ಕಳಲ್ಲ. ಇವರು ಕುಂತೀ ದೇವಿಯು ದುರಾಚಾರದಿಂದ ಹಡೆದ ಮಕ್ಕಳಾದ್ದರಿಂದ ಇವರಿಗೆ ರಾಜ್ಯ ಹಕ್ಕಿಲ್ಲ. ಅನಧಿಕಾರಿಗಳಾದ ಇವರನ್ನು ರಾಜ್ಯದಲ್ಲಿರಿಸಿಕೊಳ್ಳದೆ ಕಾಡಿಗೆ ಕಲುಹಿಸುವುದು ಲೋಕ ಸಮ್ಮತ ಎಂದು ಹೀನ ವಚನಗಳಿಂದ ದೂರುತ್ತಿದ್ದರು.

ಆಗ ಮುಖ್ಯ ಪ್ರಾಣಾಂತರ್ಗತ ಸ್ವಾಮಿ ಅದೃಶ್ಯ ವಾಣಿಯಲ್ಲಿ ಎಲ್ಲರೂ ತಿಳಿಯುವಂತೆ ಮಾತನಾಡಿದನು.

ಸತ್ಯ ವಾದಿಗಳು ಧರ್ಮಸ್ವರೂಪಿಗಳಾದಪಾಂಡವರನ್ನು ದುರಾತ್ಮರು ದೂಶಿಸುತ್ತಲಿದ್ದಾರೆ. ಸಕಲ ಋಷಿ ಸಮೂಹದವರೂ ತಿಳಿಸಿದಂತೆ ಇವರು ದೈವಾನುಗ್ರಹಸಂಪನ್ನರು. ಕುಂತಿಯು ಪತಿಯ ಆಜ್ಞೆಯಂತೆ ಎಲ್ಲಾ ಋಷಿ ಮುನಿಗಳ ಅನುಮತಿ ಪಡೆದು ರುದ್ರಾಂತರ್ಗತ ಶ್ರೀಹರಿಯು ಶ್ರೀ ದೂರ್ವಾಸ ಮುನಿಗಳಿಂದ ಉಪದೇಶಹೊಂದಿದ ಮಂತ್ರಗಳಿಂದ ಯಮಧರ್ಮರಾಜನಿಂದ ಧರ್ಮರಾಯನನ್ನೂ ಮುಖ್ಯ ಪ್ರಾಣದೇವರಿಂದ ಬೀಮಸೇನನನ್ನೂ ದೇವೇಂದ್ರನಿಂದ ಅರ್ಜುನನ್ನೂ ಪಡೆದಿದ್ದಾಳೆ. ಪತಿ ಆದ ಪಾಂಡುವಿನ ಅಪ್ಪಣೆಯಂತೆ ಮಾದ್ರಿಗೂ ಮಂತ್ರೋಪದೇಶ ಮಾಡಿ ಆಕೆ ಅಶ್ವಿನಿ ದೇವತೆಗಳಿಂದ ನಕುಲ ಸಹದೇವರನ್ನು ಪಡೆದಳು. ಇವರು ಐದು ಮಂದಿಯೂ ದೇವತಾಸ್ಪರ್ಶ ಸಂಭೂತರು ಇವರೇ ಹಸ್ತಿನಾವತಿ ಆಳಲಿಕ್ಕೆ ತಕ್ಕ ಯೋಗ್ಯತೆ ಪಡೆದು ಬಂದಿದ್ದಾರೆ ಇವರಿಗೆ ಶ್ರೀಕೃಷ್ಣನ ಶೀರಕ್ಷೆ ಪೂರ್ಣರಾಗಿರುವುದರಿಂದ ದುರುಳರ ಭಯವಿಲ್ಲದೆ ನಿರ್ಭಯದಿಂದ ದೈತ್ಯನಾಶ ಮಾಡಬಲ್ಲರು ಎಂದು ಆಕಾಶವಾಣಿ ಆಗುತ್ತಿದ್ದಂತೆಯೇ ವೇದವ್ಯಾಸರು ಎಲ್ಲರ ಮುಂದೆ ಕಾಣಿಸಿಕೊಂಡು ''ಎಲ್ಲರೂ ಕೇಳಿರಿ ಇವರು ಐದು ಮಂದಿಯೂ ಪಾಂಡು ರಾಜನ ಸತ್ಪುತ್ರರೆಂಬುದಕ್ಕೆ ಅನುಮಾನವಿಲ್ಲ ಧರ್ಮಾತ್ಮನಾದ ಪಾಂಡುವಿಗೆ ದೈವತಾಂಶ ಸಂಭೂತರನ್ನು ಶ್ರೀಹರಿಯೆ ಕರುಣಿಸಿ ಅವನ ವಂಶದ ಕೀರ್ತಿ ಕಲಶ ಬೆಳಗುವವರಂತೆ ಮಾಡಿದ್ದಾನೆ'' ಎಂದು ಘಂಟಾಘೋಷವಾಗಿ ಎಲ್ಲರಿಗೂ ತಿಳಿಸಿ ಪಾಂಡವರನ್ನು ಕೈ ಹಿಡಿದು ಕರೆದುಕೊಂಡು ಹೋಗಿ ಪಾಂಡು ಚಕ್ರವರ್ತಿಯ ಭವ್ಯವಾದ ಅರಮನೆಯಲ್ಲಿ ಉತ್ತಮಾಸನದಲ್ಲಿ ಕೂಡಿಸಿ ತಾಯಂದಿರೊಡಗೂಡಿ ನೀವೂ ಇಲ್ಲೇ ಇರಬೇಕು ಎಂದು ಆಜ್ಞೆ ಮಾಡಿ ಎಲ್ಲರಿಂದಲೂ ಅವರಿಗೆ ಸನ್ಮಾನ ಕೊಡಿಸಿದರು.

ಇದನ್ನು ನೋಡಿದ ದುರ್ಯೋಧನಾದಿ ಕೌರವರೆಲ್ಲರಿಗೂ ಅಸೂಯೆ ಆವರಿಸ್ಸಿತು. ಪಾಂಡವರ ತೇಜಸ್ಸು ಅವರ ಕ್ಷಾತ್ರ ಲಕ್ಷಣಗಳನ್ನು ನೋಡಿದರೆ ಸಾಮಾನ್ಯರಲ್ಲವೆಂದು ಕಾಣುತ್ತಿದೆ.

ಇವರನ್ನು ಹೇಗಾದರೂ ಮಾಡಿ ನಾಶ ಪಡಿಸುವ ಉಪಾಯವನ್ನೇ ಮಾಡಬೇಕು ಎಂದು ಮಾತನಾಡಿಕೊಂಡು ಅವರನ್ನು ದ್ವೇಶಿಸತೊಡಗಿದರು.

## ಬಲ ಭೀಮನ ಲೀಲೆ

ರಾಜಪುತ್ರರು ನೂರು ಜನರೂ ಸ್ವೇಚ್ಛೆಯಾಗಿ ಸುಖ ಬೋಗದ ಲೋಲುಪರಾಗಿ ಮೆರೆಯುತ್ತಿದ್ದರು. ವೇದವ್ಯಾಸರು ತಮ್ಮ ಶಿಷ್ಯರಾದ ಕೃಪಾಚಾರ್ಯರ ಬಳಿ ವಿದ್ಯಾಭ್ಯಾಸಕ್ಕಾಗಿ ವ್ಯವಸ್ಥೆಮಾಡಿದರು. ಅನಧ್ಯಯನದ ದಿನದಲ್ಲಿ ಎಲ್ಲರೂ ವಿರಾಮವಾಗಿ ಆಟಕ್ಕೆ ಹೋಗುತ್ತಿದ್ದರು. ಆಟದಲ್ಲೂ ಎರಡು ಪಕ್ಷ ಆಯಿತು ಕೌರವರು ಒಂದು ಪಕ್ಷ ಪಾಂಡವರು ಒಂದು ಪಕ್ಷ. ಯಾವಾಗಲೂ ಭೀಮನು ಕಲಿಪುರುಷನಾದ ದುರ್ಯೋಧನನನ್ನು ಅನೇಕ ಬೆಗಯಲ್ಲಿ ಪೀಡಿಸಿ ಮಟ್ಟ ಹಾಕುತ್ತಿದ್ದನು. ಪಾಪಿಗಳ ಪಾಪ ವೃದ್ಧಿಯಾಗಲೆಂದು ಕೆರಳಿಸಿ ಕೆದಕುತ್ತಿದ್ದನು.

ಫಲಭರಿತವಾದ ವೃಕ್ಷವನ್ನೇರಿ ಎಲ್ಲರೂ ಚೆಲ್ಲಾಟದಿಂದ ಹಣ್ಣು ತಿಂದು ಸೊಕ್ಕಿ ಕುಣಿದಾಡುತ್ತಿದ್ದರೆ ಭೀಮ ಮರದ ಬಳಿಗೆ ಬಂದು ಒಂದು ಬಾರಿ ಮರವನ್ನು ತನ್ನ ಬಲ ಬಾಹುಗಳಿಂದ ಅಲ್ಲಾಡಿಸಿದರೆ ಸಾಕು ಬಳ ಬಳನೆ ಹಣ್ಣುಗಳ ಜೊತೆಗೆ ಎಲ್ಲರೂ ಉರುಳಿ ಬೀಳುತ್ತಿದ್ದರು. ಕೈಕಾಲುಗಳಲ್ಲಿ ರಕ್ತ ಸುರಿಯುತ್ತ ಘಾಯದಿಂದ ನೊಂದ ಬಾಲಕರು ಅಳುತ್ತಿದ್ದರೆ ಭೀಮನು ಹಣ್ಣುಗಳನ್ನು ಬಾಚಿ ಬಾಯಿಗೆ ತುಂಬಿಕೊಂಡು ಹಾಸ್ಯ ಮಾಡಿ ನಗುತ್ತಿದ್ದನು. ಕೌರವ ಬಾಲಕರು ಮೈಮನಸ್ಸು ಎರಡನ್ನು ಇರಿದು ಕೊಲ್ಲುತ್ತಿದ್ದ ಬೀಮನನ್ನು ಏನುಮಾಡಲೂ ಆಗದೆ ಒಳಗೊಳಗೇ ಕುದಿಯುತ್ತಿದ್ದರು.

ಅವರೆಲ್ಲ್ಲರೂ ಒಂದು ಕಡೆನಿಂತರೆ ಬೀಮನೊಬ್ಬನೆ (ಒಂದು ಕಡೆಗೆ ನಿಂತು) ಪಂದ್ಯದ ಆಟಗಳನ್ನು ಆಡುತ್ತಿದ್ದರು. ಎಳೆದಾಟ, ಈಜಾಟ ಮುಷ್ಠಿಯುದ್ಧ ಎಲ್ಲದರಲ್ಲೂ ಭೀಮನಿಗೆ ಜಯ ಕೈಕಾಲು ಮುರಿದುಕೊಂಡು ಸುರಿವ ರಕ್ತದಿಂದ ಅಳುತ್ತ ಅರಮನೆಗೆ ಹೋಗುತ್ತಿದ್ದರು ಕೌರವರು.

ಹೀಗೆ ಬಾಲ ಲೀಲೆಗಳಿಂದಲೇ ಅಸುರರಿಗೆ ಶ್ರೀಹರಿ ಮುಖ್ಯ ಪ್ರಾಣರಲ್ಲಿ ದ್ವೇಶ ವೃದ್ಧಿಯಾಗಲೆಂಬ ಭಾವದಿಂದ ತಮಸ್ಸಿಗೆ ಯೋಗ್ಯರಾದ ಅಸುರರನ್ನು ಅನೇಕ ಬಗೆಯಲ್ಲಿ ಕೆರಳಿಸಿ ದ್ವೇಶಾಸೂಯೆಗಳನ್ನು ಅವರಿಗೆ ವೃದ್ಧಿ ಪಡಿಸುತ್ತಿದ್ದನು.

## ಘೋರ ವಿಷವೂ ಭೀಮನಿಗೆ ಮಣಿಯಿತು.

ಅಸುರ ಪಕ್ಷದವರು ಎಲ್ಲರೂ ಒಟ್ಟಾಗಿ ಬಂದು ರಹಸ್ಯ ಸಭೆ ಸೇರಿ ಪಾಂಡವರನ್ನು ಕೊಲ್ಲುವ ಯೋಚನೆ ಮಾಡಿದರು. ನಮಗೆ ಭಾರಿ ಶತೃಗಳೆಂದರೆ ಭೀಮ ಮತ್ತು ಅರ್ಜುನ ಇವರಿಬ್ಬರನ್ನೂ

ಹೇಗಾದರೂ ಮಾಡಿ ಕೊಂದರೆ ದರ್ಮರಾಯ ನಕುಲ ಸಹದೇವರನ್ನು ಸೆರೆಮನೆಗೆ ಹಾಕಿ ನಾವು ನಮ್ಮ ಇಷ್ಟಾನುಸಾರ ಅಧಿಕಾರ ಮೆರೆಸಬಹುದು.

ಬೀಮಸೇನನನ್ನು ಕೊಲ್ಲಬೇಕಾದರೆ ಉಲ್ಬಣ ವಿಷ ಪ್ರಯೋಗ ಆಗಬೇಕು. ಎಂದು ದುರ್ಯೋಧನನು ಸಲಹೆ ನೀಡಿದಾಗ ಶಕುನಿಯು ಅಹುದು ಅದೇ ಒಳ್ಳೆಯ ಉಪಾಯ ನನ್ನ ಬಳಿ ಅಪ್ಪಟವಾದ ಸ್ವಲ್ಪವೂ ಕಲಬೆರಿಕೆ ಇಲ್ಲದ ವಿಷವಿದೆ. ಸಮುದ್ರ ಮಥನ ಕಾಲದಲ್ಲಿ ಉತ್ಪತ್ತಿಯಾದ ವಿಷ ಅದು ಆ ವಿಷದ ಘಾಟಿನಿಂದಲೇ ಎಷ್ಟೋ ಜೀವಿಗಳು ನಾಶ ಹೊಂದಿದವು. ಆ ಕಾಲಕೂಟ ವಿಷವನ್ನು ಶ್ರೀಹರಿಯ ಆಜ್ಞೆಯಂತೆ ಮುಖ್ಯ ಪ್ರಾಣನು ಪಾನ ಮಾಡಿದ್ದನು. ಸ್ವಲ್ಪ ಭಾಗವನ್ನು ಉಳಿಸಿ ಅದರ ಸಾರವನ್ನು ಹಿಂಡಿದಾಗ ಸಿಡಿದ ವಿಷ ಬಿಂದುಗಳಿಂದ ವಿಷಜಂತುಗಳು ಅಂದರೆ ಚೇಳು, ಜರಿ ಮೊದಲಾದ ಅನೇಕ ಬಗೆಯ ವಿಷ ಕ್ರಿಮಿಗಳು ಉತ್ಪತ್ತಿ ಆದವು. ನಂತರ ಮುಖ್ಯ ಪ್ರಾಣನು ವಿಷಸಾರವನ್ನೂ ಹಿಂಡಿ ಉಳಿದ ಸ್ವಲ್ಪ ಭಾಗವನ್ನು ರುದ್ರ ದೇವರಿಗೆ ಪಾನ ಮಾಡಲು ಕೊಟ್ಟರು ಅದನ್ನು ಸಹಿಸಲಾರದ ಶಿವನೂ ಮೂರ್ಛೆ ಹೋದನೆಂದರೆ ಆ ವಿಷದ ಪ್ರಬಾವ ಎಷ್ಟೆಂದು ನೀನೇ ಯೋಚಿಸು ಆ ವಿಷಪಾನ ಮಾಡಿ ಶಿವನು ನೀಲಕಂಠನೆಂದು ಕರಸಿಕೊಂಡನು. ಶುಕ್ರಾ ಚಾರ್ಯರ ಬಳಿ ಇದ್ದ ವಿಷವನ್ನು ನಾನು ತಂದು ಜೋಪಾನ ಮಾಡಿಟ್ಟಿದ್ದೇನೆ. ಅದನ್ನು ಭೀಮನಿಗೆ ತಿಂಡಿಯಲ್ಲಿ ಬೆರಸಿ ತಿನ್ನಿಸಿದರೆ ಅವನು ಆತಕ್ಷಣವೇ ಸಾಯುತ್ತಾನೆ ಎಂಬು ಮಾತನಾಡಿಕೊಂಡು ಪಾಕಶಾಲೆಯ ಪರಿಚಾರಿಕರಿಗೂ ರಹಸ್ಯವಾಗಿ ತಿಳಿಸಿದರು.

ಇದನ್ನು ಯುಯುತ್ಸು ತಿಳಿದು ಭೀಮನಿಗೆ ಎಲ್ಲಾ ವಿಚಾರವನ್ನೂ ತಿಳಿಸಿ ಎಚ್ಚರ ಕೊಟ್ಟನು. ಭೀಮನಿಗೆ ವಿಷದ ಭಯವೇ? ನೀವಾರೂ ನನ್ನ ಬಗ್ಗೆ ಚಿಂತಿಸಬೇಡಿರಿ ನಾನು ಏನು ಮಾಡಿದರೂ ಸಾಯತಕ್ಕವನಲ್ಲ ಎಂದು ಹೇಳಿ ಸಹೋದರರಿಗೆ ಇಂದಿನ ಭೋಜನವನ್ನು ನೀವಾರೂ ಸೇವಿಸ ಬೇಡಿರಿ. ಅದೆಲ್ಲವನ್ನೂ ನಾನೊಬ್ಬನೇ ತಿನ್ನುತ್ತೇನೆ ಎಂದು ಹೇಳಿ ಎಲ್ಲರ ಊಟವನ್ನೂ ತಾನೊಬ್ಬನೇ ತಿಂದು ಆನಂದದಿಂದಿದ್ದನು. ದುರುಳರು ಭೀಮ ವಿಷವನುಂಡಿದ್ದಾನೆ ಈಗಾಗಲೇ ಸತ್ತಿರಬಹುದು ಎಂದು ಸಂತೋಷದಿಂದ ನೋಡಲು ಬಂದರೆ ಭೀಮನು ಪುಷ್ಕಳವಾದ ಊಟವನ್ನುಂಡು ತಾಂಬೂಲವನ್ನು ಸವಿದು ವಿಶ್ರಾಂತಿ ತೆಗೆದುಕೊಳ್ಳುತ್ತಿರುವಂತೆ ಸುಖಲೋಲುಪನಾಗಿ ಮಂದಹಾಸದಿಂದ ಮಲಗಿದ್ದನು.

ಭೀಮಸೇನನು ಕಾಲಕೂಟವಿಷಕ್ಕೂ ಸಾಯದಿರಲು ಅದಕ್ಕಿಂತಲೂ ಕಠೋರವಾದ ಮತ್ತೊಂದು ಪ್ರಯೋಗಕ್ಕೆ ಯೋಚಿಸಿದರು.

ವಿಶಾಲವಾದ 'ಪ್ರಮಾಣಕ್ಕೋಟಿ' ಎಂಬ ಮಡುವಿನಲ್ಲಿ ಒಂದು ವಿಚಿತ್ರ ರೀತಿಯ ಅರಮನೆಯನ್ನು ಕಟ್ಟಿ ಅಲ್ಲಿ ಅವನಿಗೆ ಬೇಕಾದಷ್ಟು ಆಹಾರ ಸಾಮಗ್ರಿಗಳನ್ನು ತುಂಬಿ ಅಲ್ಲಿ

ವಾಸಮಾಡುವಂತೆ ವ್ಯವಸ್ಥೆ ಮಾಡಿ ಆಮೇಲೆ ಒಂದು ದಿನ ಭೀಮನು ನಿದ್ರೆ ಮಾಡುವಾಗ ಆ ವಿಶಾಲ ಮಡುವಿನಲ್ಲಿ ಎತ್ತಿ ಹಾಕಿ ಜಲರಾಶಿಯಲ್ಲಿ ಮುಳುಗಿ ಸಾಯುವಂತೆ ಮಾಡಬೇಕೆಂದು ಯೋಚಿಸಿಕೊಂಡರು. ಅದನ್ನು ಯುಯುತ್ಸು ಭೀಮನಿಗೆ ತಿಳಿಸಿದರೂ ಭೀಮ ಹೆದರಲಿಲ್ಲ. ಅದಕ್ಕಾಗಿಯೇ ಕಾಯುತ್ತಿದ್ದನು. ಅಸುರರ ಪಾಪ ವೃದ್ಧಿ ಮಾಡುವುದಕ್ಕಾಗಿ ಏನೂ ಅರಿಯದವನಂತೆ ಅವರು ಏನು ಹೇಳಿದರೂ ವಿನಯದಿಂದ ಕೇಳುತ್ತಿದ್ದ. ಪ್ರಮಾಣಕೋಟಿಯ ಪ್ರವಾಹದೊಳಗೆ ಅರಮನೆಯು ಸಿದ್ಧವಾಯಿತು. ಅಲ್ಲಿ ಸಕಲ ಸಲಕರಣೆಗಳೂ ತುಂಬಿದವು. ಪಾಂಡವರು ಅಲ್ಲೇ ವಾಸಮಾಡಲು ಒಪ್ಪುವಂತೆ ಒಪ್ಪಿಸಿದ ಭೀಮನು. ಸಿದ್ಧವಾದ ಭವನಕ್ಕೆ ಹೊರಟನು.

ಕೌರವರು ತನ್ನನ್ನು ಕೊಲ್ಲಲು ಬರುವದಿನ ನೀರಿನಲ್ಲಿ ಮನಸಾರೆ ಆಟವಾಡಿ ಬಹಳ ನಿದ್ರೆ ಬಂದವನಂತೆ ಮಲಗಿದನು.

ಆಗ ಕೌರವರು ಅವನನು ಉರುಗ ಪಾಶದಿಂದ ಬಿಗಿದು ನೀರಿನೊಳಗೆ ಹಾಕಿದಾಗಲೂ ಅಲ್ಲಾಡದೆ ಇದ್ದನು. ಭೀಮನೀರಿನಲ್ಲಿ ಮುಳುಗಿ ಸತ್ತನೆಂದು ನಿಶ್ಚಿಂತೆಯಿಂದ ಎಲ್ಲರೂ ಅರಮನೆಗೆ ಬಂದರೆ. ತಕ್ಷಣ, ಅಸುರರೆಲ್ಲರೂ ಅದುರಿ ಸಾಯುವಂತೆ ಒಂದು ಬಾರಿ ಭೀಮ ಗರ್ಜನೆ ಮಾಡಿ ಒಂದೇ ನೆಗೆತದಿಂದ ಅರಮನೆಯೊಳಗೆ ಅವರ ಮುಂದೆ ಬಂದು ನಿಂತಾಗ ಯಾರಿಗೂ ಆಗ ಪ್ರಜ್ಞೆಯೇ ಇರಲಿಲ್ಲ. ಅವರ ಕಣ್ಣನ್ನು ಅವರೇ ನಂಬದಂತಾದರು. ಭೀಮ ನೀರಿನ ಪ್ರಯೋಗದಿಂದಲೂ ಸಾಯಲಿಲ್ಲ ಇದಕ್ಕಿಂತಲೂ ದೊಡ್ಡ ಪ್ರಯೋಗ ಮತ್ತಾವುದೆಂದು ಯೋಚಿಸುತ್ತಿರುವಾಗ ಶಕುನಿ,''ವಿಷಸರ್ಪಗಳ ಪ್ರಯೋಗದಿಂದ ಕೊಲ್ಲಬಹುದೆಂದು ಹೇಳಿ ತಾನು ಶುಕ್ರಾಚಾರ್ಯರಿಂದ ಉಪದೇಶಗೊಂಡಿದ್ದ ಮಂತ್ರದಿಂದ ದ್ವೀಪಾಂತರದಲ್ಲಿದ್ದ ಕುಲನಾಗಗಳನ್ನು ಕರೆದಾಗ ಅವೆಲ್ಲವೂ ಬಂದವು ಆ ನಾಗಗಳನ್ನು ಒಂದು ಪೆಟ್ಟಿಗೆಯಲ್ಲಿ ತುಂಬಿ ಒಬ್ಬ ದೂತನನ್ನು ಕರೆದು ಈ ಪೆಟ್ಟಿಗೆಯಲ್ಲಿ ಘೋರವಿಷಸರ್ಪಗಳನ್ನು ಬಂಧಿಸಿಟ್ಟಿದ್ದೇನೆ. ಭೀಮನು ಒಳ್ಳೆ ನಿದ್ರಾವಶನಾದಾಗ ಅವನ ಮೇಲೆ ಇವುಗಳನ್ನು ಹಾಕಿಬಿಡು'' ಎಂದು ಹೇಳಿದನು.

ಪಾಪಿಗಳ ಕುತಂತ್ರ ಭೀಮಸೇನನಿಗೆ ತಿಳಿದಿತ್ತು. ನಿದ್ರೆಯಲ್ಲಿ ಮೈಮರೆತಂತೆ ಅಲುಗಾಡದೆ ಮಲಗಿದನು. ಆಗ ದೂತನು ನಾಗಗಳನ್ನು ತಂದು ಭೀಮನ ಮೇಲೆ ಎಂಟು ವಿಷನಾಗಗಳನ್ನೂ ಬಿಟ್ಟನು. ಆಗ ಭೀಮನು ತನ್ನ ನೀಳ ಬಾಹುಗಳಿಂದ ಒಂದು ಸಲ ಝಾಡಿಸಿದಾಗ ಅವೆಲ್ಲವೂ ಶತಯೋಜನದ ದೂರದ ದ್ವೀಪಾಂತರದಲ್ಲಿ ಬಿದ್ದವು. ವಜ್ರಕಾಯನನ್ನು ವಿಷಸರ್ಪಗಳು ಕಚ್ಚಿದಾಗ ಅವುಗಳ ಗಾಳಿ ಮಾತ್ರದಿಂದಲೇ ನಾಶ ಹೊಂದುವಂಥ ತೀಕ್ಷ್ಣವಿಷದ ಸರ್ಪಗಳು ಮಾರುತಿದೇವನ ಸ್ಪರ್ಶದಿಂದಲೇ ನಿರ್ವೀರ್ಯವಾದವು.

ನಿಶ್ಕಾಮಕರ್ಮಿಗಳಾದ ಪ್ರಹ್ಲಾದರಾಜರು ಶ್ರೀಹರಿದ್ವೇಶಿಯನ್ನು ಧ್ವಂಸಹೊಳಿಸಲು ನರಹರಿಯನ್ನು ಕರೆದರೆ, ಭೀಮನು ಹರಿದ್ವೇಶಿಗಳನ್ನು ತನ್ನ ಕಾಲಲ್ಲಿ ಮೆಟ್ಟಿ ಶ್ರೀಹರಿಗೆ ತನ್ನ

ಸೇವೆ ಅರ್ಪಣ ಮಾಡಿದ ಮಹಾನುಭಾವ. ತನ್ನ ಪ್ರಾಣರಕ್ಷಣೆಗಾಗಿ ಭಗವಂತನ ಸ್ಮರಣೆ ಅವನಿಗೆ ನಿಷೇಧವಾಗಿತ್ತು.

ಭೀಮನು ವಿಷಸರ್ಪಗಳ ಕಡಿತಕ್ಕೂ ಸಾಯಲಿಲ್ಲ. ಪ್ರವಾಹದೊಳಗೆ ತಳ್ಳಿದರೂ ಸಾಯಲಿಲ್ಲ. ಹಾಲಾಹಲ ವಿಷಕ್ಕೂ ಸಾಯಲಿಲ್ಲವೆಂದರೆ ಅವನಿಗೆ ಕೃಷ್ಣ ಏನೋ ಶಕ್ತಿ ಪ್ರಯೋಗ ಮಾಡಿದಂತೆ ಕಾಣುತ್ತದೆ. ನಾರಾಯಣನೇ ಕೃಷ್ಣನಾಗಿ ಹುಟ್ಟಿದ್ದಾನೆಂದು ಹೇಳುತ್ತಾರೆ. ಕೃಷ್ಣ ಭಕ್ತರನ್ನೇ ಕೊಲ್ಲಲಾಗದಿರುವಾಗ ಇನ್ನು ದುರುಳರು ಕೃಷ್ಣನನ್ನೂ ಕೊಲ್ಲಲು ಸಾಧ್ಯವಾ? ಎಂಬ ಜ್ಞಾನ ಕಲಿಗಳಿಗೆ ಬರಲಿಲ್ಲ. ಅವರೆಲ್ಲರಿಗೂ ಮಿಥ್ಯಾ ಜ್ಞಾನವನ್ನು ಕೊಟ್ಟು ಪಾಪವೃದ್ಧಿಗೊಳಿಸಿ ನರಕಕ್ಕೆ ಕಳುಹಿಸಲಿಕ್ಕಾಗಿಯೇ ಕೃಷ್ಣ ತನ್ನಲ್ಲಿ ಅವರಿಗೆ ದ್ವೇಶ ಬಲವಾಗುವಂತೆ ಮಾಡುತ್ತಿದ್ದನು.

ಕೌರವರು ಕೃಷ್ಣನನ್ನು ತಾವು ಕೊಲ್ಲಲು ಸಮರ್ಥರಲ್ಲವೆಂದು ಚೆನ್ನಾಗಿ ತಿಳಿದಿದ್ದ ಕಾರಣ ಜರಾಸಂಧನಿಂದ ಕೃಷ್ಣನನ್ನು ಕೊಲ್ಲಿಸಬೇಕೆಂದು ಮೊರೆಹೊಕ್ಕರು.

ಮೊದಲೇ ಕ್ರೋಧವಶನಾಗಿದ್ದ ಜರಾಸಂಧನು ಈಗ ಮತ್ತಷ್ಟು ಮದಮತ್ತನಾಗಿ ಅಸಂಖ್ಯಾತ ಸೇನೆಯೊಡನೆ ಮಥುರೆಯನ್ನು ಮುತ್ತಿ ಸೋಲು ಮುಖದಿಂದ ಹಿಂದಿರುಗಿದ. ಹೀಗೆ ಹದಿನೆಂಟು ಬಾರಿಯೂ ಜರಾಸಂಧನು ಯಾದವ ವೀರರನ್ನು ಗೆಲ್ಲಲಾರದೆ ಕೃಷ್ಣನನ್ನು ಏನು ಮಾಡಲೂ ಸಾಧ್ಯವಾಗದೆ ತಲೆ ಮುಸುಕಿನಿಂದ ಊರು ಸೇರಿದನು. ಮಥುರಾ ವಾಸಿಗಳೆಲ್ಲರೂ ಶ್ರೀಹರಿ ಭಕ್ತರಾಗಿ ಶ್ರೀಹರಿ ಚರಣ ಸಾನ್ನಿಧ್ಯದಿಂದ ಯಾವ ಭಯವೂ ಇಲ್ಲದೆ ಆನಂದದಿಂದ್ದರು.

ಶ್ರೀಹರಿದ್ವೇಷಿಗಳಾದ ಕೌರವರು ಸಂಪದ್ಭರಿತ ರಾಜ್ಯವಿದ್ದು ಸಾಮ್ರಾಜ್ಯದಿಂದಿದ್ದರೂ ಅವರಿಗೆ ದ್ವೇಶಾಸೂಯೆಗಳು ಚಿಂತೆ, ಕಳವಳ, ಮುತ್ತಿಕೊಂಡಿತ್ತು. ಕೌರವನಿಗ್ರಹ ಶಕ್ತಿವಂತನಾದ ಭೀಮನನ್ನು ಇಲ್ಲವೆನಿಸುವವರೆಗೂ ತಮಗೆ ನೆಮ್ಮದಿ ಇಲ್ಲವೆಂದು ಹಗಲಿರುಳು ಅವನ ನಾಶಕ್ಕಾಗಿ ಚಿಂತಿಸುತ್ತಿದ್ದರು.

## ಹರಿದ್ವೇಶಿಗಳ ಹನನ

ಭೀಮನನ್ನು ದಿಗ್ವಿಜಯಕ್ಕೆ ಕಳುಹಿಸಿದರೆ ಬಲಿಷ್ಠ ರಾಜರ ಕೈಗೆ ಸಿಕ್ಕು ಸಾಯಬಹುದೆಂಬ ಭಾವದಿಂದ ಧೃತರಾಷ್ಟ್ರನಿಗೆ ಹೇಳಿ ಭೀಮ ಒಬ್ಬನನ್ನೇ ದಿಗ್ವಿಜಯಕ್ಕೆ ಕಳುಹಿಸಿದರು. ಇದರಿಂದ ವಾಯುಕುಮಾರನ ಕೀರ್ತಿ ಅಧಿಕವಾಯಿತು ಮೃತ್ಯು ದೂರದಲ್ಲೇ ನಿಂತಿತು.

ಸಕಲ ದೇಶದ ರಾಜರೂ ಭೀಮನಿಗೆ ಪಾದಾಕ್ರಾಂತರಾದರು. ಅವರು ಶರಣಾಗತರಾಗಿ ತಂದೊಪ್ಪಿಸಿದ ಅವರ ಕಪ್ಪಕಾಣಿಕೆಗಳನ್ನು ಧೃತರಾಷ್ಟ್ರನಿಗೆ ಒಪ್ಪಿಸಿದನು. ಅನೇಕ ದೈತ್ಯರನ್ನು ನಿರ್ಮೂಲಮಾಡಿ ಶ್ರೀಕೃಷ್ಣಾರ್ಪಣ ಎಂದನು. ಶಿಶುಪಾಲ, ದಂತವಕ್ತ್ರ , ಭಿಷ್ಮ, ಎಲ್ಲರೂ ಭೀಮನ ಸಾಹಸ ಪರಾಕ್ರಮಗಳಿಗಂಜಿ ಶರಣಾದರು. ರುಕ್ಮಿಯು ಶಿಶುಪಾಲಾದಿಗಳೊಡನೆ ಎಷ್ಟು ಹೋರಾಡಿದರೂ ಭೀಮನನ್ನು ಗೆಲ್ಲಲಾಗದೆ ಲಜ್ಜೆಯಿಂದ ದೂರಸರಿದನು.

ರುಕ್ಮಿಯು ಪೂರ್ವಜನ್ಮದಲ್ಲಿ ಇಲ್ವಲನೆಂಬ ನರಭಕ್ಷಕನಾಗಿದ್ದನು. ಈತನು ಶ್ರಾದ್ಧ ಮಾಡುತ್ತೇನೆಂದು ಹೇಳುತ್ತ ಬ್ರಾಹ್ಮಣರನ್ನು ಊಟಕ್ಕೆ ಕರೆದು ತನ್ನ ತಮ್ಮನಾದ ವಾತಾಪಿ ಎಂಬುವನನ್ನು ಕಡಿದು ಅವನ ಮಾಂಸದಿಂದಲೇ ಅಡಿಗೆ ಮಾಡಿ ಬ್ರಾಹ್ಮಣರಿಗೆ ಭೋಜನ ನೀಡುತ್ತಿದ್ದನು. ಅವರ ಊಟ ಮುಗಿದ ನಂತರ ವಾತಾಪೀ! ಬಾ ಎಂದು ಕರೆದರೆ ಅವನ ಯೋಗಶಕ್ತಿಯಿಂದ ವಾತಾಪಿಯು ಬ್ರಾಹ್ಮಣರ ಹೊಟ್ಟೆ ಸೀಳಿಕೊಂಡು ಹೊರಗೆ ಬರುತ್ತಿದ್ದ. ಹೀಗೆ ಅನೇಕ ಸಹಸ್ರಾರು ಋಷಿಗಳನ್ನು ಕೊಂದು ತಿಂದು ಹಾಕುತ್ತಿದ್ದನು.

ಅಗಸ್ತ್ಯರು ತಮ್ಮ ತಪೋಪ್ರಭಾವದಿಂದ ದೈತ್ಯರ ಕೊಲೆಪಾತಕ ತನವನ್ನು ನೋಡಿ ಒಂದು ದಿನ ಅವರಲ್ಲಿಗೆ ಊಟಕ್ಕಾಗಿ ಬಂದರು. ಎಂದಿನಂತೆ ಇಲ್ವಾಲನು ವಾತಾಪಿಯ ಮಾಂಸದಿಂದ ಅಡಿಗೆ ಮಾಡಿ ಋಷಿಗಳಿಗೆ ಬಡಿಸಿದಾಗ ಅಗಸ್ತ್ಯರು ಎಲ್ಲವನ್ನೂ ತಿಂದು ಮುಖ್ಯ ಪ್ರಾಣದೇವರನ್ನು ತಮ್ಮಲ್ಲಿ ಸೇರಿರುವ ದೈತ್ಯನ ವಧೆಗಾಗಿ ಪ್ರಾರ್ಥನೆ ಮಾಡಿಕೊಂಡಾಗ ಮುಖ್ಯಪ್ರಾಣನು ಜಠರಾಗ್ನಿಯಿಂದ ವಾತಾಪಿಯನ್ನು ಸುಟ್ಟುಭಸ್ಮ ಮಾಡಿದರು. ಇಲ್ವಲನು ವಾತಾಪಿ! ಬಾ ಎಂದು ಮಾಮೂಲಿನಂತೆ ಕರೆದನು ಅಗಸ್ತ್ಯರು ನಗುತ್ತ ವಾತಾಪಿಯು ಮುಖ್ಯಪ್ರಾಣನ ಜಠರಾಗ್ನಿಯಲ್ಲಿ ಜೀರ್ಣವಾದನು ಎಂದರು. ಆ ಇಲ್ವಲನೇ ರುಕ್ಮಿಯಾಗಿ ಹುಟ್ಟಿದ್ದನು. ಹೀಗೆ ದೈತ್ಯರೆಲ್ಲರೂ ಕ್ಷತ್ರಿಯ ರಾಜರಾಗಿ ಹುಟ್ಟಿ [illegible] ತಿಳಿದು ಎಲ್ಲರನ್ನು ನಿಗ್ರಹ ಮಾಡಿ ಭಗವತ್ಸೇವಾ ಸಾಧನದಿಂದ ಸಾಧು ಸಜ್ಜನರೆಲ್ಲರನ್ನು ರಕ್ಷಿಸುತ್ತಿದ್ದನು.

## ಸ್ವಾಮಿಯ ಸಂದೇಶ

''ಅಕ್ರೂರ! ನೀನು ಹಸ್ತಿನಾವತಿಗೆ ಹೋಗಿ ಧೃತರಾಷ್ಟ್ರನನ್ನು ಕಂಡು ನನ್ನ ಸಂದೇಶವನ್ನು ತಿಳಿಸು'' ಎಂಬ ಸ್ವಾಮಿಯ ಸಂದೇಶದಂತೆ ಅಕ್ರೂರನು ''ಧೃತರಾಷ್ಟ್ರ ಮಹಾರಾಜಾ! ನಾನು ಶ್ರೀಕೃಷ್ಣನ ಆದೇಶವನ್ನು ತಂದ ದೂತನೆಂದು ತಿಳಿ. ಅವನ ವಾಕ್ಪುಷ್ಪಗಳನ್ನು ಶಿರೋಧಾರಣಮಾಡಿ ನೀನು ನಡೆದರೆ ನಿನಗೆ ಶುಭವಾದೀತು. ಕುರುರಾಜಾ! ನಿನ್ನ ಮಕ್ಕಳು ನಿಷ್ಪಾಪರಾದ ಪಾಂಡವರನ್ನು ಬಗೆಬಗೆಯಾಗಿ ಪೀಡಿಸಿ ದ್ವೇಷ ಮಾಡುತ್ತಿದ್ದಾರೆಂದು ಸಕಲ ಮುನಿಗಳು ದೂರುತ್ತಿದ್ದಾರೆ. ದೊಡ್ಡವನಾದ ನೀನು ಅಜ್ಞಾನಿ ಮಕ್ಕಳನ್ನು ರಕ್ಷಿಸಲಿಕ್ಕಾಗಿ ಅವರಿಗೆ ಸರಿಯಾದ ದಾರಿ ತೋರಿಸಬೇಕು. ನಿನಗೆ ಆ ಯೋಗ್ಯತೆ ಇಲ್ಲದಿದ್ದರೆ ಇಬ್ಬರಿಗೂ ರಾಜ್ಯವನ್ನು ಸಮಭಾಗ ಮಾಡಿ ಹಂಚಿ ಅವರವರ ಪಾಡಿಗೆ ಅವರಿರುವಂತೆ ತಕ್ಕ ಏರ್ಪಾಡನ್ನಾದರು ಮಾಡು. ನಿನಗೆ ದೇವರು ಅನುಗ್ರಹಿಸಬೇಕಾದರೆ ಭಗವದ್ಭಕ್ತರಾದ ಪಾಂಡವರನ್ನು ನಿನ್ನ ಮಕ್ಕಳಂತೆಯೇ ನೋಡಿಕೊಂಡು ಪಕ್ಷಪಾತ ಮಾಡದೆ ಇರಬೇಕು. ಮಕ್ಕಳ ಪರವಾಗಿ ದುರ್ಮೋಹದಿಂದ ದುರಾಲೋಚನೆ ಮಾಡಿದರೆ ಬ್ರಹ್ಮಾದಿ ಸಕಲ ದೇವತೆಗಳ ಅನುಗ್ರಹವೂ ನಿನಗೆ ತಪ್ಪಿ ಸರ್ವನಾಶ ಹೊಂದಬೇಕಾಗುತ್ತದೆ. ವೈಷಮ್ಯದಿಂದ ವೈಷ್ಣವರನ್ನು ಅಪಚಾರದಿಂದ ದ್ವೇಷಮಾಡಿದರೆ ನಿನಗೆ ದೈವಸಹಾಯ ತಪ್ಪಿ ಅನರ್ಥಕ್ಕೆ ಈಡಾಗುತ್ತಿ. ಪಾಂಡವರನ್ನು ನಿಷ್ಪಕ್ಷಪಾತದಿಂದ ಸಂರಕ್ಷಿಸಿದರೆ

ನಿನಗೆ ಧರ್ಮವು ಸುಖದ ದಾರಿಗೆ ಕೊಂಡೊಯ್ಯುತ್ತದೆ. ಇದೇ ನಿನಗೆ ನನ್ನ ಭವಿಷ್ಯದ ಭವ್ಯ ನುಡಿಗಳು'' ಎಂದು ತಿಳಿಸಿದ್ದೇನೆ ಎಂದು ಅಕ್ರೂರನು ತಿಳಿಸಿದನು.

ಧೃತರಾಷ್ಟ್ರನು ಮಕ್ಕಳ ಮೋಹವೆಂಬ ಬಲಿಯೊಳಗೆ ಸಿಕ್ಕುಬಿದ್ದು ಅದನ್ನು ಬಿಡಿಸಿಕೊಳ್ಳಲಾರದೆ ದುಃಖ ಪಡುತ್ತಿದ್ದನು. ಇದು ಅವನ ದುಶ್ಕರ್ಮ. ಧೃತರಾಷ್ಟ್ರನಿಗೆ ಶ್ರೀಕೃಷ್ಣ ಸರ್ವೋತ್ತಮ ಸ್ವಾಮಿ ಎಂದು ಚೆನ್ನಾಗಿ ತಿಳಿದಿತ್ತು ಮಕ್ಕಳನ್ನು ಬಿಡಲಾರದೆ ಕೃಷ್ಣನ ಮಾತನ್ನು ಪಾಲಿಸಲಿಕ್ಕಾಗದೆ ತೊಳಲಾಡುತ್ತಿದ್ದನು. ''ಅಕ್ರೂರ ! ಕೃಷ್ಣನು ಅಸುರರನ್ನು ಸಂಹರಿಸಿ ಭೂಭಾರವನ್ನು ಹಗುರಮಾಡಲಿಕ್ಕಾಗಿಯೇ ಬಂದಿರುವುದರಿಂದಲೇ ಹೀಗೆ ಧರ್ಮಾಧರ್ಮಗಳ ಘರ್ಷಣೆ ನಡೆಸುತ್ತಿದ್ದಾನೆಂದು ತಿಳಿಯುತ್ತೇನೆ. ಅವನ ಸಂಕಲ್ಪ ಹೇಗಿದೆಯೋ ಹಾಗೆ ಆಗಲಿ ಅಸ್ವತಂತ್ರರಾದ ನಾವು ಆಗತಕ್ಕ ಅನರ್ಥ ಅನಾಹುತಗಳನ್ನು ತಪ್ಪಿಸಲು ಸಮರ್ಥರಲ್ಲ'' ಎಂದು ತನ್ನ ದೌರ್ಬಲ್ಯವನ್ನು ತೋಡಿಕೊಂಡನು. ಅಕ್ರೂರನು ಪಶ್ಚಾತಾಪದಿಂದ ಧೃತರಾಷ್ಟ್ರ ! ನೀನು ಪಾಪ ಕಾರ್ಯಗಳನ್ನು ಖಂಡಿಸದೆ ಹೀಗೆ ಉದಾಸೀನದಿಂದ ನಿನ್ನ ಮಕ್ಕಳ ಅತ್ಯಾಚಾರಗಳು ತಿಳಿದಿದ್ದರೂ ಅವರನ್ನು ಹೀಗೆ ಅಧರ್ಮದಿಂದ ಧರ್ಮದ ದಾರಿಗೆ ಎಳೆಯದಿದ್ದರೆ ಭೀಮಸೇನನು ತನ್ನ ಧರ್ಮಗದೆಯಿಂದ ಕುಟ್ಟಿ ಎಲ್ಲರನ್ನೂ ಪುಡಿಮಾಡಿ ಹಾರಿಸಿಬಿಡುತ್ತಾನೆ. ಇದು ಸತ್ಯವಾದ ಮಾತು.

ಭೀಮಸೇನನು ಹರಿಭಕ್ತರ ವೈರಿಯನ್ನು ಅರೆಘಳಿಗೆಯೂ ಉಳಿಸದೆ ಕೊಲ್ಲುತ್ತಾನೆ. ಹರಿದ್ವೇಷಿಗಳನ್ನು ನಿರ್ಮೂಲ ಮಾಡುವುದೇ ಅವನ ದೀಕ್ಷೆ'' ಎಂದನು. ಧೃತರಾಷ್ಟ್ರನು ದುರುಳಮಕ್ಕಳ ದುಶ್ಕಾರ್ಯವನ್ನು ತಡೆಯುವುದು ಅಷ್ಟು ಸುಲಭವಲ್ಲ ಎಂದುಕೊಂಡು ಏನೂ ಮಾತನಾಡದೆ ಸುಮ್ಮನಾದನು. ಅಕ್ರೂರನು ಧೃತರಾಷ್ಟ್ರನಿಗೆ ಮುಸ್ಸೂಚನೆಕೊಟ್ಟು ಪಾಂಡವರನ್ನು ಕರೆದುಕೊಂಡು ಮಧುರಾಪಟ್ಟಣಕ್ಕೆ ಹೊರಟನು.

ಅಲ್ಲಿ ಪಾಂಡವರು ಮೂರು ವರ್ಷಗಳ ಕಾಲ ಕ್ಷತ್ರಿಯರಿಗೆ ಮುಖ್ಯವಾದ ಶಸ್ತ್ರಾಸ್ತ್ರವಿದ್ಯಗಳನ್ನು ಶಾಸ್ತ್ರರೀತಿಯಲ್ಲಿ ಅಭ್ಯಾಸ ಮಾಡಿದರು. ಭೀಮಸೇನನು ಬಲರಾಮನ ಬಳಿ ಗದಾ ಚಾಲನ ವಿದ್ಯೆಯನ್ನು ಅಭ್ಯಾಸ ಮಾಡಿ ಪ್ರಸಿದ್ಧನಾದನು. ಭೀಮನು ಶ್ರೀಹರಿ ಒಬ್ಬನನ್ನು ಬಿಟ್ಟು ಮಿಕ್ಕಾವ ದೇವರನ್ನು ಉಪಾಸನೆ ಮಾಡುವವನಲ್ಲ. ಆದ್ದರಿಂದಲೇ ಅವನು ಬಿಲ್ಲುಗಾರಿಕೆಯನ್ನು ಶಸ್ತ್ರಾಭಿಮಾನಿದೇವತೆಗಳ ಉಪಾಸನೆ ಮಾಡಿ ಅಭ್ಯಾಸಮಾಡಲಿಲ್ಲ. ಆದರೂ ಭೀಮನು ಕರೆದಾಗ ಸಕಲ ಶಸ್ತ್ರಾಭಿಮಾನಿದೇವತೆಗಳೂ ಬಂದು ಅವನ ಆಜ್ಞೆಯಂತೆ ಶತೃಸಂಹಾರ ಮಾಡುತ್ತಿದ್ದವು.

ನಂತರ ಎಲ್ಲರೂ ಶ್ರೀಕೃಷ್ಣನ ಅಪ್ಪಣೆಯಂತೆ ಮಧುರಾನಗರದಿಂದ ಇಂದ್ರಪ್ರಸ್ಥಕ್ಕೆ ಹೊರಟರು. ವಿಶೋಕನೇ ಅವರಿಗೆ ಸಾರಥಿ ಆದನು. ಈತನು ಪಿಂಗಳಾ ಎಂಬ ಅಪ್ಸರೆಯ ಮಗನು. ಪಿಂಗಳಾ ಅನೇಕ ವರ್ಷಗಳು ತಪಸ್ಸುಮಾಡಿ ಶ್ರೀಕೃಷ್ಣನ ಸೇವಾಭಾಗ್ಯವನ್ನು ಪಡೆದು ಆ ದೇವನ ಅನುಗ್ರಹದಿಂದ ಪಡೆದ ಮಗನೇ ವಿಶೋಕನು. ಪಿಂಗಳಾ ಶಾಪಗ್ರಸ್ಥಳಾಗಿ ಕುರೂಪಳಾಗಿ ಕುಳ್ಳು ದೇಹವುಳ್ಳವಳಾಗಿ ಕಂಸನಿಗೆ ಗಂಧತೇಯ್ದು ಕೊಡುವವಳಾಗಿದ್ದಾಗ ಶ್ರೀಕೃಷ್ಣದರ್ಶನದ ಪುಣ್ಯದಿಂದ

ಹುಟ್ಟಿದ ಮಗನಾದ ವಿಶೋಕನು ಪಾರ್ಥರಿಗೆ ಪ್ರಿಯಶಿಷ್ಯನಾಗಿ ಭೀಮಸೇನನ ಸಾರಥಿಯಾಗಿ ಸೇವೆಸಲ್ಲಿಸುತ್ತಿದ್ದನು. ಧರ್ಮರಾಜನು ವೇದವ್ಯಾಸರಬಳಿ ಸಕಲವಿದ್ಯೆಗಳನ್ನೂ ಕಲಿತನು. ಭೀಮಸೇನನೂ ವೇದವ್ಯಾಸರಬಳಿ ಸಕಲವಿದ್ಯೆಗಳನ್ನು ಕಲಿತನು. ಭೀಮಸೇನನೂ ವೇದವ್ಯಾಸರಬಳಿ ತತ್ವಶಾಸ್ತ್ರವನ್ನು ಅಭ್ಯಾಸಮಾಡಿದನು. ಕೌರವರು ಕೃಪಾಚಾರ್ಯರಬಳಿ ವಿದ್ಯಾಭ್ಯಾಸ ಮಾಡುತ್ತಿದ್ದರು. ಕೃಪಾಚಾರ್ಯರು ತಮ್ಮ ತಂಗಿಯಾದ ಕೃಪಿಯನ್ನು ದ್ರೋಣರಿಗೆ ವಿವಾಹ ಮಾಡಿಕೊಟ್ಟಿದ್ದನು. ಕೃಪೀದೇವಿಯಿಂದ ದ್ರೋಣಾಚಾರ್ಯರಿಗೆ ಅಶ್ವತ್ಥಾಮನೆಂಬ ರುದ್ರಾಂಶಸಂಭೂತವಾದ ಪುತ್ರನಾದನು. ದ್ರೋಣರು ಶಿಲೋಂಛವೃತ್ತಿಯನ್ನು ಅವಲಂಬಿಸಿ ಯಾರಿಂದಲೂ ಏನನ್ನು ತೆಗೆದುಕೊಳ್ಳದೆ ಪತ್ನಿಪುತ್ರರೊಡನೆ ಜೀವನಯಾತ್ರೆ ಸಾಗಿಸುತ್ತಿದ್ದರು. ಅಶ್ವತ್ಥಾಮನಿಗೂ ದುರ್ಯೋಧನನಿಗೂ ಸ್ನೇಹ ಉಂಟಾಗಿ ಸದಾ ರಾಜಪುತ್ರರೊಡನೆ ಆಟವಾಡುತ್ತಿದ್ದನು.

ಅರಸು ಪುತ್ರರ ಜೊತೆಗೆ ಅಶ್ವತ್ಥಾಮನು ಆಡುವಾಗ ಅವರೆಲ್ಲರೂ ಹಾಲಿಗಾಗಿ ಮನೆಗೆ ಹೋಗುತ್ತಿದ್ದರು. ಆಗ ಅಶ್ವತ್ಥಾಮನೂ ಬಂದು ತಾಯಿಯನ್ನು ಕುರಿತು ''ಅಮ್ಮಾ ನನ್ನ ಗೆಳೆಯರೆಲ್ಲರೂ ಹಾಲುಕುಡಿಯಲು ಮನೆಗೆ ಹೋದರು. ನನಗೂ ಕೊಡು ನಾನೂ ಹಾಲು ಕುಡಿದು ಮತ್ತೆ ಆಟಕ್ಕೆ ಹೋಗುತ್ತೇನೆ'' ಎನ್ನುತ್ತಿದ್ದರು. ಆಗ ಕೃಪೀದೇವಿಯು ದುಃಖದಿಂದ ಅಕ್ಕಿಹಿಟ್ಟನ್ನು ನೀರಿನಲ್ಲಿ ಕಲಿಸಿ ಬಿಸಿಮಾಡಿಕೊಟ್ಟರೆ ಅಶ್ವತ್ಥಾಮ ಅದೇ ಹಾಲೆಂದು ತಿಳಿದು ಕುಡಿದು ಆಟಕ್ಕೆ ಹೋಗುತ್ತಿದ್ದನು.

ಹೀಗಿರಲು ಕುಹಕಿಗಳಾದ ಕೌರವರು ಒಂದುದಿನ ಅಶ್ವತ್ಥಾಮನು ತಾನು ಹಾಲಿಗೆಂದು ಮನೆಗೆ ಓಡುವುದನ್ನು ತಿಳಿದು ಎಲ್ಲರೂ ಅವನನ್ನು ಅಪಹಾಸ್ಯ ಮಾಡಿ ನಗುತ್ತ ಅಶ್ವತ್ಥಾಮನಿಗೆ ಅರಮನೆಯ ಹಾಲಿನ ರುಚಿ ತಿಳಿಯಬೇಕೆಂದು ಒಂದುದಿನ ಬಾದಾಮಿ ಕೇಸರಿ ಮೊದಲಾದ ವಸ್ತುಗಳಿಂದ ತಯಾರಿಸಿದ ಹಾಲನ್ನು ಕುಡಿಸಿ ಕಳುಹಿಸಿದರು. ಅಶ್ವತ್ಥಾಮನಿಗೆ ಆಗ ಹಾಲಿನ ಸವಿ ಅನುಭವಕ್ಕೆ ಬಂದಿತು. ತಾಯಿಯನ್ನು ಕುರಿತು ''ತಾಯೇ! ನನಗೆ ನೀನು ಕೊಡುತ್ತಿರುವುದು ಹಾಲಲ್ಲ. ಕಲಗಚ್ಚನ್ನು ಕುಡಿಸುತ್ತಿರುವಿ. ನನಗೆ ದುರ್ಯೋಧನಾದಿಗಳು ಕುಡಿಯುವಂತಹ ಹಾಲೇಬೇಕು. ಅದನ್ನೇ ಕೊಡು'' ಎಂದು ಬಹಳ ಗಲಾಟೆ ಮಾಡಹತ್ತಿದನು. ತಿಳುವಳಿಕೆ ಇಲ್ಲದ ಎಳೆಯಬಾಲಕ ಪಾಪ ನಮ್ಮ ಕಷ್ಟಕಾರ್ಪಣ್ಯಗಳು ಆ ಮಗುವಿಗೆ ಹೇಗೆ ತಾನೇ ತಿಳಿದೀತೆಂದು ಕೃಪೀದೇವಿ ದುಃಖದಿಂದ ಅಳುತ್ತಿದ್ದಳು.

ಅದನ್ನು ಕಂಡ ದ್ರೋಣರು ಪತ್ನೀಪುತ್ರರನ್ನು ಸಂತೋಷಪಡಿಸುವುದು ನನ್ನ ಧರ್ಮವಾದರೂ ನಾನು ದೇವರನ್ನು ಒಬ್ಬನನ್ನು ಬಿಟ್ಟು ಅನ್ಯರ್‍ಯಾರಲ್ಲೂ ಏನೂ ಯಾಚಿಸುವುದಿಲ್ಲವೆಂಬ ವ್ರತತೊಟ್ಟಿರುವೆನು. ನನ್ನ ಗುರುಗಳೆಂದರೆ ಪರಶುರಾಮರು. ಸರ್ವೋತ್ತಮನಾದ ಸರ್ವದೇವರಿಗೂ ದೇವನಾದ ಆ ಪರಶುರಾಮನನ್ನೇ ಈಗ ಪ್ರಾರ್ಥಿಸಿಕೊಳ್ಳುತ್ತೇನೆ ಎಂದು ಪರಶುರಾಮರ ಬಳಿಗೆ ಬಂದು ನಮಸ್ಕಾರ ಮಾಡಿದನು.

ಪರಶುರಾಮರ ಸಂಕಲ್ಪವೂ ಆಗ ಅದೇ ಆಗಿತ್ತು. ದೈತ್ಯರು ದಿನದಿನಕ್ಕೂ ಹೆಚ್ಚುತ್ತಿದ್ದಾರೆ ಬೃಹಸ್ಪತ್ಯಾಚಾರ್ಯರ ಅಂಶದಿಂದ ಬಂದಿರುವ ದ್ರೋಣನಿಂದ ಈಗ ಅಪಾರ ಅಸುರರು ನಾಶ ವಾಗಬೇಕೆಂದು ನಮಸ್ಕಾರಮಾಡಿದ ಶಿಷ್ಯನನ್ನು ಎಬ್ಬಿಸಿ ಕಾರಣ ಕೇಳಿದರು.

ದ್ರೋಣರು ದೇವರೇ ಸಿಕ್ಕಿದ್ದಾರೆಂದು ಏನೇನನ್ನೋ ಕೇಳಿಕೊಳ್ಳದೆ ಈಗ ಮುಖ್ಯವಾಗಿ ಬೇಕಾಗಿರುವ ಮಗನಿಗೆ ಹಾಲಿಗಾಗಿ ''ಒಂದು ಹಸುಬೇಕು. ಅನುಗ್ರಹಿಸು'' ಎಂದು ಪ್ರಾರ್ಥಿಸಿಕೊಂಡರು.

ಸಿರಿರಮಣನಿಗೆ ಒಂದು ಹಸುಕೊಟ್ಟು ಕಳುಹಿಸಲಾಗುತ್ತಿರಲಿಲ್ಲವೆ? ದುರ್ವಾಸರು ಬಂದು ''ಲಕ್ಷ್ಮೀಕಾಂತ! ಈಗಲೇ ಈಕ್ಷಣದಲ್ಲೇ ನೀನೇ ತಯಾರಿಸಿದ ಭೂರಿಭೋಜನವನ್ನು ನೀಡು'' ಎಂದು ಕೇಳಿದಾಗ ಆ ಕ್ಷಣವೇ ಅಮೃತ ಹಸ್ತದಲ್ಲಿ ಅನಂತವಿಧ ಅಮೃತಾನ್ನಗಳನ್ನು ಉತ್ಪತ್ತಿ ಮಾಡಿ ನೀಡಿದ ಅಪಾರಮಹಿಮನು ದ್ರೋಣನಿಗೂ ಹಾಗೆ ಕೊಡಲಿಲ್ಲ ಏಕೆಂದರೆ ದ್ರೋಣನಿಂದ ಧರ್ಮಸಾಧನದ ಕಾರ್ಯಗಳು ನಡೆಯಬೇಕು. ಅವನ ಅವತಾರ ಸಾರ್ಥಕಗೊಳ್ಳಬೇಕೆಂಬ ಕರುಣದಿಂದ ''ದ್ರೋಣಾಚಾರ್ಯ ! ನಾನು ನನ್ನ ತಂದೆಯ ಶ್ರಾದ್ಧಪ್ರಯುಕ್ತ ಸಕಲವನ್ನು ಬ್ರಾಹ್ಮಣರಿಗೆ ದಾನಮಾಡಿ ಮೂರುವಸ್ತುಗಳನ್ನು ಮಾತ್ರ ಉಳಿಸಿಕೊಂಡಿದ್ದೇನೆ. ಅವಾವುದೆಂದರೆ ಶರೀರ, ವಿದ್ಯೆ, ಆಯುಧ ಇದರಲ್ಲಿ ನಿನಗೆ ಏನುಬೇಕು ಕೇಳು'' ಎಂದರು. ದ್ರೋಣರು ''ಪ್ರಭೂ! ಬ್ರಹ್ಮರುದ್ರಾದಿಗಳಿಗೂ ಪ್ರಭುವಾಗಿರುವ ನಿನ್ನ ದೇಹ ಅಪ್ರಾಕೃತವಾದದ್ದು ಅದನ್ನು ನೀನೊಬ್ಬನಲ್ಲದೆ ಮತ್ತಾರು ಹೊಂದಲೂ ಶಕ್ಯವಿಲ್ಲ. ನಿನ್ನಂತೆ ಸರಿಸಮಾನನಾಗಬೇಕೆಂದು ಮನಸ್ಸಿಗೆ ಬಂದರೂ ಅವರಿಗೆ ಅಂಧಂತಮಸ್ಸು ಪ್ರಾಪ್ತವಾಗುತ್ತದೆ. ವಿಶ್ವವ್ಯಾಪ್ತನಾದ ನಿನ್ನ ದೇಹದ ಒಂದು ಚಿಕ್ಕ ಕೂದಲಿನ ತುದಿಯನ್ನು ನೋಡಿ ಅನುಭವಿಸಲು ಅಸಾಧ್ಯರಾದ ನಮಗೆ ನಿನ್ನ ದೇಹವನ್ನು ಪಡೆ ಯಲು ಸಾಧ್ಯವಾ? ಇನ್ನು ನಿನ್ನ ಆಯುಧ ಕೇಳೋಣವೆಂದರೆ ಅನಂತಾನಂತ ಸತ್ಯಪರಾಕ್ರಮವನ್ನು ಅವಲಂಬಿಸಿ ನಿನ್ನ ಆಶ್ರಯ ಬೇಡಿ ನಿನ್ನಲ್ಲಿ ನೆಲಸಿರುವ ಆ ನಿನ್ನ ಆಯುಧಗಳು ನಿನ್ನನ್ನು ಅಗಲಿ ಒಂದು ಕ್ಷಣವೂ ಇರಲಾರವು. ನಿನ್ನ ವೈರಿಗಳನ್ನು ನಾಶಮಾಡಿ ಮತ್ತೆ ನಿನ್ನನ್ನೇ ಆಶ್ರಯಿಸಿ ಓಡಿ ಬರುವಾಗ ಅನ್ಯರಿಗೆ ಅದು ಲಭ್ಯವಿಲ್ಲ. ಅನಂತವೇದ ಪ್ರತಿಪಾದ್ಯನಾಧ ನೀನು ನನಗೆ ಶುದ್ಧ ಜ್ಞಾನವನ್ನು ಉಪದೇಶಮಾಡಿ ಭೂಮಂಡಲದಲ್ಲಿ ಅಶುದ್ಧಮತಿಗಳನ್ನು ಖಂಡನೆಮಾಡುವ ಭಾಗ್ಯ ಕೊಡು'' ಎಂದು ಬೇಡಿದರು.

ದ್ರೋಣರಲ್ಲಿ ಈ ಮಾತುನುಡಿಸಿದ ಪರಶುರಾಮರು ಸಕಲ ಶಸ್ತ್ರಾಸ್ತ್ರ ವಿದ್ಯೆಗಳನ್ನು ಅಮೋಘವಾಗಿ ಅಭ್ಯಾಸಮಾಡಿಸಿದರು. ದ್ರೋಣಾಚಾರ್ಯರು ಮಗ ಮಡದಿ ಮನೆ ಎಂಬ ಎಲ್ಲಾ ಬಂಧನಗಳಿಂದಲೂ ಬಿಡಿಸಿಕೊಂಡು ಪರಶುರಾಮರ ಪಾದಾಶ್ರಯದಲ್ಲಿ ಹನ್ನೆರಡು ವರ್ಷಗಳ ಕಾಲ ಉಪದೇಶಗೊಂಡು ಭಗವದಾಜ್ಞೆಯಂತೆ ಗುರುಸನ್ನಿಧಿಯಿಂದ ಮುಂದೆಹೊರಟರು.

ದ್ರೋಣಾಚಾರ್ಯರಿಗೆ ಪರಶುರಾಮರ ಸಾಮೀಪ್ಯ ಸಹವಾಸದಿಂದ ಹೊರಬಂದರೆ ಮಗನ

ನೆನಪಾಯಿತು. ಸಾಧ್ವೀಮಣಿ ಕೃಪೀದೇವಿ ತನ್ನನ್ನೇ ಎದುರು ಕಾಯುತ್ತಿರುತ್ತಾಳೆ. ಅವಳಿಗೆ ಏನು ಉತ್ತರ ಹೇಳಲಿ? ಎಂದು ಯೋಚಿಸಿದರೆ ಶ್ರೀಹರಿಪ್ರೇರಣಾನುಸಾರ ದ್ರುಪದರಾಜನ ನೆನಪಾಯಿತು. ಅವನಲ್ಲಿ ಹೋಗಿ ನಾನು ಕೇಳದಿದ್ದರೂ ಅವನೇ ವಾಗ್ದಾನಮಾಡಿದಂತೆ ರಾಜ್ಯದಲ್ಲಿ ಅರ್ಧಭಾಗ ಕೊಡಲು ಬಲವಂತಪಡಿಸಬಹುದು ಎಂದು ಊಹಿಸಿದನು. ದ್ರೋಣರು ತಮ್ಮ ಬಾಲ್ಯ ಸ್ನೇಹಿತನಾದ ದ್ರುಪದರಾಜನ ಗೆಳೆತನ ತಮ್ಮ ತಂದೆ ಭಾರದ್ವಾಜರ ಬಳಿ ವಿದ್ಯಾಭ್ಯಾಸಕ್ಕಾಗಿ ಬಂದು ಗುರುಕುಲದಲ್ಲಿ ಇಬ್ಬರೂ ಪರಮ ಸ್ನೇಹದಿಂದಿರುವಾಗ ಅವನು ಆಡಿದಮಾತು ಎಲ್ಲವನ್ನು ಮೆಲುಕು ಹಾಕುತ್ತ ಬಂದನು.

ಅರಮನೆಗೆ ಬಂದರೆ ರಾಜದೂತರ ಬಳಿ ''ನಿಮ್ಮ ರಾಜನಿಗೆ ಹಳೆಯ ಸ್ನೇಹಿತ ದ್ರೋಣಾಚಾರ್ಯ ಬಂದಿದ್ದಾನೆಂದು ತಿಳಿಸಿರಿ'' ಎಂದು ಹೇಳಿ ಕಳುಹಿಸಿದನು. ದ್ರುಪದನು ಮದಮತ್ತನಾಗಿ ಮಾತನಾಡಿದನು. ಮಡಿಪಂಚೆಯ ಬ್ರಾಹ್ಮಣನಿಗೂ ಸಿಂಹಾಸನಾಧೀಶ್ವರನಿಗೂ ಸ್ನೇಹವಾಗಲು ಸಾಧ್ಯವಾ? ನೀನು ಕಪಟ ಮಿತ್ರ ರಾಜದೂತರ ಕೈಲಿ ತಳ್ಳಿಸಿಕೊಳ್ಳದೆ ಹೊರಟುಹೋಗು'' ಎಂದು ತಿರಸ್ಕಾರದಿಂದ ಮಾತನಾಡಿದ.

ದ್ರೋಣರು ಆಕ್ರೋಶಗೊಳ್ಳಲಿಲ್ಲ. ರಾಜರಲ್ಲಿ ಶ್ರೀವಿಷ್ಣು ಆವೇಶವಿರುತ್ತದೆ. ದ್ರುಪದನಲ್ಲಿರುವ ವಿಷ್ಣು ಈಗ ಈತನು ಬ್ರಾಹ್ಮಣ ತಿರಸ್ಕಾರಮಾಡಿದ್ದರಿಂದ ಬ್ರಾಹ್ಮಣ ಪ್ರಿಯನಾದ ತಾನೂ ತಿರಸ್ಕೃತನಾದಂತೆ ಇವನಲ್ಲಿರದೆ ದುಃಖದಾರಿದ್ರ್ಯಾದಿಗಳು ಒದಗುತ್ತದೆಂಬುದನ್ನರಿತು''ಎಲಾ! ದ್ರುಪದಾ! ನೀನು ನಿನ್ನ ಬಳಿಗೆ ಬಂದ ಅತಿಥಿಯನ್ನು ಅಲ್ಲಗಳೆದು ಸಭೆಯಮುಂದೆ ತಿರಸ್ಕಾರಮಾಡಿ ಅವಮಾನಗೊಳಿಸಿರುವಿ. ನಾನು ಯಾರನ್ನು ಏನೊಂದನ್ನು ನನಗಾಗಿ ಕೇಳತಕ್ಕವನಲ್ಲ. ಭಗವಂತನೊಬ್ಬನೇ ನನ್ನ ಸ್ವಾಮಿ ಎಂದು ನಂಬಿರುವ ನನಗೆ ನಿನ್ನ ಸಂಪತ್ತು ಬೇಕಾಗಿರಲಿಲ್ಲ. ಒಳ್ಳೆಯ ಆದರದ ಮಾತನಾಡಿದರೆ ಅದರಿಂದಲೇ ದೇವರು ನಿನಗೆ ಅಕ್ಷಯಸುಖಸಂಪತ್ತನ್ನು ಕೊಡುತ್ತಿದ್ದನು. ನಿನ್ನ ಮಾತಿನಿಂದ ನನ್ನ ಚಿತ್ತಕ್ಷೋಭೆ ಮಾಡಿದ ಪಾಪದಿಂದ ನೀನು ಐಶ್ವರ್ಯ ಭ್ರಷ್ಟನಾಗುತ್ತಿ'' ಎಂದು ಶಾಪಕೊಟ್ಟು ಅಲ್ಲಿಂದ ಹೊರಟರು. ದ್ರೋಣಾಚಾರ್ಯರು ಸಾಮಾನ್ಯ ಬ್ರಾಹ್ಮಣರಲ್ಲ. ಅಪರೋಕ್ಷಜ್ಞಾನಿಗಳು ಮುಂದೆ ಈ ದ್ರುಪದನ ಸೊಕ್ಕನ್ನು ಮುರಿಯತಕ್ಕ ಭೀಮಾರ್ಜುನರೇ ಈಗ ತಮಗೆ ಶಿಷ್ಯರಾಗಬೇಕು'' ಎಂಬ ಸಂಕಲ್ಪದಿಂದ ಕುರುಪಾಂಡವ ಬಾಲಕರೆಲ್ಲರಿಗೂ ತಾವೇ ಗುರುಗಳಾಗಿ ಅವರಿಂದ ಮುಂದೆ ಮಾಡಿಸಬೇಕಾದ ಸಾಹಸಕಾರ್ಯಗಳನ್ನು ನಡೆಸಲು ಹಸ್ತಿನಾವತಿಯ ಹೊರವಲಯದ ಕ್ರೀಡಾರಂಗದಲ್ಲಿ ಆಡುತ್ತಿದ್ದ ರಾಜಪುತ್ರರ ಬಳಿಗೆ ಬಂದರು.

ಅಲ್ಲಿ ಅರಸುಮಕ್ಕಳೆಲ್ಲರೂ ಆಡುತ್ತಿರುವಾಗ ಒಬ್ಬನ ವಜ್ರದುಂಗುರ ಅಲ್ಲೇ ಸಮೀಪದಲ್ಲಿದ್ದ ಭಾವಿಯೊಳಗೆ ಬಿದ್ದುಹೋಯಿತು. ಭೀಮಸೇನ ದೂರದಲ್ಲಿ ನಿಂತ ಎಲ್ಲರ ಸಾಹಸವೂ ಮುಗಿದನಂತರ ತಾನು ಪ್ರವೇಶಮಾಡಿ ಉಂಗುರ ತೆಗೆದರಾಯಿತು ಎಂದುಕೊಂಡು

ನೋಡುತ್ತಿದ್ದನು. ಎಲ್ಲರೂ ಎಷ್ಟು ಸಾಹಸಪಟ್ಟರೂ ಉಂಗುರವನ್ನು ಮೇಲೆ ತೆಗೆಯಲು ಸಾಧ್ಯವಾಗದೆ ನಿರುತ್ಸಾಹದಿಂದ ಇದ್ದರು.

ಆ ಸಮಯಕ್ಕೆ ಸರಿಯಾಗಿ ದ್ರೋಣರು ಪ್ರವೇಶಮಾಡಿ, ಬಾಲಕರ ಸಮಸ್ಯೆಯನ್ನು ಅರಿತರು. ನೀವು ಮಹಾಬಿಲ್ಲುಗಾರಿಕೆ ಕಲಿಯುತ್ತಿದ್ದೀರೆಂದು ಹೇಳಿದಿರಿ. ಒಂದು ಭಾವಿಯೊಳಗೆ ಮುಳುಗಿದ ಉಂಗುರವನ್ನು ತೆಗೆಯುವಷ್ಟು ಅಲ್ಪಸಾಹಸವೂ ನಿಮಗೆ ಸಾಧ್ಯವಾಗಲಿಲ್ಲವೆಂದರೆ ನೀವು ಕ್ಷತ್ರಿಯರಾಜರಾಗಿ ಏನನ್ನು ತಾನೇ ಸಾಧಿಸಬಲ್ಲಿರಿ?'' ಎಂದು ಅವರನ್ನು ಮೂದಲಿಸಿ ನೀರಿನೊಳಗೆ ಮಿಂಚಿನಂತೆ ಉಜ್ವಿಸುತ್ತಿದ್ದ ರತ್ನದುಂಗುರವನ್ನು ಬಾಣದ ಸರಮಾಲಿಕೆ ಮೇಲೆ ಕಚ್ಚಿತರುವಂತೆ ತಮ್ಮ ಕೈಚಳಕವನ್ನು ಎಲ್ಲರ ಮುಂದೂ ಪ್ರದರ್ಶನಮಾಡಿ ಆವೀರ ಬಾಲಕರ ಮನಸೆಳೆದರು. ಮಹಾತ್ಮಾ ತಾವು ನಮಗೆ ತೋರಿಸಿದ ಪಾಂಡಿತ್ಯ ಅಮೋಘವಾದದ್ದು. ತಾವು ಯಾರು? ದಯಮಾಡಿ ತಿಳಿಸಿ'' ಎಂದರು. ದ್ರೋಣರು ''ಮಕ್ಕಳೇ ನಿಮ್ಮ ಪಿತಾಮಹನಾದ ಭೀಷ್ಮರೇ ನಾನಾರೆಂದು ತಿಳಿಸುತ್ತಾರೆ'' ಎಂದು ಹೇಳಿ ಹೊರಟುಹೋದರು.

ಬಾಲಕರು ಭೀಷ್ಮರ ಬಳಿಗೆ ಬಂದು ''ಪಿತಾಮಹಾ ಒಬ್ಬ ಆಜಾನುಬಾಹು ಬ್ರಾಹ್ಮಣನಿಲ್ಲಿಗೆ ಬಂದಿದ್ದನು. ಆತನು ಕ್ಷತ್ರಿಯವೀರರಂತೆ ಮಾತನಾಡುತ್ತ ಅವನು ತೋರಿಸಿದ ಶಸ್ತ್ರವಿದ್ಯೆ ಮಹಾ ಆಶ್ಚರ್ಯವನ್ನುಂಟುಮಾಡಿತು'' ಎಂದು ಎಲ್ಲವನ್ನು ತಿಳಿಸಿದಾಗ ಭೀಷ್ಮರು ಎಲ್ಲಾ ಲಕ್ಷಣಗಳನ್ನು ರಾಜಪುತ್ರರಿಂದ ತಿಳಿದು ದ್ರೋಣನೇ ಆಗಿರಬೇಕೆಂದು ಯೋಚಿಸಿ, ಆತನು ದ್ರೋಣಾಚಾರ್ಯನೆಂಬ ಬ್ರಾಹ್ಮಣನಾಗಿದ್ದಾನೆ. ಆತನು ಮಹಾ ವಿದ್ಯಾವಂತನಾಗಿದ್ದರೂ ಯಾರಿಂದಲೂ ಏನೊಂದನ್ನು ಅಪೇಕ್ಷಿಸುವುದಿಲ್ಲ. ಆದ ಕಾರಣದಿಂದ ಎಂದೂ ಅರಮನೆಯ ಬಳಿಗೆ ಬಂದಿಲ್ಲ'' ಎಂದು ಹೇಳಿದರು. ದ್ರೋಣರತಂದೆ ಭಾರದ್ವಾಜರಬಳಿ ಭೀಷ್ಮರೂ ದ್ರೋಣರ ಸಂಗಡ ಶಸ್ತ್ರಾಭ್ಯಾಸ ಮಾಡುತ್ತಿದ್ದರು. ದೃಪದನೂ ದ್ರೋಣನೂ ಆಪ್ತಮಿತ್ರರಂತಿದ್ದ ವಿಷಯ ದೃಪದನು ದ್ರೋಣನಿಗೆ ತನ್ನ ರಾಜ್ಯದಲ್ಲಿ ಸಮಭಾಗಕೊಟ್ಟು ಇರಿಸಿಕೊಳ್ಳುತ್ತೇನೆ ಎಂದು ಹೇಳುತ್ತಿದ್ದ ಮಾತನ್ನು ಭೀಷ್ಮರು ತಿಳಿದಿದ್ದರು. ಈಗ ದೃಪದನ ಬಳಿಗೆ ಸ್ನೇಹಭಾವದಿಂದ ಹೋಗಿ ಅವಮಾನವಾಗಿ ಬಂದ ವೃತ್ತಾಂತವನ್ನು ಗೂಢಾಚಾರರ ಮೂಲಕ ಭೀಷ್ಮರಿಗೆ ತಿಳಿದಿತ್ತು. ಈ ಕುರು ಪಾಂಡವ ಕುಮಾರರೆಲ್ಲರೂ ಭೀಷ್ಮರನ್ನು ಕುರಿತು ''ದ್ರೋಣರ ಬಳಿ ನಮಗೆ ವಿದ್ಯಾಭ್ಯಾಸ ಮಾಡಿಸುವಂತೆ ಒಪ್ಪಿಸು'' ಎಂದುಕೇಳಲು ಅದರಂತೆ ಬಾಲಕರೊಡಗೂಡಿ ದ್ರೋಣರ ಬಳಿಗೆ ಬಂದು ''ನೀನು ರಾಜಪುತ್ರರಿಗೆ ಕ್ಷತ್ರಿಯರಿಗೆ ಆವಶ್ಯವಾದ ಯುದ್ಧವಿದ್ಯೆಯ ಎಲ್ಲಾ ಅಭ್ಯಾಸವನ್ನು ಮಾಡಿಸು'' ಎಂದು ಒಪ್ಪಿಸಿದರು. ದ್ರೋಣರು ಬಿಲ್ಲುವಿದ್ಯಾಗುರುಗಳಾಗಿ ಬಂದರು. ಒಂದು ದಿನ ಭೀಮಾರ್ಜುನರನ್ನು ಕುರಿತು ದ್ರೋಣರು ನೀವು ನನ್ನ ಪ್ರತಿಜ್ಞೆಯೊಂದನ್ನು ಈಡೇರಿಸಿಕೊಡುವುದಾದರೆ ಧನುರ್ವಿದ್ಯೆಯ ಸಕಲ ರಹಸ್ಯಗಳನ್ನು ನಿಮಗೆ ಉಪದೇಶ ಮಾಡುತ್ತೇನೆ'' ಎಂದರು.

ದ್ರೋಣರಿಗೆ ಭೀಮಸೇನನು ಶಿಷ್ಯನಾಗಲು ಒಪ್ಪಲಿಲ್ಲ. ನಾನು ಶ್ರೀಕೃಷ್ಣನೊಬ್ಬನನ್ನು ಬಿಟ್ಟು ಮಿಕ್ಕಾವದೇವರನ್ನು ಉಪಾಸನೆ ಮಾಡುವವನಲ್ಲ. ಆದ್ದರಿಂದ ಅಸ್ತ್ರಾಭಿಮಾನಿದೇವತೆಗಳ ಉಪಾಸನೆ ನನಗೆ ನಿಷೇಧ'' ಎಂದನು. ''ಅರ್ಜುನಾ! ನೀನು ಶ್ರೀಕೃಷ್ಣನಿಂದ ಅಭ್ಯಾಸಮಾಡಿದ ಅಸ್ತ್ರವಿದ್ಯೆಯನ್ನು ಆಪತ್ಕಾಲದಲ್ಲಿ ಪ್ರಯೋಗಮಾಡಿ ನಿನ್ನ ಸಾಹಸಪುಷ್ಟವನ್ನು ನನಗರ್ಪಿಸು'' ಎಂದು ಆಜ್ಞೆ ಪಡೆದಿರುವುದರಿಂದ ಸರ್ವಥಾ ಶಾಸ್ತ್ರರೀತಿಯಲ್ಲಿ ಶಸ್ತ್ರಾಸ್ತ್ರಪ್ರಯೋಗ ಮಾಡಬೇಕಾದರೆ ಯುದ್ಧಧರ್ಮದ ರಹಸ್ಯಗಳನ್ನು ತಿಳಿಯಲೇಬೇಕು'' ಆದ್ದರಿಂದ ದ್ರೋಣರ ಪ್ರತಿಜ್ಞೆ ನಡೆಸುತ್ತೇನೆಂದು ವಾಗ್ದಾನಮಾಡಿ ಅವರ ಪ್ರೀತಿಪಾತ್ರ ಶಿಷ್ಯನಾಗು'' ಎಂದನು. ಅರ್ಜುನನು ದ್ರೋಣರಿಗೆ ಮಾತುಕೊಟ್ಟು ಅವರಿಂದ ಸಕಲ ಶಸ್ತ್ರಾಸ್ತ್ರ ಧರ್ಮಗಳ ರಹಸ್ಯವನ್ನು ಉಪದೇಶಗೊಳ್ಳುತ್ತಿದ್ದನು. ಭೀಮಸೇನ ಒಬ್ಬನನ್ನುಳಿದು ಎಲ್ಲಾ ಬಾಲಕರೂ ದ್ರೋಣರಿಗೆ ಶಿಷ್ಯರಾಗಿ ವಿದ್ಯಾಭ್ಯಾಸ ಮಾಡುತ್ತಿದ್ದರು.

## ರವಿಪುತ್ರನ ರಹಸ್ಯ

ಕರ್ಣನಿಗೆ ದ್ರೋಣರ ಬಳಿ ಕೌರವರು ಪಾಂಡವರು ವಿದ್ಯಾಭ್ಯಾಸಮಾಡಿ ಮಹಪ್ರಸಿದ್ಧ ಪರಾಕ್ರಮಿಗಳಾಗಿದ್ದಾರೆಂದು ಗೊತ್ತಾಯಿತು. ವಿದ್ಯಾಕಾಂಕ್ಷೆಯಿಂದ ಗುರುಗಳ ಬಳಿಗೆ ಬಂದು ''ಗುರುಗಳೇ! ನನಗೂ ವಿದ್ಯಾದಾನ ಮಾಡಿ ಕಾಪಾಡಿರಿ'' ಎಂದು ಪ್ರಾರ್ಥಿಸಿಕೊಂಡನು. ''ಅಯ್ಯಾ ! ನೀನು ಸೂತಜಾತಿಯವನಾದ್ದರಿಂದ ಕ್ಷಾತ್ರವಿದ್ಯಾಭ್ಯಾಸ ನಿನಗೆ ಯೋಗ್ಯವಲ್ಲ'' ಎಂದುಬಿಟ್ಟರು. ಕರ್ಣನಿಗೆ ಮನೋವ್ಯಾಕುಲ ಉಂಟಾಗಿ ಪರಶುರಾಮರನ್ನೇ ಮೊರೆಹೊಕ್ಕು ನನ್ನ ಅಭಿಲಾಷೆ ಈಡೇರಿಸಿಕೊಳ್ಳುತ್ತೇನೆ'' ಎಂದು ಪ್ರತಿಜ್ಞೆ ಮಾಡಿದನು.

ಪರಶುರಾಮರ ಬಳಿಗೆ ಬಂದು ''ಸ್ವಾಮೀ! ನಾನು ತಮ್ಮಲ್ಲಿ ಧನುರ್ವಿದ್ಯಾ ಯಾಚನೆಗಾಗಿ ಬಂದಿದ್ದೇನೆ. ದಯಮಾಡಿ ವಿದ್ಯಾದಾನ ಮಾಡಿ ಕಾಪಾಡಿರಿ'' ಎಂದು ಕೇಳಿಕೊಂಡನು. ಸರ್ವಜ್ಞಮೂರ್ತಿಗೆ ಕರ್ಣನು ಯಾರ ಮಗನೆಂದು ತಿಳಿಯದೆ ಇರಲಿಲ್ಲ. ಆದಾಗ್ಯೂ ನೀನು ಯಾವ ಜಾತಿಯವನು? ಎಂದು ಪ್ರಶ್ನೆ ಮಾಡಿದಾಗ ಕರ್ಣನು ಪುರುಷೋತ್ತಮನ ಮುಂದೆ ಅಸತ್ಯವಾಕ್ಯದಿಂದ 'ಬ್ರಾಹ್ಮಣ'ನೆಂದನು.

ಪರಶುರಾಮರ ಪ್ರೇರಣೆಯಿಂದಲೇ ಬಂದಿದ್ದ ಕರ್ಣನು ಅರ್ಜುನನಿಗೆ ಸಮಜೋಡಿಆಗಿ ದುರ್ಯೋಧನನ ಪಕ್ಷದಲ್ಲಿ ಸೇರಿ ಯುದ್ಧ ಮಾಡಿದರೆ ಅಸುರಪಕ್ಷ ವಿನಾಶಗೊಂಡು ದೇವತೆಗಳಿಗೆ ಜಯವಾಗುತ್ತದೆ'' ಎಂಬ ಉದ್ದಿಶ್ಯದಿಂದ ಕರ್ಣನಿಗೆ ಪರಶುರಾಮರು ವಿದ್ಯಾಭ್ಯಾಸ ಕೊಟ್ಟರು. ಕರ್ಣನು ಪರಶುರಾಮರ ಬಳಿ ದೇವಕುಮಾರನಾದ್ದರಿಂದ ಸಕಲ ಶಸ್ತ್ರಾಸ್ತ್ರಗಳ ಪ್ರಯೋಗವನ್ನು ಧರ್ಮರಹಸ್ಯವನ್ನವಲಂಬಿಸಿ ಉಪದೇಶ ಪಡೆದನು. ಅಷ್ಟೇ ಅಲ್ಲದೆ ವಿಷ್ಣು ಸರ್ವೋತ್ತಮತ್ವಜ್ಞಾನವನ್ನು ಅವರಿಂದ ಅಮೋಘವಾದ ರೀತಿಯಲ್ಲಿ ಕಲಿತನು. ತನ್ನ ವಿದ್ಯಾಸಂಪನ್ನತೆಯಿಂದ ಪರಶುರಾಮರ ಕೃಪೆಗೆ ಪಾತ್ರನಾಗಿ ವಿಜಯಧನಸ್ಸು ಮತ್ತು ವಿಜಯರಥ

ಗಳನ್ನು ಪಡೆದನು. ಕರ್ಣನಿಗೆ ಮಹಾಮಹಿಮರಾದ ಪರಶುರಾಮರನ್ನು ಅಗಲಿಹೋಗಲು ಇಷ್ಟವಿಲ್ಲದೆ ಅವರ ಸೇವೆಯಲ್ಲೇ ನಿರತನಾಗಿದ್ದುಬಿಟ್ಟನು.

ಕರ್ಣನಲ್ಲಿ ಸಹಸ್ರವರ್ಮನೆಂಬ ಅಸುರನಿದ್ದಾನೆ. ಈತನು ಮುಂದೆ ಅಸುರಾವೇಶಯುಕ್ತನಾಗಿ ನನಗೆ ವಿರೋಧಮಾಡಿ ದೋಷಾಧಿಕ್ಯನಾಗಿ ರಕ್ತಪ್ರೋಕ್ಷಣಪಡಿಸಬೇಕು. ಪೂರ್ವದಲ್ಲಿ ಸೂರ್ಯಾಂಶನಾಗಿದ್ದ ಸುಗ್ರೀವನಿಂದ ಇಂದ್ರನಂಶಜನಾದ ವಾಲಿ ವಧೆ ಆಯಿತು. ಈಗ ಇಂದ್ರನಂಶಜನಾದ ಅರ್ಜುನನಿಂದ ಕರ್ಣನ ವಧೆ ಆಗಬೇಕು. ಭೂಭಾರಹರಣಕಾರ್ಯವೂ ಇವರಿಬ್ಬರ ನಿಮಿತ್ತವಾಗಿ ಆಗಬೇಕಾಗಿದೆ ಎಂಬ ಸಂಕಲ್ಪದಂತೆ ಕರ್ಣನನ್ನು ತನ್ನ ಸಾಮೀಪ್ಯದಿಂದ ದೂರಮಾಡುವಂತಹ ಕಾರ್ಯವನ್ನು ಮಾಡಿಸಿದನು. ಯಾವ ವಿಕಾರವೂ ಇಲ್ಲದ ಸ್ವಾಮಿಯು ನಿದ್ರಾವಶನಾದಂತೆ ಕರ್ಣನ ತೊಡೆಯಮೇಲೆ ತಲೆ ಇಟ್ಟು ಮಲಗಿದನು. ಆಗ ಹೇತಿನಾಮಕನಾದ ರಾಕ್ಷಸರು ಇಂದ್ರನಿಂದ ಶಾಪಹೊಂದಿ ವಜ್ರಸದೃಶವಾದ ಮುಳ್ಳನ್ನು ಹೊಂದಿದ್ದ ಹುಳುವಾಗಲು ಅವನ ಉದರದೊಳಗೆ ಇಂದ್ರನು ಪ್ರವಿಷ್ಟನಾದನು. ತನ್ನ ಮಗ ಅರ್ಜುನನು ಪ್ರಬಲನಾದ ಕರ್ಣನಿಂದ ಹತವಾಗದಂತೆ ಕರ್ಣನು ಪರಶುರಾಮರಿಂದ ಶಾಪಹೊಂದಲಿ ಎಂದು ಇಂದ್ರನ ಸಂಕಲ್ಪವೂ ಆಗಿತ್ತು. ಭಗವಂತನಿಗೂ ಭಕ್ತರ ಮನೋಗತ ನೆರವೇರಲೆಂಬ ಕರುಣೆ, ಹುಳು ತನ್ನ ವಿಷಕೊಂಡಿಯಿಂದ ಕರ್ಣನ ತೊಡೆಯನ್ನು ಕೊರೆಯತೊಡಗಿತು. ಘೋರವೇದನೆ ಆದರೂ ಇಂದ್ರಿಯನಿಗ್ರಹದ ಯೋಗಬಲದಿಂದ ಕರ್ಣನು ಗುರುಗಳಿಗೆ ನಿದ್ರಾಭಂಗವಾಗಬಾರದೆಂಬ ಭಾವದಿಂದ ಅಲುಗಾಡದೆ ಕುಳಿತಿದ್ದನು. ಕೆಲವು ನಿಮಿಷಗಳು ಕಳೆದನಂತರ ಪರಶುರಾಮರು ಎಚ್ಚೆತ್ತವರಂತೆ ಕಣ್ತೆರೆದು ನೋಡಿದರೆ ರಕ್ತದ ಕೋಡಿ ಕಾಣಿಸಿತು. ''ಕರ್ಣಾ ಇದೇನು ನಿನ್ನ ಕಾಲಿಂದ ಇಷ್ಟು ನೆತ್ತರು ಸುರಿಯುವುದೇಕೆ?'' ಎಂದು ಕೇಳಿದರು.

''ಗುರುಗಳೇ ಒಂದು ಹುಳು ನನ್ನ ಕಾಲು ಕಚ್ಚಿ ಹೀಗೆ ರಕ್ತ ಸುರಿಯುತ್ತಿದೆ. ನಿಮಗೆ ನಿದ್ರಾಭಂಗಪಡಿಸಬಾರದೆಂದು ಎಬ್ಬಿಸಲಿಲ್ಲ'' ಎಂದನು. ಆಗ ಪರಶುರಾಮರು ''ಕರ್ಣಾ! ಬ್ರಾಹ್ಮಣರಿಗೆ ಇಷ್ಟು ಕಠಿಣತ್ವ ಸಾಧ್ಯವಿರುವುದಿಲ್ಲ. ನೀನು ಯಾರು? ನಿನ್ನ ಸ್ವರೂಪವೇನು? ನಿಜ ಹೇಳು'' ಎಂದರು.

ಸ್ವಾಮೀ ನಾನು ಬ್ರಾಹ್ಮಣನೆಂದು ನಿನ್ನ ಸಮ್ಮುಖದಲ್ಲಿ ಹೇಳಿದರೂ ಅದು ದೋಷವಿಲ್ಲವೆಂಬ ಅನುಸಂಧಾನವಿಟ್ಟು ಹೇಳಿದೆನು. ನೀನು ಜಗಜ್ಜನಕ ನಿನಗೆ ಎಲ್ಲರೂ ಮಕ್ಕಳೇ ಆದ್ದರಿಂದ ನಿನ್ನ ಭಕ್ತನಾದ ನಾನೂ ಬ್ರಾಹ್ಮಣನೇ ಎಂಬ ಭಾವದಿಂದ ಹೇಳಿದ್ದೇನೆ ಕ್ಷಮಿಸು'' ಎಂದು ಪ್ರಾರ್ಥಿಸಿದನು.

''ಕರ್ಣಾ! ನೀನು ಏನೇ ಹೇಳಿದರೂ ಇನ್ನು ನಿನಗೆ ನನ್ನ ಸಾಮೀಪ್ಯ ತಪ್ಪಿತು. ಇಲ್ಲಿಂದ ಹೊರಟುಹೋಗು. ನನ್ನನ್ನು ಯಾರು ಶುದ್ಧಭಕ್ತಿಯಿಂದ ನಡೆದರೂ ಅವರಿಗೆ ನನ್ನ ಕರುಣ ಇದ್ದೇ ಇರುತ್ತದೆ. ನಿನಗೆ ಯುದ್ಧದಲ್ಲಿ ಸೋಲಿಲ್ಲ, ಸ್ಪರ್ಧೆಗೆ ನಿಂತಾಗ ಮಾತ್ರ ನಿನಗೆ ಜಯ

ಕೈಕಳಚುತ್ತದೆ. ನಿನಗೆ ನನ್ನಿಂದ ಉಪದೇಶಗೊಂಡ ಶಸ್ತ್ರಾಸ್ತ್ರಗಳ ಮಂತ್ರಗಳ ವಿಸ್ಮರಣೆ ಉಂಟಾಗುತ್ತದೆ'' ಕರ್ಣನು ಭಗವದಾಜ್ಞೆಗೆ ಮಣಿದು ಹೊರಟುಹೋದನು.

## ಹರಿದ್ವೇಷಿ ಏಕಲವ್ಯ

ಏಕಲವ್ಯನೆಂಬ ವೀರನು ದ್ರೋಣರಬಳಿಗೆ ಬಂದು ನನಗೆ ಬಿಲ್ಲುಗಾರಿಕೆಯ ವಿದ್ಯೆಯನ್ನು ಹೇಳಿಕೊಡಬೇಕು'' ಎಂದು ಕೇಳಿಕೊಂಡನು. ಈತನು ಚಿಕ್ಕಬಾಲಕನಾಗಿದ್ದಾಗಲೇ ಚಂಡಾಲಬುದ್ಧಿಉಳ್ಳವನಾಗಿ ತಂದೆತಾಯಿಗಳಿಂದ ತಿರಸ್ಕೃತನಾಗಿ ಬೇಡರ ಗುಂಪಿನಲ್ಲಿ ಸೇರಿಕೊಂಡಿದ್ದ ಈತನು ಹಿಂದೆ ಮಣಿಮಂತನೆಂಬ ದೈತ್ಯನಾಗಿ ಹರಿವಾಯುಗಳ ದ್ವೇಷ ಮಾಡಿದವನು. ಈತನಲ್ಲಿ ಅಸುರಾವೇಶವಿರುವುದರಿಂದ ನನ್ನ ಶಿಷ್ಯನಾಗಲು ಅರ್ಹನಲ್ಲವೆಂದು ತಿಳಿದಿದ್ದ ದ್ರೋಣರು ''ನೀನು ಕಿರಾತಜಾತಿಯವನು. ನಿನಗೆ ಶಸ್ತ್ರಾಭ್ಯಾಸ ಉಪದೇಶ ಮಾಡಬಾರದು. ಹೊರಟುಹೋಗು'' ಎಂದರು.

ಏಕಲವ್ಯನು ತಾನು ದ್ರೋಣರಶಿಷ್ಯನಾದ ಅರ್ಜುನನಿಗೆ ಸಮಾನವಾದ ವಿದ್ಯೆಯನ್ನೇ ಹೇಗಾದರೂ ಮಾಡಿ ಕಲಿಯಲೇಬೇಕೆಂಬ ಹಠದಿಂದ ದ್ರೋಣರಂತೆ ಒಂದು ಪ್ರತಿಮೆಯನ್ನು ರಚಿಸಿಟ್ಟುಕೊಂಡು ಆ ಬೊಂಬೆಯಲ್ಲಿ ತನ್ನ ಗುರುಭಾವವನ್ನು ತುಂಬಿ ಅಸ್ತ್ರಾಭ್ಯಾಸ ಮಾಡತೊಡಗಿದನು. ಇವನ ಸಾಧನೆ ಅದ್ಭುತವಾಗಿತ್ತು. ಅವನ ಯೋಗ್ಯತೆಗೆ ಮೀರಿದ ದುಷ್ಟಭಾವದ ಸಾಧನೆ ಆಗಿತ್ತು. ನಿರಂತರ ಸಾಧನೆಯಿಂದ ಅಸ್ತ್ರವಿದ್ಯೆಯಲ್ಲಿ ಪ್ರವೀಣನಾದನು. ಏಕಲವ್ಯನು ಪಾರ್ಥನ ಸರಿಸಮಾನವಾದ ವಿದ್ಯಾವಿಶಾರದನಾದನೆಂದು ದ್ರೋಣರಿಗೆ ತಿಳಿಯಿತು. ಅವನನ್ನು ಬಡಿದುಬಗ್ಗಿಸದಿದ್ದರೆ ಭಗವಂತನ ಸೇವೆಗೆ ಅಡ್ಡಿಬರುತ್ತದೆಂದು ತಿಳಿದ ದ್ರೋಣರು ತಮ್ಮ ಶಿಷ್ಯರೆಲ್ಲರ ಜೊತೆಗೆ ಒಮ್ಮೆ ಏಕಲವ್ಯನ ವಾಸಸ್ಥಳದ ಕಾಡಿನ ಕಡೆ ಬಂದರು.

ವೀರರೆಲ್ಲರೂ ಬೇಟೆಗಾಗಿ ನುಗ್ಗಿಬಂದರೆ ಸೇನಾದಳದಲ್ಲಿದ್ದ ಬೇಟೆಯ ಭಯಂಕರಾಕೃತಿಯ ನಾಯಿಗಳು ಚಿರತೆಗಳಂತೆ ನುಗ್ಗಿಬಂದು ಬೊಗಳತೊಡಗಿದವು.

ಆಗ ಏಕಲವ್ಯನು ತೀಕ್ಷ್ಣಬಾಣಗಳಿಂದ ಆ ನಾಯಿಗಳ ಬಾಯಿಗೆ ಹೊಡೆದು ಅವು ಉಸಿರು ಬಿಡಲಿಕ್ಕಾಗದಂತೆ ಬಾಯಿತುಂಬ ಬಾಣವನ್ನು ತುಂಬಿದನು. ಆಗ ನಾಯಿಗಳು ಧರ್ಮರಾಜನ ಬಳಿಗೆ ಬರಲು ಎಲ್ಲರೂ ಆಶ್ಚರ್ಯಪಟ್ಟರು. ಯಾರೋ ಮಹಾ ಬಿಲ್ಲುಗಾರನು ಇಲ್ಲಿದ್ದಾನೆ. ನಾಯಿಗಳಿಗೆ ಕೊಂಚವೂ ಘಾಸಿಯಾಗದರೀತಿಯಲ್ಲಿ ಬಾಣಪ್ರಯೋಗಮಾಡಿ ಅವುಗಳ ಬೊಗಳುವಿಕೆ ಶಬ್ದವನ್ನು ಮಾತ್ರ ನಿಲ್ಲಿಸಿರುವುದು ನೋಡಿದರೆ ಮಹಾವಿದ್ವಾಂಸನೇ ಇರಬಹುದೆಂದು ಕಾಣುತ್ತದೆ'' ಎಂದು ಮಾತನಾಡಿಕೊಂಡು, ಕಾಡಿನಲ್ಲಿ ನುಗ್ಗಿಬಂದರೆ ಅಲ್ಲಿ ಏಕಲವ್ಯನು ದ್ರೋಣಾಚಾರ್ಯರ ಪ್ರತಿಮೆಯ ಮುಂದೆ ಶಸ್ತ್ರಾಭ್ಯಾಸ ಮಾಡುತ್ತಿರುವುದನ್ನು ಕಂಡರು.

ಆಗ ದ್ರೋಣರು ''ಏಕಲವ್ಯಾ ನನ್ನನ್ನು ನೀನು ಗುರುವೆಂದು ಭಾವಿಸಿದ್ದರೆ ಗುರುದಕ್ಷಣೆ ಕೊಡಬೇಕು'' ಎಂದರು. ಏಕಲವ್ಯನು ಗುರುಗಳು ಅಪ್ಪಣೆ ಕೊಡಿಸಿದಂತೆ ಕೊಡಲು ಸಿದ್ಧನಿದ್ದೇನೆ'' ಎಂದು ನುಡಿದಾಗ ನಿನ್ನ ಬಲಗೈಹೆಬ್ಬೆರಳನ್ನು ನನಗೆ ಕಾಣಿಕೆ ಅರ್ಪಿಸು'' ಎಂದರು. ಏಕಲವ್ಯ ಅರ್ಜುನನ ಸಮಾನವೀರನಾಗಲು ಯೋಗ್ಯನಲ್ಲ. ಆತನು ತನ್ನ ಯೋಗ್ಯತೆಮೀರಿ ಸಾಧನೆಮಾಡಿದ ಪ್ರಯುಕ್ತ ಭಗವಂತನು ನನ್ನಿಂದ ಅವನಿಗೆ ಈ ಶಿಕ್ಷೆ ವಿಧಿಸಿದನು'' ಎಂದರು.

## ವಿದ್ಯಾಪ್ರದರ್ಶನ ಕೂಟ

ದ್ರೋಣಾಚಾರ್ಯರ ಶಿಷ್ಯರೆಲ್ಲರೂ ಯುದ್ಧಶಿಕ್ಷಣದಲ್ಲಿ ಲೋಕಪ್ರಸಿದ್ಧರಾದರು. ರಾಜಪುತ್ರರು ಕಲಿತಿರುವ ವಿದ್ಯಾಪ್ರಚಾರ ಮಾಡಲಿಕ್ಕಾಗಿ ಅನೇಕದೇಶದ ರಾಜರುಗಳಿಗೆ ಆಮಂತ್ರಣ ಕಳುಹಿಸಿದರು. ದೊಡ್ಡ ಕ್ರೀಡಾರಂಗ ಸುಂದರವಾಗಿ ಸಿದ್ಧವಾಯಿತು. ದೇಶದೇಶದ ವೀರರಾಜರೆಲ್ಲರೂ ನೆರೆದು ದೊಡ್ಡಸಭೆ ಸೇರಿತು.

ಆಗ ದ್ರೋಣಾಚಾರ್ಯರು ಪರಶುರಾಮರಿಗೆ ಪಾದಪೂಜೆ ಸಲ್ಲಿಸಿದನಂತರ ''ರಾಜಕುಮಾರರೇ! ನೀವು ಇದುವರೆವಿಗೂ ಅಭ್ಯಾಸಮಾಡಿರುವ ಯುದ್ಧ ಚತುರತೆಯನ್ನು ಎಲ್ಲರಮುಂದೂ ತೋರಿಸಿರಿ'' ಎಂದರು.

ಗುರುಗಳ ಆಜ್ಞೆ ಆದೊಡನೆಯೇ ವೀರಕುಮಾರರೆಲ್ಲರೂ ಸಭೆಯಮುಂದೆ ನಿಂತು ಗುರುಹಿರಿಯರೆಲ್ಲರಿಗೂ ನಮಸ್ಕಾರಮಾಡಿ ತಮ್ಮ ಪಾಂಡಿತ್ಯದ ಪ್ರಚಾರಕ್ಕಾಗಿ ಉತ್ಸಾಹದಿಂದ ಸಿದ್ಧರಾಗಿರಲು ಮೊದಲು ಗುರುಪುತ್ರನಾದ ಅಶ್ವತ್ಥಾಮನು ಮುಂದೆಬಂದು ತಂದೆಯ ಪಾದಕ್ಕೆ ತಲೆಯೂರಿ ನಮಸ್ಕಾರಮಾಡಿ ತನ್ನ ಅಸದೃಶ್ಯವಾದ ಅಸ್ತ್ರಕೌಶಲ್ಯವನ್ನು ಆನಂದೋತ್ಸಾಹದಿಂದ ತೋರಿಸಿದನು.

ಪ್ರೇಕ್ಷಕರು ಕರತಾಡನದಿಂದ ಕುಣಿದಾಡುತ್ತ ಅಶ್ವತ್ಥಾಮನ ಯುದ್ಧಕುಶಲತೆಗೆ ಹೊಗಳಿ ಕೊಂಡಾಡುತ್ತಿದ್ದರು. ನಂತರ ಅರ್ಜುನನು ಗುರುಗಳಿಗೆ ನಮಸ್ಕಾರಮಾಡಿ ತನ್ನ ದೈವದತ್ತವಾದ ವಿದ್ಯಾಚಾತುರ್ಯದಿಂದ ಎಲ್ಲರ ಮನಸ್ಸನ್ನೂ ಸೂರೆಗೊಂಡನು. ಅಶ್ವತ್ಥಾಮನಿಗಿಂತಲೂ ಅಧಿಕರೀತಿಯಲ್ಲಿ ಪ್ರಭಾವವನ್ನು ಬೀರಿದ ಅರ್ಜುನನನ್ನು ಎಲ್ಲರೂ ಮಂಗಳ ಘೋಷಣೆಯೊಡನೆ ಸ್ತುತಿಮಾಡಿ ಕೊಂಡಾಡುತ್ತಿದ್ದರು.

ಅರ್ಜುನನ ಸ್ತುತಿ ಸೂರ್ಯಪುತ್ರನಿಗೆ ಸಹಿಸಲಾಗಲಿಲ್ಲ. ''ಅರ್ಜುನನ ಸಾಹಸ ನನ್ನ ಸಾಹಸದ ಮುಂದೆ ಅಲ್ಪ. ನಾನು ದ್ರೋಣರಿಗೂ ಗುರುವಾದ ಪರಶುರಾಮರಬಳಿ ವಿದ್ಯಾಭ್ಯಾಸಮಾಡಿ ಬಂದಿದ್ದೇನೆ. ನನ್ನ ಪಾಂಡಿತ್ಯ ಈಗ ಸಭೆ ನೋಡಲಿ'' ಎಂದು ಗರ್ವದಿಂದ ತನ್ನ ಅಸ್ತ್ರಚಾತುರ್ಯದಿಂದ ಎಲ್ಲರನ್ನೂ ಚಕಿತಗೊಳಿಸಿದನು. ಕರ್ಣನು ಅರ್ಜುನನಿಗಿಂತಲೂ ಬಹಳ

ಚೆನ್ನಾಗಿ ಅಸ್ತ್ರವಿದ್ಯಾವಿಶಾರದನಾಗಿದ್ದಾನೆಂದು ಎಲ್ಲರೂ ಹೊಗಳಿ ಪ್ರೋತ್ಸಾಹದ ನುಡಿಗಳಿಂದ ಹುರಿದುಂಬಿಸುತ್ತಿದ್ದರು.

ಅರ್ಜುನನು ಕರ್ಣನ ಬಿಲ್ಲುವಿದ್ಯಾಪರಿಣತೆಗೆ ಮೆಚ್ಚಿದನು. ಭೀಮನನ್ನು ಕುರಿತು ''ಕರ್ಣನು ನನಗೆ ಸಮಜೋಡಿಯಾಗಿ ನನಗೆ ಯುದ್ಧ ಕೇಳಿ ಕೊಡುತ್ತಾನೆ. ಆದ್ದರಿಂದ ಅವನೊಡನೆ ರಣರಸವನ್ನು ಅನುಭವಿಸಲು ನನಗೆ ಅನುಮತಿನೀಡು'' ಎಂದನು.

ಭೀಮನು ಸರ್ವಜ್ಞನಾದ್ದರಿಂದ ಕರ್ಣನ ರಹಸ್ಯವನ್ನು ಚೆನ್ನಾಗಿ ತಿಳಿದಿದ್ದನು. ಈತನು ಕಲಿಪಕ್ಷದಲ್ಲಿ ಸೇರಿ ಹರಿದ್ವೇಶಿಗಳಿಗೆ ಹರ್ಷಪಡಿಸಿ ದೈತ್ಯರ ಪಾಪದಕುಡಿ ಚಿಗುರುವಂತಾಗಲೆಂದು ಭಾವಿಸಿ ''ಅರ್ಜುನಾ! ನೀನು ಸ್ವಚ್ಛಕ್ಷತ್ರಿಯನಾಗಿ ಅಕ್ಷತ್ರಿಯನೊಡನೆ ಯುದ್ಧ ಮಾಡುವುದು ಧರ್ಮವಲ್ಲ'' ಎಂದು ಹೇಳಿ ಕರ್ಣನನ್ನು ಕುರಿತು ''ಎಲಾ ಸೂತಾ! ನೀನು ಕ್ಷತ್ರಿಯವೀರರೊಡನೆ ಸ್ಪರ್ಧೆಗೆ ನಿಂತಿರುವುದು ದೊಡ್ಡ ಅಪರಾಧ. ಬ್ರಾಹ್ಮಣ ಕುಲದಲ್ಲಿ ಹುಟ್ಟಿದ ಬ್ರಾಹ್ಮಣನು ವೈದಿಕ ಸಂಸ್ಕಾರವಿಲ್ಲದಿದ್ದರೆ ಅವನು ಬಹಿಶ್ಕೃತನಾಗುತ್ತಾನೆ. ನೀನು ಕ್ಷತ್ರಿಯ ಜಾತಿಯವನಲ್ಲ. ಕ್ಷತ್ರಿಯ ಸಂಸ್ಕಾರವಂತೂ ನಿನಗಿಲ್ಲ. ಇಂಥ ಕುಲಹೀನನಾದ ನೀನು ಕ್ಷತ್ರಿಯರಾಜರಿಗೆ ಯೋಗ್ಯವಾದ ವಿದ್ಯವನ್ನು ಅಧ್ಯಯನವಮಾಡಲು ಅನಧಿಕಾರಿಯಾದ್ದರಿಂದ ಶಸ್ತ್ರಾಸ್ತ್ರಗಳನ್ನು ಇಟ್ಟು ಹೊರಟುಹೋಗು'' ಎಂದನು.

ಮಕ್ಕಳ ಪಾಂಡಿತ್ಯವನ್ನು ನೋಡುತ್ತ ಕುಳಿತಿದ್ದ ಕುಂತಿ ಕರ್ಣನು ತನ್ನ ಮಗನೆಂದು ತಿಳಿದುಕೊಂಡಳು. ಅವನನ್ನು ನೋಡಿದಾಗ ಆಕೆಯ ವಾತ್ಸಲ್ಯರಸ ಉಕ್ಕಿಬಂದಿತು. ಆದರೂ ತನ್ನ ದುಡುಕಿನ ಅಪರಾಧಕ್ಕೆ ತಕ್ಕಶಿಕ್ಷೆ ದೇವರು ಕೊಟ್ಟನೆಂದು ಮೂಕವೇದನೆ ಸಹಿಸಲಾರದೆ ಸಂಕಟಪಟ್ಟಳು. ಕ್ಷಾತ್ರತೇಜಸ್ಸಿನಿಂದ ತುಂಬಿದ ವೀರಕರ್ಣನು ಭೀಮನ ಮಾತಿಗೆ ಮರುತ್ತರವಿಲ್ಲದೆ ತಲೆತಗ್ಗಿಸಿ ನಿಂತಿರುವುದು ಕಂಡ ದುರ್ಯೋಧನನಿಗೆ ಅವನಲ್ಲಿ ವಾತ್ಸಲ್ಯ ಹುಟ್ಟಿತು. ಕರ್ಣನ ಮೈತ್ರಿಯಿಂದ ಭೀಮಾರ್ಜುನರನ್ನು ಗೆಲ್ಲಬಹುದೆಂಬ ಸ್ವಾರ್ಥಮೂಡಿತು. ಕರ್ಣನಂತಹ ಪರಾಕ್ರಮಿ ನಿರುತ್ಸಾಹದಿಂದ ನಿರರ್ಥಕವಾಗಬಾರದು. ಅವನಲ್ಲಿರುವ ಬಿಲ್ಲುಗಾರಿಕೆಯ ವಿದ್ಯಾಸಂಪತ್ತನ್ನು ನನ್ನದನ್ನಾಗಿ ಮಾಡಿಕೊಳ್ಳಬೇಕಾದರೆ ಈಗ ಕರ್ಣನನ್ನು ನನ್ನವನನ್ನಾಗಿ ಮಾಡಿಕೊಳ್ಳಬೇಕೆಂಬ ಸ್ವಾರ್ಥದಿಂದ ''ಕರ್ಣಾ ನೀನು ರಾಜವಿದ್ಯೆಯನ್ನು ಅಮೋಘವಾಗಿ ಸಂಪಾದಿಸಿದ ಸಾರ್ವಭೌಮನಾದ್ದರಿಂದ ನಿನಗೂ ಕ್ಷತ್ರಿಯರಾಜರೊಂದಿಗೆ ಯುದ್ಧಮಾಡುವ ಅಧಿಕಾರ ಸಂಪೂರ್ಣವಾಗಿದೆ ಎಂಬುದನ್ನು ತೋರಿಸಲಿಕ್ಕಾಗಿ ನಿನ್ನನ್ನು ಈಗಲೇ ಅಂಗದೇಶದ ರಾಜ್ಯ ಸಿಂಹಾಸನದಲ್ಲಿ ಕೂಡಿಸಿ ಪಟ್ಟಾಭಿಷೇಕ ಮಾಡುತ್ತೇನೆ. ಇಗೋ ಈ ಕರ್ಣ ಅಂಗದೇಶದ ರಾಜ್ಯಲಲಾಮನಾಗಿ ಕೀರ್ತಿಕಿರೀಟಧಾರಣ ಮಾಡಿದ ವೀರರಾಜನಾಗಿದ್ದಾನೆ'' ಎಂದು ಸಕಲರಾಜರ ಮುಂದೆ ಘೋಷಣೆ ಮಾಡಿದನು. ಆಗ ಕರ್ಣನ ಸಾಕುತಂದೆಯಾದ ಅತಿರಥನು ಬಂದು ಮಗನನ್ನು ಆಲಂಗಿಸಿಕೊಂಡಾಗ ಕರ್ಣನು ಅವನ ಕಾಲಿಗೆ ನಮಸ್ಕಾರ ಮಾಡಿದನು.

ಆಮೇಲೆ ಮತ್ತೆ ಭೀಮಸೇನ ದುರ್ಯೋಧನ ಗದಾ ಚಾಲನದ ಚಾತುರ್ಯವನ್ನು ತೋರಿಸಲಿಕ್ಕಾಗಿ ಸಭಾಂಗಣಕ್ಕೆ ಬಂದರು. ಇಬ್ಬರೂ ಅದ್ಭುತವಾಗಿ ತಮ್ಮ ಪಾಂಡಿತ್ಯವನ್ನು ಪ್ರದರ್ಶನಮಾಡಿ ಜನಮನ್ನಣೆಗೆ ಪಾತ್ರರಾದರು. ಆಗ ಭೀಮಸೇನನು ದುರ್ಯೋಧನನಲ್ಲಿರುವ ಮೂಲಕಲಿಯನ್ನು ಕೆರಳಿಸಲಿಕ್ಕಾಗಿ ತನ್ನ ಸಾಮರ್ಥ್ಯ ದುರ್ಯೋಧನನ ಯೋಗ್ಯತೆಗೆ ಮೀರಿದ್ದು ಎಂದು ಅಬ್ಬರಿಸುತ್ತ ಬರಲು ದುರ್ಯೋಧನನಲ್ಲಿ ಸೇರಿಕೊಂಡಿದ್ದ ಕ್ರೋಧದ ಕಿಡಿಗಳು ಆಗ ಮೇಲೆದ್ದು ಬಂದು ರೋಷದಿಂದ ಭೀಮನಮೇಲೆ ಬಿದ್ದನು. ಆಗ ಭೀಮಸೇನನು ಕೆಣಕಿದ ಸಿಂಹದಂತೆ ಭೀಮಗರ್ಜನೆಯಿಂದ ದುರ್ಯೋಧನನನ್ನು ತನ್ನ ಬಾಹುಬಲದಿಂದ ಕೆರಳಿದ ಗದಾಯುದ್ಧದಿಂದ ಒಮ್ಮೆ ಕುಟ್ಟಿದಾಗ ಜಗತ್ತಿನಲ್ಲಿ ವಾಯುಪುತ್ರನ ಸೇವೆಗಾಗಿ ಶ್ರೀಹರಿಯಾಜ್ಞೆಯಿಂದ ಸೃಷ್ಟಿಯಾದ ಸಕಲ ಸಜ್ಜೀವಿಗಳು ಸದ್ಧರ್ಮಗಳೆಲ್ಲವೂ ವಾಯುಪುತ್ರನ ಬಲಬಾಹುಗಳ ಆಶ್ರಯದಲ್ಲಿ ಬಂದುಸೇರಿದವು. ಭೀಮಸೇನನ ಘರ್ಜನೆಗೆ ಹೆದರಿದ ದುಷ್ಟಜೀವಿಗಳು ರಾಕ್ಷಸರು ಮೊದಲಾದವರೆಲ್ಲರೂ ಭಯಕಂಪಿತರಾಗಿ ದುರ್ಯೋಧನನನ್ನು ಮೊರೆಹೊಕ್ಕು ಅವನಲ್ಲಿ ಬಂದುಸೇರಿದವು.

ಅಸುರರಿಗೆ ಅಜ್ಞಾನ ಮತ್ತಷ್ಟು ಮರುಕಳಿಸಬೇಕೆಂದು ಜಯಲಕ್ಷ್ಮಿಯು ಒಮ್ಮೆ ಅಸುರರ ಕಡೆಗೆ ಸೇರಿ ಅವರಿಗೇ ಜಯ ಎನ್ನುವಂತೆ ತೋರಿಸಿ ಕುಣಿಸುತ್ತಿದ್ದಳು. ಮತ್ತೊಮ್ಮೆ ದೇವತೆಗಳ ಕಡೆಗೆ ಬಂದು ಅವರಿಗೆ ಅಭಯವಿತ್ತು ''ನೀವು ಶ್ರೀಹರಿ ಪಕ್ಷದವರಾದ್ದರಿಂದ ಹೆದರಬೇಡಿರಿ'' ಎಂದು ಧೈರ್ಯ ನೀಡುತ್ತಿದ್ದಳು.

ಭೀಮಸೇನನು ಅಸುರರನ್ನು ಲೀಲಾಜಾಲವಾಗಿ ಗದಾಪ್ರಹಾರದಿಂದ ಘಾಸಿಪಡಿಸಿ ಓಡಿಸುವುದನ್ನು ಕಂಡ ದೇವತೆಗಳು ಭೀಮನ ಮೇಲೆ ಪುಷ್ಪವೃಷ್ಟಿ ಕರೆದು ಸ್ತುತಿಸುತ್ತಿದ್ದರು. ಹೀಗೆ ಬರಬರುತ್ತ ಗದೆಗಳ ಘರ್ಷಣೆಗಳಿಂದ ರೋಷದಕಿಡಿಗಳು ವೃದ್ಧಿಯಾಗುತ್ತ ಬಂದು ಪ್ರೇಕ್ಷಕರೆಲ್ಲರೂ ಭಯದಿಂದ ನಡುಗಿದರು. ಸಂತೋಷಕೂಟದ ಸಭಾಂಗಣ ರೋಷದ ರಣಾಂಗಣವಾಯಿತು.

ದ್ರೋಣರು ಮುಂದೆನಡೆಯಬೇಕಾದ ಕಿಚ್ಚಿನಕಾಳಗಕ್ಕೆ ನಾಂದೀಪೂಜೆ ಆಯಿತು ಎಂದುಕೊಂಡು ''ಅಶ್ವತ್ಥಾಮಾ! ಅವರಿಬ್ಬರನ್ನೂ ಸಮಾಧಾನಮಾಡಿ ಕಾಳಗವನ್ನು ನಿಲ್ಲಿಸು'' ಎಂದರು. ಅಶ್ವತ್ಥಾಮನು ರಂಗಸ್ಥಳಕ್ಕೆ ಬಂದು ನೀವಿಬ್ಬರೂ ಬಲಶಾಲಿಗಳೇ ಆಗಿದ್ದೀರಿ. ನಿಮ್ಮಿಬ್ಬರ ಪಾಂಡಿತ್ಯವೂ ಸಮಾನವಾದದ್ದು. ಎಲ್ಲರೂ ಸಂತೋಷಪಟ್ಟಿದ್ದಾರೆ. ಗುರುಗಳ ಆಜ್ಞೆಯಂತೆ ಗದಾಚಾಲನ ಪ್ರದರ್ಶನವನ್ನು ನಿಲ್ಲಿಸಿರಿ'' ಎಂದು ತಡೆದು ನಿಲ್ಲಿಸಿದನು.

ಆಗ ಭೀಮಸೇನನು ಅರ್ಜುನನೊಡನೆ ಹೊರಟುಹೋದನು. ದುರ್ಯೋಧನನೂ ಕರ್ಣನೊಡಗೂಡಿ ಹೋದನಂತರ ಅಲ್ಲಿ ಸಾಲುಗಟ್ಟಿನಿಂತಿದ್ದ ದೇವತಾಗಣವೆಲ್ಲವೂ ತಮ್ಮೆಲ್ಲರ

ಪರವಾಗಿ ಭೀಮಸೇನನು ನಡೆಸಿದ ಅಸುರನಿಗ್ರಹದ ಕಾರ್ಯವನ್ನು ಪ್ರಶಂಸೆಮಾಡುತ್ತ ಸ್ತುತಿಸುತ್ತಿರಲು ಬ್ರಹ್ಮದೇವರು ''ದೇವತೆಗಳೇ! ಈ ಪ್ರದರ್ಶನ ಕಾಲಾಂತ್ಯದಲ್ಲಿ ಮಸೆಮಸೆದು ಮರುಕಳಿಸಿ ಕರಾಳ ಕಾಲಾಗ್ನಿಯಂತೆ ಕಾಲಕೂಟವಿಷದಂತಹ ಕದನವಾಗುವುದನ್ನು ನೀವೆಲ್ಲರೂ ಇಷ್ಟರಲ್ಲೇ ನೋಡಿ ಸಂತೋಷಪಡುತ್ತೀರಿ. ಈಗ ನೀವೆಲ್ಲರೂ ಸ್ವಸ್ಥಚಿತ್ತರಾಗಿ ನಿಮ್ಮ ಸ್ಥಾನಗಳಿಗೆ ಸೇರಿರಿ'' ಎಂದು ಅಭಯವಾಕ್ಯದಿಂದ ಕಳುಹಿಸಿದರು. ವಾಯುದೇವರ ಪಕ್ಷವನ್ನು ನಾವು ಹೊಂದಿರುವುದರಿಂದ ನಮ್ಮ ಕಡೆಗೆ ಶ್ರೀಹರಿ ಇರುತ್ತಾನೆ. ನಮಗೆ ಭಯವಿಲ್ಲ. ಏಕೆಂದರೆ ರಾಮಾವತಾರದಲ್ಲಿ ಸುಗ್ರೀವನು ವಾಯುದೇವರ ಪಕ್ಷವನ್ನು ಆಶ್ರಯಿಸಿದ ಕಾರಣ ಶ್ರೀರಾಮ ಅವನ ಪಕ್ಷದಲ್ಲೇ ನಿಂತು ಅವನನ್ನು ಉದ್ಧಾರಮಾಡಿದ ಈಗ ವಾಯುದೇವನಾದ ಭೀಮನಪಕ್ಷದ ನಮ್ಮನ್ನು ಶ್ರೀಕೃಷ್ಣ ಕಾಪಾಡದೇ ಬಿಡುವುದಿಲ್ಲ ಎಂದು ಸಂತೋಷದಿಂದ ದೇವಲೋಕಕ್ಕೆ ತೆರಳಿದರು.

ದ್ರೋಣರಬಳಿ ವಿದ್ಯಾಭ್ಯಾಸ ಅಮೋಘವಾಗಿ ನಡೆಯುತ್ತಿತ್ತು. ಕರ್ಣನ ವಿದ್ಯಾಚಾತುರ್ಯವನ್ನು ನೋಡಿದ ಭೀಮನು ಕರ್ಣನನ್ನು ಗೆಲ್ಲುವಂತಹ ವೀರನೆಂದರೆ ಅರ್ಜುನನೊಬ್ಬನೇ ಎಂದು ಊಹಿಸಿದನು.

ದುರ್ಯೋಧನನೂ ಕರ್ಣನ ಅಸ್ತ್ರವಿದ್ಯಾಪಾಂಡಿತ್ಯ ಅವನ ಪರಾಕ್ರಮಗಳಿಗೆ ಮೆಚ್ಚಿ ಅರ್ಜುನನನ್ನು ಗೆಲ್ಲುವಂತಹ ಒಬ್ಬ ಮಿತ್ರನನ್ನು ನಾನು ಪಡೆದಿದ್ದೇನೆಂದು ಸಂತೋಷಪಡುತ್ತಿದ್ದನು. ಎರಡು ತಂಡದವರಿಗೂ ಆಗಾಗ ಒಳಗೊಳಗೇ ದ್ವೇಷದ ಹೊಗೆ ಕಂಡು ಅದು ಉಜ್ವಲಿಸಿದಾಗ ವಾಯುದೇವನ ಆರ್ಭಟದಿಂದ ಶಮನಗೊಂಡು ತಣ್ಣಗಾಗುತ್ತಿತ್ತು.

ವಿದ್ಯಾಭ್ಯಾಸ ಮುಗಿದನಂತರ ದುರ್ಯೋಧನನ ದುಷ್ಟಪಕ್ಷದವರೆಲ್ಲರೂ ಒಂದುಗೂಡಿ ನಾವು ಗುರುದಕ್ಷಣೆ ಏನು ಕೊಡುವುದು? ಎಂದು ಚರ್ಚೆಮಾಡಿ ಗುರುಗಳ ಸಮೀಪಕ್ಕೆ ಬಂದು ಗುರುದಕ್ಷಣೆ ಏನು? ಎಂಬುದನ್ನು ತಿಳಿಸಿರಿ'' ಎಂದರು. ಆಗ ದ್ರೋಣರು ಪಾಂಚಾಲದೇಶದರಸನನ್ನು ಹೆಡೆಮುಡಿಗೆ ಕಟ್ಟಿ ಎಳೆತಂದು ಒಪ್ಪಿಸಿರಿ ಅದೇ ಗುರುದಕ್ಷಣೆ'' ಎಂದರು.

ದುರ್ಯೋಧನನು ಮದಮತ್ತತೆಯಿಂದ ಪಾಂಡವರನ್ನು ತೃಣೀಕರಿಸಿ ಅವರನ್ನು ಕರೆಯದೆ ಕರ್ಣಾದಿಗಳೊಂದಿಗೆ ತನ್ನ ಪರಾಕ್ರಮವನ್ನು ಮೆರೆಸಲಿಕ್ಕಾಗಿ ತಕ್ಕ ಸಮಯವೆಂದು ಜಂಭದಿಂದ ಸೇನಾಸಾಗರದಿಂದೊಡಗೂಡಿ ರಣದಬ್ಬರದಿಂದ ಹೊರಟನು.

ಪಾಂಡವರು ಹಸ್ತಿನಾವತಿಯಲ್ಲೇ ಇದ್ದರು. ಭೀಮನು ದ್ರೋಣಾಚಾರ್ಯರ ಬಳಿಗೆ ಬಂದು ''ಗುರುಗಳೇ! ದುರ್ಯೋಧನನು ದೃಪದನನ್ನು ಸೋಲಿಸಲು ಅಸಮರ್ಥನಾದರೂ ಅವಿವೇಕದಿಂದ ನಮ್ಮ ಬೆಂಬಲವಿಲ್ಲದೆ ತನ್ನ ಪೌರುಷ ಪ್ರಕಟ ಮಾಡಲಿಕ್ಕಾಗಿ ಹೊರಟಿದ್ದಾನೆ. ದೃಪದನಿಗೆ ಸೂರ್ಯನವರವಿದೆ. ಪಟ್ಟಣಕ್ಕೆ ಶತ್ರುಗಳು ಮುತ್ತಿದರೆ ನಿನಗೆ ಶತ್ರುಜಯವಾಗುತ್ತದೆ. ನಿನ್ನ ರಾಜ್ಯದಲ್ಲಿ

ನಿನಗೆ ಸೋಲಿಲ್ಲ ಎಂದು ವರ ಪಡೆದಿದ್ದಾನೆ. ಆದ್ದರಿಂದ ದ್ರುಪದನು ದುರ್ಯೋಧನನಿಗೆ ಕೈಸೆರೆ ಸಿಗುವುದಿಲ್ಲ. ಕೌರವರು ಅವರಿಂದ ಮೈಮುರಿಸಿಕೊಂಡು ಬಂದನಂತರ ನಾವು ನಿನ್ನ ಪ್ರತಿಜ್ಞೆಯನ್ನು ನೆರವೇರಿಸಿ ನಮ್ಮ ಗುರುಕಾಣಿಕೆಯಿಂದ ಧನ್ಯರಾಗುವೆವು'' ಎಂದು ಹೇಳಿದನು.

ಕೌರವನು ಶತೃಪಡೆಯ ಬಲಾಬಲವನ್ನರಿಯದೆ ಸೈನ್ಯಸಮೂಹದೊಂದಿಗೆ ನಗರದೊಳಗೆ ನುಗ್ಗಿ ರೀತಿನೀತಿಗಳಿಲ್ಲದೆ ಲೂಟಿ ಮಾಡುತ್ತಿರಲು ದ್ರುಪದರಾಜನ ಸೇನಾನಾಯಕರು ಮೂರು ಅಕ್ಷೋಹಿಣಿ ವೀರಭಟರೊಡನೆ ಬಂದು ಕೌರವರ ಸೇನಾಬಲವನ್ನು ಬಡಿದೋಡಿಸಿದರು. ಕೌರವರ ಅನೀತಿಯ ವರ್ತನೆಗೆ ದ್ರುಪದರಾಜನ ಪ್ರಜೆಗಳೆಲ್ಲರೂ ಉಪ್ಪರಿಗೆಯಮೇಲೇರಿ ತಮ್ಮ ಸ್ತ್ರೀಯರು ಬಾಲಕರೊಡನೆ ಕಲ್ಲುಗಂಡುಗಳನ್ನು ಎಸೆಯುತ್ತ ಬಿದ್ದು ಸಾಯುವಂತೆ ಮೇಲಿಂದಮೇಲೆ ಬಡಿದು ಬೀಳಿಸುತ್ತಿದ್ದರು.

ಕೌರವರು ಸೋತುಸುಣ್ಣವಾಗಿ ಜೀವ ಉಳಿದರೆ ಸಾಕೆಂಬ ಭಾವದಿಂದ ಬಂದು ಅರಮನೆ ಸೇರಿದರು. ದ್ರೋಣರಿಗೆ ಸೋಲಿನ ಸಮಾಚಾರ ತಿಳಿಯಿತು. ಭೀಮಾರ್ಜುನರಿಗೆ ಸನ್ಮಾನಿಸಿ ಆಶೀರ್ವಾದ ಮಾಡಿ ಜಯನಿಮ್ಮದಾಗಲೆಂದು ಕಳುಹಿಸಿದರು. ಭೀಮಸೇನನು ನಕುಲಸಹದೇವರೊಂದಿಗೆ ಅರ್ಜುನನನ್ನು ಕರೆದುಕೊಂಡು ಪಾಂಚಾಲರಾಜ್ಯಕ್ಕೆ ಹೊರಟರು. ಭೀಮನು ಯಾರನ್ನು ಹಿಂಸಿಸಲಿಲ್ಲ. ಏನೂ ಅಕ್ರಮಣ ಮಾಡಲಿಲ್ಲ. ರಾಜದೂತರನ್ನು ಕುರಿತು ''ನಿಮ್ಮ ರಾಜನಿಗೆ ಹಸ್ತಿನಾವತಿಯಿಂದ ಪಾಂಡುರಾಜನ ಪುತ್ರರು ಯುದ್ಧಕ್ಕೆ ಬಂದಿದ್ದಾರೆ. ಎಂದು ತಿಳಿಸಿರಿ'' ಎಂದನು.

ಪುರಜನರು ಭೀಮನ ಆಕಾರ ಅವನ ಮಾತಿನ ಗಂಭೀರನಾದ ಅವನ ತೇಜಸ್ಸಿಗೆ ಮನಸ್ಸಿನಲ್ಲೇ ಆಶ್ಚರ್ಯಹೊಂದಿದರು. ರಾಜದೂತರು ಭೀಮನನ್ನು ನೋಡಿದಾಗಲೇ ನಡುಗುತ್ತ ರಾಜನಿಗೆ ತಿಳಿಸಿದರು. ದ್ರುಪದನು ಯುದ್ಧದ ಕರೆಗೆ ಓಗೊಟ್ಟು ಸೇನಾ ಸಜ್ಜಿನೊಂದಿಗೆ ಹೊರಟನು. ಭೀಮನು ಯಾರನ್ನು ಕೊಲ್ಲಲಿಲ್ಲ. ಸೈನಿಕರನ್ನು ಗರ್ಜನೆಯಿಂದ ಓಡಿಸಿದನು. ಉತ್ತಮಂಜಸ ಯುಧಾಮನ್ಯು ಇಬ್ಬರೂ ಭೀಮನಮೇಲೆ ಅಸ್ತ್ರಗಳ ಮಳೆ ಸುರಿಸುತ್ತಿದ್ದರು. ಭೀಮನು, ಅವರು ಬಾಣತೊಡದಂತೆ ಅವರ ಸಾಮಗ್ರಿಗಳೆಲ್ಲವನ್ನು ಧ್ವಂಸಮಾಡಿ ಓಡಿಸಿ ನಂತರ ದ್ರುಪದನ ಬಳಿಗೆ ಬಂದರು. ದ್ರುಪದನನ್ನು ತನ್ನ ಬಾಹುಸೆರೆಯಲ್ಲಿ ಬಂಧಿಸಿದನು. ನಂತರ ''ಅರ್ಜುನಾ ನೀನು ಗುರುಗಳ ಮಾತನ್ನು ಪಾಲಿಸು'' ಎಂದಾಗ ಅರ್ಜುನನು ಬಾಣದ ರಾಶಿಯೊಳಗೆ ಮುಚ್ಚಲ್ಪಟ್ಟ ದ್ರುಪದನ ರಥಕ್ಕೆ ಮೃಗವನ್ನು ಹಿಡಿಯಲು ಸಿಂಹಹಾರಿದಂತೆ ಹಾರಿದನು. ದ್ರುಪದನನ್ನು ಕಟ್ಟಿ ತನ್ನ ರಥಕ್ಕೆ ಎಸೆದನು.

ಆಗ ವೀರಭಟರು ಬಂದು ಅರ್ಜುನನ ರಥವನ್ನು ಮುತ್ತಿದರು. ಭೀಮನು ವೀರರನ್ನು ಗದೆಯಿಂದ ಕುಟ್ಟಿ ಬಾರಿಸುತ್ತಿರಲು ಭೀಮ ಗದೆಗೆ ಎಷ್ಟೋಜನ ಪ್ರಾಣನೀಗಿದರು. ಆಗ ಅರ್ಜುನನು ''ಅಣ್ಣಾ! ದ್ರುಪದನ ಸೈನಿಕರನ್ನು ಕೊಲ್ಲಬೇಡ. ಅವರು ತಮ್ಮ ಕರ್ತವ್ಯದಂತೆ ತಮ್ಮ

ರಾಜನ ರಕ್ಷಣೆಗೆ ಸಾಹಸ ಮಾಡುವುದು ಧರ್ಮವೇ ಆಗಿದೆ. ದ್ರುಪದನೂ ಅಧರ್ಮಿ ಅಲ್ಲ ಆತನು ಶ್ರೀಹರಿಯ ಆರಾಧಕನಾಗಿದ್ದಾನೆ. ನಮ್ಮ ತಂದೆಗೆ ಪರಮಮಿತ್ರನಾದ್ದರಿಂದ ಇವನ ನೆಂಟಸ್ಥನ ಯೋಗ್ಯವಾಗಿದೆ.

ಗುರುವಿನ ಆಜ್ಞೆಗಾಗಿ ಈತನನ್ನು ಕರೆದೊಯ್ದು ಅವರ ಕಾಲಡಿ ಒಪ್ಪಿಸಿದರೆ ಗುರುವಾಕ್ಯ ಪಾಲಿಸಿದ್ದೇವೆಂದು ಶ್ರೀಕೃಷ್ಣನೂ ಮೆಚ್ಚುತ್ತಾನೆ'' ಎಂದನು.

ದ್ರುಪದನನ್ನು ಕೈಸೆರೆ ಹಿಡಿದುತಂದು ದ್ರೋಣಾಚಾರ್ಯರಿಗೆ ಒಪ್ಪಿಸಿದರು. ದ್ರೋಣರಿಗೆ ಅರ್ಜುನನ ಪರಾಕ್ರಮ ಕಾಣಿಕೆಯಿಂದ ತೃಪ್ತಿಯಾಯಿತು. ನಂತರ ದ್ರುಪದರಾಜನನ್ನು ನೋಡಿ ''ದ್ರುಪದಾ! ನೀನು ಮಹಾರಾಜ. ನಾನು ಭಿಕ್ಷಾನ್ನದ ಬ್ರಾಹ್ಮಣ ಸಿಂಹಾಸನದ ಮೇಲೆ ಕೊಡಬೇಕಾದವನು ನನ್ನ ಕಾಲಡಿ ಏಕೆ ಬಿದ್ದಿರುವಿ? ಈಗಲಾದೂ ಹೇಳು. ನನ್ನ ನಿನ್ನ ಗೆಳೆತನ ಸುಳ್ಳೊ? ಅಥವಾ ನಿಜವೋ?'' ಎಂದನು. ದ್ರುಪದನು ಲಜ್ಜೆಯಿಂದ ತಲೆತಗ್ಗಿಸಿದನು. ಆಗ ದ್ರೋಣರು ''ದ್ರುಪದಾ! ಸಿರಿತನ ಬಡತನ ಶಾಶ್ವತವಲ್ಲ. ಧರ್ಮ ಒಂದೇ ಶಾಶ್ವತ. ಎಂದು ನಿನಗೆ ಉಪದೇಶ ನೀಡಲಿಕ್ಕಾಗಿ ಗುರುಪುತ್ರನಾದ ನಾನು ಹೀಗೆ ಮಾಡಿದೆನು. ''ಅರಸಾ! ಸತ್ಯ ಎಂದಿಗೂ ಅಸತ್ಯವಾಗುವುದಿಲ್ಲ. ನಾನು ನಿನ್ನ ಮಿತ್ರ ಎಂದು ನಿನ್ನ ಧರ್ಮಪೀಠದ ಮುಂದೆ ಹೇಳಿದ ಮಾತು ಸತ್ಯವೇ ಆಗಿ ಉಳಿಯಬೇಕಾಗಿರುವುದರಿಂದ ನಿನ್ನರಾಜ್ಯದ ಉತ್ತರ ಭಾಗವನ್ನು ನನಗೆ ಕೊಟ್ಟು ದಕ್ಷಿಣ ಭಾಗವನ್ನು ನೀನೇ ಆಳು. ನಿನ್ನ ಪೂರ್ಣ ರಾಜ್ಯವನ್ನು ನಾನು ಕಿತ್ತುಕೊಳ್ಳುವುದು ಕಷ್ಟವಲ್ಲ. ಆದರೆ ನನಗೆ ರಾಜ್ಯದಾಸೆ ಇಲ್ಲ. ನಾವಿಬ್ಬರೂ ಒಂದೇ ರಾಜ್ಯದಲ್ಲಿ ಅರಸರಾಗಿ ಆಳುತ್ತಿದ್ದರೆ ಜನರು ನಮ್ಮಿಬ್ಬರ ಸ್ನೇಹವೂ ಸುಳ್ಳಲ್ಲ. ನಿಜವೆಂದು ತಿಳಿದು ನನ್ನ ಮಾತು ನಿನ್ನ ಮಾತು ಎರಡೂ ಉಳಿಯುತ್ತದೆ'' ಎಂದರು.

## ದ್ರುಪದನ ಯಾಗಸೌರಭ

ದ್ರುಪದನು ಅಸುರಾವೇಶದಿಂದ ಅತಿಥಿ ತಿರಸ್ಕಾರ ಮಾಡಿದ ಪಶ್ಚಾತ್ತಾಪದಿಂದ ನೊಂದನು. ದ್ರೋಣರ ಕೈಲಿ ಶಿಷ್ಯರಿಂದ ಅವಮಾನಪಡಿಸಿಕೊಂಡದ್ದರಿಂದ ಬಹಳ ಚಿಂತೆಗೊಳಗಾದನು ಪುರಪ್ರವೇಶ ಮಾಡಲೇ ಇಷ್ಟವಿಲ್ಲದೆ ಖಿನ್ನನಾಗಿ ಅಮಿತಪರಾಕ್ರಮಶಾಲಿಗಳಾದ ದ್ರೋಣರನ್ನು ಗೆಲ್ಲುವಂತಹ ಒಬ್ಬ ಶೂರ ಮಗನೂ ರೂಪ,ಗುಣ, ಪರಾಕ್ರಮಗಳ ಖನಿಜದಂತಿರುವ ಅರ್ಜುನನನ್ನು ವರಿಸುವಂತಹ ಒಬ್ಬ ಪುತ್ರಿಯೂ ನನಗೆ ಲಭಿಸಿದರೆ ನನ್ನ ಮನಸ್ಸಿನ ದುಗುಡ ಕಳೆಯುತ್ತದೆಂಬ ಸಂಕಲ್ಪದಿಂದ ತಪೋನಿರತನಾಗಿದ್ದು ನಂತರ ಯಜ್ಞವನ್ನು ಆರಂಬಿಸಿದನು.

ಯಜ್ಞದೀಕ್ಷಿತನಾಗಿ ವೈಭವಯುಕ್ತ ಯಾಗವನ್ನು ಆರಂಭಮಾಡಿದನು. ಯಜ್ಞ ಬಹಳ ಶ್ರೇಷ್ಠ ರೀತಿಯಲ್ಲಿ ನಡೆದು ಪೂರ್ಣಾಹುತಿಯ ಸಮಯದಲ್ಲಿ ಪುತ್ರ ಪ್ರಾಪ್ತ್ಯರ್ಥವಾಗಿ ಹವಿಸ್ಸನ್ನು

ಅರ್ಪಿಸುವ ಸಮಯಕ್ಕೆ ಮಹಾರಾಣಿ ಬರಬೇಕಾಗಿತ್ತು. ಬರುವುದು ತಡವಾದ್ದರಿಂದ ಪುರೋಹಿತರು ಮಹೂರ್ತ ಮೀರುತ್ತದೆಂಬ ಉದ್ವಿಗ್ನದಿಂದ ಯಜ್ಞಪುರುಷನಲ್ಲಿ ಹೋಮ ಮಾಡಿದರು. ಆಗ ಯಜ್ಞಕುಂಡದಿಂದ ಒಬ್ಬ ದಿವ್ಯ ಪುರುಷನು ದಿವ್ಯಾಭರಣಗಳಿಂದ ಅಲಂಕೃತನಾಗಿ ಹಾರ–ಕಿರೀಟಾದಿಗಳಿಂದ ಶೋಭಿಸುತ್ತ ಬಂಗಾರದ ರಥವೇರಿ ಸಿಂಹನಾದದಿಂದ ದ್ರುಪದರಾಜನ ಎದುರಿಗೆ ಬಂದು ನಿಂತನು. ಮಹಾತೇಜೋಮೂರ್ತಿಯಾಗಿ ದಿಟ್ಟತನದಿಂದ ಬಂದ ಆತನನ್ನು ಧೃಷ್ಟದ್ಯುಮ್ನನೆಂದು ನಾಮಕರಣ ಮಾಡಿದರು. ನಂತರ ಸಾಕ್ಷಾತ್ತಾಗಿ ಭಾರತೀದೇವಿಯರೇ ಅಗ್ನಿಕುಂಡದಿಂದ ಬಂದರು.

ಭಾರತೀದೇವಿಯಲ್ಲಿ ಉಷಾ–ಶಚಿ–ಶ್ಯಾಮಲಾ–ಪಾರ್ವತಿ. ಈ ನಾಲ್ಕು ದೇವತಾಸ್ತ್ರೀಯರೂ ಸೇರಿದ್ದರು. ಉತ್ಕೃಷ್ಟ ಆನಂದ ಪಡೆದವಳಾಗಿ 'ಕೃಷ್ಣ' ಎಂದು ನಾಮಕರಣ ಮಾಡಿದರು.

ಭಾರತಿದೇವಿಯ ನಾಲ್ಕು ರೂಪಗಳಿಂದ ಅವತರಿಸಿದ ಕಾರಣವನ್ನು ಆಚಾರ್ಯರು ವಿವರಿಸಿ ಸುಂದರವಾಗಿ ತಿಳಿಸಿದರು.

## ದೇವತಾಸ್ತ್ರೀಯರಿಗೆ ಬ್ರಹ್ಮದೇವರ ಶಾಪ

ಕೃತಯುಗದಲ್ಲಿ ಒಮ್ಮೆ ಪಾರ್ವತಿ–ಶಚಿ–ಶಾಮಲ– ಮತ್ತು ಉಷಾ ಈ ನಾಲ್ವರು ದೇವತಾಸ್ತ್ರೀಯರೂ ಬ್ರಹ್ಮದೇವರಸಭೆಗೆ ತಮ್ಮ ಪತಿಯೊಂದಿಗೆ ಬಂದರು. ಬ್ರಹ್ಮದೇವರ ಸಮ್ಮುಖದಲ್ಲಿ ಅವರು ಪತಿಯೊಡನೆ ಬಹಳ ಸಲಿಗೆಯಿಂದ ಸರಸಸಲ್ಲಾಪಗಳನ್ನು ನಿರ್ಲಜ್ಜೆಯಿಂದ ವರ್ತಿಸುವುದನ್ನು ಬ್ರಹ್ಮದೇವರು ಕಂಡರು.

ಪತಿವ್ರತೆಯರೂ–ಲೋಕಪೂಜ್ಯರು ಆದವರಾದರೂ ಸಾಮಾನ್ಯ ಅಸಂಸ್ಕಾರ ಮಾನವಸ್ತ್ರೀಯರಂತೆ ಇವರು ಅನ್ಯರ ಎದುರಿಗೆ ಅವಿನಯದಿಂದ ನಡೆಯುತ್ತಿದ್ದಾರೆ ತಕ್ಕ ಶಿಕ್ಷೆಯಿಂದ ಬುದ್ಧಿ ಕಲಿಸಬೇಕೆಂದು,'' ನೀವೆಲ್ಲರೂ ನರಲೋಕದಲ್ಲಿ ಮಾನವಯೋನಿಯಲ್ಲಿ ಜನಿಸಿ ಪರಪುರುಷರ ಸಂಪರ್ಕ ಉಂಟಾಗಲಿ '' ಎಂದು ಶಪಿಸಿದರು.

ಇದಕ್ಕೂ ಮೊದಲು ಒಂದು ಬಾರಿ ಈ ನಾಲ್ಕು ದೇವತಾಸ್ತ್ರೀಯರೂ ಒಂದೆ ದೇಹದಿಂದ ಬ್ರಹ್ಮದೇವರನ್ನು ಪರೀಕ್ಷಿಸಬೇಕೆಂದು ಅವರ ಮುಂಭಾಗದಲ್ಲಿ ಅತ್ತ ಇತ್ತ ಓಡಾಡುವಾಗ ಬ್ರಹ್ಮದೇವರು ಮೂರು ಬಾರಿ ಅಲ್ಲಿಂದಿಲ್ಲಿಗೆ ಸುಳಿದಾಡಿದರೂ ಮಾತನಾಡಲಿಲ್ಲ. ಆಮೇಲೆ ''ನೀವು ನಾಲ್ವರೂ ಒಂದೇ ದೇಹಧರಿಸಿ ನನ್ನನ್ನು ಪರೀಕ್ಷಿಸಲು ಬಂದಿದ್ದೀರಿ ಈ ಅಪರಾಧದಿಂದ ನೀವು ನಾಲ್ವರೂ ಒಂದೇ ದೇಹುಳ್ಳವರಾಗಿ ಮೂರು ಬಾರಿ ಭೂಲೋಕದಲ್ಲಿ ಹುಟ್ಟಿರಿ'' ಎಂದು ಶಾಪಕೊಟ್ಟರು. ದೇವತೆಗಳೇ ಆದಾಗ್ಯೂ ಉತ್ತಮರಾದವರಿಗೆ ಅಪಚಾರ ಮಾಡಿದರೆ ದುಃಖ ಪ್ರಾಪ್ತವಾಗುತ್ತದೆಂಬುದು ಬ್ರಹ್ಮದೇವರ ಶಿಕ್ಷಣವಾದರೆ ಮುಂದೆ ನಡೆಯಬೇಕಾದ ಅಸುರಸಂಹಾರ

ಕಾರ್ಯಕ್ಕೆ ದೇವತೆಗಳ ಅವತಾರವೂ ಭೂಮಂಡಲದಲ್ಲಿ ಆಗ ಬೇಕಾಗಿದ್ದ ಒಂದು ಕಾರಣವೂ ಆಗಿತ್ತು. ಈ ಕಾರಣಗಳಿಂದ ಭಗವಂತನ ಪ್ರೇರಣಾನುಸಾರ ದೇವತಾಸ್ತ್ರೀಯರ ಅವತಾರ ಕಥೆ ನಡೆಯಿತು.

## ಭಾರತೀದೇವಿಯರ ಭದ್ರವಚನ

ಬ್ರಹ್ಮದೇವರಿಂದ ಶಾಪಹೊತ್ತ ದೇವತಾಸ್ತ್ರೀಯರು ತೇಜೋಹೀನರಾಗಿ ಶೋಕತಪ್ತರಾಗಿರಲು ಭಾರತೀದೇವಿಯು ಅವರನ್ನು ಸಮಾಧಾನದ ವಚನಗಳಿಂದ ಅವರಿಗೆ ಮೂಲತತ್ತ್ವ ವಿಚಾರವನ್ನು ತಿಳಿಸಿದಳು.

ನೀವು ನಿಮ್ಮ ಪ್ರಾರಬ್ಧಕರ್ಮದಂತೆ ನಾಲ್ಕು ಜನ್ಮಗಳನ್ನು ಹೊಂದಲೇಬೇಕಾಗಿತ್ತು. ಅದರಿಂದ ನಿಮ್ಮ ದೈವತ್ವಕ್ಕೆ ಕುಂದು ಬರಬಾರದೆಂಬ ಕರುಣದಿಂದಲೇ ಬ್ರಹ್ಮದೇವರು ನಿಮಗೆ ಶಾಪದ ಮೂಲಕ ಅನುಗ್ರಹ ಮಾಡಿದ್ದಾನೆಂದೇ ನೀವು ತಿಳಿಯಿರಿ. ಶ್ರೀಮನ್ನಾರಾಯಣನು ಕೃಷ್ಣಾವತಾರ ಮಾಡಿ ದುಷ್ಟ ನಾಶನದ ಕಾರ್ಯಕ್ಕೆ ನಿಮ್ಮನ್ನು ನಿಮಿತ್ತ ಮಾಡಿಕೊಂಡು ನಿಮ್ಮನ್ನು ಕಾಪಾಡುತ್ತಾನೆ ನಿಮ್ಮ ಧರ್ಮಕ್ಕೆ ಕುಂದುಬರದಂತೆ ಭಗವಧ್ಯಾನಾಸಕ್ತರಾಗಿ ನಿಮ್ಮ ಶೋಧನೆಯಲ್ಲಿ ಜಯಹೊಂದಿರಿ'' ಎಂದು ಅನುಗ್ರಹಿಸಿ ಅವರನ್ನು ಕಳುಹಿಸಿದಳು.

## ಸುರನಾರಿಯರ ಸಮಾಲೋಚನೆ

ಬ್ರಹ್ಮದೇವರು ನಮಗೆ ''ಒಂದು ಜನ್ಮದಲ್ಲಿ ಪರಪುರುಷರ ಸ್ಪರ್ಶ ನಿಮಗೆ ಉಂಟಾಗಲಿ'' ಎಂದು ಶಾಪ ಕೊಟ್ಟಿದ್ದಾರೆ. ''ನಮಗೆ ಅನ್ಯಪುರುಷರ ಸ್ಪರ್ಶವಾದರೂ ಅವರಿಂದ ನಮ್ಮ ಪಾತಿವ್ರತ್ಯಕ್ಕೆ ಭಂಗ ಉಂಟಾಗದಂತೆ ಆಗಬೇಕಾದರೆ ನಾವು ಏನು ಮಾಡಬೇಕೆಂಬ ಆಲೋಚನೆ ಮಾಡಬೇಕು. ಬ್ರಹ್ಮದೇವರ ಅಥವ ವಾಯುದೇವ ಸ್ಪರ್ಶದೋಶವಿಲ್ಲ ಬ್ರಹ್ಮದೇವರು ನಮಗೆ ಶಾಪಕೊಟ್ಟಿರುವುದರಿಂದ ನಾವು ವಾಯುದೇವರನ್ನೇ ಕುರಿತು ತಪಸ್ಸು ಮಾಡಿ ಅವರನ್ನೇ ಶರಣು ಹೋಗಬೇಕು. ಏಕ ಪತ್ನೀವ್ರತಸ್ಥರಾದ ವಾಯುದೇವರ ಸ್ಪರ್ಶ ಪಿತೃಸ್ಪರ್ಶದಂತೆ ಮಹಾಪವಿತ್ರಕರವಾದದ್ದು. ಅವರು ನಮಗೆ ಒಲಿದು ಬರಬೇಕಾದರೆ ಅವರ ಪತ್ನಿಯಾದ ಭಾರತೀದೇವಿಯರ ಸೇವೆ ಮಾಡಬೇಕು'' ಎಂದು ಆಲೋಚನೆ ಮಾಡಿ ನಾಲ್ಕು ಜನ ಸುರಸ್ತ್ರೀಯರೂ ಭಾರತಿದೇವಿಯ ಸೇವೆಯನ್ನು ಬಹಳ ನಿಷ್ಠೆಯಿಂದ ಒಂದು ವರ್ಷಗಳ ಕಾಲ ಮಾಡಿದರು.

ಭಾರತಿದೇವಿಯು ಪ್ರಸನ್ನಳಾಗಿ ''ನಿಮಗೆ ಬೇಕಾದ ವರವನ್ನು ಕೇಳಿರಿ'' ಎಂದಳು. ''ತಾಯೇ, ನಮಗೆ ಬಂದಿರುವ ಬ್ರಹ್ಮ ಶಾಪದಂತೆ ನಾವು ಪಡೆಯಬೇಕಾದ ನಾಲ್ಕು ಜನ್ಮಗಳನ್ನು ನಿನ್ನ ಉದರದಲ್ಲೇ ಕಳೆಯುವಂತೆ ನೀನು ಅನುಗ್ರ ಮಾಡು. ನಮಗೆ ಒಂದು ಜನ್ಮದಲ್ಲಿ

ಪರಪುರುಷ ಸ್ಪರ್ಶವಾಗಲೆಂಬ ಶಾಪವೂ ಇರುವುದರಿಂದ ನಿನ್ನ ಪತಿ ನಮಗೆ ತಂದೆಯ ಸಮಾನನಾದ್ದರಿಂದ ಅವನ ಸ್ಪರ್ಶದಿಂದ ನಮ್ಮ ಪಾತೀವ್ರತ್ಯಕ್ಕೆ ದೋಶವೂ ಬರುವುದಿಲ್ಲವಾದ್ದರಿಂದ ನಮಗೆ ಈ ವರಗಳನ್ನು ನೀನು ಕೊಟ್ಟು ನಮ್ಮನ್ನು ಸತೀತ್ವದಿಂದ ಜಯ ಹೊಂದುವಂತೆ ಕರುಣಿಸಿ ಕಾಪಾಡು'' ಎಂದು ಕೇಳಿದರು.

## ಶಾಪದ ಪ್ರಥಮ ಜನ್ಮ

ದೇವತಾಸ್ತ್ರೀಯರ ಪ್ರಾರ್ಥನೆಗೆ ಭಾರತೀದೇವಿಯು ಒಪ್ಪಿ ''ನಿಮಗೆ ಬ್ರಹ್ಮದೇವರ ಶಾಪ ಸುಖರೀತಿಯಲ್ಲಿ ಕಳೆಯುವಂತೆ ಮಾಡುತ್ತೇನೆ'' ಎಂದು ಅಭಯವಿತ್ತು ಶ್ರೀಹರಿ, ಬ್ರಹ್ಮಾದಿಗಳ ಅಪ್ಪಣೆ ಪಡೆದು ತನ್ನ ಯೋಗಶಕ್ತಿಯಿಂದ ನಾಲ್ಕು ಮಂದಿ ದೇವತಾಸ್ತ್ರೀಯರನ್ನು ತನ್ನಲ್ಲಿ ಧರಿಸಿ ಒಂದು ದಿವ್ಯ ಸ್ತ್ರೀ ರೂಪ ಧಾರಣೆ ಮಾಡಿದಳು. ಮೇಧಾವೀ ಎಂಬ ಒಬ್ಬ ಬ್ರಹ್ಮಣನ ಮಗಳಾಗಿ ಹುಟ್ಟಿದಳು. ಈ ಬಾಲಕಿ ಮಹಾ ತತ್ವಜ್ಞಾನ ಪ್ರಕಾಶದಿಂದ ಜಗತ್ತನ್ನೇ ಬೆರಗುಗೊಳಿಸುತ್ತ ತತ್ವಶೀಲಳಾಗಿ ಪ್ರಸಿದ್ಧಳಾದ್ದರಿಂದ ಯಾರೂ ಈಕೆಯನ್ನು ವರಿಸಿ ವಿವಾಹವಾಗಲು ಮುಂದೆ ಬರದೆ ಹೆದರುತ್ತಿದ್ದರು. ಮಗಳಿಗೆ ತಕ್ಕ ವರ ಸಿಗಲಿಲ್ಲವೆಂಬ ದೊಡ್ಡ ಚಿಂತೆಯಲ್ಲಿ ಮುಳುಗಿದ ತಂದೆ ತಾಯಿಗಳು ಪರಲೋಕಯಾತ್ರೆಗೆ ಹೊರಟುಹೋದರು.

ನಂತರ ಸುಜ್ಞಾನಸಂಪನ್ನಳಾದ ಆಕೆ ದುರ್ವಾಸಂತರ್ಗತನಾದ ಮಹಾ ವಿಷ್ಣುವನ್ನು ಅಮೋಘವಾಗಿ ಉಪಾಸನೆ ಮಾಡಿ ಮಾತಾಪಿತೃಗಳಿಗೆ ಸದ್ಗತಿ ಸಿಗುವಂತೆ ಮಾಡಿದಳು. ಹೀಗೆ ಭಾರತೀದೇವಿಯು ಒಂದು ಜನ್ಮವನ್ನು ದೇವತಾಸ್ತ್ರೀರತ್ನಗಳಿಗೆ ಕಳಸಿದಳು.

## ಎರಡು ಮತ್ತು ಮೂರನೆಯ ಜನ್ಮ

ಎರಡನೆಯ ಜನ್ಮದಲ್ಲಿ ನಳರಾಜನ ಪತ್ನಿ ದಮಯಂತಿಯಲ್ಲಿ ನಳನಂದಿನೀ ಎಂಬ ಹೆಸರಿನ ಮಗಳಾಗಿ ಹುಟ್ಟಿ ತನ್ನಲ್ಲಿ ನಾಲ್ಕು ನಾರೀರತ್ನಗಳನ್ನು ಧರಿಸಿದ್ದಳು ತ್ರೇತಾಯುಗದ ಕೊನೆಯಲ್ಲಿ ನಳರಾಜನ ಪುತ್ರಿಯಾಗಿ ಜನ್ಮನೀಗಿದ ನಂತರ ಮೂರನೆಯ ಅವತಾರದಲ್ಲಿ ಭಾರತೀದೇವಿಯರು ಇಂದ್ರಸೇನೆ ಎಂಬ ಹೆಸರಿನ ಮುನಿರಮಣಿಯಾಗಿ ಅವತರಿಸಿದಳು. ಭಾರತೀದೇವಿಯವರು ತನ್ನನ್ನು ಮೊರೆಹೊಕ್ಕ ದೇವತಾಸ್ತ್ರೀಯರ ರಕ್ಷಣೆಗಾಗಿ ಅವರನ್ನು ತನ್ನಲ್ಲಿರಿಸಿಕೊಂಡು ನಾಲ್ಕು ಮಂದಿಗೂ ಒಬ್ಬರಿಗೊಬ್ಬರು ಸಂಪರ್ಕವಿಲ್ಲದಂತೆ ಪ್ರತ್ಯೇಕ ಪ್ರತ್ಯೇಕವಾಗಿರುವಂತೆ ಗರ್ಭಸಾಗರದಲ್ಲಿ ಧರಿಸಿ ಅವರಿಗೆ ವಿಸ್ಮರಣೆ ಉಂಟು ಮಾಡಿದಳು. ಭಾರತೀದೇವಿಯವರು ಯಾವ ಅವತಾರ ಧಾರಣೆ ಮಾಡಿದರೂ ತಮ್ಮ ನಿಯತಪತಿಯಾದ ವಾಯುದೇವರೇ ಪತಿಯಾಗುತ್ತಾರಾದರೂ ಆಕೆಗೆ ಮುದ್ಗಲ ಋಷಿಗಳು ಪತಿಯಾಗಿದ್ದರಂದರೆ ಆಶ್ಚರ್ಯವಾಗುತ್ತದೆ. ದೇವರ ಹಸ್ಯವನ್ನು ತಿಳಿಯಬೇಕಾದರೆ ಬಹಳ ಜನ್ಮಗಳ ಪು [illegible] ವಿಶೇಷವಿರಬೇಕು. ಅದರ ಸೂಕ್ಷ್ಮಾರ್ಥಧರ್ಮಗಳನ್ನು

ಅರಿಯದೆ ಅಪಾರ್ಥಗಳಿಂದ ಅದರ ಸರಿಯಾದ ಸವಿಯನ್ನು ಅನುಭವಿಸದ ಜಡಮತಿಗಳಿಗೆ ಅಂಧಂತಮಸ್ಸು ಪ್ರಾಪ್ತವಾಗುತ್ತದೆಂದರೆ ತಪ್ಪಾಗಲಾರದು.

## ಮುದ್ಗಲ ಋಷಿಗಳ ವೃತ್ತಾಂತ

ಮುದ್ಗಲರು ತಪೋನಿಷ್ಟರೇ ಆಗಿದ್ದರೂ ಒಮ್ಮೆ ಅವರಿಗೆ ಪ್ರಾರಬ್ಧಕರ್ಮವಶಾತ್ ಬ್ರಹ್ಮದೇವರನ್ನು ನಿಂದನೆ ಮಾಡುವಂಥ ದೋಶಬುದ್ಧಿ ಒದಗಿತು.

ಬ್ರಹ್ಮದೇವರು ಮಗಳನ್ನೇ ಮಡದಿಯಾಗಲು ಇಚ್ಛಿಸಿದನೆಂದು ಅಪಹಾಸ್ಯದಿಂದ ನಕ್ಕರು. ಬ್ರಹ್ಮ ದೇವರು ದೇವತಾ ರಹಸ್ಯವನ್ನು ಸಜ್ಜನರು ತಿಳಿಯಬೇಕೆಂಬ ಸಂಕಲ್ಪದಿಂದ ಮುದ್ಗಲಾ! ನೀನು ಭಗವದ್ಧರ್ಮಗಳ ಸರಿಯಾದ ರಹಸ್ಯಗಳನ್ನು ಸುಜ್ಞಾನದಿಂದ ತಿಳಿಯದೆ ನಿಂದಿಸಿದ ಕಾರಣದಿಂದ ಶ್ರೀಹರಿಗೆ ಅಪ್ರೀಯ ಕಾರ್ಯವನ್ನು ಮಾಡಿದಂತಾಯಿತು. ಆ ಪಾಪದಿಂದ ನೀನು ನಿನಗಿಂತಲೂ ಉತ್ತಮಸ್ತ್ರೀ ಸಂಪರ್ಕ ಫಲದಿಂದ ದೇವೋತ್ತಮನಿಂದ ದೂರನಾಗು ಎಂದು ಬ್ರಹ್ಮದೇವರು ಶಪಿಸಿದರು. ಆಗ ಮುನಿ ದುಃಖಪಡುತ್ತ ಅಪರಾಧ ನಿವಾರಣೆಗಾಗಿ ಬ್ರಹ್ಮದೇವರನ್ನು ಬಹುಪರಿಯಾಗಿ ಪ್ರಾರ್ಥಿಸಿಕೊಂಡಾಗ ಬ್ರಹ್ಮದೇವರು ಇದೆಲ್ಲವನ್ನು ಅಸುರಸಂಹಾರ ಕಾರಣಕ್ಕಾಗಿ ಶ್ರೀಹಾರಿಯೇ ಹೃದಯದಲ್ಲಿ ಹೊಕ್ಕು ನಡೆಸುತ್ತಿದ್ದಾನೆಂದು ತಿಳಿದು ಬ್ರಹ್ಮ ದೇವನು. ''ಮುದ್ಗಲಾ! ದೇವತೆಗಳು ಎಂದಿಗೂ ಸ್ವಾಮಿಯ ನಿಯಮವನ್ನು ಬಿಟ್ಟು ನಡೆಯುವವರಲ್ಲ. ದೇವತೆಗಳು ಯಾವ ಜನ್ಮ ತಾಳಿದರೂ ತಮ್ಮ ನಿಯತ ಪತಿ–ಪತ್ನಿಗಳನ್ನೇ ವಿವಾಹವಾಗುವರು ದೇವತಾ ಸ್ತ್ರೀಯರೇ ಆಗಲಿ ದೇವತಾ ಪುರುಷರೇ ಆಗಲಿ ಅವರಿಗೆ ಪರರ ಮೇಲೆ ಮನಸ್ಸಾಗುವುದಿಲ್ಲ ನಿಯತಪತಿಗೆ ಅವರ ಪತ್ನಿಯು ಕಾರಣಾಂತರದಿಂದ ಯಾವ ಸಂಬಂಧದಲ್ಲಿದ್ದರೂ ಆಕೆಯನ್ನೇ ವಿವಾಹವಾಗುವುದೇ ದೇವತಾಧರ್ಮವಾಗಿದೆ.

ದೇವರಹಸ್ಯವನ್ನು ತಿಳಿಯದೆ ನಿನಗಿಂತಲೂ ಅಧಿಕರನ್ನು ನೀನು ದೂಶಣೆ ಮಾಡಿದ ಕಾರಣದಿಂದ ನರಕಾದ್ಯನರ್ಥಕರ ಪಾಪಕ್ಕೆ ಒಳಗಾಗಿದ್ದರೂ ನಿನ್ನ ಪಶ್ಚಾತ್ತಾಪಕ್ಕೂ ಮತ್ತು ಅಜ್ಞಾನದಿಂದ ಅನರ್ಥ ನಡೆದಕಾರಣದಿಂದಲೂ ನಿನ್ನ ಪಾಪಕ್ಕೆ ಪ್ರಾಯಶ್ಚಿತ್ತ ತಿಳಿಸುತ್ತೇನೆ. ಏನೆಂದರೆ ನೀನು ದೇವತಾಸ್ತ್ರೀಯನ್ನು ವಿವಾಹವಾದರೂ. ನಿನ್ನಲ್ಲಿ ವಾಯು ದೇವರು ಪ್ರವಿಷ್ಠರಾಗಿ ತಮ್ಮ ನಿಯತ ಪತ್ನಿಯನ್ನು ಅವರೇ ಭೋಗಿಸುವರು. ನೀನು ಆಗ ಮೂರ್ಛಾವಸ್ತೆಯಿಂದ ಪ್ರಜ್ಞಾಹೀನನಾಗಿರುತ್ತಿ. ಆದ್ದರಿಂದ ನಿನಗೆ ದೇವತಾಸ್ತ್ರೀ ಸಂಗದ ದೋಶ ಬರುವುದಿಲ್ಲ'' ಎಂದು ಶಾಪದ ಪರಿಹಾರವನ್ನು ತಿಳಿಸಿದರು.

ಭಗವದಾಜ್ಞೆಯಂತೆ ಮುದ್ಗಲರು ಇಂದ್ರಸೇನೆಯನ್ನು ವಿವಾಹವಾಗಿ ಬಹಳ ಕಾಲದವರೆಗೂ ಆಕೆಯೊಡನೆ ಇದ್ದರೂ ಅವರಲ್ಲಿ ವಾಯುದೇವರ ಆವೇಶವಿದ್ದುದ್ದರಿಂದ ದೋಶಲೇಪವಿಲ್ಲದೆ ತಮ್ಮ ಶಾಪದ ಅವಧಿಯನ್ನು ಮುಗಿಸಿ ನಂತರ ತಪಸ್ಸಿಗೆ ಹೊರಟು ಹೋದರು.

ಮುದ್ಗಲ ಋಷಿಗಳಲ್ಲಿದ್ದ ವಾಯುದೇವರು ''ನಿನ್ನ ಶಾಪದ ಅವಧಿ ಮುಗಿದು ಮುಕ್ತನಾಗಿರುವೆ ನೀನು ಇನ್ನು ನಿನ್ನ ತಪೋ ಸಾಧನೆಮಾಡಿಕೊ'' ಎಂದು ಅಪ್ಪಣೆ ಕೊಡಿಸಿದನಂತರ ಋಷಿಯು ಕಾಡಿಗೆ ಹೊರಟುಹೋದರು.

ನಂತರ ಇಂದ್ರಸೇನಾದೇವಿಯು ತಪಸ್ಸಿಗೆ ತೊಡಗಿದಳು. ಶಿವನಂತರ್ಗತ ಶ್ರೀ ನಾರಾಯಣನನ್ನು ಕುರಿತು ಆಕೆ ತಪಸ್ಸು ಮಾಡುವಾಗ ಅವಳಲ್ಲಿದ್ದ ನಾಲ್ಕು ಮಂದಿ ಸುರಸ್ತ್ರೀಯರೂ ಒಬ್ಬರಿಗೊಬ್ಬರಿಗೆ ಅರಿವಿಲ್ಲದೆಯೇ ತಪೋನಿರತರಾದರು. ಇವರು ಶಿವನನ್ನು ಕುರಿತು ತಪಸ್ಸು ಮಾಡಿದಕಾರಣ ಶಿವನು ವಟುರೂಪದಿಂದ ಬಂದು,

ಇಂದ್ರಸೇನೆಗೆ ನೀನು ನಿನ್ನ ಪತಿಯನ್ನೇ ಸೇರಿ ಸಂತೋಷದಿಂದಿರು'' ಎಂದು ಅನುಗ್ರಹಿಸಿದನು. ನಂತರ ನಾಲ್ಕು ಮಂದಿಯೂ ತಪೋನಿರತರಾಗಿಲು ಅವರೊಬ್ಬೊಬ್ಬರಿಗೂ ತನ್ನಾದರ್ಶನ ಕೊಟ್ಟು ಏನು ಬೇಕು ಕೇಳಿರಿ'' ಎಂದಾಗ ಅವರು ಐದು ಜನರು ನಮ್ಮ ಪತಿ ಸೌಭಾಗ್ಯ ನಮಗೆ ಲಭಿಸುವಂತಾಗಲಿ'' ಎಂದು ಕೇಳಿಕೊಂಡರು. ಅವರು ಒಟ್ಟಾಗಿರದೆ ಬೇರೆ ಬೇರೆ ಇದ್ದರು. ಆದ್ದರಿಂದ ತಾವೊಬ್ಬರೇ ಇರುವಂತೆ ಭಾಸವಾಗಿತ್ತು. ಆಗ ಐದು ಮಂದಿಯನ್ನು ಕುರಿತು ಐದು ಪತಿಗಳನ್ನು ಕೂಡಿ ಸಂತೋಷಪಡುತ್ತೀರಿ'' ಎಂದು ವರನೀಡಿದಾಗ,

ಭಾರತೀದೇವಿಯಲ್ಲಿದ್ದ ದೇವಸ್ತ್ರೀಯರಿಗೆ ವಿಸ್ಮರಣೆ ಉಂಟಾಗಿದ್ದ ಕಾರಣದಿಂದ ಶಿವನು ಐದು ಮಂದಿ ಪತಿಗಳು ಪಡೆಯುವಂತೆ ವರನೀಡಿದನು. ನಮ್ಮ ಸತೀತ್ವವನ್ನು ಹೇಗೆ ಉಳಿಸಿಕೊಳ್ಳುವುದೆಂದು ರೋಧಿಸಹತ್ತಿದರು.

ಆಗದೇವೇಂದ್ರನು ಇಂದ್ರಸೇನೆಯೇ ಅಳುತ್ತಿದ್ದಾಳೆಂದ '' ಏಕೆ ಅಳುತ್ತಿ?'' ಎಂದು ಕೇಳಿದಾಗ ಇಂದ್ರಸೇನೆಯ ರೂಪದಲ್ಲಿದ್ದ ಭಾರತಿದೇವಿಯು ದೇವತಾಸ್ತ್ರೀಯರ ವೃತ್ತಾಂತ ತಿಳಿಸಿದಳು.

ಶಿವನು ದೇವತಾಸ್ತ್ರೀಯರಿಗೆ ವರದ ಮೂಲಕ ಶಾಪಕೊಟ್ಟಿದ್ದಾನೆಂದು ತಿಳಿದು ನಾನು ''ಸುರಪತಿ ಆಗಿರುವಾಗ ನೀನು ಶಾಪ ಕೊಟ್ಟಿರುವುದು ಅಪರಾಧವಾದ್ದರಿಂದ ನೀನು ಈಗ ಪಾರ್ವತಿಯನ್ನು ಭಾರತೀದೇವಿಯಿಂದ ಶಾಪಮುಕ್ತಳನ್ನಾಗಿ ಮಾಡಲಾಗುವುದಿಲ್ಲ. ಮನುಷ್ಯನಾಗಿ ಹುಟ್ಟಿ ದ್ರೌಪದಿ ದೇಹತ್ಯಾಗ ಮಾಡಿದನಂತರ ಪಾರ್ವತಿಯೊಂದಿಗೆ ನೀನು ಇರುತ್ತಿ ''ಎಂದು ಇಂದ್ರನು ಹೇಳಿದಂತೆ ''ಶಿವನೇ ಅಶ್ವತ್ಥಾಮನಾಗಿ ದ್ರೋಣರಲ್ಲಿ ಅವತರಿಸಿದನು ''ಎಂದು ದೇವತಾಸ್ತ್ರೀಯರಿಗೆ ತನ್ನಲ್ಲಿ ಆಶ್ರಯನೀಡಿದ ಭಾರತೀದೇವಿಯೇ ದ್ರೌಪದಿಯಾಗಿ ದೃಪದನ ಯಾಗಕುಂಡದಲ್ಲಿ ಅವತರಿಸಿದಳೆಂಬುದನ್ನು ತಿಳಿಸಿ ನಂತರ ಮುಂದೆ ನಡೆದ ದೃಪದರಾಜನ ಯಜ್ಞಫಲದ ಶುಭವ್ರಾತ್ತಾಂತವನ್ನು ತಿಳಿಸಿದರು. ದೃಪದನು ಅಗ್ನಿಯಿಂದ ಪ್ರಸಾದ ರೂಪವಾಗಿ ಬಂದ ಮಗಳನ್ನು ನೋಡಿ ತನ್ನ ಸಾಧನೆ ಸಾರ್ಥಕ ಆಯಿತೆಂದು ಸಂತೋಷದಿಂದ ಹಿಗ್ಗಿದನು.

ನಂತರ ಮಹಾರಾಣಿ ಸಹಿತವಾಗಿ ಋಷಿಗಳೆಲ್ಲರಿಗೂ ನಮಸ್ಕಾರ ಮಾಡಿ ''ಬ್ರಾಹ್ಮಣೋತ್ತಮರೆ! ಈ ಮಕ್ಕಳು ಯಾಗವೇದಿಕೆಯಲ್ಲಿ ಉದ್ಭವಿಸಿ ಬಂದಿರುವುದರಿಂದ ದೇವತಾಂಶರಾದ ಇವರಿಗೆ ಮನುಷ್ಯರಾದ ನಮ್ಮ ಮೇಲೆ ಮಾತಾಪಿತೃ–ವಾತ್ಸಲ್ಯ ಉಂಟಾಗುವಂತೆ ಅನುಗ್ರಹಮಾಡಿ ನಮಗೆ ಇವರ ಲಾಲನೆ ಪಾಲನೆಗಳ ಭಾಗ್ಯ ಕೊಟ್ಟು ಆನಂದಪಡುವಂಥ ಸುಖ ಸಿಗುವಂತೆ ಆಶೀರ್ವದಿಸಿರಿ'' ಎಂದು ಬ್ರಾಹ್ಮಣರ ಆಶೀರ್ವಾದ ಪಡೆದ ಅವರಿಗೆ ಶ್ರೀಹರಿಪ್ರೇರಣಾನುಸಾರ ದ್ರೌಪದಿ ಮತ್ತು ಧೃಷ್ಟದ್ಯುಮ್ನರೆಂಬ ಮಕ್ಕಳಿಬ್ಬರೂ ತಂದೆ ತಾಯಿಗಳಂತೆಯೆ ಭಾವಿಸಿ ದ್ರುಪದನ ವಾತ್ಸಲ್ಯದಿಂದ ಅವರ ಮಡಿಲಮಕ್ಕಳಾಗಿ ಬೆಳೆಯುತ್ತಿದ್ದರು. ದ್ರುಪದನು ದ್ರೋಣಾಚಾರ್ಯರನ್ನು ಕೊಲ್ಲುವಂಥ ಮಗನನ್ನು ತಪಸ್ಸು ಮಾಡಿ ಅಗ್ನಿದೇವನಿಂದ ಪಡೆದಿದ್ದಾನೆಂದು ದ್ರೋಣರು ತಿಳಿದಿದ್ದರೂ ದೃಷ್ಟದ್ಯುಮ್ನನಿಗೆ ಅವರ ಕೋರಿಕೆಯಂತೆ ತಾವೇ ಗುರುವಾಗಿ ಶಸ್ತ್ರವಿದ್ಯೆಯನ್ನು ಹೇಳಿಕೊಟ್ಟರು. ಇದರಿಂದ ದ್ರೋಣಾಚಾರ್ಯರ ನಿರ್ಲಿಪ್ತಭಾವ ಅವರ ಹೃದಯವೈಶಾಲ್ಯ, ವೈಶಿಷ್ಟತೆ ಕಲ್ಪನೆಗೂ ಸಿಗದಂತಿದೆ. '' ದ್ರೋಣಾಚಾರ್ಯರೇ ! ನೀವು ಪರಶುರಾಮರ ಪರಮ ಶಿಷ್ಯರು ವಿದ್ಯಾದಾನ ಮಾಡಬೇಕು'' ಎಂದು ದ್ರುಪದ ರಾಜಾದಿಗಳೆಲ್ಲರೂ ಪಾಂಡವ ವೀರವಿಕ್ರಮವನ್ನು ನೋಡಿ ತಮಗಿನ್ನು ಜರಾಸಂಧನ ಭಯತಪ್ಪಿತು''ಎಂದು ಪಾಂಡವ ಪಕ್ಷವಹಿಸಿದರು. ಭೀಮಾರ್ಜುನರ ಅಸಮಸಾಹಸದ ಜೊತೆಗೆ ಶ್ರೀಕೃಷ್ಣನೂ ಪಾಂಡವ ಪಕ್ಷಪಾತಿ ಎಂದು ತಿಳಿದು ಅವರ ಸ್ನೇಹ ಬೆಳಸಿಕೊಂಡರು. ದೈತ್ಯರು ದೇವತಾಪಕ್ಷದವರ ಪ್ರಬಲತೆ ಪರಾಕ್ರಮಗಳನ್ನು ತಿಳಿದಿದ್ದರೂ ಪಾಪಸಂಸ್ಕಾರದಿಂದ ದೈವದ್ವೇಶಿಗಳಾಗಿ ದುರ್ಯೋಧನನ ಪಕ್ಷದಲ್ಲಿ ಕಲಿಯನ್ನು ಆಶ್ರಯಸಿದ್ದರು. ಧೃತರಾಷ್ಟ್ರನು ಭೀಮಾರ್ಜುನರ ಸಾಹಸ ಅವರ ಧರ್ಮ ಯುಕ್ತವಾದ ಗುಣ ಸ್ತುತಿಗಳನು ಕೇಳಿ ಪಾಂಡವರು ದೇವತಾಂಶ ಸಂಭೂತರು ಅವರೊಡನೆ ವಿರೋಧ ಮಾಡಬಾರದೆಂಬ ಭಾವದಿಂದ ಧರ್ಮರಾಜನಿಗೆ ಪಟ್ಟಾಭಿಷೇಕ ಮಾಡಿ ಭೀಮನನ್ನು ಯುವರಾಜನನ್ನಾಗಿ ಮಾಡಿದನು.

ಧರ್ಮರಾಜನು ರಾಜನಾದನಂತರ ಎಲ್ಲಾ ರಾಜರು ಬಂದು ಧೃತರಾಷ್ಟ್ರನಿಗೆ ಕಪ್ಪವನು ಒಪ್ಪಿಸಿದರು. ಧರ್ಮರಾಜನು ಅಜಾತಶತೃವಾದನು. ಭೀಮಾರ್ಜುನರ ಪರಾಕ್ರಮ. ಧರ್ಮರಾಜನ ಕ್ಷಮಾಗುಣ. ಧರ್ಮಶೀಲತೆಗಳಿಗೆ ಪ್ರಜೆಗಳು ಸಂತೋಷಪಟ್ಟು ಹೊಗಳಿ ಕೊಂಡಾಡುತ್ತಿದ್ದರು.

ಪಾಂಡವರು ಶ್ರೀಕೃಷ್ಣನೆಂಬ ದಿವ್ಯಸಂಪತ್ತನ್ನು ಹೊಂದಿದವರಾಗಿ ಆ ಅಮೂಲ್ಯನಿಧಿಯನ್ನು ಎಡಬಿಡದೆ ತಮ್ಮದನ್ನಾಗಿ ಮಾಡಿಕೊಂಡ ಭಾರತಕಥೆಯ ಸನ್ನಿವೇಶಗಳನ್ನು ಎಷ್ಟು ವರ್ಣಿಸಿದರು ಸಾಲದಂತಿದೆ ಅಂಥ ಹರಿಭಕ್ತರ ರಸಮಯ ಕಥಾಶ್ರವಣ ಪುಣ್ಯಾತ್ಮರಿಗೆ ಮಾತ್ರ ಲಭ್ಯ ಎಂದುರು.

## ಮೂಲ ಕಲಿ ದುರ್ಯೋಧನ ಕಳಿಂಗ ಶಾಸ್ತ್ರಜ್ಞನಾದ

ಪಾಂಡವರಿಗೆ ಶ್ರೀಕೃಷ್ಣ ಮುಖ್ಯಪ್ರಾಣರ ಆಶ್ರಯವಿದ್ದ ಕಾರಣ ಅವರಿಗೆ ಅನ್ಯಥಾ ಜ್ಞಾನ ಅನ್ಯ ಉಪಾಸನೆ ಉಂಟಾಗದೆ ಶ್ರೀಹರಿ ಸರ್ವೋತ್ತಮನೆಂಬ ದಿವ್ಯಜ್ಞಾನ ಸಂಪತ್ತು ಲಭ್ಯವಾಯಿತು.

ತಮ್ಮ ಸಕಲ ಕರ್ಮಗಳನ್ನು ಶ್ರೀಕೃಷ್ಣಾರ್ಪಣ ಬುದ್ಧಿಯಿಂದ ನಡೆಸಿ ದೊರಕಿದ ಯಶೋಕೀರ್ತಿಗಳನ್ನು ಶ್ರೀಹರಿಗರ್ಪಿಸಿ ನಿರ್ಲಿಪ್ತಭಾವಿದಿಂದ ಇದ್ದರು.

ಪಾಂಡವರ ಪ್ರಜಾರಂಜನೆ. ಅವರ ಪ್ರಾಬಲ್ಯ , ಲೋಕಪೂಜ್ಯತೆಗಳನ್ನು ನೋಡಿದ ದುರ್ಯೋಧನನಿಗೆ ಕ್ಷಣಕ್ಷಣಕ್ಕೂ ಅಸೂಯೆ ಆಕ್ರೋಶಗಳು ಅಧಿಕಗೊಳ್ಳುತ್ತಿದ್ದವು.

ಶಕುನಿಯನ್ನು ಕುರಿತು ''ಮಾವಾ ! ಈ ಪಾಂಡವರು ನಮಗೆ ದೊರಕಬೇಕಾದ ರಾಜ್ಯವನ್ನು ತಾವೇವಶಪಡಿಸಿಕೊಂಡು ತಮ್ಮ ಪ್ರತಾಪದಿಂದ ನಮ್ಮೆಲ್ಲರನ್ನು ಕಸದ ಮೂಲೆಗೊತ್ತರಿಸಿ ಮೆರೆಯುತ್ತಿದ್ದಾರೆ. ಬರಬರುತ್ತಾ ಕುರುಡನ ಮಕ್ಕಳಾದ ನಾವೆಲ್ಲರೂ ಕಸಕ್ಕೂ ಕಡೆಯಾಗಬಹುದು ಇವರನ್ನು ಹೇಗಾದರೂ ಮಾಡಿ ಈ ರಾಜ್ಯದಿಂದ ಹೊರನೂಕಿ ರಾಜ್ಯ ನಮ್ಮದಾಗುವಂತೆ ಮಾಡಿಕೊಳ್ಳಲು ಏನಾದರೂ ಉಪಾಯ ಹೇಳು'' ಎಂದನು. ಶಕುನಿಗೆ ಆ ಸನ್ನಿವೇಶವೇ ಬೇಕಾಗಿತ್ತು. ''ದುರ್ಯೋಧನಾ ! ನಿನಗೆ ಕೌರವರನ್ನು ಇಲ್ಲಿಂದ ಉಚ್ಚಾಟನೆ ಮಾಡಿ ನೀನು ಕೀರ್ತಿವಂತನಾಗಿ ಮೆರೆಯಬೇಕೆಂಬ ಅಭಿಲಾಷೆ ಇದ್ದರೆ ದೈತ್ಯ ಗುರುಗಳಾದ ಶುಕ್ರಾಚಾರ್ಯರ ಶಿಷ್ಯನಲ್ಲಿ ಕಳಿಂಗ ಶಾಸ್ತ್ರವನ್ನು ಅಭ್ಯಾಸ ಮಾಡು. ಅದರಿಂದ ಶತೃಗಳನ್ನು ನಿನ್ನತ್ತ ಸೆಳೆದುಕೊಳ್ಳುವುದು ಹೇಗೆಂದು ನಿನಗೇ ತಿಳಿಯುತ್ತದೆ'' ಎಂದು ಅವನಿಗೆ ರಾಕ್ಷಸ ವಿದ್ಯೆಯನ್ನು ಕಲಿಸಲಿಕ್ಕಾಗಿ ಕಳಿಂಗ ಶಾಸ್ತ್ರಾ ಭ್ಯಾಸಕ್ಕಾಗಿ ಕಳುಹಿಸಿದನು.

ದುರ್ಯೋಧನನಲ್ಲಿ ಕಲಿಯ ಆವೇಶ ಯಥೆಚ್ಛವಿರುವುದರಿಂದ ಕಪಟ ವಿದ್ಯೆಯಲ್ಲಿ ಅವನಿಗೆ ಆಸಕ್ತಿ. ಆದರ ಸಂಪೂರ್ಣವಾಗಿ ಒದಗಿತು. ಹಂದಿಗೆ ಅಮೇಧ್ಯಬಹು ಆಪ್ಯಾಯ ಮಾನವಾಗುವಂತೆ ದುರ್ಯೋಧನನಿಗೆ ಕ್ಷುಲ್ಲಕವಿದ್ಯೆಯಲ್ಲಿ ಬಹಳ ಖುಷಿಹತ್ತಿತು. ಗುರುವಿಗಿಂತಲೂ ಒಂದು ಭಾಗ ಅಧಿಕವಾಗಿಯೇ ಕಲಿತನು. ಕಳಿಂಗ ವಿದ್ಯಾ ಪಂಡಿತನಾದನು. ಪಾಂಡವರಿಗೆ ದೈವೀ ಸಂಪತ್ತು ಇತ್ತು. ಅದರಿಂದ ಅವರ ಸಧರ್ಮ ಸದ್ಗುಣಗಳು ಸಚ್ಚಾರಿತ್ರ್ಯಗಳೆಲ್ಲವೂ ಅವರನ್ನು ಎಡಬಿಡದೆ ಅವಲಂಬಿಸಿದ್ದವು.

ಏನು ಮಾಡಿದರೂ ಪಾಂಡವರ ಪ್ರಖ್ಯಾತಿಯನ್ನು ಕಸಿಯಲು ಸಾಧ್ಯವಾಗದಿರಲು ದುರ್ಯೋಧನನು ಶಕುನಿಯೊಂದಿಗೆ ಯೋಚಿಸಿ ಪಾಂಡವರನ್ನು ಈ ರಾಜ್ಯದಿಂದ ಹೊರದೂಡುವ ಯುಕ್ತಿ ಮಾಡಿದನು.

ತಂದೆಯಬಳಿಗೆ ಬಂದನು. ಧೃರಾಷ್ಟ್ರನಿಗೆ ಮಗನ ಆಗಮನದಿಂದ ಆನಂದವಾಯಿತು. ''ಮಗೂ ದುರ್ಯೋಧನಾ! ನಿನ್ನ ಸುಖವೇ ನನಗೆ ಸರ್ವಸಂಪತ್ತು ಎಂದು ತಿಳಿದಿರುವ ನನಗೆ ನಿನ್ನ ವೈಭವ, ವಿದ್ಯೆ ಏನನ್ನೂ ಕಣ್ತುಂಬ ನೋಡುವಂತಿಲ್ಲ ಎಂದು ಮಗನನ್ನು ಸವಿ ಮಾತಿನಿಂದ ಹೊಗಳುತ್ತಿದ್ದರೆ ದುರ್ಯೋಧನನು ದುಃಖದಿಂದ ಕೂಡಿದ ಧ್ವನಿಯಿಂದ ''ಅಪ್ಪಾಜೀ, ನಿನ್ನಂಥ

ಪರಾಕ್ರಮಿಯಾದ ರಾಜನ ಮಕ್ಕಳಾದ ನಮಗೆ ರಾಜ್ಯದಲ್ಲಿ ಎಳ್ಳು ಕಾಳಿನಷ್ಟೂ ಪುರಸ್ಕಾರವಿಲ್ಲದೆ ಪರರ ಕೈಕೆಳಗಿನ ದಾಸರಂತಾದೆವಲ್ಲಾ ಎಂಬ ನಮ್ಮ ಹಿಂಸೆಗಳನ್ನು ನೀವು ಹೇಗೆ ತಾನೇ ತಿಳಿಯಲಾದೀತು? ನಿಮಗೆ ನಿಮ್ಮ ಮಕ್ಕಳಿಗಿಂತಲೂ ತಮ್ಮನ ಮಕ್ಕಳೇ ಹೆಚ್ಚಾದರು ನಮ್ಮ ಹಿತಾಹಿತಗಳನ್ನು ಚಿಂತಿಸದೆ ಪಾಂಡವರಿಗೆ ರಾಜ್ಯ ಒಪ್ಪಿಸಿ ನಮ್ಮವರನ್ನು ಅನಾಥರನ್ನಾಗಿ ಮಾಡಿರುವಿ.

ಪಾಂಡವರು ನಿನ್ನ ತಮ್ಮನ ಮಕ್ಕಳೇ ಆಗಿದ್ದರೆ ನಮ್ಮನ್ನು ಇಷ್ಟು ಅಸಡ್ಡೆಯಿಂದ ನೋಡುತ್ತಿರಲಿಲ್ಲ. ಅವರು ವ್ಯಭಚಾರದಿಂದ ಹುಟ್ಟಿದವರು. ಭೀಮಾರ್ಜುನರು ತಮ್ಮ ಮೃದು ಮಾತಿನಿಂದ ನಿನ್ನನ್ನು ವಂಚಿಸಿ ಸಿಂಹಾಸನವನ್ನು ಕಸಿದುಕೊಂಡು ನಮಗೆ ತಂದೆಯಾದ ನೀನು ಕಪಟಿಗಳ ಕೈಗೆಸಿಕ್ಕು ಬೀದಿಯಭಿಕಾರಿ ಆಗುವಂತಾಯಿತಲ್ಲಾ ಎಂದು ಬಹಳ ಸಂಕಟಪಡುತ್ತಿದ್ದೇವೆ. ನಿನಗೆ ಹೊರ ಪ್ರಪಂಚದ ಮೋಸ ವಂಚನೆಗಳು ಹೇಗೆ ತಾನೇ ತಿಳಿದೀತು? ಎಂದು ಗಟ್ಟಿಯಾಗಿ ಅಳತೊಡಗಿದನು.

ಧೃತರಾಷ್ಟ್ರನು ಮಗನಮಾತು ಕೇಳಿ ಭಯಪಟ್ಟನು. ಧರ್ಮವಂತರ ಮೇಲೆ ದ್ವೇಶಸಾಧನೆಯ ಕೆಟ್ಟಬುದ್ಧಿ ಇವನಿಗೇಕೆ ಹುಟ್ಟಿತು ! ಎಂದು ನಡುಗಿದನು. ದುರ್ಯೋಧನನನ್ನು ಆಲಂಗಿಸಿಕೊಂಡು ಮಗನೇ ದುರ್ಯೋಧನಾ ದುರಾಲೋಚನೆ ಮಾಡಬೇಡಪ್ಪಾ ! ಪಾಂಡವರು ಧರ್ಮವಂತರಾದ ಕಾರಣದಿಂದಲೇ ಕೃಷ್ಣನ ಪ್ರೀತಿ ಪಾತ್ರರಾಗಿದ್ದಾರೆ. ನಾರಾಯಣನ ಅವಿಚ್ಛಿನ್ನ ಭಕ್ತರಾಗಿ ಭೀಮನ ಬಲಪಂಜರವನ್ನಾಶ್ರಯಿಸಿರುವ ಅವರನ್ನು ಮತ್ಸರದಿಂದ ನೋಡಿ ದ್ವೇಶವನ್ನು ಮಸೆದರೆ ಸರ್ವನಾಶವಾದೀತು. ಅವರ ಸದ್ಧರ್ಮ. ಸದಾಚಾರಗಳೇ ಪ್ರಜೆಗಳ ಮನಸ್ಸನ್ನು ಕ್ಷಣಕ್ಷಣಕ್ಕೂ ಸೆಳೆಯುತ್ತದೆ. ಭೀಮಸೇನನ ಪ್ರಭಾವಕ್ಕೆ ಲೋಕವೇ ತಲೆಬಾಗುತ್ತದೆ. ಇದು ಅವನ ದೇಹಬಲದಿಂದ ಮಾತ್ರಬಂದ ಭಾಗ್ಯವಲ್ಲ. ಅವನಲ್ಲಿ ತುಂಬಿರುವ ಮಹಿಮಾತೇಜಸ್ಸು ಎಲ್ಲರನ್ನು ಆಶ್ಚರ್ಯಪಡಿಸುತ್ತದೆ. ಆನಂದಪಡಿಸುತ್ತದೆ.

''ನಮ್ಮ ಕಡುವೈರಿಗಳಾಗಿದ್ದ ಮಹಾಪ್ರಬಲ ರಾಜರೂ ಭೀಮಸೇನನ ಪಾದಾಕ್ರಾಂತರಾಗಿ ಬಂದು ನನಗೆ ಕಪ್ಪವನ್ನು ಒಪ್ಪಿಸಿದ್ದಾರೆ. ಸಮಸ್ತ ದಿಕ್ಕುಗಳನ್ನು ಗೆದ್ದು ಬಂದಿರುವ ಅವರನ್ನು ನೋಡಿ ಸಂತೋಷ ಪಟ್ಟು ನೀವೂ ಅವರ ಪ್ರೀತಿವಾತ್ಸಲ್ಯವನ್ನು ಪಡೆದರೆ ನಿಮಗೆ ಸಕಲ ಪುರುಷಾರ್ಥಗಳೂ ಫಲಿಸುತ್ತದೆ. ಕರುಬಿದರೆ ಕಷ್ಟ ತಪ್ಪಿದ್ದಲ್ಲ'' ಎಂದು ಬಿಟ್ಟನು. ದುರ್ಯೋಧನನು ತಂದೆಯ ಮಾತನ್ನು ಗಣನೆಗೇ ತರದೆ ''ಧರ್ಮಾಧರ್ಮದ ಪುರಾಣ ಹೇಳಬೇಡ ನನಗೆ ಪಾಂಡವರ ಜೊತೆಗೆ ಸೇವಕನಂತೆ ಇರಲು ಇಷ್ಟವಿಲ್ಲ. ಅವರು ಇಲ್ಲಿದ್ದರೆ ನಾನು ಬದುಕಿರುವುದಿಲ್ಲ'' ಎಂದು ಹೇಳಿದಾಗ ಧೃತರಾಷ್ಟ್ರನಿಗೆ ಶ್ರೀಕೃಷ್ಣನ ಬಂಧಕಶಕ್ತಿ ಅವನ ವಿವೇಕವನ್ನು ಮಸುಕುಗೊಳಿಸಿತು. ಮೋಹಪಾಶದಿಂದ ಬಿಗಿಯಲ್ಪಟ್ಟನು. ನಾನು ಏನು ಬೇಕಾದರೂ ಮಾಡುತ್ತೇನೆ ಮಗನೇ ಮರುಗಬೇಡ ''ಎಂದನು.

ಆಗ ದುರ್ಯೋಧನನು ''ತಂದೆ ! ಪಾಂಡವರನ್ನು ಇಲ್ಲಿಂದ ವಾರಣಾವತಿಗೆ ಕಳುಹಿಸುವ ಉಪಾಯ ಮಾಡಿದ್ದೇನೆ. ವಾರಣಾವತಿಯಲ್ಲಿ ಜಯಂತಿನಾಮಕ ನಾರಾಯಣನು ಲಿಂಗಾಕಾರನಾಗಿ ಪೂಜೆಗೊಳುತ್ತಿದ್ದಾನೆ. ಅಲ್ಲಿ ಪ್ರತಿವರ್ಷವು ದೊಡ್ಡ ಜಾತ್ರೆ ನಡೆಯುತ್ತದೆ. ಅಲ್ಲಿ ಬಹಳ ಆದಾಯ ವಿದ್ದರೂ ಅದು ನಮಗೆ ಸಂದಾಯವಾಗುತ್ತಿಲ್ಲ. ಆದ್ದರಿಂದ ನೀವು ವಾರಣಾವತಿಗೆ ಹೋದರೆ ಅಲ್ಲಿ ಸಂಪತ್ತು ನಷ್ಟವಾಗದಂತೆ ನಮಗೆ ದ್ರವ್ಯಸಂಪತ್ತು ಸೇರುತ್ತದೆ. ಆದ್ದರಿಂದ ನೀವು ಅಲ್ಲಿಗೆ ಹೋಗಿ ಅದರ ಆಡಳಿತವನ್ನು ನೋಡಿಕೊಳ್ಳಿರಿ'' ಎಂದು ಹೇಳಿ ನೀನು ಪಾಂಡವರನ್ನು ಇಲ್ಲಿಂದ ತೊಲಗಿಸು. ಇನ್ನು ಅನೇಕ ಮಿತ್ರರಿಂದ ನಾನೂ ಪಾಂಡವರಿಗೆ ಪ್ರಚೋದನೆ ಮಾಡುವಂತೆ ಏರ್ಪಾಡುಮಾಡುತ್ತೇನೆ. ನಿನ್ನ ಆಜ್ಞೆ ಅವರಿಗೆ ಮುಖ್ಯವಾದ್ದರಿಂದ ನೀನು ಅವರನ್ನು ಕರೆಸಿಕೊಂಡು ಹೊರಡುವಂತೆ ಆಜ್ಞೆ ಮಾಡಿದರೆ ಸಾಕು'' ಎಂದು ಹೇಳಿದನು.

## ಕಲಿಯ ಕರಾಳ ಕಾರ್ಯ

ಧರ್ಮರಾಜನು ಧೃತರಾಷ್ಟ್ರನ ಕರೆಗೆ ಓಗೊಟ್ಟು ತಮ್ಮಂದಿರೊಡನೆ ಬಂದನು. ಧೃತರಾಷ್ಟ್ರನು ಸುತ್ತಿಬಳಸಿ ಮಾತನಾಡುತ್ತ ನಂತರ ಮುಖ್ಯ ಸಂಗತಿಗೆ ಬಂದನು. ''ಧರ್ಮರಾಜಾ! ನಿಮ್ಮ ವಾಸಕ್ಕೆ ವಾರಣಾವತಿ ಬಹಳ ಯೋಗ್ಯ ಸ್ಥಳವೆಂದು ನನಗೆನಿಸುತ್ತದೆ. ನೀವು ಅಲ್ಲಿಗೆ ಹೋದರೆ ನಿಮಗೂ ಸುಖ. ರಾಜ್ಯಕ್ಕೂ ದ್ರವ್ಯಲಾಭವಿರುವುದರಿಂದ ವಾರಣಾವತಿಯೇ ನಿಮಗೆ ಸರಿಯಾದ ಸ್ಥಳವೆಂದು ನಿರ್ಧರಿಸಿದ್ದೇನೆ. ಅಲ್ಲಿ ದ್ರವ್ಯ ಸಂಪತ್ತು ಅಧಿಕರೀತಿಯಲ್ಲಿ ಉತ್ಪತ್ತಿ ಆದರೂ ಅದರಿಂದ ನಮಗೆ ಲಾಭವಿಲ್ಲ. ಆದ್ದರಿಂದ ನೀವು ಜಾಗ್ರತೆ ಹೊರಟು ಅಲ್ಲಿಯ ಅವ್ಯವಸ್ಥೆಯನ್ನು ಸರಿಪಡಿಸಿರಿ'' ಎಂದನು. ಧರ್ಮರಾಜನಿಗೆ ಇದ್ದಕ್ಕಿದಂತೆ ಧೃತರಾಷ್ಟ್ರನು ತಮ್ಮನ್ನು ಹಸ್ತಿನಾವತಿಯಿಂದ ಹೊರಕಳುಹಿಸುವುದನ್ನು ತಿಳಿದು ಪರಮಾಶ್ಚರ್ಯವಾಯಿತು. ಧೃತರಾಷ್ಟ್ರನು ನಮ್ಮನ್ನು ಅಗಲಿರಲು ಎಂದೂ ಇಷ್ಟಪಟ್ಟವನಲ್ಲ. ''ಮಕ್ಕಳೇ ನೀವೇ ನನಗೆ ನಿಜವಾದ ಪುತ್ರರು'' ಎಂದು ಸದಾಹೇಳುತ್ತಿದ್ದವನಿಗೆ ಈಗ ಈ ಬುದ್ಧಿಬಂದಿರುವುದು ಮಗನ ಪ್ರಚೋದನೆಯಿಂದ ಎಂದುಕೊಂಡನು.

ಭೀಮಸೇನನು ಸರ್ವಜ್ಞಮೂರ್ತಿ ಕಲಿಮರ್ದನನಾದ ತನ್ನನ್ನು ದುಷ್ಟರು ದೂರತಳುತ್ತಿದ್ದಾರೆ. ಇವರು ಏನೇ ಮಾಡಿದರೂ ನಾವು ಪರರಾಶ್ರಯಬೇಡುವುದಿಲ್ಲ. ಶ್ರೀಕೃಷ್ಣನೊಬ್ಬನು ನಮಗೆ ಇದ್ದರೆ ಲೋಕವೇ ನಮ್ಮದಾಗಿರುತ್ತದೆ. ಅಣ್ಣಾ ಹೆದರಬೇಡ ನಮ್ಮನ್ನು ಆ ಪಾಪಿ ಹಸ್ತಿನಾವತಿಯಿಂದ ಕಳುಹಿಸಲು ಸಾಧ್ಯವಾಗದಂತೆ ಅವನನ್ನು ಪ್ರತಿಭಟಿಸಿ ರಾಜ್ಯವಾಳಬಹುದು. ಆದರೆ ನಿನಗೆ ವಿರೋಧ ಕಾರ್ಯ ಮಾಡಬಾರದೆಂದು ಹೊರಡುತ್ತಲಿದ್ದೇವೆ'' ಎಂದು ಎಲ್ಲರೂ ಒಮ್ಮತವಾಗಿ ಹೊರಡಲು ನಿರ್ಧರಿಸಿದರು. ವಿದುರನಿಗೆ ಕೌರವರ ಕುತಂತ್ರ ತಿಳಿಯಿತು. ಪಾಂಡವರನ್ನು ಅರಗಿನ ಮನೆಯಲ್ಲಿರಿಸಿ ಅಗ್ನಿಗೆ ಆಹುತಿಕೊಡಲಿಚ್ಛಿಸಿದ್ದಾರೆ ಅದನ್ನು ತಪ್ಪಿಸಬೇಕು'' ಎಂದುಕೊಂಡು

ಪಾಂಡವರು ವಾರಣಾವತಿಗೆ ಹೊರಟಾಗ ಅವರಿಗೆ ಮಾತ್ರ ಅರ್ಥವಾಗುವಂತೆ ಅನೇಕ ಗುಹ್ಯ ವಚನಗಳಿಂದ ಅವರಿಗೆ ಮುಂದಾಗುವ ಆಪತ್ತಿನ ಸಂಭವವನ್ನು ಸೂಚನೆಕೊಟ್ಟು ಎಚ್ಚರದಿಂದಿರುವಂತೆ ರಹಸ್ಯದಲ್ಲಿ ತಿಳಿಸಿದನು. ಪಾಂಡವರು ಹೆಜ್ಜೆ ಹೆಜ್ಜೆಗೂ ಹರಿಯನ್ನು ಸ್ಮರಣೆ ಮಾಡುತ್ತ ಎಲ್ಲವೂ ಅವನ ಆಧೀನವಾಗಿರುವಾಗ ಅಸ್ವತಂತ್ರರಾದ ನಾವು ಏತಕ್ಕಾಗಿ ಬಡಿದಾಡಬೇಕು ಅವನ ಇಚ್ಛೆಯಂತೆ ನಡೆಯಲಿ'' ಎಂದು ಮಾತನಾಡಿಕೊಂಡು ಸಕಲ ಜನರನ್ನೂ ಸೇರಿಸಿ ತಮ್ಮ ವಾರಣಾವತಿಯ ಪ್ರಯಾಣವನ್ನು ತಿಳಿಸಿದರು. ಗಜಪುರಿಯಜನರು ಪಾಂಡವರನ್ನು ಅಗಲುವುದು ನಮಗೆಲ್ಲರಿಗೂ ವಿಷಾದದಮಾತಾದರೂ ರಾಜಾಜ್ಞೆಯಂತೆ ನಡೆಯಲೇಬೇಕೆಂದು ತಮ್ಮ ಅಭಿಮಾನವನ್ನು ರಾಜಪರಿವಾರದವರ ಮುಂದೆ ಅಭಿವ್ಯಕ್ತಗೊಳಿಸಿದರು. ದುರ್ಯೋಧನನಿಗೆ ಪಾಂಡವರನ್ನು ಊರುಬಿಟ್ಟು ಓಡಿಸಿದರೂ ಸಮಾಧಾನವಿರಲಿಲ್ಲ.

ಪಾಂಡವರು ಸ್ವಲ್ಪವೂ ಅಳುಕದೆ ಹೊರಟ ಅವರ ರೀತಿ. ಅವರ ಪರಾಕ್ರಮತೇಜಸ್ಸು ಪ್ರಜಾರಂಜನೆಯ ಆಕರ್ಷಕಶಕ್ತಿ ಎಲ್ಲವನ್ನು ನೋಡಿ ಪಾಂಡವರು ಭೂಲೋಕದಲ್ಲಿ ಎಲ್ಲಿದ್ದರೂ ತನಗೆ ವಿಪತ್ತು ತಪ್ಪಿದ್ದಲ್ಲ ಅವರ ವಿಚಿತ್ರಶಕ್ತಿ ಯಾವ ಕಾಲಕ್ಕೆ ಹೇಗೆ ಪರಿವರ್ತನೆ ಆಗುತ್ತದೆಂದು ಹೇಳಲಿಕ್ಕಾಗದು'' ಎಂದು ತನ್ನ ಪ್ರಧಾನಿಯಾದ ಪುರೋಚನನನ್ನು ಬರಮಾಡಿಕೊಂಡನು. ಪೂರೋಚನನು ಪೂರ್ವದಲ್ಲಿ ರಾವಣನಿಗೆ ಪ್ರಧಾನಿಯಾಗಿದ್ದ ಪ್ರಹಸ್ತನೆಂಬ ಈತನು ಹರಿದ್ವೇಶ ಮಾಡುವುದರಲ್ಲಿ ನಿಸ್ಸೀಮನಾಗಿದ್ದನು. ಇವನು ಪಾಂಡವರೆಲ್ಲರನ್ನು ನಿರ್ಮೂಲ ಮಾಡುವ ತಂತ್ರ ಯೋಚಿಸಿದ. ವಾರಣಾವತಿಯಲ್ಲಿ ನವರತ್ನಗಳಿಂದ ಬೆಳ್ಳಿ–ಬಂಗಾರಗಳಿಂದ ಅಲಂಕರಿಲ್ಪಟ್ಟ ಒಂದು ಅರಗಿನ ಅರಮನೆಯನ್ನು ನಿರ್ಮಾಣಮಾಡುವ ಯೋಜನೆ ಹಾಕಿದ. ಅದರ ನಿರ್ವಾಣ ಬಹಳ ಜಾಗ್ರತೆ ಆಗಬೇಕು. ಜನರ ಕಣ್ಣಿಗೆ ಕಾಣಿಸದಂತೆ ಇರುಳು ಹೊತ್ತಿನಲ್ಲಿ ಹೊತ್ತುರಿಯುವಂತಹ ವಸ್ತುಗಳನ್ನು ಕಲಬೆರಕೆ ಮಾಡಿ ಬಹಳ ಆಕರ್ಶಣವಾಗಿ ಅದರ ರಹಸ್ಯಯಾರಿಗೂ ತಿಳಿಯದ ರೀತಿ ನಿರ್ಮಾಣವಾಗುವಂತೆ ವ್ಯವಸ್ಥೆಮಾಡಿ ಅನೇಕ ದೈತ್ಯಸಮೂಹದವರಿಂದ ವಿರಚಿಸಿದನು.

ಪಾಂಡವರು ತಮಗಾಗಿ ಕಟ್ಟಿಸಿದ್ದರಾಜಭವನವನ್ನು ಪ್ರವೇಶ ಮಾಡಿದರು. ವಾಯುಪುತ್ರನು ಓಹೋ! ಇದು ಅಗ್ನಿಗೆ ಪ್ರೀತಿಕರವಾದ ಮನೆ ಅಗ್ನಿಕುಂಡವೆಂದೇ ಹೇಳಬೇಕು. ಅಣ್ಣಾ, ಮೇಣದಬತ್ತಿ ಅರಗು, ಎಣ್ಣೆಗಳ ಗಂಧವನ್ನು ಗಮನಿಸಿದೆಯಾ?'' ಎಂದು ಸಹೋದರರ ಮುಂದೆ ಆಕೃತ್ರಿಮ ಮನೆಯ ಒಳಗುಟ್ಟನು ತಿಳಿಸಿದನು.

ಕುಂತಿಯನ್ನು ನಕುಲಸಹದೇವರನ್ನು ಕುರಿತು ಈ ಮನೆ ಮಣಿಮಯವಾಗಿ ಕಂಡರೂ ಇದು ಸುಖನಿಲಯವೆಂಬ ಭ್ರಾಂತಿಯಿಂದ ವಿಶ್ರಮಿಸಿಕೊಳ್ಳಬೇಡಿರಿ ಮೈಮರೆತರೆ ಮರಣ ಮುಂದೆ ಬರುತ್ತದೆ. ಎಚ್ಚರದಿಂದಿರಿ'' ಎಂದು ಸೂಚಿಸಿ ಎಲ್ಲರನ್ನು ತನ್ನ ಬಲ ಪಂಜರದಲ್ಲಿಟ್ಟುಕೊಂಡು ರಕ್ಷಿಸುತ್ತಿದ್ದನು.

ಇತ್ತ ವಿದುರನು ಪಾಪಿಪುರೋಚನನು ಲಾಕ್ಷಾಗೃಹ ನಿರ್ಮಾಣಮಾಡಿ ಪಾಂಡವರ ವಾಸಕ್ಕೆ ಸಿದ್ಧಪಡಿಸಿರುವ ಗುಟ್ಟನ್ನು ಗೂಢಚಾರರಿಂದ ತಿಳಿದು ತನ್ನ ಆಪ್ತದೂತನಾದ ಖನಕನೆಂಬುವನನ್ನು ಕುರಿತು ''ಖನಕಾ! ಪಾಂಡವರನ್ನು ಬೆಂಕಿಯಪಾಲು ಮಾಡುವ ಉದ್ದಿಶ್ಯದಿಂದ ಹತ್ತಿ ಉರಿಯುವಂತ ಅರಮನೆಯನ್ನು ನಿರ್ಮಾಣಮಾಡಿಕೊಟ್ಟಿದ್ದಾರೆ. ಆ ಮನೆ ಸ್ವಲ್ಪ ಅಗ್ನಿಸ್ಪರ್ಶವಾದರೆ ಸಾಕು ಆಕ್ಷಣವೇ ಭುಗಿಲ್ ಎಂದು ಉರಿದೆದ್ದು ಭಸ್ಮಮಾಡುವಂತೆ ರಚಿಸಲ್ಪಟ್ಟಿದೆ. ಆದ್ದರಿಂದ ನೀನು ಮನೆಯ ಒಳಗಿನಿಂದಲೇ ಒಂದು ಸುರಂಗದಲ್ಲಿ ಜಾರಿ ದೂರಸರಿಯುವಂತಹ ಕಾರ್ಯವನ್ನು ನೀನು ಮಾಡಬೇಕು. ನಿನ್ನ ಕಾರ್ಯ ಯಾರಿಗೂ ತಿಳಿಯಬಾರದು ಈ ವಿಷಯವನ್ನು ನೀನು ಭೀಮನಿಗೆ ತಿಳಿಸಿ ಗುಪ್ತಕಾರ್ಯ ಮುಗಿಸುವವರೆಗೂ ಪುರೋಚನನು ಅಗ್ನಿ ಸ್ಪರ್ಶಮಾಡದಂತೆ ಕಾದಿದ್ದು ಪಾರಾಗಬೇಕೆಂದು ಹೇಳಿ ಬಾ'' ಎಂದು ಏರ್ಪಾಡುಮಾಡಿ ಕಳುಹಿಸಿಕೊಟ್ಟನು.

ಖನಕನು ಪಾಂಡವರ ಬಳಿಗೆ ಬಂದನು. ತಾನು ಪಾಂಡವರ ಬಳಿಗೆ ಬಂದಿರುವ ವಿಚಾರ ಯಾರೊಬ್ಬರೂ ತಿಳಿಯದಂತೆ ಎಚ್ಚರವಹಿಸಿ ಭೀಮಸೇನನನ್ನು ಸಂಧಿಸಿ ವಿದುರನು ನೀವು ಲಾಕ್ಷಾಗೃಹದಲ್ಲಿ ಸುಟ್ಟು ಸಾಯದಂತೆ ತಪ್ಪಿಸಿಕೊಳ್ಳಲು ಸುರಂಗವನ್ನು ಕೊರೆದು ಬಾ'' ಎಂದು ಆಜ್ಞೆ ಮಾಡಿರುವಂತೆ ನಿಮಗೆ ಇಲ್ಲಿಂದ ಪಾರಾಗಲು ಒಂದು ಒಳದಾರಿಯನ್ನು ಸಿದ್ಧಪಡಿಸುತ್ತೇನೆ. ಆವರೆಗೆ ನೀವು ಪುರೋಚನನ ಪಾಪ ಕಾರ್ಯಕ್ಕೆ ಅವಕಾಶಕೊಡದಂತೆ ಕಾದಿರಲು ಸೂಚನೆ ಕೊಟ್ಟಿದ್ದಾರೆ. ನನಗೆ ಆ ಪುಣ್ಯಾಕಾರ್ಯಮಾಡಲು ಅಪ್ಪಣೆಕೊಡಿ'' ಎಂದು ಕೇಳಿಕೊಂಡು ಪುಣ್ಯಾತ್ಮನಾದ ಖನಕನು ಕಾರ್ಯಕ್ಕೆ ತೊಡಗಿದನು. ಖನಕನು ಬಹಳ ಶ್ರದ್ಧಾಭಾವದಿಂದ ಸುರಂಗ ಮಾರ್ಗವನ್ನು ಆರು ತಿಂಗಳಾಗುವುದರೊಳಗೆ ಸಿದ್ಧಪಡಿಸಿ ಭೀಮನಿಗೆ ತಿಳಿಸಿ ವಿದುರನ ಬಳಿಗೆ ಬಂದನು.

## ಪುರೋಚನನ ಪಾಪದ ಫಲ

ಪಾಂಡವರು ಅರಗಿನ ಮನೆಯಲ್ಲಿ ಆರು ತಿಂಗಳುಗಳಿಂದ ವಾಸ ಮಾಡುತ್ತಿದ್ದರೂ ಮನೆಗೆ ಬೆಂಕಿ ಇಡಲು ಅವಕಾಶವಾಗಲಿಲ್ಲ ಅವರ ಕೀರ್ತಿ, ಪರಾಕ್ರರ್ಮ ವೈಭವ ವಾರಾಣಾವತಿಯಲ್ಲೂ ಹಸ್ತಿನಾವತಿಗಿಂತಲೂ ಅಧಿಕ ರೀತಿಯಲ್ಲಿ ಪ್ರಕಾಶಿಸುತ್ತಲಿದೆ. ಇನ್ನು ಇವರನ್ನು ಹೀಗೆಯೇ ಬಿಟ್ಟರೆ ನಮಗೇ ಅಪಾಯಬರಬಹುದು ಎಂದು ಪುರೋಚನನು ಆಲೋಚಿಸಿ ತನ್ನ ಸಹೋದರಿ ಒಬ್ಬಳು ವಿಷಪ್ರಯೋಗ ಮಾಡಿ ಪ್ರಾಣಹತ್ಯ ಕಾರ್ಯದಲ್ಲಿ ಬಹಳ ಯಶಸ್ವಿಯಾಗಿದ್ದ ಕಾರಣ ಆಕೆಯನ್ನು ಪಾಂಡವರನ್ನು ವಿಷಪ್ರಯೋಗದಿಂದ ಕೊಲ್ಲಲು ಕರೆಸಿಕೊಂಡನು. ಪುರೋಚನನ ಸಹೋದರಿಯು ಅನೇಕಬಗೆಯ ತಿಂಡಿ ತಿನಸುಗಳಲ್ಲಿ ಕಾಲಕೂಟವಿಷವನ್ನು ಬೆರಸಿ ತಂದಿದ್ದಳು.

ಅದನ್ನು ಕುಂತೀದೇವಿಯ ಕೈಲಿಕೊಟ್ಟು '' ಅಮ್ಮಾ ನಿಮಗಾಗಿ ಮಾಡಿತಂದಿರುವ ಈ ಪದಾರ್ಥಗಳನ್ನು ನಿಮ್ಮ ಮಕ್ಕಳಿಗೆ ಕೊಡಿರಿ'' ಎಂದು ಹೇಳಿ ಕೊಟ್ಟಳು. ಸರ್ವಜ್ಞಮೂರ್ತಿ

ಭೀಮಸೇನನಿಗೆ ಅದು ವಿಷಪದಾರ್ಥವೆಂದು ಗೊತ್ತಾಯಿತು. ತಾಯಿಯನ್ನು ಕುರಿತು ''ಈ ತಿಂಡಿಗಳನ್ನು ನೀವಾರೂ ಮುಟ್ಟಬೇಡಿರಿ. ನಾನೊಬ್ಬನು ಇದನ್ನು ತಿಂದು ಅರಗಿಸಿಕೊಳಬಲ್ಲೆನು'' ಎಂದು ಹೇಳಿ ಎಲ್ಲವನ್ನು ಭುಂಜಿಸಿ ಶ್ರೀಕೃಷ್ಣಾರ್ಪಣ'' ಎಂದನು.

ಮುಖ್ಯಪ್ರಾಣಾಂತರ್ಗತ ಶ್ರೀಹರಿಗೆ ಅದು ಅರ್ಪಣವಾಯಿತೆಂದರೆ ಅದರಲ್ಲಿನ ವಿಷನಾಶವಾಗಿ ಅಮೃತವಾಗಿ ಭೀಮಸೇನನ ಬಲ ತೇಜಸ್ಸು ವೃದ್ಧಿಗೊಂಡಿತು. ಹರಿಭಕ್ತರಿಗೆ ವಿಷಪ್ರಯೋಗ ಮಾಡಿದ ಪಾಪಿಗಳ ಪಾಪದ ಕೊಡ ತುಂಬಿತು. ಪಂಡವರನ್ನು ವಿಷವುಣಿಸಿ ಕೊಲ್ಲಲು ಬಂದಿದ್ದ ದುಷ್ಟಸ್ತ್ರೀಯು ಹಿಂದೆ ರುದ್ರದೇವರನ್ನು ಕುರಿತು ಘೋರತಪಸ್ಸುಮಾಡಿ ತನ್ನ ಯೋಗ್ಯತೆಗೆ ಮೀರಿದ ವರ ಕೇಳಿದ್ದಳು ''ನಾನು ಅದಿತೀದೇವಿಯಾಗಿ ಸಕಲದೇವತೆಗಳೂ ನನ್ನ ಮಕ್ಕಳಾಗಬೇಕೆಂದು ವರವನ್ನು ಕೇಳಿದಾಗ'' ರುದ್ರನು ''ನಿನ್ನ ವರ ಫಲಿಸಬೇಕಾದರೆ ಮುಂದೆ ಒಂದು ಸಂದರ್ಭದಲ್ಲಿ ನೀನು ನಿನ್ನ ಮಕ್ಕಳೊಡಗೂಡಿ ಮರಣಹೊಂದುವ ಪ್ರಸಂಗ ಬರುತ್ತದೆ. ಆಗ ನೀನು ಬದುಕಿದ್ದರೆ ನಿನ್ನ ಇಷ್ಟಾರ್ಥ ನೆರವೇರುತ್ತದೆಂದು'' ಹೇಳಿದ್ದನು.

ಆಕೆಯ ತಾಮಸದ ತಪಸ್ಸಿನ ದುಷ್ಫಲದಿಂದಲೂ ಶ್ರೀಹರಿದ್ವೇಷದ ಪಾಪದಿಂದಲೂ ಅವಳು ಅಂಧಂತಮಸ್ಸಿಗೆ ಯೋಗ್ಯಳೆಂದು ತಿಳಿದ ಭೀಮಸೇನನು ಕೃತ್ರಿಮ ಭವನಕ್ಕೆ ಬೆಂಕಿಯ ಸ್ಪರ್ಶ ಮಾಡಿದನು. ಅದನ್ನು ನಿರ್ಮಾಣಮಾಡಿದ ಪುರೋಚನನು ಭಗಿನಿ ಮಕ್ಕಳೊಡಗೂಡಿ ಎಲ್ಲರೂ ಹಿಡಿಬೂದಿಯಾಗುವಂತೆ ಮಾಡಿ ತನ್ನ ಅಣ್ಣ ತಮ್ಮಂದಿರನ್ನೂ ತಾಯಿಯನ್ನು ತನ್ನ ಶ್ರೇಷ್ಠಕರವಾದ ಸುಂದರಾಂಗದ ಮೇಲೆ ಧರಿಸಿ ಮುಂದೆ ನಡೆಸಬೇಕಾದ ಭಗವತ್ಕಾರ್ಯ ಸಾಧನೆಗಾಗಿ ಸುರಂಗಮಾರ್ಗದಿಂದ ಹೊರಟನು.

## ವಾರಣಾವತಿಯಲ್ಲಿ ಪಾಂಡವರಿಗಾಗಿ ಪ್ರಲಾಪ

ಪಾಂಡವರು ಸುರಂಗಮಾರ್ಗದಲ್ಲಿ ನುಸುಳಿಹೋದ ಸಮಾಚಾರ ದೇವತೆಗಳಿಗೆ ಸಂತೋಷವಾಯಿತು. ನರಲೋಕದವರಿಗೆ ಪಾಂಡವರು ಸತ್ತರೆಂಬ ಸಂಕಟ ಸಹಿಸಲಾಗದಂತಿತ್ತು. ಉರಿವ ವಸ್ತುಗಳಿಗೆ ಬೆಂಕಿಸೋಂಕಿದಾಗ ಅದರ ಕಮರು ಘಾಟು ದಿಕ್ಕು ದಿಕ್ಕಿಗೂ ವ್ಯಾಪಿಸಿತು. ಪುರಭವನಗಳಲ್ಲಿ ನಿದ್ರಾವಶರಾಗಿದ್ದ ನಾಗರೀಕರು ಸುತ್ತಕೊಂಡಿದ್ದ ಕಮರು ವಾಸನೆಯನ್ನು ತಾಳಲಾರದೆ ಎದ್ದು ಓಡಿದರು. ನವರತ್ನ ಖಚಿತವಾದ ಭವ್ಯಭವನ ಬೆಂಕಿಯ ರಾಶಿಯಾಗಿತ್ತು. ಅರಗು, ಹತ್ತಿ, ಎಣ್ಣೆ, ತುಪ್ಪ ಮೊದಲಾದ ವಸ್ತುಗಳನ್ನು ಒಳಗೊಂಡ ಮನೆ ಅದು ಎಂದು ಎಲ್ಲರಿಗೂ ಮನವರಿಕೆಯಾಯಿತು. ಈ ಮನೆ ಪಾಂಡವರನ್ನು ನಿರ್ಮೂಲ ಮಾಡಲಿಕ್ಕಾಗಿಯೇ ನಿರ್ಮಾಣವಾದ ಮನೆ. ಪಾಪ ಪಾಂಡವರು ಐದು ಜನರೂ ತಾಯಿಯೊಂದಿಗೆ ಸುಟ್ಟು ಬೂದಿಯಾದರು ಎಂದು ಪರಿತಾಪದಿಂದ ಎಲ್ಲರೂ ಪ್ರಲಾಪ ಮಾಡುತ್ತಿದ್ದರು. ಹಸ್ತಿನಾವತಿಗೂ ವಾರಾಣಾವತಿಯಲ್ಲಿ ಪಾಂಡವರು ಸುಟ್ಟು ಸತ್ತರೆಂಬ ಸುದ್ದಿ ಮುಟ್ಟಿತು. ದುರ್ಯೋಧನಾದಿಗಳಿಗೆ

ಪಾಂಡವರ ಪ್ರಾಣಹರಣ ಆನಂದದಾಯಕ ವಿಷಯವಾದರೂ ಅದನ್ನು ಹೊರಬಿಡದೆ ಎಲ್ಲರಂತೆ ತಾವೂ ಬಹಳ ದುಃಖದಿಂದ ಪಾಂಡವರ ಗುಣಗಾನ ಮಾಡುತ್ತಾ ರೋಧನ ಮಾಡುತ್ತಿದ್ದರು.

## ಭಾರತೀದೇವಿಯರ ಕೃಪಾಭಾಗ್ಯ ಪಡೆದ ಹಿಡಂಬಿ

ಸುರಂಗ ಮಾರ್ಗದಿಂದ ಮುಂದೆ ನಡೆದ ಮಾರುತಿದೇವನ ಚಲನೆಯ ರಭಸವನ್ನು ತಾಳಲಾರದೆ ಪಾಂಡವರು ಮತ್ತು ಕುಂತಿ ''ಭೀಮಾ! ನಮಗೆ ನಿನ್ನ ರಭಸವನ್ನು ತಡೆಯಲಾಗುತ್ತಿಲ್ಲಾ. ಬಾಯಿ, ಗಂಟಲು ಒಣಗುತ್ತಲಿದೆ. ಒಂದು ತೊಟ್ಟು ನೀರು ತಂದುಕೊಡಪ್ಪಾ'' ಎಂದು ಕೇಳಿದರು. ಭೀಮನಿಗೆ ಕರುಣದ ಕಡಲು ಒಡೆಯಿತು. ''ಪಾಪ ನನ್ನ ರಭಸ ಇವರಾರು ತಡೆಯಲಾರರು. ಬಾಯಾರಿಕೆಯಿಂದ ಬಳಲಿದ ಇವರಿಗೆ ನೀರು ತಂದು ಕುಡಿಸುವ ಪರಿ ಹೇಗೆ?'' ಎಂದು ಯೋಚಿಸಿ ಪ್ರವಾಹದತ್ತ ಹೊರಟನು. ಅವನು ದುಷ್ಟರನ್ನು ಈಗಲೇ ತನ್ನ ಪಾದಘಾತದಿಂದ ಧೂಳೆಬ್ಬಿಸಿ ಬಿಡುತ್ತೇನೆ ಎಂದು ಸಿಟ್ಟಿನ ಭರದಿಂದ ಬರುತ್ತಿದ್ದನೋ ಎಂದು ಗಿಡಮರಗಳು ಅವನಿಗೆ ಶರಾಣಗತವಾದಂತೆ ಮುರಿದು ಬೀಳುತ್ತಿದ್ದವು. ಗಿರಿಶಿಖರಗಳು ನಡುಗಿದವು. ಭೀಮನು ತಾನು ಹೊತ್ತಿದ್ದ ಸಹೋದರರನ್ನೂ ತಾಯಿಯನ್ನು ಭಾಗೀರಥೀ ಬಳಿ ಇಳಿಸಿ ಕಮಲಪತ್ರದ ದೊನ್ನೆಯಲ್ಲಿ ನೀರು ತುಂಬಿ ತಂದು ಎಲ್ಲರಿಗೂ ಕುಡಿಸಿ ಸಂತೈಸಿದನು. ಆ ವೇಳೆಗೆ ಭಾಗೀರಥೀ ನದಿಯನ್ನು ದಾಟಿಹೋಗಲು ವಿದುರನು ಕಳುಹಿಸಿದ ನಾವೆಯು ಬಂದಿತು. ''ಸ್ವಾಮಿ, ತಮ್ಮನ್ನು ಪ್ರವಾಹದಿಂದ ದಾಟಿಸಿ ದಡಕ್ಕೆ ಸೇರಿಸಲು ವಿದುರನು ಆಜ್ಞೆ ಮಾಡಿದ್ದಾನೆ. ಬನ್ನಿ ಏರಿ ಕುಳಿತುಕೊಳ್ಳಿ'' ಎಂದಾಗ ಭೀಮನು ''ಶ್ರೀಕೃಷ್ಣಾ! ನೀನು ಯಾವ ರೂಪದಿಂದಲೋ ಬಂದು ನಮ್ಮನ್ನು ದಡಸೇರಿಸುವ ಭಾರಹೊತ್ತಿರುವಾಗ ನಮಗೇಕೆ ಚಿಂತೆ?'' ಎಂದು ಹೇಳುತ್ತ ಭಾಗೀರಥಿಯನ್ನು ದಾಟಿ ಬಂದು ಹಿಡಂಬಾಸುರನ ಅರಣ್ಯದಲ್ಲಿ ಒಂದು ಉದ್ಯಾನವನ ಪ್ರಶಸ್ತವಾಗಿರಲು ಅಲ್ಲಿ ಎಲ್ಲರನ್ನು ಇಳಿಸಿ ಹಸಿರು ಸೊಪ್ಪಿನ ಹಾಸಿಗೆ ಹಾಸಿ ಎಲ್ಲರನ್ನು ಮಲಗಿಸಿ ತಾನು ಅವರ ಕಾವಲಿಗಾಗಿ ನಿಂತಿದ್ದನು. ಆಘೋರಾರಣ್ಯವು ಹಿಡಂಬಾಸುರನ ಸ್ವತ್ತಾಗಿತ್ತು. ಆ ಅಸುರನಿಗೆ ಹಿಡಂಬಿ ಎಂಬ ಒಬ್ಬ ಸಹೋದರಿ ಇದ್ದಳು. ಆಕೆಯ ಪೂರ್ವಜನ್ಮದ ವೃತ್ತಾಂತದ ಸವಿಸನ್ನಿವೇಶ ಸ್ವಾರಸ್ಯವಾಗಿದೆ.

ಆಗ ಹಿಡಂಬಿ ಎಂಬ ರಾಕ್ಷಸ ಸ್ತ್ರೀ ಓರ್ವಳು ನರಮಾಂಸಕ್ಕಾಗಿ ಅಣ್ಣ ಹಿಡಂಬನ ಆಜ್ಞೆಯಂತೆ ಸುತ್ತಾಡುತ್ತಾ ಬಂದರೆ ಅಲ್ಲಿ ಭೀಮಸೇನನ ದರ್ಶನ ಆಯಿತು. ಈಕೆಯು ಪೂರ್ವದಲ್ಲಿ ಸ್ವರ್ಗಸಂಪತ್ತಿಗೆ ಅಭಿಮಾನಿದೇವತೆ ಆಗಿದ್ದಳು. ಒಂದುದಿನ ಈಕೆ ತನ್ನ ಪ್ರಭುವಾದ ದೇವೇಂದ್ರನ ಮುಂದೆ ಅವಿನಯದಿಂದ ನಡೆದು ತನ್ನ ಸುಂದರಾಂಗದ ಪ್ರದರ್ಶನದಿಂದ ನಿರ್ಲಜ್ಜಳಾಗಿ ನರ್ತನಮಾಡುತ್ತಿರುವುದನ್ನು ನೋಡಿದ ಶಚೀದೇವಿಯು ''ನೀನು ದೇವಲೋಕದರಸನ ಮುಂದೆ ವಿಲಾಸಿನಿಯಂತೆ ವರ್ತಿಸಿದಕಾರಣ ರಾಕ್ಷಸ ಸ್ತ್ರೀಯಾಗಿ ಜನ್ಮತಾಳು'' ಎಂದು ಶಪಿಸಿದಳು.

ಇದರಿಂದ ಶೋಕತಪ್ತಳಾದ ದೇವತಾಸ್ತ್ರೀಯು ಭಾರತೀದೇವಿಯನ್ನು ಮೊರೆಹೊಕ್ಕು ಅನೇಕ ವರ್ಷಗಳ ಕಾಲ ತಪಸ್ಸು ಮಾಡಿದಳು. ಅವಳ ಮೊರೆಕೇಳಿದ ಭಾರತೀದೇವಿಯು ನೀನು ನಿನಗಿಂತಲೂ ಉತ್ತಮರ ಮುಂದೆ ಅಗೌರವದಿಂದ ನಡೆದಕಾರಣ ಶಾಪಗ್ರಸ್ಥಳಾಗಿ ರಾಕ್ಷಸಯೋನಿಯಲ್ಲೇ ಹುಟ್ಟಲೇಬೇಕು. ಇದು ಶ್ರೀಹರಿ ಸಂಕಲ್ಪ. ಆದರೂ ನಿನ್ನ ಶಾಪಪರಿಹಾರಾರ್ಥವಾಗಿ ನನ್ನ ಆವೇಶದಿಂದ ಹುಟ್ಟುವಿ. ನಿನ್ನಲ್ಲಿರುವ ನನ್ನನ್ನು ಸಂಪರ್ಕಿಸಲು ನನ್ನ ಪತಿ ನಿನ್ನನ್ನು ವಿವಾಹವಾಗುವನು. ಇದೆಲ್ಲವು ಭಗವತ್ಕಾರ್ಯ ಸಾಧನೆಗಾಗಿ ನಡೆಯುತ್ತವೆ'' ಎಂದು ಶ್ರೀದೇವೆಗೆ ಭಾರತೀದೇವಿಯು ಅನುಗ್ರಹಮಾಡಿದಂತೆ ಈಗ ಆಸ್ವರ್ಗದ ಸಂಪತ್ತಾಭಿಮಾನಿದೇವತೆಯಾದ ಶ್ರೀದೇವಿಯೇ ಹಿಡಂಬಿಯಾಗಿ ಬಂದಿದ್ದಳು.

ಭಾರತೀದೇವಿಯ ಆವೇಶವಿದ್ದ ಹಿಡಂಬಿಗೆ ಭೀಮಸೇನನ ದರ್ಶನ ಭಾಗ್ಯ ಆದಕೂಡಲೇ ದಿವ್ಯಜ್ಞಾನ ಉಂಟಾಗಿ ಆಕೆಯಲ್ಲಿ ಭಕ್ತಿ ತುಂಬಿಬಂದಿತು. ಭೀಮನಪಾದದ ಮೇಲೆ ತಲೆ ಯಾರಿ ನನಗೆ ನಿನ್ನ ದಾಸಿಯಾಗಲು ಅನುಮತಿ ನೀಡು'' ಎಂದು ಪ್ರಾರ್ಥಿಸಿದಳು. ಭೀಮನು ಅಪರೋಕ್ಷಜ್ಞಾನಿ ಸರ್ವವನ್ನು ಬಲ್ಲವನಾದಾಗ್ಯೂ ಅಸುರ ಮೋಹನಾರ್ಥವಾಗಿ ನಮ್ಮ ಹಿರಿಯ ಅಣ್ಣನಿಗೆ ಮದುವೆ ಆಗದೆ ನಾನು ಮದುವೆ ಆಗಬಾರದೆಂದು ಹೇಳಿ ಬಿಟ್ಟನು. ಅಸಮ್ಮತಿಯ ಮಾತು ಕೇಳಿದ ಹಿಡಂಬಿಯು '' ಸ್ವಾಮಿ ನನ್ನನ್ನು ನೀವು ವರಿಸಬೇಕಾಗಿರುವುದು ಭಗವತ್ಸಂಕಲ್ಪ ನಾರಾಯಣ ರೂಪೀ ವೇದವ್ಯಾಸರೇ ನಿಮಗೆ ಹೇಳಿದಾಗ ನೀವು ವರಿಸಲೇಬೇಕಗುವುದು'' ಎಂದು ಇಬ್ಬರಿಗೂ ವಾದವಿವಾದ ನಡೆಯುತ್ತಿತ್ತು.

ಆಗ ಹಿಡಂಬನು ತಂಗಿಯನ್ನು ಹುಡುಕಿಕೊಂಡು ಬಂದರೆ ಆಕೆ ನರಮಾನವನ ಎದುರಿಗೆ ಸುಂದರ ಸ್ತ್ರೀರೂಪದಿಂದ ನಿಂತು ಮಾತನಾಡುವುದನ್ನು ಕಂಡು ಅಬ್ಬರಿಸುತ್ತ ಅವರಿಬ್ಬರ ನಡುವೆ ಹಾರಿ ನಿಂತು ''ಹಿಡಂಬೀ! ನರಮಾಂಸತರಲು ನಿನ್ನನ್ನು ಕಳುಹಿಸಿದರೆ ನೀನು ನರಸಂಗಕ್ಕೆ ಮರುಳಾಗಿರುವೆಯಾ? ಈಗಲೇ ನಿನ್ನನ್ನು ಕೊಂದು ನಂತರ ನಿನ್ನನ್ನು ಮರಳುಮಾಡಿದ ಮಾನವನನ್ನು ಕೊಂದು ತಿನ್ನುತ್ತೇನೆ''

## ಹಿಡಂಬಾಸುರನ ವಧೆ

ಎಂದು ಅಬ್ಬರಿಸಿ ಅವಳನ್ನು ಕೊಲ್ಲಲು ಬಂದರೆ ಹಿಡಂಬಿ ಭೀಮನನ್ನು ಮೊರೆಹೊಕ್ಕಳು. ಮೊರೆಹೊಕ್ಕವರನ್ನು ರಕ್ಷಿಸುವ ಧರ್ಮ ದೀಕ್ಷೆವುಳ್ಳ ದೈತ್ಯ ಶತೃವಾದ ಭೀಮನು ಹಿಡಂಬನನ್ನು ದರದರನೆ ಎಳೆದು ದೂರದಲ್ಲಿ ನಿಂತು ''ಹಿಡಂಬಿ ! ಇವನನ್ನು ಮುಗಿಸಿಬರುವವರೆಗೂ ನಮ್ಮವರನ್ನು ಜೋಪಾನವಾಗಿ ನೋಡಿಕೊ. ಈ ದೈತ್ಯನ ಅಬ್ಬರಕ್ಕೆ ಅವರ ವಿಶ್ರಾಂತಿಗೆ ತೊಂದರೆ ಆಗಬಾರದೆಂದು ಹಿಡಂಬನ ಚೀರಾಟವನ್ನು ನಿಲ್ಲಿಸಿ ದೂರದ ಪ್ರದೇಶಕ್ಕೆ ಎಳೆದೊಯ್ದನು.

ಅಲ್ಲಿ ಮುಷ್ಟಿಯುದ್ಧ ಘೋರವಾಗಿ ನಡೆಯಿತು. ಅವರ ಕೈಮುಷ್ಟಿಯಿಂದ ಗುದ್ದಿದಶಬ್ಧ ಉಕ್ಕಿನ ಗುಂಡುಗಳಿಂದ ಬಂಡೆಗೆ ಬಡೆದಂತೆ ಶಬ್ಧ ಕೇಳುತ್ತಿತ್ತು ಅದರೊಂದಿಗೆ ರಣನಾದದ ಶಬ್ದ ಸೇರಿ ಅವರು ಭೂಮಿ ತಗ್ಗು ಬೀಳುವಂತೆ ಜಿಗಿಯುತ್ತಿದ್ದರು. ಆ ಎಲ್ಲಾ ಶಬ್ದಗಳು ಸೇರಿ ಬ್ರಹ್ಮಾಂಡವೇ ಸಿಡಿಯುತ್ತದೆಂದು ಗಾಬರಿಯಾಗಿ ಮಲಗಿದ್ದವರು ಎದ್ದು ''ದುರ್ಯೋಧನನೇ ನಾವು ಸತ್ತಿಲ್ಲ ಬದುಕಿ ಬಂದಿದ್ದೇವೆಂಬ ರೋಷದಿಂದ ಸೇನಾ ಸಮೂಹದೊಡನೆ ಬಂದು ಭೀಮನೊಡನೆ ಯುದ್ಧ ಮಾಡುತ್ತಿದ್ದಾನೆಂದು ತಿಳಿದು ನಮ್ಮ ಉಸಿರೇ ಭೀಮನಾಗಿದ್ದಾನೆ ಅವನೇನಾದರು ಸತ್ತರೆ ಮುಂದೇನುಗತಿ?''ಎಂದು ಅಳುತ್ತಿದ್ದರು.

ಹಿಡಂಬಿಯು ಮರೆಯಲ್ಲಿ ನಿಂತು ಪಾಂಡವರು ಕುಂತಿಯೊಡನೆ ಹಲುಬಿ ಗೋಳಾಡುವುದನ್ನು ಕೇಳುತ್ತಿದ್ದಳು. ಭೀಮನು ಹಿಡಂಬಿಯೊಡನೆ ಸ್ವಲ್ಪ ಹೊತ್ತು ಸೆಣಸಾಡಿ ನಂತರ ಅವನನ್ನು ಕೆಡವಿದಾಗ ಭೂಮಿ ಅದುರಿತು. ಅವನ ಎದೆಯ ಮೇಲೇರಿದ ಭೀಮ ಮುಷ್ಟಿಯಿಂದ ಕುಟ್ಟಿದಾಗ ಅಸುರನು ರಕ್ತಕಾರಿ ಅಬ್ಬರಿಸುತ್ತ ಅಸುನೀಗಿದನು. ಭೀಮನು ಹಿಡಂಬನನ್ನು ಕೊಂದು ತಮಸ್ಸಿಗೆ ಹಾಕಿ ಶ್ರೀಹರಿಗೆ ತನ್ನ ದೈತ್ಯಸಂಹಾರದ ಸೇವೆಯನ್ನು ಅರ್ಪಣೆ ಮಾಡಿದನು.

ಹಿಡಂಬನು ರುದ್ರದೇವರನ್ನು ಕುರಿತು ತಪಸ್ಸು ಮಾಡಿ ಅವಧ್ಯವರವನ್ನು ಪಡೆದಿದ್ದೇನೆಂಬ ಗರ್ವದಿಂದ ಭೀಮನೊಡೆನೆ ಕಾಳಗವನ್ನು ನಡೆಸಿದನು. ಹರಿಮತವೇ ಹನುಮನ ಮತವಾದ್ದರಿಂದ ವಾಯುಪುತ್ರನು ರುದ್ರನ ವರವನ್ನು ಮೀರಿದರೂ ವೈಷ್ಣವನಾದ ಹರನು ಹರೀಪ್ರೀತನಾದನೆಂದು ಹರುಷ ಪಡುತ್ತಾನೆಂಬ ಅನುಸಂಧಾನವಿಟ್ಟು ದುಷ್ಟಸಂಹಾರ ಸ್ವಚ್ಛ ಮನಸ್ಸಿನಿಂದ ನೆರವೇರಿಸಿದನು. ಭೀಮನು ಭೀಷಣವದನನಾಗಿ ಬಂದಾಗ ಎಲ್ಲರೂ ಭಯದಿಂದ ನಡಗುತ್ತಿದ್ದರೆ ,

## ಭಾರತೀದೇವಿಯ ಭಕ್ತಳಿಗೆ ಅಭಯ ಪ್ರದಾನ

ಪಾಪಿಗಳಿಗೆ ಕಠೋರನೂ ಶ್ರೀಹರಿಭಕ್ತರಿಗೆ ಕರುಣೆಯೂ ಆದ ಭೀಮಸೇನನು ಎಲ್ಲರನೂ ಸಮಾಧಾನ ಪಡಿಸಿ ಹಿಡಂಬನ ವೃತ್ತಾಂತವನ್ನು ತಿಳಿಸಿ ''ತಾಯೇ! ಭೀಮಸೇನನು ನನ್ನನ್ನು ವರಿಸಿ ನನ್ನ ಜನ್ಮ ಸಾರ್ಥಕಗೊಳಿಸುವಂತೆ ಮಾಡಲೆಂದ ತಾವು ಹೇಳಿ ನನ್ನನ್ನು ಉದ್ದಾರ ಮಾಡಿರಿ'' ಎಂದು ಪ್ರಾರ್ಥಿಸಿಕೊಂಡಳು.

ಆ ವೇಳೆಗೆ ಅಸುರ ಸಂಹಾರ ಮಾಡಿದ ಭೀಮನಿಗೆ ಅನುಗ್ರಹ ಮಾಡಲಿಚ್ಛಿಸಿದ ವೇದವ್ಯಾಸರು ಪ್ರತ್ಯಕ್ಷರಾಗಲು ವೇದಪ್ರತಿಪಾದ್ಯನಾದ ದೇವೋತ್ತಮನ ದರ್ಶನದಿಂದ ಆನಂದ ಹೊಂದಿದ ಪಾಂಡವರು ಕುಂತೀದೇವಿಯೊಡನೆ ದೇವೋತ್ತಮನ ಪಾದಪೂಜೆ ಮಾಡಿದರು. ಸುಖಸ್ವರೂಪಿಯಾದ ಸದಾನಂದ ರೂಪನಾದ ಸ್ವಾಮಿ ಮೊಮ್ಮಕ್ಕಳನ್ನು ತೊಡೆಯಮೇಲೆ ಕೂಡಿಸಿಕೊಂಡು ಆನಂದವನ್ನು ವ್ಯಕ್ತಪಡಿಸುತ್ತ ತನ್ನ ಭಕ್ತರಿಗೆ ಆನಂದ ತುಂಬಿದನು.

ನೀವು ನಾರಾಯಣನಲ್ಲಿ ಸ್ವಚ್ಛಭಕ್ತಿ ಮಾಡುವವರಾದ್ದರಿಂದ ಅರಗಿನಮನೆಯಿಂದ ಉಳಿದು ಬಂದಿದ್ದೀರಿ'' ಎಂದು ಹೊಗಳಿ ವಾತ್ಸಲ್ಯವನ್ನು ತೋರಿಸಿದಾಗ ದೇವೋತ್ತಮನ ಅಮೃತವಾಕ್ಯದಿಂದ ಸಂತುಷ್ಟಿ ಹೊಂದಿದ ಪುಣ್ಯಾತ್ಮರು ಸ್ವಾಮಿಯ ಕರುಣೆಗೆ ಮಣಿದು ಭಕ್ತಿಕುಸುಮಾರ್ಚನೆ ಮಾಡಿದರು.

ಹಿಡಂಬಿಯು ಆಗ ವೇದವ್ಯಾಸರ ಕಾಲಿನ ಮೇಲೆ ಬಿದ್ದು ''ಸ್ವಾಮೀ! ನಿನ್ನ ಸಂಕಲ್ಪದಂತೆ ನನಗೆ ಭೀಮಸೇನನ ಸಂದರ್ಶನ ಭಾಗ್ಯ ದೊರಕಿತು. ಈಗ ನನ್ನನ್ನು ಪರಿಗ್ರಹಿಸುವಂತೆ ಅನುಗ್ರಹ ಮಾಡು'' ಎಂದು ಪ್ರಾರ್ಥಿಸಿಕೊಂಡಳು.

ವೇದವ್ಯಾಸರು ಆಕೆಯನ್ನು ಎಬ್ಬಿಸಿ ಅಭಯವಿತ್ತು''ಭೀಮಸೇನಾ! ಈಕೆ ಶಾಪಗ್ರಸ್ಥಳಾಗಿ ರಾಕ್ಷಸ ಜನ್ಮದಲ್ಲಿದ್ದಾಳೆ. ಭಾರತೀದೇವಿ ಈಕೆಗೆ ಅನುಗ್ರಹ ಮಾಡಿ ಇವಳಲ್ಲಿ ಆವೇಶ ಯುಕ್ತಳಾದ್ದರಿಂದ ಭಾರತೀದೇವಿಯ ವರವನ್ನು ಸತ್ಯ ಮಾಡಿ ಇವಳನ್ನು ವಿವಾಹವಾಗು ಇವಳಲ್ಲಿ ಒಬ್ಬ ಮಗನನ್ನು ಪಡೆದು ಶಾಪಮುಕ್ತಳನ್ನಾಗಿ ಮಾಡು'' ಎಂದು ಆಜ್ಞೆಮಾಡಿದಂತೆ ಭೀಮನು ಹಿಡಂಬಿಯನ್ನು ವರಿಸಿದನು.

ನವದಂಪತಿಗಳಾದ ನೀವು ನಿಶಾಚರ ವೇಳೆಯಲ್ಲಿ ಇವರನ್ನು ರಕ್ಷಿಸಬೇಕು ಹಗಲು ವೇಳೆ ಎಲ್ಲಿಗೆ ಬೇಕಾದರೂ ಹೋಗಿ ವಿಹಾರ ಸುಖವನ್ನು ಹೊಂದಿರಿ'' ಎಂದು ಹೇಳಲು ಅದರಂತೆ ರಾತ್ರಿ ಕಾಲದಲ್ಲಿ ಅವರ ಕಾವಲಿಗೆ ಇದ್ದು ರಕ್ಷಣೆ ಕೊಡುತ್ತ ಹಗಲು ವನವಿಹಾರ ಸುಖಪಡೆಯುತ್ತದ್ದರು.

## ಹಿಡಂಬಿಗೆ ಶಾಪವಿಮೋಚನೆ

ಹೀಗೆ ಮಾಸಗಳು ಉರುಳಿದವು ಅವರಲ್ಲಿ ನೈರುತ್ಯ ಕೋಣಾಧಿಪತಿಯ ಆವೇಶ ಉಳ್ಳ ಒಬ್ಬ ಮಗನು ಹುಟ್ಟಿದನು. ಭೀಮಸೇನನಿಂದ ಹಿಡಂಬಿಯಲ್ಲಿ ಜನಿಸಿದ ಈ ಮಗನ ತಲೆ ಮಡಿಕೆಯಂತೆ ನುಣುಪಾಗಿದ್ದಕಾರಣ ಘಟೋತ್ಕಚ ಎಂದು ನಾಮಕರಣ ಮಾಡಿದರು.

ಶ್ರೀಶನಾಜ್ಞೆಯಂತೆ ಭೀಮನು ಹಡಂಬಿಯನ್ನು ಕುರಿತು ''ಹಿಡಂಬಿ! ನಿನ್ನ ಸೇವೆಯಿಂದ ಶ್ರೀಹರಿ ತೃಪ್ತನಾದನು. ನಿನ್ನ ರಾಜ್ಯಕ್ಕೆ ನೀನು ಹೊರಡಬಹುದು'' ಎಂದು ಆಜ್ಞೆಮಾಡಿದಾಗ ಹಿಡಂಬಿಯು ಮುಂಚಿನಂತೆಯೇ ದಿವ್ಯ ದೇಹವನ್ನು ಹೊಂದಿದಳು. ಆಗ ಸಂತೋಷದಿಂದ ಪತಿಯ ಪಾದಕ್ಕೆರಗಿ ತನ್ನ ಲೋಕಕ್ಕೆ ಹೊರಟು ಹೋದಳು. ಪಾಂಡವರಿಗೆ ಮುಂದಿನ ಮಾರ್ಗ ಸುಗಮವಾಗುವಂತೆ ಮಾಡಲು ವೇದವ್ಯಾಸರು ಪ್ರತ್ಯಕ್ಷರಾಗಿ '' ನೀವು ಇನ್ನು ವನಸಂಚಾರವನ್ನು ಸಾಕುಮಾಡಿ ಮುಂದಿನ ಭಗವತ್ಸಾಧನೆಗೆ ಏಕ ಚಕ್ರನಗರಕ್ಕೆ ಹೊರಡಬೇಕು ಅಲ್ಲಿ ನೀವು

ಕೆಲದಿನಗಳು ಗುರುಕುಲವಾಸಮಾಡಬೇಕಾಗುತ್ತದೆ'' ಎಂದು ಹೇಳಿ ಏಕಚಕ್ರನಗರಕ್ಕೆ ಪಾಂಡವರನ್ನು ಕುಂತಿಯ ಒಡಗೂಡಿಕೊಂಡು ಹೋಗಿ ಅಲ್ಲಿ ಒಬ್ಬ ತಪಸ್ವಿ ಬ್ರಾಹ್ಮಣನಬಳಿಗೆ ಹೋಗಿ ''ಅಯ್ಯ! ದ್ವಿಜನೇ ಈ ಐದು ಜನರೂ ನನ್ನ ಶಿಷ್ಯರು ಇವರಿಗೆ ನೀನು ಶಾಂತಿಪಾಠವನ್ನು ಹೇಳಿಕೊಡು'' ಎಂದು ಹೇಳಿ ಅವನ ಮನೆಯಲ್ಲಿ ಬಿಟ್ಟರು. ನಂತರ ಪಾಂಡವರನ್ನು ಕುರಿತು ನೀವು ಬ್ರಹ್ಮಣವೇಷಧಾರಿಗಳಾಗಿರುವುದರಿಂದ ಮಧುಕರ ವೃತ್ತಿಯನ್ನು ಅವಲಂಬಿಸಬೇಕು ಯೋಗ್ಯರಾದ ವೈಷ್ಣವರ ಕೈ ಅನ್ನದಿಂದ ಜೀವನಮಾಡಿರಿ. ನಿಮಗೆ ಅವಶ್ಯವಿದ್ದಾಗ ನಾನು ಬರುತ್ತೇನೆ'' ಎಂದು ಅದೃಶ್ಯರಾದರು.

## ಬೇಡಿದರೆ ಹರಿ ಒಬ್ಬನನ್ನು ಎಂಬ ಭೀಮನ ಭಾವ

ವೇದವ್ಯಾಸರ ಆಜ್ಞೆಯಂತೆ ಸ್ನಾನಾನ್ಹಿಕಗಳು, ಪಾಠಪ್ರವಚನಗಳಾದ ನಂತರ ವೈದಿಕರ ಮನೆಯಲ್ಲಿ ನೈವೇದ್ಯ ವೈಶ್ವದೇವಾದಿಗಳಿಂದ ಪವಿತ್ರವಾದ ವೈಷ್ಣವರ ಮನೆಯ ಭಿಕ್ಷಾನ್ನದಿಂದ ಜೀವನಸಾಗಿಸಬೇಕಾದರೆ ನಮಗೆ ಸಾಕಾಗುವಷ್ಟು ದೊಡ್ಡ ಭಿಕ್ಷಾಪಾತ್ರೆಬೇಕು. ಎಲ್ಲಿ ಸಿಗುತ್ತದೆ'' ಎಂದು ಭೀಮನು ಸಂಕಲ್ಪಮಾಡಿದಾಗ ಮುಂಭಾಗದಲ್ಲಿ ಒಂದು ದೊಡ್ಡಗಾತ್ರದ ಪಾತ್ರೆ ಅಂಗಡಿಯಲ್ಲಿ ಕಾಣಿಸಿತು. ಅಲ್ಲಿಗೆ ಹೋಗಿ ಭೀಮನು ಒಂದು ಬಾರಿ ಹೂಂಕಾರ ಮಾಡಿದಾಗ ಪೇರಿಸಿಟ್ಟಿದ್ದ ಪಾತ್ರೆಗಳು ಕೆಳಗುರಳಿದವು. ಆಗ ಅಂಗಡಿಯ ಮಾಲೀಕನು ಈ ಪುಣ್ಯಾತ್ಮನ ಅದ್ಭುತ ಆಕಾರಕ್ಕೆ ತಕ್ಕಂತಹ ಪಾತ್ರೆಗಾಗಿ ಬಂದಂತೆ ಕಾಣುತ್ತದೆ ಇವನಾರೋ ದೇವಾತಾಪುರುಷನೇ ಇರಬಹುದೆಂಬ ಭಾವದಿಂದ ಒಂದು ದೊಡ್ಡಪಾತ್ರೆಯನ್ನು ಕೊಟ್ಟು ನಮಸ್ಕಾರಮಾಡಿದ. ಸರ್ವವ್ಯಾಪ್ತನಾದ ದೇವನು ಸರ್ವ ಜೀವಿಗಳೆಲ್ಲಾ ಹೊಕ್ಕು ವಿಚಿತ್ರವ್ಯಾಪಾರ ನಡೆಸಿದ ವಿಚಿತ್ರ ಮಹಿಮೆ ಎಷ್ಟು ವರ್ಣಿಸಿದರೂ ಸಾಲದು.

ಭೀಮನು ವೇದವ್ಯಾಸರ ಉಪದೇಶದಂತೆ ತಾನು ಯಾರಲ್ಲೂ ಏನೂ ಯಾಚಿಸತಕ್ಕವನಲ್ಲವಾದರೂ ಹರಿವಾಕ್ಯದಂತೆ ಮಧುಕರವೃತ್ತಿ ಅವಲಂಬಿಸಬೇಕು. ಎಂದುಕೊಂಡು ಸರ್ವಶಬ್ದವಾಚ್ಯನಾದ ಸರ್ವಂತರ್ಗತನಾದ ಶ್ರೀಹರಿಯನ್ನೇ ಯಾಚಿಸುತ್ತಿದ್ದೇನೆಂಬ ಅನುಸಂಧಾನವಿಟ್ಟು ಭಾನಿನಗಲದ ಭಾಂಡವವನ್ನು ತೆಗೆದುಕೊಂಡು ಉತ್ತಮರಾದ ವೈಷ್ಣವರ ಮನೆಗೆ ಹೋಗಿ ಒಮ್ಮೆ ಹೂಂಕಾರಮಾಡಿದಾಗ ಅವರಮನೆಯಲ್ಲಿ ಸೇರಿದ್ದ ಅಸುರ ದೋಶಗಳೆಲ್ಲವೂ ಭಯಪಟ್ಟು ಓಡುತ್ತಿದ್ದವು. ಸ್ವಚ್ಛಭಕ್ತರು ಶ್ರೀವಿಷ್ಣು ನೈವೇದ್ಯದ ಪ್ರಸಾದವನ್ನು ಆದರದಿಂದ ತಂದುನೀಡಿದಾಗ ಅದನ್ನು ತಂದು ಕುಂತೀದೇವಿಗೆ ಕೊಟ್ಟರೆ ಆತಾಯಿ ಅವರವರ ಯೋಗ್ಯತಾನುಸಾರ ನೀಡುತ್ತಿದ್ದಳು.

ಧರ್ಮರಾಯನಿಗೆ ಭೀಮನ ಭೀಕರವಾದ ಭಿಕ್ಷಾನ್ನವೃತ್ತಿಯಿಂದ ಭಯವಾಯಿತು. ''ಭೀಮಾ ನಿನ್ನ ಆಕಾರ ಅದ್ಭುತಾಕಾರ. ನಿನ್ನ ಕೈಯ್ಯಲ್ಲಿರುವ ಭಿಕ್ಷಾಪಾತ್ರೆ, ಭೂಮಿಯಗಲದ್ದು.

ನಿನ್ನ ಗರ್ಜನೆ ಸಿಂಹಗರ್ಜನೆಯನ್ನು ಮೀರಿಸಿದ್ದು. ಇದೆಲ್ಲವನ್ನೂ ನೋಡಿದ ಮಂದಿ ನಿನಗೆ ಹೆದರಿ ತಮ್ಮಪಾಲಿನ ಅನ್ನವನ್ನು ಕೊಟ್ಟುಕಳುಹಿಸಬಹುದು. ಇದು ಧರ್ಮವಿರೋಧ. ಬ್ರಾಹ್ಮಣರ ಭೋಜನ ಕ್ಷತ್ರಿಯವೀರರಾದ ನಾವು ಕಸಿದು ತಿನ್ನಬಾರದು. ಅವರ ರಕ್ಷಣೆಯ ದೀಕ್ಷೆ ನಮ್ಮದಾಗಬೇಕು. ಈಗ ವೇದವ್ಯಾಸರು ನಮಗೆ ಅಪ್ಪಣೆಕೊಡಿಸಿರುವಂತೆ ಭಿಕ್ಷಾನ್ನದ ವೃತ್ತಿ ಅವಲಂಬಿಸಿದರೂ ಅದರಿಂದ ಪರರಿಗೆ ಹಿಂಸೆ ಆಗದಂತೆ ಇರಬೇಕು. ಎಲ್ಲರೂ ಪುಷ್ಕಳವಾಗಿದ್ದವರೇ ಇರುವುದಿಲ್ಲ. ಆದ್ದರಿಂದ ಸೌಮ್ಯರೀತಿಯಿಂದ ನಮ್ಮಸಾಧನೆ ಸಾಧಿಸೋಣ. ನಿನಗೆ ಅದು ಆಗುವುದಿಲ್ಲ. ಆದ್ದರಿಂದ ನಾಳೆಯಿಂದ ನೀನು ಯಾಚನೆಗೆ ಹೋಗಬೇಡ. ಆಕಾರ್ಯವನ್ನು ನಾವು ನಾಲ್ವರೇ ನೋಡಿಕೊಳ್ಳುತ್ತೇವೆ''ಎಂದು ಹೇಳಿದ್ದನು. ಧರ್ಮರಾಜನು ಶ್ರೀಹರಿಪ್ರೇರಣಾನುಸಾರ ಭೀಮನಿಗೆ ದೋಷವಾಗಿದ್ದ ಭಿಕ್ಷಾವೃತ್ತಿಯನ್ನು ಅವನಿಂದ ತಪ್ಪಿಸಿದನು.

ಹೀಗೆ ವೀರಪಾಂಡುಪುತ್ರರೈವರೂ ತಮ್ಮ ಕ್ಷಾತ್ರಧರ್ಮ ಪರಾಕ್ರಮ ರಾಜದರ್ಪ ರಾಜಭೋಗ ಎಲ್ಲವನ್ನು ತ್ಯಜಿಸಿ ಶ್ರೀಹರಿಯ ಇಚ್ಛೆಯಂತೆ ವೀರವೈಷ್ಣವಧರ್ಮದಿಂದ ಶಾಸ್ತ್ರಾಧ್ಯಯನ ಜಪತಪಾದಿಗಳಲ್ಲಿ ಕಾಲಕಳೆಯುತ್ತ ತಮ್ಮ ಪರಾಕ್ರಮದ ಸತ್ಸಾಧನೆಯ ಶುಭದಿನಗಳಿಗಾಗಿ ಕಾಯುತ್ತಿದ್ದರು. ಧರ್ಮಾನುಸಂಧಾನವಿಲ್ಲದೆ ನಡೆಯುತ್ತಿರಲಿಲ್ಲ. ಆದ್ದರಿಂದ ಅವರಿಗೆ ನಿರಂತರ ಹರಿಸ್ಮರಣೆಯ ಭಾಗ್ಯ ಒದಗಿತ್ತು.

ಒಂದುದಿನ ಪಾಂಡವರು ವಾಸವಾಗಿದ್ದ ಮನೆಯ ಮಾಲೀಕನ ಮನೆಯಲ್ಲಿ ಇದ್ದಕ್ಕಿದ್ದಂತೆ ರೋಧನಧ್ವನಿ ಕೇಳಿಸಿತು. ಮನೆಯವರೆಲ್ಲರೂ ದುಃಖದಿಂದ ಅಳುವುದನ್ನು ಕೇಳಿದ ಪಾಂಡವರು ಕುಂತಿಯನ್ನು ಕುರಿತು ''ತಾಯೇ! ನಮ್ಮ ಮನೆಯ ಯಜಮಾನನು ಏನುಕಾರಣ ಹೀಗೆ ದುಃಖ ಪಡುತ್ತಿದ್ದಾನೆ? ಕೇಳಿಬಾ. ಆಶ್ರಯನೀಡಿದವರಿಗೆ ಉಪಕಾರಮಾಡುವುದು ಧರ್ಮ. ನಮ್ಮ ಕೈಲಾದ ಸಹಾಯಮಾಡಿ ಅವರ ದುಃಖನಿವಾರಣೆ ಮಾಡೋಣ'' ಎಂದು ಹೇಳಿಕಳುಹಿಸಿದನು.

ಕುಂತಿ ಬಂದರೆ ಬ್ರಾಹ್ಮಣನ ಮನೆಯಲ್ಲಿ ಎಲ್ಲರೂ ದುಃಖದಿಂದ ಹಲುಬಿಕೊಳ್ಳುತ್ತಿದ್ದರು. ''ಅಯ್ಯೋ! ಇದ್ದ ಒಂದು ವಂಶದ ಕುಡಿಯನ್ನು ರಾಕ್ಷಸನ ಬಾಯಿಗೆ ಕೊಟ್ಟರೆ ನಮಗೆ ಸದ್ಗತಿ ಹೇಗೆಸಿಗುತ್ತದೆ. ಆದ್ದರಿಂದ ನಾನೇ ಬಕಾಸುರನಿಗೆ ಬಲಿಯಾಗಲು ಹೋಗುತ್ತೇನೆ ಎನ್ನುತ್ತಿದ್ದನು. ಆಗ ಅವನಪತ್ನಿ ಅಯ್ಯೋ ನನ್ನ ಸೌಮಂಗಲ್ಯವನ್ನು ಕಸಿಯಬೇಡಿರಿ. ನಾನು ಮುತ್ತೈದೆಯಾಗಿ ಸಾಯಬೇಕು. ನಾನೇ ಹೋಗುತ್ತೇನೆ'' ಎನ್ನುತ್ತಿದ್ದಳು. ಹೀಗೆ ಆ ಅವಿಚ್ಛಿನ್ನವಾದ ಒಗ್ಗಟ್ಟಿನ ಚೊಕ್ಕಕುಟುಂಬದಲ್ಲಿ ಎಲ್ಲರೂ ಒಬ್ಬರಿಗೊಬ್ಬರು ಆಲಂಗಿಸಿ ಅಳುತ್ತಿದ್ದರೆ ಕುಂತೀದೇವಿಯು ಕನಿಕರದಿಂದ ಕಾರಣಕೇಳಿದು.

''ಅಮ್ಮಾ! ನಮ್ಮ ಈ ದುಃಖವನ್ನು ನೀನು ಕೇಳಿ ಏನುತಾನೇ ಮಾಡಬಲ್ಲೆ? ಆದರೂ ಸಜ್ಜನರ ಮುಂದೆ ದುಃಖವಾದರೂ ಸಂತೋಷವಾದರೂ ಹೇಳಿಕೊಂಡರೆ ಭಗವದರ್ಪಣವೆಂದು

ಶಾಸ್ತ್ರವಿರುವುದರಿಂದ ಹೇಳುತ್ತೇನೆ. ಈ ಊರಿನ ಹೊರಅಂಚಿನಲ್ಲಿ ಬಕಾಸುರನೆಂಬ ಒಬ್ಬ ದೈತ್ಯನಿದ್ದಾನೆ. ಆತನು ರಾವಣನ ಸೋದರಮಾವನೆಂದು ಹೇಳುತ್ತಾರೆ. ಆತನು ಶ್ರೀರಾಮಚಂದ್ರನ ಪರಾಕ್ರಮವನ್ನು ಮಾರೀಚನಿಂದ ತಿಳಿದುಕೊಂಡು ಭಯದಿಂದ ಭೂಗರ್ಭದೊಳಗೆ ಅಡಗಿದ್ದನು. ಶ್ರೀರಾಮಚಂದ್ರನು ಅವತಾರ ಸಮಾಪ್ತಿಗೊಳಿಸಿದ ನಂತರ ಊರುಗಳಿಗೆ ನುಗ್ಗಿ ಅನೇಕ ಜೀವಿಗಳನ್ನು ನುಂಗಿ ಧ್ವಂಸಗೊಳಿಸುತ್ತಿದ್ದಕಾರಣ ಎಲ್ಲಾ ರಾಜರುಗಳೂ ಹೆದರಿ ಅವನ ಬಳಿಗೆ ಬಂದು ನಿನಗೆ ಪ್ರತಿನಿತ್ಯವೂ ಅಂದಂದಿಗೆ ಬೇಕಾಗುವಷ್ಟು ಆಹಾರವನ್ನು ಪ್ರಜೆಗಳೆಲ್ಲರೂ ಸರದಿಯ ಪ್ರಕಾರ ತಂದೊಪ್ಪಿಸುವಂತೆ ರಾಜಾಜ್ಞೆ ಮಾಡುತ್ತೇವೆ. ಒಂದುದಿನಕ್ಕೆ ಅನೇಕ ಭಕ್ಷಭೋಜ್ಯಯುಕ್ತವಾದ ಒಂದು ಭಂಡಿಯತುಂಬ ತುಂಬಿದ ಭೋಜನ ಎರಡು ಎತ್ತು ಒಬ್ಬಮನುಷ್ಯ ಇವೆಲ್ಲವೂ ನಿನ್ನ ಊಟಕ್ಕಾಗಿ ಸಿದ್ಧವಾಗಿ ಬರುತ್ತದೆ. ನೀನಿದ್ದಲ್ಲೇ ಊಟಬರುತಾದ್ದರಿಂದ ಪುರಪ್ರವೇಶಮಾಡಿ ಇಡೀ ಊರನ್ನು ನೀನು ನಾಶಪಡಿಸಬೇಡ ಎಂದು ಒಪ್ಪಿಸಿದರು. ಅಂದಿನಿಂದ ಊರಿನವರೆಲ್ಲರೂ ಸರದಿಯ ಪ್ರಕಾರ ಒಂದೊಂದು ಮನೆಯವರೂ ಬಕನಿಗೆ ಬಲಿಕೊಡುತ್ತಿದ್ದೇವೆ. ಇಂದು ನಮ್ಮ ಸರದಿಬಂದಿದೆ'' ಎಂದು ಹೇಳಿಕೊಂಡು ಬಿಕ್ಕಿಬಿಕ್ಕಿ ಅಳತೊಡಗಿದನು.

ಕುಂತೀದೇವಿಗೆ ಬ್ರಾಹ್ಮಣನ ಮಾತು ಸಂತೋಷವನ್ನೇ ತಂದಿತು. ಭೀಮಸೇನನಿಗೆ ಪರಾಕ್ರಮ ಪುಷ್ಪಾರ್ಪಣೆಯಿಂದ ಪರಮಾತ್ಮನಿಗೆ ಆರಾಧನೆ ಮಾಡುವ ಸುಯೋಗಸಿಕ್ಕಿತು. ನರಭಕ್ಷಕನನ್ನು ಸಂಹಾರಮಾಡಿದರೆ ಅನೇಕ ಸಜೀವರನ್ನು ಸಂರಕ್ಷಣೆ ಮಾಡಿದ ಪುಣ್ಯ ಬರುತ್ತದೆ ಎಂದುಕೊಂಡಳು. ಬ್ರಾಹ್ಮಣರನ್ನು ಕುರಿತು ''ತಾವು ಈ ವಿಷಯಕ್ಕಾಗಿ ಇಷ್ಟುದುಃಖ ಪಡೇಕಾಗಿಲ್ಲ. ನನ್ನಮಗನೊಬ್ಬನು ಇಂಥ ಪಾಪಿಗಳನ್ನು ಧ್ವಂಸನ ಮಾಡುವುದಕ್ಕೆ ಬಹಳ ಉತ್ಸಾಹದಿಂದ ಹೋಗುತ್ತಾನೆ. ಅವನನ್ನು ಕಳುಹಿಸುತ್ತೇನೆ'' ಎಂದರೆ ಬ್ರಾಹ್ಮಣನಿಗೆ ಬಹಳ ಆಶ್ಚರ್ಯವಾಯಿತು. ಈಕೆಯಮಗ ನೋಡಿದರೇ ಬಹಳ ಪರಾಕ್ರಮಿಯಂತೆ ಕಾಣುತ್ತಾನೆ. ಅವನತೇಜಸ್ಸು ಪುಷ್ಠಿದಾಯಕ ಸುಂದರಕಾಯ ಎಲ್ಲವೂ ಸ್ತುತ್ಯಾರ್ಹವಾಗಿ ಅವನ ಮನಸ್ಸೂ ಅಷ್ಟೇ ಕರುಣದ ಕಡಲಾಗಿದೆ. ಇಂಥಮಗನನ್ನು ರಾಕ್ಷಸನಿಗೆ ಬಲಿಕೊಡಲು ಈಕೆ ಸಿದ್ಧಳಾಗಿದ್ದಾಳೆ. ನಿಜಕ್ಕೂ ಈಕೆ ದೇವತೆಯೇ ಆಗಿರಬೇಕು'' ಎಂದುಕೊಂಡ ಬ್ರಾಹ್ಮಣನು ''ಅಮ್ಮಾ ನಾವು ಧರ್ಮವನ್ನು ತಿಳಿದವರಾಗಿ ಅಂಥ ಪಾಪಕಾರ್ಯ ಮಾಡಿದರೆ ದೇವರು ಮೆಚ್ಚುತ್ತಾನೆಯೇ? ನಮ್ಮಜೀವ ಉಳಿಸಿಕೊಂಡು ವೈದಿಕ ಬ್ರಾಹ್ಮಣನನ್ನು ನರಬಲಿಕೊಟ್ಟರೆ ನಮಗೆ ಅಂಧಂತಮಸ್ಸು ಪ್ರಾಪ್ತವಾಗುತ್ತದೆ. ಬ್ರಾಹ್ಮಣಪ್ರಿಯನಾದ ಶ್ರೀಹರಿಗೆ ದ್ರೋಹ ಮಾಡುವಂತಹ ಕಾರ್ಯ ನಾವು ಮಾಡುವುದಿಲ್ಲ'' ಎಂದನು.

''ನೀವು ಏನೂ ಅವನಬಗ್ಗೆ ಚಿಂತಿಸೇಡಿರಿ. ನನ್ನ ಮಗನಿಗೆ ದುಷ್ಟರನ್ನು ನಾಶಪಡಿಸುವ ಮಹಾಮಂತ್ರ ವಶವಾಗಿದೆ. ಅವನೂ ಸೋಲುವವನೂ ಅಲ್ಲ, ಸಾಯುವವನೂ ಅಲ್ಲ. ನೀವು ಗಾಡಿ ಎತ್ತು ಅವನಿಗೆ ಕಳುಹಿಸಬೇಕಾದ ಭೋಜನಸಾಮಗ್ರಿಗಳೆಲ್ಲವನ್ನು ಸಿದ್ಧಪಡಿಸಿರಿ''

ಎಂದುಹೇಳಿ ತನ್ನ ಕೊಠಡಿಗೆ ಬಂದಳು. ಭೀಮನಿಗೆ ಬಕಾಸುನ ವಧೆಯ ಅವಕಾಶ ತನಗೆ ಕೂಡಿಬಂದಿದೆ ಎಂದು ಮೊದಲೇ ತಿಳಿದಿತ್ತು. ಈಗ ಕುಂತಿಯಿಂದಲೂ ಸ್ಪಷ್ಟತಿಳಿದು ನನಗೆ ಭಗವತ್ಕಾರ್ಯ ಸಾಧನೆಯ ಸದವಕಾಶ ದೊರಕಿತು. ಹರಿದ್ವೇಶಿಯನ್ನು ಹನನಮಾಡುವ ಸುದಿನವೇ ಮಹಾದಿನ'' ಎಂದು ಉತ್ಸಾಹದಿಂದ ಕುಣಿದಾಡಲು ಧರ್ಮರಾಯನು ಭೀಮನ ಉತ್ಸಾಹವನ್ನು ನೋಡಿ ''ತಾಯೇ ಭೀಮನಿಗೆ ರಾಕ್ಷಸನಿಂದ ಏನಾದರೂ ಅಪಾಯ ಸಂಭವಿಸಿದರೆ ನಮಗಾರು ದಿಕ್ಕು?'' ಎಂದು ಭಯಪಟ್ಟನು.

ಕುಂತಿಯು ಭೀಮನ ಸತ್ಯಪರಾಕ್ರಮವನ್ನು ಚೆನ್ನಾಗ ಅರಿತಿದ್ದಳು. ವಾಯುದೇವರು, ಬಲಾಭಿಮಾನಿದೇವತೆ. ಅವರ ಬಲ ಕ್ಷುಲ್ಲಕಬಲವಲ್ಲ. ಕ್ಷುಲ್ಲಕರನ್ನು ಕೊಲ್ಲುವಂತಹ ಬಲ. ಕಲ್ಲಿನಂತೆ ಕಠೋರವಾದ ಅಧರ್ಮಿಗಳನ್ನು ಛಿದ್ರಛಿದ್ರ ಪಡಿಸುತ್ತೇನೆಂಬ ಅನುಸಂಧಾನದಿಂದ ಶತಶೃಂಗ ಪರ್ವತದಲ್ಲಿ ಹಸುಳೆಯಾಗಿದ್ದಾಗಲೇ ಬಂಡೆಯನ್ನು ಪುಡಿಮಾಡಿ ತೋರಿದ ಪರಾಕ್ರಮವೀರ ಭೀಮನ ಬಲದಲ್ಲಿ ಶ್ರೀಕೃಷ್ಣನ ಅನುಗ್ರಹ ತುಂಬಿದೆ. ಅದು ಅಕ್ಷಯಸಂಪತ್ತು. ಅವನನ್ನು ಎಂಥ ಘೋರರಾಕ್ಷಸರೂ ಸ್ಪರ್ಶಿಸಲು ಸಾಧ್ಯವಿಲ್ಲ. ಭೀಮನದರ್ಶನವೇ ಅವರಿಗೆ ಮೃತ್ಯುದರ್ಶನ. ಎಂದು ಕುಂತೀದೇವಿ ಭೀಮನ ಸತ್ಯವಾದ ಪರಾಕ್ರಮವನ್ನು ಪ್ರಕಟಿಸಿದಳು.

## ಭಂಡೀ ಅನ್ನವನುಂಡು ಬಕನ ಪ್ರಾಣ ಸೆಳೆದ ಬಲಭೀಮ

ಬ್ರಾಹ್ಮಣನ ಮನೆಯ ಮುಂದೆ ಭೋಜನದ ಭಂಡಿ ಸಿದ್ಧವಾಯಿತು. ಸಕಲವಿಧ ತಿಂಡಿತಿನಸುಗಳು, ಪಾನೀಯಗಳೆಲ್ಲವನ್ನು ಅಚ್ಚುಕಟ್ಟಾಗಿ ಪೇರಿಸಿದರು. ನರಬಲಿಗಾಗಿ ಹೋಗುತ್ತಿರುವ ಭೀಮನಿಗೆ ಕೆಂಪುಹಾರದಿಂದ ಅಲಂಕರಿಸಿ ಲಕ್ಷಣಯುತವಾದ ಸುಂದರಾಂಗನನ್ನು ರಾಕ್ಷಸನ ಬಾಯಿಗೆ ಬಲಿಕೊಡಬೇಕಾಯಿತ್ತಾ ಎಂದು ಎಲ್ಲರೂ ಕಣ್ಣೀರಿಟ್ಟು ಅಳುತ್ತಿದ್ದರು. ಭೀಮನು ಸ್ವಲ್ಪದೂರ ಹೋದ ನಂತರ ಪರಿಮಳ ತುಂಬಿದ ಮೀಸಲು ಭೋಜನ ಪದಾರ್ಥಗಳನ್ನು ಶ್ರೀಹರಿಗೆ ಸಮರ್ಪಿಸಿ ಹರಿದ್ವೇಶಿಯನ್ನು ನೋಡುವ ಮೊದಲೇ ಆಹಾರ ಸೇವನೆ ಮಾಡಬೇಕೆಂದು ಎಲ್ಲವನ್ನು ತಿಂದನು. ಹಾಲು ಮೊಸರು ತುಪ್ಪಗಳ ಕೊಡವನ್ನೆತ್ತಿ ಕುಡಿದನು. ನಂತರ ಒಂದು ತುತ್ತನ್ನು ಕೈಲಿಟ್ಟುಕೊಂಡು ಊಟಕ್ಕಾಗಿ ಕಾಯುತ್ತಿದ್ದ ಬಕಾಸುರನನ್ನು ದೂರದಿಂದಲೇ ನೋಡಿ ''ಎಲಾ ಬಕಾ ಕೊಂಚ ಕೂಳಿದೆ ತನ್ನುಬಾರಾ'' ಎಂದು ವ್ಯಂಗ್ಯೋಕ್ತಿಯಿಂದ ಕೆರಳಿಸಿದಾಗ ರಾಕ್ಷಸನ ನೀಚವಾಕ್ಯಗಳು ಸಿಡಿಲುಬಡಿದಂತೆ ಕೇಳಿಸುತ್ತಿದ್ದಾಗ ''ಬ್ರಾಹ್ಮಣರು ಗೋವಿಂದನಾಮಸ್ಮರಣೆಯಿಂದ ಉಣ್ಣುವ ಊಟವನ್ನು ಸ್ವಾಮಿಯು ಪವಿತ್ರಹವಿಸ್ಸೆಂಬ ಭಾವದಿಂದ ಸ್ವೀಕರಿಸುತ್ತಾನೆಂಬ ಶಾಸ್ತ್ರವಚನದಂತೆ ದೈತ್ಯನ ಹೀನನುಡಿ ಕಿವಿಗೆ ಬೀಳದಂತೆ ಎರಡುಕಾಲಿನ ಮಧ್ಯದಲ್ಲಿ ಕಿವಿಮುಚ್ಚಿಕೊಂಡು ಉಳಿದ ತುತ್ತನ್ನು ಅಗ್ನಿಕುಂಡದೊಳಗೆ ಹವಿಸ್ಸನ್ನು ಹಾಕಿದಂತೆ ಹಾಕಿಕೊಂಡು ಮುಗಿಸಿದನು.

ಭೀಮಸೇನನು ಶ್ರೀಹರಿಯ ಪೂರ್ಣಾನುಗ್ರಹಪಾತ್ರನು. ರಮಾದೇವಿಯರೇ ನಾರಾಯಣನಿಗೆ ಪೂರ್ಣ ಆನುಗ್ರಹ ಪಾತ್ರರಾದರೂ ಶ್ರೀಹರಿಕರುಣಕ್ಕೆ ರಮದೇವಿಯರಂತೆಯೇ ಭೀಮನೂ ಪಾತ್ರನೆಂಬಂತೆ ಸ್ವಾಮಿ ಕಾಯುತ್ತಿದ್ದನು. ಚ್ಯುತಿರಹಿತವಾದ ಆನಂದವೇ ಪ್ರಾಪ್ತವಾಗಿರುವಾಗ ಕ್ಷುಲ್ಲಕಸುಖ ಭೀಮನಿಗೇಕೆ ಬೇಕು? ಅಸುರರಿಗೆ ಅಜ್ಞಾನ ಪಾಪಗಳನ್ನು ವೃದ್ಧಿಗೊಳಿಸಲಿಕ್ಕಾಗಿ ವಿಡಂಬನೆ ನಡೆಸುತ್ತಿದ್ದನು.

ಭೀಮನು ಭಗವಂತನಿಗೆ ಅಪ್ರೀಯಕಾರ್ಯವನ್ನು ಯಾವಕ್ಷಣದಲ್ಲೂ ಮಾಡದೆ ಧರ್ಮದ ಹೆಜ್ಜೆ ಎಚ್ಚರದಿಂದ ಇಡುತ್ತಿದ್ದನು. ಊಟ ಮುಗಿಯಿತು. ಕೈಕಾಲು ತೊಳೆದು ಆಚಮನಾದಿಗಳು ಆದನಂತರ ದುಷ್ಟವಧೆ ಮಾಡಲಿಕ್ಕೆ ಶ್ರೀಹರಿಯಪ್ಪಣೆಪಡೆದು ಮೇಲೆನುಗ್ಗಿ ಬರುತ್ತಿದ್ದ ಅಸುರನನ್ನು ಮರಗಳನ್ನು ಕಿತ್ತಿಕಿತ್ತಿ ಬಡಿದುರುಳಿಸುತ್ತಿದ್ದನು.

ಬಕನೂ ಮಹಾಶಕ್ತಿವಂತನೇ ಆಗಿದ್ದನು. ಆದರೆ ಅಸುರ ಸಾಮರ್ಥ್ಯ ದೈವೀಸಾಮರ್ಥ್ಯವನ್ನು ಗೆಲ್ಲಲು ಸಾಧ್ಯವಿಲ್ಲ. ಹೆಮ್ಮರಗಳನ್ನು ಬುಡಸಹಿತ ಕಿತ್ತು ಇಬ್ಬರೂ ಹೊಡೆದಾಡಿದರು. ಮುಷ್ಠಿಯುದ್ಧವಾಯಿತು. ದೊಡ್ಡದೊಡ್ಡ ಗಿರಿಶಿಖರಗಳನ್ನು ಬಲಬಾಹುಗಳಿಂದ ಎಬ್ಬಿ ಎಸೆದಾಡಿದರು. ಹೀಗೆ ಘೋರಕಾಳಗ ಸರಿಸಮಾನವಾಗಿ ನಡೆದುನಂತರ ಬರಬರುತ್ತ ಅಸುರಬಲ ಅಶಕ್ತವಾಗಿ ಕುಗ್ಗಿತು. ಭೀಮಬಲ ವೃದ್ಧಿಹೊಂದಿತು. ದಿಗ್ಗಜಗಳೂ ಬಕಭೀಮರ ಸೆಣಸಾಟಕ್ಕೆ ಕುಸಿದರು. ಆಗ ಭೀಮನು ಇವನೊಡನೆ ಸಮರದಾಟ ಆಡಿದ್ದುಸಾಕೆಂದು ಆನೆಯಸೊಂಡಿಲಿನಂತಿದ್ದ ಬಾಹುಗಳಿಂದ ಘೋರಾಕೃತಿಯ ದೈತ್ಯಾದಮನನ್ನು ಸೆಳೆದು ಕೆಳಗುರಳಿಸಿದಾಗ ಕುಲಗಿರಿಯೇ ಕುಸಿದು ಬಿತ್ತೋ ಎನ್ನುವಂತೆ ಭೂದೇವಿ ಅಲ್ಲಾಡಿದಳು. ಭೀಮನು ಬಕನ ವಿಶಾಲದೇಹದಮೇಲೆ ತನ್ನಪಾದವನ್ನೂರಿ ಮೆಟ್ಟಿನಿಂತು, ಎರಡುಸೀಳಾಗಿ ಸೀಳಿದನು. ಆಗ ದೇವತೆಗಳು ಭೀಮನಿಗೆ ಜಯಘೋಷದಿಂದ ಕೊಂಡಾಡಿದರು.

ಭೀಮನು ದೈತ್ಯನ ಹರಿದ ದೇಹವನ್ನು ಒಂದುಮಾಡಿ ಎಳೆತಂದು ರಾಕ್ಷಸಶವವನ್ನು ಊರುಮುಂದಿನ ಒಂದುವೃಕ್ಷಕ್ಕೆ ಕಟ್ಟಿ ನೇತುಹಾಕಿದನು. ಮರುದಿನ ಪ್ರಾತಃಕಾಲ ಪುರಜನರು ದೈತ್ಯನು ನೇತಾಡುವುದನ್ನು ಕಂಡು ಶವವೆಂದರಿತರೂ ತಮ್ಮನ್ನು ತಾವೇ ನಂಬದೆ ಭಯಗ್ರಸ್ಥರಾಗಿ ಸ್ವಲ್ಪಸ್ವಲ್ಪ ಹತ್ತಿರಕ್ಕೆ ನಿಧಾನವಾಗಿ ಬಂದು ಅದು ಹೆಣವೇ ನಿಜ ಎಂದು ತಿಳಿದನಂತರ-ಸಂತೋಷದಿಂದ ಕುಣಿದಾಡುತ್ತ ಭೀಮನಬಳಿಗೆ ಬಂದು ನಮಸ್ಕಾರಮಾಡಿ ''ಮಹಾತ್ಮಾ ನೀನು ನಮ್ಮೆಲ್ಲರಿಗೂ ಜೀವದಾನ ಮಾಡಿ ಕಾಪಾಡಿರುವಿ. ನಿನಗೆ ನಾವು ಏನುಬೇಕಾದರೂ ಕೊಡಲು ಸಿದ್ಧರಿದ್ದೇವೆ. ಕೇಳಿ ನಮ್ಮೆಲ್ಲರನ್ನು ಧನ್ಯರನ್ನಾಗಿಮಾಡು'' ಎಂದು ಕೇಳಿದರು. ಆಗ ಭೀಮನು ನೀವು ನನಗೆ ಏನೂ ಕೊಡಬೇಕಾಗಿಲ್ಲ. ನಮಗೆ ಯಾರ ಸಹಾಯವೂ ಬೇಕಿಲ್ಲ ಈ ಊರಿನಲ್ಲಿ. ನರಸಿಂಹದೇವರಿಗೆ ಸರಿಯಾದ ಪೂಜೆ ನಡೆಯುತ್ತಿಲ್ಲ. ಆದ್ದರಿಂದ

ಸಕಲ ದುರಿತ ನಿವಾರಣನೂ ನಂಬಿದವರನ್ನು ಎಡಬಿಡದೆ ಕಾಪಾಡುವನೂ ಆದ ದೇವನಿಗೆ ಪ್ರತಿನಿತ್ಯವೂ ಪೂಜಾದಿಗಳು ನಡೆಯುವಂತೆ ನೀವೆಲ್ಲರೂ ಸೇರಿ ವ್ಯವಸ್ಥೆ ಮಾಡಿದರೆ ಅದೇ ನನಗೆ ನೀವು ಬಹುಮಾನ ಕೊಟ್ಟಂತಾಯಿತೆಂದು ತಿಳಿಯುತ್ತೇನೆ'' ಎಂದು ಹೇಳಿ ಭೀಮನು ಏಕಚಕ್ರನಗರದಲ್ಲಿ ಸದ್ಬ್ರಾಹ್ಮಣರಿಂದ ನರಸಿಂಹದೇವರಿಗೆ ನಿರಂತರ ಪೂಜೆ ನಡೆಯುವಂತೆ ಮಾಡಿದನು.

## ವೇದವ್ಯಾಸರ ಶುಭ ಸಂದೇಶ

ಪಾಂಡವರು ತಮ್ಮ ಕ್ಷಾತ್ರತೇಜಸ್ಸನ್ನು ಸಾತ್ವಿಕವೃತ್ತಿಯಲ್ಲಿ ಮರೆಮಾಡಿಕೊಂಡು ವಿಪ್ರವೇಶದಿಂದ ಋಷಿಗಳಂತೆ ಇರುತ್ತಿರಲು ವೇದವ್ಯಾಸರು ಅವರ ಭಾಗ್ಯದ ಬಾಗಿಲು ತೆರೆಯಲಿಕ್ಕಾಗಿ ಪ್ರತ್ಯಕ್ಷರಾದರು. ಪಾಂಡವರು ಕುಂತೀದೇವಿಯೊಡನೆ ಅವರ ಪಾದಕ್ಕೆ ನಮಸ್ಕಾರಮಾಡಿದಾಗ ದೇವೋತ್ತಮರು, ''ಮಕ್ಕಳೇ! ನೀವು ಇಲ್ಲಿ ಬಕಾಸುರನ ವಧಾಕಾರ್ಯವನ್ನು - ಹಿಡಂಬಾಸುರನ ವಧ- ಹಿಡಂಬಿಯ ಶಾಪವಿಮೋಚನೆ- ಘಟೋತ್ಕಚನ ಜನನ - ಮೊದಲಾದ ಭಗವತ್ಕಾರ್ಯಗಳನ್ನು ಮಾಡಿದಂತಾಯಿತು. ಇನ್ನು ಮುಂದೆ ನಡೆಯಬೇಕಾದ ಘಟನೆ ಬಹಳ ಸ್ವಾರಸ್ಯವಾದದ್ದು.

ಪಾಂಚಾಲನಗರದಲ್ಲಿ ದ್ರುಪದನು ಪಾಂಡವರು ಲಾಕ್ಷಾಗೃಹದಲ್ಲಿ ಸುಟ್ಟುಸತ್ತರೆಂದು ಕೃಷ್ಣನೂ ಹಸ್ತಿನಾವತಿಯಲ್ಲಿ ನಡೆದ ಅವರ ಅಂತ್ಯಕ್ರಿಯೆಗಳಿಗೆ ಭಾಗವಹಿಸಿದ್ದನೆಂದೂ ಸಕಲದಿಕ್ಕುಗಳಲ್ಲೂ ಹರಡಿರುವುದನ್ನು ತಿಳಿದು ''ಪಾಂಡವರು ವರಪುತ್ರರೂ ದೈವತಾಂಶಸಂಭೂತರೂ ಆದ್ದರಿಂದ ಅವರು ಸತ್ತಿಲ್ಲ. ದೇವವಾಕ್ಯ ಸುಳ್ಳಲ್ಲ. ದ್ರೌಪದಿಯು ಅರ್ಜುನನನ್ನೇ ವರಿಸಬೇಕು. ಆದ್ದರಿಂದ ಈಗ ನಾನು ದ್ರೌಪದೀ ಸ್ವಯಂವರವನ್ನೂ ಏರ್ಪಡಿಸಿದರೆ ಪಾಂಡವರು ಬಂದೇಬರುತ್ತಾರೆ'' ಎಂದು ಆಲೋಚನೆಮಾಡಿ ಸ್ವಯಂವರ ಮಂಟಪವನ್ನು ರಚಿಸಿದ್ದಾನೆ. ರುದ್ರದೇವರಿಂದ ದೊರೆತಿರುವ ಮತ್ಸ್ಯಯಂತ್ರವನ್ನು ಭೇದಿಸಲು ಅರ್ಜುನನೊಬ್ಬನೇ ಸಮರ್ಥನಾದ್ದರಿಂದ ಮತ್ಸ್ಯಯಂತ್ರವನ್ನು ಯಾರು ಭೇದಿಸುತ್ತಾರೋ ಅವರನ್ನೇ ದ್ರೌಪದಿ ವರಿಸುವಳೆಂದು ಪ್ರತಿಜ್ಞೆಯನ್ನು ಮಾಡಿರುತ್ತಾನೆ.

ಆದ್ದರಿಂದ ಪಣದಲ್ಲಿ ಗೆದ್ದು ದ್ರೌಪದಿಯನ್ನು ವಿವಾಹವಾಗುವ ಆಸೆಯಿಂದ ಅನೇಕರಾಜರುಗಳು ಪಾಂಚಾಲನಗರದಲ್ಲಿ ಸೇರುತ್ತಾರೆ. ಅನೇಕ ವೈದಿಕ ಬ್ರಾಹ್ಮಣರೂ ರಾಜನು ಯಥೇಚ್ಛವಾಗಿ ನೀಡುವ ದಾನದಕ್ಷಣೆಗಳ ಆಸೆಯಿಂದ ಅಲ್ಲಿ ಸೇರುತ್ತಾರೆ. ಅನೇಕ ಕಲಾವಿದರೂ, ಕವಿಗಳೂ ಎಲ್ಲರೂ ಸೇರುವಂತಹ ಆ ವಿವಾಹಮಂಟಪ ದೇವೇಂದ್ರನ ಸಭೆಯಂತೆ ಅದ್ಭುತವಾಗಿ ವಿರಚಿತವಾಗಿದೆ. ಆದ್ದರಿಂದ ನೀವೂ ಬ್ರಾಹ್ಮಣರ ತಂಡದೊಡನೆ ಸ್ವಯಂವರ ನೋಡಲಿಕ್ಕೆಂದು ಪಾಂಚಾಲ ನಗರಿಗೆ ಹೊರಟು ಅಲ್ಲಿ ನಿಮ್ಮ ಕಾರ್ಯಸಾಧನೆಯನ್ನು

ಮಾಡಿಕೊಳ್ಳಿರಿ'' ಎಂದು ಭಗವದಾಜ್ಞೆಪಡೆದ ಪಾಂಡವರು ಹೊರಡಲನುವಾದರು. ಏಕಚಕ್ರನಗರದ ಬ್ರಾಹ್ಮಣಸಮೂಹವೆಲ್ಲವೂ ರಾಜಪುತ್ರಿಯ ಸ್ವಯಂವರದ ಮಹೋತ್ಸವಕ್ಕಾಗಿ ತಮ್ಮ ತಮ್ಮಸಾಧನೆಯ ಸಲಕರಣೆಗಳನ್ನು ಸಿದ್ಧಪಡಿಸಿಕೊಂಡುಹೊರಟರು. ಅವರ ಜೊತೆಯಲ್ಲಿ ಪಾಂಡವರೂ ಎಲ್ಲರಂತೆ ತಾವೂ ಬ್ರಾಹ್ಮಣರೆಂಬ ರೀತಿನೀತಿಗಳನ್ನು ವ್ಯಕ್ತಪಡಿಸುತ್ತ ಹೊರಟರು. ಬ್ರಾಹ್ಮಣರೆಲ್ಲರೂ ಅನೇಕ ಶಾಸ್ತ್ರವಚನಗಳ ಜಿಜ್ಞಾಸೆಗಳಿಂದಲೂ, ಭಗವಂತನ ಸತ್ಕಥನ ಪ್ರವಚನದಿಂದಲೂ ಕೂಡಿದವರಾಗಿ ಪಯಣದ ಮೇಲೆ ಪಯಣವನ್ನು ಬೆಳಸಿ ಬರುತ್ತಿದ್ದರು. ಅವರ ಸಂಗಡ ಭೀಮಸೇನನು ಬರುತ್ತಿರುವುದರಿಂದ ಅವರಾರಿಗೂ ಮಾರ್ಗಾಯಾಸದ ಬಳಲಿಕೆ ಆಗಲಿಲ್ಲ. ಅವರಿಗೆ ಭೀಮನು ಯಾರೆಂದು ತಿಳಿಯದಿದ್ದರೂ ಅವರ ಅಂತರಾತ್ಮ ಅವನನ್ನು ನೋಡಿದಾಗ ಒಂದು ವಿಧವಾದ ಉತ್ಸಾಹ-ಆನಂದದಿಂದ ವಿಕಸಿತಗೊಳ್ಳುತ್ತಿತ್ತು. ಅವರೆಲ್ಲರೂ ಈ ಭೀಮನನ್ನು ಕುರಿತು ಈ ಬ್ರಹ್ಮಚಾರಿಯು ಎಷ್ಟು ಶುಭಲಕ್ಷಣಗಳಿಂದ ಯುಕ್ತನಾಗಿದ್ದಾನೆ ನೋಡಿರಿ. ಇವನು ಬ್ರಾಹ್ಮಣನಾಗಿದ್ದರೂ ರಾಜರಂತೆ ಕಾಣುತ್ತಾನೆ. ವೀರತೇಜಸ್ಸು ಇವನಲ್ಲಿ ತುಂಬಿ ತುಳುಕಾಡುತ್ತದೆ. ಇವನ ಬಾಹುಗಳನ್ನು ನೋಡಿದರೆ ಇವನೇ ಮತ್ಸ್ಯಯಂತ್ರವನ್ನು ಹೊಡೆದು ದ್ರೌಪದಿಯನ್ನು ಪಡೆಯುತ್ತಾರೆ. ಎಂದು ಭಾಸವಾಗುತ್ತದೆ'' ಎಂದು ಬ್ರಾಹ್ಮಣರು ಮಾತನಾಡಿಕೊಳ್ಳುತ್ತಿದ್ದರು. ದಾರಿಯಲ್ಲಿ ಒಂದಾದಮೇಲೊಂದು ಶುಭಶಕುನಗಳು ಪಾಂಡವರಿಗೆ ಶುಭಹೊತ್ತು ತಂದೊಪ್ಪಿಸುತ್ತಿದ್ದವು.

## ಗಂಧರ್ವನ ಗರ್ವಭಂಗ

ಹೀಗೆ ಪಾಂಡವರು ತಾಯಿಯೊಡನೆ ಬ್ರಾಹ್ಮಣರೊಡಗೂಡಿ ಬರುತ್ತಿದ್ದರೆ ಬೆಳಕು ಕಳೆದು ಕತ್ತಲು ನುಸುಳಿ ಬರತೊಡಗಿತು. ಬರಬರುತ್ತ ಒಬ್ಬರನ್ನೊಬ್ಬರು ಚೆದರುವಂತಾಯಿತು. ಭೀಮಾರ್ಜುನರು ಪಂಜಿನ ಬೆಳಕನ್ನು ಹಿಡಿದುಕೊಂಡು ಮಧ್ಯದಲ್ಲಿ ಕುಂತೀದೇವಿಯನ್ನು ಬಿಟ್ಟು ತಾವಿಬ್ಬರು ಹಿಂದೆಮುಂದೆ ಕಾವಲಾಗಿ ನಡೆದುಬರುತ್ತಿದ್ದರು. ಸ್ವಲ್ಪದೂರ ಬಂದರೆ ಅಲ್ಲಿ ಗಂಗಾನದಿ ಅಡ್ಡವಾಗಿ ಹರಿಯುತ್ತಿತ್ತು. ಹೊಳೆದಾಟಿ ಹೋಗಬೇಕಾಗಿತ್ತು. ಅಲ್ಲಿ ಚಿತ್ರಸೇನಗಂಧರ್ವನು ಜಲಕ್ರೀಡೆ ಆಡುತ್ತಿದ್ದನು. ಗಂಧರ್ವಸ್ತ್ರೀಯರನೇಕರು ಲಾವಣ್ಯದ ಮೈಕಾಂತಿಯಿಂದ ಗಂಧರ್ವನನ್ನು ಸಂತೋಷಪಡಿಸುತ್ತ ನೀರಾಟವಾಡುತ್ತಿರುವ ಅರ್ಧರಾತ್ರಿ ಸಮಯದಲ್ಲಿ ಜನಸಂಚಾರಕ್ಕೆ ನಿಷೇಧವಾಗಿರುವ ವೇಳೆಯಾದ್ದರಿಂದ ಚಿತ್ರಸೇನನು ಅವರನ್ನು ತಡೆದು ಈ ಸಮರಾತ್ರಿಯಲ್ಲಿ ಸಾಮಾನ್ಯಜನರು ಬರುವ ಸ್ಥಳವು ಇದಲ್ಲವಾದರೂ ನೀವು ಮದಕರಿಗಳಂತೆ ನುಗ್ಗಿಬರುತ್ತಿದ್ದೀರಿ. ನನ್ನ ರಸಘಳಿಗೆಯನ್ನು ಭಂಗಪಡಿಸಿದ ನಿಮ್ಮನ್ನು ಈಕ್ಷಣವೇ ಕೊಲ್ಲುತ್ತೇನೆ'' ಎಂದು ದರ್ಪದ ನುಡಿ ನುಡಿದನು. ಆಗ ಅರ್ಜುನನು ''ಎಲಾ ಗಂಧರ್ವಾ ನಿನಗೆ ನಾಲಿಗೆಯೇ ಅಸ್ತ್ರವಾಗಿರಬಹುದು. ಅದ್ದರಿಂದ ಪ್ರತಾಪವಾಣಿ ನಾಲಿಗೆಯಿಂದ ಪ್ರಯೋಗಮಾಡಿ ಬೆದರಿಸುತ್ತಿರುವಿ. ನಮಗೆ ಮಂತ್ರಾಸ್ತ್ರಗಳ ಬಲವಿದೆ. ಆದ್ದರಿಂದ ನಮ್ಮ

ಪ್ರತಾಪವನ್ನು ನಾವು ನಮ್ಮ ಬಾಹುಬಲದಿಂದ ಪ್ರಯೋಗಮಾಡಿ ನಿನ್ನುಸಿರಡಗಿಸುತ್ತೇವೆ'' ಎಂದು ನಗುತ್ತ ಹೇಳಿದನು. ಚಿತ್ರಸೇನನು ಆತ ಕ್ಷಣವೇ ಕೋಪಾವೇಶದಿಂದ ರಥಾಶ್ವಗಳನ್ನು ಆಯುಧಗಳನ್ನು ತರಿಸಿಕೊಂಡು ಭೀಮಾರ್ಜುನರ ಮೇಲೆ ಬಹಳ ಚಮತ್ಕಾರವಾಗಿ ಅಸ್ತ್ರಪ್ರಯೋಗವನ್ನು ಮಾಡುತ್ತಿದ್ದರೆ, ಅರ್ಜುನನು ಆಗ ತನ್ನ ಕೈಲಿದ್ದ ಪಂಜಿಗೆ ಅಗ್ನಿಮಂತ್ರದಿಂದ ಅಭಿಮಂತ್ರಿಸಿ ಅವನಮೇಲೆ ಎಸೆದಾಗ ರಥ-ಸಾರಥಿ-ಕುದುರೆಗಳೆಲ್ಲವೂ ಸುಟ್ಟು ಭಸ್ಮವಾದವು. ಚಿತ್ರಸೇನನ ದೇಹವೆಲ್ಲವೂ ಸುಟ್ಟು ಕರುಕಲಾಗಿ ಕಪ್ಪಿಟ್ಟಿತು. ಅಂಗಾರವರ್ಣನಾಗಿ ಅವಲಕ್ಷಣದಿಂದ ಅಗ್ನಿತಪ್ತನಾಗಿ ಧರ್ಮರಾಜನಿಗೆ ಶರಣಾಗತನಾಗಿ ಮೊರೆಹೊಕ್ಕನು. ಆಗ ಧರ್ಮರಾಯನ ಅಪ್ಪಣೆಯಂತೆ ಚಿತ್ರಸೇನನನ್ನು ಅಗ್ನಿಯಿಂದ ಕೊಲ್ಲದೆ ಉಪಸಂಹಾರಮಾಡಿ ರಕ್ಷಿಸಿದನು.

ಗಂಧರ್ವನಿಗೆ ಅವರು ಪಾಂಡವರೆಂದು ತಿಳಿದನಂತರ ಪಶ್ಚಾತ್ತಾಪದಿಂದ ಕ್ಷಮಯಾಚನೆಮಾಡಿ ಗಂಧರ್ವನು ''ಅರ್ಜುನಾ! ನಾನು ನಿನಗೆ ಗಂಧರ್ವ ವಿದ್ಯೆಯನ್ನು ಕಲಿಸುತ್ತೇನೆ. ನೀನು ನನಗೆ ಅಗ್ನಿಸೂಕ್ತವನ್ನು ಉಪದೇಶಮಾಡು'' ಎಂದನು. ಗಂಧರ್ವನಿಗೆ ಅಗ್ನ್ಯಸ್ತ್ರ ತಿಳಿದಿತ್ತು. ಆದರೂ ಮಹಾತ್ಮನಾದ ಅರ್ಜುನನಿಂದ ಉಪದೇಶಗೊಂಡರೆ ಮಹತ್ವಪೂರ್ಣವಾಗಿ ಮಂತ್ರಸಿದ್ಧಿಸುತ್ತದೆಂಬ ಭಾವದಿಂದ ಕೇಳಿ ಉಪದೇಶಗೊಂಡನು. ಅರ್ಜುನನು ''ಚಿತ್ರಸೇನಾ! ನನಗೆ ಈಗ ಗಂಧರ್ವವಿದ್ಯದ ಅವಶ್ಯವಿಲ್ಲ. ಮುಂದೆ ಸಂದರ್ಭ ಒದಗಿದಾಗ ಉಪದೇಶಮಾಡು'' ಎಂದು ಹೇಳಿದನು. ಗಂಧರ್ವನು ಪಾಂಡವರಿಗೆ ಅನೇಕ ಧರ್ಮಸೂಕ್ಷ್ಮಗಳ ಆಖ್ಯಾನಗಳನ್ನು ಹೇಳಿ ಪಾಂಡವರೇ ಸಕಲಶುಭಕಾರ್ಯಗಳಿಗೂ ಶ್ರೇಷ್ಠವೈಷ್ಣವರಾದ ದ್ವಿಜೋತ್ತಮರ ಅನುಗ್ರಹಬೇಕು. ನಮ್ಮ ದೇಹವೆಂಬ ಪುರಕ್ಕೆ ಸದಾಹಿತವನ್ನೇ ಕೋರುವ ಪುರೋಹಿತರ ಸಹವಾಸದಿಂದ ಶ್ರೀವಿಷ್ಣುವಿನ ವಿಶೇಷಸನ್ನಿಧಿ ನಮಗೆ ಲಭಿಸುವುದರಿಂದ ನೀವೀಗ ಪಾಂಚಾಲನಗರಿಗೆ ಹೋಗುವಾಗ ಧೌಮ್ಯರ ಆಶ್ರಮಕ್ಕೆ ಹೋಗಿ ಅವರನ್ನು ಪ್ರಾರ್ಥಿಸಿಕೊಂಡು ಅವರೊಡನೆ ನೀವು ನಗರ ಪ್ರವೇಶಮಾಡಿದರೆ ನಿಮ್ಮ ಸಕಲಕಾರ್ಯಗಳೂ ಜಯವಾಗುತ್ತವೆ'' ಎಂದು ಹೇಳಿದನು.

ಪಾಂಡವರು ಧೌಮ್ಯಾಚಾರ್ಯರ ಆಶ್ರಮಕ್ಕೆ ಹೋಗಿ ''ಗುರುಗಳೇ! ನಾವೀಗ ಶ್ರೀವೇದವ್ಯಾಸರ ಆಜ್ಞಾಪ್ರಕಾರ ಪಾಂಚಾಲನಗರಿಗೆ ಹೊರಟಿದ್ದೇವೆ. ನಮ್ಮ ಸಂಗಡ ತಾವೂ ಬಂದು ನಮಗೆ ಮಾರ್ಗದರ್ಶನನೀಡಿರಿ'' ಎಂದು ಕೇಳಿದನು. ಧೌಮ್ಯರಿಗೆ ಶ್ರೀಕೃಷ್ಣಭಕ್ತರ ಸಂಪರ್ಕ ಸಂಪತ್ತು ಸಿಕ್ಕಿತೆಂದು ಸಂತೋಷದಿಂದ ಅವರಿಗೆ ಸತ್ಕಾರಮಾಡಿ ತಾವೂ ಅವರಜೊತೆಯಲ್ಲಿ ಪಾಂಚಾಲನಗರಿಗೆ ಹೊರಟರು. ಪಾಂಡವರಿಗೆ ಒಬ್ಬ ಪುರೋಹಿತರೂ ಲಭ್ಯವಾದರು. ಎಲ್ಲರೂ ಮಾರ್ಗನಡೆದು ಪಾಂಚಾಲನಗರವನ್ನು ಸೇರಿದರು.

ನಗರವು ವೀರರ ಆಗಮನಕ್ಕಾಗಿಯೇ ಆದರದಿಂದ ಕಾಯುತ್ತಿದೆಯೋ ಎನ್ನುವಂತೆ ಚಿತ್ರವಿಚಿತ್ರ ಅಲಂಕಾರಗಳಿಂದ ಆನಂದವನ್ನು ಮೆರೆಸುತ್ತಿತ್ತು. ಅನೇಕದೇಶದ ಪ್ರಸಿದ್ಧರಾಜರುಗಳು

ಸೇನಾದಳದೊಂದಿಗೆ ವೈಭವದಿಂದ ಬಂದು ನೆರೆದಿದ್ದರು. ದೊಡ್ಡ ಸಭಾಮಂಟಪ ಬೆಳ್ಳಿ ಬಂಗಾರ-ಹವಳ-ಮುತ್ತುಗಳಿಂದ ಅಲಂಕೃತವಾಗಿತ್ತು. ಸ್ವಯಂವರದ ಶೃಂಗಾರಯುಕ್ತ ಮಂಟಪದಲ್ಲಿ ಅವರವರ ಯೋಗ್ಯ.ತಾನುಸಾರವಾದ ಆಸನಗಳನ್ನು ಹಾಕಿ ವ್ಯವಸ್ಥೆಮಾಡಿದನು.

ಋಷಿಮುನಿಗಳಿಗೆ ವೈದಿಕಬ್ರಾಹ್ಮಣರಿಗೆ-ವಿದ್ವಾಂಸರಿಗೆ ಎಲ್ಲರಿಗೂ ತಾರತಮ್ಯಾನುಸಾರ ಸ್ಥಾನಮಾನಗಳನ್ನು ಏರ್ಪಡಿಸಿದ್ದನು. ಎಲ್ಲರಿಗೂ ರಾಜ್ಯಯೋಗ್ಯವಾದ ಸನ್ಮಾನಸತ್ಕಾರಗಳು ನಡೆಯುವಂತೆ ಸಹಸ್ರಾರು ಸಂಖ್ಯೆಯ ರಾಜಪರಿಚಾರಕರನ್ನು ಏರ್ಪಡಿಸಿದ್ದನು.

ತುಂಬಿದ ಸಭೆಯೊಳಗೆ ಧೃಷ್ಟದ್ಯುಮ್ನನು ರತ್ನಾಭರಣಗಳಿಂದಲಂಕೃತಳಾದ ಅನೇಕ ಸಖಿಯರೊಡಗೂಡಿ ಮುತ್ತಿನ ಪಲ್ಲಕ್ಕಿಯೊಳಗೆ ವಿರಾಜಮಾನಳಾದ ತನ್ನ ತಂಗೀ ದ್ರೌಪದಿಯೊಂದಿಗೆ ಬಂದು ಎಲ್ಲಾ ರಾಜರ ಪೂರ್ಣವಾದ ವಿವರದಿಂದ ಪರಿಚಯಮಾಡಿಕೊಡಿಸುತ್ತ ರಾಜರ ಸಾಲಿನಲ್ಲಿ ಒಬ್ಬೊಬ್ಬರ ಮುಂದೂ ನಿಂತು ಬರುತ್ತಿದ್ದನು. ದ್ರೌಪದಿಯ ಪ್ರೇಮದಹಾರ ಯಾರಕೊರಳಿಗೂ ಬೀಳಲಿಲ್ಲ. ದ್ರೌಪದಿಯು ಯಾರನ್ನು ವರಿಸದಿರಲು ದ್ರುಪದನು ಆಗ ಚಿಂತಾಮಗ್ನನಾಗಿ ಪಾಂಡವರನ್ನು ಸ್ಥಾನಮಾನಗಳಿಂದ ಕಂಡುಹಿಡಿಯಲಾಗದಿದ್ದರೂ ಅವರ ಪರಾಕ್ರಮವೇ ಅವರ ಪರಿಚಯವನ್ನು ಮಾಡಿಕೊಡುತ್ತದೆ'' ಎಂದು ಯೋಚಿಸಿದನು.

''ಧೃಷ್ಟದ್ಯುಮ್ನನು ಸಮಸ್ತರಾಜರೂ ಕೇಳಿರಿ. ಇಲ್ಲಿ ವೇದಿಕೆಯಮೇಲೆ ಇಟ್ಟಿರುವ ಮತ್ಸ್ಯಯಂತ್ರವನ್ನು ಎಚ್ಚಿದವರನ್ನು ದ್ರೌಪದಿ ವರಿಸುವಳು'' ಎಂಬ ಪ್ರತಿಜ್ಞೆಯನ್ನು ಸಭೆಗೆ ಸಾರಿ ಹೇಳಿದನು.

ಕೆಲವರು ಪ್ರಯತ್ನವನ್ನೇ ಮಾಡದೆ ನಿರಾಸೆಯಿಂದ ಕುಳಿತಿದ್ದರು. ಕೆಲವರು ದ್ರೌಪದಿಯಮೇಲಿನ ಆಸೆಯಿಂದ ಹೋಗಿ ಕೈಕಾಲು ಮುರಿದುಕೊಂಡರು. ನಂತರ ಶಿಶುಪಾಲನು ಬಲಿಷ್ಠನೆಂಬ ಬಿಂಕದಿಂದ ಎದ್ದುಹೋಗಿ ಎಚ್ಚಿದಾಗ ಬಿಲ್ಲು ಪೂರ್ಣವಾಗಿ ಬಗ್ಗದೆ ಮುಖಕ್ಕೆ ಬಂದು ರಾಚಿತು. ಮೂರ್ಛೆ ಬಿದ್ದನು. ನಂತರ ಕರ್ಣ-ಶಲ್ಯ -ಮೊದಲಾದ ವೀರರ ಸಾಹಸವೆಲ್ಲವೂ ವ್ಯರ್ಥವಾಯಿತು. ಸಕಲ ವೀರರಾಜರ ಸಾಹಸವೂ ವ್ಯರ್ಥವಾಗಿ ಬಿದ್ದು ಎದ್ದು ಬರುವುದನ್ನು ನೋಡಿದ ಜರಾಸಂಧನು ರಾಜರೆಲ್ಲರನ್ನೂ ಧಿಕ್ಕರಿಸಿ ಸಿಂಹ ನಾದದಿಂದ ತನ್ನ ಪರಾಕ್ರಮುವನ್ನು ವ್ಯಕ್ತಪಡಿಸುತ್ತ ಇನ್ನೇನು ಸಾಸಿವೆಕಾಳಿನಷ್ಟು ದೂರಹೋದರೆ ಎರಡುತುಂಡಾಗಿ ಬೀಳುತ್ತದೆ'' ಎಂದು ಎಲ್ಲರೂ ಆಶ್ಚರ್ಯದಿಂದ ನೋಡುತ್ತಿದ್ದರೆ ಅಷ್ಟೇಕ್ಕೇ ಅವನ ಸಾಹಸ ಅಂತ್ಯಗೊಂಡು ಬಿದ್ದರೂ ನಾನು ಬೀಳಲಿಲ್ಲವೆಂಬ ಬಿಂಕದಿಂದಲೇ ಸಭೆಯಿಂದ ಹೊರಟುಹೋದನು. ಕ್ಷತ್ರಿಯರಾಜರಿಗೆ ಯಾರಿಗೂ ಸಾಧ್ಯವಾಗದಿರಲು ದ್ರುಪದರಾಜನು ಆಗ ಚಿಂತೆಯಿಂದ ಒಂದುವೇಳೆ ಪಾಂಡವರು ಬ್ರಾಹ್ಮಣವೇಷದಿಂದ ಬಂದಿದ್ದರೂ ಬಂದಿರಬಹುದು. ಅವರನ್ನು ಕರೆದು ಅವಕಾಶಕೊಟ್ಟು ನೋಡೋಣ ಎಂದು ಯೋಚಿಸಿ ''ದ್ವಿಜಶ್ರೇಷ್ಠರ ಸಮೂಹದಲ್ಲಿ ಸಾಮರ್ಥ್ಯಶಾಲಿಗಳಿದ್ದರೆ ಯಂತ್ರದ ಬಳಿಗೆ ಬಂದು ಪ್ರಯತ್ನಪಡಬಹುದು'' ಎಂದು ಪ್ರಕಟಮಾಡಿದನು.

## ಪಾಂಡವರ ಪರಾಕ್ರಮ ಪ್ರಕಾಶ

ಬ್ರಾಹ್ಮಣರ ಮಧ್ಯದಲ್ಲಿ ಸೂರ್ಯಚಂದ್ರರಂತೆ ಕುಳಿತಿದ್ದ ಭೀಮಾರ್ಜುನರು ಮೇಲೆದ್ದರು. ಆಗ ಬ್ರಾಹ್ಮಣರು ಅವರವರ ಯೋಗ್ಯ.ತಾನುಸಾರ ಹೊಗಳಿ ಕೆಲವರು ಪ್ರೋತ್ಸಾಹನೀಡಿದರೆ ಕೆಲವರು ಮುಖಭಂಗದಿಂದ ತೆಗಳಿ ತಡೆಯುತ್ತಿದ್ದರು. ಈ ಮಾತುಗಳಾವುದನ್ನೂ ಭೀಮಾರ್ಜುನರು ಲೆಕ್ಕಿಸದೆ, ಸ್ವಾಮಿಯ ಕರುಣಾಕಟಾಕ್ಷಕ್ಕಾಗಿ ಭಕ್ತಿಯಿಂದ ಶ್ರೀಕೃಷ್ಣನ ಕಡೆಗೆ ನೋಡಿದಾಗ ಮಾನಸ ಪೂಜೆಸಲ್ಲಿಸಿದಾಗ ಶ್ರೀಕೃಷ್ಣ ದೃಷ್ಟಿ ಅವರಕಡೆ ಹಾಯಿಸಿ ''ಬಲರಾಮಾ! ಅತ್ತ ನೋಡಿದೆಯಾ? ಪಾಂಡವರು ತಮ್ಮ ಸಾಹಸಪುಷ್ಪವನ್ನು ಸರ್ವವ್ಯಾಪ್ತನಾದ ಶ್ರೀಹರಿಗರ್ಪಿಸಿ ದ್ರೌಪದಿಯನ್ನು ವರಿಸಲು ಸಿದ್ಧರಾಗಿದ್ದಾರೆ ನೋಡಿ'' ಎಂದು ಹೇಳಿದನು. ಬಲರಾಮನು ಶ್ರೀಕೃಷ್ಣನ ವಿಚಿತ್ರಮಹಿಮೆಗೆ ಆಶ್ಚರ್ಯಪಟ್ಟು ಬೆರಗಾಗಿ ಪಾಂಡವರನ್ನು ನೋಡಿ ಆನಂದಪಟ್ಟನು.

ಅರ್ಜುನನು ಶ್ರೀಕೃಷ್ಣನ ಅನುಜ್ಞೆಯನ್ನು ಪಡೆದು ಭೀಮ ಮತ್ತು ಧರ್ಮರಾಯನ ಅಪ್ಪಣೆಯಂತೆ ಯಂತ್ರದ ಸಮೀಪಕ್ಕೆಹೋಗಿ ಸುಲಭವಾಗಿ ಐದುಬಾಣಗಳಿಂದ ಯಂತ್ರದ ಸಮೀಪಕ್ಕೆ ಹೋಗಿ ಸುಲಭವಾಗಿ ಐದುಬಾಣಗಳಿಂದ ಮತ್ಸ್ಯದ ಗರಿಗಳನ್ನು ಕತ್ತರಿಸಿ ಕೆಡವಿದನು. ಆ ತಕ್ಷಣ ಅರ್ಜುನನಿಗೆ ಜಯಘೋಷದ ಸುರಿಮಳೆ ಆಯಿತು. ಮಂಗಳವಾದ್ಯಗಳು ಮೊಳಗಿದವು. ದ್ರೌಪದಿಯ ಕರದೊಳಗೆ ಕಾದಿದ್ದ ವರಮಾಲೆ ದ್ರೌಪದಿಯ ಮನಸಿರಿಯಾದ ಅರ್ಜುನನ ಕೊರಳಿಗೆ ಅರ್ಪಿತವಾಯಿತು. ಅರ್ಜುನನು ದೃಪದನ ಪಂದ್ಯದಲ್ಲಿ ಗೆದ್ದು ದ್ರೌಪದಿಯನ್ನು ಪಡೆದು ತನ್ನ ಕುಟೀರದತ್ತ ಹೊರಟಾಗ ದ್ರೌಪದಿಯೂ ಅವನನ್ನೇ ಅನುಸರಿಸಿ ಹಿಂದೆ ಹೊರಟಳು.

ಆಗ ಕ್ಷತ್ರಿಯರಾಜರೆಲ್ಲರೂ ತಮಗೆ ಅಪಮಾನಗೊಳಿಸಲಿಕ್ಕಾಗಿ ದೃಪದನು ಹೀಗೆ ಮಾಡಿದ್ದಾನೆ. ದ್ರೌಪದಿಯು ಪರಾಕ್ರಮವೀರ ರಾಜರೆಲ್ಲರನ್ನೂ ತಿರಸ್ಕಾರ ಮಾಡಿ ಭಿಕ್ಷಾನ್ನದ ಬ್ರಾಹ್ಮಣನನ್ನು ವರಿಸಿ ನಮ್ಮೆಲ್ಲರನ್ನೂ ಕಡೆಗಣಿಸಿದ್ದಾಳೆ ಎಂದು ಎಲ್ಲರೂ ಯುದ್ಧಕ್ಕೆ ಸಿದ್ಧರಾಗಿ ರಣದಬ್ಬರದಿಂದ ಲಗ್ಗೆಹಚ್ಚಿದರು.

ಶ್ರೀಕೃಷ್ಣನು ಬಲರಾಮನಿಗೂ ಎಲ್ಲಾ ಯಾದವವೀರರಿಗೂ ಶ್ರೀಕೃಷ್ಣನು ನೀವು ಸ್ವಯಂವರ ನೋಡಲಿಕ್ಕಾಗಿ ಮಾತ್ರ ಬರಬೇಕು. ಹೆದೆ ಏರಿಸುವ ಸಾಹಸಕ್ಕಾಗಲಿ ಯುದ್ಧಕ್ಕಾಗಲಿ ಹೋಗಬಾರದು'' ಎಂದು ಮೊದಲೇ ಸೂಚನೆ ಕೊಟ್ಟಿದ್ದಕಾರಣದಿಂದ ಅವರಾರೂ ಯಾವತಂಟೆಗೂ ಬರಲಿಲ್ಲ.

ಕ್ಷತ್ರಿಯ ರಾಜರು ಕ್ಷುಲ್ಲಕತನದಿಂದ ಯುದ್ಧಕ್ಕೆ ಕಾಲುಕೆರೆದು ಬರುವುದನ್ನು ನೋಡಿದ ಭೀಮನು ಮರವನ್ನು ಕಿತ್ತುಕೊಂಡು ಒಬ್ಬೊಬ್ಬರನ್ನೇ ರಪರಪನೆ ಬಡಿದು ಹಾಕುತ್ತಲಿದ್ದಾಗ

ಎಷ್ಟೋ ಜನರ ಪ್ರಾಣಹರಣವೂ ಆಯಿತು. ಆಗ ಎಲ್ಲರೂ ಸಧ್ಯ ಹೆಣ್ಣುಬೇಡ ಪ್ರಾಣ ಉಳಿದರೆ ಸಾಕು'' ಎಂಬ ಭಾವದಿಂದ ತಲೆಮುಸುಕು ಹಾಕಿ ಊರಿನಕಡೆ ಓಡಿದರು.

ಶ್ರೀಕೃಷ್ಣನನ್ನು ಕುರಿತು ಬಲರಾಮ ಸಾತ್ಯಕಿ ಎಲ್ಲರೂ ''ಕೃಷ್ಣಾ! ಪಾಂಡವರು ದುರ್ಯೋಧನನ ಮತ್ಸರದಿಂದ ಸುಟ್ಟುಹೋದರೆಂದು ಹಸ್ತಿನಾವತಿಯಲ್ಲಿ ಅವರ ಶ್ರಾದ್ಧಾದಿಗಳನ್ನು ಮಾಡಿದರು. ಈಗ ಅವರಿಗೆ ಇಲ್ಲಿ ಮಂಗಳ ಮಹೋತ್ಸವ ನಡೆಯುತ್ತಿದೆ. ಇದೆಲ್ಲವನ್ನು ನಿನ್ನ ಮಹಿಮಾಕಿರಣವೇ ನಡೆಸುತ್ತಿದೆ ಎಂಬುದಕ್ಕೆ ಸಂಶಯವಿಲ್ಲ'' ಎಂದರು. ಯಾದವರು ಕೃಷ್ಣನನ್ನು ದೇವರೆಂದು ತಿಳಿಯದಿದ್ದರೂ ಅವನಲ್ಲಿ ಒಂದು ಅಭೂತಪೂರ್ವಕ ದೈವೀಶಕ್ತಿ ಇದೆ ಎಂದು ಅವನ ಆಶ್ರಯ ಹೊಂದಿದ್ದರು.

ಅತ್ತ ದುರ್ಯೋಧನನಿಗೆ ದ್ರೌಪದಿ ತನ್ನ ಕೊರಳಿಗೆ ಹಾರಹಾಕದೆ ಉದಾಸೀನ ಮಾಡಿದ್ದಾಳೆ. ಎಳೆತರಬೇಕೆಂಬ ಸೇಡು ಆಗಲೇ ಆಕೆಯಮೇಲೆ ಪ್ರಭಾವ ಬೀರಿತು. ದುರ್ಯೋಧನನು ಸೇನಾನಿಕರೊಂದಿಗೆ ಸೇಡಿನಿಂದ ಯುದ್ಧಕ್ಕೆ ಹೊರಟಾಗ ಶಲ್ಯಕರ್ಣಾದಿಗಳು ಅವನನ್ನು ತಡೆದು ''ದುರ್ಯೋಧನಾ! ನೀನು ನಮ್ಮೆಲ್ಲರಿಗೂ ಒಡೆಯನಾದವನು. ನಿನಗೆ ಸೋಲಾಗಬಾರದು. ನಿನ್ನ ಭೃತ್ಯರಾದ ನಮಗೆ ಆಜ್ಞೆಮಾಡು'' ಎಂದುಹೇಳಿ ಕೌರವಸೇನೆ ಯುದ್ಧಕ್ಕೆ ಹೊರಟರು.

ಕೌರವಶತ್ರುಗಳು ಯುದ್ಧದ ರಭಸದಿಂದ ಒತ್ತೊತ್ತಿ ಬರುವುದನ್ನು ನೋಡಿದ ಬ್ರಾಹ್ಮಣರು ನಾವು ಕ್ಷತ್ರಿಯರಿಗೆ ಏನು ದ್ರೋಹ ಮಾಡಿದ್ದೇವೆ? ನಮ್ಮ ಸತ್ವಸಾಮರ್ಥ್ಯದಿಂದ ರಾಜನ ಪ್ರತಿಜ್ಞೆಯನ್ನು ಗೆದ್ದು ರಾಜಪುತ್ರಿಯನ್ನು ವಿವಾಹವಾಗಿದ್ದು ತಪ್ಪಾ? ಬ್ರಾಹ್ಮಣವರನೇನು ಕಳ್ಳತನದಿಂದ ಕನ್ಯಾಮಣಿಯನ್ನು ಅಪಹರಿಸಿದ್ದಾನಾ? ಸಕಲ ಕ್ಷತ್ರಿಯರಾಜರೆದುರಿಗೂ ತನ್ನ ಸಾಹಸದಿಂದ ಮತ್ಸ್ಯಯಂತ್ರವನ್ನು ಭೇದಿಸಿ ದ್ರೌಪದಿಯನ್ನೂ ಗೆದ್ದಿದ್ದಾನೆ. ಆದರೂ ಕ್ಷತ್ರಿಯ ರಾಜರು ಅಸೂಯೆಯಿಂದ ಕದನಕ್ಕೆ ಬಂದರೆ ಅವರಿಗೆ ಬ್ರಾಹ್ಮಣರ ಶಾಪ ತಪ್ಪಿದ್ದಲ್ಲ'' ಎಂದು ಸತ್ಯವಾದ ನುಡಿಯಿಂದ ಎಲ್ಲರೂ ಘರ್ಷಣೆ ಮಾಡುತ್ತಿದ್ದರು.

ದ್ರುಪದನಿಗೆ ಮಂಗಳಕಾರ್ಯದಲ್ಲಿ ಅಮಂಗಳ ಆಗಬಾರದೆಂಬ ಆತಂಕದಿಂದ ಶ್ರೀಕೃಷ್ಣನ ಬಳಿಗೆ ಹೋಗಿ ''ಕೃಷ್ಣಾ! ನಿನಗೆ ಪಕ್ಷಪಾತವಿಲ್ಲ. ಎರಡು ಪಕ್ಷದವರೂ ನಿನ್ನವರೇ! ನೀನೇ ಸಮಾಧಾನ ಮಾಡಿ ಸಂತೋಷದ ಕಾರ್ಯ ಸರಾಗವಾಗಿ ನೆರವೇರುವಂತೆ ಅನುಗ್ರಹಮಾಡು'' ಎಂದು ಕೇಳಿಕೊಂಡನು. ಆವೇಳೆಗೆ ಶಲ್ಯನು ಭೀಮನ ಮೇಲೆ ಯುದ್ಧಕ್ಕೆ ಬಂದು ಎದುರಿಸಿದನು. ಭೀಮನು ''ಶಲ್ಯಾ ನೀನು ಸೋದರಮಾವನಾಗಬೇಕು. ಆದ್ದರಿಂದ ಕೊಲ್ಲುವುದಿಲ್ಲ'' ಎಂದು ಹೇಳುತ್ತ ಅವನನ್ನು ಅನಾಮತ್ತಾಗಿ ಹಿಡಿದೆತ್ತಿ ಚಂಡಿನಂತೆ ಎಸೆದನು. ಶಲ್ಯನು ಕೆಳಗೆ ಬಿದ್ದು ಪುಡಿ ಪುಡಿ ಆಗುತ್ತಾನೆಂದು ತನ್ನ ಬಾಹುಗಳಿಂದ ಕೆಳಗಿಳಿಸಿಬಿಟ್ಟನು. ಶಲ್ಯನು ಹರಿಭಕ್ತನಾಗಿದ್ದನು. ವಾಯುದೇವರ ಆವೇಶಉಳ್ಳವನಾಗಿ ಸಹ್ಲಾದನ

ಅವತಾರವಾಗಿದ್ದರೂ ಕಲಿಸಂಪರ್ಕದಿಂದ ಹೀನಕಾರ್ಯ ಮಾಡಲಿಚ್ಛಿಸಿದ್ದಾನೆಂದು ಭೀಮನು ಅವನನ್ನು ಕೊಲ್ಲಲಿಲ್ಲ. ಕರ್ಣನು ಅರ್ಜುನನೊಂದಿಗೆ ಯುದ್ಧಮಾಡಿದನು. ಇವರಿಬ್ಬರೂ ಸಮಾನವೀರರೇ ಆದ್ದರಿಂದ ಬಹಳಹೊತ್ತು ಯುದ್ಧನಡೆಯಿತು. ಕರ್ಣನಿಗೆ ಬ್ರಾಹ್ಮಣನ ಬಿಲ್ಲುವಿದ್ಯೆಯನ್ನು ನೋಡಿ ಬಹಳ ಆಶ್ಚರ್ಯವಾಗಿ ''ಬ್ರಾಹ್ಮಣಾ! ನೀನಾರು ದೇವೇಂದ್ರನೋ? ಅಥವಾ ಅರ್ಜುನನೋ?'' ಹೇಳು ಎಂದನು. ಅರ್ಜುನನು ''ಎಲಾ ಕರ್ಣಾ! ನನ್ನ ಪರಿಚಯ ನಿನಗೇಕೆ ಬೇಕು? ನಾನ್ಯಾರಾದರೇನು? ನಿನಗೆ ನನ್ನ ಬಾಣದಪೆಟ್ಟಿನ ಪರಿಚಯ ಆಯಿತಲ್ಲಾ ಇನ್ನು ಹೋಗು. ಇಲ್ಲದಿದ್ದರೆ ಕದನಕ್ಕೆ ನಿಲ್ಲು'' ಎಂದು ವೀರವಾಣಿ ನುಡಿದಾಗ ಕರ್ಣನು ಒಳಗೇ ಸಂದೇಹಪಟ್ಟು ''ನಾನು ಬ್ರಾಹ್ಮಣನ ಕೂಡ ಯುದ್ಧಮಾಡಿದರೆ ಧರ್ಮವಿರೋಧ'' ಎಂದು ಹೇಳಿ ಹೊರಟುಹೋದನು.

ಹೀಗೆ ಕದನಕ್ಕೆ ಬಂದು ಕ್ಷತ್ರಿಯವೀರರೆಲ್ಲರನ್ನು ಅರ್ಜುನನು ಹೊಡೆದೋಡಿಸಿ ತಾವು ಇಳಿದುಕೊಂಡಿದ್ದ ಕುಂಬಾರನ ಕುಟೀರದತ್ತ ಹೊರಟಾಗ ದ್ರೌಪದಿಯೂ ಪತಿಯನ್ನು ಹಿಂಬಾಲಿಸಿ ಹೊರಟಳು. ಪಾಂಡವರು ಐದುಜನರೂ ಬಿಡಾರಕ್ಕೆ ಬಂದು ''ಅಮ್ಮಾ ನಾವಿಂದು ಒಂದು ಅಪೂರ್ವಭಿಕ್ಷ ತಂದಿದ್ದೇವೆ. ನೋಡುಬಾ'' ಎಂದರು. ಕುಂತಿಯು ತಕ್ಷಣ ''ಸಂತೋಷ ಮಕ್ಕಳೇ! ಐದುಜನರೂ ಹಂಚಿಕೊಳ್ಳಿರಿ'' ಎಂದಳು. ಇದು ಭಗವತ್ಪ್ರೇರಣೆಯ ಮಾತು ಎಂದುಕೊಂಡ ಪಾಂಡವರು ''ಏನು ಮಾತು ನಿನ್ನದು ತಾಯೇ? ಒಂದು ಹೆಣ್ಣನ್ನು ಐದುಜನ ಹಂಚಿಕೊಳ್ಳಲಾದೀತೆ?'' ಎಂದು ಕೇಳಿದರು. ಕುಂತಿಯು ದ್ರೌಪದಿಯನ್ನು ನೋಡಿ ಇದೆಲ್ಲಾ ಶ್ರೀಹರಿಯ ಇಚ್ಛೆ. ನಮ್ಮದೇನೂ ಇಲ್ಲ. ಅವನ ಪ್ರೇರಣಾನುಸಾರ ನಡೆಯಿರಿ. ನಾವು ಅಸ್ವತಂತ್ರರು ಎಂದುಬಿಟ್ಟಳು.

## ಕುಲಾಲ ಕುಟೀರದಲ್ಲಿ ಕಂಡ ಕೌತುಕ

ದ್ರುಪದನಿಗೆ ಬ್ರಾಹ್ಮಣವೇಶದಿಂದ ಬಂದು ಪಣದಲ್ಲಿ ಹೆಣ್ಣನ್ನು ದಿಟ್ಟತನದಿಂದ ಗೆದ್ದು ಎದುರಿಸಬಂದ ಮಹಾಶೂರರೆಲ್ಲರನ್ನು ಹೊಡೆದೋಡಿಸಿ ಪರಾಕ್ರಮವನ್ನು ಮೆರೆಸಿದವನು ಅರ್ಜುನನೇ ಆಗಿರಬಹುದೇ? ಎಂದು ಚಿಂತಿಸಿ ''ಧೃಷ್ಟದ್ಯುಮ್ನ! ದ್ರೌಪದಿಯನ್ನು ಪಣದಲ್ಲಿ ಗೆದ್ದು ವರಿಸಿರುವ ಆ ಬ್ರಾಹ್ಮಣ ಯಾರು? ಅವನ ದೇಶವಾವುದು? ಕುಲವಾವುದು? ಗೋತ್ರವಾವುದು? ವೃತ್ತಿಏನು? ಎಲ್ಲವನ್ನು ಅರಿತು ಬಾ'' ಎಂದು ಹೇಳಿ ಕಳುಹಿಸಿದಾಗ ಧೃಷ್ಟದ್ಯುಮ್ನನು ಕುಲಾಲನ ಮನೆಯ ಹೊರಭಾಗದಲ್ಲಿನಿಂದು ಅವರ ನಡೆನುಡಿಗಳೆಲ್ಲವನ್ನು ಪರೀಕ್ಷಿಸುತ್ತಿದ್ದನು.

ಒಬ್ಬ ವೃದ್ಧತಾಯಿಯೊಂದಿಗೆ ಐದುಜನರಿದ್ದಾರೆ ಎಂಬುದು ತಿಳಿಯಿತು. ಅವರು ಭಿಕ್ಷಾನ್ನ ತಂದು ತಾಯಿಯಕೈಗೆ ಕೊಟ್ಟಾಗ ಆಕೆ ಅವರವರ ಆಕಾರಕ್ಕೆ ತಕ್ಕಂತೆ ಎಲ್ಲರಿಗೂ

ಊಟಹಂಚಿ ತಾನೂ ಭುಂಜಿಸುವಳೆಂದು ಅವರ ಮಾತಿನಲ್ಲೇ ಅರ್ಥವಾಯಿತು. ದ್ರೌಪದಿಯೇ ಎಲ್ಲರಿಗೂ ಊಟವನ್ನು ಅತ್ತೆಯ ಮಾತಿನಂತೆ ಹಂಚಿ ಅತ್ತೆಗೂ ಬಡಿಸಿದನಂತರ ತಾನು ಊಟಮಾಡಿದ ವಿಷಯ ಚೆನ್ನಾಗಿ ತಿಳಿಯಿತು.

ಊಟವಾದನಂತರ ಎಲ್ಲರೂ ಆಯುಧಗಳ ಮಾತು ಸೇನಾದಳದ ಮಾತು ಯುದ್ಧಕೌಶಲ್ಯದ ಮಾತುಗಳನ್ನೇ ಬಹಳ ಉತ್ಸಾಹದಿಂದ ಆಡುತ್ತಿರುವ ಅವರ ಯುದ್ಧಮಾಹಿತಿಯ ಮಾತಿನಿಂದ ಅವರು ಕ್ಷತ್ರಿಯರೇ ಆಗಿದ್ದಾರೆಂದು ತಿಳಿದನು. ನಂತರ ಪುರೋಹಿತರ ಬಳಿಗೆ ಬಂದು ''ನೀವು ಹೋಗಿ ನಮ್ಮ ದ್ರೌಪದಿ ವರಿಸಿರುವ ವರನನ್ನು ಅವರ ಕಡೆಯವರನ್ನೂ ಕರೆದುಕೊಂಡು ಬನ್ನಿರಿ'' ಎಂದು ಹೇಳಿ ಕಳುಹಿಸಿದನು.

ಅರಮನೆಯ ಪುರೋಹಿತರು ರಾಜಾಜ್ಞೆಯಂತೆ ಪಾಂಡವರು ಇಳಿದುಕೊಂಡಿದ್ದ ಕುಂಬಾರನಮನೆಗೆ ಬಂದರು. ಪಾಂಡವರು ಬಂದ ಆಚಾರ್ಯರಿಗೆ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ ವಿಷಯವನ್ನು ವಿಚಾರಿಸಲು ಪುರೋಹಿತರು ''ನೀವೆಲ್ಲರೂ ರಾಜಭವನಕ್ಕೆ ಬರಬೇಕು. ರಾಜರ ಅಪ್ಪಣೆ ಆಗಿದೆ'' ಎಂದರು. ದ್ರುಪದರಾಜನು ಈ ಬ್ರಾಹ್ಮಣರ ನಿಜವನ್ನು ಅರಿಯಬೇಕಾದರೆ ಪ್ರಪ್ರಥಮವಾಗಿ ಅವರ ವೃತ್ತಿಯ ಪರಿಚಯ ತಿಳಿಯಬೇಕೆಂದು ವಸ್ತುಪ್ರದರ್ಶನದಂತೆ ಒಂದುಕಡೆಯಲ್ಲಿ ಸಚ್ಛಾಸ್ತ್ರಗ್ರಂಥಗಳನ್ನು ಒಂದು ಕಡೆಯಲ್ಲಿ ಯುದ್ಧಸಾಮಗ್ರಿಗಳನ್ನು ಒಂದೆಡೆಯಲ್ಲಿ ಪಾಕಪದಾರ್ಥಗಳನ್ನು ಒಂದು ಕಡೆಯಲ್ಲಿ ಯುದ್ಧಸಾಮಗ್ರಿಗಳನ್ನು ಜೋಡಿಸಿಟ್ಟಿದ್ದನು. ತಾನು ದೂರದಲ್ಲಿನಿಂತು ಯಾವ ವಸ್ತುಗಳನ್ನು ಅವರು ಇಚ್ಛಿಸುತ್ತಾರೆಂದು ನೋಡುತ್ತಿದ್ದನು. ಪಾಂಡವರು ಬಂದವರೇ ಶಸ್ತ್ರಾಗಾರವನ್ನು ನೋಡಿ ಆಸಕ್ತಿಯಿಂದ ಶಸ್ತ್ರಾಸ್ತ್ರಗಳನ್ನು ಒಂದೊಂದನ್ನಾಗಿ ನೋಡುತ್ತಿದ್ದರು. ಮಿಕ್ಕಾವ ವಸ್ತುಗಳ ಕಡೆಗೂ ಅವರಗಮನ ಬೀಳಲಿಲ್ಲ. ನಂತರ ಅಲ್ಲಿ ವ್ಯವಸ್ಥೆಮಾಡಿದ ಆಸನಗಳಲ್ಲಿ ತಮಗೆ ಯೋಗ್ಯವಾದ ರಾಜರಿಗೆ ಶ್ರೇಷ್ಠವಾದ ಆಸನಗಳಲ್ಲಿ ಬಂದು ಕುಳಿತರು.

ಆಗ ದ್ರುಪದನು ಅವರಬಳಿಗೆ ಬಂದು ನಿಮ್ಮ ನಡವಳಿಕೆಗಳನ್ನು ನೋಡಿದರೆ ನನಗೆ ಸಂದೇಹ ಉಂಟಾಗಿದೆ. ನಿಮ್ಮ ಸರಿಯಾದ ಸ್ವರೂಪವನ್ನು ತಿಳಿಸಿ ನನ್ನ ಸಂದೇಹ ನಿವಾರಣೆಮಾಡಿರಿ'' ಎಂದು ಕೇಳಿದನು. ಧರ್ಮರಾಜನು ''ದ್ರುಪದರಾಜಾ! ನಿನ್ನ ಪ್ರತಿಜ್ಞೆಯಂತೆ ಲಕ್ಷ್ಯ ಎಚ್ಚಿದವರಿಗೆ ನಿನ್ನ ಮಗಳನ್ನು ಕೊಡಬೇಕು ಕೊಟ್ಟಿದ್ದಾಯಿತು. ಈಗ ಕುಲಗೋತ್ರಗಳ ಪ್ರಶ್ನೆ ಏಕೆ?'' ಎಂದನು. ದ್ರುಪದನು ಕುಂತಿಯನ್ನು ಕುರಿತು ತಾಯೇ ನೀನಾದರೂ ಹೇಳಿ. ನೀವು ಯಾರು?'' ಎಂದು ಕೇಳಿಕೊಂಡಾಗ ಕುಂತೀದೇವಿಯು ''ಮಹಾರಾಜಾ! ನಾನು ಕುಂತೀದೇವಿ? ಇವರು ಐದುಜನರೂ ಪಾಂಡುರಾಜನ ಪುತ್ರರು'' ಎಂದು ತಿಳಿಸಿದಾಗ ದ್ರುಪದರಾಜನಿಗೆ ಅತ್ಯಂತ ಆನಂದವಾಯಿತು. ''ಧರ್ಮರಾಜಾ ನನ್ನ ಜನ್ಮ ಇಂದಿಗೆ ಸಾರ್ಥಕವಾಯಿತೆಂದು ತಿಳಿದೆನು. ನೀನು ಅಪ್ಪಣೆ ಇತ್ತರೆ ನನ್ನಮಗಳನ್ನು ಅರ್ಜುನನಿಗೆ

ಈಕ್ಷಣವೇ ದಾರೆಎರೆದು ವಿವಾಹ ಮಾಡಿಕೊಡುತ್ತೇನೆ'' ಎಂದನು. ಆಮಾತಿಗೆ ಭೀಮನು ''ದೃಪದರಾಜಾ! ನಾವು ಐದುಜನರೂ ವಿವಾಹಕ್ಕೆ ಯೋಗ್ಯರಾದ್ದರಿಂದ ನೀನು ದ್ರೌಪದಿಯನ್ನು ನಮ್ಮೈವರಿಗೂ ಧಾರೆ ಎರೆದು ಕೊಟ್ಟು ವಿವಾಹ ಮಾಡಬೇಕು'' ಎಂದನು. ದೃಪದರಾಜನಿಗೆ ಭೀಮನಮಾತು ಬಹಳ ಅಸಹ್ಯವೆನಿಸಿತು. ''ಇದೇನು ಮಹಾಧರ್ಮವಂತರಾದ ನಿಮ್ಮ ಬಾಯಲ್ಲಿ ಈ ಮಾತು ಬರಬಾರದು'' ಎಂದನು.

ದ್ರೌಪದಿ ದೇವತಾಂಶಸಂಭೂತಳು. ಆಕೆ ಅರ್ಜುನನೊಬ್ಬನನ್ನು ವರಿಸುವುದು ಧರ್ಮವಾಗಿದೆ. ಐದುಜನರಿಗೂ ದ್ರೌಪದಿ ಪತ್ನಿಯಾಗುವುದೆಂದರೆ ಎಂಥ ಅನರ್ಥ? ಅಪಹಾಸ್ಯ? ಇದು ಹೇಗೆ ತಾನೇ ಸಾಧ್ಯವಾದೀತು? ನಾನು ತಪಸ್ಸುಮಾಡಿ ಪುತ್ರಿಯನ್ನು ಪಡೆದಿದ್ದು ಅರ್ಜುನನಿಗೆ ಪತ್ನಿಯಾಗುವಂಥ ಪುತ್ರಿ ಕರುಣಿಸೆಂದು ಭಗವಂತನಲ್ಲಿ ಪ್ರಾರ್ಥಿಸಿದ್ದು ವಿಪರೀತ ಫಲವಾಗಲು ಕಾರಣವೇನು? ಎಂದು ಬಹಳ ಚಿಂತಿಸತೊಡಗಿದನು. ದೃಪದನು ಶಂಕೆಯನ್ನು ನಿವಾರಿಸಲು ವೇದವ್ಯಾಸರು ಪ್ರತ್ಯಕ್ಷರಾದರು. ದೃಪದನು ವೇದವ್ಯಾಸರ ಆಗಮನಕ್ಕೆ ಆನಂದಹೊಂದಿ ಅರ್ಘ್ಯಪಾದ್ಯಾದಿಗಳಿಂದ ಪಾದಪೂಜೆ ಸಲ್ಲಿಸಿದ ನಂತರ ವೇದವ್ಯಾಸರು ದೃಪದನನ್ನು ಕುರಿತು ''ನೀನು ಪಾಂಡವರು ಐದುಮಂದಿಗೆ ನನ್ನ ಮಗಳೊಬ್ಬಳನ್ನು ಹೇಗೆ ವಿವಾಹಮಾಡುವುದು? ಎಂದು ಬಹಳ ಚಿಂತಾಮಗ್ನನಾಗಿದ್ದಿ ಅಲ್ಲವೆ? ಪಾಂಡವರು ದೇವತಾಪುರುಷರು ಅವರು ಶ್ರೀನಾರಾಯಣನ ಇಚ್ಛೆಯಂತೆ ಭಾಗವತ್ಕಾರ್ಯಸಾಧನೆಗಾಗಿಯೇ ಅವತರಿಸಿದ್ದಾರೆ. ನಿನ್ನ ಮಗಳೂ ಸಾಮಾನ್ಯಳಲ್ಲ. ಅವಳು ಭಾರತೀದೇವಿ. ಆಕೆಯಲ್ಲಿ ನಾಲ್ಕು ಮಂದಿ ದೇವತಾಸ್ತ್ರೀಯರು ಇದ್ದಾರೆ. ಅವರ್ಯಾರೆಂದರೆ ಶಚಿ-ಪಾರ್ವತಿ-ಶ್ಯಾಮಲಾ-ಉಷಾ ಎಂಬುವರು ಆಕೆಯಲ್ಲಿ ಆಶ್ರಯಪಡೆದಿದ್ದಾರೆ. ಪಾಂಡವರು ಯಮಧರ್ಮರಾಜ ವಾಯುದೇವರು ದೇವೇಂದ್ರ-ಅಶ್ವಿನೀ-ದೇವತೆಗಳಿಬ್ಬರಿಂದ ಅವತರಿಸಿಬಂದವರು.

ಆದ್ದರಿಂದ ನಿನ್ನಪುತ್ರಿ ಭಾರತೀದೇವಿಯನ್ನು ವಾಯುದೇವರು ವರಿಸುವರು. ಧರ್ಮರಾಜನು ಶ್ಯಾಮಲಾದೇವಿಯನ್ನು ಅರ್ಜುನನು ಶಚೀದೇವಿಯನ್ನು ಉಷಾ-ಪಾರ್ವತಿಯರು ನಕುಲ ಸಹದೇವರನ್ನು ವರಿಸುತ್ತಾರೆ. ಇದು ದೇವತಾರಹಸ್ಯ ಬೇಕಾದರೆ ಈಗ ನೀನು ಅದನ್ನು ಪ್ರತ್ಯಕ್ಷವಾಗಿಯೇ ನೋಡಿ ನಿನ್ನ ಸಂದೇಹವನ್ನು ಕಳೆದುಕೋ'' ಎಂದಾಗ ದ್ರೌಪದರಾಯನಿಗೆ ಅಲ್ಲಿ ಐದುದಂಪತಿಗಳ ದರ್ಶನವಾಯಿತು. ದೃಪದರಾಯನು ವೇದವ್ಯಾಸರಿಗೆ ನಮಸ್ಕಾರಮಾಡಿ ಸ್ವಾಮೀ ನನಗಿಂದು ಜ್ಞಾನದೃಷ್ಟಿಯನ್ನಿತ್ತು ನನ್ನ ಅಜ್ಞಾನವನ್ನು ಕಳೆದಿದ್ದೀರಿ. ಭಗವಂತನ ವಿಚಿತ್ರ ಮಹಿಮೆಯನ್ನು ಅಜ್ಞಾನಿಗಳಾದ ನಾವು ತಿಳಿಯಲಾರೆವು. ತಮ್ಮಂಥ ನಿಜವಾದ ಗುರುಗಳ ಅನುಗ್ರಹವಾದಾಗ ಮಾತ್ರ ನಮಗೆ ಅಲ್ಪಸ್ವಲ್ಪವಾದರೂ ಜ್ಞಾನ ಉದಯವಾಗಬಲ್ಲದು'' ಎಂದು ಹೇಳಿದನು. ದೃಪದನ ಉದ್ಧಾರಕ್ಕಾಗಿಯೇ ಬಂದಿದ್ದ ವೇದವ್ಯಾಸರು ''ದೃಪದಾ! ನಿನ್ನ ಮಗಳನ್ನು ಪಾಂಡವರಿಗೆ ಈಗ ನಿಶ್ಕಳಂಕ ಮನಸ್ಸಿನಿಂದ

ವಿವಾಹಮಾಡಿಕೊಟ್ಟು ಧನ್ಯನಾಗು'' ಎಂದರು. ದ್ರುಪದನು ''ಸ್ವಾಮೀ ತಮ್ಮ ನೇತ್ರತ್ವದಲ್ಲೇ ವಿವಾಹಕಾರ್ಯ ನೆರವೇರಲಿ'' ಎಂದು ಪ್ರಾರ್ಥಿಸಿಕೊಂಡನು.

ಆಗ ವೇದವ್ಯಾಸರು ಧೌಮ್ಯಾಚಾರ್ಯರನ್ನು ಪುರೋಹಿತರನ್ನಾಗಿ ನಿಯಮಿಸಿ ಮೊಮ್ಮಕ್ಕಳ ವಿವಾಹ ಕಾರ್ಯವನ್ನು ತಾವೇ ವಹಿಸಿಕೊಂಡು ಮಹಾವೈಭವದಿಂದ ನೆರವೇರಿಸಿದರು. ಶ್ರೀಹರಿಯೇ ನಡೆಸಿದ ವಿವಾಹವೆಂದರೆ ಅವರ ವೈಭವವನ್ನು ವರ್ಣಿಸಲು ಹೇಗೆ ತಾನೇ ಸಾಧ್ಯವಾದೀತು? ದ್ರುಪದರಾಜನ ಪುಣ್ಯವೇ ಪುಣ್ಯ ಎಂದು ಸಕಲ ಮುನಿವರರೂ ದೇವತೆಗಳೂ ಹೊಗಳಿ ಕೊಂಡಾಡಿದರು. ಜನಕರಾಜನು ನಡೆಸಿದ ಸೀತಾಕಲ್ಯಾಣದಂತೆ ದ್ರೌಪದೀ ವಿವಾಹವೂ ನಡೆದಿದೆ'' ಎಂದು ಸಂತೋಷಪಟ್ಟರು. ಶ್ರೀಕೃಷ್ಣನು ಆಗ ಅನೇಕ ಅಮೂಲ್ಯವಸ್ತುವಿನೊಂದಿಗೆ ವಿವಾಹಮಂಟಪಕ್ಕೆ ಬಂದನು. ಶ್ರೀಕೃಷ್ಣನನ್ನು ನೋಡಿದಾಕ್ಷಣವೇ ಪಾಂಡವರು ಇದಿರ್ಗೊಂಡು ಕರೆತಂದು ದ್ರೌಪದಿಯೊಂದಿಗೆ ನಮಸ್ಕಾರ ಮಾಡಿದಾಗ ಶ್ರೀಕೃಷ್ಣನು ಪಾಂಡವರಾದಿ ಎಲ್ಲರಿಗೂ ಉಡುಗೊರೆ ಕೊಟ್ಟನು. ಲೌಕಿಕ ಆಚಾರ ವಿಚಾರಗಳನ್ನು ಜನರಿಗೆ ತಿಳಿಸುವುದಕ್ಕಾಗಿ ಸ್ವಾಮಿಯು ವಿಡಂಬನೆ ತೋರಿಸುತ್ತ ಎಲ್ಲರನ್ನು ಮೋಹಗೊಳಿಸುತ್ತಿದ್ದನು. ಸಿರಿರಮಣನ ಅನುಗ್ರಹಪಾತ್ರ ಕೊಡಿಗೆ ಎಂದರೆ ಅದು ಅಕ್ಷಯ ಸಂಪತ್ತು ಸ್ಥಿರಸಂಪತ್ತು, ಅವನದು. ಇನ್ನು ವಾಸಿಷ್ಟ ಕೃಷ್ಣನಾಗಿ ಪಾಂಡವರನ್ನು ಉದ್ಧರಿಸಿದ ಅವನ ಕರುಣೆಗಂತೂ ಕಡೆ ಮೊದಲಿಲ್ಲ. ಶ್ರೀಕೃಷ್ಣನು ಅನೇಕದಿನಗಳ ಕಾಲ ಪಾಂಡವರೊಡನಿದ್ದು ನಂತರ ದ್ವಾರಕೆಗೆ ಹೊರಟನು. ವೇದವ್ಯಾಸರು ವಿವಾಹವಾದನಂತರ ಅಪ್ರತ್ಯಕ್ಷರಾದರು.

## ದುರುಳರ ದುರಾಗ್ರಹ

ದ್ರೌಪದಿ ಅರ್ಜುನನನ್ನು ವರಿಸಿದನಂತರ ದುರ್ಯೋಧನನು ತನಗೆ ಹೆಣ್ಣುಸಿಗಲಿಲ್ಲವೆಂಬ ಕ್ರೋಧದಿಂದ ಯುದ್ಧಮಾಡಿದಾಗ ಭೀಮನು ಬಡಿದೋಡಿಸಿದ್ದನು. ಕರ್ಣನೂ ಅರ್ಜುನನೊಂದಿಗೆ ಎಷ್ಟು ಸೆಣಸಾಡಿದರೂ ಸಾರ್ಥಕವಾಗದೆ ಸೋಲು ಮುಖದಿಂದ ಬಂದು ತಮ್ಮತಮ್ಮಲ್ಲೇ ಸಂದೇಹದಿಂದ ಮಾತನಾಡಿಕೊಳ್ಳುತ್ತಿದ್ದರು. ಕೆಲವುದಿನಗಳಾದ ನಂತರ ದ್ರೌಪದಿಯನ್ನು ಪಣದಲ್ಲಿ ಗೆದ್ದು ವಿವಾಹವಾಗಿರುವರು ಪಾಂಡವರೇ ಎಂದು ಸ್ಪಷ್ಟವಾಯಿತು.

ಆಗ ದುರ್ಯೋಧನನು ತನ್ನ ಆಪ್ತಮಿತ್ರರೊಂದಿಗೆ ನಾವೀಗ ಪಾಂಡವರಿಗೆ ಆಶ್ರಯ ನೀಡಿ ಹೆಣ್ಣು ಕೊಟ್ಟಿರುವ ದ್ರುಪದರಾಜನನ್ನು ಮೊದಲು ಕೊಂದು ಹಾಕಿದರೆ ಆಮೇಲೆ ಪಾಂಡವರು ಯುದ್ಧಕ್ಕೆ ಬರುತ್ತಾರೆ. ಅವರನ್ನು ನಮ್ಮ ಸಾಹಸದಿಂದ ಮುಗಿಸಿಬಿಡಬೇಕು'' ಎಂದು ಮಾತನಾಡಿಕೊಂಡು ಅಸಾಧ್ಯವಾದ ಸೇನಾಬಲವನ್ನು ಸಿದ್ಧಪಡಿಸಿ ಕ್ರೋಧ ಕಶಾಯಪಾನಮತ್ತರಾಗಿ ರಣದಬ್ಬರದಿಂದ ರಣ-ಕೇಸರಿಗಳಂತೆ ಬಂದು ದ್ರುಪದರಾಜನ ಪುರವನ್ನು ಮುತ್ತಿ ಲಗ್ಗೆಹಚ್ಚಿದರು. ದ್ರುಪದನು ತನ್ನ ವೀರಕುಮಾರರೊಂದಿಗೆ ಬಂದು

ಭೀಕರಯುದ್ಧವನ್ನು ನಡೆಸಿದಾಗ್ಯೂ ಕೌರವನ ವೀರಭಟರ ಸಾಹಸವನ್ನು ತಡೆಯಲಾರದವರಾದರು. ದ್ರುಪದನ ವೀರಪುತ್ರರಾದ ಚಿತ್ರ-ಚಿತ್ರಸೇನ ಎಂಬಿಬ್ಬ ಮಕ್ಕಳೂ ಹೋರಾಡಿ ಸತ್ತರು.

ಸೈನಿಕರೆಲ್ಲರೂ ದಿಕ್ಕಾಪಾಲಾಗಿ ಓಡಹತ್ತಿದರು. ಪಾಂಡವರು ದ್ರುಪದನ ಸೇನಾಸಾಗರ ಬತ್ತಿದಾಗ ತಮಗೆ ಶ್ರೀಕೃಷ್ಣನು ಬಳುವಳಿಕೊಟ್ಟ ಯಾದವಸೇನಾನಿಕರ ಮತ್ತು ದ್ರುಪದನು ಕೊಟ್ಟ ಸೇನಾದಳಗಳೊಂದಿಗೆ ಒಂದು ಕೌರವರನ್ನು ಎದುರಿಸಿದರು. ಕರ್ಣಾದಿಗಳೆಲ್ಲರೂ ಸೇರಿ ಅರ್ಜುನನ ರಥಾಶ್ವಗಳೆಲ್ಲವನ್ನು ಧ್ವಂಸಮಾಡುತ್ತಿದ್ದಾಗ ಭೀಮನು ಸಿಂಹನಾದದಿಂದ ಎದುರಿಗೆ ಏನು ಸಿಕ್ಕಿದರೆ ಅದನ್ನೇ ಕೈಲೆತ್ತಿಕೊಂಡು ಓಡಿಬಂದು ಬಡಿಯುತ್ತಿದ್ದನು. ಭೀಮನು ಗಜಾಶ್ವಗಳನ್ನು ಎತ್ತಿ ಎಸೆಯಲ್ಪಟ್ಟಾಗ ಕುರುವೀರರು ಅಲ್ಲಿ ನಿಲ್ಲಲಾರದವರಾಗಿ ಹಸ್ತಿನಾವತಿಯ ಕಡೆಗೆ ಓಡಿದರು. ವಿದುರನು ಪಾಂಡವರಿಂದ ಕೌರವರು ಸೋತು ಓಡಿಬಂದಿರುವುದನ್ನು ದ್ರೌಪದಿಯನ್ನು ಪಾಂಡವರು ವಿವಾಹವಾದ ವೃತ್ತಾಂತವನ್ನು ತಿಳಿದು ಬಹಳ ಸಂತೋಷಪಟ್ಟನು. ಧೃತರಾಷ್ಟ್ರನ ಬಳಿಗೆ ಬಂದು ''ಧೃತರಾಷ್ಟ್ರಾ! ನಿನ್ನ ಮಕ್ಕಳ ಭಾಗ್ಯದಬಾಗಿಲು ತೆರೆಯಿತು'' ಎಂದು ತಿಳಿಸಿದನು. ಧೃತರಾಷ್ಟ್ರನು ತನ್ನ ಮಗ ದುರ್ಯೋಧನನು ದ್ರೌಪದಿಯನ್ನು ವರಿಸಿದ್ದಾನೆ'' ಎಂದುಕೊಂಡು ಆನಂದದಿಂದ ಹಿಗ್ಗಿ ಯಥೇಚ್ಛವಾಗಿ ಉಡುಗೊರೆಗಳನ್ನು ನೀಡಿ ಸನ್ಮಾನಿಸಿದರು.

ವಿದುರನಿಗೆ ಧೃತರಾಷ್ಟ್ರನ ಅಂತರಂಗದ ಆತಂಕ ಚೆನ್ನಾಗಿ ಅರ್ಥವಾಗಿತ್ತು. ಅವನ ಮನಸ್ಸು ಕಲುಕವಂತೆ ''ಧೃತರಾಷ್ಟ್ರಾ! ನಿನ್ನ ಪ್ರೀತಿಯ ತಮ್ಮನ ಮಕ್ಕಳ ಮೇಲೆ ನಿನ್ನ ಅಭಿಮಾನವೆಷ್ಟು? ಅವರು ದ್ರೌಪದಿಯನ್ನು ವಿವಾಹವಾಗಿ ಮಂಗಳದ ದಿನಗಳನ್ನು ಕಂಡದ್ದನ್ನು ತಿಳಿದನಂತರ ನಿನಗೆ ಬಹಳ ಸಂತೋಷವಾಯಿತಲ್ಲವೇ?'' ಎಂದನು.

ಧೃತರಾಷ್ಟ್ರನ ಮನಸ್ಸು ಕುಗ್ಗಿದರೂ ಆನಂದವನ್ನು ಹಿಗ್ಗಿಸಿದಂತೆ ತೋರ್ಪಡಿಸಿ ''ವಿದುರಾ! ಪಾಪ ಪಾಂಡವರು ಬೆಂಕಿಯ ಮನೆಯಿಂದ ಬಿಡಿಸಿಕೊಂಡು ಬದುಕಿದ್ದು ಬಹಳ ಆಶ್ಚರ್ಯ. ಅವರ ಬಗ್ಗೆ ನನಗೆ ಸಂತೋಷವಲ್ಲದೆ ಮತ್ತೇನು? ಅವರು ಬದುಕಿ ದ್ರೌಪದಿಯನ್ನು ವರಿಸಿದ ಶುಭಸಮಾಚಾರವನ್ನು ನನಗೆ ಸರಿಯಾಗಿ ತಿಳಿಸು'' ಎಂದನು.

ವಿದುರನು ಧೃತರಾಷ್ಟ್ರನನ್ನು ಕುರಿತು ''ಪಾಂಡವರು ಲಾಕ್ಷಾಗ್ರಹದಿಂದ ಭೀಮಸೇನನ ಬೆಂಬಲದಿಂದ ಬದುಕಿದರು. ಭೀಮಸೇನನು ಅನೇಕ ದುಷ್ಟ ದೈತ್ಯರನ್ನು ಸಂಹಾರಮಾಡಿ ಪಾಂಚಾಲನಗರಿಗೆ ಹೋಗಿ ಅಲ್ಲಿ ದ್ರೌಪದಿಯನ್ನು ವಿವಾಹವಾಗಿ ವೇದವ್ಯಾಸರು ಶ್ರೀಕೃಷ್ಣನ ಕೃಪಾಭಾಗ್ಯದಿಂದ ತಮ್ಮ ಕೀರ್ತಿ ಚಂದ್ರಿಕೆಯನ್ನು ಹರಡಿ ಮರೆಯುತ್ತಿದ್ದಾರೆ. ನಿನ್ನ ಮಕ್ಕಳು ಮತ್ತೆ ಅವರೊಡನೆ ಜಗಳಕ್ಕೆ ಹೋಗಿ ಭೀಮನಿಂದ ಚೆನ್ನಾಗಿ ಹೊಡೆಸಿಕೊಂಡು ಬಂದು ಮೈಕೈ ನೋವಿನಿಂದ ನರಳಾಡುತ್ತಿದ್ದಾರೆ'' ಎಂದನು.

ಧೃತರಾಷ್ಟ್ರನು ಮನದಲ್ಲೇ ಮರಗುತ್ತ ಭೀಮನಿಂದ ನನ್ನ ಮಕ್ಕಳಿಗೆ ಯಾವ ಸಮಯಕ್ಕೆ ಏನು ಆಪತ್ತು ಸಂಭವಿಸುತ್ತದೋ ಎಂಬ ಹೆದರಿಕೆಯಿಂದ ಚಿಂತಿಸುತ್ತಿದ್ದನು. ಪಾಂಡವರು ನಾಶಹೊಂದಲೇಬೇಕು. ಅಖಂಡರಾಜ್ಯವನ್ನು ನಾನೊಬ್ಬನೇ ಆಳಲೇಬೇಕೆಂಬುದು ಕಲಿದುರ್ಯೋಧನನ ಹಠ ಈ ಸಾಧನೆಗಾಗಿ ಆಗಾಗ ಮತ್ತೆ ಮತ್ತೆ ಬಂದು ಪಾಂಡವರನ್ನು ಪೀಡಿಸುತ್ತಿದ್ದನು. ಅದೇರೀತಿ ಯುದ್ಧದ ಸಿದ್ಧತೆ ನಡೆಸುತ್ತಿದ್ದನು. ಅದೇ ರೀತಿ ಈಗ ಮತ್ತೆ ಪಾಂಚಾಲನಗರಿಯಲ್ಲಿರುವ ಪಾಂಡವರನ್ನು ಮುಗಿಸಲೇಬೇಕೆಂಬ ಒಳಸಂಚಿನಿಂದ ಸಮರಸನ್ನಾಹ ನಡೆಯುವುದು ವಿದುರನು ತಿಳಿದು ''ಧೃತರಾಷ್ಟ್ರಾ! ನಿನ್ನ ಮಕ್ಕಳು ಪಾಂಡವರಿಂದ ಮೈಮುರಿಸಿಕೊಂಡು ಬಂದಿದ್ದು ಈಗಾಗಲೇ ಮರೆತು ಮತ್ತೆ ಅವರಮೇಲೆ ದಂಡೆತ್ತಿಹೋಗಲು ಸಂಚು ಮಾಡಿದ್ದಾರೆ. ಈಗ ಅವರು ಭೀಮನಿಂದ ಬದುಕಿಬರುವುದು ಬಹಳ ಕಷ್ಟದ ಮಾತು. ಅವಿವೇಕಿಗಳು ಅನರ್ಥಕ್ಕೊಳಗಾಗದಂತೆ ನೀನು ಎಚ್ಚರವಹಿಸಿದರೆ ಬರುವ ವಿಪತ್ತನ್ನು ತಪ್ಪಿಸಬಹುದು. ಪಾಂಡವರನ್ನು ಕರೆಸಿಕೊಂಡು ರಾಜ್ಯವನ್ನು ಇಬ್ಬರಿಗೂ ಹಂಚಿ ಅವರವರ ರಾಜ್ಯದಲ್ಲಿ ಅವರವರು ಇರುವಂತೆ ಮಾಡು. ಇಲ್ಲದಿದ್ದರೆ ಈ ಹೊಡೆದಾಟ ತಪ್ಪಿದ್ದಲ್ಲ'' ಎಂದು ಹೇಳಿದಾಗ ಭೀಷ್ಮಾದಿಗಳು ''ವಿದುರನ ಮಾತು ಸಮ್ಮತವಾದದ್ದು'' ಎಂದು ಹೇಳಿದರು. ಪಾಂಡವರನ್ನು ಕರೆದುಕೊಂಡು ಬರಲು ವಿದುರನನ್ನು ಪಾಂಚಾಲನಗರಿಗೆ ಕಳುಹಿಸಿದರು.

ಪಾಂಚಾಲರಾಜನು ವಿದುರನ ಆಗಮನವನ್ನು ತಿಳಿದು ಅವನನ್ನು ಯೋಗ್ಯರೀತಿಯಲ್ಲಿ ಇದಿರ್ಗೊಂಡು ಪುರಪ್ರವೇಶಮಾಡಿಸಿ ಸತ್ಕಾರಗಳಾದನಂತರ ಪಾಂಡವರನ್ನು ಹಸ್ತಿನಾವತಿಗೆ ಕರೆದುಕೊಂಡುಹೋಗುವ ಪ್ರಸ್ತಾಪ ಪ್ರಾರಂಭವಾದೊಡನೆಯೇ ವೇದವ್ಯಾಸರೂ-ಶ್ರೀಕೃಷ್ಣನೂ ಅಲ್ಲಿಗೆ ಬಂದರು. ಸ್ವಾಮಿ ಎರಡು ರೂಪದಿಂದ ಪಾಂಡವರಿಗೆ ಅನುಗ್ರಹಮಾಡುತ್ತಿದ್ದ ಅವನ ಕರುಣೆಯನ್ನು ಎಷ್ಟು ವರ್ಣಿಸಿದರೂ ಸಾಲದಂತಿದೆ. ಪಾಂಡವರೊಡಗೂಡಿ ಶ್ರೀಕೃಷ್ಣ ಹಸ್ತಿನಾವತಿಗೆ ಪ್ರವೇಶಮಾಡಿದನು.

ಸಂಭ್ರಮದಿಂದ ಎಲ್ಲರನ್ನು ಸ್ವಾಗತಿಸಿ ಅರಮನೆಗೆ ಕರೆದುಕೊಂಡು ಬಂದನಂತರ ಗಾಂಧಾರಿಯು ಕುಂತಿಯನ್ನು ಉಪಚಾರೋಕ್ತಿಗಳಿಂದ ಮಾತನಾಡಿಸಿ ನಂತರ ದ್ರೌಪದಿಯನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡು ಅನೇಕ ರತ್ನಾಭರಣಗಳಿಂದಲೂ ಪೀತಾಂಬರದಿಂದಲೂ ಶೃಂಗರಿಸಿದನಂತರ ತಾನು ದೃಷ್ಟಿಯನ್ನು ಮರೆಮಾಡಿಕೊಂಡಿದ್ದರೂ ಒಳದೃಷ್ಟಿಯಿಂದ ದ್ರೌಪದಿಯ ಚೆಲುವನ್ನು ತಿಳಿದು, ''ಅಮ್ಮಾ ಕುಂತೀದೇವೀ! ನಿನ್ನ ಸೊಸೆಯು ಸೌಂದರ್ಯದ ರಾಶಿ ಎಂದು ತಿಳಿದಿದ್ದೇನೆ. ನನ್ನ ಮಗ ದುರ್ಯೋಧನ ದ್ರೌಪದಿಯ ಸೌಂದರ್ಯವನ್ನು ಚಪಲಚಿತ್ತದಿಂದ ನೋಡುವ ಮುಂಚೆ ನೀನು ನಿನ್ನದಾದ ಅರಮನೆಗೆ ಆಕೆಯನ್ನು ಕರೆದುಕೊಂಡುಹೋಗಿ ಮಕ್ಕಳು ಸೊಸೆಯೊಂದಿಗೆ ನಿರಾತಂಕದಿಂದಿರು'' ಎಂದು ಹೇಳಿದಳು.

ಕುಂತೀದೇವಿ ಗಾಂಧಾರೀದೇವಿಯ ಮಾತಿನಂತೆ ತನ್ನ ಪತಿಗೃಹದಲ್ಲಿ ಪಾಂಡವರು ಮತ್ತು ದ್ರೌಪದಿಯೊಡನೆ ಐದು ವರ್ಷಗಳ ಕಾಲ ಸುಖವಾಗಿದ್ದರು.

ಪಾಂಡವರು ಐದುಜನರೂ ದ್ರೌಪದಿಯನ್ನು ವಿವಾಹವಾಗಿದ್ದರೂ ದ್ರೌಪದಿಯಲ್ಲಿ ಅವರು ಯಾವರೀತಿಯಲ್ಲಿ ವರ್ತಿಸುತ್ತಿದ್ದವೆಂಬುದನ್ನು ಮುಖ್ಯವಾಗಿ ತಿಳಿಯಬೇಕಾದ ಸಂಗತಿ. ದೇವತಾರಹಸ್ಯವನ್ನು ತಿಳಿಯದಿದ್ದರೆ ಮಿಥ್ಯಾಜ್ಞಾನದಿಂದ ಪಾಪಾತ್ಮರಾಗುತ್ತಾರೆ. ಭಾರತೀದೇವಿಯರು ಶಾಪಗ್ರಸ್ಥರಾದ ನಾಲ್ಕುಮಂದಿ ದೇವತಾಸ್ತ್ರೀಯರನ್ನು ಧರಿಸಿದ್ದರಿಂದ ಈಗ ಭಾರತೀದೇವಿಯು ದ್ರೌಪದಿಯ ರೂಪದಿಂದ ಭೀಮಸೇನನೊಡನೆ ದಾಂಪತ್ಯಧರ್ಮದಂತೆ ರಮಿಸುತ್ತಿದ್ದಳು. ಉಷಾ ಎಂಬುವಳು ಯಮಧರ್ಮನಂಶಜನಾದ ಧರ್ಮರಾಯನೊಡನೆ ರಮಿಸುತ್ತಿದ್ದಳು. ಇಂದ್ರನಿಂದ ಅವತರಿಸಿದ ಅರ್ಜುನನೊಡನೆ ಶಚೀದೇವಿ ರಮಿಸುತ್ತಿದ್ದಳು. ಉಷಾ ಪಾರ್ವತಿದೇವಿಯರು ನಕುಲ ಸಹದೇವರನ್ನು ಹೊಂದಿ ಸುಖಿಸುತ್ತಿದ್ದರು. ಇವರು ನಾಲ್ವರೂ ಒಂದೇ ದೇಹದಲ್ಲಿದ್ದರೂ ಒಬ್ಬರ ಇರುವಿಕೆ ಇನ್ನೊಬ್ಬರಿಗೆ ಗೊತ್ತಾಗುತ್ತಿರಲಿಲ್ಲ. ಪ್ರತಿಯೊಬ್ಬ ಸ್ತ್ರೀಯೂ ತನ್ನದೇ ದೇಹವೆಂದು ತಿಳಿದು ತಮ್ಮ ಪತಿಯೊಡನೆ ವಿಹಾರ ಮಾಡುತ್ತಿದ್ದರು.

ಪ್ರತಿದಿನವೂ ನೂತನಕನ್ಯತ್ವ - ನೂತನ ಅಭಿಮಾನದಿಂದಲೇ ಇರುತ್ತಿದ್ದರು. ದೇವತೆಗಳ ಧರ್ಮರಹಸ್ಯವನ್ನು ಸ್ವಚ್ಛಮನಸ್ಸಿನಿಂದ ತಿಳಿದಾಗ ಮಾತ್ರ ಭಾರತೀದೇವಿ ಅನುಗ್ರಹ ಮಾಡುವಳು.

ಪಾಂಡವರು ಶ್ರೀಕೃಷ್ಣ ಮತ್ತು ವೇದವ್ಯಾಸರೆಂಬ ಎರಡು ರೂಪಗಳಿಂದಲೂ ಅಮೋಘವಾದ ಅನುಗ್ರಹಪಡೆದು ಆನಂದದಿಂದಿದ್ದರು.

## ಕಾಶೀರಾಜ್ಯದಲ್ಲಿ ಕನ್ಯಾಪಹರಣ

ಕಾಶೀರಾಜನು ತನ್ನ ಮಗಳಿಗೆ ಸ್ವಯಂವರವನ್ನು ಏರ್ಪಡಿಸಿ ಸಕಲರಾಜರಿಗೂ ಆಹ್ವಾನ ಕಳುಹಿಸಿದನು. ಸ್ವಯಂವರ ಮಂಟಪದಲ್ಲಿ ಸಕಲರಾಜರೂ ಕುಳಿತಿರುವಾಗ ಕಾಶೀರಾಜನು ತನ್ನ ಪುತ್ರಿಗೆ ಸಕಲರಾಜರ ಬಲವೀರ್ಯಾದಿ ಸಂಪತ್ತುಗಳನ್ನು ಪರಿಚಯಮಾಡಿಸಿಕೊಡಲು ಪುತ್ರಿಯೊಡನೆ ರಾಜರ ಸಾಲಿನಲ್ಲಿ ಬಂದಾಗ ಮೊದಲು ಜರಾಸಂಧನನ್ನು ತೋರಿಸಿ ಅವರ ಸುಪ್ರಸಿದ್ಧವಾದ ಕೀರ್ತಿಯನ್ನು ಹೊಗಳಿದನು. ಆಗ ದುರ್ಯೋಧನನು ಸಿಡಿದೆದ್ದು ಹಸ್ತಿನಾವತಿಯ ಕುರುಕುಲದ ರಾಜರೆಂದರೆ ಜಗತ್ಪ್ರಸಿದ್ಧರು. ಮೊದಲು ನಮಗೇ ಅಗ್ರಸ್ಥಾನಕೊಡಬೇಕು. ಕಾಶೀರಾಜನು ನಮ್ಮನ್ನು ಅಲಕ್ಷ್ಯದಿಂದ ನೋಡಿ ಮೊದಲು ಜರಾಸಂಧನನ್ನು ಹೊಗಳಿದ್ದಾನೆ ಎಂದು ಉನ್ಮತ್ತನಾಗಿಹೋಗಿ ಕನ್ಯಾಪಹಾರವಮಾಡಿಕೊಂಡು ಹೊರಟುಬರುವಾಗ ವೀರಭಟರೆಲ್ಲರೂ ಅವನನ್ನು ಅಡ್ಡಗಟ್ಟಿ ಯುದ್ಧಕ್ಕೆ ತೊಡಗಿದಾಗ ಕರ್ಣನು ''ದುರ್ಯೋಧನಾ! ನೀನು ರಾಜ ನಿನಗೆ ಯುದ್ಧದ ಕಾಳಜಿಬೇಡ. ನೀನು ರಾಜಪುತ್ರಿಯನ್ನು ಕರೆದುಕೊಂಡು

ನಿನ್ನ ಪುರಕ್ಕೆ ಹೋಗು. ನಾನು ಶತೃಗಳನ್ನು ಧ್ವಂಸಮಾಡಿ ಬರುತ್ತೇನೆ. ನಿನಗೆ ಜರಾಸಂಧನ ಭಯಬೇಡ. ಹಸ್ತಿನಾವತಿಯಲ್ಲಿ ರುದ್ರಾಂಶನಾದ ಅಶ್ವತ್ಥಾಮನಿದ್ದಾನೆ. ಅವನೊಡನೆ ರುದ್ರಭಕ್ತನಾದ ಜರಾಸಂಧ ಯುದ್ಧ ಮಾಡುವುದಿಲ್ಲ. ಭೀಷ್ಮದ್ರೋಣಾದಿಗಳನ್ನು ಗೆಲ್ಲಲು ಯಾರಿಗೂ ಸಾಧ್ಯವಿಲ್ಲ. ದ್ರೋಣನು ಬ್ರಾಹ್ಮಣನಾದ್ದರಿಂದ ಅವನೊಡನೆ ಜರಾಸಂಧ ಯುದ್ಧ ಮಾಡುವುದಿಲ್ಲ. ಭೀಷ್ಮ ವೃದ್ಧನೆಂದು ಯುದ್ಧಮಾಡುವುದಿಲ್ಲ'' ಎಂದು ಹೇಳಿ ಕಳುಹಿಸಿದನು.

ಕರ್ಣನು ಅನೇಕ ವೀರರನ್ನು ಕೊಂದುಹಾಕಿದನು. ನಂತರ ಜರಾಸಂಧನೇ ಯುದ್ಧಕ್ಕೆ ಬಂದನು. ಜರಾಸಂಧನೂ ಕರ್ಣನ ಕೈಪೆಟ್ಟಿನಿಂದ ಮೆತ್ತಗಾದನು. ಜರಾಸಂಧನು ಅಮಿತಪರಾಕ್ರಮಿ ಆಗಿದ್ದರೂ ಅವನು ಎರಡು ಸೀಳಾಗಿ ಬಿದ್ದಿದ್ದಾಗ ಜರಾ ಒಂದುಗೂಡಿಸಿದ ಮರ್ಮಸ್ಥಾನವನ್ನರಿತು ಕರ್ಣನು ಹೊಡೆದಾಗ ಜರಾಸಂಧನ ಪರಾಕ್ರಮ ಬತ್ತಿತ್ತು.

ಜರಾಸಂಧನು ಕರ್ಣನ ಯುದ್ಧಚಾತುರ್ಯಕ್ಕೆ ಮೆಚ್ಚಿ ನೀನು ನನಗೆ ಸರಿಯಾದ ಭೃತ್ಯನಾಗಿರುವಿ. ನಾನು ಕರೆದಾಗ ಬಂದು ಸಮರ ಸಹಾಯ ಮಾಡು'' ಎಂದು ಅವನ ವಶದಲ್ಲಿದ್ದ ಅಂಗರಾಜ್ಯದ ಅರ್ಧಭಾಗವನ್ನು ಕೊಟ್ಟನು. ದುರ್ಯೋಧನನಿಂದ ಮೊದಲೇ ಅರ್ಧರಾಜ್ಯ ಪಡೆದಿದ್ದನಾದ್ದರಿಂದ ಅಂಗರಾಜ್ಯ ಪೂರ್ಣವಾಗಿ ಕರ್ಣನ ವಶವಾಯಿತು.

ದುರ್ಯೋಧನನಿಗೆ ಈಗ ಕರ್ಣನ ಮೇಲೆ ಮತ್ತಷ್ಟು ಸ್ನೇಹ ಅಧಿಕವಾಯಿತು. ಕೃಷ್ಣನಿಗೂ ಸೋಲಿಸಲಾಗದ ಜರಾಸಂಧನನ್ನು ಕರ್ಣನು ಸೋಲಿಸಿದ್ದಾನೆ. ಈತನು ಕೃಷ್ಣನಿಗಿಂತಲೂ ಬಲಾಧಿಕ್ಯನೆಂದು ಹೊಗಳಿದನು. ಪಾಪಿಗಳಿಗೆ ಮಿಥ್ಯಾಜ್ಞಾನ ಬಲವಾಗಬೇಕೆಂದೇ ಸ್ವಾಮಿ ಕರ್ಣನನ್ನು ದುರ್ಯೋಧನನ ಎದುರಿಗೆ ಮೆರೆಸುತ್ತಿದ್ದನು.

ದುರ್ಯೋಧನನು ಅಪಹರಿಸಿ ತಂದು ವಿವಾಹವಾಗಿದ್ದ ಕಾಶೀರಾಜ ಪುತ್ರಿ ಭಾನುಮತಿಯು ಪೂರ್ವದಲ್ಲಿ ಅಲಕ್ಷ್ಮೀ ಆಗಿದ್ದಳು. ಈಗ ಪಾರ್ವತೀ ಆವೇಶವುಳ್ಳವಳಾಗಿ ಭಾನುಮತೀ ಎಂಬ ಹೆಸರಿನಿಂದ ದುರ್ಯೋಧನನಿಗೆ ಭಾರ್ಯೆಯಾದಳು. ದುರ್ಯೋಧನನಿಗೆ ಲಕ್ಷಣೆ ಎಂಬ ಮಗಳೂ ಲಕ್ಷಣಾ ಎಂಬ ಮಗನೂ ಹುಟ್ಟಿದರು. ಲಕ್ಷಣಾ ಎಂಬ ಹೆಸರಿನವಳು ಪೂರ್ವದಲ್ಲಿ ಕಾಮನಪತ್ನಿ ರತೀದೇವಿ ಆಗಿದ್ದಳು. ಲಕ್ಷಣಾ ಎಂಬುವನು ರಾವಣನಿಗೆ ಅಕ್ಷಕುಮಾರನೆಂಬ ಮಗನಾಗಿದ್ದನು.

ದುರ್ಯೋಧನನು ಅನೇಕ ಮಂದಿ ಮಹಾಸೌಂದರ್ಯವತಿಯರಾದ ಸ್ತ್ರೀಯರನ್ನು ವಿವಾಹವಾಗಿದ್ದರೂ ದ್ರೌಪದಿಯಂತೆ ರೂಪವುಳ್ಳ ಸ್ತ್ರೀಯನ್ನು ಪಡೆಯಬೇಕೆಂದು ಸದಾ ಕರ್ಣನೊಡನೆ ಆಲೋಚನೆ ಮಾಡುತ್ತಿದ್ದನು. ಕಲಿಪುರುಷನಾದ ದುರ್ಯೋಧನ ಭಾರತೀದೇವಿಗೆ ಸಮಾನಳಾದ ಹೆಂಡತಿಯನ್ನು ಅಪೇಕ್ಷಿಸಿದಾಗ ಅವನಲ್ಲಿದ್ದ ಮೂಲಕಲಿ ಮತ್ತಷ್ಟು ವೃದ್ಧಿಹೊಂದಿ ಅವನಿಂದ ಮತ್ತಷ್ಟು ಪಾಪಕಾರ್ಯಗಳು ನಡೆಯಬೇಕೆಂದು ಪ್ರಚೋದನೆ ಮಾಡುತ್ತಿದ್ದನು.

ಕರ್ಣನೂ ದುರ್ಯೋಧನನ ಆಸೆಯನ್ನು ನೆರವೇರಿಸಲು ಭಾರತೀದೇವಿಯ ಮೇಲೆ ಸ್ಪರ್ಧೆ ಮಾಡಿದನು. ದುರ್ಯೋಧನನ ದುರಾನ್ನದಿಂದ ಕರ್ಣನೂ ಕಲಿವಶನಾಗಿ ಅನೇಕ ವಿರೋಧ ಕಾರ್ಯಗಳಿಗೆ ಮನಕೊಟ್ಟಿದ್ದು ಆಶ್ಚರ್ಯವಿಲ್ಲ. ಅದೂ ಅಲ್ಲದೆ ಶ್ರೀಹರಿಯೂ ಅವನಲ್ಲಿ ನಿಂತು ಪಾಪಕರ್ಮ ಮಾಡಿಸುತ್ತಿದ್ದನು. ಕಲಿ ಆದೇಶವೂ ಇತ್ತು. ಹೀಗಾಗಿ ಕಲಿಯ ಕರಾಳತನ ಬಲವಾಯಿತು. ಭಾರತೀದೇವಿಯಂತೆ ಚೆಲುವಾಂಗಿಯರು ಎಲ್ಲಿದ್ದಾರೆಂದು ಪಾಪಿಗಳು ಶೋಧಿಸುತ್ತಿದ್ದಾಗ ಕಳಿಂಗದೇಶದರಸನಾದ ಸುವಜ್ರರಾಜನು ತನ್ನ ಪುತ್ರಿಗೆ ತಕ್ಕಾದ ರೂಪ-ಗುಣ ಶೀಲಗಳುಳ್ಳ ವರ ಸಿಗಲಿಲ್ಲವೆಂದು ಸ್ವಯಂವರ ಏರ್ಪಡಿಸಿದನು. ಆಗ ದುರ್ಯೋಧನನೂ ಕರ್ಣಾದಿಗಳೊಂದಿಗೆ ಚತುರಂಗಸೇನೆಯೊಡನೆ ಹೊರಟನು. ಅಲ್ಲಿ ಅನೇಕ ವೀರರಾಜರು ಸೇರಿದ್ದರು. ದುರ್ಯೋಧನನು ತನ್ನ ಪರಾಕ್ರಮ-ಸಂಪತ್ತುಗಳನ್ನು ಎಲ್ಲರೆದುರಿನಲ್ಲೂ ತೋರಿಸಲು ದರ್ಪದಿಂದ ಸವಜ್ರರಾಜನನ್ನು ಕುರಿತು "ನಾನು ಹಸ್ತಿನಾವತಿಯ ರಾಜ. ನನ್ನ ಬಲಪರಾಕ್ರಮಾದಿ ಸಕಲ ವೃತ್ತಾಂತವೂ ನಿನಗೆ ತಿಳಿದಿರಬಹುದು. ಆದ್ದರಿಂದ ನನಗೆ ನಿನ್ನ ಮಗಳನ್ನು ವಿವಾಹಮಾಡಿಕೊಡು. ಇಲ್ಲದಿದ್ದರೆ ನಾನು ಬಲಾತ್ಕಾರದಿಂದ ನಿನ್ನ ಮಗಳನ್ನು ಎಳೆದುಕೊಂಡು ಹೋಗಿ ವಿವಾಹವಾಗುತ್ತೇನೆ" ಎಂದು ಅವಿನಯದಿಂದ ವರ್ತಿಸಿದನು.

ಸುವಜ್ರರಾಜನು ರುದ್ರದೇವರಲ್ಲಿ ಅನೇಕ ವರ್ಷಗಳು ತಪಸ್ಸುಮಾಡಿ ವರ ಪಡೆಗದಿದ್ದ ಕಾರಣ ಶ್ರೀವಿಷ್ಣು ಭಕ್ತನಾದ ಶಿವನು ಹರಿದ್ವೇಶಿಗಳನ್ನು ಸೋಲಿಸುವ ಸಾಮರ್ಥ್ಯವನ್ನು ಶಿವನಿಂದ ಹೊಂದಿ ದುರ್ಯೋಧನನನ್ನು ಅವನ ಶತಸಂಖ್ಯೆಯ ಸಹೋದರರನ್ನು ಬಂಧಿಸಿ ಸೆರೆಮನೆಗೆ ಸೇರಿಸಿದನು. ಕರ್ಣನು ತಲೆತಪ್ಪಿಸಿಕೊಂಡು ಓಡಿಹೋದನು.

ಆಗ ಭೀಷ್ಮದ್ರೋಣಾದಿಗಳೊಡನೆ ಧೃತರಾಷ್ಟ್ರನು ತನ್ನ ಮಕ್ಕಳನ್ನು ಬಿಡಿಸಿಕೊಂಡು ಬರಬೇಕೆಂದು ಪಾಂಡವರನ್ನು ಕೇಳಿಕೊಂಡನು. ಧರ್ಮರಾಯನು ಆಗ ಭೀಮನನ್ನು ಕುರಿತು "ಭೀಮಸೇನಾ! ನೀನು ಹೋಗಿ ಕೌರವರನ್ನು ಕಾರಾಗೃಹದಿಂದ ಬಿಡಿಸಿಕೊಂಡು ಬಾ" ಎಂದು ಆಜ್ಞೆಮಾಡಿದನು. ಮೂಲಕಲಿಗೆ ಮತ್ತಷ್ಟು ಕ್ರೋಧದ ಮತ್ತೇರಬೇಕೆಂದು ಭೀಮನು ಕಳಿಂಗರಾಜ್ಯಕ್ಕೆ ನುಗ್ಗಿ ತನ್ನನ್ನು ಎದುರಿಸಿ ಬಂದವರನ್ನು ಕೊಂದು, ಸರ್ಪದ ಬಾಯೊಳಗೆ ಸಿಕ್ಕ ಕಪ್ಪೆಯನ್ನು ಗರುಡನು ಬಿಡಿಸಿದಂತೆ ತನ್ನ ಬಾಹುಬಲವನ್ನು ವೀರರಮುಂದೆ ಮೆರೆಸಿ ಸೆರೆಯಾಳುಗಳಾಗಿ ಬಿದ್ದಿದ್ದ ಕೌರವಕುನ್ನಿಗಳನ್ನು ಬಿಡಿಸಿದನು.

ದುರ್ಯೋಧನನಿಗೆ ಅಯ್ಯೋ ನಾನು ಸೆರೆಮನೆಯಲ್ಲೇ ಸತ್ತಿದ್ದರೆ, ಚೆನ್ನಾಗಿತ್ತು. ನನ್ನ ಕಡುವೈರಿಯ ಕರುಣೆಗೆ ಬಲಿಯಾದೆನಲ್ಲಾ, ಇದಕ್ಕಿಂತಲೂ ಅವಮಾನ ಮತ್ತೊಂದಿಲ್ಲ ಎಂಬ ದುಃಖದಿಂದ ಬಂದು ಮನೆ ಸೇರಿದನು. ಪಾಂಡವರು ತಮ್ಮ ಧವಳಕೀರ್ತಿಯಿಂದ ದಿನದಿನಕ್ಕೂ ಅಭಿವೃದ್ಧಿಯಾಗುತ್ತಿರುವುದನ್ನು ನೋಡಿದ ಕೌರವನಿಗೆ ಮತ್ಸರ ಮಸೆಮಸೆದು ಬರುತ್ತಿತ್ತು. ಅವರಿಗೆ ಎಷ್ಟು ಬಗೆಯ ಹಿಂಸೆಯಿಂದ ಪೀಡಿಸಿದರೂ ಕುಂದಲಿಲ್ಲ, ಕೊರಗಲಿಲ್ಲ. ಬರಬರುತ್ತ

ಅವರ ಉತ್ಸಾಹ ಸಾಹಸ-ಕೀರ್ತಿ ಹೆಚ್ಚುತ್ತಲೇ ಇತ್ತು. ದುರ್ಯೋಧನನು ಬರಬರುತ್ತ ರಾಜ್ಯಾಡಳಿತದಲ್ಲೂ ಜನರಿಗೆ ಉಪದ್ರವವಾಗುವಂತೆ ಏನಾದರೂ ಒಂದು ಜಗಳವನ್ನು ಹಚ್ಚಿ ಪುರಜನರೆಲ್ಲರಿಗೂ ಜಿಗುಪ್ಸೆ ಹುಟ್ಟುವಂತೆ ಕಿರುಕುಳ ಕೊಡಹತ್ತಿದಾಗ ಜನರ ದೂರು ಅಂಧನೃಪಾಲನವರೆಗೂ ಮುಟ್ಟಿತು. ಆಗ ಧೃತರಾಷ್ಟ್ರನು ಹೆದರಿದನು.

ದುರ್ಯೋಧನನ ದುಷ್ಟಬುದ್ಧಿಯಿಂದ ಭೀಮನು ಕೆರಳಿನಿಂತರೆ ದೊಡ್ಡ ಅನಾಹುತವೇ ಆಗುತ್ತದೆಂದು ಯೋಚಿಸಿ ಧರ್ಮರಾಯನನ್ನು ಕರೆಸಿಕೊಂಡನು. ''ಧರ್ಮರಾಜಾ! ನನ್ನ ಮಕ್ಕಳು ಹೊಂದಾಣಿಕೆಯಿಂದ ಇರತಕ್ಕವರಲ್ಲವೆಂದು ನನಗೆ ತಿಳಿಯಿತು. ಅವರಿಂದ ನಿಮಗೆ ತೊಂದರೆ ಆಗಬಾರದು. ನಿಮಗೆ ಇಂದ್ರಪ್ರಸ್ಥವನ್ನು ಕೊಡುತ್ತೇನೆ. ಅಲ್ಲಿ ನೀವು ಇದ್ದು ಬಿಡಿರಿ. ಈಗ ಇಂದ್ರಪ್ರಸ್ಥವು ಮುಂದುವರಿದಿಲ್ಲವಾದರೂ ಅದು ಹಿಂದೆ ದೇವೇಂದ್ರನ ರಾಜ್ಯವಾದ್ದರಿಂದ ಅವನ್ನು ನೀವು ಸಂತೋಷದಿಂದ ಸ್ವೀಕರಿಸಿರಿ. ನಿಮಗೆ ಆಸ್ತಿಯಲ್ಲಿ ಅರ್ಧಭಾಗವನ್ನು ಸಮವಾಗಿ ಕೊಡುತ್ತೇನೆ. ನನ್ನ ಮಗನ ಸಹವಾಸದಿಂದ ದೂರಸರಿದು ಸುರಕ್ಷಿತರಾಗಿರಿ'' ಎಂದನು. ದುರ್ಯೋಧನನು ಶ್ರೇಷ್ಠವಾದ ಸಂಪತ್ತುಗಳೆಲ್ಲವನ್ನು ತೆಗೆದುಕೊಂಡು ಕನಿಷ್ಠವಾದದ್ದನ್ನೆಲ್ಲವನ್ನು ಪಾಂಡವರಿಗಿತ್ತು ರಾಜ್ಯದಿಂದ ಹೊರದೂಡಿದರು.

ಇಂದ್ರಪ್ರಸ್ಥ ಸಕಲಸಂಪತ್ತುಗಳಿಂದಲೂ ರಹಿತವಾಗಿದ್ದರೂ ಸಿರಿರಮಣನೇ ಅಲ್ಲಿ ನೆಲೆನಿಂತಿರುವಾಗ ಅವನ ಪಾದಾಶ್ರಯಕ್ಕಾಗಿ ಸಕಲಸಂಪತ್ತುಗಳೂ ಬಂದೇ ಬರುತ್ತವೆಂಬುದಕ್ಕೆ ಸಂದೇಹವೇನಿದೆ? ಧರ್ಮರಾಜನಿಗೆ ಪಟ್ಟಾಭಿಷೇಕವಾಯಿತು. ಶ್ರೀಕೃಷ್ಣನು ಎರಡುರೂಪದಿಂದ ಪಾಂಡವರಲ್ಲಿದ್ದು ಅವರಿಗೆ ಸಕಲವಿಧದಲ್ಲೂ ಅನುಗ್ರಹ ಮಾಡುತ್ತಿದ್ದನು. ಧರ್ಮದಪ್ರಕಾಶ ಇಂದ್ರಪ್ರಸ್ಥದಲ್ಲಿ ಹರಡಿತು. ಸುಖ ಹೊತ್ತುತಂದ ಸಾಮ್ರಾಜ್ಯವಾಯಿತು. ಸಕಾಲಕ್ಕೆ ಪರ್ಜನ್ಯನು ಮಳೆ ಸುರಿಸುತ್ತಿದ್ದನು. ಭೂದೇವಿಯು ಧಾನ್ಯಸಂಪತ್ತನ್ನು ಮೊಗೆಮೊಗೆದು ನೀಡುತ್ತಿದ್ದಳು. ಆಧ್ಯಾತ್ಮಸಂಪತ್ತಿನಿಂದಲೂ ಲೌಕಿಕ ಸಂಪತ್ತಿನಿಂದಲೂ ಸಕಲ ಪ್ರಜೆಗಳೂ ತೃಪ್ತರಾಗಿ ಸಂತುಷ್ಟಭಾವದಿಂದಿದ್ದರು.

ಭೀಮಸೇನನು ನಿಶ್ಪಕ್ಷಪಾತದಿಂದ ರಾಜ್ಯದಲ್ಲಿ ಹರಿಸರ್ವೋತ್ತಮತ್ತ್ವವನ್ನು ಎಲ್ಲರೂ ಮೆಚ್ಚುವಂತೆ ಪ್ರಮಾಣಪೂರ್ವಕ ಸಾದೃಶ್ಯಗಳಿಂದ ಉಪದೇಶ ಮಾಡುತ್ತಿದ್ದನು. ರಾಜ್ಯದಲ್ಲಿ ಮಿಥ್ಯಾಜ್ಞಾನವಿಲ್ಲದೆ ಸ್ವಚ್ಛಜ್ಞಾನದಿಂದ ಎಲ್ಲರೂ ವೈಷ್ಣವಧರ್ಮವನ್ನು ಆಚರಿಸುತ್ತಿದ್ದರು.

ವೈಷ್ಣವ ದ್ವೇಶಿಗಳು ಶಿವನೇ ಸರ್ವೋತ್ತಮನೆಂದು ದುರ್ವಾದಕ್ಕೆ ಬಂದರೆ ಅವರಿಗೆ ಘೋರಶಿಕ್ಷೆ ವಿಧಿಸಿ ಆ ದೈವದ್ರೋಹಿಗಳು ಸತ್ತರೂ ಅವರಿಗೆ ಶವಸಂಸ್ಕಾರ ಮತ್ತು ಉತ್ತರಕ್ರಿಯೆಗಳನ್ನು ಮಾಡಬಾರದೆಂದು ಕಾನೂನು ಮಾಡಿದನು. ಆ ಪಾಪಿಗಳ ಹೆಣವನ್ನು ನರಿನಾಯಿಗಳೂ ಮುಟ್ಟುತ್ತಿರಲಿಲ್ಲ. ಹೀಗೆ ಸುವ್ಯವಸ್ಥೆಯಿಂದ ಭೀಮಸೇನನು ಯುವರಾಜನಾಗಿ ಶೋಭಿಸುತ್ತಿದ್ದನು. ಭೀಮಸೇನನ ಸಾರವಚನ ಸಜ್ಜನರಿಗೆ ಆಪ್ಯಾಯವಾಗಿರುತ್ತಿತ್ತು.

ಶೃತಿ-ಸ್ಮೃತಿಗಳು ಹೇಳಿರುವ ಪ್ರಕಾರ ಸರಿಯಾದ ಗುರುಮುಖೇನ ತಿಳಿದ ವಿಹಿತಕರ್ಮಗಳನ್ನೇ ಎಲ್ಲರೂ ಆಚರಿಸಬೇಕು. ದೇವಋಣ-ಪಿತೃಋಣ-ಋಷಿಋಣಗಳನ್ನು ಪ್ರತಿಯೊಬ್ಬರೂ ಸಲ್ಲಿಸಬೇಕು. ಕೇವಲ ಮೂರೆಳೆಯ ದಾರ ಧರಿಸಿದರೆ ಮಾತ್ರ ಬ್ರಾಹ್ಮಣನಲ್ಲ. ಸ್ನಾನ - ಸಂಧ್ಯಾವಂದನೆ - ಅಗ್ನಿಕಾರ್ಯಗಳನ್ನು ನಿಷ್ಠೆಯಿಂದ ತಪ್ಪದೆ ಆಚರಿಸಲೇಬೇಕು. ಶ್ರೀ ನಾರಾಯಣನೇ ಸಕಲ ದೇವತೆಗಳಿಗೂ ಅಧಿನಾಯಕನೆಂದೂ ಸಕಲದೇವತೆಗಳೂ ಅವನ ಪರಿವಾರವೆಂದೂ ತಿಳಿದು ಸ್ವಾಮಿಯನ್ನು ಅವನ ಪರಿವಾರದೇವತೆಗಳೆಲ್ಲರನ್ನು ತಾರತಮ್ಯ ಜ್ಞಾನವನ್ನು ಪಡೆದು ಕ್ರಮವಾಗಿ ಪೂಜಿಸಿದರೆ ಅವನು ಶುದ್ಧಜ್ಞಾನದ ಬ್ರಾಹ್ಮಣನೆನಿಸಿ ದೇವತೆಯಂತೆ ಪೂಜ್ಯನಾಗುವನು'' ಎಂದು ಭೀಮಸೇನನು ಪ್ರಜೆಗಳಿಗೆ ಸಂದೇಶನೀಡಿ ಸಲಹುತ್ತಿದ್ದನು.

ದೃಪದರಾಜನ ಪುತ್ರನಾದ ಧೃಷ್ಟದ್ಯುಮ್ನನು ತನ್ನ ತಂಗಿಯಾದ ದ್ರೌಪದಿಯ ಮೇಲಿನ ವಾತ್ಸಲ್ಯದಿಂದ ಪಾಂಡವರ ಬಳಿಯಲ್ಲೇ ಇದ್ದು ಸೇನಾಧಿಪತಿ ಆಗಿದ್ದನು.

ಗುರು ವಾಯುದೇವರಾದರೆ ಗುರುಪತ್ನಿಯೋ ಭಾರತೀದೇವಿ. ಕೇಳಬೇಕೇ? ಸುಜ್ಞಾನಸಂಪತ್ತು ರಾಜ್ಯದಲ್ಲಿ ತಾಂಡವವಾಡುತ್ತಿತ್ತು. ಸಾಕ್ಷಾತ್ ಭಾರತೀದೇವಿಯೇ ಆದ ದ್ರೌಪದಿಯು ಶ್ರೀಹರಿ ವಿಷಯಕವಾದ ಜ್ಞಾನ ಸಂಪನ್ನಳಾಗಿದ್ದ ಕಾರಣ ಪತ್ಯಂತರ್ಗತ ಪರಮಾತ್ಮನ ಧ್ಯಾನ ನಿರತಳಾದ ಆಕೆಯು ತಾನು ಸ್ತ್ರೀಯರ ವರಧರ್ಮಗಳನ್ನು ಆಚರಿಸಿ ತೋರಿಸುತ್ತ ಪ್ರತಿಯೊಬ್ಬ ಸ್ತ್ರೀಯರಿಗೂ ಪತಿವ್ರತಾಧರ್ಮಾಚರಣೆಯನ್ನು ಭಗವಂತನ ಅಪಾರ ಗುಣಮಹಿಮೆಗಳನ್ನು ಉಪದೇಶ ಮಾಡುತ್ತಿದ್ದಳು. ತಪೋತೇಜಸ್ಸಿನಿಂದ ಪ್ರಕಾಶಮಾನಳಾಗಿ ದಯಾಮಯಿಯಾದ ಆ ಭಗವದ್ಭಕ್ತಳ ಉಪದೇಶಗಳನ್ನು ಎಲ್ಲರೂ ಶಿರೋಧಾರಣೆಮಾಡಿ ಶ್ರದ್ಧೆಯಿಂದ ಆಚರಿಸುತ್ತಿದ್ದರು.

ಆದ್ದರಿಂದಲೆ ಪಾಂಡವರ ರಾಜ್ಯದಲ್ಲಿ ಪತಿವಿಹೀನೆಯರು ಒಬ್ಬರೂ ಇರಲಿಲ್ಲ. ಮಕ್ಕಳನ್ನು ಕಳೆದುಕೊಂಡ ತಂದೆತಾಯಿಗಳಿರಲಿಲ್ಲ. ಪತ್ನಿಯನ್ನು ಕಳೆದುಕೊಂಡ ಪುರುಷರಿರಲಿಲ್ಲ. ಎಲ್ಲರೂ ಆನಂದಪೂರ್ಣರಾಗಿ ಶ್ರೀಹರಿಯ ದಿವ್ಯಜ್ಞಾನವನ್ನು ಪಡೆದು ದೇವತಾಸ್ತ್ರೀಯರಂತೆ ಶೋಭಿಸುತ್ತಿದ್ದರು. ಯಾರಾದರೂ ಧರ್ಮಕಾರ್ಯಕ್ಕಾಗಿ ದ್ರವ್ಯ ಸಹಾಯ ಬೇಡಿದರೆ ಭೀಮಸೇನನು ಅವರು ಕೇಳಿದಷ್ಟು ಕೊಟ್ಟು ದ್ರವ್ಯಸಂಪತ್ತು ಮತ್ತಷ್ಟು ವೃದ್ಧಿಯಾಗುವಂತೆ ಮಾಡುತ್ತಿದ್ದನು.

ಸಕಲದೇಶದ ರಾಜರೂ ಭೀಮಸೇನನ ಸತ್ಯವಾದ ಪರಾಕ್ರಮ. ಅವನ ಧರ್ಮ ತೇಜಸ್ಸು, ಕರುಣಾದಿಗಳಿಗೆ ಸಂತೋಷಪಟ್ಟು ಭೃತ್ಯರಂತೆ ನಡೆಯುತ್ತಿದ್ದರು. ಕೃತಯುಗದ ಧರ್ಮಕ್ಕಿಂತಲೂ ಅಧಿಕ ಧರ್ಮ-ಧರ್ಮರಾಜನ ರಾಜ್ಯದಲ್ಲಿ ತಾಂಡವವಾಡುವಂತೆ ಭೀಮಸೇನನು ಮಾಡಿದನು. ಹಿಂದೆ ಪ್ರಹ್ಲಾದರಾಜನ ಸಹೋದರನಾದ ಅನುಹ್ಲಾದನೆಂಬುವನು

ಶಿಶುಪಾಲನಿಗೆ ಮಗನಾಗಿ ಹುಟ್ಟಿದನು. ಅವನಿಗೆ ದುಷ್ಟಕೇತು ಎಂಬುದಾಗಿ ನಾಮಕರಣ ಮಾಡಿದರು. ದುಷ್ಟಕೇತುವಿಗೆ ಶಾಮಲಾದೇವಿ ಆವೇಶವುಳ್ಳ ದೇವಕಿ ಎಂಬ ಹೆಸರಿನ ಸಹೋದರಿ ಇದ್ದಳು. ನಿಯತಪತ್ನಿಯಾದ ಈಕೆಯನ್ನು ಧರ್ಮರಾಜನು ವಿವಾಹವಾಗಿ ಆಕೆಯಲ್ಲಿ ಪಾಪಪುಣ್ಯಗಳ ಲೆಖ್ಖ ಬರೆಯುವ ಚಿತ್ರಗುಪ್ತನ ಅವತಾರವುಳ್ಳ ಸುಹೋತ್ರನೆಂಬ ಮಗನು ಹುಟ್ಟಿದನು.

ಕಾಶೀರಾಜನಿಗೆ ಅಚ್ಚ ಭಾರತೀದೇವಿ ಅವತಾರಳಾದ ಕಾಳೀದೇವಿ ಎಂಬ ಮಗಳಿದ್ದಳು. ಕಾಶೀರಾಜನು ಆಕೆಯ ಸ್ವಯಂವರ ಏರ್ಪಡಿಸಿದಾಗ ಭೀಮಸೇನನು ತನ್ನ ನಿಯತಪತ್ನಿಯ ಪಾಣಿಗ್ರಹಣಕ್ಕಾಗಿ ಸ್ವಯಂವರ ಮಂಟಪಕ್ಕೆ ಬಂದನು. ಆಗ ಭಾರತೀದೇವಿಯ ಆವೇಶವುಳ್ಳ ಕಾಳೀದೇವಿ ಯಾವ ರಾಜರನ್ನು ಕಣ್ಣೆತ್ತಿಯೂ ನೋಡದೆ ಭೀಮಸೇನನಿಗೆ ಮಾಲಾರ್ಪಣ ಮಾಡಿ ನಮಸ್ಕಾರ ಮಾಡಿದಳು.

ಆಗ ರಾಜರೆಲ್ಲರೂ ರಾಜಪುತ್ರಿ ಎಲ್ಲರನ್ನು ತಿರಸ್ಕರಿಸಿ ಭೀಮನಿಗೆ ಮಾಲೆ ಹಾಕಿದ್ದಾಳೆಂದು ಲಗ್ಗೆ ಹಚ್ಚಿದರು. ಅಲ್ಲಿ ನೆರೆದಿದ್ದ ಅನೇಕ ರಾಜರು ಶಿವಭಕ್ತರಾಗಿ ಹರಿಯನ್ನು ನಿಂದಿಸುತ್ತಿದ್ದರು. ತಾವು ಶಿವನನ್ನು ಮೆಚ್ಚಿಸಿ ವರಪಡೆದವರಾದಪ್ರಯುಕ್ತ ತಾವೇ ಶ್ರೇಷ್ಠರು. ಶಿವಭಕ್ತರನ್ನು ತಿರಸ್ಕಾರಮಾಡಿ ಹರಿಯನ್ನು ಉಪಾಸನೆ ಮಾಡುವವನಿಗೆ ಕಾಳೀದೇವಿ ಹಾರ ಹಾಕಿದ್ದು ತಪ್ಪು'' ಎಂದು ವಾದಿಸುತ್ತಿದ್ದರು.

ಆಗ ಭೀಮಸೇನನು ಎಲ್ಲರ ಸದ್ದನ್ನು ಅಡಗಿಸಿ ನೀವು ಹರಿಮಹಿಮೆಯನ್ನು ಅರಿಯದೆ ಸುಮ್ಮನೆ ನಿಂದಿಸುತ್ತಿದ್ದೀರಿ. ಯಾವ ಶಾಸ್ತ್ರವೂ ಹರಿಯನ್ನು ದೂಶಣೆ ಮಾಡಿಲ್ಲ. ಸಕಲಶಾಸ್ತ್ರಗಳೂ ಶ್ರೀನಾರಾಯಣನೇ ಆದಿದೇವನೆಂದು ಸ್ಪಷ್ಟವಾಗಿ ಹೇಳುತ್ತಿದ್ದರೂ ನೀವು ಅಸತ್ಯವನ್ನೇ ಸತ್ಯವೆಂದು ನಂಬಿ ಕೆಡುತ್ತಿದ್ದೀರಿ. ಬೌದ್ಧರು ಅಪ್ರಮಾಣವಾದಿಗಳಾದಾಗ್ಯೂ ನಾರಾಯಣನೇ ಸರ್ವೋತ್ತಮನೆಂದು ನಂಬಿದ್ದಾರೆ. ಚಾರ್ವಾಕ ಮತದವರು ಬೃಹಸ್ಪತಿಯೇ ದೊಡ್ಡವನೆಂದು ತಿಳಿದಾಗ್ಯೂ ಹರಿಸರ್ವೋತ್ತಮನೆಂಬುದನ್ನು ನಂಬಿದ್ದಾರೆ. ಸಕಲವೇದಗಳೂ ಶ್ರೀಹರಿಯೇ ಸರ್ವೋತ್ತಮನೆಂದು ಪ್ರಮಾಣಪೂರ್ವಕವಾಗಿ ಸ್ಪಷ್ಟವಾಗಿ ತಿಳಿಸುತ್ತವೆ. ಆದಾಗ್ಯೂ ನೀವು ಶಿವನೇ ಸರ್ವೋತ್ತಮನೆಂದು ವಾದಿಸುತ್ತಿರುವುದು ನಿಮ್ಮ ಮೂರ್ಖತನದಿಂದ.

ನಿಮಗೆ ಸತ್ಯವಾವುದೆಂದು ಸ್ಪಷ್ಟಪಡಿಸಲಿಕ್ಕಾಗಿ ನಾನು ಪ್ರತ್ಯಕ್ಷವಾಗಿ ಅನುಭವಿಸಿದ ಪ್ರಮಾಣವನ್ನು ನಿಮಗೆ ತಿಳಿಸಿದನಂತರ ನಮ್ಮ ಸಿದ್ಧಾಂತ ಸುಳ್ಳೋ? ನಿಜವೋ? ಎಂದು ನೀವೇ ಹೇಳಿರಿ.

ನಾನು ಒಮ್ಮೆ ಗಂಗಾನದಿಯಲ್ಲಿ ಸ್ನಾನಮಾಡಿ ವಿಷ್ಣುವನ್ನು ಆರಾಧನೆ ಮಾಡುತ್ತಿದ್ದೆನು. ಆಗ ಪ್ರವಾಹದ ಅಲೆಗಳು ಮೇಲೆ ಮೇಲೆ ಬಂದು ಪೂಜೆಗೆ ಅಡ್ಡಿಪಡಿಸುತ್ತಿರಲು, ನಾನು

ನನ್ನ ಎಡಬಾಹುವಿಂದ ಅಲೆಗಳನ್ನು ತಡೆದು ಬಲಗೈಲಿ ಅರ್ಚನೆ ಅಭಿಷೇಕಾದಿಗಳನ್ನು ಮಾಡುತ್ತಿದ್ದೆನು. ಅದನ್ನು ನೋಡಿದ ಗಂಗಾ ತನ್ನ ಸಿರಿಪಾದವನ್ನೇ ನನಗೆ ಜನ್ಮಸ್ಥಾನವನ್ನಾಗಿ ನೀಡಿದ ಕರುಣಾಳುವಿನ ಪೂಜೆಗೆ ನಾನು ಅಡ್ಡಿಪಡಿಸಿದರೆ ಸಕಲದೇವತೆಗಳೂ ನನ್ನನ್ನು ದೂಶಿಸುತ್ತಾರೆ ಎಂದುಕೊಂಡು ತನ್ನ ಸಲಿಲರೂಪವನ್ನು ದೂರಸರಿಸಿದಳು.

ಆಗ ಶಿವನು ನನ್ನನ್ನು ಪರೀಕ್ಷಿಸಲು ತಾನು ಹುಲಿರೂಪವನ್ನು ತಾಳಿ ಪಾರ್ವತಿಯನ್ನು ಹಸುವನ್ನಾಗಿ ಮಾಡಿಕೊಂಡು ನನ್ನ ಮುಂದೆಬಂದು ಹುಲಿ ಆಕಳನ್ನು ತಿನ್ನಲಿಕ್ಕಾಗಿ ಓಡಿಬರುವಂತೆ ಬಂದನು. ಆಗ ಹಸು ನನ್ನ ಮೊರೆಕೇಳಿ ಬಳಿಗೆ ಬಂದುನಿಂತಿತು. ಆಗ ಹುಲಿಯು ಹಸುವನ್ನು ತಿನ್ನಲಿಕ್ಕಾಗದೆ ನನ್ನೊಡನೆ ಯುದ್ಧಕ್ಕೆ ನಿಂತಾಗ ನಾನು ನನ್ನ ದಿವ್ಯಜ್ಞಾನದಿಂದ ಇದು ಪಾರ್ವತಿ ಪರಮೇಶ್ವರರ ಆಟ ಎಂದು ತಿಳಿದು ಹುಲಿಯನ್ನು ಕೊಂದುಹಾಕಿದನು. ಆಗ ಈಶ್ವರನು ನಿಜರೂಪಧರಿಸಿ ಲಜ್ಜೆಯಿಂದ ಲಿಂಗದೊಳಗೆ ಅಲ್ಲೇ ನೆಲಸಿದನು. ಅವನನ್ನು ವ್ಯಾಘ್ರೇಶ್ವರನೆಂದು ಕರೆಯುತ್ತಾರೆ. ಇನ್ನು ಒಂದು ಬಾರಿ ಶಿವನು ಸಿಂಹರೂಪದಿಂದ ಬಂದು ಗೋಮತೀತೀರದಲ್ಲಿ ಯುದ್ಧ ಮಾಡಿದಾಗಲೂ ನನ್ನಿಂದ ಸೋತು ಲಿಂಗಾಕಾರವನ್ನು ಹೊಂದಿ ಕೇದಾರ ಕ್ಷೇತ್ರದಲ್ಲಿ ನೆಲಸಿದನು. ತನ್ನ ಸೋಲನ್ನು ಭಕ್ತರಿಗೆ ತೋರಿಸಬಾರದೆಂದು ಇಲ್ಲಿ ನನ್ನ ದರ್ಶನಕ್ಕೆ ಬಂದವರು ಜ್ಞಾನಭ್ರಷ್ಠರಾಗಲಿ'' ಎಂದು ಶಾಪವಿತ್ತನು. ಎಂದು ಭೀಮಸೇನನು ಜರಾಸಂಧನ ಮುಂದೆ ಶ್ರೀಹರಿಯ ಪ್ರಧಾನತ್ವವನ್ನು ಹೇಳುತ್ತಿದ್ದರೆ ಜರಾಸಂಧನು ಅವನ ಮೇಲೆ ಯುದ್ಧಕ್ಕೆ ಬಂದಾಗ ಭೀಮನು ಆಗ ಜರಾಸಂಧನ ಹರಿದ್ವೇಶವನ್ನು ಎಲ್ಲರಿಗೂ ತಿಳಿಸಲಿಕ್ಕಾಗಿ ಈ ಜರಾಸಂಧನು ಗಂಗಾದೇವಿ ಶ್ರೀವಿಷ್ಣು ಪಾದೋದ್ಭವಳೆಂದು ಅವಳ ದರ್ಶನ. ಅವಳ ಸ್ಪರ್ಶವನ್ನು ನಿಷೇಧ ಮಾಡಿದ್ದಾನೆ. ಅಷ್ಟೇ ಅಲ್ಲದೆ ಗಂಗಾದೇವಿಯ ಪ್ರವಾಹದ ಶಬ್ದವೂ ತನ್ನ ಕಿವಿ ಕೇಳಿದರೆ ಅಪವಿತ್ರವೆಂದು ಭಾವಿಸಿ ಗಂಗಾ ಹಿಮವತ್ಪರ್ವತದಿಂದ ಕೆಳಗೆ ದುಮುಕುವ ಶಬ್ದ ಕೇಳಬಾರದೆಂದು ಹಗಲಿರುಳೂ ಭೇರಿಯನ್ನು ಬಾರಿಸುತ್ತಲೇ ಇರಬೇಕೆಂದು ಆಜ್ಞೆಮಾಡಿದ್ದಾನೆ. ಇಂತಹ ಹರಿದ್ವೇಶಿ ಈಗ ಹರಿಪಾದೋದಕದಲ್ಲಿ ಬೀಳಲಿ ಎಂದು ಕೈಕಾಲು ಕಟ್ಟಿ ಗಂಗಾಮಡುವಿನೊಳಗೆ ಎಸೆದಾಗ ಗಂಗಾದೇವಿ ತನ್ನ ಪಾವಿತ್ರ್ಯವನ್ನು ಆ ಪಾಪಿಗೆ ಸೋಂಕಿಸದಂತೆ ತಮಸ್ಸಿನ ದುಃಖವನ್ನೇ ಕೊಟ್ಟು ಬೆಂಕಿಯ ರಾಶಿಯಲ್ಲಿ ಬಿದ್ದು ಸುಡುವಂತೆ ಅವನಿಗೆ ಉರಿಬೇಗೆಯನ್ನು ಕೊಡುತ್ತಿದ್ದಳು.

ಗಂಗಾಸ್ನಾನ ಮಾಡಿದವರಿಗೆ ಮೋಕ್ಷವೆಂದು ತಿಳಿದು ಗಂಗಾಸ್ನಾನ ಮಾಡುತ್ತಾರೆ. ಆದರೆ ಅದನ್ನು ವಿಷ್ಣುಪಾದೋದಕವೆಂಬ ಜ್ಞಾನದಿಂದ ಶಿವನ ಅಂತರ್ಗತನಾದ ವಿಷ್ಣುವಿನ ಸರ್ವೋತ್ತಮತ್ವವನ್ನು ತಿಳಿದು ಪೂಜಿಸಿದಾಗ ಈಶ್ವರನು ಅನುಗ್ರಹ ಮಾಡುತ್ತಾನೆ'' ಎಂದು ಭೀಮಸೇನನು ಹೇಳುತ್ತ ಜರಾಸಂಧಾದಿ ದೈತ್ಯರಾಜರನ್ನು ತೆಗಳಿ ಓಡಿಸಿದನು.

## ಅರ್ಜುನನ ಅಮೂಲ್ಯ ಸಾಧನೆ

ದೈತ್ಯ ಸಂಹಾರ ಕಾರ್ಯಕ್ಕೆ ಅನೇಕ ದೇವತಾಪುರುಷರ ಅವತಾರವಾಗಬೇಕಾದ್ದರಿಂದ ದೇವತೆಗಳ ಪ್ರಾರ್ಥನೆಯಂತೆ ಭಗವತ್ಸೇವಾ ಸಾಧನ ಮಾಡಿಸಬೇಕೆಂಬ ಕರುಣದಿಂದ ಬ್ರಹ್ಮದೇವರು ನಾರದರನ್ನು ಕುರಿತು ''ನೀನು ಪಾಂಡವರ ಬಳಿಗೆ ಹೋಗಿ ಸಕಲಧರ್ಮರಹಸ್ಯವನ್ನು ಅವರು ತಿಳಿದವರಾದರೂ ಮುಂದಿನ ಭೂಭೂರಹರಣಕಾರ್ಯಕ್ಕಾಗಿ ಅವರಿಗೆ ಧರ್ಮಸೂಕ್ಷ್ಮಗಳನ್ನು ತಿಳಿಸಿ ಬಾ'' ಎಂದು ಹೇಳಿಕಳುಹಿಸಿದರು.

ನಾರದರು ಪಾಂಡವರ ಬಳಿಗೆ ಬಂದು ''ಧರ್ಮರಾಜಾ! ನೀವು ವಿವಾಹವಾಗಿರುವ ದ್ರೌಪದಿ ಪಂಚಾಂಶಸಂಭೂತಳಾಗಿ ನೀವು ಐದು ಜನರನ್ನು ಒಂದೊಂದು ರೂಪದಿಂದ ವರಿಸಿದರೂ ದ್ರೌಪದಿಯು ಮಹಾರೂಪಸಿರಿ ಆಗಿದ್ದಾಳೆ. ಆದ್ದರಿಂದ ಕಾಲದೇಶಾನುಸಾರವಾಗಿ ನಿಮಗೆ ಏನಾದರೂ ಒಂದು ವಿಷಯಕ್ಕೆ ಮನಸ್ತಾಪ ಬರುವುದು ದೊಡ್ಡಮಾತಲ್ಲ.

ಹಿಂದೆ ಸುಂದೋಪಸುಂದರಿಬ್ಬರೂ ಮಹಾ ಐಕ್ಯಕ ದೇಹ ನ್ಯಾಯದಿಂದ ಪ್ರೀತಿಪಾತ್ರ ಸಹೋದರರಾಗಿದ್ದರೂ ಒಂದು ಹೆಣ್ಣಿಗಾಗಿ ದೊಡ್ಡಯುದ್ಧವೇ ಸಂಭವಿಸುವಂತಾಯಿತು. ಆದ್ದರಿಂದ ನೀವು ನಿಮ್ಮನಿಮ್ಮಲ್ಲಿ ವೈಮನಸ್ಸಿಗೆ ಅವಕಾಶವಿಲ್ಲದಂತೆ ಒಂದು ನಿಯಮವನ್ನು ಮಾಡಿಕೊಂಡು ನಡೆದರೆ ಶುಭವೇ ಆಗುತ್ತದೆಂದು ಬ್ರಹ್ಮದೇವರು ನಿಮಗೆ ಸಂದೇಶ ಕಳುಹಿಸಿದ್ದಾರೆ'' ಎಂದು ತಿಳಿಸಿದರು.

ಧರ್ಮರಾಜನು ಬ್ರಹ್ಮದೇವರ ಆಜ್ಞೆಯಂತೆ ಒಂದು ವರ್ಷ ದ್ರೌಪದಿಯೊಡನೆ ಒಬ್ಬರೇ ವಿಹಾರಸುಖವನ್ನು ಅನುಭವಿಸಬೇಕೆಂದೂ ಆ ಸಮಯದಲ್ಲಿ ಉಳಿದ ನಾಲ್ವರಲ್ಲಿ ಯಾರೂ ಅವರ ಏಕಾಂತವನ್ನು ನೋಡಲೂ ಬಾರದೆಂದೂ ಅಕಸ್ಮಾತ್ತಾಗಿ ನೋಡಿದರೆ ಒಂದು ವರ್ಷದವರೆಗೂ ತೀರ್ಥಯಾತ್ರೆಯ ಸಂಚಾರಮಾಡಿ ಬರಬೇಕೆಂದೂ ನಿಯಮವನ್ನು ಮಾಡಿಕೊಂಡಿರುವಂತೆ ಸಹೋದರರೆಲ್ಲರಿಗೂ ಹೇಳಿ ಐದುಜನರೂ ವ್ರತದೀಕ್ಷೆ ಹೊತ್ತವರಂತೆ ನಡೆಯುತ್ತಿದ್ದರು. ಹೀಗಿರಲು ಒಂದುದಿನ ಧರ್ಮರಾಜನು ಏಕಾಂತದಲ್ಲಿರುವಾಗ ಒಬ್ಬ ಬ್ರಾಹ್ಮಣನು ಅರ್ಜುನನನ್ನು ಕುರಿತು ನನ್ನ ಆಕಳನ್ನು ಕಳ್ಳ ಅಪಹರಿಸಿಕೊಂಡು ಹೋಗಿದ್ದಾನೆ ಕರು ತಾಯಿಗಾಗಿ ಒಂದೇ ಸಮನೆ ಕಿರುಚಾಡುತ್ತಿದೆ. ಕರು ಉಪವಾಸದಿಂದಿರುವಾಗ ನಾವು ಭೋಜನಾದಿಗಳನ್ನು ಮಾಡುವಂತಿಲ್ಲವಾದ್ದರಿಂದ ಅನೇಕ ಬ್ರಾಹ್ಮಣರು ಉಪವಾಸದಿಂದಿದ್ದಾರೆ. ತಾವು ಕಳುವಾದ ಹಸುವನ್ನು ಹುಡುಕಿಸಿ ಕೊಡಬೇಕು'' ಎಂದು ಕೇಳಿಕೊಂಡನು. ಕೂಡಲೇ ಗೋಬ್ರಾಹ್ಮಣರ ರಕ್ಷಣೆಗಾಗಿ ಅಣ್ಣನ ಅಪ್ಪಣೆಪಡೆದು ಬರಲು ಅರಸನ ಅಂತಃಪುರದೊಳಗೆ ಪ್ರವೇಶ ಮಾಡಿದನು. ಆಗ ಧರ್ಮರಾಜನು ದ್ರೌಪದಿಯೊಡನೆ ಏಕಾಂತದಲ್ಲಿದ್ದ ಪ್ರಯುಕ್ತ ನಿಯಮ ವಿರುದ್ಧದ ಪಾಪಪ್ರಾಯಶ್ಚಿತ್ತಕ್ಕಾಗಿ ತೀರ್ಥಯಾತ್ರೆಗೆ ಹೋಗುವ ಸಂಕಲ್ಪಮಾಡಿ ಕಳುವಾದ ಹಸುವನ್ನು ತಂದು ಬ್ರಾಹ್ಮಣರಿಗೆ ಒಪ್ಪಿಸಿ ತೀರ್ಥಯಾತ್ರೆಗೆ ಹೊರಟನು.

## ಸರ್ಪಪುತ್ರಿಯ ಸಂಪರ್ಕ

ತೀರ್ಥಯಾತ್ರೆಯ ಸಂಚಾರದಲ್ಲಿದ್ದಾಗ ಒಮ್ಮೆ ಅರ್ಜುನನು ತೀರ್ಥಸ್ನಾನದಲ್ಲಿರುವಾಗ ಭಗವತ್ಸಂಕಲ್ಪದಂತೆ ಒಂದು ವಿಚಿತ್ರಘಟನೆ ನಡೆಯಿತು. ಉಲೂಪಿ ಎಂಬ ಓರ್ವ ನಾಗಕನ್ನಿಕೆಯು ಇನ್ನೂ ಅಪುತ್ರವತಿ ಆಗಿದ್ದಾಗಲೇ ಪತಿಯನ್ನು ಗರುಡನು ಕೊಂದಿದ್ದರಿಂದ ಪುತ್ರಪ್ರಾಪ್ತಿಗಾಗಿ ತಕ್ಕಪತಿಯಾರೆಂದು ಚಿಂತಿಸುವಾಗ ಅತ್ಯಂತ ಪರಾಕ್ರಮಿಯೂ ಕೀರ್ತಿಶಾಲಿಯೂ ಆದ ಅರ್ಜುನನನ್ನು ನೋಡಿದಳು. ಆಗ ಅರ್ಜುನನಂತಹವನೇ ಆದ ಒಬ್ಬ ಸತ್ಪುತ್ರನನ್ನು ಪಡೆಯಬೇಕೆಂಬ ಇಚ್ಛೆಯಿಂದ ಅವನನ್ನು ತನ್ನ ಲೋಕಕ್ಕೆ ಕರೆದೊಯ್ದು, ನಿನ್ನನ್ನು ವರಿಸಬೇಕೆಂಬ ಅಭಿಲಾಷೆಯಿಂದ ನನ್ನ ಸ್ಥಳಕ್ಕೆ ಕರೆದುಕೊಂಡುಬಂದೆನು. ನನ್ನನ್ನು ವಿವಾಹವಾಗಿ ಒಬ್ಬ ಸತ್ಪುತ್ರನನ್ನು ಕರುಣಿಸು'' ಎಂದು ಬಹುವಿಧವಾಗಿ ಪ್ರಾರ್ಥಿಸಿಕೊಂಡಳು. ಅರ್ಜುನನು ''ನಾನು ತೀರ್ಥಯಾತ್ರೆಯ ಸಂಚಾರಕ್ಕಾಗಿ ಸಂಕಲ್ಪಮಾಡಿ ಹೊರಟಿರುವುದರಿಂದ ನಿಷೇಧಕಾರ್ಯಮಾಡಬಾರದು'' ಎಂದು ಒಪ್ಪಲಿಲ್ಲ. ಆಗ ಉಲೂಪಿ ಎಂಬ ನಾಗಕನ್ನಿಕೆಯು ತಂದೆಯ ಬಳಿ ಗೋಳಾಡಿ ಅರ್ಜುನನನ್ನು ಒಪ್ಪಿಸಲೇಬೇಕೆಂದು ಕೇಳಿಕೊಂಡಳು.

ಆಗ ಅರ್ಜುನನು ಭಗವತ್ಪ್ರೇರಣೆಯಂತೆ ಇವರು ಸರ್ಪಜಾತಿಯವರು. ಇವರಿಗೆ ಭೂಲೋಕದವರಂತೆ ನಿಯಮ ನಿಷೇಧವಿಲ್ಲ. ಆದ್ದರಿಂದ ದೇಶಾನುಸಾರ ಕಾಲಾನುಸಾರವಾಗಿ ಕೇಳುತ್ತಿದ್ದಾರೆ. ಪುತ್ರಾರ್ಥಿಗಳಾಗಿ ಬೇಡುತ್ತಿರುವುದರಿಂದ ಶ್ರೀಶೇಚ್ಛೆಯಂತೆ ನಡೆಯಲೇಬೇಕೆಂದು ಉಲೂಪಿಯನ್ನು ಗಾಂಧರ್ವ ರೀತಿಯಾಗಿ ಸ್ವೀಕರಿಸಿದನು.

ಆಕೆಯಲ್ಲಿ ಇರಾವಂತನೆಂಬ ಪುತ್ರನು ಜನಿಸಿದನು. ಈತನು ಮಂಗಳನ ಅಂಶದಿಂದ ವರುಣನ ಆವೇಶವುಳ್ಳವನಾಗಿ ಜಾತಿಯಲ್ಲಿ ಮಾತೃಪಕ್ಷವನ್ನು ಹೊಂದಿದ್ದರೂ ತಂದೆಯಂತೆ ಬಲ-ಗುಣ-ನೀತಿಗಳುಳ್ಳವನಾಗಿದ್ದನು.

ಅರ್ಜುನನು ತಾನು ಮೊದಲೇ ಪ್ರತಿಜ್ಞೆ ಮಾಡಿದಂತೆ ಇರಾವಂತನೆಂಬ ಮಗನು ಜನಿಸಿದನಂತರ ಮುಂದೆ ಸಂಚಾರಹೊರಟನು.

ಅರ್ಜುನನು ಹೊರಟುಹೋದನಂತರ ಉಲೂಪಿಯ ಬಂಧುಗಳು ''ನೀನು ಪತಿಯನ್ನು ಕಳೆದುಕೊಂಡು ವಿಧವೆಯಾದನಂತರ ಒಂದು ಮಗುವಿಗೆ ತಾಯಿಯಾಗಿರುವ ಕಾರಣ ನೀಚಳಾಗಿರುವಿ. ನಮ್ಮ ಲೋಕದಲ್ಲಿರಲು ನೀನು ಯೋಗ್ಯಳಲ್ಲ ಹೊರಟುಹೋಗು'' ಎಂದು ಹೊರದೂಡಿದರು.

ಆಗ ಉಲೂಪಿಯು ಸ್ವರ್ಗಕ್ಕೆಹೋಗಿ ಸುರಪತಿಗೆ ಶರಣಾಗತಳಾಗಿ ಮೊರೆಹೊಕ್ಕಳು. ಆಗ ದೇವೇಂದ್ರನು ಉಲೂಪಿಗೆ ಅಭಯವಚನದಿಂದ ಸಮಾಧಾನಪಡಿಸಿ ದೇವತಾಸಭೆಯಮುಂದೆ ಅರ್ಜುನನಂತೆ ರೂಪಗುಣಪರಾಕ್ರಮಗಳುಳ್ಳ ಈ ಬಾಲಕನು

ಉಲೂಪಿಯಲ್ಲಿ ಅರ್ಜುನನಿಂದ ಜನಿಸಿದ್ದಾನೆ. ಈತನ ಹೆಸರು 'ಇರಾವಂತ' ಎಂದು ಎಲ್ಲರಿಗೂ ತಿಳಿಸಿ ತಾಯಿಮಗನನ್ನು ಸ್ವರ್ಗಲೋಕದಲ್ಲೇ ಇರಿಸಿಕೊಂಡನು.

## ಚಿತ್ರಾಂಗದಾ ವಿವಾಹ

ನಾಗಲೋಕದಿಂದ ಹೊರಟ ಪಾರ್ಥನು ಪಾಂಡ್ಯದೇಶಕ್ಕೆ ಬಂದನು. ಅಲ್ಲಿ ತ್ವಷ್ಟ್ರುವೆಂಬ ಆದಿತ್ಯನು ಯಮದೇವನ ಆವೇಶವುಳ್ಳವನಾಗಿ ಶೂರಸೇನನೆಂಬ ಹೆಸರಿನ ರಾಜನಾಗಿದ್ದನು. ಆತನಿಗೆ ಶಚೀದೇವಿಯ ಅವತಾರವುಳ್ಳ ತಾರಾದೇವಿಯು ಚಿತ್ರಾಂಗದಾ ಎಂಬ ಹೆಸರಿನ ಮಗಳಿದ್ದಳು.

ತಾರಾದೇವಿಯು ತನ್ನ ಪತಿಯು ಮರಣಹೊಂದಿದ ಬಳಿಕ ಸುಗ್ರೀವನಿಗೆ ಉಪಪತ್ನಿಯಾದ ದೋಶದಿಂದ ಮೂಲಸ್ಥಾನವನ್ನು ಸೇರದೆ ಶೂರಸೇನರಾಜನ ಮಗಳಾಗಿ ಹುಟ್ಟಿದಳು.

ಭಗವತ್ಪ್ರೇರಣೆಯಂತೆ ಚಿತ್ರಾಂಗದೆಯು ತೀರ್ಥಯಾತ್ರೆಯ ಸಂಚಾರದಲ್ಲಿದ್ದ ಅರ್ಜುನನನ್ನು ನೋಡಿದವಳೇ ಮನಸ್ಸಿನಲ್ಲಿ ಆನಂದಹೊಂದಿ ಈತನೇ ತನಗೆ ಪತಿಯಾಗಲು ಯೋಗ್ಯನೆಂದು ಸಂಕಲ್ಪಿಸಿ ತಂದೆಯನ್ನು ಕುರಿತು ನಾನು ಮನಸಾವರಿಸಿರುವ ಈತನನ್ನುಳಿದು ಮತ್ತಾರನ್ನು ನಾನು ಮದುವೆ ಆಗುವುದಿಲ್ಲವೆಂದು ಹಠಹಿಡಿದಳು.

ರಾಜನು ಅರ್ಜುನನನ್ನು ಕುರಿತು ಕುಲಗೋತ್ರಾದಿಗಳನ್ನು ವಿಚಾರಿಸಲು ಹಸ್ತಿನಾವತಿಯ ಪ್ರಸಿದ್ಧ ರಾಜನಾಗಿದ್ದ ಮಧ್ಯಮ ಪಾಂಡವನಾದ ಅರ್ಜುನನೆಂದು ತಿಳಿದು ಅತ್ಯಾನಂದಭರಿತನಾಗಿ ಸಕಲಸಂಪತ್ಸಪನ್ನರಾದ ಚಂದ್ರವಂಶದ ರಸರಕುಲದ ರಾಜಕುಮಾರನೆಂದರೇನು ಸಾಮಾನ್ಯವೇ ಎಂಬ ಹರುಷದಿಂದ, ''ಅರ್ಜುನಾ! ನನ್ನ ಮಗಳಾದ ಚಿತ್ರಾಂಗದೆಯು ನಿನ್ನನ್ನು ಹೊರತು ಮಿಕ್ಕಾರನ್ನು ವಿವಾಹವಾಗುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದಾಳೆ. ಆಕೆಯನ್ನು ವಿವಾಹವಾಗಿ ನಮ್ಮನ್ನು ಧನ್ಯರನ್ನಾಗಿಮಾಡು'' ಎಂದು ಕೇಳಿಕೊಂಡನು.

ಅರ್ಜುನನು ''ಮಹಾರಾಜಾ! ನಾನು ಈಗ ನಿನ್ನ ಪ್ರಾರ್ಥನೆಯಂತೆ ನಿನ್ನ ಮಗಳನ್ನು ವಿವಾಹವಾದರೂ ಒಂದೇ ದಿನ ಇಲ್ಲಿರತಕ್ಕವನು. ಮಾರನೆಯದಿನವೇ ಸಂಚಾರ ಹೊರಡಬೇಕು'' ಎಂದನು.

ಚಿತ್ರಾಂಗದೆಯು ಪೂರ್ವಪಾಪಕರ್ಮದಂತೆ ಒಂದುದಿನ ಮಾತ್ರ ಪತಿಯ ಸಾಮೀಪ್ಯ ಸುಖಸಂತೋಷದಲ್ಲಿದ್ದು ನಂತರ ಪತಿವಿರಹದುಃಖತಪ್ತಳಾದಳು. ವೀರಸೇನರಾಜನ ಪುತ್ರಿ ಚಿತ್ರಾಂಗದೆಯಲ್ಲಿ ಅರ್ಜುನನಿಂದ ಹುಟ್ಟಿದ ಮಗನಿಗೆ ರಾಜನು ಬಭ್ರುವಾಹನನೆಂದು ನಾಮಕರಣಮಾಡಿ ಪುತ್ರಿಕಾಪುತ್ರ ನ್ಯಾಯದಿಂದ ಆ ಮಗುವನ್ನು ತಾನೇ ಸಾಕಿಸಲಹಿ ಲೋಕಪ್ರಖ್ಯಾತನನ್ನಾಗಿ ಮಾಡಿದನು. ಈತನು ಪೂರ್ವದಲ್ಲಿ ದೇವೇಂದ್ರನ ಮಗನಾದ

ಜಯಂತನಾಗಿದ್ದನು. ಈಗ ಕಾಮನ ಆವೇಶದಿಂದ ಅರ್ಜುನನಿಗೆ ಪುತ್ರನಾದನು.

## ಅಪ್ಸರೆಯರಿಗೆ ಅರ್ಜುನನ ಪಾದಸ್ಪರ್ಷದಿಂದ ಪಾಪ ನಿವಾರಣೆ

ಚಿತ್ರಾಂಗದೆಯನ್ನು ವಿವಾಹವಾಗಿ ಮರುದಿನವೇ ಅರ್ಜುನನು ಕನ್ಯಾತೀರ್ಥದ ಬಳಿಗೆ ಬಂದನು. ಅರ್ಜುನನು ಸ್ನಾನಕ್ಕಾಗಿ ಪುಷ್ಕರಣಿಯಲ್ಲಿ ಇಳಿದರೆ ಅಲ್ಲಿ ಆಮೆಗಳು ಅವನ ಕಾಲನ್ನು ಹಿಡಿದು ಸೆಳೆಯತೊಡಗಿದವು. ಅರ್ಜುನನು ಆಗ ಕಾಲನ್ನು ಎತ್ತಿ ಬಲವಾಗಿ ಝಾಡಿಸಲು ಶಾಪಗ್ರಸ್ಥರಾಗಿದ್ದ ಅಪ್ಸರೆಯರು ಶಾಪದಿಂದ ಮುಕ್ತರಾಗಿ ಆಮೆಯ ದೇಹವನ್ನು ತ್ಯಜಿಸಿ ನಿಜರೂಪದಿಂದ ಅರ್ಜುನನಿಗೆ ನಮಸ್ಕಾರಮಾಡಿದರು. ಅರ್ಜುನನು ಆಶ್ಚರ್ಯದಿಂದ ನೀವಾರು? ನೀರಿನಲ್ಲೇಕೆ ಅಡಗಿದ್ದೀರಿ?'' ಎಂದು ಕೇಳಿದನು.

''ರಾಜಕುಮಾರಾ! ನಾವು ಐದುಮಂದಿಯೂ ಅಪ್ಸರೆಯರು. ಒಂದುದಿನ ನಾವು ವನವಿಹಾರದಲ್ಲಿರುವಾಗ ಒಬ್ಬ ತಪಸ್ವಿಯನ್ನು ಕಂಡೆವು. ಆ ಮುನಿಯು ಅನೇಕ ದಿನಗಳಿಂದಲೂ ತಪಸ್ಸಿನ ಸಾಧನೆಯಲ್ಲಿ ದೇಹವನ್ನು ದಂಡಿಸಿ ಕೃಶನಾಗಿದ್ದ ಆ ಮುನಿವರ್ಯನನ್ನು ನೋಡಿ ನಾವು ಅಪಹಾಸ್ಯದಿಂದ ನಕ್ಕೆವು. ಆಗ ಬ್ರಾಹ್ಮಣಪ್ರಿಯನಾದ ಮಹಾವಿಷ್ಣು ಆತನಿಂದ ನಮಗೆ ''ನೀವು ವಿಕಾರ ದೇಹವುಳ್ಳ ಆಮೆಯ ದೇಹವನ್ನು ಹೊಂದಿರಿ'' ಎಂದು ಶಾಪತಟ್ಟುವಂತೆ ಮಾಡಿದನು. ನಾವು ಪಶ್ಚಾತ್ತಾಪದಿಂದ ಆ ತಪಸ್ವಿಗೆ ನಮಸ್ಕಾರ ಮಾಡಿ ಪ್ರಾರ್ಥಿಸಿಕೊಂಡಾಗ ಉತ್ತಮರ ಕೋಪ ಕ್ಷಣಾರ್ಧ ಎನ್ನುವಂತೆ ಮುನಿಯು ಕರುಣದಿಂದ ''ಸುರಸುಂದರಿಯರೇ! ನೀವು ಕೆಲವು ಕಾಲ ಆಮೆಯ ಜನ್ಮಹೊಂದಿ ಜಲವಾಸ ಮಾಡಲೇಬೇಕು. ಆಮೇಲೆ ಒಂದು ದಿನ ಶ್ರೀಕೃಷ್ಣನ ಪರಮಭಕ್ತನಾದ ಪಾರ್ಥನು ನಿಮ್ಮ ವಾಸಸ್ಥಳಕ್ಕೆ ಬರುತ್ತಾನೆ. ಆ ವೈಷ್ಣವಶಿಖಾಮಣಿಯ ಪಾದಸ್ಪರ್ಶವಾದೊಡನೆಯೇ ನಿಮ್ಮ ಶಾಪ ನಿವಾರಣೆ ಆಗುತ್ತದೆ'' ಎಂದು ವಿಶಾಪವಿತ್ತಂತೆ ಈಗ ನಾವು ಪುಣ್ಯಾತ್ಮನಾದ ನಿನ್ನ ಪಾದಸ್ಪರ್ಷದಿಂದ ಪರಿಶುದ್ಧರಾದೆವು.'' ಎಂದು ಹೇಳಿ ಅರ್ಜುನನಿಗೆ ನಮಸ್ಕಾರಮಾಡಿ ತಮ್ಮ ಮೂಲಸ್ಥಾನಕ್ಕೆ ಹೊರಟುಹೋದರು. ಅರ್ಜುನನಿಗೆ ಒಂದೊಂದು ಕ್ಷೇತ್ರದಲ್ಲಿ ಒಂದೊಂದು ಘಟನೆಗಳು ಒದಗಿ ಬಹಳ ಆಶ್ಚರ್ಯವಾಯಿತು. ಇದೆಲ್ಲವೂ ಅಸ್ವತಂತ್ರನಾದ ನನ್ನಿಂದ ನಡೆಯುತ್ತಿಲ್ಲ. ಶ್ರೀಕೃಷ್ಣನು ತಾನು ಅಪರೋಕ್ಷದಲ್ಲಿದ್ದು ನನಗೆ ಪ್ರತ್ಯಕ್ಷವಾದ ಅನೇಕ ಸಮಸ್ಯೆ ಸನ್ನಿವೇಶಗಳನ್ನು ಒದಗಿಸಿ ನಡೆಸುತ್ತಿದ್ದಾನೆಂದುಕೊಂಡು ವಿರಕ್ತಭಾವದಿಂದ ಮುಂದೆನಡೆದನು.

ಈಗ ಶ್ರೀಕೃಷ್ಣನ ದರ್ಶನಮಾಡಿ ಸರ್ವಜ್ಞಮೂರ್ತಿಯಾದ ಅವನ ಮುಂದೆ ನನ್ನ ವೃತ್ತಾಂತವೆಲ್ಲವನ್ನು ತೋಡಿಕೊಳ್ಳಬೇಕು. ಸರ್ವಶ್ರೇಷ್ಠನಾದ ಶ್ರೀಹರಿದರ್ಶನಕ್ಕೆ ಹೋಗುವಾಗ ಲೌಕಿಕ ಸಂಬಂಧವಾದ ಸಕಲವನ್ನೂ ತ್ಯಜಿಸಿ ಪರಿಪೂರ್ಣನ ಪಾದದಲ್ಲೇ ಪೂರ್ಣಭಕ್ತಿಯನ್ನು ನೆಲೆಗೊಳಿಸಬೇಕು. ದೇಹ, ಮನಸ್ಸು ಎಲ್ಲವೂ ಪಾವಿತ್ರ್ಯತೆಯನ್ನವಲಂಬಿಸಬೇಕಾದರೆ

ತ್ರಿದಂಡಸನ್ಯಾಸಿ ಆಗಬೇಕು. ಬ್ರಹ್ಮಚರ್ಯದೀಕ್ಷೆ ವಹಿಸಬೇಕೆಂದು ಸಂಕಲ್ಪಮಾಡಿದನು. ನನಗೆ ಶ್ರೀಕೃಷ್ಣನಿಗಿಂತಲೂ ಅಧಿಕ ಪ್ರಿಯವಸ್ತು ಮತ್ತೊಂದಿಲ್ಲ. ಅವನ ದರ್ಶನಕ್ಕಾಗಿ ಈಗ ನಾನು ಹೊರಟಿರುವುದು ಜ್ಞಾನ-ಭಕ್ತಿ ವೈರಾಗ್ಯವೆಂಬ ಸಂಪತ್ತುಗಳು ನನಗೆ ನಿನ್ನಿಂದಲೇ ಲಭ್ಯವಾಗಿದೆ. ಅದು ಕ್ಷಯವಾಗದಿರಲೆಂದು ಕೇಳಲಿಕ್ಕಾಗಿ ಹೋಗುತ್ತಿದ್ದೇನೆ. ಮತ್ತಾವ ಕಾಮನೆಯಿಂದಲೂ ನಾನು ಹೋಗುತ್ತಿಲ್ಲ ಎಂಬ ಭಾವದಿಂದ ದ್ವಾರಾವತಿಗೆ ಬಂದನು.

ಅರ್ಜುನನು ಅಂತರಂಗದಲ್ಲಿ ಆಡುವ ಶ್ರೀಕೃಷ್ಣ ಸತ್ಯಭಾಮಾದೇವಿಯ ಮುಂದೆ ಒಂದು ಬಾರಿ ನಕ್ಕನು. ಸರ್ವಶಕ್ತಪೂರ್ಣನ ನಗುವೆಂದರೇನು ಸಾಮಾನ್ಯವೇ? ಆ ನಗುವಿನಲ್ಲಿ ಅನಂತ ಅರ್ಥಗಳು ತುಂಬಿದ್ದವು. ಸತ್ಯಭಾಮಾದೇವಿಯವರಿಗೆ ಸ್ವಾಮಿಯ ನಗು ಏನೆಂದು ತಿಳಿಯಿತು. ಆದರೂ ಎಲ್ಲರಿಗೂ ಅಗೋಚರನಾದ ಅನಾದಿ ಮೂರುತಿಯ ಭಾವದ ರಹಸ್ಯವನ್ನು ತಿಳಿಯಲಿಕ್ಕಾಗಿ ''ಸ್ವಾಮೀ! ತಮ್ಮ ನಗುವಿನ ಸಾರಾರ್ಥಸವಿ ನನಗಿಲ್ಲವೇ?'' ಎಂದಳು.

''ಭಾಮಾ! ಏನು ಹೇಳಲಿ? ಪಾಪ ಅರ್ಜುನನಿಂದ ದೇವತೆಗಳ ಅವತಾರವಾಗಲೆಂದು ಅವನನ್ನು ಪ್ರಯೋಗಮಾಡಿದೆನು. ಅವನ ತೀರ್ಥಕ್ಷೇತ್ರ ಪ್ರವಾಸ ಸಂದರ್ಭದಲ್ಲಿ ಸ್ತ್ರೀಸಂಪರ್ಕದ ದೋಶ ತಟ್ಟಿತೆಂದು ಪಶ್ಚಾತ್ತಾಪದಿಂದ ಈಗ ತ್ರಿದಂಡಸನ್ಯಾಸಿಯಾಗಿ ಪಶ್ಚಾತ್ತಾಪದ ಪುಷ್ಪದಿಂದ ನನ್ನನ್ನು ಆರಾಧಿಸಲು ಬಂದಿದ್ದಾನೆ. ಆದರೆ ಇನ್ನು ಅವರಿಂದ ವೀರಮಣಿಗಳ ಸೃಷ್ಟಿ ನಡೆಯಬೇಕೆಂಬ ನನ್ನ ಸಂಕಲ್ಪದಂತೆ ಈಗ ಆ ಸನ್ಯಾಸಿಗೆ ನನ್ನ ತಂಗಿ ಸುಭದ್ರೆಯನ್ನು ಕೊಟ್ಟು ವಿವಾಹ ನಡೆಸುತ್ತೇನೆ'' ಎಂದು ಹೇಳಿದಾಗ ಸತ್ಯಭಾಮಾದೇವಿಗೆ ಸಂತೋಷ ತುಂಬಿಬಂದಿತು. ಲಕ್ಷ್ಮೀನಾರಾಯಣರು ಭಕ್ತನ ಭೇಟಿಗಾಗಿ ಹೊರಟರು.

ಯಾದವರ ಕ್ರೀಡಾಸ್ಥಾನವಾದ ಉದ್ಯಾನವನದಲ್ಲಿ ಅರ್ಜುನನು ತದೇಕಚಿತ್ತದಿಂದ ಶ್ರೀಹರಿ ಧ್ಯಾನಾಸಕ್ತನಾಗಿದ್ದನು. ಭಕ್ತನಕರೆಗೆ ಓಗೊಟ್ಟು ಬಂದ ಕರುಣಾಳು ರೈವತಪರ್ವತದ ಒಂದು ಮರದ ಪೊಟರೆಯಲ್ಲಿ ತಪಸ್ಚರಣೆಯಲ್ಲಿದ್ದ ಅರ್ಜುನನ ಮುಂದೆ ಲಕ್ಷ್ಮೀಸಮೇತನಾಗಿ ಬಂದು ನಿಂತಾಗ ಅರ್ಜುನನ ಹೊರಗಣ್ಣು ತೆರೆಯಿತು. ಮಂಗಳ ಮೂರ್ತಿಯ ಮುಖಕಮಲ ಕಾಣಿಸಿತು. ಆನಂದದ ಆಗಸಕ್ಕೇರಿದ ಅರ್ಜುನನು ಶ್ರೀಲಕ್ಷ್ಮೀನಾರಾಯಣರನ್ನು ಸ್ತೋತ್ರಮಾಡಿ ನಮಸ್ಕಾರಾದಿಗಳಿಂದ ಪಾದಪೂಜೆ ಸಲ್ಲಿಸಿ ಬಿಕ್ಕಿಬಿಕ್ಕಿ ಅಳತೊಡಗಿದನು. ಕೃಷ್ಣನು ನಗುತ್ತ ಅರ್ಜುನನನ್ನು ಸಮಾಧಾನಮಾಡಿ ''ಅರ್ಜುನಾ! ಆಗ ಯಾತ್ರಿಕನಾಗಿ ಕಾಮಿನಿಯರನ್ನು ಪ್ರೀತಿಸಿ ಪುತ್ರರನ್ನು ಪಡೆದೆ. ಈಗ ಕಾವಿಯನ್ನುಟ್ಟು ಕಾಮಿನಿಯನ್ನು ಮೋಹಿಸಿ ಮಗನನ್ನು ಪಡೆಯುವ ಸಂದರ್ಭ ಒದಗಿದೆ'' ಎಂದಾಗ ಅರ್ಜುನನು ಭಯದಿಂದ ''ಕೃಷ್ಣಾ! ಇನ್ನು ಏನೇನು ನನ್ನಿಂದ ಮಾಡಿಸಬೇಕೆಂದಿರುವಿ?'' ಎಂದನು. ''ಪಾರ್ಥಾ! ಅಂಜಬೇಡ. ಸುಭದ್ರ ನಿನಗಾಗಿ ಕಾದಿದ್ದಾಳೆ. ಅವಳನ್ನು ನೀನು ವರಿಸಬೇಕೆಂಬುದೇ ನನ್ನ ಸಂಕಲ್ಪ. ಈಗ ನೀನು

ನಿಜವಾದ ಸನ್ಯಾಸಿಯಾಗಿದ್ದರೂ ಮುಂದಿನಕ್ಷಣದಲ್ಲಿ ಕಳ್ಳಸನ್ಯಾಸಿಯಾಗಬೇಕು. ಇದೆಲ್ಲವೂ ಅಸುರರ ಮಿಥ್ಯಾಜ್ಞಾನಕ್ಕಾಗಿಯೂ ದೈತ್ಯಸಂಹಾರಕ್ಕಾಗಿಯೂ ನಡೆಯತಕ್ಕದ್ದು. ಆದ್ದರಿಂದ ನನ್ನ ಆಜ್ಞೆಯಂತೆ ಕಳ್ಳಸನ್ಯಾಸಿಯಾದರೂ ನಿಶ್ಕಳಂಕಭಾವದಿಂದ ಕಾರ್ಯಸಾಧನೆ ಮಾಡು'' ಎಂದನು.

## ಬಲರಾಮನಿಗೆ ಬೆಲ್ಲದ ವಚನ

ಶ್ರೀಕೃಷ್ಣನು ಅರ್ಜುನನನ್ನು ಕಪಟಸನ್ಯಾಸಪಟ್ಟಕ್ಕೆ ಒಪ್ಪಿಸಿ ಮನೆಗೆ ಬಂದನು. ಬಲರಾಮನನ್ನು ಕುರಿತು ''ಅಣ್ಣಾ! ರೈವತಪರ್ವತಕ್ಕೆ ಒಬ್ಬ ಮಹಾತಪಸ್ವಿ ಬಂದಿದ್ದಾನಂತೆ ಅವನನ್ನು ಕಾಣಲು ಪುರಜನರೆಲ್ಲರೂ ತಂಡತಂಡವಾಗಿ ಹೋಗಿ ಹೊಗಳುತ್ತಿದ್ದಾರೆ. ನಾವೂ ಹೋಗಿ ನೋಡಿಕೊಂಡು ಬರೋಣಬಾ'' ಎಂದನು. ಬಲರಾಮನಿಗೆ ಸನ್ಯಾಸಿಗಳೆಂದರೆ ಬಹಳ ಪೂಜ್ಯಭಾವವಿತ್ತು. ಶ್ರೀಕೃಷ್ಣನ ಸತ್ಯವಚನವೂ ಅವನಿಗೆ ಪರಿಣಾಮಕಾರಿ ಆಯಿತು. ಅನೇಕ ಮಂಗಳದ್ರವ್ಯ ಪೂರ್ಣಕುಂಭದೊಡನೆ ಸನ್ಯಾಸಿಯನ್ನು ಇದಿರ್ಗೊಳ್ಳಲು ಸಂಭ್ರಮದಿಂದ ಹೊರಟನು.

ಬಲರಾಮನು ಯತಿಪೂಜೆ ಮಾಡಿದನು. ಅವನ ತೇಜಸ್ಸನ್ನು ನೋಡಿ ಬಲರಾಮನು ಈ ಸನ್ಯಾಸಿ ನಿಜಕ್ಕೂ ಮಹಾತ್ಮನೇ ಸರಿ ಅಂದುಕೊಂಡನು. ಬಲರಾಮನು ಸನ್ಯಾಸಿಯನ್ನು ಹೊಗಳುತ್ತ ನಮಸ್ಕಾರಾದಿಗಳಿಂದ ಭಕ್ತಿ ತೋರಿಸುವುದನ್ನು ನೋಡಿದ ಅರ್ಜುನನಿಗೆ ಮನಸ್ಸು ಅಳುಕಿತು. ನನಗಿಂತಲೂ ಬಲರಾಮನು ಶ್ರೇಷ್ಠನಾಗಿದ್ದಾನೆ. ನಾನು ಇವನ ನಮಸ್ಕಾರಕ್ಕೆ ಯೋಗ್ಯನಲ್ಲವೆಂಬ ಭಾವದಿಂದ ''ನೀನು ಶ್ರೀಕೃಷ್ಣನಿಗೆ ಜೇಷ್ಠನಾಗಿರುವಿ. ಶೇಷಾವತಾರನು ನಿನ್ನಂತಹ ಮಹಾತ್ಮನಿಂದ ನಾವು ಕಾವಿಯನ್ನುಟ್ಟಮಾತ್ರದಿಂದ ನಮಸ್ಕಾರ ಮಾಡಿಸಿಕೊಳ್ಳಬಾರದು'' ಎಂದನು.

ಬಲರಾಮನು ಅರ್ಜುನನ ಮಾತನ್ನು ಕೇಳಿ ಯತಿವರರು ಅಪರೋಕ್ಷಜ್ಞಾನಿಗಳೆಂದು ತಿಳಿದು ಮತ್ತಷ್ಟು ಭಯಭಕ್ತಿಗಳಿಂದ ಈ ಮಹಾತ್ಮರು ಪುರಪ್ರವೇಶ ಮಾಡಬೇಕೆಂದು ವೈಭವದಿಂದ ಕರೆದುಕೊಂಡು ಹೋದನು. ಯತಿಗಳಿಗೆ ಯೋಗ್ಯವಾದ ವಸ್ತುಗಳಿಂದ ವೈಭವೋಪೇತವಾಗಿ ಪೂಜಾದಿಗಳೆಲ್ಲವೂ ನಡೆದನಂತರ ಬಲರಾಮನು ''ಸ್ವಾಮೀ! ಚಾತುರ್ಮಾಸ್ಯ ಪೂಜೆ ಈಸಲ ನಮ್ಮ ಮನೆಯಲ್ಲೇ ನಡೆಯಬೇಕೆಂಬ ನಮ್ಮ ಆಸೆಯನ್ನು ನೆರವೇರಿಸಿಕೊಡಬೇಕೆಂದು ಕೇಳಿದನು. ಆಗ ಕೃಷ್ಣನು ''ಬಲರಾಮಾ! ಯತಿಗಳ ಸೇವೆಗೆ ಕನ್ಯಾಮಣಿಯೇ ಆಗಬೇಕಂತೆ. ಯಾರನ್ನು ನಿಯಾಮಕ ಮಾಡುವುದು? ಅದೆಲ್ಲವನ್ನು ಯೋಚಿಸಿ ನಂತರ ಸನ್ಯಾಸಿಗೆ ಆಹ್ವಾನಮಾಡು'' ಎಂದನು.

ಬಲರಾಮನು ಅದಕ್ಕೇನು ಯೋಚನೆ ನಮ್ಮ ಸುಭದ್ರಾದೇವಿಯೇ ಸೇವೆಗೆ

ಸಿದ್ಧಳಾಗುತ್ತಾಳೆ'' ಎಂದನು. ಸರ್ವವ್ಯಾಪ್ತನಾದ ಶ್ರೀಕೃಷ್ಣನೇ ಬಲರಾಮನಿಂದ ಆವಾಕ್ಯ ಆಡಿಸಿದ್ದರೂ ಬಲರಾಮನಿಗೆ ಸನ್ಯಾಸಿಯಲ್ಲಿ ಸಂಶಯಬರಬಾರದೆಂಬ ಸಂಕಲ್ಪದಿಂದ ''ಬಲರಾಮಾ! ನಿನಗೆ ಹಿಂದುಮುಂದಿನ ಯೋಚನೆಯಿಲ್ಲ. ಬಹಳ ಸರಳಸ್ವಭಾವ ನಿನ್ನದು. ನಮ್ಮ ಸುಭದ್ರೆ ಮಹಾಚೆಲುವಾಂಗಿ ಆಗಿದ್ದಾಳೆ. ಸನ್ಯಾಸಿಯೋ ಮಹಾರೂಪವಂತ ತೇಜಸ್ವಿ ದೃಢಕಾಯ ಮಂದಹಾಸ ರಸನುಡಿ ರಸಿಕದೃಷ್ಟಿ ಬಂಗಾರಕ್ಕೆ ಕುಂದಣ ಕೆತ್ತಿದಂತೆ ಇರುವಾಗ ನಾಳೆ ಏನಾದರೂ ಅನರ್ಥ ಸಂಭವಿಸಿದರೆ ನಮ್ಮ ಗತಿ ಏನು? ನೀನು ಸನ್ಯಾಸಿಯನ್ನು ಹತ್ತಿರದಲ್ಲೇ ಇರಿಸಿಕೊಂಡು ಹರೆಯದ ಬಾಲಕಿಯನ್ನು ಸೇವೆಗೂ ಇರಿಸುವುದು ನನಗೆ ಸರಿ ಎನಿಸುವುದಿಲ್ಲ.

ನಮ್ಮ ಮನೆ ಹೊರಭಾಗದಲ್ಲಿ ಒಂದು ಕೊಠಡಿಯನ್ನು ಸಿದ್ಧಪಡಿಸಿ ಒಬ್ಬ ಬ್ರಹ್ಮಚಾರಿಯನ್ನೋ ಅಥವಾ ವೃದ್ಧಸ್ತ್ರೀಯನ್ನೋ ಸೇವೆಗಾಗಿ ನಿಯಮಿಸಿದರೆ ಒಳ್ಳೆಯದು'' ಎಂದನು.

ಬಲರಾಮನು ಶ್ರೀಕೃಷ್ಣನ ಮಾಯೆಗೆ ಬಂಧಿತನಾದನು. ''ಕೃಷ್ಣಾ! ನೀನು ಲೌಕಿಕ ವ್ಯವಹಾರದಂತೆ ಮಾತನಾಡುತ್ತಿ. ಯತಿಗಳೆಂದರೆ ಅವರ ಸ್ಥಾನ ಬಹಳ ದೊಡ್ಡದು. ಪೀಠಾಧಿಪತಿಗಳಿಗೆ ಧರ್ಮಪಾಲನೆಯ ದೊಡ್ಡ ಜವಾಬ್ದಾರಿ ಇರುತ್ತದೆ. ಅವರು ಸಕಲ ಸುಖಭೋಗಗಳನ್ನು ಪರಮಾತ್ಮನ ಧ್ಯಾನಾರಾಧನೆಗಳಲ್ಲೇ ಅನುಭವಿಸುವವರಾದ್ದರಿಂದ ಅವರಿಗೆ ಕ್ಷುಲ್ಲಕ ವಿಷಯ ಸುಖದತ್ತ ಎಂದಿಗೂ ಮನಸ್ಸು ಹೋಗುವುದಿಲ್ಲ. ಗುರುನಿಂದನೆ ಮಾಡಿದವರಿಗೆ ಮಹಾನರಕ ಪ್ರಾಪ್ತಿ ಆಗುತ್ತದೆ. ಗುರು-ದೇವರು-ಬ್ರಾಹ್ಮಣರನ್ನು ದೂಶಿಸಿದವರ ಸಹವಾಸವೂ ಮಹಾಪಾಪಕರ ಎಂದು ಧರ್ಮಶಾಸ್ತ್ರ ಹೇಳಿರುವುದರಿಂದ ಗುರುಗಳನ್ನು ನಾವು ನಂಬಲೇಬೇಕು'' ಎಂದನು. ಕೃಷ್ಣನು ''ಅಣ್ಣಾ! ನೀನು ಹಿರಿಯನು. ನಿನಗೆ ಉಪದೇಶ ಮಾಡಬಾರದು. ನಿನಗೆ ಭಗವಂತ ಪ್ರೇರಣೆ ಮಾಡಿದಂತೆ ಮಾಡು'' ಎಂದು ಸಹಜವಾಗಿಯೇ ಹೇಳಿದನು. ಬಲರಾಮನಿಗೆ ಅಜ್ಞಾನವಿಲ್ಲದಿದ್ದರೂ ಶ್ರೀಕೃಷ್ಣನ ಬಂಧಕಶಕ್ತಿ ಅವನನ್ನು ಬಿಡದೆ ಆವರಿಸಿತು.

ನಂತರ ಕೃಷ್ಣನು ಸುಭದ್ರೆಯನ್ನು ಕುರಿತು ''ತಂಗೀ! ನಾನು ಬಲರಾಮನ ಮುಂದೆ ಹೇಳಿದ ಮಾತಿನಿಂದ ನೀನು ಬೇಸರಪಡಬೇಡ. ಉತ್ಸಾಹದಿಂದ ಯತಿಸೇವೆಮಾಡು. ಮುನೀಶ್ವರನನ್ನು ಕಾಯಾ-ವಾಚಾ-ಮನಸಾ ತ್ರಿಕರಣಶುದ್ಧಿಯಿಂದಲೂ ನಂಬಿ ಮನಸಾರ ಸೇವೆಮಾಡಿ ಸಂತೋಷಪಡಿಸು. ನಿನ್ನ ಶುಭೋದಯಕ್ಕೆ ಕಾರಣಕರ್ತನಾದ ಮುನಿದೇವನಲ್ಲಿ ಸಂಶಯಪಡಬೇಡ'' ಎಂದು ರಹಸ್ಯದಲ್ಲಿ ಭದ್ರವಚನದಿಂದ ಹುರಿದುಂಬಿಸಿದನು. ಶ್ರೀಕೃಷ್ಣನು ಸನ್ಯಾಸಿಯ ಸರಿಯಾದ ಸಮಾಚಾರವನ್ನು ದೇವಕಿ ಮತ್ತು ವಸುದೇವರಿಗೆ ತಿಳಿಸಿದ್ದನು. ಸಾತ್ಯಕಿಗೆ ತಿಳಿಸಿದ್ದನು. ಇವರು ಮೂರುಮಂದಿಯನ್ನುಳಿದು ಮಿಕ್ಕಾರಿಗೂ ಸನ್ಯಾಸಿಯ ರಹಸ್ಯ ಅವನ ನಿಜರೂಪ ತಿಳಿದಿರಲಿಲ್ಲ. ಕೆಲವುದಿನಗಳು ಸನ್ಯಾಸಿಯ ಚಾತುರ್ಮಾಸ್ಯಪೂಜೆ ಬಹಳ

ಶ್ರೇಷ್ಠರೀತಿಯಿಂದ ನಡೆಯಿತು. ಹೀಗಿರುವಲ್ಲಿ ಒಂದು ಪರ್ವಕಾಲದಲ್ಲಿ ಶ್ರೀಕೃಷ್ಣ ಬಲರಾಮಾದಿಗಳು ಸಮಸ್ತಯಾದವರೊಡಗೂಡಿ ಪಿಂಡಾರಕ ಕ್ಷೇತ್ರಕ್ಕೆ ಹೊರಟರು. ಅರಮನೆಯಲ್ಲಿ ಕೆಲವುಜನ ಪರಿಚಾರಕರು ಸನ್ಯಾಸಿವರರು ಅವರ ಸೇವೆಗಾಗಿ ಸುಭದ್ರಾದೇವಿ ಮಾತ್ರ ಉಳಿದುಕೊಂಡಿದ್ದರು.

ಪೂಜೆ ಆಯಿತು. ಸುಭದ್ರಾ ಮುನಿದೇವನ ಮುಖವನ್ನು ನೋಡಿದಾಗಲೆಲ್ಲಾ ಅರ್ಜುನನಂತೆ ಕಾಣುತ್ತಿದ್ದುದ್ದರಿಂದ ಇಂದು ಸಂದೇಹ ಪರಿಹಾರ ಮಾಡಿಕೊಳ್ಳಲೇಬೇಕೆಂದು ತಕ್ಕಸಮಯನೋಡಿ ''ಯತೀಶ್ವರರೇ! ತಾವು ದೇಶಸಂಚಾರಿಗಳು. ಎಲ್ಲೆಡೆಗಳಲ್ಲೂ ತಮಗೆ ಮುಖ್ಯಜನಾಂಗದಿಂದ ಸತ್ಕಾರ ಸನ್ಮಾನಗಳು ನಡೆಯುವುದರಿಂದ ನೀವು ಹಸ್ತಿನಾವತಿಯಲ್ಲಿ ಪಾಂಡವರನ್ನು ಭೇಟಿಮಾಡಿದ್ದೀರೆಂದು ಭಾವಿಸಿದ್ದೇನೆ. ಅವರ ಯೋಗಕ್ಷೇಮವನ್ನು ನಿಮ್ಮಿಂದ ತಿಳಿಯಲು ಇಷ್ಟಪಡುತ್ತೇನೆ'' ಎಂದು ಕೇಳಿದಳು.

''ನಿನಗೆ ಅತ್ಯಂತ ಪ್ರೀತಿಪಾತ್ರನೂ ಆನಂದದಾಯಕನೂ ಆದ ಅರ್ಜುನನ ಬಗ್ಗೆ ನೀನು ಕೇಳುವುದಾದರೆ ಆತನು ಶ್ರೀಕೃಷ್ಣನಾಜ್ಞೆಯಂತೆ ವ್ರತದೀಕ್ಷೆಯಿಂದ ತೀರ್ಥ ಸಂಚಾರಕ್ಕೆಂದು ಹೊರಟು ಅನೇಕ ಪುಣ್ಯಕ್ಷೇತ್ರಗಳ ದರ್ಶನ ಪಡೆದು ಕೊನೆಯದಾಗಿ ಒಂದು ಪವಿತ್ರತೀರ್ಥದಲ್ಲಿ ತಪೋನಿರತನಾಗಿ, ಅಲ್ಲಿಂದ ಮುಂದಿನ ಸಾಧನೆಗಾಗಿ ಶ್ರೀಕೃಷ್ಣನಾಜ್ಞೆಗಾಗಿ ಕಾಯುತ್ತಿದ್ದಾನೆ'' ಎಂದನು.

ಸುಭದ್ರಾದೇವಿಗೆ ಆಶ್ಚರ್ಯ, ಆನಂದಗಳು ಒಮ್ಮೆಲೇ ಒಡಮೂಡಿ ''ಮುನಿವರ್ಯಾ! ಅರ್ಜುನನು ಯಾವಕ್ಷೇತ್ರದಲ್ಲಿ ತಪೋನಿರತನಾಗಿದ್ದಾನೆ?'' ಎಂದು ಕುತೂಹಲದಿಂದ ಕೇಳಲು ''ಶೋಭನಾಂಗೀ! ನಿನ್ನ ಅರ್ಜುನ ಶ್ರೀಕೃಷ್ಣನ ಪ್ರಿಯಸಹೋದರಿ ಎನಿಸಿದ ಸುಭದ್ರಾ ಎಂಬ ಕನ್ಯಾತೀರ್ಥದ ಬಳಿ ತಪೋನಿರತನಾಗಿದ್ದಾನೆ. ಈಗ ತಿಳಿಯಿತಾ?'' ಎಂದು ನಕ್ಕನು.

ಸುಭದ್ರಾ ಲಜ್ಜೆಯಿಂದ ತಲೆತಗ್ಗಿಸಿದಳು. ಮನಸ್ಸಿನಲ್ಲಿ ತನ್ನ ಮನೋರಥವನ್ನು ಶ್ರೀಕೃಷ್ಣ ನೆರವೇರಿಸಿದನೆಂದು ನಮಸ್ಕಾರ ಸಲ್ಲಿಸಿದಳು.

ಆಗ ಅರ್ಜುನನು ಮಾತುಮುಂದುವರಿಸಿ ''ಸುಭದ್ರಾ! ವಸುದೇವ ದೇವಕಿಯರು ನಮ್ಮ ವಿವಾಹಕ್ಕೆ ಆತುರದಿಂದ ಕಾಯುತ್ತಿದ್ದಾರೆ. ಶ್ರೀಕೃಷ್ಣನ ಸಂಕಲ್ಪವೂ ಅದೇ ಆಗಿರುತ್ತದೆ. ಈಗ ಉಳಿದಿರುವುದು ನಿನ್ನ ಸಮ್ಮತಿ'' ಎಂದನು. ಆ ಮಾತಿಗೆ ಸುಭದ್ರಾದೇವಿಯು ಗಾಬರಿಯಿಂದ ''ಬಲರಾಮನಿಗೆ ನನ್ನ ನಿನ್ನ ವಿವಾಹ ಇಷ್ಟವಿಲ್ಲ. ಆದ್ದರಿಂದ ಉದ್ಧವ, ಅಕ್ರೂರ-ಕೃತವರ್ಮಾದಿ ಯಾದವವೀರರೆಲ್ಲರೂ ಬಲರಾಮನನ್ನೇ ಅನುಸರಿಸಿ ನಡೆಯುವುದರಿಂದ ಅವರಾರಿಗೂ ಇದು ಇಷ್ಟವಿಲ್ಲ'' ಎಂದು ಹೇಳಿದಳು. ನಾವು ಶ್ರೀಕೃಷ್ಣನ ಆಜ್ಞೆಯಂತೆ ಗಾಂಧರ್ವವಿವಾಹದಿಂದ ನಮ್ಮ ಸ್ಥಳಕ್ಕೆ ಹೊರಟುಹೋಗೋಣ'' ಎಂದನು.

ನಿನ್ನ ಇಷ್ಟವೇ ನನ್ನ ಇಷ್ಟವಾದರೂ ನಮ್ಮ ವಿವಾಹ ಶ್ರೀಕೃಷ್ಣನ ನೇತೃತ್ವದಲ್ಲೇ ನಡೆಯಬೇಕು. ಕೃಷ್ಣ ಪ್ರತ್ಯಕ್ಷವಾಗಿ ನಮ್ಮ ಕಣ್ಮುಂದೆಕಾಣುವಾಗ ನಮ್ಮ ತಂದೆತಾಯಿ ಇಬ್ಬರೂ ಅಳಿಯನ ಕಾಲುತೊಳೆದು ಕನ್ಯಾದಾನ ಮಾಡಿಕೊಡಬೇಕು. ನಾವು ಬಂಧು-ಬಳಗದವರ ಕಣ್ಮರೆಯಲ್ಲಿ ಕಳ್ಳರಂತೆ ವಿವಾಹವಾಗಬಾರದು. ನಮ್ಮ ಬಳಗ ನಿಮ್ಮ ಬಳಗ ಎಲ್ಲರ ಮುಂದೂ ನಮ್ಮ ವಿವಾಹ ವೈಭವದಿಂದ ಸಕಲದೇವತಾಸಾಕ್ಷಿಯಾಗಿ ನಡೆಯಬೇಕು'' ಎಂದಳು.

ಅರ್ಜುನನಿಗೂ ಶ್ರೀಕೃಷ್ಣನ ಸನಿಹ ಸೌಭಾಗ್ಯವೇ ಬೇಕಾಗಿತ್ತು. ಒಂದುಕ್ಷಣ ಹೃನ್ಮಂದಿರದಲ್ಲಿ ವಿಹರಿಸುವ ಕೃಷ್ಣನನ್ನು ಸ್ಮರಿಸಿದಾಗ ಶ್ರೀಕೃಷ್ಣಪ್ರತ್ಯಕ್ಷನಾದನು. ಜೊತೆಯಲ್ಲಿ ವಸುದೇವ ದೇವಕಿಯರೂ ಹಾಜರಾಗಿದ್ದರು. ಶ್ರೀಕೃಷ್ಣನ ಸಂಕಲ್ಪವಾದೊಡನೆಯೇ ದೇವೇಂದ್ರನು ಅವನ ಪರಿವಾರದೊಂದಿಗೆ ದ್ವಾರಕೆಗೆ ಬಂದನು. ಶ್ರೀಕೃಷ್ಣನನ್ನು ನಂಬಿದವರಿಗೆ ಯಾವುದಕ್ಕೆ ಏನು ಕೊರತೆ? ಸಿದ್ಧರು, ಚಾರಣರು, ಗಾಯಕರು, ವಾದ್ಯಗಾರರು ಎಲ್ಲರೂ ದೇವೋತ್ತಮನ ಸಂಕಲ್ಪಮಾತ್ರದಿಂದಲೇ ಬಂದುಸೇರಿದರು. ವೈಭವದಿಂದ ರಾತ್ರೋರಾತ್ರಿಯಲ್ಲೇ ಅರ್ಜುನ ಸುಭದ್ರೆಯರ ವಿವಾಹ ಮಹೋತ್ಸವ ವಿಧಿವತ್ತಾಗಿ ನೆರವೇರಿತು. ನವದಂಪತಿಗಳನ್ನು ತನ್ನ ರಥದಲ್ಲಿ ಕೂಡಿಸಿ ಹಸ್ತಿನಾವತಿಯ ಕಡೆಗೆ ಕಳುಹಿಸಿದ ಕೃಷ್ಣನು ತಂದೆತಾಯಿಗಳೊಡನೆ ಪಿಂಡೋದ್ಧಾರ ಕ್ಷೇತ್ರಕ್ಕೆ ಬಂದು ಸೇರಿದನು. ಶ್ರೀಕೃಷ್ಣನ ಈ ವ್ಯಾಪಾರ ಬಲರಾಮಾದಿಗಳಿಗಾರಿಗೂ ಕಿಂಚಿತ್ತೂ ತಿಳಿಯಲಿಲ್ಲ. ದೇವೇಂದ್ರನು ತನ್ನ ಪರಿವಾರದೊಂದಿಗೆ ಸ್ವರ್ಗಕ್ಕೆ ಹೊರಟುಹೋದನು.

ಅರ್ಜುನ ಸುಭದ್ರೆಯರು ಶ್ರೀಕೃಷ್ಣನ ರಥವೇರಿ ಹೊರಟುಬರುತ್ತಿರುವುದನ್ನು ದ್ವಾರಪಾಲಕರು ನೋಡಿದರೆ ಸನ್ಯಾಸಿ ದೇವೇಂದ್ರನಿಂದ ಉಡುಗೊರೆಪಡೆದ ನವರತ್ನದ ಹಾರಗಳಿಂದಲೂ ವಜ್ರಕಿರೀಟ ಕುಂಡಲಾದಿಗಳಿಂದಲೂ ಎರಡನೇ ದೇವೇಂದ್ರನಂತೆ ವಿರಾಜಿಸುತ್ತ ಸುಭದ್ರೆಯ ಪಕ್ಕದಲ್ಲಿ ಕುಳಿತಿರುವುದನ್ನು ಕಂಡರು. ತಕ್ಷಣ ಯುದ್ಧಸನ್ನಾಹದಿಂದ ವೀರಭಟರುಗಳು ಬಂದು ರಥವನ್ನು ತಡೆದರು. ಅರ್ಜುನನು ತನ್ನ ತೀವ್ರಬಾಣಗಳಿಂದ ಎಲ್ಲರನ್ನು ಓಡಿಸುತ್ತಿದ್ದನು. ಸುಭದ್ರೆಯೇ ಆಗ ಸಾರಥಿ ಆದಳು. ಸುಭದ್ರೆಯ ಸಾರಥ್ಯದ ಚಮತ್ಕಾರವನ್ನು ನೋಡಿ ದೇವತೆಗಳು ಆಶ್ಚರ್ಯಪಟ್ಟರು. ''ಅರ್ಜುನಾ! ಈಗ ನಾವಿಬ್ಬರೂ ಹೊಸದಾಗಿ ಮದುವೆಯಾದ ಶುಭಮುಹೂರ್ತದಲ್ಲಿ ಹೊರಟಿರುವುದರಿಂದ ಅಮಂಗಳ ಕಾರ್ಯ ನಡೆಯಬಾರದು. ಯಾರನ್ನು ಕೊಲ್ಲಬೇಡ'' ಎಂದಳು. ಅರ್ಜುನನು ತನ್ನ ಬಿಲ್ಲುವಿದ್ಯಾಚಾತುರ್ಯದಿಂದ ಯಾರೊಬ್ಬರಿಗೂ ಒಂದು ತೊಟ್ಟು ರಕ್ತ ಕಾಣಿಸದಂತೆ ಬಾಣದ ಭೀಕರ ಬಡಿತದಿಂದ ಭಯಪಟ್ಟು ಓಡುವಂತೆ ಮಾಡಿದನು. ನಂತರ ಊರುಮುಂದೆ ಕಾವಲುಗಾರನಾಗಿದ್ದ ವಿಪುಥ ಎಂಬುವನು ಬಲರಾಮನಿಂದ ನಿಯಾಮಕನಾದವನು. ಈತನು ನಲವತ್ತೊಂಬತ್ತು ಮರುತ್ತರಲ್ಲಿ ಸೌಮ್ಯನೆಂಬ ಮರುತ್ತನಾಗಿದ್ದನು. ಅವನೂ ಅರ್ಜುನನ ಬಾಣಗಳ ರಾಶಿಯಲ್ಲಿ ಮುಚ್ಚಿಹೋದನು. ಆದರೂ ಆತನಿಗೆ ಒಂದು ಸಣ್ಣ ಘಾಯವೂ

ಆಗದಂತೆ ಅರ್ಜುನನು ತನ್ನ ಹಸ್ತಲಾಘವದ ಚಾತುರ್ಯ ತೋರಿಸಿದನು. ಬಾಣವನ್ನು ಚದರಿಸಿಕೊಂಡು ಓಡಿಹೋಗಿ ಶ್ರೀಕೃಷ್ಣಬಲರಾಮನಿಗೆ ಸನ್ಯಾಸಿದೇವನ ಕನ್ಯಾಪಹರಣದ ವೃತ್ತಾಂತವನ್ನು ತಿಳಿಸಿದನು.

ಬಲರಾಮನು ಭಯದಿಂದ ಶ್ರೀಕೃಷ್ಣನೊಡನೆ ದ್ವಾರಕೆಗೆ ಬಂದು ಯತಿಚರ್ಯೆಯನ್ನರಿತು ತಾನೇ ಅಪರಾಧಿಯಂತೆ ತಲೆತಗ್ಗಿಸಿ ಖಿನ್ನವದನನಾಗಿ ಕುಳಿತನು. ಕೃಷ್ಣನು ಅಲ್ಲಿದ್ದ ಕಾವಲುಗಾರರ ಬಾಯಿಂದ ಅರ್ಜುನನ ಸಾಹಸವನ್ನು ಹೇಳಿಸಲಿಕ್ಕಾಗಿ ಏನು ಸನ್ಯಾಸಿಯು ನಮ್ಮ ಸಹೋದರಿಯನ್ನು ಕಳವುಮಾಡಿ ಕರೆದುಕೊಂಡು ಹೋದನೇ? ಇಷ್ಟು ಜನ ವೀರರಿಂದಲೂ ಅವನೊಬ್ಬನನ್ನು ತಡೆಯಲಾಗಲಿಲ್ಲವೇ?'' ಎಂದು ಕೇಳಿದನು.

ಅರ್ಜುನನ ಶರವೇಗ ಸುಭದ್ರೆಯ ಸಾರಥ್ಯ ಸಾಮರ್ಥ್ಯ ಎಲ್ಲವನ್ನೂ ಬಣ್ಣಿಸಿಹೇಳಿ ತಮ್ಮ ದೌರ್ಬಲ್ಯವನ್ನು ಪ್ರಕಟಮಾಡಿದಾಗ ಶ್ರೀಕೃಷ್ಣನು ತನಗೆ ಬಲರಾಮನಿಗಿಂತಲೂ ಅಧಿಕ ದುಃಖವಾಗಿರುವಂತೆ ತೋರ್ಪಡಿಸುತ್ತ ಕುಳಿತನು.

ಕೃಷ್ಣ-ಬಲರಾಮರ ಅಪಾರಚಿಂತೆಯನ್ನು ನೋಡಿದ ಯಾದವವೀರರು ನಾವಿರುವಾಗಲೂ ನಿಮಗೆ ಇಷ್ಟು ಚಿಂತೆಯೆ ಬಲರಾಮಾ! ನಮಗೆ ಆಜ್ಞೆ ಮಾಡು. ಈ ಕ್ಷಣದಲ್ಲೇ ಆ ಸನ್ಯಾಸಿಯನ್ನು ಮುಗಿಸಿ ಸುಭದ್ರೆಯನ್ನು ಸುರಕ್ಷಿತವಾಗಿ ತಂದು ನಿಮಗೊಪ್ಪಿಸುತ್ತೇವೆ'' ಎಂದರು.

ಬಲರಾಮನು ''ಇನ್ನುಮುಂದೆ ಯಾರೂ ನನ್ನನ್ನು ಏನೂ ಕೇಳಬೇಡಿರಿ. ಕೃಷ್ಣನ ಮಾತು ಕೇಳದೆ ನಾನು ಅವನಿಗೆ ವಿರೋಧವಾಗಿ ನಡೆದಿದ್ದರಿಂದಲೇ ನನಗಿಷ್ಟು ದುಃಖ ಒದಗಿತು. ಕೃಷ್ಣ ಹೇಗೆ ಹೇಳುತ್ತಾನೋ ಹಾಗೆ ಮಾಡಿರಿ'' ಎಂದುಬಿಟ್ಟನು.

''ನಾನು ಮೊದಲೇ ಹೇಳಿದೆ. ಅಪರಿಚಿತ ಸನ್ಯಾಸಿಯನ್ನು ಪೂರ್ಣವಾಗಿ ನಂಬಿ ಹತ್ತಿರ ಸೇರಿಸಿಕೊಳ್ಳಬೇಡ'' ಎಂದು ಹೇಳಿದರೂ ಬಲರಾಮ ಕೇಳದೆ ಕನ್ಯಾಮಣಿಯನ್ನು ಕಳ್ಳಸನ್ಯಾಸಿಗೆ ಒಪ್ಪಿಸಿದ. ಅವನು ಕದ್ದುಕೊಂಡು ಹೋದ. ನಾವಿಲ್ಲದಾಗ ವರ-ಕನ್ಯಾ ಇಬ್ಬರೂ ಏಕಭಾವದಿಂದ ಓಡಿಹೋಗಿರುವುದರಿಂದ ನಮ್ಮದೇನೂ ತಪ್ಪಿಲ್ಲ. ನಮ್ಮೆದುರಿಗೇ ಅವನು ಆ ಕೆಲ್ಸಮಾಡಿದ್ದರೆ ನಾವು ಅವನನ್ನು ಎದುರಿಸಲೇಬೇಕಾಗಿತ್ತು. ಅದಲ್ಲದೆ ಸನ್ಯಾಸಿ ವೇಶದಿಂದ ಬಂದವನು ವೀರಪಾರ್ಥನೆಂದು ತಿಳಿಯಿತು. ಅಸಮಾನವೀರ, ಗುಣವಂತ, ರೂಪವಂತ, ಕುಲವೋ ಸಕಲರಾಜರೂ ನಂಟಸ್ಥನಕ್ಕಾಗಿ ಹಂಬಲಿಸುವಂಥ ಕುರುಕುಲ. ಅವನು ನಮಗೆ ತಿಳಿಯದವನೂ ಅಲ್ಲ. ನಮ್ಮ ಸೋದರತ್ತೆಯ ಮಗ. ಸಾಕ್ಷಾತ್ ಶ್ರೀವೇದವ್ಯಾಸರ ಮೊಮ್ಮಗ, ದೇವೇಂದ್ರದ ವರಪುತ್ರ. ಇಂಥ ವರನನ್ನು ನಾವು ಕಾಲಿಗೆಬಿದ್ದು ಕೇಳಬೇಕಾಗಿತ್ತು. ಅವನೇ ಸಂತೋಷದಿಂದ ತಾನೇ ಬಂದು ನಮ್ಮ ಕನ್ಯಾರತ್ನವನ್ನು ವರಿಸಿರುವುದಕ್ಕಿಂತಲೂ ಸಂತೋಷ ಮತ್ತೇನಿದೆ. ಈಗ ನಾವು ಹೋಗಿ ಅರ್ಜುನನೊಡನೆ ಯುದ್ಧಮಾಡಿದರೂ ಗೆಲ್ಲುತ್ತೇವೆಂಬ

ಭರವಸೆ ಇಲ್ಲ. ಸುಭದ್ರೆಯೇ ಸಂತೋಷದಿಂದ ಅವನನ್ನು ಅನುಸರಿಸಿ ಹೋದಮೇಲೆ ನಮಗೇಕೆ ಅರ್ಜುನನ ಮೇಲೆ ದ್ವೇಶ? ಒಂದು ವೇಳೆ ನಾವು ಹಠದಿಂದ ಬಲವಂತಪಡಿಸಿ ಸುಭದ್ರಾನನ್ನು ಬಿಡಿಸಿಕೊಂಡುಬಂದರೂ ಭೇರೆ ಯಾವ ವರನೂ ಅವಳ ಪಾಣಿಗ್ರಹಣಕ್ಕೆ ಒಪ್ಪುವುದಿಲ್ಲ. ಕಾಶೀರಾಜನ ಮಗಳು ಅಂಬಾದೇವಿಗೆ ಉಂಟಾದ ದುಃಖವನ್ನೇ ನಮ್ಮತಂಗಿಯೂ ಅನುಭವಿಸಬೇಕಾಗುತ್ತದೆ. ನನಗೆ ತಿಳಿದಿದ್ದನ್ನು ನಾನು ಹೇಳಿದ್ದೇನೆ. ಇದರ ಮೇಲೆ ನಿಮ್ಮ ಇಷ್ಟ. ಒಟ್ಟಿನಲ್ಲಿ ನನ್ನ ತಂಗಿ ಸುಭದ್ರಾಗೆ ದುಃಖಬರದಂತೆ ನಡೆಯುವುದು ಮುಖ್ಯವಾದದ್ದು'' ಎಂದನು.

ಕೃಷ್ಣನ ಒಂದೊಂದುಮಾತೂ ಯಾದವರಿಗೆ ಮುನ್ನುಗ್ಗದಂತೆ ಮೂಗುದಾರ ಹಾಕಿ ನಿಲ್ಲಿಸಿದಂತಾಯಿತು. ಧೈರ್ಯವಾಗಿ ಯಾರೂ ಮುನ್ನುಗ್ಗದೆ ಕೃಷ್ಣನ ಮಾತು ಮೀರಿದರೆ ಮತ್ತೇನು ವಿಪತ್ಸಂಭವವಿದೆಯೋ ಯಾರಿಗೆ ಗೊತ್ತು? ಎಂದು ಸುಮ್ಮನಾದರು.

## ಇಂದ್ರಪ್ರಸ್ಥದಲ್ಲಿ ಅರ್ಜುನನ ಆಗಮನದ ಆನಂದಸೌರಭ

ಶ್ರೀಕೃಷ್ಣನ ದಿವ್ಯರಥದಲ್ಲಿ ದ್ವಾರಕಾಪುರಿಯಿಂದ ಹೊರಟ ನವದಂಪತಿಗಳು ಸುಖಸಂತೋಷದಿಂದ ಇಂದ್ರಪ್ರಸ್ಥಕ್ಕೆ ಬಂದರು. ಶ್ರೀಕೃಷ್ಣನ ರಥವೆಂದರೇನು ಸಾಮಾನ್ಯವಾದದ್ದೇ? ಶ್ರೀಕೃಷ್ಣ ಸಾನಿಧ್ಯಸಂಪತ್ತು ತುಂಬಿರುವ ರಥವದು ಸುಖವಲ್ಲದೆ ಮತ್ತೇನು?

ಅರ್ಜುನನು ತೀರ್ಥಯಾತ್ರೆ ಮುಗಿಸಿ ಬಂದಿದ್ದಾನೆಂದು ಧರ್ಮರಾಯನು ಸಹೋದರರರೊಂದಿಗೆ ಬಂದು ಅರ್ಜುನನನ್ನು ಇದಿರ್ಗೊಂಡು ಕರೆತಂದು ಉಪಚಾರಮಾಡಿದನು.

ಆಗ ಅರ್ಜುನನು ಸುಭದ್ರಾದೇವಿಗೆ ದೊಡ್ಡವರೆಲ್ಲರಿಗೂ ನಮಸ್ಕಾರಮಾಡುವಂತೆ ಕಣ್ಸನ್ನೆಯಿಂದ ಸೂಚಿಸಿದನು. ದಂಪತಿಗಳಿಬ್ಬರೂ ಹಿರಿಯರಿಗೆ ನಮಸ್ಕಾರ ಮಾಡಿದರು. ಎಲ್ಲರೂ ಏನೂ ಪ್ರಶ್ನೆ ಕೇಳದೆ ಅರ್ಜುನನ ಬಾಯಿಂದ ಬರತಕ್ಕ ಪ್ರಸಂಗಕ್ಕಾಗಿ ಕಾಯುತ್ತಿದ್ದಾಗ ಅರ್ಜುನನು ಒಂದೊಂದು ಘಟನೆಯ ವಿಚಿತ್ರ ಸಂಗತಿಯನ್ನು ಚಾಚೂ ತಪ್ಪದಂತೆ ತಿಳಿಸಿದನು.

ಆಗ ಕುಂತಿ, ಧರ್ಮರಾಜಾದಿಗಳೆಲ್ಲರೂ ''ನಮ್ಮ ಚಿತ್ತವಲ್ಲ. ಎಲ್ಲವೂ ಹರಿಚಿತ್ತದಂತೆ ನಡೆದಿದೆ'' ಎಂದು ಅರ್ಜುನನನ್ನು ಸಮಾಧಾನಪಡಿಸಿ ಸುಭದ್ರೆಯನ್ನು ಕುರಿತು ಸಕಲ ಯೋಗಕ್ಷೇಮವಿಚಾರವನ್ನು ಕೇಳಿ ಎಲ್ಲರೂ ಆನಂದದಿಂದ ಶ್ರೀಕೃಷ್ಣನ ಕರುಣದ ಸಿರಿಗೆ ನಾವೆಷ್ಟು ಸ್ತುತಿಸಿದರೆ ತಾನೇ ಸಾಕಾದೀತು? ಎಂದು ಕೊಂಡಾಡುತ್ತಿದ್ದರು. ದ್ವಾರಕೆಯಲ್ಲಿ ಬಲರಾಮನು ತನ್ನ ಪ್ರಿಯ ಸಹೋದರಿ ಸುಭದ್ರಾಹರಣದಿಂದ ಬಹಳ ಚಿಂತೆಗೊಳಗಾಗಿರಲು

ಕೃಷ್ಣನು ಬಲರಾಮನನ್ನು ಕುರಿತು ಮೆದುಮಾತಿನಿಂದ ಸಮಾಧಾನಪಡಿಸುತ್ತ ''ಅಣ್ಣಾ! ಏನು ಆಗಬೇಕಾಗಿತ್ತೋ ಅದು ಆಗಿಹೋಯಿತು. ಅದಕ್ಕಾಗಿ ಈಗ ನಾವು ಸುಮ್ಮನೆ ಚಿಂತಿಸಿದರೂ ಫಲವಿಲ್ಲ. ಅವರೊಡನೆ ಹೋರಾಟಕ್ಕೆ ಹೋಗುವುದೂ ಸರಿಯಲ್ಲ. ನಮ್ಮ ಹೆಣ್ಣು ಅವರ ಮನೆಗೆ ಸೇರಿರುವಾಗ ಅವರನ್ನು ದ್ವೇಷಿಸಿದರೆ ನಮ್ಮ ತಂಗಿಯ ಸಂತೋಷವನ್ನು ನಾವೇ ಕಿತ್ತುಕೊಂಡಂತೆ ಆಗುತ್ತದೆ.

ನಮಗೂ ನಮ್ಮತಂಗಿಗೂ ಒಳ್ಳೆಯದಾಗಬೇಕಾದರೆ ಮದುವೆಯ ಮಹೋತ್ಸವವನ್ನು ವೈಭವದಿಂದ ನಡೆಸಬೇಕು. ಬೀಗರಿಗೆ ನಮ್ಮಮೇಲೆ ತಪ್ಪುಭಾವನೆ ಉಳಿಯದಂತೆ ಅವರೆಲ್ಲರಿಗೂ ಉಡುಗೊರೆ ಉತ್ಸವಾದಿಗಳಿಂದ ಸಂತೋಷವನ್ನುಂಟುಮಾಡಬೇಕು. ವರನಿಗೆ ನಮ್ಮ ಒಪ್ಪಿಗೆಯನ್ನು ಸೂಚಿಸಲಿಕ್ಕಾಗಿ ವರದಕ್ಷಿಣೆ ವರೋಪಚಾರಗಳಿಂದ ಆದರಿಸಬೇಕು. ಸುಭದ್ರೆಗೆ ಪ್ರೀತಿಯ ವಸ್ತುಗಳೆನಿಸಿದ ಎಲ್ಲವನ್ನೂ ಕೊಡಬೇಕು. ಅವಳ ಆಪ್ತ ಸೇವಕಿಯರು ಸಖಿಯರೆಲ್ಲರನ್ನು ಕರೆದುಕೊಂಡುಹೋಗಿ ಅವಳ ಬಳಿ ಇರಿಸಬೇಕು'' ಎಂದು ಹೇಳಿ ರಥಗಳಲ್ಲಿ ಎಲ್ಲವನ್ನೂ ಸಜ್ಜುಗೊಳಿಸಿ ಇಂದ್ರಪ್ರಸ್ಥಕ್ಕೆ ವೈಭವದಿಂದ ಬಂದು ವಿವಾಹ ಮಹೋತ್ಸವವನ್ನು ಬಹಳ ವೈಭವದಿಂದ ನೆರವೇರಿಸಿ ಬಲರಾಮನ ಕೈಯಿಂದಲೇ ಎಲ್ಲರಿಗೂ ಉಡುಗೊರೆ ಕೊಡಿಸಿದನು.

ಕೆಲವು ದಿನಗಳು ಶ್ರೀಕೃಷ್ಣಬಲರಾಮರು ಪಾಂಡವರೊಂದಿಗೆ ಸಂತೋಷದಿಂದಿದ್ದು ನಂತರ ಸಕಲ ಯಾದವ ಸೇನೆಯೊಂದಿಗೆ ದ್ವಾರಕೆಗೆ ಹೊರಟು ಬಂದರು.

ಇಂದ್ರಪ್ರಸ್ಥದಲ್ಲಿ ಪಾಂಡವರು ರಾಜ್ಯಾಡಳಿತವನ್ನು ಸುವ್ಯವಸ್ಥೆಯಿಂದ ನಡೆಸುತ್ತ ಪ್ರಜಾರಂಜಕರಾಗಿದ್ದರು. ದ್ರೌಪದಿಯಲ್ಲಿ ಪಾಂಡವರೈವರಿಂದ ಐದು ಜನಮಕ್ಕಳಾದರು. ಗಂಧರ್ವರ ಆವೇಶವುಳ್ಳ ಅವರಿಗೆ ಪ್ರತಿವಿಂಧ್ಯ-ಶ್ರುತಸೋಮ ಶ್ರುತಾಖ್ಯಕೀರ್ತಿ-ಶೃತಾನೀಕ-ಶೃತಕ್ರಿಯ ಎಂದು ನಾಮಕರಣ ಮಾಡಿದರು. ಇವರು ಹಿಂದೆ ವಿಶ್ವದೇವತೆಗಳಾಗಿದ್ದರು. ಸುಭದ್ರಾದೇವಿಗೆ ಅಭಿಮನ್ಯು ಹುಟ್ಟಿದನು. ಈತನು ಚಂದ್ರನ ಮಗನಾದ ಬುಧನ ಅಂಶದಿಂದಲೂ ಯಮ-ಮುಖ್ಯಪ್ರಾಣ - ದೇವೇಂದ್ರ- ಅಶ್ವಿನೀದೇವತೆಗಳ - ಅಂಶದಿಂದಲೂ ಅವತರಿಸಿದನು. ಅಭಿಮನ್ಯುವಿಗೆ ಶ್ರೀಕೃಷ್ಣನ ವಿಶೇಷಸನ್ನಿಧಾನವಿತ್ತು. ಪಾಂಡವರ ಆರುಮಂದಿ ಮಕ್ಕಳೂ ಗುಣರೂಪ ಸೌಂದರ್ಯಗಳಲ್ಲಿ ಪ್ರಸಿದ್ಧರಾಗಿ ವಿಷ್ಣುಭಕ್ತರೆನಿಸಿಕೊಂಡು ಜ್ಞಾನಭಕ್ತಿ ವೈರಾಗ್ಯದಿಂದ ವಿರಾಜಿಸುತ್ತಿದ್ದರು.

ಹೀಗೆ ಪಾಂಡವರು ಶ್ರೀಕೃಷ್ಣ ಸನ್ನಿಧಾನ ಸಂಪತ್ತಿನಿಂದ ಸಕಲ ಸೌಭಾಗ್ಯ ಸಂತೃಪ್ತರಾಗಿರುವಾಗ ಕೆಲವು ದಿನಗಳಾದನಂತರ ದ್ವಾರಕಾನಗರದಿಂದ ಶ್ರೀಕೃಷ್ಣ ಸತ್ಯಭಾಮೆಯೊಂದಿಗೆ ಪಾಂಡವರ ಬಳಿಗೆ ಬಂದನು.

ಒಂದುದಿನ ಪಾಂಡವರು ಶ್ರೀಕೃಷ್ಣನೊಡನೆ ಆನಂದದಿಂದಿರುವಾಗ ಕೃಷ್ಣನು ಅರ್ಜುನನನ್ನು ಕುರಿತು ''ಪಾರ್ಥಾ! ಬಿಸಿಲು ಕಾಲವಾದ್ದರಿಂದ ಯಮುನಾತೀರಕ್ಕೆ ಹೋಗಿ ಖಾಂಡವವನದಲ್ಲಿ ವಿಶ್ರಾಂತಿ ತೆಗೆದುಕೊಳ್ಳೋಣವೇ?'' ಎಂದನು. ಯಾವ ವಿಕಾರವೂ ಇಲ್ಲದ ಸರ್ವವ್ಯಾಪ್ತನು ಹೊರಟಾಗ ಅವನನ್ನು ಹಿಂಬಾಲಿಸಿ ಸತ್ಯಭಾಮ-ದ್ರೌಪದಿಯರೂ ಹೊರಟರು. ಖಾಂಡವವನಕ್ಕೆ ಬಂದ ಕೃಷ್ಣನು ''ಅರ್ಜುನಾ! ಇದು ದೇವೇಂದ್ರನ ಉದ್ಯಾನವನ. ಬಹಳ ರಮ್ಯವಾದ ಸ್ಥಳ. ಇದು ಹನ್ನೆರಡು ಯೋಜನ ವಿಸ್ತಾರವಾಗಿದೆ. ದೇವತಾ ವಿಹಾರಕ್ಕೆ ಯೋಗ್ಯ ಉಳ್ಳದ್ದಾಗಿದೆ'' ಎಂದು ಹೇಳುತ್ತಿದ್ದನು.

ಹೀಗೆ ಕೃಷ್ಣಾರ್ಜುನರೂ ದ್ರೌಪದೀ-ಸತ್ಯಭಾಮಾದೇವಿಯರೂ ಉದ್ಯಾನವನದಲ್ಲಿ ವಿಹರಿಸುತ್ತಿದ್ದಾಗ ಅಗ್ನಿಯು ಬ್ರಾಹ್ಮಣರೂಪದಿಂದ ಬಂದು ಶ್ರೀಕೃಷ್ಣನನ್ನು ಭಿಕ್ಷಾಂದೇಹಿ ಎಂದು ಕೇಳಿದನು. ಸರ್ವಜ್ಞಮೂರ್ತಿಗೆ ಅಗ್ನಿ ಬಂದಿರುವ ವಿಷಯ ತಿಳಿದಿತ್ತು. ಆದರೂ ''ಬ್ರಾಹ್ಮಣಾ, ನಿನಗೆ ಚತುರ್ವಿಧಾನ್ನವನ್ನು ಕೊಡುತ್ತೇನೆ ಊಟಮಾಡು'' ಎಂದನು.

ಬ್ರಾಹ್ಮಣನು ''ಕೃಷ್ಣಾ! ನನಗೆ ಬಹಳ ಅಜೀರ್ಣವಾಗಿಬಿಟ್ಟಿದೆ. ಅದರ ನಿವಾರಣೆಗಾಗಿ ಬ್ರಹ್ಮದೇವರನ್ನು ಪ್ರಾರ್ಥಿಸಿಕೊಂಡರೆ ''ಅಗ್ನೀ! ನೀನು ಖಾಂಡವವನವನ್ನು ತಿಂದರೆ ನಿನ್ನ ರೋಗ ನಿವಾರಣೆ ಆಗುತ್ತದೆ'' ಎಂದರು. ನಾನು ಖಾಂಡವವನವನ್ನು ತಿನ್ನಬೇಕೆಂದು ಹೋದಾಗಲೆಲ್ಲಾ ಇಂದ್ರನು ಬಿಡದೆ ವಿಘ್ನಮಾಡುತ್ತಿದ್ದಾನೆ. ಆದ್ದರಿಂದ ನನಗೆ ಖಾಂಡವವನವನ್ನು ಭಂಜಿಸಲು ವಿಘ್ನಬಾರದಂತೆ ಮಾಡು'' ಎಂದನು.

ಅರ್ಜುನನು ಅಗ್ನಿಯ ಮಾತಿಗೆ ನಕ್ಕು, ''ಅಷ್ಟೊಂದು ಊಟ ಏಕೆತಿಂದೆ?'' ಎಂದು ಕೇಳಿದನು. ''ಪಾರ್ಥಾ ಶ್ವೇತರಾಜನು ಎಡಬಿಡದೆ ಒಂದಾದಮೇಲೊಂದು ಯಾಗವನ್ನು ಮಾಡುತ್ತಲೇ ಇದ್ದನು. ಅಂಥ ವಿರಾಮವಿಲ್ಲದ ಯಾಗಕ್ಕೆ ಋತ್ವಿಜರು, ಅಧ್ವರ್ಯರು, ಹೋತ, ಉದ್ಗಾತ ಎಲ್ಲರಿಗೂ ಬಹಳ ಬೇಸರ ಉಂಟಾಗಿ ಯಾರೂ ಯಾಗಕ್ಕೆ ಬರಲಿಲ್ಲ. ಆಗ ಶ್ವೇತರಾಜನು ರುದ್ರನನ್ನು ಕುರಿತು ತಪಸ್ಸು ಮಾಡಿದನು. ರುದ್ರದೇವರು ಪ್ರತ್ಯಕ್ಷರಾಗಿ ''ವರ ಕೇಳು'' ಎಂದರೆ ''ಮಹಾದೇವಾ! ನನ್ನ ಯಾಗಕ್ಕೆ ಯಾವ ದೇವತೆಗಳೂ ಬರುತ್ತಿಲ್ಲ. ಋಷಿಗಳೂ ಬರುತ್ತಿಲ್ಲ. ಯಾಗ ನಿಂತುಹೋಗುವಂತಾಗಿದೆ. ಯಾಗ ಕಾರ್ಯ ನಿಲ್ಲದಂತೆ, ಅನುಗ್ರಹಮಾಡು'' ಎಂದು ಕೇಳಿಕೊಂಡನು. ಆಗ ಶಿವನು ಮಹಾರಾಜಾ! ನೀನು ಪುರೋಹಿತರು-ದೇವತೆಗಳು ಬರದಿದ್ದರೂ ಯಾಗ ನಡೆಯುವಂತೆ ಅಗ್ನಿ ಆರದಂತೆ ತುಪ್ಪವನ್ನು ಹೋಮ ಕುಂಡದಲ್ಲಿ ಸುರಿಯುತ್ತಲೇ ಇರು'' ಎಂದು ಹೇಳಿದನು. ರಾಜನು ಅದೇರೀತಿ ಮಂತ್ರ ಪುನಶ್ಚರಣೆಯಿಲ್ಲದೆ ಸುಮ್ಮನೆ ತುಪ್ಪ ಹಾಕುತ್ತಿದ್ದ ಕಾರಣ ಎಲ್ಲರ ಹವಿಸ್ಸೂ ನನ್ನ ಪಾಲೇ ಆದ್ದರಿಂದ ನನಗೆ ಬಹಳ ಅಜೀರ್ಣವಾಗಿದೆ. ಇದನ್ನು ನಿವಾರಣೆ ಮಾಡಿಕೊಳ್ಳಲು ನನಗೆ ಔಷಧಿ ಖಾಂಡವ ವನವಾಗಿರುವುದರಿಂದ ನೀನು ಅವಕಾಶ ಮಾಡಿಕೊಟ್ಟು ನನ್ನನ್ನು

ರಕ್ಷಿಸು'' ಎಂದನು.

ಅರ್ಜುನನು ಶ್ರೀಕೃಷ್ಣನ ಅಪ್ಪಣೆಯಂತೆ ಅಗ್ನಿಯನ್ನು ಕುರಿತು ''ಅಗ್ನೀ! ನನಗೆ ರಥ-ಧನಸ್ಸು- ಅಕ್ಷಯಬತ್ತಳಿಕೆಗಳನ್ನು ತಂದುಕೊಟ್ಟು ನೀನು ಊಟಕ್ಕೆ ಪ್ರಾರಂಭಮಾಡು. ನಿನ್ನ ಊಟಕ್ಕೆ ಯಾರಾದರೂ ವಿಘ್ನಮಾಡ ಬಂದರೆ ನಾನು ತಡೆಯುತ್ತೇನೆ'' ಎಂದು ಭರವಸೆ ನೀಡಿದನು.

ಆಗ ಅಗ್ನಿಯು ಬದರಿಕಾಶ್ರಮದಿಂದ ಅನೇಕರೂಪಗಳಿಂದ ಬಂದು ಶ್ರೀಕೃಷ್ಣನ ಸೇವೆಗಾಗಿ ಸಿದ್ಧವಾಗಿರುವ ಸುಧರ್ಶನ ಚಕ್ರವನ್ನು ತಂದು ಶ್ರೀಕೃಷ್ಣನಿಗರ್ಪಿಸಿದನು. ಅರ್ಜುನನಿಗೆ ಗಾಂಡೀವ ಧನಸ್ಸನ್ನು ತಂದುಕೊಟ್ಟನು. ಅದು ಬ್ರಹ್ಮದೇವರ ಬಳಿ ಇತ್ತು. ಬ್ರಹ್ಮನು ರುದ್ರನಿಗೆ ಕೊಟ್ಟನು. ರುದ್ರನಿಂದ ಇಂದ್ರನಿಗೆ ಸೇರಿತು. ಇಂದ್ರನಿಂದ ಅದು ಚಂದ್ರನ ಕೈಸೇರಿತು. ಚಂದ್ರನಿಂದ ವರುಣನಿಗೆ ಬಂದಿತು. ವರುಣನಿಂದ ಅಗ್ನಿಯು ಅರ್ಜುನನಿಗೆ ತಂದುಕೊಟ್ಟನು. ಬಿಳೀಕುದುರೆಗಳನ್ನು ಕಟ್ಟಿದ ರಥ-ಅಕ್ಷಯ ಬತ್ತಳಿಕೆಗಳನ್ನೂ ವರುಣನಿಂದ ಪಡೆದು ಅರ್ಜುನನಿಗೆ ತಂದುಕೊಟ್ಟನು.

ಶ್ರೀಕೃಷ್ಣ ಪರಮಾನುಗ್ರಹದಿಂದ ರುದ್ರ-ಇಂದ್ರ-ಚಂದ್ರ ಇವರೆಲ್ಲರ ಅಂಶದಿಂದ ಕೂಡಿದ ಗಾಂಡೀವ ಧನಸ್ಸು ಅರ್ಜುನನಿಗೆ ಪ್ರಾಪ್ತವಾಯಿತು. ಅರ್ಜುನನು ಸರ್ವವ್ಯಾಪ್ತನಾದ ಶ್ರೀಹರಿಯ ವಿಶೇಷಸನ್ನಿಧಿಯಿಂದ ಶೋಭಿಸುವ ಶಸ್ತ್ರಾಸ್ತ್ರಗಳನ್ನು ಹೊಂದಿ ಅಧಿಕಪರಾಕ್ರಮಹೊಂದಿ ಖಾಂಡವವನದ ಮೇಲೆ ಹನ್ನೆರಡು ಯೋಜನದಗಲಕ್ಕೂ ಬಾಣಪಂಜರವನ್ನು ಹೆಣೆದು ಮುಚ್ಚಿಗೆ ಹಾಕಿದನು. ಒಂದು ಹನಿ ನೀರೂ ಬೀಳದಂತೆ ಬಾಣದ ಹೊದಿಕೆಯಿಂದ ಮುಚ್ಚಿದ ನಂತರ ಅಗ್ನಿದೇವನು ಕೃಷ್ಣಾರ್ಜುನರ ಅಪ್ಪಣೆಯಂತೆ ಭುಂಜಿಸಹತ್ತಿದನು.

ಇಂದ್ರನಿಗೆ ಉದ್ಯಾನವನ ಹತ್ತಿಉರಿಯುವುದು ತಿಳಿಯಿತು. ಏನು ಮಾಡಿದರೂ ಅಗ್ನಿ ಉರುವಣಿಸುತ್ತಿದ್ದನು. ಉಗ್ರನಾಗಿ ಮೇಘರಾಜನಿಗೆ ಆಜ್ಞೆಮಾಡಿದ್ದೇ ತಡ ಜಲಪ್ರಳಯದ ಮಳೆಯಧಾರೆ ಆನೆಯ ಸೊಂಡಿಲಿನ ಗಾತ್ರದಲ್ಲಿ ಒಂದೇ ಸಮನೆ ಸುರಿದರೂ ಅಗ್ನಿಗೆ ಕಿಂಚಿತ್ತೂ ಕುಂದಾಗದಂತೆ ಸುಖಭೋಜನ ನಡೆಯುತ್ತಿತ್ತು. ಅರ್ಜುನನು ವಾಯುವ್ಯಾಸ್ತ್ರದಿಂದ ಮೇಘರಾಜನನ್ನು ಅವನ ಪರಿವಾರಸಮೇತ ಓಡಿಸುತ್ತಿದ್ದನು.

ಖಾಂಡವ ವನದಲ್ಲಿ ಅನೇಕ ದೈತ್ಯರು ವಾಸಮಾಡಿಕೊಂಡಿದ್ದರು. ಅಸಂಖ್ಯಾತ ಪಿಶಾಚಿಗಳು ಅಲ್ಲಿ ವಾಸವಾಗಿದ್ದವು. ವಿಧವಿಧದ ನಾಗಸರ್ಪಗಳಿಗೆ ಖಾಂಡವವನ ವಾಸದ ಮನೆಯಾಗಿತ್ತು. ಅವೆಲ್ಲವು ಅಗ್ನಿಜ್ವಾಲೆಗೆ ಅಂಜಿ ಅಪಸ್ವರದಿಂದ ಕೂಗುತ್ತ ಹೊರಗೆ ಓಡಿಬಂದರೆ ಶ್ರೀಕೃಷ್ಣ ತನ್ನ ಚಕ್ರದಿಂದ ಅವುಗಳನ್ನು ಕತ್ತರಿಸಿ ಕೊಲ್ಲುತ್ತಿದ್ದನು. ಮಂದಪಾಲನೆಂಬ ಒಬ್ಬ ತಪಸ್ವಿಯು

ತನಗೆ ಪುತ್ರಭಾಗ್ಯ ಲಭಿಸಲಿಲ್ಲವೆಂಬ ಖೇದದಿಂದ ಪಕ್ಷಿಯ ಜನ್ಮತಾಳಿ ಖಾಂಡವವನದಲ್ಲಿ ಮಕ್ಕಳನ್ನು ಪಡೆದು ತನ್ನ ನಾಲ್ಕು ಮಕ್ಕಳನ್ನು ಹೆಂಡತಿಯ ವಶಕ್ಕೆ ಕೊಟ್ಟು ಅವುಗಳ ರಕ್ಷಣೆಯ ಭಾರವನ್ನು ವಹಿಸಲು ಹೇಳಿ ಖಾಂಡವ ವನದಿಂದ ಹೊರಬಂದರೆ ಅಗ್ನಿಯ ಆಟೋಪವನ್ನು ನೋಡಿ ಭಯದಿಂದ ಅಗ್ನಿಗೆ ನಮಸ್ಕಾರಮಾಡಿ ''ಅಗ್ನಿದೇವಾ! ಯಾವಕಡೆಗೆ ತಮ್ಮ ಪ್ರಯಾಣ?'' ಎಂದನು. ''ಬ್ರಾಹ್ಮಣಾ! ಖಾಂಡವ ವನವನ್ನು ಭಕ್ಷಿಸಲು ಹೋಗುತ್ತಿದ್ದೇನೆ'' ಎಂದನು. ಬ್ರಾಹ್ಮಣನು ಅಗ್ನಿಯನ್ನು ಮೊರೆಹೊಕ್ಕು ''ದೇವಾ! ವನದಲ್ಲಿ ನನ್ನ ನಾಲ್ಕುಮಂದಿ ಮಕ್ಕಳಿದ್ದಾರೆ. ಅವರನ್ನು ತಿನ್ನದೆ ಉಳಿಸಿ ನನಗೆ ಪುತ್ರಭಿಕ್ಷೆ ನೀಡು'' ಎಂದು ಬೇಡಿದನು. ಅಗ್ನಿ ಅವನಿಗೆ ಅಭಯವಿತ್ತು, ವನಕ್ಕೆ ನುಗ್ಗಿ ಭಯಂಕರವಾಗಿ ಜ್ವಲಿಸತೊಡಗಿದನು. ಅಗ್ನಿಯ ತಾಪ ತಾಳಲಾರದೆ ವನ್ಯಮೃಗಪಕ್ಷಿಗಳೆಲ್ಲವೂ ಪ್ರಾಣಭೀತಿಯಿಂದ ಪಾರಾಗಲು ಪರದಾಡುತ್ತಿದ್ದವು. ಆಗ ಶಾಜಪಕ್ಷಿ ನಾಲ್ಕು ಮಕ್ಕಳನ್ನು ಕುರಿತು ''ಬನ್ನಿ ಬೇಗ ಬನ್ನಿ. ಉರಿಯಿಂದ ಉಳಿಯಲು ಪ್ರಯತ್ನ ಪಡೋಣ'' ಎಂದರೆ, ಆ ಹಸುಳೆಗಳಿಗೆ ಉರಿಯಲ್ಲಿ ನುಗ್ಗಿ ಹೋಗುವಷ್ಟು ಧೈರ್ಯ ಬರಲಿಲ್ಲ. ತಾಯಿಪಕ್ಷಿ ಉರಿಯಲ್ಲಿ ನುಗ್ಗಿ ಸುಟ್ಟು ಬೂದಿಯಾಯಿತು.

ಮರಿಗಳು ಅಗ್ನಿದೇವನನ್ನು ಕುರಿತು ''ದೇವಾ! ನಾವು ಅನಾಥರು. ನಮಗೆ ನೀನೇಗತಿ. ಕಾಪಾಡು'' ಎಂದು ಆರ್ತರಾಗಿ ಪ್ರಾರ್ಥಿಸಿದಾಗ ಅಗ್ನಿ ಅಂತರ್ಗರ್ತ ಸ್ವಾಮಿಯು ಅವರನ್ನು ಸುಡದಂತೆ ಸುರಕ್ಷಿತಗೊಳಿಸಿದನು. ಬ್ರಾಹ್ಮಣನಿಗೆ ಅಗ್ನಿ ಕೊಟ್ಟ ಮಾತೂ ಉಳಿಯಿತು.

ತಕ್ಷಕನಿಗೆ ಅಶ್ವಸೇನನೆಂಬ ಮಗನಿದ್ದನು. ಅಗ್ನಿ ವನವನ್ನು ದಹಿಸುವಾಗ ಅಶ್ವಸೇನನ ತಾಯಿ ಮಗುವಿನ ತಲೆಯನ್ನು ಕೆಳಮುಖಮಾಡಿ ಬಾಲವನ್ನು ಮೇಲೆಮಾಡಿಕೊಂಡು ಪ್ರಾಣಭಯದಿಂದ ಓಡುವಾಗ ಅರ್ಜುನನು ಆ ಸರ್ಪದ ಶಿರಚ್ಛೇದನಮಾಡಿದಾಗ ಅಶ್ವಸೇನನ ಬಾಲ ಮಾತ್ರ ತುಂಡಾಯಿತು. ಆಗ ಪುಚ್ಛಹೀನ ಸರ್ಪವನ್ನು ಕೊಲ್ಲಹೊರಟಾಗ ದೇವೇಂದ್ರನು ಅಶ್ವಸೇನನು ನನ್ನ ಮಿತ್ರನಾದ ತಕ್ಷಕನ ಮಗ ಕೊಲ್ಲಬೇಡ ಎಂದು ಹೇಳಿದಂತೆ ಅಶ್ವಸೇನನನ್ನು ಕೊಲ್ಲದೆ ಬಿಟ್ಟುಬಿಟ್ಟನು.

ಅಶ್ವಸೇನನು ಅರ್ಜುನನು ನನ್ನ ಬಾಲವನ್ನು ಕತ್ತರಿಸಿ ಅವಮಾನ ಮಾಡಿದ್ದಾನೆ. ನನ್ನ ತಾಯಿಯನ್ನು ಕೊಂದು ನನಗೆ ದ್ರೋಹಮಾಡಿದ್ದಾನೆ. ಇವನ ಮೇಲೆ ಸೇಡು ತೀರಿಸಿಕೊಳ್ಳಲೇಬೇಕೆಂಬ ಕ್ರೋಧದಿಂದ ಅರ್ಜುನನ ಕಡುವೈರಿಯಾದ ಕರ್ಣನ ಬಾಣದೊಳಗೆ ಸೇರಿದನು. ಕರ್ಣಾರ್ಜುನರಿಗೆ ಒದಗುವ ಕರಾಳ ಕದನಕ್ಕಾಗಿ ಸಮಯ ಕಾಯುತ್ತಲಿದ್ದನು. ನಂತರ ದೈತ್ಯರ ಶಿಲ್ಪಿಕಾರನಾದ ಮಯನು ಅಗ್ನಿಯಿಂದ ಹೊರಬಂದು ಅರ್ಜುನನ ಬಾಣದಿಂದ ತಪ್ಪಿಸಿಕೊಂಡರೂ ಶ್ರೀಕೃಷ್ಣನ ಚಕ್ರದಿಂದ ತಪ್ಪಿಸಿಕೊಳ್ಳಲಾಗುವುದಿಲ್ಲ. ಶ್ರೀಕೃಷ್ಣನು ದೇವತೆಗಳ ಶತೃಗಳನ್ನು ಉಳಿಸುವುದಿಲ್ಲ. ಅವನಭಕ್ತನ ಮೂಲಕ ಶರಣುಹೋದರೆ ಕೃಷ್ಣನ ಶ್ರೀರಕ್ಷೆ ಸಿಗುತ್ತದೆ'' ಎಂಬ ಧ್ಯೇಯವಿಟ್ಟು ಅರ್ಜುನನಿಗೆ ಶರಣಾಗತನಾಗಿ ''ಪ್ರಾಣ ರಕ್ಷಣೆ ಮಾಡು''

ಎಂದು ಕೇಳಿದನು. ಆಗ ಅರ್ಜುನನ ಅಂತರ್ಗತನಾದ ಶ್ರೀಹರಿಯಿಂದ ಅವನಿಗೆ ಪ್ರಾಣರಕ್ಷಣೆ ಲಭಿಸಿತು.

ಮಯಾಸುರನು ''ಅರ್ಜುನಾ! ನನ್ನನ್ನು ಕೊಲ್ಲದೆ ರಕ್ಷಿಸಿರುವಿ. ನಿನಗೆ ನಾನು ಏನಾದರೂ ಪ್ರತ್ಯುಪಕಾರ ಮಾಡಲೇಬೇಕು ಕೇಳು'' ಎಂದನು. ಅರ್ಜುನನು ''ನಾನು ಕೊಲ್ಲಲಿಕ್ಕೆ ಕಾಯಲಿಕ್ಕೆ ಸ್ವತಂತ್ರನಲ್ಲ. ಸರ್ವಸ್ವತಂತ್ರನಾದ ಶ್ರೀಕೃಷ್ಣನನ್ನು ಕೇಳು'' ಎಂದನು.

ಮಯನು ''ಕೃಷ್ಣಾ! ಪಾಂಡವರಿಗೆ ನನ್ನಿಂದ ಏನಾದರೂ ಉಪಕಾರವಾಗುವಂತೆ ನೀನೇ ಅಪ್ಪಣೆಮಾಡು'' ಎಂದನು. ಆಗ ಕೃಷ್ಣನು ''ಮಯಾಸುರಾ! ನೀನು ದೈತ್ಯರ ಬಡಗೀ ಆಗಿರುವಿ. ಪ್ರಸಿದ್ಧ ಕಲಾವಿದನೂ ಆಗಿರುವಿ. ಆದ್ದರಿಂದ ಇಂದ್ರಪ್ರಸ್ಥದ ಮಹಾರಾಜನಾದ ಧರ್ಮರಾಯನಿಗೆ ಒಂದು ಸುಂದರವಾದ ಸಬಾಭವನವನ್ನು ರಚಿಸಿಕೊಡು'' ಎಂದು ಆಜ್ಞೆಮಾಡಿದನು. ಹೀಗೆ ಖಾಂಡವ ದಹನಕಾಲದಲ್ಲಿ ಆರು ಜೀವಿಗಳು ಸಾಯದೆ ಉಳಿದರು. ಮಿಕ್ಕ ಸಮಸ್ತ ಸ್ಥಾವರ ಜಂಗಮಾತ್ಮಕವಾದ ವಸ್ತುಗಳೂ ಅಗ್ನಿಯಲ್ಲಿ ಆಹುತಿ ಆದವು.

ಅಗ್ನಿದೇವನು ಸ್ವಾಮಿಯ ಪರಮಾನುಗ್ರಹದಿಂದ ಅನೇಕ ಗಿಡಮೂಲಿಕೆಗಳನ್ನು ನಾನಾ ಜಾತಿಯ ಪ್ರಾಣಿಗಳೊಳಗಿರುವ ರಸಪಾನಗಳನ್ನು ಸೇವಿಸಿ ಸೌಖ್ಯಹೊಂದಿದನು. ದೇವೇಂದ್ರನು ಶ್ರೀಕೃಷ್ಣನ ವಿಚಿತ್ರಮಹಿಮೆಗೆ ಆನಂದಹೊಂದಿದನು. ''ಕೃಷ್ಣಾ! ಅಗ್ನಿಗೆ ಸುಖವಾಗುವುದರ ಜೊತೆಗೆ ಅರ್ಜುನನಿಗೆ ಕೀರ್ತಿ ಪ್ರಕಾಶವನ್ನು ತುಂಬಿದ ನಿನ್ನ ಕರುಣೆ ಅವರ್ಣನೀಯವಾದದ್ದು. ಅಂದು ಸ್ವರ್ಗದ ಪಾರಿಜಾತವನ್ನು ಭೂಮಂಡಲಕ್ಕಿಳಿಸಿ ನಿನ್ನ ಕರುಣಾಪ್ರಕಾಶ ಜಗತ್ತಿಗೆ ತೋರಿಸಿದಂತೆ ಇಂದು ಸ್ವರ್ಗದ ಸುಖಧಾಮವೆನಿಸಿದ ಖಾಂಡವವನವನ್ನು ಅಗ್ನಿಗೆ ಉಣಬಡಿಸಿ ನಿನ್ನ ಕರುಣದ ಕಡಲನ್ನು ಜಗತ್ತಿನಲ್ಲಿ ಹರಿಸಿರುವಿ'' ಎಂದು ಶ್ರೀಕೃಷ್ಣನನ್ನು ಸ್ತುತಿಸಿ ''ಅರ್ಜುನಾ! ನೀನು ಶ್ರೀಕೃಷ್ಣನ ಕರುಣಾಪಂಜರದಲ್ಲಿ ಅವನಿತ್ತ ಸುಮಧುರ ತತ್ತ್ವಸಾರವನ್ನು ಅನುಭವಿಸುವ ಭಾಗ್ಯವನ್ನು ಪಡೆದಿರುವ ನಿನ್ನ ಪುಣ್ಯಕೆಣೆ ಇಲ್ಲ ಎಂದು ಆನಂದದಿಂದ ಆಲಂಗಿಸಿಕೊಂಡು ಶುಭಾಷಯವನ್ನು ಕೋರಿದನು.

ದೇವೇಂದ್ರನು ದೇವತಾಪರಿವಾರದೊಂದಿಗೆ ತನ್ನ ಸ್ಥಾನಕ್ಕೆ ಹೊರಟು ಹೋದನು. ಧರ್ಮರಾಜನು ಶ್ರೀಕೃಷ್ಣನು ಅರ್ಜುನನಿಂದ ನಡೆಸಿದ ಖಾಂಡವದಹನ ಕಾರ್ಯವನ್ನು ಕೇಳಿ ಭಾಷ್ಪಾನಂದಗೊಂಡು ಲೋಕರಕ್ಷಣೆಗಾಗಿ ಶ್ರೀಕೃಷ್ಣ ತನ್ನ ಭಕ್ತರಿಂದ ನಡೆಸುವ ಅದ್ಭುತಕಾರ್ಯಗಳನ್ನು ನಾವು ನಿರಂತರ ಸ್ಮರಣೆಮಾಡುವ ಭಾಗ್ಯಸ್ಥಿರವಾಗಿರಲಿ'' ಎಂದು ಪ್ರಾರ್ಥಿಸಿಕೊಂಡನು.

ಶ್ರೀಕೃಷ್ಣನಿಂದ ಪ್ರಾಣರಕ್ಷಣೆಪಡೆದ ಮಯಾಸುರನು ಮುಕುಂದನ ಮಹಾದಾಜ್ಞೆಗೆ ಮಹದಾನಂದಪಟ್ಟು ಅತ್ಯಮೂಲ್ಯವಾದ ಸಬಾಮಂಟಪವನ್ನು ರಚಿಸಿ ಸುಂದರ ಭವನವನ್ನು ಧರ್ಮರಾಜನಿಗೆ ಅರ್ಪಿಸಿದನು. ನವರತ್ನ ಖಚಿತವಾದ ಮಯನಿರ್ಮಿತ ಸಭಾಭವನವು

ಶ್ರೀಲಕ್ಷ್ಮೀನಾರಾಯಣರ ನಿವಾಸದಂತಿತ್ತು. ಶ್ರೀಮನ್ನಾರಾಯಣನ ಸನ್ನಿಧಾನವಿದ್ದಲ್ಲಿ ಎಲ್ಲವೂ ಸುಂದರವೇ. ಅಲ್ಲಿ ಅಶುಭ ಅವಲಕ್ಷಣಗಳಿಗೆ ಅವಕಾಶವೇ ಇರುವುದಿಲ್ಲ.

ಹಿಂದೆ ದೇವದಾನವರ ಯುದ್ಧವಾದಾಗ ವಾಯುದೇವರು ಮುಚುಕುಂದನಿಗೆ ಅವನು ದೇವತೆಗಳ ಪಕ್ಷದಲ್ಲಿ ನಿಂತು ಯುದ್ಧಮಾಡುವಾಗ ತಮ್ಮ ಗದೆಯನ್ನು ಕೊಟ್ಟಿದ್ದರು. ಮುಚುಕುಂದರಾಯನು ದೈತ್ಯರನ್ನು ಸೋಲಿಸಿ ದೇವತೆಗಳಿಗೆ ಗೆಲುವು ತಂದುಕೊಟ್ಟು ದೇವತೆಗಳ ಬಳಿ ಸುಖನಿದ್ರೆಯ ವರವನ್ನು ಪಡೆದು ಆಶ್ರಮದಲ್ಲಿ ಗದೆಯೊಂದಿಗೆ ಮಲಗಿದನು. ಆ ಗದೆಯನ್ನು ಮಯಾಸುರನು ನೋಡಿ ಇದು ವಾಯುದೇವರಿಗೆ ಸಲ್ಲತಕ್ಕದ್ದೆಂದು ಅರಿತು ತಂದು ಭೀಮನಿಗೆ ಕೊಟ್ಟನು.

## ಪರಲೋಕನಾಥನ ಲೋಕವಾರ್ತೆ

ಶ್ರೀಕೃಷ್ಣ ಇಂದ್ರಪ್ರಸ್ಥದಲ್ಲಿ ಪಾಂಡವರಿಗೆ ಸಕಲ ಸೌಲಭ್ಯಗಳನ್ನು ಒದಗಿಸಿಕೊಟ್ಟು ಎಲ್ಲರಿಂದಲೂ ಒಪ್ಪಿಗೆಪಡೆದು ದ್ವಾರಕೆಗೆ ಹೊರಟನು. ಜಗದ್ಗುರುವಾದ ಶ್ರೀಕೃಷ್ಣನು ಧರ್ಮದ ಪ್ರಕಾಶ ಲೋಕಕ್ಕೆ ಹರಡಬೇಕೆಂದು ತಾನು ಧರ್ಮಕರ್ಮವನ್ನು ಮಾಡಿ ತೋರಿಸಲಿಕ್ಕಾಗಿ ಒಂದುದಿನ ಸೂರ್ಯಗ್ರಹಣದ ಪರ್ವಕಾಲದಲ್ಲಿ ತನ್ನ ಹದಿನಾರು ಸಹಸ್ರ ನೂರೆಂಟು ಮಂದಿ ಮಡದಿಯರು ಅವರ ಜೊತೆಗೆ ಒಬ್ಬೊಬ್ಬರಲ್ಲೂ ಹುಟ್ಟಿದ ಹತ್ತು ಜನ ಪುತ್ರರು ಒಬ್ಬ ಪುತ್ರಿಯರಷ್ಟು ಮಂದಿಯನ್ನು ಜೊತೆಗೆ ಮೊಮ್ಮಕ್ಕಳು. ತಂದೆ-ತಾಯಿ ಸಕಲ ಯಾದವ ಬಳಗದೊಡನೆ ಕುರುಕ್ಷೇತ್ರಕ್ಕೆ ದ್ವಾರಕೆಯಿಂದ ಬಂದನು. ಕುರುಕ್ಷೇತ್ರಕ್ಕೆ ಶ್ರೀಕೃಷ್ಣ ಬಂದಿದ್ದಾನೆಂದು ತಿಳಿದ ಕುಂತೀದೇವಿಯೂ ತನ್ನ ಮಕ್ಕಳು ಸೊಸೆಯರೊಡಗೂಡಿ ಕೃಷ್ಣನ ಬಳಿಗೆ ಬಂದಳು. ಸಕಲರಾಜರೂ ಬಂದಿಳಿದರು. ಯಶೋದಾ ನಂದಗೋಪರೂ ಸಕಲ ಗೋಪಗೋಪೀ ಜನರೊಡನೆ ಬಂದರು. ಕುರುಕ್ಷೇತ್ರದ ಪುಣ್ಯಕ್ಷೇತ್ರದಲ್ಲಿ ಲಕ್ಷ್ಮೀಪತಿಯ ದರ್ಶನ ಪಡೆದ ಸರ್ವರೂ ಆನಂದದಿಂದ ನಲಿದರು.

ಆಗ ಶ್ರೀಕೃಷ್ಣನು 'ಯಾಗ ಮಾಡಲಿಚ್ಛಿಸಿದ್ದೇನೆ'' ಎಂದು ಹೇಳಿ ವಸುದೇವ ದೇವಕಿಯರ ಕೈಲಿ ಯಾಗಸಂಕಲ್ಪಮಾಡಿಸಿ ಯಾಗದೀಕ್ಷೆ ವಹಿಸಿದನಂತರ ಪರ್ವಕಾಲ ಮುಗಿಯುವುದರೊಳಗೆ ಯಾಗಸಮಾಪ್ತವಾಗಬೇಕೆಂದು ಒಂದೇದಿನಕ್ಕೆ ಲಕ್ಷಯೋಜನ ಓಡುವಂಥ ರಥಕುದುರೆಗಳನ್ನು ಭೀಮಾರ್ಜುನರಿಗೆ ಕೊಟ್ಟು ಮೂರು ಮುಹೂರ್ತದೊಳಗೆ ಭೂಪ್ರದಕ್ಷಣೆ ದಿಗ್ವಿಜಯ ಕಾರ್ಯವನ್ನು ಮುಗಿಸಿಬರುವಂತೆ ಭೀಮಾರ್ಜುನರಲ್ಲಿ ಹೊಕ್ಕು ಮಾಡಿಸಿ ಜರಾಸಂಧಾದಿ ಸಕಲ ವೀರರನ್ನು ಸೋಲಿಸಿ ಕಪ್ಪವನ್ನು ತಂದೊಪ್ಪಿಸುವಂತೆ ತಾನೇ ಅವರಿಂದ ನಡೆಸಿ ಯಜ್ಞಕ್ಕೆ ಪ್ರಾರಂಭಮಾಡಿದ ಶ್ರೀಕೃಷ್ಣನ ಅಪಾರಮಹಿಮಾವಳಿಗಳನ್ನು ವರ್ಣನೆ ಮಾಡಲೇ ಸಾಧ್ಯವಿಲ್ಲ.

## ಅರ್ಜುನನ ಅಜ್ಞಾನ ಕಳೆದ ಕೃಪಾಳು

ಶ್ರೀಕೃಷ್ಣ ಯಜ್ಞದೀಕ್ಷಿತನಾದನು. ಅಜ್ಞಾನಿಗಳಿಗೆ ಮಿಥ್ಯಾಜ್ಞಾನವುಂಟುಮಾಡಲಿಕ್ಕಾಗಿ ಸಜ್ಜನರ ರಕ್ಷಣೆಗಾಗಿ ದೇವೋತ್ತಮನು ಆಶ್ಚರ್ಯಕರವಾದ ಕಾರ್ಯಗಳನ್ನು ಮಾಡಿರುವುದು ಪವಾಡವಲ್ಲ. ಅವನೇ ಸರ್ವಶಕ್ತ ಸಕಲಶಕ್ತಿ ಸ್ವರೂಪನೇ ಕೃಷ್ಣನಾಗಿರುವಾಗ ಅವನು ಹೊಸದಾಗಿ ಏನನ್ನೂ ಪ್ರಯೋಗ ಮಾಡುವುದಿಲ್ಲ. ಅವನ ಇಚ್ಛೆಬಂದಾಗ ತನ್ನಲ್ಲಿರುವ ಮಹಿಮಪ್ರಕಾಶವನ್ನು ಜಗತ್ತಿಗೆ ತೋರಿಸುತ್ತಾನೆ. ಯಾಗಮಂಟಪಕ್ಕೆ 'ತೃಣಾವಹ'ನೆಂಬ ಒಬ್ಬ ಬ್ರಾಹ್ಮಣನು ಬಂದು ಪುತ್ರಶೋಕ ತಪ್ತನಾಗಿ ರೋಧಿಸುತ್ತ ''ಕೃಷ್ಣಾ, ಸ್ವಾಮೀ! ಕರುಣಾಳು, ನನಗೆ ಬಂದೊದಗುವ ವಿಪತ್ತನ್ನು ಸರ್ವಶಕ್ತನಾದ ನೀನು ಪರಿಹಾರ ಮಾಡಬೇಕಲ್ಲದೆ ಅದನ್ನು ಬೇರಾವ ದೇವರೂ ಪರಿಹಾರ ಮಾಡಲಾರರು. ನನ್ನ ಸಂಕಟ ಏನೆಂದರೆ ನನಗೆ ಪುತ್ರಸಂತಾನ ಕೊಟ್ಟ ಭಗವಂತನು ಅದನ್ನು ಉಳಿಸಿಕೊಳ್ಳುವ ಭಾಗ್ಯ ಕೊಡದೆ ಹುಟ್ಟಿದ ಮಗುವನ್ನು ಆ ತಕ್ಷಣವೇ ಕಣ್ಮರೆ ಮಾಡುತ್ತಿದ್ದಾನೆ. ದಿವ್ಯಕಾಂತಿಯುಕ್ತ ಕೂಸು ಜನಿಸುತ್ತದೆ. ಒಂದು ಕ್ಷಣದಲ್ಲೇ ಅದನ್ನು ಯಾವುದೋ ಒಂದು ಮಾಯಾಶಕ್ತಿ ಕೊಂಡೊಯ್ದು ಬಿಡುತ್ತದೆ. ಹೀಗಾಗಿ ನನಗೆ ಹುಟ್ಟಿದ ಮಕ್ಕಳೊಂದೂ ಉಳಿಯುತ್ತಿಲ್ಲ. ನೀನು ಬಂದು ನನ್ನ ಮಗು ಉಳಿಯುವಂತೆ ಮಾಡು'' ಎಂದು ಆರ್ತನಾಗಿ ಪ್ರಾರ್ಥಿಸಿಕೊಂಡನು.

ಅರ್ಜುನನು ಆಗ ತಾನೇ ಸರ್ವಶಕ್ತನಂತೆ ಬ್ರಾಹ್ಮಣನನ್ನು ಕುರಿತು ''ಬ್ರಾಹ್ಮಣವರನೇ! ಚಿಂತಿಸಬೇಡ. ಕೃಷ್ಣನು ಯಜ್ಞದೀಕ್ಷಿತನಾಗಿರುವುದರಿಂದ ನಾನೇ ಬಂದು ನಿನ್ನ ಮಗುವನ್ನು ರಕ್ಷಿಸುತ್ತೇನೆ'' ಎಂದನು.

ಆಗ ಬ್ರಾಹ್ಮಣರು ನಗುತ್ತ ''ಅರ್ಜುನಾ! ನನ್ನ ಮಕ್ಕಳು ನನ್ನ ಕೈ ಸೇರದಂತೆ ಮಾಡಿರುವನು ಭಗವಂತನೇ ಆಗಿರುತ್ತಾನೆ. ಏಕೆಂದರೆ ಸರ್ವವ್ಯಾಪ್ತನೂ ಸರ್ವಶಕ್ತನೂ ಅವನೊಬ್ಬನೇ ಆಗಿರುವುದರಿಂದ ಎಲ್ಲವೂ ಅವನ ಸಂಕಲ್ಪದಂತೆ ಅವರವರ ಕರ್ಮಾನುಗುಣವಾಗಿ ನಡೆಯುವುದರಿಂದ ಅವನೇ ನನ್ನ ದುಃಖನಿವಾರಣೆ ಮಾಡಬೇಕು'' ಎಂದನು.

ಅರ್ಜುನನು ''ಬ್ರಾಹ್ಮಣನೇ ನನ್ನನ್ನು ಅಲ್ಲಗಳೆಯಬೇಡ. ನನ್ನ ಶಕ್ತಿ ಪರಾಕ್ರಮಗಳೂ ಶ್ರೀಕೃಷ್ಣನ ಶಕ್ತಿಯಂತೆಯೇ ಎಂದು ನಂಬಿ ಧೈರ್ಯದಿಂದಿರು'' ಎಂದನು. ಬ್ರಾಹ್ಮಣನು ಒಪ್ಪಲು ''ಕೃಷ್ಣಾ! ನಾನು ಬ್ರಾಹ್ಮಣನ ಮಕ್ಕಳನ್ನು ಅಪಹರಿಸುವ ದುಷ್ಟಶಕ್ತಿಯನ್ನು ಧ್ವಂಸಮಾಡಿ ಬ್ರಾಹ್ಮಣನ ಮಗುವಿಗೆ ರಕ್ಷಣೆ ಕೊಟ್ಟು ಬರುತ್ತೇನೆ'' ಎಂದನು.

ಅರ್ಜುನನು ತನ್ನ ಶಕ್ತಿಗೆ ಮೂಲಸ್ಥಾನ ಯಾವುದೆಂಬುದನ್ನೇ ಮರೆತು ಮಮಕಾರದಿಂದ ಆಡಿದಮಾತಿಗೆ ಕೃಷ್ಣ ಮಂದಹಾಸದಿಂದ ''ಅರ್ಜುನಾ! ನಿನಗೆ ಅಷ್ಟು ಶಕ್ತಿ ಇದ್ದರೆ ಹೋಗಿಬಾ'' ಎಂದನು.

ಅರ್ಜುನನೊಡನೆ ಅನಿರುದ್ಧ, ಪ್ರದ್ಯುಮ್ನಾದಿಗಳು ಹೋಗಬಾರದೆಂದು ಕೃಷ್ಣ ಸೂಚಿಸಿದಂತೆ ಅವರಾರೂ ಹೋಗಲಿಲ್ಲ. ಆಗ ಅರ್ಜುನನು ''ಕೃಷ್ಣಾ! ನಾನು ಯಾರ ಸಹಾಯ ಸಹಕಾರವನ್ನು ಅಪೇಕ್ಷಿಸದೇ ಬ್ರಾಹ್ಮಣನ ಮಗುವನ್ನು ರಕ್ಷಿಸುತ್ತೇನೆ, ಎಂಬ ನನ್ನ ಸಂಕಲ್ಪ ಸುಳ್ಳಾದರೆ ಅಗ್ನಿಪ್ರವೇಶ ಮಾಡುತ್ತೇನೆ'' ಎಂದು ಪ್ರತಿಜ್ಞೆಮಾಡಿ ಹೊರಟನು.

ಬ್ರಾಹ್ಮಣನ ವಾಸದ ಮನೆಯ ಸುತ್ತಲೂ ಅರ್ಜುನನು ಬಾಣಗಳ ಪಂಜರವನ್ನು ಹೆಣೆದು ಸುತ್ತಮುತ್ತಲೂ ಬಾಣದ ಬಲವಾದ ಕೋಟೆಯನ್ನು ಕಟ್ಟಿದನು. ಒಳಗೆ ಒಂದು ಸಣ್ಣಕ್ರಿಮಿಗೂ ಅವಕಾಶವಾಗದಂತೆ ಇತ್ತು. ತಾನು ಆಕಾಶದಿಂದಾಗಲಿ ಪಾತಾಳದಿಂದಾಗಲಿ ಯಾವ ಭೂತಾದಿ ಕ್ಷುಲ್ಲಕಶಕ್ತಿಗಳೂ ಬರದಂತೆ ಧನ್ನಸ್ಸನ್ನು ಹಿಡಿದು ಕಾದುನಿಂತನು.

ಕೆಲವು ವೇಳೆ ಕಳೆದನಂತರ ಶಿಶುಜನನವಾಗಿ ಮಗು ಅತ್ತ ಶಬ್ದ ಕೇಳಿಸಿತು. ಒಳಗೆ ಆನಂದದ ಲಹರಿ ಎದ್ದಿತು. ಅರೆಕ್ಷಣದಲ್ಲೇ ''ಅಯ್ಯೋ! ಮಗು ಕಾಣೆಯಾಯಿತು. ಮಗು ಮಾಯವಾಯಿತು'' ಎಂದು ದೊಡ್ಡರೋಧನ ಧ್ವನಿ ಕೇಳಿಸಿತು. ಪಾರ್ಥ ಹೆದರಿದನು. ಬ್ರಾಹ್ಮಣ ಆವೇಶದಿಂದ ಓಡಿಬಂದು ''ಎಲಾ ಪಾರ್ಥಾ ಪೊಳ್ಳುಪೌರುಷದಿಂದ ನನ್ನನ್ನು ನಂಬಿಸಿ ಅನ್ಯಾಯವಾಗಿ ನನಗೆ ಪುತ್ರಶೋಕ ಉಂಟುಮಾಡಿದ ಪಾಪಿ ನೀನು. ಕೃಷ್ಣ ಬಲರಾಮಾದಿಗಳಂತಹ ಪುರುಷಸಿಂಹಗಳಿರುವಾಗ ನಿನ್ನಂಥ ಅಲ್ಪಶಕ್ತಿಯನ್ನು ನಂಬಿ ಕರೆತಂದಿದ್ದಕ್ಕೆ ನನಗೆ ತಕ್ಕ ಶಿಕ್ಷೆ ಆಯಿತು'' ಎಂದು ಅರ್ಜುನನ ಪರಾಕ್ರಮ ಜೊಳ್ಳೆಂದು ಹೀಯಾಳಿಸಿ ಬೈಯ್ಯತೊಡಗಿದನು.

ಆಗ ಅರ್ಜುನನು ಲಜ್ಜೆಯಿಂದ ಪಶ್ಚಾತ್ತಾಪಪಟ್ಟನು. ಶ್ರೀಕೃಷ್ಣನನ್ನು ಮರೆತು ಮಮಕಾರದಿಂದ ಮಾಡಿದ ಅಪರಾಧಕ್ಕೆ ತಕ್ಕ ಶಿಕ್ಷೆ ಆಯಿತೆಂದು ದುಃಖಪಟ್ಟು, ''ಕೃಷ್ಣಾ! ನನ್ನ ತಪ್ಪಿಗೆ ಪ್ರಾಯಶ್ಚಿತ್ತವೆಂದರೆ ಅಗ್ನಿಪ್ರವೇಶ'' ಎಂದು ಹೇಳಿ ಅಗ್ನಿ ಕುಂಡವನ್ನು ಸಿದ್ಧಪಡಿಸುವಾಗ ಕೃಷ್ಣ ಪ್ರತ್ಯಕ್ಷವಾಗಿ ''ಅರ್ಜುನಾ ತಡೆ ಆತುರ ಪಡಬೇಡ. ಬ್ರಾಹ್ಮಣನ ಮಗುವನ್ನು ತೋರಿಸುತ್ತೇನೆ'' ಎಂದು ಹೇಳಿ ಬ್ರಾಹ್ಮಣನನ್ನು ರಥದಲ್ಲಿ ಕೂಡಿಸಿಕೊಂಡು ಹೊರಟನು. ಸಪ್ತದ್ವೀಪಗಳೂ ಸಪ್ತಸಮುದ್ರಗಳೂ ಶ್ರೀಕೃಷ್ಣನಿಗೆ ದಾರಿಮಾಡಿಕೊಟ್ಟವು. ಹೇಗೆಂದರೆ- ಕೃಷ್ಣನನ್ನು ಹೊರತಾಗಿ ಯಾವುದೂ ಇಲ್ಲ, ಎಲ್ಲಾ ಕೃಷ್ಣಮಯವೇ ಆಗಿರುವಾಗ ಆ ಸ್ವಾಮಿಗೆ ದಾರಿ ಏನು ಬೇಕಾಗಿದೆ? ಗಿರಿಶಿಖರಗಳು, ಸುವರ್ಣಭೂಮಿ, ಸುವರ್ಣ ಭೂಮಿಯನ್ನು ದಾಟಿ, ಲೋಕಾಲೋಕವೆಲ್ಲವನ್ನು ದಾಟಿಹೋದರೆ ಅಂಧಂತಮಸ್ಸು ಕಾರ್ಗತ್ತಲು ಲೋಕ ಕಪ್ಪಿನ ಮೊತ್ತವನ್ನು ಸುದರ್ಶನ ಚಕ್ರದ ಪ್ರಕಾಶ ಕಡಿದು ಛಿದ್ರಪಡಿಸಿತು. ಏಳುಕೋಟಿ ಅಂಧಂತಮಸ್ಸು, ಹದಿನಾಲ್ಕು ಕೋಟಿ ಘನೋದಕಗಳನ್ನು ದಾಟಿ ಅನಂತಾಸನದ ಸಮೀಪಕ್ಕೆ ಹೋದನು. ಅಮುಕ್ತ ಸ್ಥಳದಲ್ಲಿ ರಥವನ್ನು ನಿಲ್ಲಿಸಿ ತಾನು ಮುಕ್ತ ಸ್ಥಳಕ್ಕೆ ಹೋದನು. ಅಲ್ಲಿ ಮೂಲನಾರಾಯಣನು ಎಂಟು ಭುಜಗಳುಳ್ಳವನಾಗಿ ಸರ್ವಭೂಷಣಗಳಿಂದಲೂ

ವಿರಾಜಮಾನನಾದ ಜ್ಞಾನಾನಂದ ಸ್ವರೂಪನಾದ ಸ್ವಾಮಿಯು ಶೇಷಮಂಚದ ಮೇಲೆ ಮಲಗಿದ್ದರೆ ಲಕ್ಷ್ಮೀದೇವಿಯರು ಸೇವೆಮಾಡುತ್ತಿದ್ದರು. ಮುಕ್ತ ಬ್ರಹ್ಮರುಗಳು ಸ್ತೋತ್ರ ಮಾಡುತ್ತಿದ್ದರು. ಆಗ ಮೂಲನಾರಾಯಣನೂ ಕೃಷ್ಣನೂ ಒಂದೇ ರೂಪದಿಂದ ಕಂಡರು. ಭಗವಂತನ ಭವ್ಯಮಹಿಮೆಯನ್ನು ಸರಿಯಾಗಿ ತಿಳಿಯಬೇಕಾದರೆ ಬಹಳ ಜನ್ಮಗಳ ತಪಸ್ಸಾಧನೆ ಇದ್ದರೆ ಮಾತ್ರ ಸಾಧ್ಯವಾಗುತ್ತದೆ. ಒಂದು ಮುಹೂರ್ತದ ನಂತರ ಬ್ರಾಹ್ಮಣನ ಮಕ್ಕಳನ್ನು ತಂದು ರಥ ನಿಲ್ಲಿಸಿದ್ದ ಅಮುಕ್ತ ಸ್ಥಳಕ್ಕೆ ಬಂದು ತೋರಿಸಿದನು. ಈ ಮಕ್ಕಳು ಯಾರೆಂದರೆ ನಂದ, ಸುನಂದ ಮೊದಲಾದ ಪಾರ್ಷದರು. ಪ್ರಾರಬ್ಧಕರ್ಮದಿಂದ ಅವರಿಗೆ ಗರ್ಭವಾಸದ ದುಃಖ ಪ್ರಾಪ್ತವಾದ್ದರಿಂದ ಬ್ರಾಹ್ಮಣನ ಪತ್ನಿಯ ಗರ್ಭದಲ್ಲಿ ನವಮಾಸ ಕಳೆದು ತಮ್ಮ ತಮ್ಮ ಮೂಲಸ್ಥಾನಕ್ಕೆ ಬಂದು ಸೇರಿರುತ್ತಾರೆ ಎಂದು ತಿಳಿಸಿದನು. ಅರ್ಜುನನ ಅಜ್ಞಾನವನ್ನು ಕಳೆದು ಅವನನ್ನು ಅಮುಕ್ತಸ್ಥಾನಕ್ಕೆ ಕರೆದುಕೊಂಡು ಹೋಗಿ ಮುಕ್ತಸ್ಥಾನದಲ್ಲಿದ್ದ ಮುನಿಗಳೇ ಬ್ರಾಹ್ಮಣನ ಪತ್ನಿಯಲ್ಲಿ ಗರ್ಭವಾಸ ಮಾಡಿದ ವಿಷಯವನ್ನು ಹೇಳಿ ಅರ್ಜುನನ ದೋಶ ಕಳೆದು ಕೃಷ್ಣನಿಗೂ ಅರ್ಜುನನಿಗೂ ಇರುವ ನಿಕಟಸಂಬಂಧವನ್ನು ಬ್ರಾಹ್ಮಣನಿಗೆ ತೋರಿಸಿ ಎಲ್ಲವೂ ಹರಿಸಂಕಲ್ಪದಂತೆ ನಡೆಯುತ್ತದೆಂಬುದನ್ನು ಖಚಿತಮಾಡಿದನು. ಅರ್ಜುನನು ಪಶ್ಚಾತ್ತಾಪವೆಂಬ ಪುಷ್ಪದಿಂದ ಶ್ರೀಕೃಷ್ಣನಿಗೆ ಪಾದಪೂಜೆ ಮಾಡಿ ಕ್ಷಮಾಯಾಚನೆಮಾಡಿದನು.

ಕೃಷ್ಣನ ವಿಚಿತ್ರ ಕಾರ್ಯವನ್ನು ಬೇರಾರೂ ಮಾಡಲಾಗುವುದಿಲ್ಲ. ಅಪ್ರಾಕೃತ ತನ್ನ ಸ್ಥಳವಾದ ಅಸಂಖ್ಯಸೂರ್ಯರ ಸಮಕಾಂತಿಯಿಂದ ಬೆಳಗುವ ಅನಂತಾಸನಕ್ಕೆ ಒಂದು ಘಳಿಗೆಯಲ್ಲಿ ಬಂದನು. ಅಲ್ಲಿ ಮೂಲನಾರಾಯಣನಲ್ಲಿ ಎರಡು ಘಳಿಗೆಯ ಕಾಲ ಐಕ್ಯನಾಗಿ ಮೂರುಘಳಿಗೆಯ ಒಳಗೆ ಅನಂತಾಸನದಿಂದ ದ್ವಾರಕಾಪುರಿಗೆ ಬಂದನು.

ಅಷ್ಟುಹೊತ್ತು ಯಾಗಕಾರ್ಯ ನಿಂತ ದೋಶಕ್ಕಾಗಿ ಪ್ರಾಯಶ್ಚಿತ್ತ ಮಾಡಿಕೊಂಡು ಯಾಗ ಸಮಾಪ್ತಿಗೊಳಿಸಿದನು.

ಅವಭೃತಸ್ನಾನಕ್ಕೆ ಪ್ರಭಾಸತೀರ್ಥಕ್ಕೆ ಹೊರಟನು. ಅಲ್ಲಿ ಸತ್ಪಾತ್ರರಿಗೆ ತಾರತಮ್ಯಾನುಸಾರವಾಗಿ ದಾನದಕ್ಷಿಣೆಗಳನ್ನು ಕೊಟ್ಟು ಪ್ರತಿಯೊಬ್ಬರನ್ನು ಆನಂದಪಡಿಸಿದನು. ಅಲ್ಲಿಂದ ಹೊರಟು ಬರುವಾಗ ಮಾರ್ಗದಲ್ಲಿ ದಂತವಕ್ತ್ರ ವಿಡೂರಥ ಎಂಬ ಅಸುರರು ಅಡ್ಡಗಟ್ಟಲು ವಿದೂರಥನನ್ನು ಕೊಂದು ತಮಸ್ಸಿಗೆ ಹಾಕಿ ದಂತವಕ್ತ್ರನನ್ನು ಕೊಂದು ಅವನಲ್ಲಿದ್ದ ವಿಜಯನೆಂಬ ದ್ವಾರಪಾಲಕನನ್ನು ಮೂಲರೂಪಕ್ಕೆ ಕಳುಹಿದನು.

ಬಂದವರಿಗೆಲ್ಲರಿಗೂ ಉಡುಗೊರೆ ಉಪಚಾರಗಳಿಂದ ಅವರವರ ಸ್ಥಾನಕ್ಕೆ ಕಳುಹಿಸಿದನು. ನಂತರ ಶ್ರೀಕೃಷ್ಣನು ಅರ್ಜುನನನ್ನು ಕುರಿತು ''ವತ್ಸಾ! ಅನಂತಾಸನ ಮಾರ್ಗದಲ್ಲಿ ಕಂಡ ದೃಶ್ಯವನ್ನು ಎಲ್ಲರ ಮುಂದೂ ಹೇಳು'' ಎಂದನು. ಅರ್ಜುನನು ''ಕೃಷ್ಣಾ! ಆ ಅಲಭ್ಯವಾದ ಪುಣ್ಯದರ್ಶನದ ವರ್ಣನೆ ನಿನ್ನ ಬಾಯಿಂದಲೇ ಬಂದರೆ ಲೋಕಕ್ಕೆ ಶುಭ ಉಂಟಾಗುತ್ತದೆ.

ನೀನೇ ದಯಮಾಡಿ ತಿಳಿಸು'' ಎಂದನು. ನಾವು ಜಂಭೂ ದ್ವೀಪದಲ್ಲಿದ್ದೇವೆ. ಇದು ಒಂದು ಲಕ್ಷಯೋಜನ ವಿಸ್ತಾರವಾಗಿದೆ. ಅದರಿಂದಾಚೆಗೆ ತೊಂಬತ್ತಾರುಲಕ್ಷ ವಿಸ್ತಾರವಾದ ಸುವರ್ಣ ಭೂಮಿ ಇದೆ. ಅದರಲ್ಲಿ ವಜ್ರದಕಟ್ಟು, ಎಲ್ಲಾ ಒಟ್ಟು ಮೂರೂವರೆ ಕೋಟಿ ಯೋಜನದಷ್ಟು ವಿಸ್ತಾರವಾಗಿದೆ. ಇದು ಲೋಕವೆನಿಸಿ ದ್ವಿಗುಣವಾಗಿದೆ. ಇದರಿಂದಾಚೆ ಅಂಧಂತಮಸ್ಸು. ಅದು ಘೋರವಾದದ್ದು. ಅಲ್ಲಿ ದುಃಖವೆಂಬುದು ತುಂಬಿ ತುಳಕಾಡುತ್ತದೆ. ಮಿಥ್ಯಾಜ್ಞಾನಿಗಳಿಗೆ ಈ ಘೋರನರಕ ನಿರ್ಮಾಣವಾಗಿದೆ. ಶಿವನೇ ಸರ್ವೋತ್ತಮನೆಂದು ಹೇಳುವರು. ಪರಮಾತ್ಮನ ಸೃಷ್ಟಿ ವಿಶ್ವವೇ ಸುಳ್ಳು ಎಂದು ಹೇಳುವರು. ಸುಂದರಮೂರ್ತಿಯಾದ ಪರಮಾತ್ಮನಿಗೆ ಆಕಾರವೇ ಇಲ್ಲ. ಎಂದು ಹೇಳುವರು. ಮಹಾಮಹಿಮಾಗುಣಪೂರ್ಣನಾದ ದೇವರಿಗೆ ಗುಣವೇ ಇಲ್ಲ ಎಂದು ಹೇಳುವರು. ಜೀವೇಶ್ವರ, ಸರ್ವೇಶ್ವರ ಇಬ್ಬರಲ್ಲೂ ಐಕ್ಯತೆ ಹೇಳುವವರು ಇಂಥ ದುಃಶಾಸ್ತ್ರವನ್ನು ಪ್ರಚಾರಮಾಡುವ ಪಾಪಿಗಳಿಗೆ ಅಂಧಂತಮಸ್ಸು ಪ್ರಾಪ್ತವಾಗುತ್ತದೆ. ಶ್ರೀಹರಿ ದ್ವೇಷಿಗಳಿಗೆ ಈ ನರಕ ಕಾದಿರಿಸಿದಂತಿದೆ.

ಸರಿಯಾದ ಸಚ್ಛಾಸ್ತ್ರವನ್ನು ಸರಿಯಾಗಿ ತಿಳಿದು, ಶ್ರೀವಿಷ್ಣುವೇ ಪ್ರಧಾನ ದೇವರೆಂದೂ, ಬ್ರಹ್ಮರುದ್ರಾದಿ ದೇವರುಗಳೆಲ್ಲರೂ ಅವನ ಪ್ರೀತಿಪಾತ್ರ ಪರಿವಾರವೆಂದೂ ತಿಳಿದು ತಾರತಮ್ಯಾನುಸಾರ ಅವರನ್ನು ಪೂಜಿಸಿದಾಗ ಮಾತ್ರ ರುದ್ರಾದಿ ದೇವತೆಗಳು ಅವರಿಗೆ ಪರಮಪದವನ್ನಿತ್ತು ಉದ್ಧಾರಮಾಡುತ್ತಾರೆ. "ಅರ್ಜುನಾ! ನಾನು ನಿಮ್ಮನ್ನು ಅಮುಕ್ತ ಸ್ಥಾನದಲ್ಲಿ ಬಿಟ್ಟು ನಾನು ಹೋದ ಮುಕ್ತಸ್ಥಾನದಲ್ಲಿ ನಾನು ನಾರಾಯಣನೆಂದು ಮೂಲರೂಪದಿಂದಿರುತ್ತೇನೆ. ಮುಕ್ತಬ್ರಹ್ಮರು ಅಲ್ಲಿ ನನ್ನನ್ನು ವಾಲೈಸುತ್ತಲಿರುತ್ತಾರೆ. ನಾನು ದೇಶಕಾಲ ಪರಿಚ್ಛೇದಶೂನ್ಯನಾಗಿ ಸರ್ವವ್ಯಾಪ್ತನಾಗಿರುತ್ತೇನೆ. ನನ್ನ ಅನಂತರೂಪ ಅನಂತ ಅವತಾರಗಳಿಗೂ ಮೂಲರೂಪಕ್ಕೂ ಭೇದವನ್ನು ತಿಳಿಯಬಾರದು. ಜ್ಞಾನಾನಂದಶರೀರನಾದ ನಾನು ಅನಂತ ಅವತಾರ ಮಾಡಿದಾಗ್ಯೂ ಅನಂತ ನಾಮಗಳುಳ್ಳವನಾದಾಗ್ಯೂ ನನ್ನ ರೂಪ ನಾಮ ಅವತಾರಗಳಲ್ಲಿ ಭೇದವನ್ನು ತಿಳಿಯದೆ ಸರಿಯಾದ ತತ್ತ್ವವನ್ನು ತಿಳಿದವರಿಗೆ ಜ್ಞಾನಭಕ್ತಿವೈರಾಗ್ಯವನ್ನು ಕೊಟ್ಟು ಅವರಿಗೆ ಸ್ವಚ್ಛಶಾಸ್ತ್ರದಲ್ಲಿ ಅನುರಾಗಉಳ್ಳವರಾಗುವಂತೆ ಅನುಗ್ರಹಿಸುತ್ತೇನೆ. ಅಸುರರಲ್ಲಿ ನಿಂತು ಅವರಿಗೆ ಮಿಥ್ಯಾ ಜ್ಞಾನವನ್ನುಂಟುಮಾಡುವವನೂ ನಾನೆ. ಭೂಸುರರಲ್ಲಿ ನಿಂತು ಅವರಿಗೆ ಸುಜ್ಞಾನಸಂಪತ್ತನ್ನಿತ್ತು ಬ್ರಹ್ಮಾನಂದವನ್ನು ಕರುಣಿಸುವವನೂ ನಾನೇ ಎಂದು ತಿಳಿ.

ನೀನು ಅಸುರಜ್ಞಾನದಿಂದ ಬ್ರಾಹ್ಮಣನ ಮಕ್ಕಳನ್ನು ನಾನು ಬದುಕಿಸಬಲ್ಲೆನು. ಎಂದು ಅಹಂಭಾವ ಪಟ್ಟ ಕಾರಣ ನಿನ್ನ ಮಿಥ್ಯಾಜ್ಞಾನವನ್ನು ಕಳೆಯಲಿಕ್ಕಾಗಿ ಇದೆಲ್ಲವೂ ನಡೆಯಿತು. ನನ್ನ ಭಕ್ತರು ನಡೆಸುವ ಕರ್ಮಗಳನ್ನು ನನಗೆ ಅರ್ಪಣಮಾಡಿದಾಗ ನಾನು ಸ್ವೀಕರಿಸಿ ಅನುಗ್ರಹಮಾಡುತ್ತೇನೆ'' ಎಂದು ಶ್ರೀಕೃಷ್ಣನು ಭಕ್ತವಾತ್ಸಲ್ಯದಿಂದಿತ್ತ ನುಡಿ ಕೊಡಿಗೆಗಳನ್ನು

ಅರ್ಜುನನು ತನ್ನ ಹೃದಯ ಕಲಶದಲ್ಲಿ ತುಂಬಿಕೊಂಡು ವಾಕ್ಯಾಮೃತದ ಸವಿಯನ್ನು ನಿರಂತರ ಅನುಭವಿಸಿ ಸುಖಪಡುವ ಸುಯೋಗಕ್ಕಾಗಿ ಶ್ರೀಕೃಷ್ಣನ ಪಾದತೀರ್ಥದಲ್ಲಿ ಮುಳುಗಿ ಪ್ರಾರ್ಥಿಸಿದನು.

## ಸದ್ಗತಿಗೆ ಸತ್ಪುತ್ರರೇ ಸಾಧನ

ಇಂದ್ರಪ್ರಸ್ಥರಾಜ್ಯದಲ್ಲಿ ಧರ್ಮರಾಜನು ಶ್ರೀಕೃಷ್ಣನ ಅನುಗ್ರಹಪೂರಿತವಾದ ಮಯನಿರ್ಮಿತ ದಿವ್ಯಸಭಾಭವನದಲ್ಲಿ ಸಕಲ ರಾಜಾಧಿರಾಜರೊಡಗೂಡಿರುವಾಗ ನಾರದರು ಅಪ್ರಾರ್ಥಿತರಾಗಿ ಅಲ್ಲಿಗೆ ಆಗಮಿಸಿದರು. ಧರ್ಮರಾಜನು ಮುನಿದೇವನನ್ನು ಮುದದಿಂದ ಸ್ವಾಗತಿಸಿ ಕರೆತಂದು ಅತಿಥಿಪೂಜೆಯಲ್ಲಿ ಅಗ್ರಗಣ್ಯನಾದ ರಾಜನು ಅರ್ಘ್ಯಪಾದ್ಯಾದಿ ಪೂಜೆಗಳಿಂದ ಸತ್ಕಾರಮಾಡಿದನಂತರ ನಾರದರು ಧರ್ಮರಾಜನನ್ನು ಅನೇಕ ರಾಜನೀತಿಗಳ ಉಪದೇಶದ್ವಾರಾ ಕುಶಲವಾರ್ತೆಯನ್ನು ಕೇಳಿದರು.

ಆಮೇಲೆ ಧರ್ಮರಾಜನು ''ಸ್ವಾಮೀ! ತಾವು ಸಕಲಲೋಕಗಳನ್ನು ಸಂಚಾರಮಾಡಿ ಬಂದವರು. ಆದ್ದರಿಂದ ತಮ್ಮಿಂದ ಎಲ್ಲಾ ಲೋಕಗಳ ವೈಭವದ ಸಕಲ ವೃತ್ತಾಂತವನ್ನು ಕೇಳಬೇಕೆಂದು ಇಚ್ಛೆಯಾಗಿದೆ. ದಯಮಾಡಿ ತಿಳಿಸಬೇಕು'' ಎಂದನು.

''ಧರ್ಮರಾಜಾ! ಸಕಲಲೋಕಗಳ ಅಂತರ ಅತಿಶಯಗಳನ್ನು ಕೇಳಲು ಉತ್ಸಾಹಿಯಾಗಿರುವ ನಿನಗೆ ತಿಳಿಸಲು ಸಂತೋಷಪಡುತ್ತೇನೆ. ''ಧರ್ಮನಂದನಾ! ಭೂಲೋಕದಿಂದ ಮೇಲಿರುವ ಏಳು ಲೋಕಗಳಲ್ಲಿ ಅಂತರಿಕ್ಷಲೋಕವು ಒಂದು ಲಕ್ಷ ಯೋಜನವಿದೆ. ಸ್ವರ್ಗಲೋಕ ಐವತ್ತು ಲಕ್ಷ ಯೋಜನವಿದೆ. ಅಂತರಾಳಲೋಕ ಐವತ್ತು ಸಾವಿರ ಯೋಜನವಿದೆ. ಮಹರ್ಲೋಕ ಎಪ್ಪತ್ತೈದು ಲಕ್ಷಯೋಜನವಿದೆ. ಜನಲೋಕ ಒಂದುಕೋಟಿ ಹನ್ನೆರಡುಲಕ್ಷ ಯೋಜನವಿದೆ. ಮೇಲಿನ ನಾಲ್ಕು ಲೋಕಗಳ ಎರಡರಷ್ಟು ವಿಸ್ತಾರ ಸತ್ಯಲೋಕವಾಗಿದೆ. ಸತ್ಯಲೋಕವನ್ನು ಬ್ರಹ್ಮದೇವರು ಆಳುತ್ತಾರೆ. ಸಮಸ್ತದೇವತೆಗಳಿಗೂ ಪ್ರಭು ಬ್ರಹ್ಮದೇವರಾದರೆ, ಬ್ರಹ್ಮದೇವರಿಗೂ ಪ್ರಭು ಶ್ರೀಮನ್ನಾರಾಯಣನಾಗಿದ್ದಾನೆ. ಬ್ರಹ್ಮದೇವರ ಸತ್ಯಲೋಕದ ಎರಡರಷ್ಟು ವೈಕುಂಠ ಲೋಕವಾಗಿದೆ. ಅಲ್ಲಿಗೆ ಪ್ರಭು ಲಕ್ಷ್ಮೀಪತಿಯಾದ ಶ್ರೀನಾರಾಯಣನು ಶಶ್ವದೇಕಪ್ರಕಾರನಾಗಿ ಮುಕ್ತ ಬ್ರಹ್ಮರುಗಳ ಕೈಲಿ ಸೇವಾ ಸ್ವೀಕರಿಸುತ್ತಲಿರುತ್ತಾನೆ. ಅಲ್ಲಿ ಶ್ರೀಮನ್ನಾರಾಯಣನ ಪೂರ್ಣಸನ್ನಿಧಾನವಿರುವುದರಿಂದ ಅದಕ್ಕೆ ನಾಶವಿಲ್ಲ. ಕೆಳಗಿನ ಏಳುಲೋಕಗಳು ಯಾವುವೆಂದರೆ ಅತಳ-ವಿತಳ-ಸುತಳ-ಮಹಾತಳ-ತಳಾತಳ-ರಸಾತಳ-ಪಾತಾಳ. ಈ ಏಳು ಲೋಕಗಳೂ ಇಪ್ಪತ್ತುನಾಲ್ಕು ಕೋಟಿ ತೊಂಬತ್ತೊಂಬತ್ತು ಲಕ್ಷಯೋಜನ ಉದಕಮಯವಾಗಿದೆ.

ಪಾತಾಳಲೋಕದಲ್ಲಿ ಶೇಷದೇವರಿದ್ದಾರೆ. ವಾಯುದೇವನು ಕೂರ್ಮನ

ಆಧಾರದಲ್ಲಿದ್ದಾನೆ. ಅಂಡೋದಕದಮೇಲೆ ನಾರಾಯಣ ಕೂರ್ಮ ಅದರ ಮೇಲೆ ವಾಯುಕೂರ್ಮ ಅದರ ಮೇಲೆ ಶೇಷದೇವರು ಭೂಮಂಡಲವನ್ನು ಹೊತ್ತಿರುತ್ತಾನೆ'' ಎಂದು ನಾರದರು ತಿಳಿಸಿದನಂತರ ರಾಜರ್ಷಿಗಳು ರಾಜರುಗಳು ಸೇರಿರುವ ಲೋಕಗಳು ಅಲ್ಲಿದ್ದಂಥ ಸಭಾವರ್ಣನೆ ಎಲ್ಲವನ್ನು ವಿಸ್ತಾರವಾಗಿ ತಿಳಿಸಿದಾಗ ಧರ್ಮರಾಜನು ತನ್ನತಂದೆ ಪಾಂಡುರಾಜ ಯಮಲೋಕದಲ್ಲಿದ್ದಾನೆ. ಹರಿಶ್ಚಂದ್ರರಾಜ ಸ್ವರ್ಗಲೋಕದಲ್ಲಿದ್ದಾನೆ ಎಂಬುದನ್ನು ಕೇಳಿ ವಿಷಾದದಿಂದ ''ನಾರದರೇ! ನನ್ನ ತಂದೆಗೆ ಸ್ವರ್ಗಲೋಕ ಏಕೆ ದೊರಕಲಿಲ್ಲ. ನನ್ನ ತಂದೆಗಿಂತಲೂ ಕನಿಷ್ಟನಾದ ಹರಿಶ್ಚಂದ್ರನಿಗೆ ಸ್ವರ್ಗ ಪ್ರಾಪ್ತ ಹೇಗಾಯಿತು?'' ಎಂದು ಕೇಳಿದನು.

''ಧರ್ಮರಾಜಾ! ಹರಿಶ್ಚಂದ್ರನು ರಾಜಸೂಯಯಾಗವನ್ನು ಮಾಡಿದ ಪುಣ್ಯದಿಂದ ಸ್ವರ್ಗಕ್ಕೆ ಸೇರಿದನು. ನಾನು ಎಲ್ಲಾ ಲೋಕಗಳನ್ನು ನೋಡಿಕೊಂಡು ಯಮಲೋಕಕ್ಕೆ ಬಂದಾಗ ನಿನ್ನತಂದೆ ಪಾಂಡುಚಕ್ರವರ್ತಿಯು ನನ್ನನ್ನು ಭೇಟಿಮಾಡಿ ನಾರದರೇ ನೀವು ಭೂಲೋಕಕ್ಕೆ ಹೋದಾಗ ನನ್ನಮಗ ಧರ್ಮರಾಜನನ್ನು ನೋಡಿ ನನ್ನ ಸಂದೇಶವನ್ನು ಅವನಿಗೆ ತಿಳಿಸಬೇಕು. ಏನೆಂದರೆ ''ನಿನ್ನ ತಂದೆ ಯಮಲೋಕ ಸೇರಿ ಖಿನ್ನನಾಗಿದ್ದಾನೆ. ಅವನಿಗೆ ಸ್ವರ್ಗಲೋಕ ಪ್ರಾಪ್ತವಾಗುವುದಕ್ಕಾಗಿ ನೀನು ಶ್ರೀಕೃಷ್ಣಾನುಗ್ರಹಪಡೆದು ರಾಜಸೂಯಯಾಗವನ್ನು ಮಾಡು'' ಎಂದು ಹೇಳಿ ಅವನಿಗೆ ಉಪದೇಶಮಾಡಿರಿ'' ಎಂದು ಹೇಳಿದಂತೆ ನಿನಗೆ ಶ್ರೀಕೃಷ್ಣನ ಪರಮಾನುಗ್ರಹವಿದೆ. ಭೀಮಾರ್ಜುನರ ಬೆಂಬಲವಿದೆ. ರಾಜಸೂಯಯಾಗ ಮಾಡುವ ಯೋಗ್ಯತೆ ನಿನಗಿದೆ. ಆದ್ದರಿಂದ ರಾಜಸೂಯಯಾಗವನ್ನು ಮಾಡಿ ನಿನ್ನ ತಂದೆಗೆ ಸದ್ಗತಿಯನ್ನು ದೊರಕಿಸಿಕೊಟ್ಟು ಪಿತೃಋಣದಿಂದ ಮುಕ್ತರಾಗಿರಿ'' ಎಂದರು.

ಧರ್ಮರಾಜನಿಗೆ ಈಗ ದೊಡ್ಡಸಮಸ್ಯೆ ಹತ್ತಿತು. ನಾರದರ ಮಾತಿನಂತೆ ರಾಜಸೂಯಯಾಗವನ್ನು ಮಾಡಲೇಬೇಕು ಸರಿ. ಆದರೆ ಅದನ್ನು ಮಾಡುವ ಸಾಮರ್ಥ್ಯ ನಮಗೆ ಬೇಕಲ್ಲ ಎಂದು ಚಿಂತಿಸಿ ಭೀಮಾರ್ಜುನರನ್ನು ಕುರಿತು ರಾಜಸೂಯಯಾಗದ ಬಗ್ಗೆ ಚರ್ಚಿಸಿದನು. ಭೀಮಾರ್ಜುನರು ''ಧರ್ಮರಾಜಾ! ನೀನು ಅದಕ್ಕಾಗಿ ಚಿಂತಿಸಬೇಡ. ನಾವು ಯಾಗಕ್ಕೆ ಆಗಬೇಕಾದ ಸಕಲ ಸೌಕರ್ಯ ಸೌಲಭ್ಯಗಳನ್ನು ಒದಗಿಸಿ ಯಾಗ ಸುಸೂತ್ರವಾಗಿ ವೈಭವದಿಂದ ನಡೆಯುವಂತೆ ಮಾಡುತ್ತೇವೆ'' ಎಂದರು. ''ನೀವು ಮಾತ್ರ ಧೈರ್ಯ ಹೇಳಿದರೆ ಸಾಲದು. ಮಾಡಲು ಕೃಷ್ಣನ ಅನುಮತಿ ಅನುಗ್ರಹ ಮುಖ್ಯವಾಗಿ ಬೇಕಲ್ಲ? ಎಂದು ಯೋಚಿಸಿ ಶ್ರೀಕೃಷ್ಣನನ್ನು ಕರೆದುಕೊಂಡು ಬರಲಿಕ್ಕಾಗಿ ದೂತನನ್ನು ಕಳುಹಿಸಿದನು. ಧರ್ಮರಾಜನಿಂದ ಹೊರಟದೂತನು ದ್ವಾರಕೆಗೆ ಬಂದಾಗಲೇ ಅತ್ತಕಡೆಯಿಂದ ಮಗಧದೇಶದ ಸಕಲ ರಾಜಭಟರುಗಳೂ ಕೃಷ್ಣನ ಸಮೀಪಕ್ಕೆ ಬಂದರು. ಅವರೆಲ್ಲರೂ ಶ್ರೀಕೃಷ್ಣನ ಹದಿನಾರು ಸಹಸ್ರನೂರಾ ಎಂಟುಮಂದಿ ಮಡದಿಯರ ಕಡೆಯ ಬಂಧುಗಳಾಗಿದ್ದರು.

ಕೃಷ್ಣನಿಗೆ ಶರಣಾಗತರಾಗಿ ''ಕೃಷ್ಣಾ! ಜರಾಸಂಧನು ನಿನ್ನ ಮಾವಂದಿರು, ಭಾವಂದಿರು, ಭಾವಮೈದುನರು -ಮೊದಲಾದ ಇಪ್ಪತ್ತೆಂಟುಸಾವಿರದ ಎಂಟುನೂರುಮಂದಿ ರಾಜರನ್ನು ಕೈಸೆರೆ ಹಿಡಿದುತಂದು ಮಹಾರುದ್ರದೇವರಿಗೆ ಹೋಮಿಸಲಿಕ್ಕಾಗಿ ಪರ್ವತದ ಹೊದರಿನಲ್ಲಿ ಬಂಧಿಸಿಟ್ಟಿದ್ದಾರೆ. ಜರಾಸಂಧನು ಪುರುಷಪಶು ಮೇಧಮಾಡಲು ಪ್ರತಿಜ್ಞೆ ಮಾಡಿದ್ದಾನಂತೆ. ನೀನು ಸರ್ವರಿಗೂ ಪ್ರಭು ಸರ್ವಶಕ್ತ, ಸರ್ವಸ್ವತಂತ್ರ, ಸರ್ವವ್ಯಾಪ್ತನಾದ್ದರಿಂದ ನೀನು ಇಂಥ ವಿರುದ್ಧ ಕರ್ಮವನ್ನು ಕ್ಷಣಮಾತ್ರದಲ್ಲಿ ತಡೆಯಬಲ್ಲೆ. ಆದ್ದರಿಂದ ನಾವು ನಿನಗೆ ಮೊರೆಹೊಕ್ಕು ಬಂದಿದ್ದೇವೆ. ಬೇಗ ಬಂದು ರಾಜರುಗಳನ್ನು ಬಿಡಿಸಿ ಕಾಪಾಡು ಸ್ವಾಮೀ'' ಎಂದು ಕೇಳಿಕೊಳ್ಳುವಾಗ ಧರ್ಮರಾಜನ ಕಡೆಯವರು ಶ್ರೀಕೃಷ್ಣನಿಗೆ ನಮಸ್ಕಾರಮಾಡಿ ''ದೇವಾ! ಧರ್ಮರಾಜನು ಶೀಘ್ರವಾಗಿ ರಾಜಸೂಯಯಾಗ ಮಾಡಲು ನಾರದರು ಅಪ್ಪಣೆ ಮಾಡಿದ್ದಾರಂತೆ. ಅದನ್ನು ಮಾಡಲೇಬೇಕಾಗಿರುವುದರಿಂದ ನೀನು ತಕ್ಷಣ ಹೊರಟು ಬಂದು ಅವರಿಗೆ ಸಲಹೆ-ಸಹಕಾರಗಳನ್ನು ಕೊಟ್ಟು ಸಲಹಬೇಕಂತೆ'' ಎಂದು ಹೇಳಿದರು.

ಸತ್ಯಸಂಕಲ್ಪನಾದ ಶ್ರೀಕೃಷ್ಣನು ಲೋಕವಿಡಂಬನೆಗಾಗಿ ''ಉದ್ಧವಾ! ಈಗ ಎರಡು ಕಡೆಯಿಂದಲೂ ಅವಸರದಕರೆ ಬಂದಿದೆ. ಯಾವುದಕ್ಕೆ ಹೋದರೆ ಹೆಚ್ಚು ಉತ್ತಮ?'' ಎಂದನು.

ಉದ್ಧವನು ಸ್ವಾಮಿಯ ಮನೋಗತ ಅರಿತ ಅಪರೋಕ್ಷಜ್ಞಾನಿ ಆಗಿದ್ದನು. ''ದೇವಾ! ನೀನು ಏನು ಆಗಬೇಕೋ ಅದೆಲ್ಲವನ್ನು ಮೊದಲೇ ನಿರ್ಣಯಿಸಿಟ್ಟಿರುತ್ತಿ. ಆದರೂ ಬಂಧಕದ ಮಾತುಗಳಿಂದ ನಮ್ಮನ್ನು ಮೋಹಪಾಶಕ್ಕೊಳಗುಮಾಡುವಿ. ''ದೇವಾ! ಈಗ ನಾನು, ನೀನು ನುಡಿಸಿದಂತೆ ನುಡಿಯುತ್ತೇನೆ. ನೀನು ಈಗ ಪಾಂಡವರಬಳಿಗೆ ಹೋದರೆ ಎರಡು ಕಾರ್ಯವೂ ಸುಗಮವಾಗಿ ನೆರವೇರುತ್ತದೆ. ಪಾಂಡವರು ರಾಜಸೂಯಯಾಗ ಮಾಡಲು ನಿನ್ನ ಅನುಗ್ರಹವಾದರೆ ಅವರ ಇಷ್ಟವನ್ನು ನೆರವೇರಿಸಿದಂತಾಯಿತು. ಜರಾಸಂಧನ ವಧೆಯೂ ಆದಂತಾಗುತ್ತದೆ'' ಎಂದನು. ಸ್ವಾಮಿಯು ಭಕ್ತನ ಬಾಯಿಂದ ಬಂದ ಮಾತನ್ನು ಸುಳ್ಳು ಮಾಡದಂತೆ ಇಂದ್ರಪ್ರಸ್ಥಕ್ಕೆ ಹೊರಟನು.

ಪಾಂಡವರು ವೈಭವದಿಂದ ಶ್ರೀಕೃಷ್ಣನನ್ನು ಸ್ವಾಗತಿಸಿ ಕರೆತಂದು ಸತ್ಕಾರ ಸಮಾರಂಭಗಳೆಲ್ಲವೂ ಆದನಂತರ ಧರ್ಮರಾಜನು ''ಕೃಷ್ಣಾ! ನಾರದರು ಸಕಲಲೋಕಗಳನ್ನು ಸಂಚಾರಮಾಡಿರುವಾಗ ಯಮನಲೋಕದಲ್ಲಿ ನಮ್ಮ ತಂದೆ ಪಾಂಡುರಾಜನನ್ನು ನೋಡಿದರಂತೆ. ಹರಿಶ್ಚಂದ್ರನು ಸ್ವರ್ಗದಲ್ಲಿದ್ದಾನೆಂದೂ ತಿಳಿಸಿದರು.

ನಮ್ಮ ತಂದೆಗೆ ಏಕೆ ಸ್ವರ್ಗ ಪ್ರಾಪ್ತವಾಗಲಿಲ್ಲ. ಅವನಿಗಿಂತಲೂ ನೀಚ ಹರಿಶ್ಚಂದ್ರನಿಗೆ ಸ್ವರ್ಗ ಪ್ರಾಪ್ತವಾಗಲು ಕಾರಣವೇನು?'' ಎಂದು ನಾನು ಕೇಳಿದಾಗ ನಾರದರು ಹರಿಶ್ಚಂದ್ರನು ದೇವಾಂಶನಲ್ಲಿ ನೀಚನಾಗಿದ್ದರೂ ಅವನು ರಾಜಸೂಯಯಾಗ ಮಾಡಿದ ಪುಣ್ಯಫಲದಿಂದ

ಸ್ವರ್ಗಲೋಕಪಡೆದಿದ್ದಾನೆ. ಆದ್ದರಿಂದ ನೀನು ಖಂಡಿತವಾಗಿಯೂ ರಾಜಸೂಯಯಾಗವನ್ನು ಮಾಡಲೇಬೇಕು. ಬ್ರಹ್ಮಪದವಿಗೆ ಅಯೋಗ್ಯನಾದವನೂ ಸಹ ರಾಜಸೂಯಯಾಗ ಮಾಡಿದರೆ ಶ್ರೇಷ್ಠಪದವಿ ಪಡೆಯುತ್ತಾನೆ. ಈ ಯಾಗವನ್ನು ಮಾಡಿದವನು ಪ್ರಾರಬ್ಧಕರ್ಮವಶಾತ್ ನೀಚಯೋನಿಯಲ್ಲಿ ಹುಟ್ಟಿದರೂ ಆಜಾತಿಯಲ್ಲಿ ಶ್ರೇಷ್ಠನೆನಿಸುತ್ತಾನೆ. ನಿನ್ನ ತಂದೆ ದೇವಾಂಶನಾಗಿದ್ದರೂ ಯಮಲೋಕವನ್ನು ಸೇರಿರುವುದಕ್ಕೆ ಮತ್ತೊಂದು ಬಲವಾದ ಕಾರಣವೂ ಇರುತ್ತದೆ. ಏನೆಂದರೆ ನಿನ್ನತಂದೆ ನಲವತ್ತೊಂಬತ್ತು ಮರುದ್ಗಣಗಳೊಳಗೆ ಒಬ್ಬನಾಗಿದ್ದಾನೆ. ಒಂದುದಿನ ಆತನು ತಪಸ್ಸಿಗೆ ಕುಳಿತಾಗ ದೇವೇಂದ್ರನು ಅವನ ಬಳಿಗೆ ಬಂದನು. ಆಗ ಮರುದ್ದೇವತೆಯಾದ ಅವನು ಮಹಾಜ್ಞಾನಿಯಾಗಿದ್ದರೂ ಪ್ರಾರಬ್ಧಕರ್ಮವಶಾತ್ ತಪಸ್ಸಿಗೆ ಅಡ್ಡಿ ಆಗುತ್ತದೆಂಬ ಅಜ್ಞಾನದಿಂದ ಎದ್ದುನಿಲ್ಲದೆ ತಪಸ್ಸಿನಲ್ಲೇ ಮಗ್ನನಾಗಿರಲು ದೇವೇಂದ್ರನು "ನೀನು ಭೂಲೋಕದಲ್ಲಿ ಮನುಷ್ಯನಾಗಿ ಹುಟ್ಟಿ ಕೆಲವುಕಾಲ ರಾಜ್ಯಭಾರ ಮಾಡಿದನಂತರ ನೀನು ಭೌತಿಕದೇಹವನ್ನು ತ್ಯಜಿಸಿದಾಗಲೂ ನಿನ್ನ ಮೂಲರೂಪವನ್ನು ಹೊಂದದೆ ಯಮಲೋಕ ಸೇರುವಂತಾಗಲಿ'' ಎಂದು ಶಪಿಸಿದನು. ಮತ್ತು ನಿನಗಿಂತಲೂ ಕೆಳಗಿನ ಪಾರ್ಶನಾದ ತ್ರಿಶಂಖುವಿನ ಪುತ್ರ ಹರಿಶ್ಚಂದ್ರನು ಸ್ವರ್ಗದಲ್ಲಿ ಸಂತೋಷಪಡುವುದನ್ನು ನೀನು ನೋಡಿ ತಲೆತಗ್ಗಿಸುವಂತೆ ಆಗಲೆಂದೂ ಶಾಪಕೊಟ್ಟನು. ಆಗ ಪಾಂಡುರಾಜನು ''ಸುರಪತೀ! ನನ್ನ ಅಜ್ಞಾನದಿಂದ ಅಪರಾಧ ನಡೆದುಹೋಯಿತು. ಶಾಪವನ್ನು ನಿವಾರಿಸಿ ಕಾಪಾಡು'' ಎಂದು ಪ್ರಾರ್ಥಿಸಿಕೊಂಡನು. ಸುರಪತಿಯು ''ನಿನ್ನ ಮಕ್ಕಳು ರಾಜಸೂಯಯಾಗ ಮಾಡುತ್ತಾರೆ. ನಂತರ ನೀನು ಮೂಲರೂಪವನ್ನು ಸೇರುತ್ತಿ ಎಂದು ವಿಶಾಪವಿತ್ತನು'' ಎಂದು ನಾರದರು ತಿಳಿಸಿರುವರೆಂದು ಹೇಳಿದನು. ಆಗ ಪ್ರಾಣಿಗಳು ದೇಹವನ್ನು ಬಿಟ್ಟುಹೋಗುವಾಗ ವಾಯುವನ್ನು ವಾಹನವಾಗಿ ಮಾಡಿಕೊಂಡು ವಾಯುವಾಹನನೆಂದೆನಿಸಿಕೊಂಡ ಶ್ರೀಕೃಷ್ಣಪರಮಾತ್ಮನು "ಧರ್ಮರಾಜಾ! ನಿಮ್ಮತಂದೆಗೆ ಸದ್ಗತಿ ಸಿಗಬೇಕು. ದೇವೇಂದ್ರನ ವರವೂ ಸತ್ಯವಾಗಬೇಕಾಗಿರುವುದರಿಂದ ನೀನು ರಾಜಸೂಯಯಾಗವನ್ನು ಖಂಡಿತ ಮಾಡಲೇಬೇಕು. ಈ ಕಾರ್ಯವನ್ನು ನಿರ್ವಹಿಸಲು ಭೀಮಸೇನನು ಸಮರ್ಥನಾಗಿದ್ದಾನೆ" ಎಂದನು.

ಧರ್ಮರಾಜನು ಆದರೂ ಸಂದೇಹದಿಂದ ''ಕೃಷ್ಣಾ! ಜರಾಸಂಧ ಬದುಕಿರುವಾಗ ನಾವು ರಾಜಸೂಯಯಾಗವನ್ನು ಹೇಗೆ ಮಾಡಲು ಸಾಧ್ಯವಾದೀತು? ಅವನು ಬ್ರಹ್ಮರುದ್ರಾದಿಗಳಿಂದ ವರಪಡೆದಿದ್ದಾನೆ. ಶಿವನಿಗೆ ಅವನು ಮಹಾಭಕ್ತ. ನಿನ್ನನ್ನೂ ಬಿಡದೆ ಹದಿನೆಂಟಾವರ್ತಿ ಯುದ್ಧಕ್ಕೆ ಬಂದು ದ್ವೇಶವನ್ನು ಮಸೆದ ಆ ಪ್ರಬಲನನ್ನು ಗೆಲ್ಲಲು ಹೇಗೆ ಸಾಧ್ಯ?'' ಎಂದನು. ಭೀಮಸೇನನು ''ಅಣ್ಣಾ! ಶ್ರೀಕೃಷ್ಣನ ಮಾತೆಂದರೆ ಸ್ಥಿರ-ಸಂಪತ್ತು. ಅದು ಎಂದಿಗೂ ಹುಸಿ ಆಗಲು ಸಾಧ್ಯವಿಲ್ಲ. ನೀವು ರಾಜಸೂಯಯಾಗಮಾಡಿರಿ. ಅದಕ್ಕೆ ಯೋಗ್ಯರಾಗಿದ್ದೀರಿ'' ಎಂದು ಶ್ರೀಕೃಷ್ಣನ ಮುಖಾರವಿಂದದಿಂದಲೇ ಬಂದಿದ್ದರೂ ನೀನು ಹೀಗೆ ಸಂದೇಹ ಸಂಶಯ ಪಡುವುದು ಸರಿಯಲ್ಲ. ಶ್ರೀಕೃಷ್ಣನ ಅಭಯಮುದ್ರಿಕೆ ಪಡೆದವರಿಗೆ

ಸಕಲದೇವತೆಗಳೂ ತಲೆಬಾಗುತ್ತಾರೆಂಬುದನ್ನು ನಾವು ಸದಾ ಸ್ಮರಣೆಯಲ್ಲಿಡಬೇಕು. ಅವನ ಮಾತು ರಕ್ಷಾಕವಚವೆಂಬ ಭಾವದಿಂದ ತಲೆಬಾಗಲೇಬೇಕು'' ಎಂದನು.

ಕೃಷ್ಣನು ''ಧರ್ಮರಾಜಾ! ಭೀಮಸೇನನಂತಹ ಸ್ವಚ್ಛಶಕ್ತಿ ನಿನಗೆ ಲಭಿಸಿದ್ದರೂ ನಿನಗಿನ್ನೂ ಸಂಶಯದ ದೌರ್ಬಲ್ಯ ಅಡಗಲಿಲ್ಲ. ನಾನೀಗಲೇ ಭೀಮಾರ್ಜುನರ ಸಹಿತವಾಗಿ ಹೊರಟು ನಿನಗೆ ಭೀತಿಯ ಭ್ರಾಂತಿಯನ್ನು ತುಂಬಿರುವ ಜರಾಸಂಧನನ್ನು ಕೊಂದುಬರುತ್ತೇನೆ'' ಎಂದನು. ಧರ್ಮರಾಜನು ''ಬೇಡ ಕೃಷ್ಣಾ! ಆ ದುಷ್ಟನ ಹಿಂಸೆ ತಾಳಲಾರದೆ ನೀನು ಜಲದುರ್ಗದಲ್ಲಿ ವಾಸವಾಗಿದ್ದರೂ ಈಗ ನನಗಾಗಿ ಅವನ ಬಳಿಗೆ ಹೋಗುತ್ತೇನೆಂದು ಶಪಥಮಾಡಬೇಡ. ಭೀಮಾರ್ಜುನರು ನನ್ನ ಎರಡು ಕಣ್ಣುಗಳು. ನೀನು ನನ್ನ ಮನಸ್ಸು. ಇದನ್ನೇ ನಾನು ಕಳೆದುಕೊಂಡ ಮೇಲೆ ಬದುಕಿದ್ದೂ ಸತ್ತಂತೆಯೇ ಸರಿ'' ಎಂದನು.

ಭೀಮಸೇನನು ಧರ್ಮರಾಜನು ಸರ್ವೋತ್ತಮನಾದ ನಮ್ಮ ಪ್ರಭುವನ್ನು ಪರಿಶುದ್ಧಜ್ಞಾನದಿಂದ ತಿಳಿಯದೆ ಹೀಗೆ ಮಿಶ್ರಮತಿಯಿಂದ ತೊಳಲಾಡುತ್ತಿದ್ದಾನಲ್ಲಾ ಎಂದು ದುಃಖಪಟ್ಟನು. ''ಧರ್ಮರಾಜಾ! ನಮ್ಮ ಸ್ವಾಮಿಗೂ ದೈತ್ಯನ ಭಯವಿದೆ ಎಂಬ ದೂಷಣೆ ನಿನ್ನ ಬಾಯಲ್ಲಿ ಬರಬಹುದೆ? ರಮಾಬ್ರಹ್ಮಾದಿಗಳು ಉಸಿರಾಡುವುದೂ ನಮ್ಮ ಪ್ರಭುವಾದ ಶ್ರೀಕೃಷ್ಣನ ಕೃಪೆಯಿಂದ. ಸಕಲ ಸುರಾಸುರರ ಭವಿಷ್ಯವೂ ನಮ್ಮ ದೇವನ ಮುಷ್ಟಿಯೊಳಗಿದೆ. ನಾವು ಅಂಥ ಕೃಷ್ಣನಿಗೆ ನಿಜದಾಸರಾದ ಮೇಲೆ ನಮಗೂ ದೈತ್ಯಭಯವೇ? ನಮ್ಮಂಥ ದಾಸರು ನಮ್ಮ ಒಡೆಯನಿಗೆ ಅನಂತಕೋಟಿ ಇದ್ದಾರೆ. ಇಷ್ಟು ಜೀವರಾಶಿಗಳ ರಕ್ಷಾಶಿಕ್ಷೆಗಳನ್ನು ವಹಿಸಿರುವ ನಮ್ಮ ದೇವನಲ್ಲಿ ನನಗೆ ಪರಿಶುದ್ಧಜ್ಞಾನವಿರುವುದರಿಂದ ಆ ಬಲದಿಂದಲೇ ನಾನು ಒಬ್ಬ ದೈತ್ಯನನ್ನಲ್ಲ ಇಡೀ ಬ್ರಹ್ಮಾಂಡವನ್ನೇ ಪುಡಿಪುಡಿ ಮಾಡಿಬಿಡುತ್ತೇನೆ'' ಎಂದಾಗ ಶ್ರೀಕೃಷ್ಣನ ಅನುಗ್ರಹವೆಂಬ ಅಮೃತ ಅವನನ್ನು ಮತ್ತಷ್ಟು ಮೆರಗುಕೊಟ್ಟು ಮೆರೆಸಿತು.

ಶ್ರೀಕೃಷ್ಣನ ದೃಷ್ಟಿಮಾತ್ರದಿಂದಲೇ ದೈತ್ಯರೆಂಬ ವಿಷಕ್ರಿಮಿಗಳು ಸುಟ್ಟು ಬೂದಿಯಾಗುವಾಗ ನಿನಗಿನ್ನೂ ಸಂಶಯವೇ? ಎಂದು ಗದೆಯನ್ನು ಕೈಲಿ ತೆಗೆದುಕೊಂಡು ಭಗವತ್ಸೇವಾ ಸಾಧನದ ಪ್ರತಿಜ್ಞೆ ಮಾಡಿದನು. ಕೃಷ್ಣನು ಧರ್ಮರಾಜನು ಭೀಮನು ದುಡುಕುತ್ತಾನೆಂದು ನಡಗುತ್ತಿರುವುದನ್ನು ನೋಡಿ ''ಧರ್ಮರಾಜಾ! ಜರಾಸಂಧನು ಶಿವನ ಉಪಾಸಕ ಭೀಮಸೇನನು ವಿಷ್ಣುವಿನ ಉಪಾಸಕ ಶಿವನಿಗೆ ವಿಷ್ಣುಭಕ್ತನ ಮೇಲೆ ಎಂದಿಗೂ ದ್ವೇಷ ಉಂಟಾಗುವುದಿಲ್ಲ. ಶಿವಸರ್ವೋತ್ತಮನೆಂದು ತನ್ನನ್ನು ಅಜ್ಞಾನದಿಂದ ಅಪಚಾರಮಾಡುತ್ತಿರುವ ಪಾಪಿಗಳಿಗೆ ವೈಷ್ಣವರಿಂದ ತಕ್ಕ ಶಿಕ್ಷೆ ಕೊಡಿಸಲಿಕ್ಕಾಗಿಯೇ ಆ ದೈತ್ಯರಿಗೆ ವರ ಕೊಟ್ಟಿರುತ್ತಾನೆ. ಕೊಡುತ್ತಾನೆ. ಪರಮ ವೈಷ್ಣವಶಿಖಾಮಣಿಯಾದ ಭೀಮಸೇನನಿಂದ ತನ್ನನ್ನು ಸುಳ್ಳು ಸ್ತುತಿಗಳಿಂದ ಸ್ತುತಿಸಿ ತಾಪದಾಯಕ ತಪಸ್ಸಿನಿಂದ ಪೀಡಿಸುವ ದೈತ್ಯರನ್ನು ಕೊಲ್ಲಿಸಲಿಕ್ಕಾಗಿಯೇ ಜರಾಸಂಧನನ್ನು ಮೆರೆಸುತ್ತಿದ್ದಾನೆ. ನನ್ನ ಶಿವನ ಸಂಕಲ್ಪ ಸತ್ಯವಾಗಬೇಕೆಂದು ನಾನೀಗ ಭೀಮಸೇನನಿಂದಲೇ

ಜರಾಸಂಧನ ವಧೆ ಮಾಡಿಸುತ್ತೇನೆ. ನಾನು ಜಲದುರ್ಗವನ್ನು ನಿರ್ಮಿಸಿರುವುದೂ ದೈತ್ಯರ ಮಿಥ್ಯಾಜ್ಞಾನ ಮತ್ತಷ್ಟು ಮತ್ತತೆ ಹೊಂದಲೆಂಬ ಸಂಕಲ್ಪದಿಂದಲೇ ಎಂದು ತಿಳಿ. ನನ್ನಲ್ಲಿ ಯಾರು ಸಂಶಯಜ್ಞಾನವಿಲ್ಲದೆ ಪೂರ್ಣನಂಬಿಕೆಯಿಂದ ನನ್ನ ಸತ್ಯವಾದ ತತ್ತ್ವವನ್ನು ಆಶ್ರಯಿಸುವರೋ ಅವರನ್ನು ಸರ್ವಕಾಲದಲ್ಲೂ ರಕ್ಷಿಸುವ ಹೊಣೆ ನನ್ನದೆಂಬುದೇ ನನ್ನ ದೀಕ್ಷೆ. ಆದ್ದರಿಂದಲೇ ನನಗೆ ಮುಖ್ಯ ಪ್ರಾಣನು ಅತ್ಯಂತ ಪ್ರೀತಿಪಾತ್ರ ದಾಸನೆಂದೆನಿಸಿದ್ದಾನೆ'' ಎಂದು ಭಗವಂತನೇ ಹೇಳಿದ ಮಾತು ಸಕಲ ಸಜ್ಜನರಿಗೂ ಶುಭಹೊತ್ತುತಂದ ಮಂಗಳದ ಮಳೆಯಾಗಿದೆ. ಧರ್ಮರಾಜನಿಗೆ ಭೀಮಸೇನನ ಸುಜ್ಞಾನ ಪ್ರಕಾಶವನ್ನು ತೋರಿಸಿ ಅವನ ಕಳಂಕವನ್ನು ನಿವಾರಣೆಮಾಡಿದ ಕರುಣಾಳು ಭೀಮಸೇನನೊಬ್ಬನನ್ನೇ ಜರಾಸಂಧನನ್ನು ಕೊಲ್ಲಿಸಲು ಏಕೆ ಕರೆದುಕೊಂಡು ಹೋಗಲಿಲ್ಲ. ಅರ್ಜುನ ಏಕೆ ಬೇಕಾಗಿತ್ತು? ಎಂದರೆ, ಅರ್ಜುನನಿಗೂ ತನ್ನಲ್ಲಿರುವ ಶಸ್ತ್ರಾಸ್ತ್ರಗಳ ಮೇಲೆ ತನ್ನ ವಿದ್ಯಾಬಲದ ಮೇಲೆ ಪರಾಕ್ರಮದ ಮೇಲೆ ಮೋಹವಿದೆ. ಅವನಿಂದಲೇ ರಿಪುಸಂಹಾರ ಆಗುತ್ತದೆಂಬ ಅವನ ಅಜ್ಞಾನವನ್ನು ಭೀಮಸೇನನ ಅದ್ಭುತವಾದ ದೈವಶಕ್ತಿಯಮುಂದೆ ತನ್ನ ಎಲ್ಲಾ ಶಕ್ತಿ ಸಾಮರ್ಥ್ಯಗಳೂ ಅಲ್ಪವೆಂದೂ ಅನಿಶ್ಚಿತವೆಂದೂ ತಿಳಿಯಪಡಿಸಿ ಅವನ ಜ್ಞಾನವನ್ನು ಪಕ್ವಗೊಳಿಸಲು ಕರೆದುಕೊಂಡು ಹೋದನು. ಕೃಷ್ಣನು ಭೀಮಾರ್ಜುನರೊಡನೆ ಮಗಧರಾಜ್ಯಕ್ಕೆ ಬಂದರೆ ಹೊರವಲಯದಲ್ಲಿದ್ದ ಲಿಂಗಪರ್ವತರಾಜನಿಗೆ ಆಗತಾನೆ ಪೂಜೆಸಲ್ಲಿಸಿ ಹೋಗಿದ್ದನು. ಆ ಪರ್ವತರಾಜನ ಕಾವಲಿಗಾಗಿ ಅನೇಕಮಂದಿ ಬಲಿಷ್ಠರಾದ ಭೃತ್ಯರಿದ್ದರು.

ಭೀಮಸೇನನು ಆ ಭೃತ್ಯರೆಲ್ಲರ ಎದುರಿಗೇ ಪರ್ವತವನ್ನು ಅನಾಮತ್ತಾಗಿ ಕಿತ್ತೊಗೆದು ಶತೃಗಳಿಗೆ ಅಡ್ಡವಾಗಿ ಕಟ್ಟಿದ್ದ ಭದ್ರಕೋಟೆಯನ್ನು ಒದ್ದು ಕೆಳಗುರಳಿಸಿದನು. ನಂತರ ಜರಾಸಂಧನ ಮೂಷನೆಂಬ ಅಸುರನ ಚರ್ಮದಿಂದ ಒಂದು ಭೇರಿಯನ್ನು ಮಾಡಿಸಿಟ್ಟಿದ್ದನು. ಆ ಭೇರಿಯನ್ನು ಮೂರು ಬಾರಿ ಹೊಡೆದು ಯುದ್ಧಕ್ಕೆ ಆಹ್ವಾನವಿತ್ತನು.

ಆ ಭೇರಿಯನ್ನು ಜರಾಸಂಧನು ಯುದ್ಧದಲ್ಲಿ ಜಯಶಾಲಿಯಾಗಿ ಬಂದಾಗ ಮತ್ತು ಯುದ್ಧಕ್ಕೆ ಹೊರಡುವಾಗ ಮಾತ್ರ ಹೊಡೆಯುವಂತೆ ಆಜ್ಞೆ ಮಾಡಿದ್ದನು. ಈಗ ಜರಾಸಂಧನು ಯಾಗದೀಕ್ಷಿತನಾಗಿದ್ದುದ್ದರಿಂದ ಭೇರಿನಿನಾದವನ್ನು ರದ್ದುಗೊಳಿಸಿದ್ದನು. ಆದ್ದರಿಂದ ಭೀಮಭೇರಿಯನ್ನು ಹೊಡೆದರೆ ರಾಜಾಜ್ಞೆ ಮೀರಿದಂತಾಗುತ್ತದೆಂಬ ಭಯದಿಂದ ಸಹಸ್ರಾರು ವೀರಭಟರು ಬಂದು ತಡೆದರೂ ಭೀಮನು ಅವರೆಲ್ಲರನ್ನು ಗದೆಯಿಂದ ದೂರತಳ್ಳಿ ಭೇರಿಯನ್ನು ಹೊಡೆದು ಯುದ್ಧಸೂಚನೆಯನ್ನಿತ್ತು ಒಳಗೆ ನುಗ್ಗಿದರು.

ಪುರಜನರನ್ನು ಪೀಡಿಸಲಿಲ್ಲ, ರಾಜ್ಯದ ಅಂದವನ್ನು ಮಾತ್ರ ಕೆಡಿಸಬೇಕೆಂದು ಅಂಗಡಿಗಳನ್ನು ಲೂಟಿಮಾಡುತ್ತ ಕೋಟೆಕೊತ್ತಲುಗಳನ್ನು ಕೆಡವುತ್ತ ನುಗ್ಗಿ ಬರುತ್ತಿದ್ದರು. ಹೂವಿನಹಾರವನ್ನು ಕೊರಳಲ್ಲಿ ಧರಿಸಿಕೊಂಡು ತಾಂಬೂಲವನ್ನು ಸವಿಯುತ್ತ ಪರಿಮಳದ್ರವ್ಯವನ್ನು ಪೂಸಿಕೊಂಡು

ಬ್ರಾಹ್ಮಣವೇಷಧಾರಿಗಳಾಗಿ ನಿರಾಯುಧದಿಂದ ಬರುತ್ತಿದ್ದರು. ವೇಷ ಮರೆಸಿಕೊಂಡು ಸಾತ್ವಿಕ ಬ್ರಾಹ್ಮಣರಂತೆ ಬಂದಕಾರಣವೇನೆಂದರೆ ಜರಾಸಂಧನೆಂಬ ದೈತ್ಯಹುಳುವನ್ನು ಹೊಸಗಿಹಾಕಲಿಕ್ಕೆ ಕ್ಷತ್ರಿಯವೀರ ಬೇಕಾಗಿಲ್ಲ. ಒಬ್ಬ ಸಾತ್ವಿಕಬಲದ ಬ್ರಾಹ್ಮಣನೇ ಸಾಕೆಂಬ ಸಂಕೇತದಿಂದ ಬರುತ್ತಿದ್ದರು.

## ಜರಾಸಂಧನ ಸಮರ ಸಾಹಸ

ಭೀಮಾರ್ಜುನರು ಜರಾಸಂಧ ಎಲ್ಲಡಗಿರುವಿ. ಬಾ ಯುದ್ಧಕ್ಕೆ ರಣಭೇರಿ ನಿನಗೆ ಕೇಳಿಸಿದರೂ ಮುಖ ಮರೆಸಿಕೊಂಡಿರುವೆಯಾ?'' ಎಂದು ಕೆರಳಿಸಿ ಕರೆಯುತ್ತಿದ್ದರು. ಜರಾಸಂಧನ ಯಾಗಭವನಕ್ಕೆ ಅಪಾಮಾರ್ಗದಿಂದ ಪ್ರವೇಶಮಾಡಿದರು. ಜರಾಸಂಧನು ಮೂರುಮಂದಿ ಬ್ರಾಹ್ಮಣರನ್ನು ಕಣ್ಣರಳಿಸಿ ನೋಡಿದನು. ಇವರು ಬ್ರಾಹ್ಮಣವೇಷದಿಂದ ಬಂದ ಕ್ಷತ್ರಿಯವೀರರಾಗಿದ್ದಾರೆಂದು ಇವರ ವೀರಲಕ್ಷಣಗಳು ಸಾರಿಹೇಳುತ್ತಿವೆ. ನನಗೆ ವಿರೋಧವಾಗಿ ವೈರತ್ವವನ್ನು ಸಾಧಿಸಲು ಬಂದವರಾಗಿದ್ದಾರೆ. ಯಾರಿರಬಹುದೆಂದು ಸಂದೇಹಪಟ್ಟನು. ಆದರೂ ಸ್ನಾತಕವ್ರತ ನಿಷ್ಠರಂತೆ ಬರದಿರುವ ಇವರನ್ನು ಮೊದಲೇ ಕೊಲ್ಲಿಸುವ ಯೋಜನೆ ಮಾಡಬಾರದು. ಯಾಗಭವನದಲ್ಲಿ ಅಶುದ್ಧಕಾರ್ಯ ಬೇಡವೆಂದು ಸ್ವಾಗತಿಸಿ ಸತ್ಕಾರ ಮಾಡಿದನು. ನಂತರ ಬ್ರಾಹ್ಮಣರನ್ನು ಕುರಿತು ನೀವು ಬ್ರಾಹ್ಮಣರಂತೆ ಕಾಣುತ್ತಿದ್ದೀರಿ. ಆದರೂ ದೈವದ್ವೇಶದ ಅಧರ್ಮಕಾರ್ಯಗಳನ್ನೇ ಮಾಡುತ್ತಿದ್ದೀರಿ. ಲಿಂಗಪರ್ವತವು ಸಾಕ್ಷಾತ್ತಾಗಿ ಶಿವನ ಪ್ರತಿರೂಪವೆಂದು ನಾನು ಪೂಜೆಮಾಡುತ್ತೇನೆ. ಅಂಥ ದೇವತಾ ಮೂರ್ತಿಗೆ ಅಪಚಾರಮಾಡಿದ್ದೀರಿ. ಪವಿತ್ರಯಾಗಕಾರ್ಯ ಮಾಡುವಾಗ ರಣಭೇರಿಯ ನಾದ ಅಶುಭವೆಂದು ತಿಳಿದಿದ್ದರೂ ಅದನ್ನು ಮೊಳಗಿಸಿದ್ದೀರಿ. ಆದರೂ ನಿಮ್ಮ ಬ್ರಾಹ್ಮಣಸ್ಥಾನಕ್ಕೆ ಗೌರವಕೊಡದಿದ್ದರೆ ಶಿವನಿಗೆ ದ್ರೋಹಮಾಡಿದಂತಾಗುತ್ತದೆಂದು ಸೈರಿಸಿಕೊಂಡು ಇನ್ನೂ ನಿಮ್ಮನ್ನು ಮುಗಿಸದೆ ಬಿಟ್ಟಿದ್ದೇನೆ ಗೌರವಕೊಟ್ಟಿದ್ದೇನೆ'' ಎಂದನು. ಆಗ ಕೃಷ್ಣನು ''ಜರಾಸಂಧಾ! ನಾವು ಬ್ರಾಹ್ಮಣರಂತೆ ಬಂದಿದ್ದೇವೆ ಅಷ್ಟೆ. ಬ್ರಾಹ್ಮಣರಲ್ಲಿ ನಾನು ಕೃಷ್ಣ ಇವರು ಭೀಮಾರ್ಜುನರು. ಬಂದ ಕಾರಣವೇನೆಂದರೆ ನಿನ್ನ ರಾಕ್ಷಸಕರ್ಮವನ್ನು ತಿಳಿದನಾವು ನಿನಗೆ ಸರಿಯಾದ ಶಿಕ್ಷೆ ವಿಧಿಸಲಿಕ್ಕಾಗಿಯೇ ಬಂದಿದ್ದೇವೆ. ನೀನು ಪುರುಷಬಲಿ ಕೊಡಲಿಕ್ಕಾಗಿ ಬಂಧಿಸಿಟ್ಟಿರುವ ರಾಜರೆಲ್ಲರೂ ನನ್ನ ಹೆಂಡತಿಯರ ಕಡೆಯ ಬಂಧುಗಳಾಗಿದ್ದಾರೆ. ನೀನು ಮಾಡುವ ಶಿವಪೂಜೆ ಎಲ್ಲವೂ ವೇದವಿರುದ್ಧವಾಗಿದೆ. ನಿನಗೆ ಸೆರೆಸಿಕ್ಕಿರುವ ಇಪ್ಪತ್ತೆಂಟುಸಾವಿರದ ಎಂಟುನೂರುಮಂದಿ ರಾಜರೂ ನಮ್ಮ ಸ್ವಜನರಾಗಿರುವುದರಿಂದ ಅವರ ರಕ್ಷಣೆಗಾಗಿ ನಾವು ಬಂದಿದ್ದೇವೆ. ಅವರನ್ನು ನೀನಾಗಿ ಬಿಟ್ಟರೆ ಸರಿ ಇಲ್ಲದಿದ್ದರೆ ನಿನ್ನನ್ನು ಮುಗಿಸಿ ಅವರನ್ನು ನಾವೇ ಬಿಡುಗಡೆಮಾಡುತ್ತೇವೆ'' ಏನು? ಬೇಗ ಹೇಳು'' ಎಂದು ದರ್ಪದಿಂದ ಕೇಳಿದನು.

ಆಗ ಜರಾಸಂಧನು "ಕೃಷ್ಣಾ! ನನ್ನ ಆರಾಧನಾಮೂರ್ತಿಯಾದ ರುದ್ರದೇವರ ಬಲಿಗಾಗಿ ಮೀಸಲಾಗಿರಿಸಿರುವ ಬಲಿಪುರುಷರು ನಿನಗೆ ಸ್ವಜನರೆಂದು ಹೆದರಿ ಬಿಟ್ಟುಬಿಡಲು ನಾನು ಸಿದ್ಧನಿಲ್ಲ. ನನ್ನ ಶಿವನಿಗಿಂತಲೂ ನೀನು ನನಗೆ ಅಧಿಕನಲ್ಲ. ನನ್ನ ಪ್ರಾಣವನ್ನೇ ಪಣವಾಗಿಟ್ಟಾದರೂ ನಾನು ಶಿವಪೂಜೆಯನ್ನು ಪ್ರತಿಜ್ಞೆಯಂತೆ ನೆರವೇರಿಸುತ್ತೇನೆ. ನೀವು ಮೂರುಮಂದಿ ಸೇರಿ ಯಾವ ಆಯುಧದಿಂದ ನನ್ನ ಮೇಲೆ ಯುದ್ಧಮಾಡಿದರೂ ನಾನು ಸಾಯತಕ್ಕವನಲ್ಲ. ನಿಮಗೆ ಯಾವ ಆಯುಧ ಬೇಕೋ ಅದನ್ನೇ ತೆಗೆದುಕೊಳ್ಳಿ ಬನ್ನಿರಿ. ಇಲ್ಲದಿದ್ದರೆ ಒಬ್ಬನೇ ಬಂದರೂ ಅದಕ್ಕೂ ಸಿದ್ಧನಿದ್ದೇನೆ'' ಎಂದನು.

ಕೃಷ್ಣನು ನಿನ್ನಂಥ ಕಲಿಪುರುಷರನ್ನು ಧ್ವಂಸಮಾಡಲಿಕ್ಕಾಗಿಯೇ ಅವತರಿಸಿಬಂದಿರುವ ಭೀಮಸೇನನ ಮುಂದೆ ನೀನೊಂದು ಕ್ರಿಮಿ ಎಂಬ ಭಾವನೆ ತೋರಿಸುತ್ತ ''ಜರಾಸಂಧಾ! ನಿನ್ನ ಕರುಣೆ ನಮಗೆ ಬೇಕಿಲ್ಲ. ಬೇಕಾದರೆ ನಿನ್ನ ಬಳಿ ಇರುವ ಅಸಂಖ್ಯ ವೀರ ಸೈನಿಕರೆಲ್ಲರ ಜೊತೆಗೂ ನೀನು ಯುದ್ಧಕ್ಕೆ ಬಂದರೂ ಭೀಮನೊಬ್ಬನೇ ನಿಮ್ಮೆಲ್ಲರನ್ನು ಧ್ವಂಸಮಾಡಬಲ್ಲನು. ನಮ್ಮ ಮೂರುಮಂದಿಯೊಳಗೆ ನಿನಗೆ ಯಾರು ಬೇಕೋ ಅವರೊಬ್ಬರನ್ನೇ ಆರಿಸಿಕೊಂಡು ಯುದ್ಧಕ್ಕೆ ಬಾ'' ಎಂದನು.

ಆದಕ್ಕೆ ಜರಾಸಂಧನು "ನಿಮ್ಮಲ್ಲಿ ಕೃಷ್ಣ ನನಗೆ ಸರಿಜೋಡಿಯಲ್ಲ. ಅರ್ಜುನನು ನನಗೆ ಸಮಬಲ್ಲನಲ್ಲ. ಇದ್ದಿದ್ದರಲ್ಲಿ ಭೀಮ ನನಗೆ ಯುದ್ಧಕೊಡಲು ತಕ್ಕಮಟ್ಟಿಗೆ ಯೋಗ್ಯನು. ಅವನೇ ಯುದ್ಧಕ್ಕೆ ಬರಲಿ" ಎಂದನು. ನಂತರ ಜರಾಸಂಧನಿಗೆ ಪತ್ರತಾಪನೆಂಬುವನು ಸಹದೇವನೆಂಬ ಹೆಸರಿನ ಮಗನಾಗಿ ಹುಟ್ಟಿದ್ದನು. ಅವನಿಗೆ ಪಟ್ಟಾಭಿಷೇಕಮಾಡಿ ತನಗಿನ್ನು ಸಿಂಹಾಸನದ ಋಣ ತೀರಿತೆಂದು ಹೇಳುತ್ತಿದ್ದಾನೋ ಎನ್ನುವಂತೆ ರಾಜನನ್ನೂ ರಾಜ್ಯಕ್ಕೆ ನಿಯಮಿಸಿ ಭೀಮನೊಡನೆ ಯುದ್ಧಕ್ಕೆ ಹೊರಟನು. ಮೊದಲು ಗದಾ ಯುದ್ಧ ಪ್ರಾರಂಭವಾಯಿತು. ಗದಾಚಾಲನವಿದ್ಯದಲ್ಲಿ ಸಮಜೋಡಿಗಳಾದ ಅವರ ಗದಾಪ್ರಹಾರ ದೇಹಕ್ಕೆ ಸೋಂಕಿದಾಗ ಉಕ್ಕಿನಗದೆಗಳೇ ಮುರಿಯುವಂತೆ ಶಬ್ದ ಹದಿನಾಲ್ಕು ಲೋಕಗಳಿಗೂ ಕೇಳಿಸುತ್ತಿತ್ತು. ಹೀಗೆ ಗದಾಯುದ್ಧ ಒಂದೇಸಮನೆ ನಡೆಯುತ್ತಲೇ ಇದ್ದರೂ ಇಬ್ಬರಲ್ಲಿ ಒಬ್ಬರೂ ಸೋಲಲಿಲ್ಲ. ಆಮೇಲೆ ಅದು ನಿಲ್ಲಿಸಿ ಮುಷ್ಟಿಯುದ್ಧಕ್ಕೆ ಪ್ರಾರಂಭಿಸಿದರು. ಮುಷ್ಟಿಗಳ ಪೆಟ್ಟು ಸಿಡಿಲು ಬಡಿದಂತೆ ಸಕಲದಿಕ್ಕಿಗೂ ಶಬ್ದ ವ್ಯಾಪಿಸಿತು. ಗಿರಿಶಿಖರಗಳು ಅವರ ಗುದ್ದಿಗೆ ಅಲ್ಲಾಡಿದವು. ಭೂದೇವಿ ಅದರಿದಳು. ಇಬ್ಬರ ಕ್ರೋಧದಿಂದ ಹೊರಟ ಉಸಿರಿನ ತಾಪಕ್ಕೆ ಸಪ್ತ ಸಮುದ್ರಗಳೂ ಬತ್ತಿದವು. ದೇವತೆಗಳೆಲ್ಲರೂ ಭೀಮಸೇನನಿಂದ ಹರಿದ್ವೇಷಿಯಾದ ಜರಾಸಂಧನು ಸಾಯಲಿ. ರಾಜ್ಯಕ್ಕೆ ಕ್ಷೇಮವಾಗಲೆಂದು ಶುಭವನ್ನು ಕೋರುತ್ತಿದ್ದರು. ಜರಾಸಂಧನ ಕಡೆಯ ದೈತ್ಯರು ನಮ್ಮ ರಾಜನು ದೇವತೆಗಳ ಪಕ್ಷವನ್ನು ಗೆಲ್ಲಲಿ ಎಂದು ಜಯಘೋಷ ಮೊಳಗುತ್ತಿದ್ದರು.

ಭೀಮಸೇನನು ಜರಾಸಂಧನನ್ನು ಕೊಲ್ಲುವುದಕ್ಕೆ ಮೂಲಬಲವನ್ನು ಶ್ರೀಕೃಷ್ಣನ ಅನುಗ್ರಹದಿಂದ ಮೈಗೂಡಿಸಿಕೊಂಡನು. ಬ್ರಹ್ಮದೇವರ ಮಾತನ್ನು ಸತ್ಯಮಾಡಬೇಕೆಂದು ಭೀಮನು ಹದಿನೈದು ದಿನಗಳವರೆಗೂ ಜರಾಸಂಧನೊಡನೆ ಯುದ್ಧ ಮಾಡಿದನು. ಶ್ರೀಕೃಷ್ಣನಾಜ್ಞೆಯಾದ ನಂತರ ಜರಾಸಂಧನನ್ನು ಸಿಗಿದುಹಾಕಬೇಕೆಂದು ಸಂಕಲ್ಪಮಾಡಿ ಮೊದಲು ತನ್ನ ಉಪಾಸನಾಮೂರ್ತಿಗೆ ನಮಸ್ಕಾರಮಾಡಿ ಇಂದು ಶ್ರೀಹರಿದ್ವೇಷಿಯನ್ನು ಕೊಂದು ಶ್ರೀಕೃಷ್ಣಾರ್ಪಣ ಮಾಡಿ ಧನ್ಯನಾಗುವೆನೆಂಬ ಹರ್ಷೋತ್ಸಾಹದಿಂದ ಒಮ್ಮೆ ಸಿಂಹನಾದ ಮಾಡಿ ದೈತ್ಯನ ಕಿರೀಟವನ್ನು ಉರುಳಿಸಿದನು. ಕಟಿಪ್ರದೇಶವನ್ನು ತನ್ನ ಕಾಲಿಂದ ಮರ್ದಿಸಿದನು. ಏಕೆಂದರೆ ಮರ್ಮಸ್ಥಳಕ್ಕೆ ಮೊದಲೇ ಹೊಡೆಯಬಾರದೆಂಬ ಧರ್ಮವಿರುವುದರಿಂದ ಮೊದಲು ಏಟಿಗೇ ತುಂಡುಮಾಡಲಿಲ್ಲ.

ಜರಾಸಂಧನನ್ನು ಎರಡುಭಾಗ ಸೀಳಿದರೆ ಅದು ಮತ್ತೆ ಒಂದುಗೂಡಿತು. ಆಗ ಕೃಷ್ಣನು ಒಂದು ಕಡ್ಡಿಯನ್ನು ಮುರಿದು ಅಪಸವ್ಯಮಾಡಿ ತೋರಿಸಿದನು. ಶ್ರೀಕೃಷ್ಣನ ಸೂಚನೆಯನ್ನು ತಕ್ಷಣ ಅರ್ಥಮಾಡಿಕೊಂಡ ಮಹಾಬುದ್ಧಿಶಾಲಿಯಾದ ಮಾರುತಿಯು ಜರಾಸಂಧನನ್ನು ಎರಡುಭಾಗ ಸೀಳಿ ಅಪಸ್ಯವ್ಯಮಾಡಿ ಎಸೆದನು. ಆಗ ಜರಾಸಂಧನು ಹತನಾದ. ಆಗ ಶ್ರೀಕೃಷ್ಣನಿಗೆ ನಮಸ್ಕಾರಮಾಡಿದನು. ಭೀಮಸೇನನು ಜರಾಸಂಧನನ್ನು ಕೊಂದು ಸ್ವಾಮಿಗೆ ಅರ್ಪಣಮಾಡಿದಾಗ ''ಭೀಮಾ! ನನಗೆ ರಾಜಸೂಯಯಾಗ ಮಾಡಿದ್ದಕ್ಕಿಂತಲೂ ಅಧಿಕವಾದ ಆನಂದ ನಿನ್ನ ದುಷ್ಟನಿಗ್ರಹ ಕಾರ್ಯದಿಂದ ಆಯಿತು'' ಎಂದನು. ಆನಂದಸ್ವರೂಪಿಯೇ ತಾನಾಗಿದ್ದರೂ ಹೊಸದಾಗಿ ಆನಂದಪಟ್ಟವನಂತೆ ತೋರಿಸಿ ತನ್ನ ಭಕ್ತರನ್ನು ಅಧರ್ಮಖಂಡನೆಯ ಸಾಧನಕ್ಕೆ ಹುರಿದುಂಬಿಸಿದನು.

## ಅರಿ ಭಯಂಕರ ಭೀಮನೊಬ್ಬನೇ

ಜರಾಸಂಧನ ವಧೆ ಆದನಂತರ ಅವನಮಗ ಸಹದೇವನು ಮೂಲನಾರಾಯಣನಿಂದ ಬಂದಿದ್ದ ರಥವನ್ನು ತಂದು ಶ್ರೀಕೃಷ್ಣನಿಗರ್ಪಿಸಿದನು. ಶ್ರೀಕೃಷ್ಣನಿಗರ್ಪಿತವಾದ ಕ್ಷಣವೇ ಗರುಡನು ಬಂದು ಧ್ವಜಸ್ತಂಭದಲ್ಲಿ ನೆಲಸಿದನು. ಜರಾಸಂಧನ ಪುತ್ರನು ಭೀಮಾರ್ಜುನರಿಗೂ ಶ್ರೀಕೃಷ್ಣನಿಗೂ ಅಮೂಲ್ಯ ಕಾಣಿಕೆಗಳನ್ನಿತ್ತು ನಮಸ್ಕಾರಮಾಡಿದಾಗ ಕೃಷ್ಣನು ''ಸಹದೇವಾ! ನಿನ್ನ ತಂದೆ ಸೆರೆ ಹಿಡಿದಿಟ್ಟಿರುವ ಇಪ್ಪತ್ತೆಂಟುಸಾವಿರದ ಎಂಟುನೂರು ಮಂದಿ ರಾಜರನ್ನು ಮೊದಲು ಬಿಡುಗಡೆಮಾಡಿ ಆಮೇಲೆ ನಿನ್ನತಂದೆಯ ಉತ್ತರಕ್ರಿಯೆಗಳನ್ನು ಮಾಡು'' ಎಂದು ಹೇಳಿದನು. ಸಹದೇವನು ''ಹಾಗೆಯೇ ಆಗಲಿ'' ಎಂದು ಹೇಳಿ ತನ್ನ ಕೈಸೆರೆಸಿಕ್ಕಿದ್ದ ಸಕಲರಾಜರನ್ನೂ ಕರೆಯಿಸಿಕೊಂಡು ಎಲ್ಲರಿಗೂ ಮಂಗಳಸ್ನಾನಮಾಡಿಸಿ ರಾಜ್ಯಯೋಗ್ಯವಾದ ಉಡುಪುಗಳನ್ನು ಕೊಟ್ಟು ಭೂರಿ ಭೋಜನದಿಂದ ಸಂತೋಷಪಡಿಸಿ ಶ್ರೀಕೃಷ್ಣನಬಳಿಗೆ

ರಥಗಳಲ್ಲಿ ಕೂಡಿಸಿ ಕಳುಹಿಸಿದನು.

ರಾಜರೆಲ್ಲರೂ ಶ್ರೀಕೃಷ್ಣನಿಗೂ ಭೀಮಾರ್ಜುನರಿಗೂ ನಮಸ್ಕಾರಮಾಡಿ ತಮಗೆ ಮಗಧರಾಜಪುತ್ರನು ತೋರಿಸಿದ ಗೌರವಾದಿಗಳನ್ನು ತಿಳಿಸಿ ಹೊಗಳಿದರು. ''ಭೀಮಸೇನಾ! ಜರಾಸಂಧನನ್ನು ಕೊಂದು ಲೋಕಕ್ಕೇ ಮಹದುಪಕಾರಮಾಡಿದಂತಾಯಿತು'' ಎಂದುಹೇಳಿ ಭೀಮಸೇನನಿಗೆ ಕೃತಜ್ಞರಾಗಿ ನಮಸ್ಕಾರ ಮಾಡಿದರು. ನಂತರ ಶ್ರೀಕೃಷ್ಣನು ಭೀಮಾರ್ಜುನರೊಡಗೂಡಿ ಇಂದ್ರಪ್ರಸ್ಥಕ್ಕೆ ಜಯಭೇರಿಯೊಂದಿಗೆ ಬಂದು ಜರಾಸಂಧನ ವಧೆ ಭೀಮನಿಂದ ನಡೆಯಿತೆಂದು ತಿಳಿಸಿದಾಗ ''ಕೃಷ್ಣಾ! ನೀನು ಇದ್ದಲ್ಲಿ ಜಯವೇ ಆಗುತ್ತದೆ. ನಿನ್ನನ್ನು ಆಶ್ರಯ ಮಾಡಿದವರಿಗೆ ಸೋಲು ಭಯಪಟ್ಟು ಓಡುತ್ತದೆ'' ಎಂದು ಹೇಳಿ ಸಂತೋಷಪಟ್ಟನು.

ಮುಂದೆನಡೆಯಬೇಕಾದ ಯಾಗಕ್ಕೆ ವೇದವ್ಯಾಸರಿಂದ ಎಲ್ಲಾ ಸಲಕರಣೆ ಸೌಲಭ್ಯಗಳೂ ಸಿದ್ಧವಾದವು. ದಿಗ್ವಿಜಯಕ್ಕೆ ಹೊರಡುವಾಗ ಅರ್ಜುನನು ನನ್ನಲ್ಲಿ ಗಾಂಡೀವ ಧನಸ್ಸಿದೆ. ಅಕ್ಷಯಬತ್ತಳಿಕೆ ಇದೆ. ದಿವ್ಯರಥವಿದೆ. ವೀರಮಾರುತಿ ಧ್ವಜದಲ್ಲಿದ್ದಾನೆ. ದ್ರೋಣಾಚಾರ್ಯರಿಂದ ಲಭ್ಯವಾದ ಅಸಮಪ್ರಭಾವದ ಧನುರ್ವಿದ್ಯೆ ಲಭಿಸಿದೆ. ಶ್ರೀಕೃಷ್ಣ ಇದ್ದಾನೆ. ನಾನು ಪೂರ್ವದಿಕ್ಕಿಗೆ ಹೋಗಿ ಅಲ್ಲಿರುವ ಅಸಮರೆನಿಸಿದ ವೀರರಾಜರನ್ನು ಗೆದ್ದು ಕಪ್ಪ ತರುತ್ತೇನೆ'' ಎಂದನು.

ಅರ್ಜುನನು ಇನ್ನೂ ಭೀಮಸೇನನ ಸತ್ವಪರಾಕ್ರಮವನ್ನು ಅರಿಯದೆ ತನ್ನ ಹೆಗ್ಗಳಿಕೆ ತೋರಿಸುತ್ತಿದ್ದಾನೆಂದು ವೇದವ್ಯಾಸರು, ''ಅರ್ಜುನಾ! ನೀನು ಇಷ್ಟೆಲ್ಲಾ ಸಂಪತ್ತನ್ನು ಹೊಂದಿದ್ದರೂ ಭೀಮಸೇನನಿಗಿಂತಲೂ ವಯಸ್ಸಿನಲ್ಲೂ ಚಿಕ್ಕವನು. ಪರಾಕ್ರಮದಲ್ಲೂ ಚಿಕ್ಕವನಾದ್ದರಿಂದ ನಿನಗೆ ಕೀಚಕರೇ ಮೊದಲಾದ ವೀರರು ವಶವಾಗುವುದಿಲ್ಲ. ಅವರು ಬಲಾಧಿಕ್ಯರು. ಕೀಚಕ-ಕರ್ಣ ಮೊದಲಾದ ವೀರರನ್ನು ಸೋಲಿಸುವ ಸಾಮರ್ಥ್ಯ ಭೀಮನಿಗೆ ಮಾತ್ರ ಉಂಟು. ನರಾವೇಶ ನಿನ್ನಲ್ಲಿದ್ದರೂ ಅವರು ನಿನಗೆ ತಲೆಬಾಗುವವರಲ್ಲ ಕಲಿಮರ್ಧನನಾದ ಭೀಮಸೇನ ಒಬ್ಬನ ಕಾಲಿಗೇ ಅವರು ಬೀಳತಕ್ಕವರಾಗಿದ್ದಾರೆ. ಭೀಮನನ್ನು ಕಂಡರೆ ಸಕಲರಾಜರೂ ಹೆದರಿ ಕಪ್ಪ ತಂದೊಪ್ಪಿಸುತ್ತಾರೆ. ಏಕೆಂದರೆ ಜರಾಸಂಧನಂತಹ ಜಗದ್ವಿಖ್ಯಾತವೀರನನ್ನೇ ಸಿಗಿದು ಎಸೆದಿರುವ ಭೀಮನೊಡನೆ ನಮಗೆ ಸಮರದ ಸರಸಬೇಡವೆಂದು ಸವಿನಯದಿಂದ ಕಾಣಿಕೆಕೊಟ್ಟು ಶರಣಾಗತರಾಗುತ್ತಾರೆ. ಕೀಚಕ-ದಂತವಕ್ತ್ರ-ಶಿಶುಪಾಲ - ಪೌಂಡ್ರಕ ವಾಸುದೇವಾದಿ ಮಹಮಹಾವೀರರೆಲ್ಲರೂ ಭೀಮನೊಬ್ಬನಿಗೆ ಮಾತ್ರ ಬಗ್ಗತಕ್ಕವರು.'' ನೀನು ಕುಬೇರ ರಾಜ್ಯವಾದ ಉತ್ತರ ಪ್ರದೇಶಕ್ಕೆ ಹೋಗಿ ಸಪ್ತದ್ವೀಪಗಳ ರಾಜರಿಂದಲೂ ಕಪ್ಪ ಒಪ್ಪಿಸಿಕೊಂಡು ಬಾ. ಪಾತಾಳ ಲೋಕಕ್ಕೂ ಹೋಗಿ ಹೇರಳವಾದ ದ್ರವ್ಯದ ಹೇರನ್ನು ಹೊರಸಿಕೊಂಡು ಜಯಭೇರಿಯೊಂದಿಗೆ ಬಾ. ಉತ್ತರದಿಕ್ಕಿನಲ್ಲಿರುವ ಬಾಣಾಸುರನನ್ನು ನಿನಗೆ ಗೆಲ್ಲಲು ಸಾಧ್ಯವಿಲ್ಲ. ಅವನನ್ನು ಭೀಮನೇ

ನೋಡಿಕೊಳ್ಳುತ್ತಾನೆ.

ನೀನೇನು ಸಾಮಾನ್ಯನಲ್ಲ. ಸಮರಸಿಂಹನೆಂದು ಪ್ರಖ್ಯಾತನಾಗಿದ್ದರೂ ಭೀಮಸೇನನು ಹೋದರೆ ಅವನೊಂದಿಗೆ ಯಾರೂ ಕದನದ ತಂಟೆಗೆ ಹೋಗದೆ ಸುಲಭವಾಗಿ ಕಪ್ಪ ವಸೂಲಾಗುತ್ತದೆ. ಆದ್ದರಿಂದ ಭೀಮ ಪೂರ್ವಕ್ಕೆ ಹೋಗಲಿ. ನೀನು ಉತ್ತರಕ್ಕೆ ಹೋಗು. ನಕುಲ ಪಶ್ಚಿಮಕ್ಕೂ ಸಹದೇವ ದಕ್ಷಿಣಕ್ಕೂ ದಿಗ್ವಿಜಯಕ್ಕೆ ಹೊರಟು ಎಲ್ಲರೂ ಯಾಗದ ಮುಹೂರ್ತ ತಪ್ಪದಂತೆ ಜಯಶೀಲರಾಗಿ ಕಪ್ಪಕಾಣಿಕೆಯೊಂದಿಗೆ ಬನ್ನಿರಿ'' ಎಂದು ವೇದವ್ಯಾಸರು ನಾಲ್ಕು ಜನರಿಗೂ ತಾಂಬೂಲ ಕೊಡಿಸಿ ಆಜ್ಞೆಮಾಡಿದರು. ವೇದವ್ಯಾಸರಿಂದ ಅನುಗ್ರಹ ವಾಕ್ಯಗಳನ್ನು ಪಡೆದ ವೀರ ಮಣಿಗಳು ಸಂತೋಷದಿಂದ ವೇದವ್ಯಾಸರಿಗೆ ನಮಸ್ಕಾರಮಾಡಿ ಹೊರಟರು.

ಭೀಮಸೇನನು ಶ್ರೀವೇದವ್ಯಾಸರ ಅಪ್ಪಣೆಯಂತೆ ಪೂರ್ವದಿಕ್ಕಿಗೆ ಹೊರಟು ಮೊದಲು ವಿರಾಟನಗರಿಗೆ ಹೋದನು. ಅಲ್ಲಿ, ಕೀಚಕನಿಂದ ಅಪಾರದ್ರವ್ಯವನ್ನು ಕಾಣಿಕೆ ಪಡೆದು ಅಲ್ಲಿಂದ ಚೈದ್ಯ ದೇಶಕ್ಕೆ ಹೊರಟನು. ಅಲ್ಲಿ ಶಿಶುಪಾಲನ ತಾಯಿಯು ಭೀಮನನ್ನು ನೋಡಿ ಶಿಶುಪಾಲನನ್ನು ಕುರಿತು ಭಯದಿಂದ ''ಪುತ್ರಾ! ಭೀಮನು ದಿಗ್ವಿಜಯಕ್ಕಾಗಿ ಬಂದಿದ್ದಾನೆ. ಅವನನ್ನು ಕದನಕ್ಕೆ ಕೆರಳಿಸದೆ, ಕಪ್ಪವನ್ನು ಕೊಟ್ಟು ಕಳುಹಿಸಿಬಿಡು. ಅವನನ್ನು ಬಹುಮಾನಿಸದಿದ್ದರೆ ನಾವೆಲ್ಲರೂ ಅವನಗದೆಗೆ ತುತ್ತಾಗಬೇಕಾಗುತ್ತದೆ'' ಎಂದು ಹೇಳಿ ಭೀಮನನ್ನು ಉಪಚರಿಸಿ ತಮ್ಮ ಮನೆಯಲ್ಲಿರಿಸಿಕೊಂಡು ಕಪ್ಪಕಾಣಿಕೆಗಳೊಂದಿಗೆ ಕಳುಹಿಸಿದರು. ನಂತರ ಹರಿದ್ವೇಷಿಯಾದ ಪೌಂಡ್ರಕ ವಾಸುದೇವನನ್ನು ತನ್ನ ಪಾದದ ಮೇಲೆ ಕೆಡಹುವಂತೆ ಮಾಡಿ ಅವನಿಂದ ಕಪ್ಪಕಾಣಿಕೆಗಳನ್ನು ಕಿತ್ತುಕೊಂಡು ಕರ್ಣನ ಬಳಿಗೆ ಬಂದನು. ಕರ್ಣನ ಸಾಹಸ ಭೀಮನ ಮುಂದೆ ಬತ್ತಿಹೋಯಿತು. ಶರಣಾಗತನಾದ ಅವನಿಂದ ಅಪಾರ ದ್ರವ್ಯವನ್ನು ಕಸಿದುಕೊಂಡು ಹಿಮವತ್ಪರ್ವತದ ಬಳಿಗೆ ಬಂದನು. ಅಜ್ಞಾನರಹಿತನಾದ ಭೀಮಸೇನನನ್ನು ಪರೀಕ್ಷಿಸಿ ಅವನಿಗೆ ಮುಂದಾಗುವ ಜಯವನ್ನು ಈಗಲೇ ಘೋಷಿಸಿ ಕಳುಹಿಸಬೇಕೆಂದೂ ಅವನ ಪ್ರಖ್ಯಾತಿ ಜಗದಾದ್ಯಂತವೂ ಅಜ್ಞಾನಿಗಳೂ ತಿಳಿಯುವಂತಾಗಬೇಕೆಂದೂ ಬಹು ಪರಾಕ್ರಮಿಗಳಾದ ಗರುಡಶೇಷರು ಯುದ್ಧಕ್ಕೆ ಬಂದರು. ಪರಾಕ್ರಮವೀರರಾದ ಗರುಡಶೇಷರೂ ಭೀಮನ ಕೈಲಿ ಸೋತರೆಂದು ಭೀಮನ ಪರಾಕ್ರಮದ ಸಿಡಿಮದ್ದನ್ನು ಹಾರಿಸಲಿಕ್ಕಾಗಿ ಸೋತು ಶರಣಾಗತರಾಗಿ ದ್ರವ್ಯಸಂಪತ್ತನ್ನು ಕಪ್ಪಕೊಟ್ಟು ಹೋದರು.

ದೇವತೆಗಳು ಹುಲಿಸಿಂಹಗಳ ಆಕಾರದಲ್ಲಿ ಬಂದು ಭೀಮಸೇನನ ಮೇಲೆ ಬಿದ್ದು ಆಕ್ರೋಶದಿಂದ ಯುದ್ಧ ಮಾಡುತ್ತಿದ್ದರೆ ಭೀಮನು ಆ ದೇವತೆಗಳನ್ನು ಕೊಲ್ಲದೆ ಆಡಾಡುತ್ತಲೇ ಅವರನ್ನು ಸೋಲಿಸಿದನು. ದೇವತೆಗಳು ಭೀಮನನ್ನು ಹೊಗಳಿ ಕಾಣಿಕೆ ಒಪ್ಪಿಸಿ ಕಳುಹಿಸಿದರು. ಆಗ ಭೀಮನು ದಿಗ್ವಿಜಯಕ್ಕೆ ಹೊರಟು ಬರುತ್ತಿದ್ದಾನಂತೆ. ಸಕಲದೇವತೆಗಳೂ ಅವನಿಗೆ

ಸೋತು ಕಪ್ಪಕೊಟ್ಟಿದ್ದಾರಂತೆ. ಗರುಡಶೇಷರೇ ಅವನ ಸಮರಸಾಹಸಕ್ಕಂಜಿ ರತ್ನಾದಿಗಳನ್ನು ತುಂಬಿ ಕಳುಹಿಸಿದರಂತೆ ಎಂದು ಎಲ್ಲೆಲ್ಲೂ ಭೀಮನ ಪರಾಕ್ರಮದ ಮಾತೇ ಮಾತಾಯಿತು.

ನಂತರ ಭೀಮಸೇನನು ಶೋಣಿತಪುರದಲ್ಲಿರುವ ಬಾಣಾಸುರನನ್ನು ಗೆಲ್ಲಲು ಸಮುದ್ರವನ್ನು ದಾಟಿ ಹೋದನು. ಅಲ್ಲಿ ಮಹಾರುದ್ರನು ಮದ್ದಾನೆಯ ರೂಪದಲ್ಲಿ ಬಂದು ಎದುರಿಸಿದನು. ಭೀಮಸೇನನು ಆನೆಯ ನಿಜರೂಪ ಯಾವುದೆಂದು ತಿಳಿದು ಅದನ್ನು ತನ್ನ ವಜ್ರಮುಷ್ಟಿಯಿಂದ ಗುದ್ದಿ ಸೋಲಿಸಿದನು. ಆಗ ರುದ್ರದೇವನು ನಿಜರೂಪದಿಂದ ''ಭೀಮಸೇನಾ! ನೀನು ನನ್ನ ಸ್ವಾಮಿಯ ಪರಮಭಕ್ತನಾದ್ದರಿಂದ ನಿನ್ನ ಪರಾಕ್ರಮಕೀರ್ತಿ ಜಗತ್ತಿನಲ್ಲಿ ಮತ್ತಷ್ಟು ಮೆರೆಸಬೇಕೆಂಬ ವಾತ್ಸಲ್ಯದಿಂದ ಮದ್ದಾನೆಯ ಘೋರಾಕೃತಿಯಿಂದ ನಿನ್ನೊಡನೆ ಸೆಣಸಾಡಿ ಸೋತಿದ್ದೇನೆ'' ಎಂದು ಹೇಳಿದನು. ಆಗ ಭೀಮಸೇನನು ''ನಾನು ಶ್ರೀಕೃಷ್ಣನಾಣತಿಯಂತೆ ಬಂದಿದ್ದೇನೆ. ಏಕೆಂದರೆ ನಮ್ಮಣ್ಣ ಧರ್ಮರಾಜನು ರಾಜಸೂಯಯಾಗ ಮಾಡಲಿದ್ದಾನೆ. ಆದ್ದರಿಂದ ದಿಗ್ವಿಜಯ ಹೊರಟಿದ್ದೇವೆ'' ಎನಲು ಬಲಿಚಕ್ರವರ್ತಿಯ ಪುತ್ರ ಬಾಣಾಸುರನನ್ನು ಕುರಿತು ''ಬಾಣಾಸುರಾ! ದಿಗ್ವಿಜಯಕ್ಕೆ ಬಂದಿರುವ ಭೀಮನಿಂದ ನಾನು ಸೋತಿದ್ದೇನೆ. ಅವನಿಗೆ ಕಪ್ಪವನ್ನು ಕೊಟ್ಟು ಕಳುಹಿಸು ಎಂದು ಅಸುರಮೋಹನಾರ್ಥವಾಗಿ ಮಾತನಾಡಿ ಅವನಿಂದ ಹೇರಳವಾದ ಸಂಪತ್ತನ್ನು ಕೊಟ್ಟು ಕಳುಹಿಸಿದನು. ಹೀಗೆ ಭೀಮಸೇನನು ಸರ್ವರಿಂದಲೂ ಕಪ್ಪವನ್ನು ಪಡೆದು ಇಂದ್ರಪ್ರಸ್ಥಕ್ಕೆ ಬಂದು ಶ್ರೀಕೃಷ್ಣಾದಿಗಳೆಲ್ಲರಿಗೂ ನಮಸ್ಕಾರಮಾಡಿ ದಿಗ್ವಿಜಯ ಸಂದರ್ಭದಲ್ಲಿ ನಡೆದ ರಸಸನ್ನಿವೇಶಗಳೆಲ್ಲವನ್ನು ಹೇಳಿ ತಂದ ಸಂಪತ್ತಿನ ರಾಶಿಗಳನ್ನರ್ಪಿಸಿ ಕೃಷ್ಣಾರ್ಪಣವೆಂದನು. ಬ್ರಹ್ಮದೇವರು ಸರ್ವಜಯ ಎಂಬ ಹೆಸರು ಪಡೆದಿರುವಂತೆ ಭಾವೀಬ್ರಹ್ಮದೇವನಾದ ಭೀಮಸೇನನಿಗೂ ಸರ್ವಜಯ ಎಂಬ ಹೆಸರಾಯಿತು.

ಸಹದೇವನು ದಕ್ಷಿಣದಿಕ್ಕಿನಲ್ಲಿದ್ದ ರುಕ್ಮಿಯ ರಾಜ್ಯಕ್ಕೆ ಹೋದನು. ರುಕ್ಮಿಯು ಸಹದೇವನಿಗಿಂತಲೂ ಬಲಿಷ್ಠನೇ ಆಗಿದ್ದನು. ಆದರೆ ಆತನು ಮಹಾರುದ್ರನನ್ನು ಕುರಿತು ತಪಸ್ಸುಮಾಡಿ ಪಿನಾಕ ಧನಸ್ಸನ್ನು ಪಡೆದುಕೊಂಡಿದ್ದನು. ರುದ್ರನು ಪಿನಾಕಧನಸ್ಸನ್ನು ನೀಡುವಾಗ ''ರುಕ್ಮಿ! ಈ ಧನಸ್ಸು ನಿನಗೆ ಸದಾ ಜಯವನ್ನೇ ತರುತ್ತದೆ. ಆದರೆ ಒಂದು ಮಾತು ನೀನು ವಿಷ್ಣುಭಕ್ತರ ಸಂಗಡ ಯಾವಾಗ ಯುದ್ಧಮಾಡುವಿಯೋ ಆ ಕ್ಷಣವೇ ನಿನ್ನನ್ನು ಅಗಲಿ ನನ್ನ ಬಳಿಗೆ ಬಂದುಬಿಡುತ್ತದೆ'' ಎಂದು ಹೇಳಿದ್ದನು. ಆದ್ದರಿಂದ ಪಿನಾಕಧನಸ್ಸು ತನ್ನ ಕೈಬಿಟ್ಟು ಹೋಗುತ್ತದೆಂಬ ಭಯದಿಂದ ಸಹದೇವನೊಡನೆ ಯುದ್ಧಮಾಡದೆ ಕಪ್ಪವನ್ನು ಕೊಟ್ಟು ಕಳುಹಿಸಿದನು. ಅದಲ್ಲದೆ ರುಕ್ಮಿಗೆ ಭೀಮನ ಭಯವೂ ಅಧಿಕವಾಗಿತ್ತು.

ನಂತರ ಲಂಕಾಪಟ್ಟಣಕ್ಕೆ ಹೋಗಬೇಕಾದರೆ ಸಮುದ್ರ ದಾಟಿಸಲಿಕ್ಕಾಗಿ ಘಟೋತ್ಕಚನನ್ನು ಸ್ಮರಿಸಿದನು. ಘಟೋತ್ಕಚನು ''ಪಾಂಡವರಲ್ಲಿ ಯಾರು ನನ್ನನ್ನು ಕರೆದರೂ ಆ ಕ್ಷಣವೇ

ಬರುತ್ತೇನೆ'' ಎಂದು ಭೀಮನ ಸಮ್ಮುಖದಲ್ಲಿ ಮಾತು ಕೊಟ್ಟಿದ್ದಂತೆ ಸಹದೇವನು ಸ್ಮರಿಸಿದಾಕ್ಷಣ ಬಂದನು. ರಾಮಾವತಾರದಲ್ಲಿ ವಿಭೀಷಣನಿಗೆ ಸ್ವಾಮಿಯು ''ವಿಭೀಷಣಾ! ನಾನು ಮುಂದೆ ಕೃಷ್ಣಾವತಾರ ಮಾಡುತ್ತೇನೆ. ಆಗ ನನ್ನ ಭಕ್ತರು ಪಾಂಡವರಾಗಿ ಅವತರಿಸಿ ದಿಗ್ವಿಜಯಾರ್ಥವಾಗಿ ನಿನ್ನ ಬಳಿಗೆ ಬಂದಾಗ ಅವರೊಡನೆ ವಿರೋಧ ಮಾಡದಂತೆ ಗೌರವದಿಂದ ಕಪ್ಪವನ್ನು ಕೊಡು'' ಎಂದು ಅಪ್ಪಣೆ ಮಾಡಿದ್ದಂತೆ ಸಹದೇವನು ವಿಭೀಷಣನ ಬಳಿ ಬಂದಾಗ ವಿಭೀಷಣನು ಭಗವದ್ವಾಕ್ಯದಂತೆ ಅವನಿಗೆ ಕಪ್ಪವನ್ನು ಕೊಟ್ಟು ಗೌರವದಿಂದ ಕಳುಹಿಸಿಕೊಟ್ಟನು. ಸಹದೇವನು ಹೀಗೆ ದಕ್ಷಿಣದಿಕ್ಕಿನ ಬಲಿಷ್ಠರಾಜರನ್ನು ಶ್ರೀಕೃಷ್ಣಾನುಗ್ರಹದಿಂದ ಸಂಧಿಸಿ ಹೇರಳವಾದ ದ್ರವ್ಯರಾಶಿಯೊಡನೆ ಬಂದು ''ಕೃಷ್ಣಾ! ಸಕಲವೀರರನ್ನು ಮೊದಲೇ ನೀನು ಗೆದ್ದು ನನ್ನನ್ನು ಉತ್ಸವಮೂರ್ತಿಯಂತೆ ಕಳುಹಿಸಿದ್ದಿ. ನಿನ್ನ ಅನುಗ್ರಹಬಲದಿಂದ ದಿಗ್ವಿಜಯ ಮುಗಿಸಿ ಬಂದೆನೆಂದು ನಮಸ್ಕಾರ ಮಾಡಿದನು.

ಪಶ್ಚಿಮದಿಕ್ಕಿನ ಕಡೆಗೆ ಹೊರಟ ನಕುಲನೂ ಸಕಲರಾಜರನ್ನು ಗೆದ್ದು ನಂತರ ಶಲ್ಯರಾಜನ ಬಳಿಗೆ ಹೋದನು. ಶಲ್ಯನು ನಕುಲನನ್ನು ವಿರೋಧಿಸದೆ ತನ್ನ ಸೋದರಳಿಯನೆಂಬ ಅಭಿಮಾನದಿಂದ ಕಪ್ಪವನ್ನು ಕೊಟ್ಟು ಕಳುಹಿಸಿದನು. ಅರ್ಜುನನು ಉತ್ತರಕ್ಕೆ ಹೊರಟವನು ಪರ್ವತದೇಶದವರು, ತ್ರಿಗರ್ತದೇಶದವರು ಕಪ್ಪವನ್ನು ಕೊಡದೆ ಎದುರಿಸಲು ಬಂದರು. ಅರ್ಜುನನ ಗಾಂಡೀವ ಅವರ ಸೊಕ್ಕನ್ನು ಮುರಿದಾಗ ಶರಣಾಗತರಾಗಿ ಕಪ್ಪ ಒಪ್ಪಿಸಿದರು. ನಂತರ ಕುಬೇರನ ಅವತಾರನಾದ ಭಗದತ್ತನ ಬಳಿಗೆ ಬಂದನು. ಭಗದತ್ತನು ಅರ್ಜುನನನ್ನು ಗೆದ್ದು ನಂತರ ಕಪ್ಪ ತೆಗೆದುಕೊ'' ಎಂದು ರಣದಬ್ಬರದಿಂದ ಸುಪ್ರತೀಕವೆಂಬ ಆನೆ ಏರಿಬಂದ ಅವನೊಡನೆ ಎಂಟುದಿನ ಒಂದೇಸಮನೆ ಯುದ್ಧಮಾಡಿದರೂ ಅರ್ಜುನನನ್ನು ಗೆಲ್ಲಲಾಗದೆ ಕುಂದಿದನು. ಆದರೂ ಮದಭರಿತನಾಗಿ ''ಅರ್ಜುನಾ! ನನಗೆ ಮಹಾರುದ್ರನವರ ಬಲವಿದೆ. ಮಂತ್ರಸಿದ್ಧಿ ಬಲವಿದೆ ನಿನ್ನನ್ನು ಸೋಲಿಸುವುದು ದೊಡ್ಡಮಾತಲ್ಲ. ನೀನು ನನ್ನ ಗುರುವಾದ ದೇವೇಂದ್ರನ ಪುತ್ರನೆಂದು ಅರಿತು ಗುರುಪುತ್ರನನ್ನು ಸೋಲಿಸಿದರೆ ಗುರುದ್ರೋಹದ ದೋಶ ಬರುತ್ತದೆಂಬ ಧರ್ಮದಿಂದ ಯುದ್ಧವನ್ನು ನಿಲ್ಲಿಸಿ ನಿನಗೆ ಸ್ನೇಹಭಾವದಿಂದ ಕಪ್ಪವನ್ನು ಕೊಡುತ್ತೇನೆ'' ಎಂದುಹೇಳಿ ಹೇರಳಸಂಪತ್ತನ್ನು ಕೊಟ್ಟನು. ಅದನ್ನು ಸ್ವೀಕಾರಮಾಡಿ ಅರ್ಜುನನು ಸಪ್ತದ್ವೀಪಗಳನ್ನು ಗೆದ್ದನು. ನಂತರ ಕಪಿಲಮುನಿಗಳ ದರ್ಶನಮಾಡಿ ಧರ್ಮರಾಜನ ರಾಜಸೂಯಯಾಗದ ವಿಚಾರ ತಿಳಿಸಿದನು. ಕಪಿಲಮುನಿ ಅರ್ಜುನನಿಗೆ ಅನುಗ್ರಹಮಾಡಿ ಬಲಿ ಚಕ್ರವರ್ತಿಯಿಂದ ಅಧಿಕ ಸಂಪತ್ತಿನ ರಾಶಿಯನ್ನು ಕೊಡಿಸಿದನು. ಕಪಿಲನಾಮಕ ಪರಮಾತ್ಮನಿಂದ ಅನುಗ್ರಹ ಹೊಂದಿ ಅಪಾರ ಸಂಪತ್ತಿನ ರಾಶಿಯೊಂದಿಗೆ ಇಂದ್ರಪ್ರಸ್ಥಕ್ಕೆ ಬಂದನು. ಹೀಗೆ ನಾಲ್ಕುಜನರೂ ದಿಗ್ವಿಜಯಮಾಡಿ ತಂದ ಸಂಪತ್ತಿನ ರಾಶಿಯನ್ನು ತುಂಬಿಸಲು ಸಾಮಾನ್ಯವಾದ ಪಟ್ಟಣ ಸಾಕಾಗುತ್ತಿರಲಿಲ್ಲ. ಶ್ರೀಕೃಷ್ಣನ ಅನುಗ್ರಹ ಪೂರ್ಣ ಸನ್ನಿಧಾನವಿದ್ದ ಇಂದ್ರಪ್ರಸ್ಥವು ಅಕ್ಷಯಸಂಪತ್ತುಗಳಿಂದ ಕೂಡಿ ಅಕ್ಷಯವಾದ ಸ್ಥಳವನ್ನೇ ಒದಗಿಸಿತು.

ನಂತರ ವೇದವ್ಯಾಸರ ಅಪ್ಪಣೆಪಡೆದ ಧರ್ಮರಾಜನು ದೀಕ್ಷಾಬದ್ಧನಾದನು. ಭೀಮ, ಅರ್ಜುನ, ನಕುಲ ಸಹದೇವಾದಿಗಳೂ ಯಾಗಸಂಕಲ್ಪದಿಂದ ದೀಕ್ಷೆವಹಿಸಿದರು. ದ್ರೌಪದೀದೇವಿಯಲ್ಲಿ ಶ್ಯಾಮಲಾದೇವೀ ಆವೇಶವಿದ್ದುದ್ದರಿಂದ ದ್ರೌಪದಿಯು ಒಬ್ಬಳು ಮಾತ್ರ ಧರ್ಮರಾಜನೊಡನೆ ದೀಕ್ಷಾವಹಿಸಿ ಧರ್ಮರಾಜನ ಬಳಿ ಕುಳಿತಳು. ಯಾಗ ಮಂಟಪಕ್ಕೆ ಸಕಲದೇಶದ ರಾಜರೂ ಬಂದು ಸೇರಿದ್ದರು. ಧರ್ಮರಾಜನ ರಾಯಸೂಯಯಾಗ ಮಾಡಿಸಲಿಕ್ಕಾಗಿ ಶ್ರೀಹರಿಯು ಮೂರುರೂಪಗಳಿಂದ ಅಲ್ಲಿದ್ದನು. ಯಜ್ಞವನ್ನು ಶ್ರೀಕೃಷ್ಣನು ಅನೇಕ ರೂಪಗಳಿಂದ ನಡೆಸುತ್ತಿರುವ ಒಂದೊಂದು ಅದ್ಭುತವನ್ನು ಧರ್ಮರಾಜನು ಮನನಮಾಡುತ್ತ ಶ್ರೀಕೃಷ್ಣ ಎಷ್ಟು ಕರುಣಾಮಯಿ. ಅವನಿಗೆ ನಾವುಮಾಡುವ ಯಾವ ಸೇವೆಯಿಂದಲೂ ಏನೂ ಪ್ರಯೋಜನವಿಲ್ಲ. ಆದರೂ ಆದರದಿಂದ ಮಾಡಿಸಿ ನಮ್ಮ ಉದ್ಧಾರಕ್ಕಾಗಿ ಆನಂದಪಟ್ಟವನಂತೆ ಸಂತೃಪ್ತಿಪಟ್ಟವನಂತೆ ಎಲ್ಲರೆದುರಿಗೂ ತೋರಿಸುತ್ತಾನೆ. ಬಲ, ಆನಂದ, ಐಶ್ವೈರ್ಯಾದಿಗಳು ಸಕಲವೂ ಅವನೇ ಆಗಿದ್ದಾನೆ. ಅವನಿಗೆ ಹೊಸದಾಗಿ ಪಡೆಯಬೇಕಾದುದೇನು ಇಲ್ಲವಾದರೂ ನಮ್ಮ ಅಲ್ಪ ಅರ್ಪಣೆಯನ್ನೇ ಆದರವಾಗಿ ಸ್ವೀಕರಿಸಿದಂತೆ ನಮಗೆ ತೋರಿಸಿ ಅರ್ಪಣೆಗಿಂತಲೂ ಅಧಿಕಪಟ್ಟು ಫಲ ಕೊಟ್ಟು ಮೆರೆಸುತ್ತಾನೆ. ಸಕಲ ದೇವರುಗಳನ್ನು ತನ್ನ ಸರ್ವಾಂಗಗಳಲ್ಲೂ ಧರಿಸಿ ತನ್ನ ಸೇವಾಭಾಗ್ಯವನ್ನು ಅವರಿಗೆಕೊಟ್ಟು ಲೋಕಪೂಜ್ಯರನ್ನಾಗಿಮಾಡಿ ಅವರಿಂದ ಸಮಸ್ತ ಜೀವಿಗಳೂ ರಕ್ಷಣೆ ಹೊಂದುವಂತೆ ಮಾಡಿರುವ ಶ್ರೀಹರಿಯ ಗುಣಗಾನವನ್ನು ಸಕಲವೇದಗಳೂ ಪೂರ್ಣವಾಗಿ ಅರಿಯಲಾರವೆಂದು ಹೇಳುವಾಗ ಇನ್ನು ಯಾರಿಗೆ ತಾನೇ ಸಾಧ್ಯವಾದೀತು? ಎಂದು ಧರ್ಮರಾಜನು ಶ್ರೀಹರಿಸ್ತುತಿಯಲ್ಲಿ ಮೈಮರೆತಿದ್ದನು.

ಶ್ರೀಕೃಷ್ಣನೇ ಸರ್ವೋತ್ತಮನೆಂದು ಜಗದಾದ್ಯಂತ ಪ್ರಜೆಗಳೂ ತಿಳಿಯಬೇಕಾದರೆ ಜ್ಞಾನ ನಿಧಿಗಳಾದ ಸಚ್ಛಾಸ್ತ್ರಪಂಡಿತಕರುಗಳ ಉಪದೇಶವಾಗುವಂತೆ ಈಗ ಮಾಡಬೇಕು. ಈ ದೊಡ್ಡಸಭೆಯಲ್ಲಿ ಸಕಲ ದೇವಾನುದೇವತೆಗಳು ಪರಿವಾರ ಸಹಿತರಾಗಿ ಸೇರಿದ್ದಾರೆ. ತಪಸ್ವಿಗಳೆಲ್ಲರೂ, ಸಾಲುಸಾಲಾಗಿ ಕುಳಿತಿದ್ದಾರೆ. ರಾಜಾಧಿರಾಜರು ಬಂದಿದ್ದಾರೆ. ಇವರೆಲ್ಲರಿಗೂ ಅಧಿಕ ಜ್ಞಾನಿ ಎಂದರೆ ಪಿತಾಮಹನಾದ ಭೀಷ್ಮನು ಅವನ ವಾಕ್ಯ ಸಜ್ಜನರಿಗೆ ಸಂತೋಷದಾಯಕವಾದದ್ದು'' ಎಂದು ಯೋಚಿಸಿದನು. ''ಋಷಿಮುನಿಗಳೂ ದೇವತೆಗಳೂ ಭೀಷ್ಮನೇ ರಾಜಸೂಯಯಾಗಕ್ಕೆ ಅಗ್ರಪೂಜೆಗೆ ಯಾರು ಶ್ರೇಷ್ಠರೆಂಬುದನ್ನು ನಿರ್ಣಯಮಾಡಲಿ'' ಎಂದು ಹೇಳಿದಂತೆ ಧರ್ಮರಾಜನು ಭೀಷ್ಮನನ್ನು ಕುರಿತು ''ಪಿತಾಮಹಾ! ಅಗ್ರಪೂಜೆ ಯಾರಿಗೆ? ಎಂಬ ನಿರ್ಧರವನ್ನು ನೀನು ಚೆನ್ನಾಗಿ ಪರಿಶೀಲಿಸಿ ಹೇಳಬೇಕೆಂದು ಸಕಲ ದೇವತಾಪರಿವಾರವೂ ಕೇಳುತ್ತಿದ್ದಾರೆ'' ಎಂದು ಹೇಳಿದನು. ಆಗ ಭೀಷ್ಮರು ''ಧರ್ಮಸೂನೂ! ಶ್ರೀಕೃಷ್ಣನೇ ಸರ್ವೋತ್ತಮನೆಂದು ಸಕಲಶಾಸ್ತ್ರಗಳೂ ವೇದಗಳೂ ಹೇಳುವುದರಿಂದ ಅನುಮಾನವಿಲ್ಲದೆ ಶ್ರೀಕೃಷ್ಣನಿಗೇ ಅಗ್ರಪೂಜೆ ಮಾಡುವುದು ಸರ್ವಸಾಧುಸಮ್ಮತವಾಗಿದೆ''

ಎಂದು ಹೇಳಿದರು. ಆಗ ಶ್ರೀಕೃಷ್ಣನನ್ನು ರತ್ನಖಚಿತವಾದ ಆಸನದಲ್ಲಿ ಕೂಡಿಸಿ ಸಕಲ ದೇವಋಷಿಗಳೂ ವಿಧಿವತ್ತಾಗಿ ಮಂತ್ರಘೋಷವನ್ನು ಘೋಷಿಸುತ್ತಿರಲು ಬಗೆಬಗೆಯ ಮಂಗಳ ವಾದ್ಯಗಳು ಮೊಳಗುತ್ತಿರಲು ವೈಭವಪೂರಿತವಾಗಿ ಪುಣ್ಯಾತ್ಮನಾದ ಧರ್ಮರಾಜನು ಆನಂದದಿಂದ ನವವಿಧ ಭಕ್ತಿ ಪುಷ್ಪಗಳಿಂದಲೂ ಅಲಂಕರಿಸಿ ಹೃದಯಮಂಟಪದಲ್ಲಿ ಸ್ಥಾಪಿಸಿಕೊಂಡ ಪರಮಾತ್ಮನನ್ನು ಪ್ರತ್ಯಕ್ಷವಾಗಿ ಪೂಜಿಸಿದನು. ಶ್ರೀಕೃಷ್ಣನಿಗೆ ಪರಮವೈರಿಯಾದ ಶಿಶುಪಾಲನಿಗೆ ಶ್ರೀಕೃಷ್ಣನ ಪೂಜೆಯನ್ನು ಭಗವದ್ಭಕ್ತರು ಮಾಡುವುದನ್ನು ನೋಡಿ ಪಾಪದ ವಿಷ ಕೆರಳಿತು.

ಸಭೆಯೇ ಅದರುವಂತೆ ಸಿಡಿದೆದ್ದು ''ಎಲಾ ಧರ್ಮಜಾ! ನೀನು ರಾಜಸೂಯಯಾಗವನ್ನು ಮಾಡಿದ್ದು ಯಾವ ಕಾರಣಕ್ಕಾಗಿ ಎಂದು ಈಗ ತಿಳಿಯಿತು. ಸಭೆಯಲ್ಲಿ ಎಷ್ಟು ಪ್ರಸಿದ್ಧರಾಜರು ತುಂಬಿದ್ದಾರೆ. ಎಲ್ಲರನ್ನು ತಿರಸ್ಕಾರ ಮಾಡಿ ನೀವೆಲ್ಲರೂ ಈಗೋಪಾಲನಿಗಿಂತಲೂ ಕಡೆ ಎಂದು ತಿಳಿಸುತ್ತ ಕೃಷ್ಣನಿಗೆ ಅಗ್ರಪೂಜೆ ಮಾಡಿದ್ದಿ. ಭೀಷ್ಮನಿಗಂತೂ ವಯಸ್ಸಾಯಿತು. ಬುದ್ಧಿಭ್ರಮಣೆಯಿಂದ ನುಡಿದನು. ನಿನಗೂ ಬುದ್ಧಿಭ್ರಮಣೆಯೇ? ಈ ಸಭೆಯಲ್ಲಿ ಎಷ್ಟು ಜನ ಜ್ಞಾನವೃದ್ಧರಿದ್ದಾರೆ. ವಯೋವೃದ್ಧರಿದ್ದಾರೆ. ಪರಾಕ್ರಮಿಗಳಾದ ರಾಜರ್ಷಿಗಳಿದ್ದಾರೆ. ಎಲ್ಲರನ್ನೂ ಬಿಟ್ಟು ಕೃಷ್ಣನಿಗೆ ಅಗ್ರಪೂಜೆ ಕೊಟ್ಟಿರುವಿ. ಜರಾಸಂಧನಿಗೆ ಹೆದರಿ ಓಡಿಹೋದ ಹೇಡಿ ಅವನು. ಸೋದರಮಾವನನ್ನೇ ಕೊಂದವನು'' ಎಂದು ಮುಂತಾಗಿ ಅನೇಕ ನೀಚವಾಕ್ಯಗಳಿಂದ ಶ್ರೀಕೃಷ್ಣನನ್ನು ನಿಂದಿಸಿದನು. ಆಗ ಭೀಮಸೇನನು ಹರಿನಿಂದನೆ ಮಾಡಿದ ಪಾಪಿಯ ಮುಖದರ್ಶನವೂ ಮಹಾಪಾಪಕರವೆಂದು ಸಿಡಿಲಿನಂತೆ ಗರ್ಜಿಸುತ್ತ ಆ ವಿಷ್ಣುನಿಂದಕನ ನಾಲಿಗೆಯನ್ನು ಮೊದಲು ಸೀಳಿ ನಂತರ ಶ್ರೀಹರಿದೂಶಣೆ ಕೇಳಿದ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತೇನೆ'' ಎಂದು ಶಿಶುಪಾಲನ ವಧೆಗೆ ಎದ್ದನು.

ಈಗ ಭೀಷ್ಮರು ಅವನನ್ನು ತಡೆದು ''ಭೀಮಸೇನಾ! ನಿನಗೆ ಶ್ರೀಕೃಷ್ಣನ ಸಂಕಲ್ಪ ಏನೆಂದು ಗೊತ್ತಿದ್ದರೂ ಹರಿನಿಂದನೆ ಕೇಳಿ ಕೆರಳಿದ ನಿನಗೆ ಆ ಶಿಶುಪಾಲನ ವಿಷಯ ಏನೆಂದು ಹೇಳುತ್ತೇನೆ ಕೇಳು'' ಎಂದರು.

## ಶತಾಪರಾಧಕ್ಕಾಗಿಯೇ ಕೃಷ್ಣ ಕಾದಿದ್ದ

ದಮಘೋಷರಾಜಪುತ್ರನಾದ ಶಿಶುಪಾಲನು ಹುಟ್ಟುವಾಗ ಅವನಿಗೆ ಅಧಿಕಾಂಗಗಳು ಹೊಂದಿದ್ದವು. ಮೂರುಕಣ್ಣುಗಳು ಮುಖದಲ್ಲಿ ವಿಕಾರವಾಗಿ ಕಾಣುತ್ತಿತ್ತು. ನಾಲ್ಕು ತೋಳುಗಳು ಜೋತಾಡುತ್ತಿದ್ದವು. ಹುಟ್ಟಿದಮಗು ವಿಚಿತ್ರವಾದ ವಿಕಾರರೂಪ ಹೊಂದಿರುವುದನ್ನು ದೇಶದೇಶದ ರಾಜರೆಲ್ಲರೂ ಬಂದುನೋಡಿ ಹೋಗುತ್ತಿದ್ದರು. ಶಿಶುಪಾಲ ಹುಟ್ಟಿದಾಗ ಅಶರೀರವಾಣಿ ಕೇಳಿಸಿತು. ಮಹಿಮಾಪೂರ್ಣನಾದ ಪುರುಷನ ದೇಹಸ್ಪರ್ಷದಿಂದ ನಿಮ್ಮಮಗನ

ಅಧಿಕಾಂಗಗಳು ಕಳಚಿಬೀಳುತ್ತವೆ. ಆ ಮಹಾತ್ಮನಿಂದಲೆ ನಿಮ್ಮ ಮಗನ ಮರಣವೂ ಸಂಭವಿಸುತ್ತದೆ'' ಎಂದು ಅದೃಶ್ಯ ವಾಣಿಯನ್ನು ಕೇಳಿದಾಗ ಶಿಶುಪಾಲನ ತಾಯಿಯಾದ ಶೃತಶ್ರವೆಯು ಬಹಳ ಚಿಂತೆಗೊಳಗಾದಳು. ಯಾರುಬಂದರೂ ಅವರ ಕೈಲಿ ಮಗುವನ್ನು ಕೊಟ್ಟು ಪರೀಕ್ಷಿಸುತ್ತಿದ್ದಳು. ಮಗ ಯಾರ ಕೈಲೂ ಬದಲಾವಣೆ ಹೊಂದಲಿಲ್ಲ. ಒಮ್ಮೆ ಶ್ರೀಕೃಷ್ಣನು ತನ್ನ ಸೋದರತ್ತೆಯ ಮಗನನ್ನು ನೋಡುವ ನೆಪವಿಟ್ಟು ಬಂದನು. ಕೃಷ್ಣನು ಬಂದು ಕುಳಿತತಕ್ಷಣ ಶೃತಶ್ರವೆಯು ಮಗುವನ್ನು ತಂದು ಕೃಷ್ಣನ ಕೈಲಿ ಕೊಟ್ಟಕ್ಷಣದಲ್ಲೇ ಮಗುವಿನ ವಿಕಾರ ನಿವಾರಣೆ ಆಗಿ ಸರಿಯಾದ ಅಂಗಾಂಗಗಳಿಂದ ಕಂಡಿತು. ಆಗ ಶೃತಶ್ರವೆಯು ತನ್ನ ಮಗುವಿಗೆ ಕೃಷ್ಣನೇ ವೈರಿ ಆಗುತ್ತಾನೆಂದು ತಿಳಿದು ''ಕೃಷ್ಣಾ! ನಿನ್ನ ಸೋದರತ್ತೆ ಎಂಬ ಅಭಿಮಾನವಿಟ್ಟು ನನ್ನ ಮಗನನ್ನು ಕೊಲ್ಲದೆ ಕಾಯಬೇಕಪ್ಪಾ!'' ಎಂದು ಕೇಳಿಕೊಂಡಳು. ''ನಿನ್ನ ಮಗನು ನೂರು ಅಪರಾಧಗಳನ್ನು ಮಾಡಿದರೂ ಸೈರಿಸಿಕೊಂಡಿರುತ್ತೇನೆ. ಅವನನ್ನು ಕೊಲ್ಲದೆ ಕಾಯುತ್ತೇನೆ. ಅದಕ್ಕೂ ಮೀರಿ ಅಪರಾಧಮಾಡಿದರೆ ಅವನನ್ನು ಬಿಡದೆ ಕೊಲ್ಲುವುದು ನಿಶ್ಚಯ'' ಎಂದನು. ''ಭೀಮಾ! ಕೃಷ್ಣನು ತನ್ನ ವಾಕ್ಯದಂತೆ ಶಿಶುಪಾಲನ ಅಪರಾಧದ ಕುಡಿಕೆ ತುಂಬಲೆಂದು ಕಾಯುತ್ತಿದ್ದಾನೆ. ಮೂರು ಜನ್ಮದಲ್ಲೂ ನಿನ್ನನ್ನೇ ದ್ವೇಶಿಸಿ ನಿನ್ನ ಕೈಲೇ ಮರಣಹೊಂದಬೇಕು'' ಎಂದು ನಾರಾಯಣನಲ್ಲಿ ಬೇಡಿಬಂದು ಈಗ ಕೃಷ್ಣನಲ್ಲಿ ದ್ವೇಶವನ್ನು ಮಸೆಯುತ್ತಿದ್ದಾನೆ. ಈ ಅಸುರನಲ್ಲಿ ಜಯನ ಅಂಶವಿದೆ. ಆದ್ದರಿಂದ ಶ್ರೀಕೃಷ್ಣನೇ ಅವನ ಸಂಹಾರ ಮಾಡಬೇಕು. ಸ್ವಾಮಿಯ ಸಂಕಲ್ಪ ಸುಳ್ಳಾಗುವುದಿಲ್ಲ. ಶಿಶುಪಾಲನನ್ನು ಸಂಹಾರಮಾಡಿ ಅವನ ಶಾಪವಿಮೋಚನೆ ಆಗುತ್ತದೆ'' ಎಂದು ಭೀಷ್ಮರು ತಿಳಿಸಿದರು.

ಯಾಗಭವನದಲ್ಲಿ ತ್ರಿವರ್ಗದವರೂ ತುಂಬಿದ್ದರು. ಸುಜ್ಞಾನಿಗಳು ಶ್ರೀಹರಿಯ ವೈಭವೋಪೇತವಾದ ಪೂಜೆಯನ್ನು ನೋಡಿ ಪಾಂಡವರು ದೇವಾಂಶಸಂಭೂತರಾದ್ದರಿಂದಲೇ ಶ್ರೀಹರಿಯು ಅವರ ಅಂತರಂಗದಲ್ಲಿ ಅವರಿಗೆ ಪ್ರೇರೇಪಿಸಿ ಅವರಿಂದ ಪೂಜೆಯನ್ನು ಸ್ವೀಕರಿಸಿ ಸಕಲ ಋಷಿಮುನಿಗಳೂ ದೇವತೆಗಳೂ ಆನಂದಪಡಬೇಕೆಂಬ ಕರುಣದಿಂದ ನಿರ್ಲಿಪ್ತನಾದ ಅವನಿಗೆ ರಮಾದೇವಿಯರೇ ಸ್ವಹಸ್ತದಿಂದ ವೈಭವಯುಕ್ತ ಪೂಜೆಯನ್ನು ಸದಾಸಲ್ಲಿಸುತ್ತಿರುವಾಗ ಬೇರೆ ಪೂಜೆ ಅವನಿಗೇನು ಬೇಕಾಗಿದೆ?'' ಎಂದು ಮಾತನಾಡಿಕೊಳ್ಳುತ್ತಿದ್ದರು.

ಲೌಕಿಕ ಸುಖದಲ್ಲಿ ಮುಳುಗಿದವರು ದೇವರದೇವನಿಗೆ ನಡೆಯುವ ವೈಭವವನ್ನು ಕೊಂಡಾಡುತ್ತ ಧರ್ಮರಾಜನ ಸಂಪತ್ತು ಐಶ್ವರ್ಯ ಧನಕನಕಾದಿ ನವರತ್ನಾದಿಗಳನ್ನು ವರ್ಣಿಸುತ್ತ ವೈಭವದತ್ತ ಮನಗೊಟ್ಟು ಆನಂದಪಡುತ್ತಿದ್ದರು. ಅಸುರಾವೇಷದ ಪಾಪಿಗಳು ಭಗವಂತನಿಗೆ ನಡೆಯುವ ಪೂಜಾವೈಭವವನ್ನು ನೋಡಿ ಮಾತ್ಸರ್ಯದಿಂದ ದುರ್ಮದರಾಗಿ ಪೂಜೆಗೆ ವಿಘ್ನಪಡಿಸಬೇಕೆಂದು ದುಷ್ಕಾರ್ಯಕ್ಕೆ ತೊಡಗಿದರು. ಧರ್ಮರಾಜನು ಕೃಷ್ಣನಿಗೆ ಪ್ರಧಾನಸೇವೆಕೊಟ್ಟು ನಮ್ಮನ್ನು ಅವಮಾನಪಡಿಸಿದ್ದಾನೆ. ಅವರಿಬ್ಬರನ್ನು ಮುಗಿಸಬೇಕೆನ್ನುವಷ್ಟು

ನೀಚತ್ವಕ್ಕೆ ಇಳಿದರು.

ಶ್ರೀಕೃಷ್ಣನು ತನ್ನಭಕ್ತರ ಮೇಲೆ ಶಿಶುಪಾಲನಿಗೆ ಘಳಿಗೆ ಘಳಿಗೆಗೂ ಕ್ರೋಧ ಆವರಿಸುವಂತೆ ಧರ್ಮರಾಜನು ಅತ್ಯಂತ ಅಪೂರ್ವವಾದ ಅಗ್ರಪೂಜೆಯನ್ನು ಮಾಡುವಂತೆ ಒಂದೊಂದರಲ್ಲೂ ತಾನೇ ಅಂತರ್ಗತನಾಗಿ ನಡೆಸುತ್ತಿದ್ದನು. ಪೂಜಾವಸ್ತುಗಳಲ್ಲಿ ವೇದಮಂತ್ರಗಳಲ್ಲಿ ಸ್ತುತಿಸ್ತೋತ್ರಗಳಲ್ಲಿ ಎಲ್ಲದರಲ್ಲೂ ಅತಿಶಯವಾದ ಆಕರ್ಷಣೆ ಆಹ್ಲಾದ ಆನಂದ ಎಲ್ಲರಿಗೂ ಉಂಟಾಗುವಂತೆಮಾಡಿ ಅದರಿಂದ ತಾನು ಅಧಿಕ ಆನಂದಪಟ್ಟವನಂತೆ ನಟಿಸುತ್ತಿದ್ದನು.

ಶಿಶುಪಾಲನ ಶತಾಪರಾಧಗಳು ಪೂರ್ಣವಾಗಲಿ. ನಂತರ ಅವನಲ್ಲಿರುವ ವಾಯುದೇವನು ಹೊರಬರುತ್ತಾನೆ ಎಂದು ಕೃಷ್ಣನು ಅವನು ನೀಚವಾಕ್ಯಗಳಿಂದ ನಿಂದಿಸಿದಷ್ಟು ಮಂದಹಾಸದಿಂದ ಕೇಳುತ್ತ ಸ್ವಲ್ಪವೂ ಕ್ರೋಧವನ್ನು ತೋರ್ಪಡಿಸದೆ ಮೊದಲೇ ನಿರ್ವಿಕಾರನಾದ ಸ್ವಾಮಿ ಯಾವವಿಕಾರವನ್ನು ತೋರ್ಪಡಿಸದೆ ಕುಳಿತಿದ್ದನು. ಮತ್ತೂ ಸಂಪತ್ತಿನಿಂದ ಕೂಡಿದ ಆ ಪೂಜೆಯನ್ನು ಬಹಳ ಆಸೆಯಿಂದ ಆತುರವಾಗಿ ಅನುಭವಿಸುವನಂತೆ ತೋರಿಸುತ್ತಿದ್ದನು. ಅಸುರಜನರಿಗೆ ಮೋಹವನ್ನುಂಟುಮಾಡುವ ಸ್ವಾಮಿಯ ಧರ್ಮರಹಸ್ಯವನ್ನು ತಿಳಿಯದ ಶಿಶುಪಾಲನು "ಎಲಾ! ಗೊಲ್ಲಕೃಷ್ಣಾ! ಮಹಾರಾಜನ ಕೈಲಿ ಅಗ್ರಪೂಜೆ ಸಿಕ್ಕಿತೆಂದು ಆಸೆಪಡಬೇಡ. ಈಗ ನಮ್ಮಿಂದ ನಿನಗೆ ಶಸ್ತ್ರಪೂಜೆ ನಡೆಯುತ್ತದೆ. ನಮ್ಮ ತೀಕ್ಷ್ಣ ಅಸ್ತ್ರಗಳೇ ನಮ್ಮಿಂದ ನಿನಗೆ ಸಲ್ಲಬೇಕಾದ ಪೂಜೆಯನ್ನು ನಿನಗೆ ಮುಟ್ಟಿಸುತ್ತವೆ" ಎಂದು ರತ್ನಾಸನದಲ್ಲಿ ಕುಳಿತಿದ್ದ ಸಿರಿರಮಣನಿಗೆ ಬಾಣದಿಂದ ಹೊಡೆದನು. ಸರ್ವವಸ್ತುವ್ಯಾಪ್ತನಾದ ಸ್ವಾಮಿ ದುಷ್ಟನಿಂದ ಬಂದಬಾಣವನ್ನು ಸ್ಪರ್ಶಿಸುತ್ತಾನೆಯೇ? ಅದು ದೂರದಲ್ಲೇ ಬೀಳುತ್ತಿದ್ದವು. ನಂತರ ಶಿಶುಪಾಲನನ್ನು ಯಾಗಭವನದಿಂದ ಹೊರಗೆ ದರದರನೆ ಎಳೆದುಕೊಂಡು ಹೋಗಿ ಸುದರ್ಶನ ಚಕ್ರದಿಂದ ಶಿರಸ್ಸನ್ನು ಛೇದಿಸಿದನು. ಶಿಶುಪಾಲನಲ್ಲಿದ್ದ ಜಯನೆಂಬ ಭಗವಂತನ ಭಕ್ತನನ್ನು ಶ್ರೀಕೃಷ್ಣನು ತನ್ನ ಉದರದರಮನೆಯಲ್ಲಿ ಸೇರಿಸಿಕೊಂಡನು. ಅಸುರನಿಗೆ ಅಂಧಂತಮಸ್ಸು ಪ್ರಾಪ್ತವಾಯಿತು.

ಯಜ್ಞಘಾತುಕನ ವಧೆಯೊಂದಿಗೆ ಯಾಗವೂ ಸಮಾಪ್ತವಾಯಿತು. ನಂತರ ಸಭಾಸದರೆಲ್ಲರಿಗೂ ತಾರತಮ್ಯಾನುಸಾರ ಊಟ-ಉಪಚಾರಗಳು ಉಡುಗೊರೆ ಉತ್ಸವಾದಿಗಳೆಲ್ಲವೂ ನಡೆದನಂತರ ಸಕಲರಾಜರೂ ಧರ್ಮರಾಯನನ್ನು ಹೊಗಳಿ ವಿವಿಧ ಕಾಣಿಕೆಗಳನ್ನು ಕೊಟ್ಟರು.

ರಾಜರುಗಳಿಂದ ಬಂದ ಕಾಣಿಕೆಯ ವಸ್ತುಗಳು ಮತ್ತು ದ್ರವ್ಯರಾಶಿಗಳನ್ನು ತೆಗೆದುಕೊಂಡು ಅದನ್ನು ಖಜಾನೆಗೆ ತುಂಬುವ ಕಾರ್ಯವನ್ನು ಶ್ರೀಕೃಷ್ಣನು ದುರ್ಯೋಧನನಿಗೆ ಒಪ್ಪಿಸಿದನು. ಏಕೆಂದರೆ ಒಂದೊಂದನ್ನು ನೋಡಿ ಅವನ ಹೊಟ್ಟೆಕಿಚ್ಚು ಹತ್ತಿ ಉರಿಯಬೇಕೆಂಬ ಸಂಕಲ್ಪದಿಂದ ಅವನಿಗೆ ಒಪ್ಪಿಸಿದನು.

ಧರ್ಮರಾಜನು ಬ್ರಹ್ಮಣೋತ್ತಮರಿಗೆ ಹೇರಳವಾದ ದ್ರವ್ಯವನ್ನು ಅವರಿಗೆ ಅವಶ್ಯವಾಗಿರುವ ಅನೇಕ ಸುವರ್ಣನಿರ್ಮಿತವಾದ, ಬೆಳ್ಳಿಯಿಂದ ರಚಿತವಾದ ವಸ್ತುಗಳನ್ನು ದಾನಮಾಡಿ ಭೋಜನಾದಿಗಳಿಂದಲೂ ಎಲ್ಲರನ್ನು ಸಂತೋಷಪಡಿಸಿ ಬ್ರಾಹ್ಮಣರ ಅನುಗ್ರಹ ಪಾತ್ರನಾದನು. ಎಲ್ಲಾ ಸಮಾರಂಭಗಳೂ ಸುಸೂತ್ರವಾಗಿ ನಡೆದನಂತರ ಎಲ್ಲರೂ ತಮ್ಮತಮ್ಮ ಸ್ಥಾನಗಳಿಗೆ ಹೊರಟುಹೋದರು.

ಪಾಂಡವರು ಅವಭೃತಸ್ನಾನ ಮಾಡಿಬಂದರೂ ದುರ್ಯೋಧನನು ಇನ್ನೂ ಇಂದ್ರಪ್ರಸ್ಥದಲ್ಲೇ ಇದ್ದನು. ಏಕೆಂದರೆ ಇನ್ನು ರಾಜರುಗಳು ಕಾಣಿಕೆಗಳನ್ನು ಕೊಡುತ್ತಲೇ ಇದ್ದರು. ಅದನ್ನು ತೆಗೆದುಕೊಳ್ಳುವುದೇ ಮುಗಿದಿರಲಿಲ್ಲ. ಪಾಂಡವರು ಯಾಗವೆಲ್ಲವೂ ಮುಗಿದನಂತರ ವಿಶ್ರಾಂತಿಗಾಗಿ ಎಲ್ಲರೂ ರತ್ನಸಿಂಹಾಸನಗಳಲ್ಲಿ ಕುಳಿತರು. ದ್ರೌಪದಿಯು ಸತ್ಯಭಾಮಾದೇವಿ ರುಕ್ಮಿಣೀದೇವಿಯರ ಜೊತೆಗೆ ಕುಳಿತಿದ್ದರೆ ದ್ರೌಪದಿ ಲಕ್ಷ್ಮೀದೇವಿಯರಂತೆಯೇ ಅಪಾರ ತೇಜಸ್ಸಿನಿಂದ ಬೆಳಗುತ್ತಿದ್ದಳು. ಧರ್ಮರಾಯ ಭೀಮಾರ್ಜುನರೂ ನಕುಲ ಸಹದೇವಾದಿಗಳೂ ರತ್ನಾಸನಗಳಲ್ಲಿ ವಿರಾಜಮಾನರಾಗಿ ಪ್ರಕಾಶಿಸುತ್ತಿದ್ದರು. ಶ್ರೀಕೃಷ್ಣ ಬಲರಾಮ ಸಾತ್ಯಕಿ ಎಲ್ಲರೊಂದಿಗೆ ಭಾನುಮಂಡಲದಲ್ಲಿ ನಕ್ಷತ್ರಗಳ ನಡುವೆ ಚಂದ್ರನು ಬೆಳಗುವಂತೆ ರಾಜರ ಸಮೂಹದಲ್ಲಿ ಶ್ರೀಕೃಷ್ಣನು ಅಸಮಾನ ಕಾಂತಿಯಿಂದ ಕಾಣುತ್ತಿದ್ದನು.

ಮಹಿಳಾ ಮಂಡಳಿಯಲ್ಲಿ ಶ್ರೀಕೃಷ್ಣನ ಹದಿನಾರು ಸಹಸ್ರ ನೂರೆಂಟು ಮಂದಿ ಸತಿಯರೂ ಅವರ ಮಕ್ಕಳೂ ಅನೇಕಬಗೆಯ ರತ್ನಾಸನಗಳಲ್ಲಿಕುಳಿತಿದ್ದರು. ಅವರ ಕಾಂತಿ ಎಲ್ಲೆಡೆಗಳಲ್ಲೂ ಹರಡಿ ಸೂರ್ಯಪ್ರಕಾಶವನ್ನು ಮೀರುವಂತಿತ್ತು. ಅಲ್ಲಿ ಶ್ರೀಕೃಷ್ಣನ ಪಾದಸನ್ನಿಧಿ ವಿಶೇಷವಾಗಿದ್ದಿದ್ದರಿಂದ ತೇಜೋಕಾಂತಿ ಉಕ್ಕಿ ಹರಿಯುತ್ತಿತ್ತು.

ಒಬ್ಬರಿಗೊಬ್ಬರು ಹಾಸ್ಯಮಾಡುತ್ತ ನಗುತ್ತ ಮಧ್ಯ ಮಧ್ಯ ಶ್ರೀಕೃಷ್ಣನು ಅಸುರರನ್ನು ಲೀಲಾಜಾಲವಾಗಿ ಸೋಲಿಸಿದ್ದನ್ನು ದುಷ್ಟಜನರು ಭಂಗಪಟ್ಟು ಓಡಿದ್ದನ್ನು ಎಲ್ಲವನ್ನೂ ಪರಿಹಾಸದಿಂದ ಹೇಳಿ ನಗುತ್ತ ದುರ್ಯೋಧನನಿಗೆ ಅಸೂಯೆ ಆಕ್ರೋಶಗಳು ಅಧಿಕವಾಗುವಂತಹ ಮಾತುಗಳನ್ನು ಆಡುತ್ತಿದ್ದರು. ಇವೆಲ್ಲವನ್ನು ಶ್ರೀಕೃಷ್ಣನೇ ಎಲ್ಲರಿಂದಲೂ ನಡೆಸಿದ್ದಾನೆಂದು ಬೇರೆ ಹೇಳಬೇಕಾಗಿಯೇ ಇಲ್ಲ. ಆದರೆ ದುರ್ಯೋಧನನನ್ನು ಯಾರೂ ಗೌರವದಿಂದ ಆದರಿಸಿ ಸಭೆಗೆ ಕರೆಯಲಿಲ್ಲ. ಇದು ಶ್ರೀಕೃಷ್ಣನ ಅಸುರ ಸಂಹಾರ ಕಾರ್ಯಕ್ಕೆ ನಾಂದಿ ಆಯಿತು. ಪಾಂಡವರ ಮತ್ತು ಶ್ರೀಕೃಷ್ಣನ ಮಾತುಕಥೆಗಳು ಸ್ತ್ರೀಯರ ಹಾಸ್ಯದ ಸಂಭಾಷಣೆಗಳಿಂದ ದುರ್ಯೋಧನನು ಕೆಣಕಿದ ಸರ್ಪದಂತೆ ಆಗಿ ಸೇಡುತೀರಿಸಿಕೊಳ್ಳುವ ನಾಗನಂತೆ ಆಯುಧ ಸಹಿತನಾಗಿ ತಮ್ಮಂದಿರೊಡಗೂಡಿ ಬರುತ್ತಿದ್ದನು.

ಮಯನು ಸಭಾಭವನವನ್ನು ಶ್ರೀಕೃಷ್ಣನ ಆಜ್ಞೆಯಂತೆ ಬಹಳ ಆಶ್ಚರ್ಯಕರವಾದ ಕಲಾನಿಪುಣತೆಯಿಂದ ರಚನೆಮಾಡಿದ್ದನು. ಅಲ್ಲಿ ಒಂದೊಂದು ಪ್ರದೇಶವೂ ಎಲ್ಲರನ್ನು

ಭ್ರಮೆಗೊಳಿಸುವ ರೀತಿಯಲ್ಲಿದ್ದವು.

ಒಂದಕ್ಕೊಂದು ಹೋಲಿಕೆಕೊಟ್ಟು ಕೈಚಳಕವನ್ನು ಚಮತ್ಕಾರವಾಗಿ ತೋರಿಸಿದ್ದನು. ನೆಲ, ನೀರು ಗೋಡೆ ಬಾಗಿಲು ಎಲ್ಲವೂ ಒಂದೇ ವಿಧವಾಗಿದ್ದುದ್ದರಿಂದ ಎಂಥವರನ್ನು ಭ್ರಮೆಗೊಳಿಸುತ್ತಿತ್ತು. ಅಂಥ ಸಭೆಗೆ ದುರ್ಯೋಧನನು ಪಾಂಡವರು ಕರೆಯದಿದ್ದರೂ ನುಗ್ಗಿಹೋಗಿ ಅವರೊಡನೆ ಕದನಮಾಡಬೇಕೆಂದು ಹೊರಟನು. ಸಭಾಭವನದ ಹೆಬ್ಬಾಗಿಲು ಸ್ಫಟಿಕ ರತ್ನಗಳಿಂದಲೂ ನೀಲರತ್ನಮಣಿಗಳಿಂದಲೂ ರಚಿತವಾಗಿತ್ತು. ಆ ಬಾಗಿಲಿನಲ್ಲಿ ಒಳಗಿರುವವರು ಹೊರಗೆ ಕಾಣುವಂತೆ ಮಯನು ಮಾಡಿದ್ದನು. ದುರ್ಯೋಧನನು ಅದನ್ನು ಬಾಗಿಲೆಂದು ತಿಳಿಯದೆ ಮುನ್ನುಗ್ಗಿ ಹೋದನು. ಆಗ ತಲೆ ಬಾಗಿಲಿಗೆ ತಗಲಿ ತಲೆ ಒಡೆದು ರಕ್ತ ಸುರಿಯತೊಡಗಿತು. ಆಗ ಧರ್ಮರಾಯನ ಮಾತಿನಂತೆ ನಕುಲ ಸಹದೇವರು ಅವನ ಬಳಿಗೆ ಓಡಿಬಂದು ''ದುರ್ಯೋಧನಾ! ನೋವಾಯಿತಾ? ಬಾಗಿಲೆಂದು ಗೊತ್ತಾಗಲಿಲ್ಲವಾ?'' ಎಂದು ಹೇಳುತ್ತಿದ್ದರೆ ದುರ್ಯೋಧನನಿಗೆ ಮತ್ತಷ್ಟು ವೇದನೆ ಆಯಿತು.

ದುರ್ಯೋಧನನಿಗೆ ಪಾಂಡವರ ಸಭಾವೈಭವ ಸಹಿಸಲಿಕ್ಕಾಗಲಿಲ್ಲ. ಮತ್ತೊಂದು ಮಾರ್ಗದಿಂದ ಮುಂದೆನಡೆದನು. ಅಲ್ಲಿ ಮಯನು ರಚಿಸಿದ ಕುಶಲಕಲೆ ಇನ್ನು ವಿಚಿತ್ರವಾಗಿತ್ತು. ನೆಲವನ್ನು ಇಂದ್ರನೀಲಮಣಿಗಳಿಂದ ಮಾಡಿ ಮಧ್ಯೆ ಮಧ್ಯೆ ಕಮಲಗಳನ್ನು ಮಾಡಿ ಇಟ್ಟಿದ್ದನು. ಜಲಪಕ್ಷಿಗಳು ಅಲ್ಲಲ್ಲಿ ನೀರಿನ ಮೇಲೆ ಕುಳಿತಿರುವಂತೆ ಮಾಡಿದ್ದನು. ಸುತ್ತಲೂ ಸೋಪಾನ ಕಾಣುತ್ತಿತ್ತು. ಸುಂದರ ಸರೋವರದಂತೆ ಕಾಣುತ್ತಿದ್ದ ಆ ಪ್ರದೇಶವನ್ನು ನೋಡಿದ ದುರ್ಯೋಧನನು ನೀರಿನಲ್ಲಿ ಇಳಿಯುವಂತೆ ಹೆಜ್ಜೆ ಹಾಕಿದಾಗ ಅದು ನೆಲವಾಗಿತ್ತು. ಭೀಮಸೇನನು ಎಲ್ಲರಿಗೂ ಸಂಜ್ಞೆಮಾಡಿ ಗಟ್ಟಿಯಾಗಿ ನಕ್ಕರೆ ಎಲ್ಲರೂ ಘೊಳ್ಳೆಂದು ನಕ್ಕರು. ದ್ರೌಪದಿಯ ನಗು ದುರ್ಯೋಧನನಿಗೆ ಚೇಳು ಕುಟುಕಿದಂತೆ ಬಹಳ ವೇದನೆ ಆಯಿತು.

ಮುಂದೆ ಕ್ರೋಧದಿಂದ ನಡೆದರೆ ಅಲ್ಲಿ ಮಯನು ನೀರನ್ನು ಭೂಮಿಯಂತೆ ರಚಿಸಿದ್ದನು. ದುರ್ಯೋಧನನು ಕ್ರೋಧವಶನಾಗಿ ಮುಂದೇನು ಸಂಭವಿಸುತ್ತದೋ ಎಂಬ ಸಂಕಟದಿಂದ ನಡೆದುಬರುವಾಗ ನೀರಿನಲ್ಲಿ ಮುಗ್ಗರಿಸಿದನು. ಬಟ್ಟೆ ಎಲ್ಲಾ ಒದ್ದೆಯಾಯಿತು. ವಿಕಾರದಿಂದ ಸೊಟ್ಟಮೋರೆ ಹಾಕಿಕೊಂಡು ನಿಂತಿದ್ದರೆ ಕೃಷ್ಣ ತಾನು ಹುಸಿನಗೆ ತೋರಿಸಿ ಎಲ್ಲರಿಗೂ ನಗುವಂತೆ ಸಂಜ್ಞೆ ಮಾಡಿದಾಗ ಭೀಮನ ನಗು ಎಲ್ಲೆಡೆಯಲ್ಲೂ ವ್ಯಾಪಿಸಿತು. ಸ್ತ್ರೀ ಸಮುದಾಯದಲ್ಲಿ ನಗುವಿನ ಹೊನಲೆದ್ದಿತು. ದ್ರೌಪದಿಯ ನಗು ದುರ್ಯೋಧನನ ಕಿವಿಯಲ್ಲಿ ಕಠೋರವಾಗಿ ತಿವಿದಂತೆ ಕೇಳಿಸಿತು. ಆಗಿನ ನಗುವೇ ಮುಂದೆ ಕುರುಕ್ಷೇತ್ರದ ರಣರಂಗದಲ್ಲಿ ಶತ್ರುತಂಡದವರ ರೋಧನಕ್ಕೆ ಕಾರಣೀಭೂತವಾಯಿತು. ಎಲ್ಲರೂ ನಗುವಿನ ಮೇಲೆ ನಗುವಿನ ಹೊನಲನ್ನು ಹರಿಸುವುದನ್ನು ಕೇಳಿದ ಧರ್ಮರಾಜನು ಸಾಕು ನಗುವನ್ನು ನಿಲ್ಲಿಸಿರಿ. ಒಬ್ಬರು ದುಃಖ ಪಡುತ್ತಿರುವಾಗ ಅವರನ್ನು ಸಮಾಧಾನಪಡಿಸದೆ ಪರಿಹಾಸಮಾಡಿ

ನಕ್ಕರೆ ಪಾಪಕರ್ಮವಾಗುತ್ತದೆ'' ಎಂದು ಹೇಳಿ ನಗುವನ್ನು ನಿಲ್ಲಿಸಿದನು.

ದುರ್ಯೋಧನನನ್ನು ಕೈಹಿಡಿದು ಕರೆತಂದು ಒಡೆದ ಹಣೆಗೆ ಮದ್ದನ್ನು ಸವರಿ ಒದ್ದೆಯ ಉಡುಪನ್ನು ಬಿಚ್ಚಿ ಹೊಸ ಉಡುಪು ಹಾಕಿಕೊಳ್ಳಲು ಭವ್ಯಪೀತಾಂಬರಾದಿಗಳನ್ನು ಕೊಟ್ಟು ಗಂಧ-ಮಾಲ್ಯಾದಿಗಳಿಂದ ಶೃಂಗರಿಸುವಂತೆ ರಾಜದೂತರಿಗೆ ಹೇಳಿ ಉಪಚರಿಸಿದನು. ದುರ್ಯೋಧನನಿಗೆ ಧರ್ಮರಾಯನ ಮನ್ನಣೆ ಮತ್ತಷ್ಟು ದುಃಖವನ್ನೇ ಉಂಟುಮಾಡಿತು. ಉರಿಮುಖದಿಂದ ದ್ರೌಪದಿ ಮೊದಲಾದವರನ್ನು ನೋಡುತ್ತ ಸಿಡಿಮಿಡಿಯೊಡನೆ ಹೊರಟುಹೋದನು.

ಹಸ್ತಿನಾವತಿಗೆ ಬಂದವನೇ ಶಕುನಿಯನ್ನು ನೋಡಿ ಗುಳೋ ಎಂದು ಅಳತೊಡಗಿದನು. ''ಮಾವಾ! ನಾನು ಇಂದ್ರಪ್ರಸ್ಥದಲ್ಲಿ ಅನುಭವಿಸಿದ ಅವಮಾನದ ದುಃಖವನ್ನು ಹೇಳಿಕೊಳ್ಳಲೇ ಸಾಧ್ಯವಿಲ್ಲದಂತಿದೆ.

ಪಾಂಡವರ ಮುಂದೆ ನನ್ನ ಪರಾಕ್ರಮ ಸಂಪತ್ತು ಎಲ್ಲವೂ ಕಸದಂತೆ ಕ್ಷುಲ್ಲಕವಾಯಿತು. ಅವರನ್ನು ಏನಾದರೂ ಮಾಡಿ ನಿರ್ಧನಿಕರನ್ನಾಗಿ ಮಾಡಬೇಕು. ಅವರಿಗೆ ಐಶ್ವರ್ಯಮದದಿಂದ ನಾವೆಲ್ಲರೂ ತೃಣಪ್ರಾಯರಾಗಿದ್ದೇವೆಂಬ ಅಹಂಕಾರ ಆವರಿಸಿದೆ. ಪಾಂಡವರಿಗೆ ಸಕಲದಿಕ್ಕಿನ ರಾಜರೂ ನಮಸ್ಕಾರಮಾಡಿ ಸಂಪತ್ತಿನ ರಾಶಿಯನ್ನೇ ಸುರಿದಿದ್ದಾರೆ. ಅನೇಕ ವ್ಯಾಪಾರಸ್ಥರು ಕೊಟ್ಟಿರುವ ಕಾಣಿಕೆಗಳ ರಾಶಿಯಂತೂ ಅಷ್ಟಿಷ್ಟಲ್ಲ. ನಿಧಿಯ ಶಿಖರದ ಮೇಲೇರಿ ಮೆರೆಯುತ್ತಿದ್ದಾರೆ. ಕೃಷ್ಣ ಲಕ್ಷ ಸಂಖ್ಯೆಯ ರಾಜರು ತಂದೊಪ್ಪಿಸಿದ ಕಾಣಿಕೆಗಳನ್ನು ನಾನು ತೆಗೆದುಕೊಂಡು ಶೇಖರಿಸುವಂತೆ ಹೇಳಿದನು. ಅದಕ್ಕೆ ನಾನು ಅರ್ಹನೆಂಬ ಭಾವದಿಂದ ಕೃಷ್ಣ ನನಗೊಪ್ಪಿಸಿದ್ದಾನೆಂದು ತಿಳಿದು ಒಪ್ಪಿದೆನು. ರಾಜರಿಂದ ಬಂದ ಕಪ್ಪಕಾಣಿಕೆಗಳನ್ನು ತೆಗೆದುಕೊಂಡು ಒಂದೆಡೆ ಇರುವುದೇ ಒಂದು ದೊಡ್ಡ ಸಾಹಸದ ಕಾರ್ಯಮಾಡಿದಂತೆ ನನಗೆ ಭಾಸವಾಯಿತು. ಸಾಲುಸಾಲಾಗಿ ಸರದಿಯ ಪ್ರಕಾರ ರಾಜರುಗಳು ಕಪ್ಪವನ್ನು ತಂದುಕೊಡುವುದೇ ಒಂದು ಅತ್ಯದ್ಭುತದೃಶ್ಯವಾಗಿತ್ತು. ಧನಾಗಾರದಲ್ಲಿ ದ್ರವ್ಯಸಂಪತ್ತನ್ನು ಶಿಖರದೋಪಾದಿಯಲ್ಲಿ ನಾನೇ ಪೇರಿಸಿಟ್ಟಿದ್ದೇನೆ. ಇವೆಲ್ಲಕ್ಕೂ ಅವರಬಳಿ ಇರುವ ಕೃಷ್ಣನೇ ಕಾರಣನೆಂದು ನನಗನಿಸುತ್ತದೆ. ಆದ್ದರಿಂದಲೇ ಧರ್ಮರಾಜ ಶ್ರೀಕೃಷ್ಣನಿಗೆ ಪ್ರಧಾನಪೂಜೆ ಮಾಡಿ ವೈಭವದಿಂದ ಅವನನ್ನು ಮೆರೆಸಿದ್ದಾನೆ'' ಎಂದನು. ಮೂಲಕಲಿ ದುರ್ಯೋಧನನಿಗೆ ''ಕೃಷ್ಣ ಸಾಮಾನ್ಯನಲ್ಲ. ಅವನು ಮೂಲನಾರಾಯಣನೇ ಆಗಿದ್ದಾನೆಂದು ತಿಳಿದಿತ್ತು. ಆದರೂ ಅವನಿಗೆ ಕೃಷ್ಣನು ಮಿಥ್ಯಾಜ್ಞಾನವನ್ನು ಕೊಟ್ಟು ತನ್ನ ನಿಜರೂಪದಲ್ಲಿ ಅವನಿಗೆ ಕಳಂಕ ಬರುವಂತೆ ಮಾಡುತ್ತಿದ್ದನು. ಅಂಧಂತಮಸ್ಸಿಗೆ ಯೋಗ್ಯರಾದವರಿಗೆ ಸ್ವಾಮಿ ಅಜ್ಞಾನ ಬರುವಂತೆ ನಡೆದು ಅವರ ಪಾಪವನ್ನು ಹೆಚ್ಚಿಸುತ್ತಿದ್ದನು. ಶಿಶುಪಾಲನಂಥ ಪರಾಕ್ರಮನನ್ನು ಗೊಲ್ಲಕೃಷ್ಣನಿಂದ ಹತಮಾಡಿಸಿ ಸಕಲ ಕ್ಷತ್ರಿಯ ವೀರರಾಜರಿಗೂ ಅವಮಾನಪಡಿಸಿರುವ

ಆ ಪಾಂಡವರನ್ನು ಪರಿತಾಪವೆಂಬ ಬೆಂಕಿಯಲ್ಲಿ ಸುಟ್ಟು ಸೊಕ್ಕು ಮುರಿದು ಸಂಕಟಪಡುವ ಅವರನ್ನು ನೋಡಿ ನಾವೂ ಸಂತೋಷದಿಂದ ನಗಬೇಕು. ನನ್ನ ಸೇಡು ತೀರಿಸಿಕೊಳ್ಳುವವರೆಗೂ ನಾನು ಬದುಕಿದ್ದೂ ಸತ್ತಂತೆಯೇ ಎಂದು ತಿಳಿದು ನನ್ನ ಛಲ, ಪರಾಕ್ರಮ, ಕೆಚ್ಚು, ಎಲ್ಲವನ್ನು ವೃದ್ಧಿಗೊಳಿಸಿಕೊಳ್ಳಲು ಪ್ರಯತ್ನಪಡುತ್ತೇನೆ'' ಎಂದನು.

ದುರ್ಯೋಧನನ ಕಿಚ್ಚು ಮತ್ತಷ್ಟು ಹತ್ತಿ ಉರಿಯಬೇಕೆಂಬ ಭಾವದಿಂದ ಶಕುನಿಯು ಕುಚೋದ್ಯದ ಮಾತುಗಳಿಂದ ಕೆರಳಿಸಿದನು. ''ವತ್ಸಾ! ಬಹಳ ಬಲಿಷ್ಠರೊಡನೆ ಸರಿಸಮಾನರಂತೆ ನಿಂತು ಸೇಡನ್ನು ತೋರಿಸಹೋದರೆ ಪ್ರಾಣಕ್ಕೇ ಸಂಚುಕಾರ ಬರುತ್ತದೆ. ಅವರನ್ನು ಗೆಲ್ಲುವ ಯೋಗ್ಯತೆ ನಮಗಿಲ್ಲ. ಪಾಂಡವರು ರಾಜಸೂಯಯಾಗದಿಂದ ಎಲ್ಲಾ ರಾಜರನ್ನು ಆಕರ್ಶಿಸಿಕೊಂಡು ಅಕಂಡ ಮಂಡಲಾಧಿಪರಾಗಿ ಮೆರೆಯುತ್ತಿದ್ದಾರೆ. ಅವರನ್ನು ನೋಡಿ ಅಸೂಯೆಪಟ್ಟರೆ ಶ್ವಾನನು ಸೂರ್ಯನತ್ತ ನೋಡಿ ಶಪಿಸಿದರೆ ಅದಕ್ಕೇನು ಫಲವೋ ನಿನಗೂ ಅದೇ ಫಲ ಎಂದು ಭಾವಿಸುತ್ತೇನೆ'' ಎಂದನು. ದುರ್ಯೋಧನನು ''ಶಕುನೀ! ನೀನೂ ಹೀಗೆ ಪಾಂಡವರನ್ನು ಹಿಗ್ಗಿಸಿ ನನ್ನನ್ನು ಕುಗ್ಗಿಸಿ ಕೊರಕಲಿಗೆ ತಳ್ಳುವುದಾದರೆ ನಾನಿನ್ನು ಖಂಡಿತವಾಗಿಯೂ ಬದುಕುವುದಿಲ್ಲ. ನಾನು ಸಾಯುತ್ತೇನೆ. ಯಾರೂ ನನ್ನನ್ನು ಉಳಿಸುವ ಯೋಚನೆ ಮಾಡಬೇಡಿರಿ'' ಎಂದು ಪ್ರಾಣತ್ಯಾಗಕ್ಕೆ ನಿರ್ಧರಿಸಿದನು. ಶಕುನಿಯು ಆ ಸಂದರ್ಭದಲ್ಲಿ ದುರ್ಯೋಧನನ ಮುದುಡಿದ ಮನಸ್ಸು ಹಿಗ್ಗುವಂತೆ ವಿಷಮುಳ್ಳಿನ ಚಿಕಿತ್ಸೆ ಮಾಡಲನುವಾದನು. ''ದುರ್ಯೋಧನಾ! ಏನೇ ವಿಪತ್ತು ಬಂದರೂ ಅದನ್ನು ಗೆಲ್ಲುವ ಉತ್ಸಾಹವಿದ್ದವನೇ ನಿಜವಾದ ಧೀರ. ಹೇಡಿಯಂತೆ ಪ್ರಾಣಹತ್ಯ ಮಾಡಿಕೊಳ್ಳುವ ಯೋಚನೆ ಮಾಡಬಾರದು. ಪಾಂಡವರ ಅಪಾರ ಐಶ್ವರ್ಯವನ್ನು ಒಂದುಕ್ಷಣದಲ್ಲಿ ಬತ್ತಿಸುವಂಥ ಸಾಮರ್ಥ್ಯ ನನ್ನಲ್ಲಿದೆ. ಅವರು ಎಷ್ಟೇ ಬಲಿಷ್ಠರಾಗಿದ್ದರೂ ಹೊಡೆದಾಟವಿಲ್ಲದೆ ಉಪಾಯದಿಂದ ನಮ್ಮ ಕೈಕೆಳಗಿನ ಸೇವಕರಂತೆ ಮಾಡಿಕೊಳ್ಳುವ ವಶೀಕರಣ ವಿದ್ಯೆ ನನ್ನಲ್ಲಿದೆ. ಅಕ್ಷವಿದ್ಯೆಯಲ್ಲಿ ನನಗಿಂತಲೂ ಬುದ್ಧಿವಂತರು ಒಬ್ಬರೂ ಇಲ್ಲ. ಆದ್ದರಿಂದ ಪಾಶವಿದ್ಯೆಯ ಪ್ರಯೋಗದಿಂದ ಅವರೊಡನೆ ಜೂಜಾಡಿ ಅವರ ಸಕಲಸಂಪತ್ತನ್ನು ಸುಲಿಗೆಮಾಡಿ ನಿನಗೆ ಸೇರುವಂತೆ ನಾನು ಮಾಡಬಲ್ಲೆನು'' ಎಂದು ಹೇಳಿ ದುರ್ಯೋಧನನನ್ನು ಧೃತರಾಷ್ಟ್ರನ ಬಳಿಗೆ ಕರೆದುಕೊಂಡು ಹೋದನು.

ಧೃತರಾಷ್ಟ್ರನ ಮನೋಕೊಳವನ್ನು ಕಲಕಿ ಬಗ್ಗಡ ಮಾಡಬೇಕೆಂದು ತನ್ನ ವಿಷನುಡಿಗಳ ಧಾಳಿ ನಡೆಸಿದನು. ಧೃತರಾಷ್ಟ್ರನ ಮನಸ್ಸು ಅನೇಕ ಮಹಾತ್ಮರ ಉಪದೇಶಗಳಿಂದ ಸ್ವಚ್ಛಗೊಂಡಿದ್ದರೂ ಕಲಿಯ ಆವೇಶದಿಂದ ಮಕ್ಕಳ ಮೋಹಕ್ಕೊಳಗಾಗಿ ಸ್ವಚ್ಛತೆಯ ಅಡಿಯಲ್ಲಿ ದೋಶವೆಂಬ ಬಗ್ಗಡವೂ ಹೆಪ್ಪು ಕಟ್ಟಿಕೊಂಡಿತ್ತು. ಆಗಾಗ ಅದು ಬಗ್ಗಡವಾಗಿ ತಿಳಿಮನಸ್ಸು ಮಲಿನಗೊಳ್ಳುತ್ತಿತ್ತು. ಶಕುನಿಯು ಧೃತರಾಷ್ಟ್ರನನ್ನು ಕುರಿತು ''ಭಾವಾ! ಪಾಪ, ನಿನಗೆ

ಹೊರಗಣ್ಣಿಲ್ಲ. ನಿನ್ನವರಲ್ಲಿ ಯಾರು ಒಳ್ಳೆಯವರು, ಯಾರು ಕೆಟ್ಟವರು ಎಂಬುದನ್ನು ತಿಳಿಯುವ ಭಾಗ್ಯ ನಿನಗಿಲ್ಲ. ಮಾತಿನಲ್ಲಿ ಧರ್ಮೋಪದೇಶ ಕಾರ್ಯತಃ ಪಾಪಕರ್ಮಗಳು. ಇದು ನಿನಗೆ ಹೇಗೆ ತಿಳಿಯುತ್ತದೆ? ದುರ್ಯೋಧನನ ದುಃಖ ಹೇಳತೀರದು. ಪಾಂಡವರು ರಾಜರಂತೆ ಮೆರೆಯುತ್ತಿದ್ದರೆ ನಿನ್ನ ಮಕ್ಕಳು ಅವರಿಗೆ ಸೇವಕರಂತೆ ಇರಬೇಕಾಗಿದೆ. ಅವರಿಗೆ ಯಾರಿಂದಲೂ ಗೌರವವಿಲ್ಲ. ಮನ್ನಣೆ ಮರ್ಯಾದೆಗಳೇ ಇಲ್ಲದಂತಾಗಿದೆ. ಅವರ ಸಂಪತ್ತೇನು? ಸಿರಿವಂತಿಕೆ ಏನು? ಹೇಳತೀರದು? ಅವರು ನಿನ್ನ ಮಕ್ಕಳನ್ನು ನೋಡಿ ನಗುವುದು ಅಪಹಾಸ್ಯ ಮಾಡುವುದು ಮೊದಲಾದ ಅಪಮಾನಗಳಿಂದ ಪೀಡಿಸುವುದಲ್ಲದೆ ಪ್ರಜೆಗಳ ಮುಂದೆ ಅವರ ಬಗ್ಗೆ ಇಲ್ಲಸಲ್ಲದ ಅಪಪ್ರಚಾರಮಾಡಿ ರಾಜ್ಯದಲ್ಲಿ ಅವರಿಗೆ ಪ್ರಜಾವರ್ಗದಿಂದ ದೂಶಣೆ ಹೊರುವಂತೆ ಮಾಡಿದ್ದಾರೆ. ಎಲ್ಲರನ್ನು ಒಲಿಸಿಕೊಂಡು ತಮ್ಮ ಹಿರಿಮೆಯನ್ನೇ ಮೆರಸಿ ದುರ್ಯೋಧನಾದಿಗಳನ್ನು ಕಡೆಗಣಿಸಿ ಕೈಕೆಳಗಿನವರಂತೆ ನಡೆಸಿಕೊಳ್ಳುತ್ತಿದ್ದಾರೆ'' ಎಂದು ಹೇಳಿದನು.

ಧೃತರಾಷ್ಟ್ರನು ಶಕುನಿಯ ಮಾತು ಸಂಬಲಿಲ್ಲ. ''ಪಾಂಡವರ ಉನ್ನತಿಯನ್ನು ನೀವುನೋಡಿ ಸಹಿಸಲಾರದೆ ಸಂಕಟಪಡುತ್ತಿದ್ದೀರಿ. ಅವರು ಧರ್ಮವಂತರಾದ ಕಾರಣ ಜಯಿಸಿರಿ ಅವರಿಗೆ ಒಲಿದುಬಂದಿದೆ. ದುರ್ಯೋಧನನು ಸಕಲ ಸಂಪದ್ಭರಿತವಾದ ಹಸ್ತಿನಾವತಿಯಿಂದ ಅವರನ್ನು ಓಡಿಸಿ ಅವರಿಗೆ ಬಟ್ಟಬಯಲಂತಿದ್ದ ಬೆಂಗಾಡು ಪ್ರದೇಶವಾದ ಇಂದ್ರಪ್ರಸ್ಥಕ್ಕೆ ಕಳುಹಿಸಿದನು. ಅರಣ್ಯಸದೃಶರಾಜ್ಯವೇ ಅವರಿಗೆ ಆನಂದದ ಬೀಡಾಯಿತು. ಅವರಿಗೆ ದೈವಬಲವಿರುವುದರಿಂದ ಬಾಹುಬಲಹೊಂದಿ ಜರಾಸಂಧನಂಥ ಲೋಕೈಕವೀರನನ್ನೇ ಕೊಂದು ರಾಜಸೂಯಯಾಗ ದೀಕ್ಷೆ ವಹಿಸಿ ಸಕಲ ವೀರರಾಜರನ್ನು ತಮ್ಮ ಪಾದಾಕ್ರಾಂತರನ್ನಾಗಿ ಮಾಡಿಕೊಂಡು ಯಾಗವನ್ನು ಮುಗಿಸಿ ಈಗ ಸಿರಿದೇವಿಯ ಶಿಖರವೇರಿದ್ದಾರೆ. ಅವರನ್ನು ನೋಡಿ ನೀವು ಸಂತೋಷಪಟ್ಟರೆ ನಿಮಗೂ ಸಂತೋಷ ಸಿಗುತ್ತದೆ. ಮತ್ಸರ ಪಟ್ಟರೆ ಮರಣವೇ ಗತಿ ಆಗುತ್ತದೆ. ನೀವೂ ಅವರಂತೆ ಧರ್ಮಕರ್ಮನಿರತರಾಗಿ ರಾಜಸೂಯಯಾಗ ಮಾಡುವಂಥ ಸಾಮರ್ಥ್ಯವನ್ನು ಹೊಂದಿ ಸಂಪತ್ತನ್ನು ವೃದ್ಧಿಪಡಿ‍ಸಿಕೊಂಡು ನಿಮ್ಮ ಕೀರ್ತಿಕಲಶವನ್ನು ಬೆಳಗಿಸಿರಿ. ಅದಕ್ಕೆ ಯಾರು ಅಡ್ಡಿ ಮಾಡುತ್ತಾರೆ? ಪಾಂಡವರು ನಿಮಗೆ ಯಾವ ಕಾಲಕ್ಕೂ ದ್ರೋಹ ಬಗೆಯತಕ್ಕವರಲ್ಲ'' ಎಂದನು.

ಆಗ ಶಕುನಿಯ ಸೂಚನೆಯಂತೆ ದುರ್ಯೋಧನನು ಧೃತರಾಷ್ಟ್ರನ ಪಕ್ಕದಲ್ಲಿ ಕುಳಿತುಕೊಂಡು ''ತಂದೆ! ನಾನು ನಿನಗೆ ಮಗನೆಂಬ ಅಭಿಮಾನವಿದ್ದರೆ ನನ್ನ ಮಾತು ನಡೆಸಿಕೊಡುತ್ತೇನೆಂದು ವಾಗ್ದಾನ ಮಾಡು. ಇಲ್ಲದಿದ್ದರೆ ನನಗೆ ವಿಷಪಾನಕ್ಕೆ ಅಪ್ಪಣೆಕೊಡು. ಯಾವುದಾದರೂ ಒಂದು ಈಗ ಆಗಲೇಬೇಕು.'' ಎಂದನು. ಮೂಲಕಲಿ ಆದ ದುರ್ಯೋಧನನ ಅವತಾರಕ್ಕಾಗಿ ಒಂದು ತಿಂಗಳು ತಂದೆಯಾದ ಧೃತರಾಷ್ಟ್ರನಲ್ಲಿ ಪ್ರವೇಶಮಾಡಿ ನೆಲೆಸಿದ್ದನು. ಆಮೇಲೆ ಒಂದು ತಿಂಗಳು ಮಾತೃಗರ್ಭ ಪ್ರವೇಶಮಾಡಿ ಗಾಂಧಾರಿಯಲ್ಲಿದ್ದನು. ಅವತಾರವಾದನಂತರ

ಒಂದಂಶ ತಂದೆಯಲ್ಲೂ, ಒಂದಂಶ ತಾಯಿಯಲ್ಲೂ ನಿರಂತರ ಇರುತ್ತಿದ್ದನು. ಆದ್ದರಿಂದಲೇ ತಂದೆತಾಯಿಗಳಿಗೆ ದುರ್ಯೋಧನನು ಪರಮಪಾಪಿ ಎಂದು ತಿಳಿದಿದ್ದರೂ ಅವನನ್ನು ತ್ಯಜಿಸದೆ ಅವನಲ್ಲಿ ಅಧಿಕ ಮೋಹ ಅವರಿಗೆ ಉಂಟಾಗಿತ್ತು. ಆದೋಶದಿಂದ ಧೃತರಾಷ್ಟ್ರನು ದುರ್ಯೋಧನ ಸಾಯಬಾರದು. ಬಹಳದಿನ ಸುಖದಿಂದಿರಬೇಕೆಂಬ ಮೋಹದಿಂದ ''ಪುತ್ರಾ! ನೀನು ನನಗೆ ದುಃಖವಾಗುವಂಥ ಮಾತನ್ನಾಡಬೇಡ. ನಿನಗೆ ಸುಖವಾಗುವುದಕ್ಕಾಗಿ ನಾನು ಏನುಮಾಡಲು ಸಿದ್ಧನಿದ್ದೇನೆ'' ಎಂದುಬಿಟ್ಟನು.

''ಶಕುನಿಯು ಪಾಶವಿದ್ಯದಲ್ಲಿ ಪ್ರವೀಣನಾಗಿದ್ದಾನೆ. ಪಾಂಡವರೊಡನೆ ಜೂಜಾಡಿ ಅವರನ್ನು ಸೋಲಿಸಿ ಅವರ ರಾಜ್ಯ ಕೋಶಾದಿಗಳನ್ನೆಲ್ಲಾ ಕಸಿದುಕೊಂಡು ಕಾಡಿಗಟ್ಟಿದರೆ ಆಗ ನನಗೆ ಸುಖವಾಗುತ್ತದೆ'' ಎಂದನು.

ಧೃತರಾಷ್ಟ್ರನಿಗೆ ಎದೆ ಒಡೆಯಿತು. ಪಾಂಡವರ ಕಡೆ ಕೃಷ್ಣನಿದ್ದಾನೆ. ಭೀಮಸೇನನಿದ್ದಾನೆ. ಮಗನ ಅಕೃತ್ಯಕ್ಕೆ ಮುಂದೇನು ಸಂಭವಿಸುತ್ತದೋ ಎಂಬ ಭಯವಿದ್ದರೂ ಮಗನ ಮಾತಿಗೆ ಒಡಂಬಟ್ಟು ವಿದುರನನ್ನು ಕರೆಸಿಕೊಂಡನು. ''ವಿದುರಾ! ಪಾಂಡವರನ್ನು ಕರೆದುಕೊಂಡುಬಾ. ಮಕ್ಕಳೆಲ್ಲರೂ ಒಂದಾಗಿ ಆಡಿಕೊಂಡಿರಲಿ'' ಎಂದನು. ವಿದುರನಿಗೆ ದುರ್ಯೋಧನನ ಅಮೋಘವಾದ ಆಟದ ಭವನದ ಸಿದ್ಧತೆ ಧೃತರಾಷ್ಟ್ರನ ಆದರದಕರೆ ಎಲ್ಲವನ್ನೂ ನೋಡಿ ಸಂದೇಹಬಂದು ''ಧೃತರಾಷ್ಟ್ರಾ! ಪಾಂಡವರನ್ನು ಜೂಜಾಟಕ್ಕಾಗಿ ನೀನು ಕರೆಯುತ್ತಿರುವಿ. ಅಲ್ಲವೇ? ಬೇಡ. ಇದು ಮೊದಲು ವಿನೋದವಾಗಿ ಪ್ರಾರಂಭವಾಗಿ ಕೊನೆಗೆ ವಿರೋಧಕ್ಕಿಟ್ಟುಕೊಂಡು ವಿಪತ್ತಿಗೆ ಕಾರಣವಾಗುತ್ತದೆಂಬ ಭಯವಾಗುತ್ತದೆ'' ಎಂದು ಹೇಳಿದನು.

ಧೃತರಾಷ್ಟ್ರನು ಆದರೂ ಎಚ್ಚೆತ್ತುಕೊಳ್ಳದೆ ''ವಿದುರಾ! ಅದಕ್ಕೇಕೆ ಅಷ್ಟೊಂದು ಭಯಪಡುವಿ? ನನಗೇನು ಪಾಂಡವರು ಶತೃಗಳೇ? ಎಲ್ಲರೂ ಮಕ್ಕಳೇ, ಬರಲಿ ಕರೆಹೋಗು'' ಎಂದನು.

ವಿದುರನು ಅಂಧರಾಜನ ಆಜ್ಞೆಯಂತೆ ಪಾಂಡವರ ಬಳಿಗೆ ಬಂದು ಸಂತೋಷದಿಂದ ಅವರನ್ನು ಸಂಧಿಸಿ ಮಾತುಕಥೆಗಳಾದ ನಂತರ ವಿದುರನು ''ಧರ್ಮರಾಯಾ! ಧೃತರಾಷ್ಟ್ರನು ನಿಮ್ಮನ್ನು ಸಂತೋಷದ ಕೂಟಕ್ಕೆ ಬರಬೇಕೆಂದು ಕರೆಯುತ್ತಿದ್ದಾನೆ. ದುರ್ಯೋಧನನು ನಿರ್ಮಿಸುತ್ತಿರುವ ಸಭಾಭವನವನ್ನು ನೋಡಿದರೆ ನನಗೇಕೋ ಅನುಮಾನ ಬರುತ್ತಿದೆ. ಆದರೂ ಗತಲೋಚನನ ಮಾತು ಮೀರುವಂತಿಲ್ಲವೆಂದು ಬಂದು ಹೇಳಿದ್ದೇನೆ. ಮುಂದಾಲೋಚನೆಮಾಡಿ ಹೊರಡಿರಿ'' ಎಂದು ಸೂಚನೆ ಕೊಟ್ಟನು. ಹಸ್ತಿನಾವತಿಗೆ ಹೊರಡುವುದು ಪಾಂಡವರಲ್ಲಿ ಯಾರಿಗೂ ಇಷ್ಟವಿರಲಿಲ್ಲ. ಆದರೆ ಧರ್ಮರಾಜನು ಧೃತರಾಷ್ಟ್ರನ ಮಾತು ನಾವು ಮೀರಬಾರದು ಹೊರಡಲೇಬೇಕೆಂದು ಹೇಳಿದನು. ಧರ್ಮರಾಜನು ಆಗ ಹಿಂದೆ ವೇದವ್ಯಾಸರು, ತಿಳಿಸಿದ್ದ ಭವಿಷ್ಯವಾಣಿಯನ್ನು ಜ್ಞಾಪಿಸಿಕೊಂಡನು. ''ಧರ್ಮರಾಜಾ!

ನಿನಗೆ ಈಗ ಪಾದಾಕ್ರಾಂತರಾಗಿ ನಿನಗೆ ಅಮೋಘವಾದ ಕಾಣಿಕೆ ಅರ್ಪಿಸಿ ನಿನ್ನ ದರ್ಶನಾಕಾಂಕ್ಷೆಗಾಗಿ ಬಂದ ರಾಜರನ್ನು ನೀನೇ ಹತ್ಯಮಾಡಬೇಕಾದ ದುಶ್ಕಾಲ ಬರುತ್ತದೆ. ಇವರೆಲ್ಲರ ಮರಣಕ್ಕೂ ನೀನೇ ಮೂಲಕಾರಣನಾಗುವಿ'' ಎಂದು ಸರ್ವಜ್ಞರಾದ ಅವರಮಾತು ನನ್ನ ಮನಸ್ಸನ್ನು ಶೂಲದಂತೆ ಇರಿಯುತ್ತಿದೆ. ಆ, ದುರ್ನಿಮಿತ್ತವನ್ನು ನಾನು ಉಂಟುಮಾಡದಂತೆ ಬಹಳ ತಾಳ್ಮೆಯಿಂದ ನಡೆಯಬೇಕು. ನಮಗೆ ಏನು ಸಂಭವಿಸಿದರೂ ಸಂತೋಷದಿಂದಲೂ ಅನುಭವಿಸಬಹುದು. ಆದರೆ ಲೋಕಕ್ಕೆ ನಮ್ಮಿಂದ ವಿಪತ್ತು ಬರಬಾರದು. ಆದಕಾರಣ ನಾವು ದುರ್ಯೋಧನಾದಿಗಳನ್ನು ಸಾಧ್ಯವಾದಷ್ಟೂ ವಿರೋಧಮಾಡಿಕೊಳ್ಳದೆ ಅವರು ಹೇಳಿದಂತೆ ನಡೆದರೆ ಯುದ್ಧವೆಂಬ ಕಾಳ್ಗಿಚ್ಚು ಹಬ್ಬಲು ಸಾಧ್ಯವಿಲ್ಲವೆಂಬ ಭಾವದಿಂದ ಭೀಮಾರ್ಜುನಾದಿಗಳು ''ಹಸ್ತಿನಾವತಿಗೆ ಹೋಗುವುದು ಬೇಡ'' ಎಂದು ತಡೆದರೂ, ನಮಗೆ ತಂದೆಯಾದ ಧೃತರಾಷ್ಟ್ರನ ಮಾತು ನಾವು ಪಾಲಿಸದಿದ್ದರೆ ಅಧರ್ಮವಾಗುತ್ತದೆ. ಆದ್ದರಿಂದ ಈಗ ನಾವು ಹೊರಡುವುದೇ ಸರಿ'' ಎಂದು ಹೇಳಿದಾಗ ಧರ್ಮರಾಜನ ಪರಿವಾರವೆಲ್ಲವೂ ವೈಭವಪೂರ್ಣರಾಗಿ ದೊಡ್ಡ ಮೆರವಣಿಗೆ ಹೊರಟಂತೆ ಹೊರಟರು.

ಹಸ್ತಿನಾವತಿಯಲ್ಲಿ ದುರ್ಯೋಧನನು ಪಾಂಡವರನ್ನು ತಮ್ಮ ವಂಚನೆಯ ವಾತ್ಸಲ್ಯದಿಂದ ತಮ್ಮತ್ತ ಸೆಳೆದುಕೊಂಡು ಸಿಕ್ಕಿನಲ್ಲಿ ಸೇರಿಸಬೇಕೆಂಬ ಭಾವದಿಂದ ರಾಜವೈಭವದಿಂದ ಅವರನ್ನು ಇದಿರ್ಗೊಂಡು ಸ್ವಾಗತ ಸತ್ಕಾರಗಳಿಂದ ಸಂಭ್ರಮದುತ್ಸವ ನಡೆಸಿ ಅವರಿಗಾಗಿ ಸರ್ವಸಂಪತ್ಭರಿತವಾದ ಭವ್ಯ ಅರಮನೆಗಳ ವ್ಯವಸ್ಥೆ ಮಾಡಿದ್ದಲ್ಲಿಗೆ ವಾದ್ಯವೈಭವದಿಂದ ಕರೆತಂದರು. ಧೃತರಾಷ್ಟ್ರನನ್ನು ಗಾಂಧಾರಿಯನ್ನು ಅವರಿದ್ದಲ್ಲಿಗೆ ಕರೆದುಕೊಂಡುಬಂದು ನಿಮ್ಮ ಆಗಮನದಿಂದ ನಮಗಾದ ಆನಂದ ಅಷ್ಟಿಷ್ಟಿಲ್ಲವೆಂಬ ಮಾತು ಅವರಿಂದಲೂ ಹೊರಡಿಸಿ ಎಲ್ಲರೂ ಒಟ್ಟಾಗಿ ಬಹಳ ಅಭಿಮಾನದಿಂದ ಊಟಉಪಚಾರಾದಿಗಳೆಲ್ಲವನ್ನು ಅನುಭವಿಸಿ ಆನಂದದಿಂದ ಅನೇಕ ವಿನೋದದ ಮಾತುಗಳಿಂದ ರಾತ್ರಿಯನ್ನು ಕ್ಷಣದಂತೆ ಕಳೆದರು.

ಭೀಮಸೇನನಿಗೆ ಇದು ಕುಹಕಿಯಾದ ಕಲಿಯ ಚೆಲ್ಲಾಟವೆಂದು ಚೆನ್ನಾಗಿ ತಿಳಿಯಿತು. ಅಸುರರನ್ನು ನಾಶಪಡಿಸಲಿಕ್ಕಾಗಿಯೇ ಸ್ವಾಮಿಯು ಇದೆಲ್ಲವನ್ನು ನಡೆಸುತ್ತಿದ್ದಾನೆ. ಅವನ ಈ ಬಗೆಯ ವಿಚಿತ್ರನಾಟಕವನ್ನು ಸುಜ್ಞಾನದೃಷ್ಟಿಯಿಂದ ನೋಡಿದರೆ ಅದರಲ್ಲೂ ಸ್ವಾರಸ್ಯವಿದೆ'' ಎಂದುಕೊಂಡು ಎಲ್ಲವನ್ನು ನೋಡಿ ಒಳಗೊಳಗೇ ನಗುತ್ತಿದ್ದನು.

ಸೂರ್ಯೋದಯವಾಯಿತು. ಪ್ರಾತಃಕಾಲದ ಸುಪ್ರಭಾತಗಳು ಮೊದಲಾದ ರಾಜಮರ್ಯಾದೆಗಳೆಲ್ಲವೂ ಆದನಂತರ ಸಭಾಭವನಕ್ಕೆ ಹೊರಡಬೇಕು. ಪಾಂಡವರ ಸಭಾಭವನದಂತೆಯೇ ದುರ್ಯೋಧನನೂ ಸಭಾಭವನವನ್ನು ನಿರ್ಮಾಣ ಮಾಡಬೇಕೆಂದು ಬಹಳ ಕಷ್ಟಪಟ್ಟು ಮಾಡಿಸಿದ್ದನು. ಅದು ಸುಂದರಭವನವಾಗದೆ ಸೇಡಿನಿಂದ ತುಂಬಿದ ಭವನವಾಗಿದೆ ಎಂದು ಭೀಮಸೇನ ಅರಿತನು. ದುರ್ಯೋಧನನು ಭಾನುಮತಿಯಮುಂದೆ --ಚೀದೇವಿಯನ್ನು ಅವಮಾನಗೊಳಿಸಿ ಅಂದಿನ ಅವಳನಗು ಇಂದು ನೋವಿನ

ಸಂಕಟವಾಗಬೇಕೆಂದು ಕ್ರೋಧದಿಂದ ರಚಿಸಿದ ಆ ಭವನದಲ್ಲಿ ಪಾಂಡವರೆಲ್ಲರನ್ನು ಕರೆತಂದು ಒಂದೊಂದನ್ನಾಗಿ ತೋರಿಸುತ್ತಿದ್ದರು. ದ್ರೌಪದೀದೇವಿ ತನ್ನ ದೈವಶಕ್ತಿಯ ಮುಂದೆ ಈ ದೈತ್ಯರು ಚೆಲ್ಲಾಟವಾಡುತ್ತಿದ್ದಾರೆ ಎಂಬುದನ್ನು ತಿಳಿದಿದ್ದಳಾದ್ದರಿಂದ ಶ್ರೀಕೃಷ್ಣನ ಸಂಕಲ್ಪದಂತೆ ಎಲ್ಲವನ್ನು ನೋಡುತ್ತ ಮುಂದೆ ಮುಂದೆ ಬರುತ್ತಿದ್ದಳು. ಹೀಗೆ ಎಲ್ಲವನ್ನು ನೋಡಿಕೊಂಡು ಬಂದಮೇಲೆ ಒಂದುಕಡೆ ಆಟದ ಸಿದ್ಧತೆ ನಡೆದಿತ್ತು. ಅಲ್ಲಿ ಪ್ರೇಕ್ಷಕರಿಗೆ ಉತ್ತಮವಾದ ಆಸನಗಳನ್ನು ಹಾಕಿದ್ದರು. ಅವರು ನಿರ್ಮಿಸಿದ ಬಂಗಾರನಿರ್ಮಿತ ಕ್ರೀಡಾವೇದಿಕೆಯನ್ನು ಭೀಮಸೇನ ''ಇದು ಜೂಜುಕಟ್ಟೆ. ಇಲ್ಲಿ ಮೂಲಕಲಿ ವಿಶೇಷ ಸನ್ನಿಧಾನದಿಂದ ನೆಲಸಿದ್ದಾನೆ'' ಎಂದುಕೊಂಡನು.

ಈಗ ಸ್ವಲ್ಪಹೊತ್ತು ಎಲ್ಲರೂಸೇರಿ ಆಟ ಆಡಬೇಕೆಂದು ತಮ್ಮತಮ್ಮಲ್ಲೇ ಮಾತನಾಡಿಕೊಳ್ಳುವರಂತೆ ನಟನೆಮಾಡುತ್ತ ''ಧರ್ಮರಾಜಾ! ನೀನು ರಾಜಸೂಯಯಾಗ ಮಾಡಿ ದಣಿದಿದ್ದಿ. ಈಗ ಮನರಂಜನೆಗಾಗಿ ನೀನೇ ಮೊದಲು ಆಟ ಆಡು'' ಎಂದು ಹುರಿದುಂಬಿಸಿದರು. ದ್ಯೂತಕ್ಕೆ ಯಾರುಕರೆದರೂ ರಾಜನಾದವನು ಹೋಗಲೇಬೇಕೆಂಬ ರಾಜನೀತಿಯಂತೆ ಧರ್ಮರಾಜ ದ್ಯೂತಕ್ಕೆ ಒಗೊಟ್ಟು ಕುಳಿತನು. ಭೀಷ್ಮ ದ್ರೋಣಾದಿಗಳಿಗೂ ಕಲಿ ಆದೇಶವಾಗಿತ್ತಾದ್ದರಿಂದ ಅವರಾರೂ ದ್ಯೂತ ಕೂಡದೆಂಬುದಾಗಿ ನಿಷೇಧಿಸದೆ ಎಲ್ಲರೂ ಸುಮ್ಮನೆ ನೋಡುತ್ತ ಕುಳಿತಿದ್ದರು.

## ದ್ಯೂತರ ದುರತಿಕ್ರಮಣ

ಆಟ ಮೊದಲು ಸರಸವಾಗಿ ಪ್ರಾರಂಭವಾಯಿತು. ಬರಬರುತ್ತ ಸಮರಾಂಗಣದಂತೆ ಆಯಿತು. ಎಲ್ಲಾ ಮಾತಿಗೂ ಧರ್ಮರಾಜ ಸಮ್ಮತಿ ನೀಡುತ್ತಿದ್ದನು. ಪಣಕಟ್ಟಿದರು ಶಕುನಿಯು ತನ್ನ ಪಾಶವಿದ್ಯದಿಂದ ಧರ್ಮರಾಜನ ಸಮಸ್ತ ಸಂಪತ್ತನ್ನು ಸೆಳೆದುಕೊಂಡನು. ಇನ್ನು ಉಳಿದಿರುವುದೆಂದರೆ ಜೀವನಿಧಿಗಳು ಸಹೋದರರು ನಾಲ್ಕುಜನರೂ ಪಣದಿಂದ ಪರರ ಸ್ವತ್ತಾದರು. ದ್ರೌಪದಿಯೂ ನಂತರ ಪಣವಸ್ತುವಾದಳು. ಹೀಗೆ ಪಾಂಡವರೈವರೂ ದ್ರೌಪದೀ ಸಮೇತರಾಗಿ ತಮ್ಮ ಸಕಲ ಸಂಪತ್ತಿನೊಡಗೂಡಿ ಕೌರವರ ವಶವಾದರೆಂದು ಸಭಾಭವನದಲ್ಲಿ ಮೇಲಿಂದಮೇಲೆ ಪ್ರಚಾರ ಮಾಡತೊಡಗಿದರು.

ಧೃತರಾಷ್ಟ್ರನು ತನ್ನ ಮಗ ಗೆದ್ದಿದ್ದಾನೆಂಬ ಆನಂದದಿಂದ ಅಂತರಂಗದಲ್ಲಿ ಅಮೃತಪಾನ ಮಾಡಿದಷ್ಟು ಸಂತೃಪ್ತಿಹೊಂದಿದನು. ಕೌರವರ ಕಡೆಗೆ ಸಂತೋಷದ ಪ್ರವಾಹ ಹರಿಯಿತು. ನಂತರ ದುರ್ಯೋಧನನು ತನ್ನ ದೂತನನ್ನು ಕರೆದು ಪಾಂಡವರು ಆಟದಲ್ಲಿ ಸೋತು ನಮ್ಮ ಕೈವಶರಾಗಿದ್ದಾರೆ. ಅವರೈವರಿಗೂ ಪತ್ನಿಯಾಗಿರುವ ದ್ರೌಪದಿ ಈಗ ನಮಗೆ ದಾಸಿಯಾಗಿದ್ದಾಳೆ. ಆ ತೊತ್ತಿನ ಹೆಣ್ಣನ್ನು ಸಭೆಗೆ ಎಳೆತನ್ನಿರಿ'' ಎಂದನು. ಅವಳು ಅಂದು

ಸಭೆಯಲ್ಲಿ ನಕ್ಕ ದೃಶ್ಯ ನನ್ನನ್ನು ಚುಚ್ಚಿಚುಚ್ಚಿ ಎಚ್ಚರಿಸುತ್ತಿತ್ತು. ಮತ್ಸರ ಮಸೆದು ಬರುತ್ತಿತ್ತು. ದ್ರೌಪದೀದೇವಿ ಸಾಕ್ಷಾತ್ ಭಾರತೀದೇವಿ ಆಗಿರುವುದರಿಂದ ಆ ಮಹಾತ್ಮಳಿಗೆ ಕಲಿ ಆವೇಶವಿಲ್ಲ. ನನ್ನಪತಿ ಶ್ರೀಕೃಷ್ಣನ ಸಂಕಲ್ಪದಂತೆ ದೈತ್ಯವಧೆಗಾಗಿಯೇ ಅವತರಿಸಿದ್ದಾನೆ. ಈಗ ಪಾಂಡವರು ಕಲಿಮಲದೋಶ ಅವರಿಗಿಲ್ಲವಾದರೂ ದೋಷಲೇಪರಂತೆ ಕಾಣುತ್ತಿದ್ದಾರೆ ಎಂದುಕೊಂಡು ತಾನೂ ರಜಸ್ವಲೆ ಆದ ಅಶುದ್ಧ ಹೆಣ್ಣಿನಂತೆ ನಟನೆ ಮಾಡಿದಳು. ಆ ಸಮಯಕ್ಕೆ ದುರ್ಯೋಧನನಿಂದ ಕಳುಹಿಸಲ್ಪಟ್ಟ ದೂತನೊಬ್ಬನು ಬಂದು ದ್ರೌಪದಿಯ ತೇಜಸ್ಸಿಗೆ ಹೆದರಿ ದೂರದಲ್ಲಿ ಕೈಮುಗಿದುನಿಂತು, ''ತಾಯೇ! ರಾಜರು ತಮ್ಮನ್ನು ಸಭೆಗೆ ಕರೆತರಬೇಕೆಂದು ನನಗೆ ಆಜ್ಞೆ ಮಾಡಿದ್ದಾರೆ. ಬರಬೇಕು'' ಎಂದನು.

''ನಿಮ್ಮ ರಾಜನಿಗೆ ನಾನು ಸ್ತ್ರೀ ಆದ್ದರಿಂದ ಅನೇಕ ಪುರುಷರಿರುವ ಸಭೆಗೆ ಬರಬಾರದೆಂದೂ ಮತ್ತು ನಾನು ಈಗ ರಜಸ್ವಲೆ ಆಗಿರುವುದರಿಂದ ಗುರುಗಳು, ದೇವತೆಗಳು, ರಾಜರುಗಳಿರುವ ಕಡೆ ಬಂದರೆ ದೋಷವೆಂದೂ ತಿಳಿಸುಹೋಗು'' ಎಂದಳು.

ಆಗ ದೂತನು ದ್ರೌಪದಿಗೆ ಮರುತ್ತರ ಕೊಡಲು ಹೆದರಿದನು. ಈಕೆ ಮೊದಲೇ ಕೆಂಡದಮಗಳು. ನಾನೇನಾದರೂ ರಾಜಾಜ್ಞೆಯಂತೆ ಈಕೆಯನ್ನು ಮುಟ್ಟಿದರೆ ಸುಟ್ಟುಹೋದೇನು. ಒಂದುವೇಳೆ ಈತಾಯಿ ದೂತನೆಂದು ಕರುಣತೋರಿದರೂ ಭೀಮನ ಗದೆ ನನ್ನನ್ನು ಬೆನ್ನಟ್ಟಿಬರುತ್ತದೆ'' ಎಂದುಕೊಂಡು ಕ್ಷಣಹೊತ್ತು ಅಲ್ಲಿ ನಿಲ್ಲದೆ ಹೊರಟನು.

ದುರ್ಯೋಧನನ ಬಳಿಗೆ ಬಂದು ''ಪ್ರಭೂ! ದ್ರೌಪದೀದೇವಿಯವರು ಸಭೆಗೆ ಹೆಂಗಸರು ಬರುವುದು ನಿಷೇಧವೆಂದೂ ಈಗ ಅವರ ರಜಸ್ವಲರಾಗಿರುವುದರಿಂದ ಗುರುಹಿರಿಯರಬಳಿ ಬರಲೂಬಾರದೆಂದೂ ಹೇಳಿದರು'' ಎಂದನು.

ಆಗ ದುರ್ಯೋಧನನು ಈತನಿಗೆ ಆ ಭೀಮನ ಭಯ. ಆದ್ದರಿಂದಲೇ ಎಳೆತರದೆ ಆಕೆಯ ಧರ್ಮಪ್ರವಚನವನ್ನು ಶ್ರವಣಮಾಡಿ ಬಂದಿದ್ದಾನೆ. ''ದುಶ್ಯಾಸನಾ! ನೀನುಹೋಗಿ ಆಕೆಯನ್ನು ಶೀಘ್ರವಾಗಿ ಎಳೆದುತರಬೇಕು. ಆಕೆ ಹೇಗಿದ್ದರೂ ಸರಿಯೆ ರಾಜಾಜ್ಞೆ ಮೀರದೆ ಬರಬೇಕೆಂದು ಹೇಳಿ ಎಳೆದುಕೊಂಡುಬಾ'' ಎಂದನು.

ದುಶ್ಯಾಸನು ಪಾಪಕೃತ್ಯಕ್ಕೆ ಅಂಜಲಿಲ್ಲ. ದ್ರೌಪದಿಯ ಬಳಿಗೆ ಬಂದು ಅವಳ ಸುತ್ತಲೂ ನಿಂತಿದ್ದ ದಾಸೀಸಮೂಹವನ್ನು ತಳ್ಳಿ ದ್ರೌಪದಿಯ ಸಿರಿಮುಡಿಯನ್ನು ಮುಷ್ಟಿಯಲ್ಲಿ ಹಿಡಿದೆಳೆದು ಸಭೆಗೆ ಕರೆತಂದನು. ದ್ರೌಪದಿಯು ಪಾಪಿಗಳ ಪಾಪ ಇನ್ನೂ ಅಧಿಕವಾಗಿ ಅವರೆಲ್ಲರ ವಿಧ್ವಂಸನಕಾರ್ಯವನ್ನು ಭೀಮಸೇನನಿಂದ ಬೇಗನಡೆದು ಭಗವತ್ಕಾರ್ಯ ಸಾಧಕನೆಂದು ಶ್ರೀಕೃಷ್ಣಾನುಗ್ರಹಕ್ಕೆ ಪಾತ್ರನಾಗುವ ಸುಯೋಗ ಬೇಗ ಲಭಿಸಲೆಂದು ಪಾಪಿಯ ಮುಷ್ಟಿಗೆ ಸಿಕ್ಕಿ ದುಃಖಪಟ್ಟಳು.

ದ್ರೌಪದಿಯು ರಾಜಸಭಾಮುಂಭಾಗದಲ್ಲಿ ಕೆದರಿದ ಕೇಶದಿಂದ ನಿಂತು ಇಲ್ಲಿ ನೆರೆದಿರುವ ಸಭೆ ರಾಜರ ಸಭೆ ಆದ ಪಕ್ಷದಲ್ಲಿ ಒಬ್ಬ ಸ್ತ್ರೀಯನ್ನು ಪರಪುರುಷನು ಸ್ಪರ್ಶಿಸಿ ಅಕ್ರಮಣದಿಂದ ಎಳೆದು ತರುತ್ತಿರಲಿಲ್ಲ. ಇದನ್ನು ದೈತ್ಯಸಭೆ ಎಂದೇ ನಾನು ತಿಳಿದಿದ್ದೇನೆ. ಆದ್ದರಿಂದಲೇ ಈ ಸಭೆಯಲ್ಲಿ ಕಪಟದ್ಯೂತವೂ ನಡೆದಿದೆ.

ಭೀಷ್ಮ ದ್ರೋಣಾದಿಗಳಂಥ ಜ್ಞಾನವೃದ್ಧರೂ ಈ ದುಷ್ಟಸಭೆಯ ಸುಳಿಗೆ ಸಿಕ್ಕು ಮೂಕರಾಗಿರುವುದು ಪಾಪಿಗಳ ನಾಶಕ್ಕಾಗಿಯೇ ಎಂದು ಬೇರೆ ಹೇಳಬೇಕಾಗಿಯೇ ಇಲ್ಲ.

ಪತಿವ್ರತಾಸ್ತ್ರೀಗೆ ಪತ್ಯಂತರ್ಗತನಾದ ಸ್ವಾಮಿಯೇ ನಿಜವಾದ ಪತಿ ಆಗಿದ್ದಾನೆ. ಆ ಸ್ವಾಮಿಯನ್ನು ಸೋಲಿಸಲು ಕಪಟದ್ಯೂತಕ್ಕೆ ಸಾಧ್ಯವಾದೀತೆ? ನನ್ನ ಸ್ವಾಮಿಯ ಭೃತ್ಯಳಾದ ನನ್ನ ದೇಹದ ಮೇಲೆ ಈ ದುರುಳರಿಗೆ ಏನು ಸ್ವಾತಂತ್ರ್ಯವಿದೆ? ಪತಿಯಾದವನು ಒಬ್ಬನ ಆಧೀನನಾದರೂ ಅವನಮೇಲೆ ತನ್ನ ಸ್ವಾಮಿತ್ವ ನಡೆಸಬಹುದು. ಅವನ ಹೆಂಡತಿಯ ಮೇಲೆ ನಡೆಸಲು ಅಧಿಕಾರವಿಲ್ಲವೆಂದು ಈ ಅಧರ್ಮಿಗಳಿಗೆ ಯಾರೂ ತಿಳಿಸಲಿಲ್ಲವೆ?

ತಾಯೇ ಗಾಂಧಾರೀದೇವಿ ನೀನು ಸ್ತ್ರೀ ಧರ್ಮವನ್ನು ಅರಿತಿರುವ ಮಹಾಪತಿವ್ರತೆ ಅಲ್ಲವೆ? ಆದರೂ ನಿನ್ನ ಮಕ್ಕಳ ಈ ಬಾಲಚೇಷ್ಟೆಗಳು ಮುಂದೆ ಎದೆಶೂಲವಾಗುತ್ತದೆಂಬ ಭಯವಿಲ್ಲದೆ ಹೀಗೇಕೆ ಬಾಯಿಗೆ ಬೀಗಮುದ್ರೆ ಹಾಕಿಕೊಂಡಿರುವಿ? ಭಾನುಮತೀದೇವಿ ನೀನು ರಾಜಪತ್ನಿ. ನಿನಗೆ ಧರ್ಮಪ್ರಜ್ಞೆ ಇರಬೇಡವೆ? ತನ್ನ ಪತಿಮಾಡಿದ ಅಪರಾಧವನ್ನು ನೋಡಿಕೊಂಡಿದ್ದ ಸತಿಯರಿಗೆ ನರಕಪ್ರಾಪ್ತಿ ಆಗುತ್ತದೆಂಬ ವಿವೇಚನೆ ಇಲ್ಲದೆ ಹೀಗೆ ಪತಿಯ ಪಾಪ ಪಕ್ಷದಲ್ಲಿನಿಂತು ತಮಾಷೆ ನೋಡುತ್ತಿರುವುದು ನಾಳೆ ನಿನಗೆ ವಿಷಸಂಕಟವಾಗುವುದೆಂದು ಪರಿಜ್ಞಾನಬೇಡವೆ?'' ಎಂದು ಧರ್ಮವನ್ನು ಸಭೆಯಮುಂದೆ ನಿರ್ಣಯಮಾಡಿದಳು.

ಅಲ್ಲಿ ನೆರೆದಿದ್ದ ಭೀಷ್ಮಾದಿ ಜ್ಞಾನಜೀವಿಗಳೂ ಕಲಿಯ ಅನ್ನಸಂಪರ್ಕದಿಂದ ಅಧರ್ಮವನ್ನು ಖಂಡಿಸದವರಾಗಿ ನಿರ್ಬಲರಂತೆ ಕುಳಿತಿದ್ದು ಶ್ರೀಕೃಷ್ಣನ ಒಂದು ಸಂಕಲ್ಪವೂ ಕಾರಣವಾಗಿತ್ತು. ಕಲಿಯ ಆವೇಶವೂ ಕಾರಣವಾಗಿತ್ತು. ದ್ರೌಪದಿಯು ಸಕಲ ದೇವತೆಗಳನ್ನು ಕುರಿತು ಆರ್ತಳಾಗಿ ಪ್ರಾರ್ಥಿಸುತ್ತಿರುವಾಗ ಭೀಮಸೇನನು ದ್ರೌಪದಿಯ ಕೆದರಿದ ಕೇಶರಾಶಿ ಅಸ್ತವ್ಯಸ್ತವಾಗಿ ಧೂಳುಮುಚ್ಚಿದ ಉಡಿಗೆ ಎಲ್ಲವನ್ನು ನೋಡಿ ಆಕ್ರೋಶದಿಂದ ಧರ್ಮರಾಜನು ದ್ಯೂತವನ್ನಾಡಿ ದ್ರೌಪದಿಗೆ ಈ ದುರವಸ್ಥೆ ಉಂಟುಮಾಡಿದ್ದಾನೆ. ಆದ್ದರಿಂದ ಅವನ ಅಪರಾಧಕ್ಕೆ ಕಾರಣವಾದ ತೋಳುಗಳನ್ನು ಸುಟ್ಟುಹಾಕುತ್ತೇನೆ'' ಎಂದು ರೌದ್ರನಾಗಲು ಅರ್ಜುನನು ತಡೆಯುತ್ತ ಸಮಾಧಾನಪಡಿಸಲು ಪ್ರಯತ್ನಪಡುತ್ತಿದ್ದನು. ಆಗ ಭೀಮನು ಅರ್ಜುನನನ್ನು ಕುರಿತು ''ಹಿರಿಯರು ಅಪರಾಧ ಮಾಡಿದಾಗ ಕಿರಿಯರು ಅವರನ್ನು ಆ ದೋಷದಿಂದ ನಿವಾರಿಸುವುದು ಧರ್ಮ. ಭಗವದ್ಧರ್ಮಗಳನ್ನು ತಪ್ಪಿನಡೆದಾಗ ಅವರನ್ನು ಸಕಲ ಪ್ರಯತ್ನದಿಂದಲೂ ತಿದ್ದಿದವರೇ ನಿಜವಾದ ಹಿತೈಷಿಗಳು. ದೊಡ್ಡವರು ಅಪರಾಧಮಾಡಿದಾಗ ವಚನಶಿಕ್ಷೆ. ಸಮಾನವಯಸ್ಕರು

ಅಪರಾಧ ಮಾಡಿದಾಗ ವಿತ್ತಾಪಹಾರದ ಶಿಕ್ಷೆ. ಪಾಪಿಗಳು ಅಪರಾಧಮಾಡಿದಾಗ ಮಾರಣಶಿಕ್ಷೆ ವಿಧಿಸಬೇಕೆಂದು ಧರ್ಮ ಹೇಳುತ್ತದೆ. ಆದ್ದರಿಂದ ಧರ್ಮರಾಜನನ್ನು ದುರ್ವಚನದಿಂದ ದೂಶಿಸಿದೆನು'' ಎಂದು ಹೇಳಿದನು.

## ದುರಾತ್ಮರ ದೌರ್ಜನ್ಯ

ದ್ರೌಪದಿಯು ಒಂದೇಸಮನೆ ಭಗವಧ್ಯಾನ ತತ್ಪರಳಾಗಿ ತಲ್ಲಣಿಸುವ ದೃಶ್ಯವನ್ನು ನೋಡಿದ ಕರ್ಣನು ಅಪಹಾಸ್ಯದಿಂದ ನಗುತ್ತ ''ದ್ರೌಪದೀ! ಪಾಪ ನೀನು ಒಬ್ಬರಲ್ಲ ಇಬ್ಬರಲ್ಲ ಐದುಮಂದಿ ಪತಿಗಳನ್ನು ಪಡೆದಿದ್ದರೂ ನಿನ್ನ ವಿಪತ್ಕಾಲದಲ್ಲಿ ಒಬ್ಬರೂ ನಿನಗಿಲ್ಲದಂತಾದರು. ಇನ್ನುಮುಂದೆ ನೀನು ಅವರ ಹಂಬಲಬಿಟ್ಟು ದುರ್ಯೋಧನನ ಅಂತಃಪುರದಲ್ಲಿ ಅರಗಿಣಿಯಂತೆ ಸುಖವಾಗಿರು. ಮಹಾರಾಣಿಯಾಗಿ ಮೆರೆ'' ಎಂದನು. ದುರ್ಯೋಧನನು ದ್ರೌಪದಿಯನ್ನು ಕುರಿತು ''ನಿನ್ನ ಈ ದುಃಖಕ್ಕೆ ಧರ್ಮರಾಜನೇ ಕಾರಣನಾಗಿರುವುದರಿಂದ ನೀನು ಭೀಮಾರ್ಜುನರು ನಕುಲಸಹದೇವರು ಐದುಮಂದಿಯು ಧರ್ಮರಾಯನನ್ನು ತ್ಯಜಿಸಿರಿ. ಇನ್ನುಮುಂದೆ ನಮಗೆ ಧರ್ಮರಾಜ ಹಿರಿಯ ಅಣ್ಣನಲ್ಲ. ನಮಗೆ ಶತೃ ಎಂದು ಹೇಳಿದರೆ ಸಾಕು. ನಿನ್ನನ್ನು ಬಿಟ್ಟುಬಿಡುತ್ತೇವೆ'' ಎಂದು ಭೇದೋಪಾಯವನ್ನು ಪ್ರಯೋಗಿಸಿದನು. ಅಷ್ಟೇ ಅಲ್ಲದೆ ಮತ್ತೊಂದು ಮಹಾಪ್ರಯೋಗ ಮಾಡಿದನು. ''ದ್ರೌಪದೀ! ಭೀಮಾರ್ಜುನರು ಬಲಿಷ್ಠರೆಂಬ ಗರ್ವದಿಂದ ಧರ್ಮರಾಜನನ್ನು ಬಿಡದಿದ್ದರೂ ಚಿಂತೆಯಿಲ್ಲ. ನೀನು ನಕುಲಸಹದೇವರೊಂದಿಗೆ ಧರ್ಮರಾಯನನ್ನು ಭೀಮಾರ್ಜುನರನ್ನು ದ್ವೇಶದಿಂದ ತ್ಯಜಿಸು. ಆಗ ನಾವು ನಿನಗೆ ಯಾವ ಉಪದ್ರವವನ್ನು ಕೊಡದೆ ಬಿಟ್ಟುಬಿಡುತ್ತೇವೆ'' ಎಂದರು. ಆಗ ಸರ್ವಜ್ಞನಾದ ಭೀಮನು ಗದಾಸಮೇತ ಅವನಮುಂದೆ ಹಾರಿನಿಂತು ''ಎಲಾ ದುರುಳಾ! ನಮ್ಮ ನಮ್ಮಲ್ಲಿ ಭೇದಭಾವ ಹೂಡಿ ನಿನ್ನ ಕುಮಂತ್ರದಿಂದ ಬಂಧಿಸಬೇಕೆಂದಿರುವೆಯಾ? ಅದೆಂದಿಗೂ ನಿನಗೆ ಸಾಧ್ಯವಿಲ್ಲ. ನಾವು ಯಾರೂ ಧರ್ಮರಾಜ ಹಾಕಿದಗೆರೆ ದಾಟತಕ್ಕವರಲ್ಲ. ನೀನು ನಿನ್ನ ದುಷ್ಟಸಮೂಹದೊಡನೆ ಒಟ್ಟಾಗಿಬಂದು ನಮ್ಮನ್ನು ಇದಿರಿಸಿದರೂ ನಾನು ಒಂದೇಕ್ಷಣದಲ್ಲಿ ಅರೆದು ಅಪೋಶನ ತೆಗೆದುಕೊಂಡು ಬಿಡಬಲ್ಲೆ. ಆದರೆ ನನ್ನ ಅಣ್ಣನ ಆಜ್ಞೆಮೀರಬಾರದೆಂದು ಎಲ್ಲವನ್ನು ನೋಡುತ್ತಿದ್ದೇನೆ. ಎಂದು ಸಿಡಿಲಿನಂತೆ ಮಾತನಾಡುತ್ತ ಗದೆಯನ್ನು ಬೀಸುತ್ತಿರುವ ಅವನ ರೌದ್ರತೆಯನ್ನು ನೋಡಿ ಸಭೆ ನಡಗುತ್ತಿತ್ತು. ಆಗ ಧರ್ಮರಾಜನು ''ಈಗ ಆಕ್ರೋಶ ಪಡಬೇಡ ಶಾಂತನಾಗು'' ಎಂದು ಸಮಾಧಾನಮಾಡಿ ಕರೆದುಕೊಂಡು ಹೋದನು.

ಭೀಮನನ್ನು ಶಾಂತಪಡಿಸಿ ಧರ್ಮರಾಯ ಕರೆದುಕೊಂಡುಹೋದನಂತರ ರ್ಯೋಧನನು ''ದ್ರೌಪದೀ! ನಿನ್ನ ಪತಿಗಳು ಈಗ ನಮ್ಮ ದಾಸರಾಗಿರುವುದರಿಂದ ಅವರು

ನಾವು ಹೇಳಿದಂತೆ ಕೇಳಿಕೊಂಡು ಬಿದ್ದಿರಬೇಕು. ನೀನೂ ಈಗ ನಿನ್ನ ಪ್ರತಿಷ್ಠೆ ಧರ್ಮಪ್ರವಚನ ಯಾವುದನ್ನು ನಮ್ಮ ಮುಂದೆ ಹೇಳಿಕೊಳ್ಳುವಂತಿಲ್ಲ. ನಮಗೆ ತೊತ್ತಾಗಿರಬೇಕು ಬಾ. ನಾನು ಹೇಳಿದಂತೆ ನೀನು ಕೇಳಬೇಕು. ನನ್ನ ತೊಡೆಯ ಮೇಲೇರಿ ಕುಳಿತುಕೊ. ಸಭೆಯು ಈಗ ನೀನು ನನ್ನ ಸ್ವತ್ತೆಂದು ತಿಳಿಯಲಿ'' ಎಂದನು.

ಭೀಮಸೇನನು ದುರ್ಯೋಧನನು ಪರಮಪತಿವ್ರತೆಯಾದವಳನ್ನು ಭಂಡು ಮಾತುಗಳಿಂದ ನಿಂದಿಸುವುದನ್ನು ಕೇಳಿ ''ಎಲಾ ಪಾಪೀ! ನನ್ನ ಮುಂದೆ ನನ್ನ ಸತಿಯನ್ನು ತೊಡೆಹಾಸಿ ಕರೆದಿರುವಿ. ಆ ತೊಡೆಗಳನ್ನು ನಾನು ನನ್ನ ಗದೆಯಿಂದ ಮುರಿದು ಬಿಸಾಡುತ್ತೇನೆ'' ಎಂದು ಸಕಲ ದಿಕ್ಕಿನವರೂ ಕೇಳುವಂತೆ ಸಿಡಿಲುನುಡಿಗಳಿಂದ ನುಡಿದನು. ಆಗ ದುರ್ಯೋಧನನಿಂದ ಹೊರಟ ಪಾಪಕರವಾಕ್ಯಗಳು ಅವನನ್ನು ಅಂಧಂತಮಸ್ಸಿಗೆ ಸೆಳೆದೊಯ್ಯಲಿಕ್ಕಾಗಿಯೇ ಅವನಿಂದ ಹೊರಹೊಮ್ಮಿ ಬಂದವು.

''ಭೀಮಾ! ನನ್ನ ಚರಣದಾಸನಾಗಿ ನನ್ನ ಕಾಲುಕೆಳಗೆ ಬಿದ್ದಾಗಲೂ ನಿನಗೆ ಸೊಕ್ಕಡಗಲಿಲ್ಲವೇ?'' ನಿನಗೆ ಆ ಕೃಷ್ಣ ಇದ್ದಾನೆ. ನಮ್ಮನ್ನು ದಾಸತ್ವದಿಂದ ಬಿಡುಗಡೆ ಮಾಡುತ್ತಾನೆಂಬ ಧೈರ್ಯದಿಂದ ಹೀಗೆ ಉರಿದೇಳುತ್ತ ದರ್ಪತೋರಿಸುತ್ತಿರುವಿ. ಇನ್ನೊಂದುಬಾರಿ ಧರ್ಮರಾಜನನ್ನು ದ್ಯೂತಕ್ಕೆ ಸೆಳೆದುಕೊಂಡು ನಿನ್ನ ಆ ಕೃಷ್ಣನನ್ನು ಪಣಕ್ಕಿರಿಸಿ ನನ್ನ ವಶ ಮಾಡಿಕೊಂಡಾಗ ದರ್ಪ ಧೂಳೀಪಟ ಆಗುತ್ತದೆ'' ಎಂದು ಹೇಳಿದನು.

ಭೀಮನಿಗೆ ದುರ್ಯೋಧನನ ಆ ಮಾತು ಸಹಿಸಲಾಗಲಿಲ್ಲ. ''ಎಲಾ! ನೀಚ, ಕೃಷ್ಣನೆಂದರೆ ನಿನಗೆ ಅಷ್ಟು ಸುಲಭನೆಂದು ತಿಳಿದಿರುವೆಯಾ? ಅನಂತಜನ್ಮಗಳಿಂದ ತಪಃಸ್ಸಾಧನೆ ಮಾಡಿದವರಿಗೇ ಸಿಗದ ಕೃಷ್ಣ ನಿನ್ನ ಜೂಜಿನ ಪಣಕ್ಕೆ ಸಿಕ್ಕುತ್ತಾನೆಂದು ತಿಳಿದೆಯಾ? ಇಂಥ ಮಹಾಪಾಪವಾಕ್ಯವನ್ನು ಆಡಿದ ನಿನ್ನ ಮುಖದರ್ಶನವೂ ಮಹಾಪಾಪಕರ. ನನ್ನ ಸ್ವಾಮಿಯನ್ನು ದಾಸನನ್ನಾಗಿ ಮಾಡಿಕೊಳ್ಳುತ್ತೇನೆಂದು ವಿಷಸದೃಶವಾದ ನುಡಿ ಹೊರಟುಬಂದ ನಿನ್ನ ರುಂಡವನ್ನು ರಣರಂಗದಲ್ಲಿ ನನ್ನ ಎಡಗಾಲಿನಲ್ಲಿ ಅರೆದು ಪುಡಿಪುಡಿ ಮಾಡುತ್ತೇನೆ'' ಎಂದು ಶಪಥಮಾಡಿದನು. ಕರ್ಣನು ''ದ್ರೌಪದೀ ನಿನ್ನ ಪತಿ, ಪರಾಕ್ರಮಿ ಎಂದು ಭಾವಿಸಿ ಹೀಗೆ ಜಂಭದ ಮಾತುಗಳನ್ನಾಡಿ ಕೆಡಬೇಡ. ಅವರ ಆಟ ಎಲ್ಲವೂ ಮುಗಿಯಿತು. ನಡೀ, ವಿಲಾಸಿನಿಯರ ಗುಂಪಿಗೆ'' ಎಂದನು.

ಭೀಮನು ಆಗಲೇ ಕರ್ಣನನ್ನು ಕುಟ್ಟಿ ಹಾಕುತ್ತಿದ್ದನು. ಭೀಷ್ಮಾದಿಗಳು ತಡೆದು ನಿಲ್ಲಿಸಿದರು. ದುರ್ಯೋಧನನು ಅಟ್ಟಹಾಸದಿಂದ ''ದುಶ್ಯಾಸನಾ ಈ ಹೆಣ್ಣು ಆ ದಿನ ಸಿರಿವಂತಿಕೆಯ ಶಿಖರಕ್ಕೇರಿ ನನ್ನನ್ನು ತನ್ನ ನಗುವಿನ ಶೂಲದಿಂದ ಇರಿದು ಘಾಯಗೊಳಿಸಿದ ನನ್ನ ಹುಣ್ಣಿನಸೇಡು ಇನ್ನು ತೀರಲಿಲ್ಲ. ಇವಳು ಆಗ ನಕ್ಕು ನನಗೆ ಅವಮಾನಪಡಿಸಿದ. ನೂರ್ಮಡಿ ಅಧಿಕವಾದ ಇವಳ ಅಳು ಈಗ ನಾನು ನೋಡಬೇಕು. ಇವಳ ವಸ್ತ್ರವನ್ನು

ಸೆಳೆದು ನಿರ್ವಾಣಳಾಗುವಂತೆ ಮಾನಭಂಗ ಮಾಡು'' ಎಂದನು.

ಪಾಂಡವರನ್ನು ಕುರಿತು ''ನಿಮಗೆ ಈಗ ರಾಜಉಡುಪು ಯೋಗ್ಯವಲ್ಲ. ಊಳಿಗದವರ ಉಡುಪನ್ನು ಧರಿಸಿ ಊಳಿಗದವರ ಸಂಗಡ ಸೇರಿರಿ'' ಎಂದನು.

ಪಾಂಡವರು ನಾವು ಶ್ರೀಕೃಷ್ಣನೊಬ್ಬನಿಗೆ ದಾಸರು ಬೇರಾರಿಗೂ ದಾಸನಾಗುವುದು ಸುಳ್ಳು ಎಂದು ಹೇಳುತ್ತ ದುರ್ಯೋಧನನ ಹೀನಕಾರ್ಯ ಕ್ಷಣಕ್ಷಣಕ್ಕೂ ಹಿಗ್ಗುವುದನ್ನು ನೋಡಿ ಅವನ ವಿನಾಶಕ್ಕಾಗಿ ಶ್ರೀಹರಿಯ ಸಂಕಲ್ಪವನ್ನು ಕಾಯುತ್ತಿದ್ದರು.

ದುಶ್ಶಾಸನನು ಬಂದವನೇ ದ್ರೌಪದಿಯ ಸೆರಗಿಗೆ ಕೈಹಾಕಿದಾಗ ದ್ರೌಪದಿ ನಿರಭಿಮಾನದಿಂದ ತಾನು ಅಸ್ವತಂತ್ರಳು. ಸ್ವಾಮಿ ರಕ್ಷಕನಾಗಿರುವಾಗ ನಾನೇಕೆ ಭಯಪಡಬೇಕೆಂದು ಶ್ರೀಕೃಷ್ಣಾ! ದ್ವಾರಕಾವಾಸಾ! ಎಂದು ಕೂಗಿ ಮೈಮರೆತು ಪ್ರಾರ್ಥಿಸಿದಳು. ಆದ್ದರಿಂದಲೇ ಪಾಪಿಗಳ ಪಾಪದ ಬಿಂದಿಗೆ ತುಂಬಲು ಅವಕಾಶ ಕೊಟ್ಟಂತಾಯಿತು. ಕ್ಷಣಹೊತ್ತು ತಡೆದು ಶ್ರೀಕೃಷ್ಣ ಅಕ್ಷಯವಸ್ತ್ರ ಅನುಗ್ರಹಮಾಡಿದನು. ದ್ರೌಪದಿ ತನ್ನ ಮನೋಮಂಟಪದಲ್ಲಿದ್ದ ಶ್ರೀಕೃಷ್ಣನನ್ನೇ ಕರೆದಿದ್ದರೆ ಈ ಅನರ್ಥಗಳು ಪಾಪಿಗಳಿಂದ ಸಂಭವಿಸಲು ಆಗುತ್ತಿರಲಿಲ್ಲ. ಏಕೆಂದರೆ ಶ್ರೀಕೃಷ್ಣ ತಕ್ಷಣವೇ ಬಂದಿದ್ದರೆ ಪಾಪಿಗಳ ನಾಲಿಗೆ ಆಗಲೇ ಸೇದುಹೋಗುತ್ತಿದ್ದವು. ಆದ್ದರಿಂದ ದ್ರೌಪದಿಯಿಂದ ದ್ವಾರಕಾವಾಸಾ! ಎಂದು ನುಡಿಸಿದನು.

ಅಕ್ಷಯ ಸಂಪತ್ತಿನವಳಾದ ದ್ರೌಪದಿ ಶ್ರೀಕೃಷ್ಣನ ಪರಮಾನುಗ್ರಹದಿಂದ ಅಕ್ಷಯ ವಸ್ತ್ರವನ್ನು ಪಡೆದಳು. ಸುವರ್ಣಮಯವಾದ ಅಸಂಖ್ಯವಸ್ತ್ರಗಳು ದ್ರೌಪದೀದೇವಿಯ ದಿವ್ಯಾಂಗವನ್ನು ಸ್ಪರ್ಶಿಸಲು ತವಕದಿಂದ ಉತ್ಪತ್ತಿ ಆಗುತ್ತಿದ್ದವು. ಆ ವಸ್ತ್ರಗಳು ಶ್ರೀಕೃಷ್ಣನ ಕರುಣದ ಕಿರಣಗಳೆಂಬ ಎಳೆಗಳಿಂದ ಉತ್ಪತ್ತಿ ಆಗಿ ಬಂದವಸ್ತ್ರಗಳು.

ದುಶ್ಶಾಸನ ಎಳೆದೆಳೆದು ಬಳಲಿಹೋದ ಪ್ರಜ್ಞೆತಪ್ಪಿ ಬೀಳುವಂತಾದನು. ಸೀರೆಗಳರಾಶಿ ಶಿಖರದಂತೆ ರಾಶಿಬಿದ್ದಿತು. ದ್ರೌಪದಿ ಸ್ವಲ್ಪವೂ ಅಲ್ಲಾಡದೆ ಬಂಗಾರನಿರ್ಮಿತ ಪ್ರತಿಮೆಯಂತೆ ತನ್ನ ತೇಜಸ್ಸಿನಿಂದ ಪಾಪಿಗಳನ್ನು ಸುಟ್ಟುಬಿಡುತ್ತಾಳೋ ಎನ್ನುವಂತೆ ನಿಂತಿದ್ದಳು. ಅವಳ ರೋಮರೋಮಗಳೆಲ್ಲಾ ಶ್ರೀಕೃಷ್ಣಧ್ಯಾನ ತುಂಬಿ ಹರಿಯುತ್ತಿತ್ತು.

ದ್ರೌಪದಿಯು ತೇಜೋರಾಶಿಯಂತೆ ಬಂಗಾರದೆಳೆಯಸೀರೆಗಳ ರಾಶಿಗಳ ಮಧ್ಯೆ ತನ್ನ ಪ್ರತಿಭೆಯಿಂದ ಎಲ್ಲರನ್ನು ಸೋಲಿಸಿದವಳಾಗಿ ನಿಂತಿರುವುದನ್ನು ನೋಡಿದಾಗ ದುರ್ಯೋಧನನಿಗೆ ನೋಡಿ ಸಹಿಸಲಾಗಲಿಲ್ಲ. ನನ್ನನ್ನು ಅಪಹಾಸ್ಯದಿಂದ ನುಕ್ಕು ದೇವಾನುದೇವತೆಗಳೆಲ್ಲರ ಎದುರಿನಲ್ಲಿ ಅವಮಾನಪಡಿಸಿದ ಈ ಹೆಣ್ಣನ್ನು ನಾನು ಸೋಲಿಸಲಾಗಲಿಲ್ಲ ಎಂಬ ಆಕ್ರೋಶದಿಂದ ''ಇವಳು ನನ್ನ ದಾಸಿ ಆದ್ದರಿಂದ ಎಳೆದುಕೊಂಡುಹೋಗಿ ದಾಸೀಜನರ ಸಮೂಹದಲ್ಲಿ

ತಳ್ಳಿರಿ'' ಎಂದನು.

ಆಗ ಅವನ ಅಪ್ಪಣೆಯಂತೆ ರಾಜದೂತರು ಆಕೆಯಬಳಿ ಬಂದರು. ಆದರೆ ದ್ರೌಪದಿಯನ್ನು ಸ್ಪರ್ಶಮಾಡಲು ಯಾರಿಗೂ ಸಾಧ್ಯವಾಗಲಿಲ್ಲ. ದ್ರೌಪದಿ ''ಎಲೋ ಪಾಪೀ! ನೀನು ಮೃತ್ಯುವನ್ನು ಸ್ವಾಗತಿಸಲಿಕ್ಕಾಗಿಯೇ ಇಷ್ಟು ಅನ್ಯಾಯಮಾಡುತ್ತಿರುವಿ. ನಿನ್ನಿಂದ ಈಗ ಇಷ್ಟುಜನರೂ ಭೀಮಸೇನನ ಗದೆಗೆ ಬಲಿಯಾಗುತ್ತಾರೆ. ನೀನು ಆಗಲೇ ಭೀಮನ ಗದೆಗೆ ತೊಡೆಯನ್ನು ಬಲಿಕೊಟ್ಟು ಆಗಿದೆ. ಕರ್ಣನ ಪ್ರಾಣ ಅರ್ಜುನನ ಅಸ್ತ್ರಕ್ಕೆ ಮೀಸಲಾಗಿದೆ. ಶಕುನಿ ಸಹದೇವನಿಗೆ ಬಲಿಪಶು ಆಗುತ್ತಾನೆ. ಉಲೀಕನು ನಕುಲನ ಕೈಯ್ಯಿಂದ ದೇಹತ್ಯಾಗಮಾಡುತ್ತಾನೆ. ಇವೆಲ್ಲವೂ ರಣರಂಗದಲ್ಲಿ ನಡೆಯಬೇಕಾದ ಮಾರಣಹೋಮ. ನಿಮ್ಮ ಈ ಅಕೃತ್ಯವನ್ನು ನೋಡಿದರೆ ಇಲ್ಲೇ ಈ ಕ್ಷಣದಲ್ಲೇ ನಡೆದುಹೋದೀತು'' ಎಂದು ವೀರವಾಣಿಗಳಿಂದ ನುಡಿಕಿಡಿಗಳನ್ನು ಸುರಿಸುತ್ತಿದ್ದಳು. ಆಗ ಭೀಮನು ಉಕ್ಕಿನ ಒಂದು ಕಂಭವನ್ನು ಎಳೆದು ತೆಗೆದುಕೊಂಡು ಪತಿವ್ರತೆಯಾದ ಸತಿಯನ್ನು ದುಷ್ಟರು ಪೀಡಿಸುವಾಗ ಅವಳ ರಕ್ಷಣೆಯ ಭಾರವಹಿಸಿದ ಪತಿಯು ನೋಡಿಕೊಂಡಿದ್ದರೆ ಅದು ಮಹಾನರಕಕ್ಕೆ ಕಾರಣವಾಗುತ್ತದೆ. ನನ್ನನ್ನು ಯಾರೂ ತಡೆಯಬೇಡಿರಿ. ಇವರೆಲ್ಲರನ್ನು ಇಲ್ಲೇ ಈಗಲೇ ಕುಟ್ಟಿಹಾಕುತ್ತೇನೆ'' ಎಂದು ರಣಚಂಡಿಯಂತೆ ಹಾರಿಬಂದಾಗ ಎಲ್ಲರೂ ಭಯಪಟ್ಟು ಓಡತೊಡಗಿದರು. ಆಗ ನಗರದಲ್ಲಿ ಅಪಶಕುನಗಳ ಸುರಿಮಳೆಗೆ ಪ್ರಾರಂಭವಾಯಿತು. ನರಿಗಳ ಕೂಗಾಟ ಎದ್ದಿತು. ಅಗ್ನಿಕುಂಡಗಳಲ್ಲಿ ರಕ್ತಮಾಂಸಗಳು ಸುರಿದುಬೀಳುತ್ತಿದ್ದವು. ಕೆಂಡದ ಮಳೆ ಕರೆಯಿತು. ಭೂಕಂಪವಾಯಿತು. ದೇವಸ್ಥಾನದ ಪ್ರತಿಮೆಗಳು ಉರುಳುರುಳಿಬಿದ್ದವು. ಆಯುಧಗಳು ಛಟಾರನೆ ಸಿಡಿದು ಮುರಿದು ಬೀಳುತ್ತಿದ್ದವು. ಆಗ ಎಲ್ಲೆಲ್ಲೂ ಹಾಹಾಕಾರವೆದ್ದಿತು. ಧೃತರಾಷ್ಟ್ರನು ಭಯದಿಂದ ''ವಿದುರಾ! ಅಪಶಕುನಗಳು ಭಯಂಕರವಾಗಿ ಕಾಣುತ್ತಲಿವೆ. ಏನು ಕಾರಣ?'' ಎಂದು ಕಾತುರನಾಗಿ ಕೇಳಿದನು. ವಿದುರನು ''ಧೃತರಾಷ್ಟ್ರಾ! ನೀನು ಎಷ್ಟು ತತ್ತ್ವಜ್ಞಾನವನ್ನು ಹೊಂದಿದ್ದರೂ ಅಜ್ಞಾನಿಗಳಂತೆ ವಿಧಿಯಸಂಗಡ ಚೆಲ್ಲಾಟವಾಡುತ್ತಿರುವಿ. ಈಗ ಒಂದುಕ್ಷಣದಮುಂಚೆ ನನ್ನ ಮಗ ಏನು ಗೆದ್ದ? ಈಗೇನು ಗೆದ್ದ? ಎಂದು ಉತ್ಸಾಹದಿಂದ ಉಬ್ಬುಬ್ಬಿ ಕೇಳುತ್ತಿದ್ದಿ. ಈಗ ನನ್ನ ಮಗನಿಗೆ ಏನುವಿಪತ್ತು ಸಂಭವಿಸುತ್ತದೋ ಎಂದು ಅಳುತ್ತಿರುವಿ. ಯಾವುದೂ ಸ್ಥಿರವಲ್ಲ. ನಿನ್ನ ಮಕ್ಕಳು ಪಾಂಡವರ ಧರ್ಮತೇಜಸ್ಸಿಗೆ ಉರಿದು ಭಸ್ಮವಾಗುತ್ತಿದ್ದಾರೆ. ದ್ರೌಪದಿಗೆ ಶರಣಾಗತರಾದರೆ ಅವರ ಎಲ್ಲಾ ಅಪರಾಧಗಳನ್ನು ಕ್ಷಮಿಸಿ ರಕ್ಷಿಸುತ್ತಾರೆ. ಇಲ್ಲದಿದ್ದರೆ ವಂಶವೇ ನಾಶವಾಗುತ್ತದೆ. ಇದು ಸತ್ಯ'' ಎಂದು ಹೇಳಿದನು.

ಧೃತರಾಷ್ಟ್ರನಿಗೆ ವಿದುರನಮಾತು ಸತ್ಯವೆನಿಸಿತು. ಪಾಂಡವರನ್ನು ದ್ವೇಶ ಮಾಡಿದರೆ ನನ್ನ ಮಕ್ಕಳೊಬ್ಬರೂ ಉಳಿಯುವುದಿಲ್ಲವೆಂದುಕೊಂಡು ದುರ್ಯೋಧನಾದಿಗಳನ್ನು ಕರೆಸಿಕೊಂಡು

ನೀವು ನಡೆಸುತ್ತಿರುವ ಅಕೃತ್ಯ ಅಶುಭಸೂಚನೆ ಕಂಡಮೇಲಾದರೂ ನಿಮಗೆ ಭಯಬೇಡವೇ? ಧರ್ಮರಾಯನ ಧರ್ಮತೇಜಸ್ಸು ನಿಮ್ಮನ್ನು ಸುಟ್ಟುಭಸ್ಮಮಾಡುತ್ತದೆ. ಭೀಮನ ಗದೆ ನಿಮ್ಮೆಲ್ಲರನ್ನು ಧೂಳುಮಾಡಿ ಹಾರಿಸುತ್ತದೆ. ನೀವು ಈಗಲಾದರೂ ಅವರಲ್ಲಿ ಕ್ಷಮಾಯಾಚನೆಮಾಡಿ ಸ್ನೇಹದಿಂದಿರಿ. ದ್ರೌಪದಿಯನ್ನು ನೀವು ಎಳೆದಾಡುವುದು ಘಟಸರ್ಪದ ಹೆಡೆಯೊಳಗಿರುವ ರತ್ನವನ್ನು ಸೆಳೆದುಕೊಳ್ಳುವ ಪ್ರಯತ್ನದಂತೆ ಮೂರ್ಖತನದ ಕಾರ್ಯ ಮಾಡಬೇಡಿರಿ'' ಎಂದು ಹೇಳಿ ದ್ರೌಪದಿಯನ್ನು ಕರೆಸಿಕೊಂಡು ''ದ್ರೌಪದೀ! ನನ್ನ ಮಕ್ಕಳು ಮೂರ್ಖರು. ಅವರು ಮಾಡಿದ ತಪ್ಪನ್ನು ಕ್ಷಮಿಸು ತಾಯೇ. ನಾನು ನಿನಗೆ ಮಾವನೆಂಬ ಅಭಿಮಾನದಿಂದ ನಡೆದುಹೋದ ಅಪರಾಧಗಳನ್ನು ಮರೆತು ನನ್ನ ಮಕ್ಕಳನ್ನು ರಕ್ಷಿಸು. ನಿನಗೆ ಏನುಬೇಕೋ ಅದನ್ನು ಕೇಳು. ನಡೆಸಿಕೊಡಲು ಸಿದ್ಧನಿದ್ದೇನೆ'' ಎಂದನು. ದ್ರೌಪದಿಗೆ ಧೃತರಾಷ್ಟ್ರನಿಂದ ಪಡೆಯಬೇಕಾದದ್ದೇನೂ ಇರಲಿಲ್ಲ. ಆ ಪುಣ್ಯಾತ್ಮಳಿಗೆ ಶ್ರೀಕೃಷ್ಣನೇ ವರದಹಸ್ತದಿಂದ ಕೇಳಿದ್ದನ್ನು ನೀಡಲು ಸದಾಸಿದ್ಧನಿರುವಾಗ ಧೃತರಾಷ್ಟ್ರನ ಕರುಣೆ ಬೇಕಿರದಿದ್ದರೂ ಕ್ಷತ್ರಿಯವೀರರಮಣಿಯಾದ್ದರಿಂದ ಶರಣಾಗತರಕ್ಷಣೆಯ ಧರ್ಮದಂತೆ ಧೃತರಾಷ್ಟ್ರನ ಮಾತಿಗೆ ಮನ್ನಣೆಕೊಟ್ಟು ಧರ್ಮರಾಜನು ಮೋಸಗಾರರ ಕೈವಶವಾಗಿರುವುದನ್ನು ನಿಜವೆಂದು ತೋರಿಸಿ ಅವನು ಸೇವಕನಲ್ಲ ರಾಜನೇ ಆಗಿದ್ದಾನೆಂದು ಹೇಳಿಬಿಡಿಸು. ಅವನ ಸಹೋದರರೆಲ್ಲರೂ ಪರರವಶರಲ್ಲ ಧರ್ಮರಾಜನ ಸಹೋದರರೆಂದು ಹೇಳಿ ಸತ್ಯಸಂಧರಾದ ಎಲ್ಲರೂ ಧರ್ಮರಾಜನ ಸಾಮ್ರಾಜ್ಯದಲ್ಲಿ ಧರ್ಮಕಾರ್ಯ ದುರಂಧರರಾಗಿರುವಂತೆ ಆಗಲಿ'' ಎಂದಳು.

ಧೃತರಾಷ್ಟ್ರನು ಪಾಂಡವರನ್ನು ಸಮಾಧಾನಗೊಳಿಸಿ ಮಕ್ಕಳ ಮಹಾಪರಾಧವನ್ನು ನೀವೆಲ್ಲರೂ ಕ್ಷಮಿಸಿರಿ'' ಎಂದು ವಿನಯದಿಂದ ಕಳುಹಿಸಿದನು. ಪಾಂಡವರು ಬಂದಂತೆಯೇ ಹೋಗುವಾಗಲೂ ರಾಜವೈಭವದಿಂದಲೇ ಇಂದ್ರಪ್ರಸ್ಥದ ಕಡೆಗೆ ದ್ರೌಪದಿಯೊಡನೆ ಹೊರಟಾಗ ದುರ್ಯೋಧನನು ಆದರೂ ಗರ್ವವನ್ನು ಬಿಡದೆ ''ಹೇಡಿಗಳು ಹೆಂಡತಿಯಿಂದ ಬಿಡುಗಡೆಹೊಂದಿ ಹೋಗುತ್ತಿದ್ದಾರೆ'' ಎಂದು ಹೇಳುತ್ತಿದ್ದನು.

ಭೀಮಸೇನನು ಶ್ರೀಕೃಷ್ಣನೊಬ್ಬನನ್ನು ಬಿಟ್ಟು ಬೇರೆ ಯಾರಬಳಿಯಲ್ಲೂ ಏನೂ ಬೇಡತಕ್ಕವನಲ್ಲ. ಇದೇ ಅವನ ದೀಕ್ಷೆ. ಅವನ ಗದಾಪ್ರಹಾರಕ್ಕೆ ಅವನ ವಜ್ರಮುಷ್ಟಿಯ ಪೆಟ್ಟಿಗಂಜಿ ಎಲ್ಲರೂ ಭಯದಿಂದ ದೂರಸರಿದಿದ್ದರೂ ಹುಸಿದರ್ಪದಿಂದ ಕುಣಿಯುತ್ತಿದ್ದರು.

ಪಾಂಡವರು ಹೊರಟನಂತರ ಅವರನ್ನು ಏನಾದರೂ ಉಪಾಯದಿಂದ ರಾಜ್ಯಕಿತ್ತುಕೊಂಡು ಕಾಡುಪಾಲು ಮಾಡಬೇಕೆಂಬ ದುರಾಲೋಚನೆಯಿಂದ ಮತ್ತೆ ಎಲ್ಲರೂ ಧೃತರಾಷ್ಟ್ರನಬಳಿಯಲ್ಲಿ ಒಳಸಂಚಿಗೆ ಬಂದರು.

ನಾವು ಆ ಪಾಂಡವರ ಸೊಕ್ಕುಮುರಿದು ಸೇಡುತೀರಿಸಿಕೊಳ್ಳಬೇಕೆಂದು ಮಾಡಿದ ಪ್ರಯತ್ನವೆಲ್ಲವನ್ನು ನೀನು ಬೇರೆಯವರ ಮಾತಿಗಂಜಿ ಕೆಡಿಸಿಬಿಟ್ಟೆ. ಈಗ ನಮಗೆ

ಮೊದಲಿಗಿಂತಲೂ ಅಧಿಕವಾದ ಅಪಾಯಕ್ಕೆ ಕಾರಣವಾಯಿತು. ಈಗ ಭೀಮನು ಕೆರಳಿದ ಸಿಂಹದಂತಾಗಿದ್ದಾನೆ. ಬೋನಿನಿಂದ ತಪ್ಪಿಸಿಕೊಂಡು ಹೋದ ಸಿಂಹದಂತೆ ಯಾವಾಗನುಗ್ಗಿ ಎಲ್ಲರನ್ನು ಮುಗಿಸಿಬಿಡುತ್ತಾನೋ ತಿಳಿಯದು. ಅವರು ಮತ್ತೊಮ್ಮೆ ದ್ಯೂತವನ್ನಾಡಬೇಕು. ಸೋತವರು ಹನ್ನೆರಡುವರ್ಷ ವನವಾಸ ಒಂದುವರ್ಷ ಅಜ್ಞಾತವಾಸಮಾಡಬೇಕು. ಅಜ್ಞಾತವಾಸದಲ್ಲಿ ಅವರನ್ನು ಗೊತ್ತುಹಚ್ಚಿದರೆ ಮತ್ತೆ ಹನ್ನೆರಡುವರ್ಷ ವನವಾಸ ಮಾಡಬೇಕು'' ಎಂಬ ಪಣವನ್ನು ಹಚ್ಚಿದರೆ ನಮಗೆ ಭೀಮನಭಯ ತಪ್ಪುತ್ತದೆ. ಕಾಡುವಾಸವೇ ಅವರಿಗೆ ಗತಿ ಆಗಿ ನಾವು ಅಖಂಡರಾಜ್ಯಕ್ಕೆ ಅಧಿಪತಿಗಳಾಗಿ ನಿರಾತಂಕದಿಂದಿರುತ್ತೇವೆ. ನಾವು ಉಳಿಯಬೇಕಾದರೆ ಈಗ ನೀನು ಅವರನ್ನು ಕರೆಸಿಕೊಂಡು ದ್ಯೂತಕ್ಕೆ ಒಪ್ಪಿಸು'' ಎಂದು ಪೀಡಿಸಿದರು.

ಧೃತರಾಷ್ಟ್ರನೂ ಇನ್ನು ಭೀಮನು ಕೆರಳಿನಿಂತಿದ್ದಾನೆ. ಮಕ್ಕಳಿಗೆ ಮರಣವೇ ಸತ್ಯ ಎಂದು ಚಿಂತಿಸುತ್ತಿದ್ದನು. ಆಗ ಅವನಲ್ಲಿ ಕಲಿಯೂ ಬಲವಾಗಿ ಪ್ರೇರಣೆ ಮಾಡಿದಂತೆ ಒಪ್ಪಿದನು.

ಪಾಂಡವರ ಬಳಿಗೆ ದೂತನನ್ನು ಕಳುಹಿಸಿದನು. ''ಧರ್ಮರಾಜಾ! ನಿಮ್ಮನ್ನು ಆಟಕ್ಕೆಂದು ಕರೆಸಿಕೊಂಡು ಸಂತೋಷದಿಂದಿರದೆ ಮನಸ್ತಾಪದಿಂದ ಕಳಿಸಿದ್ದಾಯಿತು. ಮತ್ತೊಮ್ಮೆ ನೀವೆಲ್ಲರೂ ಒಂದಾಗಿ ಎಲ್ಲರೂ ಒಟ್ಟಾಗಿ ಆಡಿ ನಲಿದುನಕ್ಕು ಹೋದರೆ ನನಗೆ ಸಮಾಧಾನವಾಗುತ್ತದೆ. ಆದ್ದರಿಂದ ನೀವು ಬಂದು ನನ್ನ ಬೇಗೆಯನ್ನು ನಿವಾರಿಸಿರಿ'' ಎಂದು ಹೇಳಿಕಳುಹಿಸಿದ್ದನ್ನು ತಿಳಿದ ಭೀಮಾದಿಗಳು ಧರ್ಮರಾಜನನ್ನು ಅಡ್ಡಿಪಡಿಸಿದರೂ ಕೇಳದೆ ದೊಡ್ಡವರ ಮಾತು ಮೀರಬಾರದೆಂದು ಹೊರಟನು.

ಹಸ್ತಿನಾವತಿಗೆ ಬಂದನಂತರ ಮತ್ತೆ ಎಲ್ಲರೂ ಸವಿಮಾತಿನಲ್ಲಿ ಧರ್ಮರಾಜನನ್ನು ಸೆಳೆದುಕೊಂಡು ದ್ಯೂತಕ್ಕೆ ಕರೆದರು. ಧರ್ಮರಾಜನೇನು ಅಷ್ಟು ಮೂರ್ಖನಲ್ಲ. ಚಪಲಚಿತ್ತನಲ್ಲ. ವೈರಾಗ್ಯದ ಮೂರ್ತಿ. ಅದು ಹರಿಸಂಕಲ್ಪ ಎಂದು ಅವನಿಗೆ ತಿಳಿದಿತ್ತು. ಆದ್ದರಿಂದ ಯಾರು ಎಷ್ಟು ಬೇಡವೆಂದರೂ ಕೇಳದೆ ಆಟಕ್ಕೆ ಒಪ್ಪಿದ. ಇವರಿಗೆ ಬೇಕಾಗಿರುವುದು ನಮ್ಮ ಅಂತಸ್ತು, ಐಶ್ವರ್ಯ ಅಲ್ಲವೇ? ಅದಕ್ಕಾಗಿ ಏಕೆ ಚಿಂತಿಸಬೇಕು? ನಮ್ಮ ಸರ್ವಸ್ವವನ್ನು ಕಿತ್ತುಕೊಂಡರೂ ನಮ್ಮ ಧರ್ಮವನ್ನು ಮಾತ್ರ ಯಾರೂ ಕಿತ್ತುಕೊಳ್ಳಲು ಸಾಧ್ಯವಿಲ್ಲ. ನಮಗೆ ಧರ್ಮದ ಆಶ್ರಯ ಒಂದಿದ್ದರೆ ಬೇರೆ ಯಾವ ಸಂಪತ್ತು ನಮ್ಮನ್ನು ಏನು ತಾನೇ ಮಾಡಿಯಾವು? ಎಂಬುದೊಂದೇ ಧರ್ಮರಾಯನ ಧ್ಯೇಯ.

ದುರ್ಯೋಧನಾದಿಗಳು ಅತ್ಯಂತ ಸಂಭ್ರಮಗೊಂಡು ಧರ್ಮರಾಜನನ್ನು ಆಟಕ್ಕೆ ಸ್ವಾಗತಿಸಿ ''ಧರ್ಮರಾಜಾ! ಈಸಲದ ಪಣ ಏನೆಂದರೆ ಸೋತವರು ಹನ್ನೆರಡು ವರ್ಷ ವನವಾಸ ಒಂದು ವರ್ಷ ಅಜ್ಞಾತವಾಸ ಮಾಡಬೇಕು. ಅಜ್ಞಾತವಾಸದಲ್ಲಿರುವಾಗ ಗೆದ್ದವರಿಗೆ ಅವರು

ಗೋಚರವಾದರೆ ಮತ್ತೆ ಹನ್ನೆರಡು ವರ್ಷ ವನವಾಸಮಾಡಬೇಕು'' ಎಂದು ಪಣವನ್ನು ಕಟ್ಟಿ ಆಟ ಪ್ರಾರಂಭಮಾಡಿದರು.

ಶಕುನಿಯ ಪಾಶವಿದ್ಯಾಪ್ರಭಾವದಿಂದ ಈಗಲೂ ಧರ್ಮರಾಜನಿಗೆ ಸೋಲೇ ಸಂಭವಿಸಿತು. ಪ್ರತಿಜ್ಞೆಯಂತೆ ಪಾಂಡವರು ಸಕಲಸಂಪತ್ತನ್ನು ತ್ಯಜಿಸಿ ಕಾಡಿನಕಡೆಗೆ ಹೊರಟರು. ಈಗ ಕೌರವರಿಗೆಲ್ಲರಿಗೂ ಆನಂದವೋ ಆನಂದ. ರಾಜ್ಯ ಸಂಪೂರ್ಣವಾಗಿ ತಮ್ಮದಾಯಿತು. ಮುಖ್ಯವಾಗಿ ಭೀಮನ ಬಾಧೆ ತಪ್ಪಿತು ಎಂದುಕೊಂಡು ಪಾಂಡವರನ್ನು ಹೀನವಚನಗಳಿಂದ ತೃಣೀಕರಿಸಿ ಮಾತನಾಡುತ್ತ ಜೊಳ್ಳು ಹಾರಿತು. ಗಟ್ಟಿ ಉಳಿಯಿತು ಎಂದು ಅಪಹಾಸ್ಯ ಮಾಡಿದಾಗ ವಾಯುಪುತ್ರನು ಎಲ್ಲರನ್ನು ಕೆಕ್ಕರಿಸಿ ನೋಡುತ್ತ ''ಎಲಾ ಪಾಪಿಗಳಾ! ನಿಮ್ಮ ಕುತಂತ್ರಕ್ಕೆ ವಜ್ರಾಂಗನು ಹಾರಿದ್ದಾನೆಂದು ಹೇಳುತ್ತಿದ್ದೀರಲ್ಲವೇ? ನಿಮ್ಮೆಲ್ಲರನ್ನು ನನ್ನ ಎಡಗಾಲಿನ ಪಾದದ ಕೆಳಗೆ ಕ್ರಿಮಿಗಳನ್ನು ಹೊಸಗಿದಂತೆ ಹೊಸಗಿ ಹಾರಿಸುತ್ತೇನೆ. ಆಗ ಯಾರು ಜೊಳ್ಳು? ಯಾರು ಗಟ್ಟಿ? ಎಂಬುದನ್ನು ದೇವತೆಗಳೇ ತೀರ್ಮಾನಿಸುತ್ತಾರೆ'' ಎಂದು ಸಿಡಿಲುಬಡಿದಂತೆ ಮಾತನಾಡಿದನು. ಭೀಮನ ಪ್ರತಿಜ್ಞೆಗಳನ್ನು ಕೇಳಿದ ಕೌರವ ಕುನ್ನಿಗಳು ಒಳಗೊಳಗೇ ಭಯದಿಂದ ಬೆಂದುಹೋಗುತ್ತಿದ್ದರು.

ಭೀಮನು ಕಾಡಿನಕಡೆಗೆ ಹೊರಟಾಗ ಒಮ್ಮೆ ತನ್ನ ಅದ್ಭುತಾಕಾರದ ದೇಹವನ್ನು ಒದರಿದನು. ಕಲಿಮಲದೋಶ ತನ್ನ ಸಹೋದರರಿಗ್ಯಾರಿಗೂ ಅಂಟಬಾರದೆಂಬ ಸಂಕೇತವಾಗಿತ್ತು. ಕ್ಷುಲ್ಲಕನಾದ ದುರ್ಯೋಧನ ಭೀಮನ ರಹಸ್ಯವನ್ನು ತಿಳಿಯದೆ ತಮಾಷೆಮಾಡಿ ಹಾಸ್ಯಮಾಡಿದಾಗ ಭೀಮನು ''ಎಲಾ ದುರುಳಾ! ನನ್ನ ದ್ರೌಪದಿಯನ್ನು ನನ್ನೆದುರಿಗೇ ನಿನ್ನ ತೊಡೆ ಹಾಸಿ ಕರೆದಾಗ ನಿನ್ನ ಆ ತೊಡೆಯನ್ನು ಈಗದೆಯಿಂದ ಮುರಿದು ಕೆಡವುತ್ತೇನೆಂದು ಪ್ರತಿಜ್ಞೆಮಾಡಿದನು. ಈಗ ನನ್ನನ್ನು ಅಪಹಾಸ್ಯಮಾಡಿ ತೊಡೆ ತಟ್ಟಿ ನಗುತ್ತಿರುವ ನಿನ್ನ ಇನ್ನೊಂದು ತೊಡೆಯನ್ನು ರಣರಂಗದಲ್ಲಿ ಮುರಿದುಹಾಕುತ್ತೇನೆ'' ಎಂದು ಪ್ರತಿಜ್ಞೆ ಮಾಡಿದನು. ಮಕ್ಕಳೆಲ್ಲರೂ ರಾಜ್ಯಕೋಶಗಳನ್ನೆಲ್ಲಾ ತ್ಯಜಿಸಿ ಅಡವಿಪಾಲಾಗುವುದನ್ನು ಕಂಡ ಕುಂತೀದೇವಿಗೆ ದುಃಖ ಸಹಿಸಲಾಗಲಿಲ್ಲ. ಮಕ್ಕಳೇ ಕಾಡುಪಾಲಾದ ಮೇಲೆ ನನಗೇಕೆ ಈ ರಾಜಸುಖ? ಎಂದು ಅಳುತ್ತಿರುವುದನ್ನು ನೋಡಿದ ವಿದುರನು ಕುಂತಿಯನ್ನು ಸಮಾಧಾನಪಡಿಸಿ ''ನಿನ್ನ ಮಕ್ಕಳಿಗೆ ಚಕ್ರಪಾಣಿಯ ಶ್ರೀರಕ್ಷೆ ಇರುವಾಗ ಚಿಂತೆ ಏಕೆ?'' ಎಂದು ಧೈರ್ಯಹೇಳಿ ತನ್ನ ಮನೆಯಲ್ಲೇ ಇರಿಸಿಕೊಂಡು ಸಂರಕ್ಷಿಸುತ್ತಿದ್ದನು.

## ಪಾಂಡವರ ಪ್ರಚಂಡ ಪ್ರತಿಜ್ಞೆ

ಧರ್ಮರಾಜನಿಗೆ ತಪೋಬಲವಿತ್ತು. ಶ್ರೀಕೃಷ್ಣನ ರಕ್ಷಣಾ ಬಲವಿತ್ತು. ಭೀಮಾರ್ಜುನರ ಬೆಂಬಲವಿತ್ತು. ಆದರೂ ನಿರ್ವೀರ್ಯನಂತೆ ರಾಜ್ಯವನ್ನು ಶತೃಗಳಿಗೆ ಬಿಟ್ಟುಕೊಟ್ಟು ತಲೆತಗ್ಗಿಸಿ

ಹೋಗುತ್ತಿದ್ದನು. ಅವನು ಒಂದೊಂದು ಹೆಜ್ಜೆಯನ್ನೂ ಧರ್ಮಸೂಕ್ಷ್ಮದ ಬೆಳಕಿನಲ್ಲೇ ಹಾಕುತ್ತ ಮುಂದೆ ಹೋಗುತ್ತಿದ್ದನು.

ಭೀಮಸೇನನು ಎರಡುಪುಷ್ಟಬಾಹುಗಳನ್ನು ಮೇಲಕ್ಕೆತ್ತಿ ''ನೀವು ಎಲ್ಲವನ್ನು ಕಸಿದುಕೊಂಡಿದ್ದೇವೆಂದು ಸಂತೋಷಪಡಬೇಡಿರಿ. ನನಗೆ ಶ್ರೀಹರಿ ದೈತ್ಯವಧೆಗಾಗಿಯೇ ಕರುಣಿಸಿರುವ ಈಬಲ ಬಾಹುಗಳೇ ನಿಮಗೆ ಮೃತ್ಯುವಾಗಿ ಬರುತ್ತದೆ'' ಎಂದು ಸಾರುತ್ತ ಹೋಗುತ್ತಿದ್ದನು.

ದ್ರೌಪದಿಯು ''ಕೌರವನು ನನ್ನ ಸೌಭಾಗ್ಯಮುಡಿಯನ್ನು ಬಿಚ್ಚಿದ್ದಾನೆ. ಈ ಮುಡಿಯನ್ನು ನಾನು ಆ ಕೌರವರ ಹೆಂಡತಿಯರು ನನ್ನ ಪತಿಯ ಕೈಲಿ ಅವರ ಪತಿಯರು ಸತ್ತನಂತರ ತಮ್ಮ ಮುಡಿಬಿಚ್ಚಿ ಹೆಣದ ಮೇಲೆ ಬಿದ್ದು ಅಳುವಾಗ ನಾನು ಸಂತೋಷದಿಂದ ನನ್ನ ಸಿರಿಮುಡಿಯನ್ನು ನನ್ನ ಪತಿಯ ಕೈಯಿಂದಲೇ ಕಟ್ಟಿಸಿಕೊಳ್ಳುತ್ತೇನೆ. ಅದುವರೆಗೂ ಮುಡಿ ಕಟ್ಟುವುದಿಲ್ಲವೆಂಬ ಪ್ರತಿಜ್ಞೆಯಿಂದ ಪಾಂಡವರನ್ನು ಹಿಂಬಾಲಿಸಿ ಹೋಗುತ್ತಿದ್ದಳು.

ಅರ್ಜುನನು ಮುಷ್ಠಿಯಲ್ಲಿ ಮಣ್ಣನ್ನು ತುಂಬಿಕೊಂಡು ತೂರಾಡುತ್ತ ಈ ಮಣ್ಣಿನ ಕಣಗಳಂತೆ ನನ್ನ ಅಸ್ತ್ರಗಳೂ ಅಸಂಖ್ಯಾತವಾಗಿರುತ್ತವೆ. ಅವುಗಳಿಂದ ನಿಮ್ಮ ಅಸಂಖ್ಯ ಸೈನಿಕರನ್ನು ಅರೆನಿಮಿಷದಲ್ಲಿ ಧ್ವಂಸ ಮಾಡುತ್ತೇನೆ'' ಎಂದು ಪ್ರತಿಜ್ಞೆ ಮಾಡಿದನು.

ನಕುಲಸಹದೇವರು ''ನಮ್ಮ ಕಡುವೈರಿಗಳನ್ನು ನಾವು ಧ್ವಂಸಮಾಡಿದ ನಂತರ ಸಿಂಹದಂತೆ ತಲೆ ಎತ್ತಿ ತಿರುಗುತ್ತೇವೆ'' ಎಂದು ತಲೆಬಗ್ಗಿಸಿ ಹೋಗುತ್ತಲಿದ್ದರು.

ಧೌಮ್ಯಾಚಾರ್ಯರು ಧೃತರಾಷ್ಟ್ರನ ಪುತ್ರರು ಪಾಂಡವರಿಂದ ಸತ್ತನಂತರ ನಾನೇ ಪ್ರೇತಸಂಸ್ಕಾರದ ಸೂತ್ರಹೇಳಿ ಅಗ್ನಿಸಂಸ್ಕಾರಮಾಡಿಸುತ್ತೇನೆಂದು ಪ್ರೇತಸಂಸ್ಕಾರಸೂತ್ರ ಹೇಳುತ್ತ ಪಾಂಡವರ ಜೊತೆಗೆ ಹೋಗುತ್ತಿದ್ದರು.

ಪಾಂಡವರೆಲ್ಲರೂ ಧೌಮ್ಯರು ಮತ್ತು ದ್ರೌಪದಿಯೊಡಗೂಡಿ ಯಾರಾರು ಯಾವರೀತಿಯಾಗಿ ನಡೆಯುತ್ತ ಏನೇನು ಪ್ರತಿಜ್ಞೆಮಾಡಿ ಹೋದರೆಂಬುದನ್ನು ಧೃತರಾಷ್ಟ್ರನಿಗೆ ಅದೇ ರೀತಿ ವಿವರಿಸಿ ತಿಳಿಸಿದನು.

ಧರ್ಮರಾಜನ ಹಿಂದೆ ನಾಲ್ಕುರಥಗಳು ಹೊರಟವು. ನಮಗೆ ಧರ್ಮರಾಜನೇ ರಾಜನಾಗಿದ್ದಾನೆ. ಅವನು ಎಲ್ಲಿದ್ದರೂ ಅವನ ಆಶ್ರಯವೇ ನಮಗೆ ಸುಖ. ನಾವು ಅವನನ್ನೇ ಹಿಂಬಾಲಿಸುತ್ತೇವೆಂದು ಶೂದ್ರರು, ಗೋಪಾಲಿಕರು, ಸ್ವಯಂಪಾಕ ಮಾಡುವವರು ಅವರನ್ನು ಸದಾ ಸೇವಿಸುತ್ತಿದ್ದ ಭೃತ್ಯರನೇಕರು ಪಾಂಡವರ ಹಿಂದೆ ಹೊರಟುಹೋಗುತ್ತಿದ್ದರು.

ಧರ್ಮರಾಜನು ಪುರದ ಹೊರವಲಯಕ್ಕೆ ಬಂದು ಒಂದು ವಟವೃಕ್ಷದ ಕೆಳಗೆನಿಂತು

ಜನಸಮೂಹದ ಕಡೆಗೆ ನೋಡಿ ಕೈಜೋಡಿಸಿ ''ನನ್ನ ಪ್ರೀತಿಯ ಬಂಧು ಮಿತ್ರರೇ! ನನ್ನ ಮೇಲೆ ನಿಮಗೆ ಅಭಿಮಾನವಿರುವುದಾದರೆ ನೀವೆಲ್ಲರೂ ಹಸ್ತಿನಾವತಿಯ ರಾಜರಲ್ಲಿಗೇ ಹೋಗಬೇಕು. ಧೃತರಾಷ್ಟ್ರನಿಗೆ ದುಃಖವಾಗುವಂತೆ ನೀವೆಲ್ಲರೂ ಬರಬಾರದು. ನಿಮ್ಮ ರಾಜನ ಬಳಿ ಇದ್ದು ಅವನ ಆಜ್ಞಾಪಾಲನೆ ಮಾಡುವುದೇ ನಿಮ್ಮ ಧರ್ಮ'' ಎಂದು ಹೇಳಿದನು. ಆಗ ಪ್ರಜಾಕೋಟಿಗಳು ಧರ್ಮರಾಜನ ಮಾತಿಗೆ ಮನ್ನಣೆಕೊಟ್ಟು ಹಸ್ತಿನಾವತಿಯ ಕಡೆಗೆ ಹೊರಟುಹೋದರು.

ಪಾಂಡವರಿಗೆ ಸುಖದುಃಖಗಳೆಂಬ ವಿಕಾರವಿಲ್ಲ. ಅವರಿಗೆ ಎರಡೂ ಒಂದೆ. ರಾಜ್ಯಭೋಗತಪ್ಪಿತು. ಕಾಡಿನಕಷ್ಟ ಪ್ರಾಪ್ತವಾಯಿತು. ಆದರೂ ಅವರಿಗೆ ದುಃಖದಲ್ಲಿ ಶ್ರೀಹರಿಸ್ಮರಣೆಯಿಂದಲೇ ಸಕಲ ಸುಖ ಸಂತೋಷಗಳನ್ನು ಅನುಭವಿಸುತ್ತಿದ್ದರು. ಸ್ವಾಮಿಯ ಪಾದವನ್ನು ನಂಬಿದ ಭಕ್ತರಿಗೆ ಅನೇಕಜನ್ಮದ ಸಂಸಾರಭಯವನ್ನು ಬಿಡಿಸುವ ಭಕ್ತವತ್ಸಲನನ್ನೇ ನಂಬಿದ ಪಾಂಡವರಿಗೆ ಕಾಡೂ ಸಂಪತ್ಭರಿತವಾದ ಸಾಮ್ರಾಜ್ಯದಂತೆಯೇ ಸುಖವಾಗಿತ್ತು. ಪಾಂಡವರು ಕಾಡುಸೇರಿ ಅನೇಕ ಪ್ರದೇಶಗಳಲ್ಲಿ ಸಂಚಾರ ಮಾಡುತ್ತಿದ್ದರು. ಸಂಚಾರ ಮಾಡುವಾಗ ಕೀರ್ಮೀರನೆಂಬ ಅಸುರನ ವಾಸಸ್ಥಾನವಾದ ಅರಣ್ಯಕ್ಕೆ ಬಂದರು. ರಾತ್ರಿ ಸಮಯವಾಗಿದ್ದರಿಂದ ಮುಂದೆ ಪ್ರಯಾಣ ಬೆಳಸದೆ ಕೀರ್ಮೀರ ಕಾಡಿನಲ್ಲೇ ಉಳಿದುಕೊಂಡರು. ಆ ಕಾಡು ಬಹಳ ಭಯಂಕರ ಸ್ಥಳವಾಗಿತ್ತು. ಅಲ್ಲಿ ಬಕಾಸುರನ ತಮ್ಮನಾದ ಕೀರ್ಮೀರನು ನರಭಕ್ಷಕನಾಗಿ ಅಲ್ಲಿ ಮನುಷ್ಯರ್‍ಯಾರೇ ಬಂದರೂ ಅವರನ್ನು ಬಿಡದೆ ಭಕ್ಷಿಸುತ್ತಿದ್ದನು.

ಆ ಅಸುರನಿಗೆ ಪಾಂಡವರು ತನ್ನ ಕಾಡಿಗೆ ಬಂದಿದ್ದಾರೆಂಬ ಸುದ್ದಿ ತಿಳಿಯಿತು. ನನ್ನ ಸಹೋದರನನ್ನು ಕೊಂದ ನನ್ನ ವೈರಿ ಭೀಮಸೇನ ಇಲ್ಲಿಗೆ ಬಂದಿದ್ದಾನಂತೆ. ಅವನನ್ನೂ ಈದಿನ ಕೊಂದು ತಿಂದು ನನ್ನ ಅಣ್ಣನ ಆತ್ಮಕ್ಕೆ ಶಾಂತಿ ಕೋರುತ್ತೇನೆ'' ಎಂದು ಅಬ್ಬರಿಸುತ್ತ ಕಾಡಿನಲ್ಲಿ ಆರ್ಭಾಟದಿಂದ ಅಬ್ಬರಿಸುತ್ತ ಬರುತ್ತಿದ್ದನು.

ಆ ಅಸುರನು ಮಹಾರುದ್ರನನ್ನು ಕುರಿತು ತಪಸ್ಸುಮಾಡಿ ಅಮರತ್ವವನ್ನು ಪಡೆದಿದ್ದೇನೆಂಬ ಧೈರ್ಯದಿಂದ ಸಾವಿನ ಭಯವಿಲ್ಲದೆ ಸಕಲ ವೀರರನ್ನು ಅಡ್ಡಗಟ್ಟಿಕೊಂಡು ರಕ್ತಪಾನದಿಂದ ಮತ್ತನಾಗಿದ್ದನು. ಅದರಂತೆ ಭೀಮನನ್ನು ನಿರ್ಭಯವಾಗಿ ಇದಿರಿಸಿದನು. ದೊಡ್ಡದೊಡ್ಡ ಗಿರಿಶಿಖರಗಳನ್ನು ತನ್ನ ಬಾಹುಗಳಿಂದ ಕಿತ್ತು ಭೀಮನಮೇಲೆ ಎಸೆಯುತ್ತಿದ್ದನು. ಭೀಮನು ಅವನು ಎಸೆದ ಪರ್ವತವನ್ನೇ ಅಸುರನ ಮೇಲೆ ಹೋಗಿ ಬೀಳುವಂತೆ ಮರಳಿಸುತ್ತಿದ್ದನು.

ಪರ್ವತಗಳ ಎಸೆದಾಟಕ್ಕೆ ಭೂಮಿ ಅದರುತ್ತಿತ್ತು. ಭೀಮಸೇನನು ದೈವದ್ವೇಶಿಯೊಡನೆ ಯುದ್ಧಮಾಡಬಾರದೆಂಬ ಧರ್ಮದಿಂದ ಅವನೊಡನೆ ಸೆಣಸಾಟಕ್ಕೆ ನಿಲ್ಲದೆ ಅವನ ಜುಟ್ಟನ್ನು ಎಡಮುಷ್ಠಿಯಿಂದ ಎಳೆದು ಕೆಳಗೆ ಕೆಡವಿ ಗುದ್ದಿ ಕೊಂದನು. ದೈತ್ಯವಧೆಯ ಸೇವೆಯನ್ನು ಭಗವದರ್ಪಣಮಾಡಿದನು.

ಕಿರ್ಮೀರನು ನರಮಾಂಸಭಕ್ಷಕನಾಗಿ ಅನೇಕ ಸಾಧುಸಂತರನ್ನು ಬಿಡದೆ ತಿಂದು ತೇಗುತ್ತಿದ್ದನು. ಇಂಥ ಪಾಪಿಯನ್ನು ಯಾರೂ ಕೊಲ್ಲಲಾಗದೆ ಬಿಟ್ಟಿದ್ದರು. ದೈತ್ಯಸಂಹಾರಮಾಡಿ ಧರ್ಮಸ್ಥಾಪನೆಗಾಗಿಯೇ ಅವತರಿಸಿದ ಭೀಮನಿಂದ ಇಂದು ಈ ಸಾಹಸಕಾರ್ಯ ನಡೆಯಿತು. ನಮ್ಮ ಯಜ್ಞಯಾಗಾದಿಗಳು ಜಪತಪಾನುಷ್ಠಾನಗಳು ಪಾಪಿದೈತ್ಯನಿಂದ ಕುಂದಿ ಹೋಗಿದ್ದವು. ಈಗ ಭೀಮಸೇನನ ಪಾದಧೂಳು ನಮ್ಮ ಕಾಡಿಗೆ ಸೋಂಕಿದಾಗ ಪಾಪಿಯು ಸಂಪರ್ಕ ನಾಶಹೊಂದಿ ಭಗವತ್ಸನ್ನಿಧಿ ಇಲ್ಲಿ ನೆಲಸಿತು'' ಎಂದು ಕೊಂಡಾಡಿ ಸ್ತುತಿಸಿದರು. ಭೀಮಸೇನನ ಬಲ ನಮ್ಮ ಸಾಧನೆಗೆ ಶ್ರೀರಕ್ಷೆಯಾಗಿರಲೆಂದು ಋಷಿಮುನಿಗಳೆಲ್ಲರೂ ಆನಂದ ಹೊಂದಿದರು.

## ಧರ್ಮರಕ್ಷಣೆಗಾಗಿ ಲಭಿಸಿದ ಅಕ್ಷಯಪಾತ್ರೆ

ಧರ್ಮರಾಜನು ರಾಜ್ಯಭಾರ ಮಾಡುವಾಗ ಅವನ ಬಳಿ ಹತ್ತುಸಾವಿರ ಸನ್ಯಾಸಿಗಳೂ ಎಂಭತ್ತೆಂಟುಸಾವಿರ ಋಷಿಗಳು ಗಣನೆಗೆ ಸಿಗದಷ್ಟು ಕಾರ್ಯಕರ್ತರುಗಳೂ ಇದ್ದರು. ಅವರೆಲ್ಲರೂ ಧರ್ಮರಾಜನ ಸಂಗಡ ತಾವೂ ತೀರ್ಥಯಾತ್ರೆಯ ಸಂಚಾರ ಮಾಡಲಿಚ್ಛಿಸಿ ಬಂದರು.

ಧರ್ಮರಾಜನು ಬ್ರಾಹ್ಮಣಸಮೂಹ 'ರಾಜಾಶ್ರಯದಲ್ಲಿ ತೀರ್ಥಯಾತ್ರೆ ಸಾಧನ ಸುಗಮವಾಗುತ್ತದೆಂದು ನನ್ನ ಆಶ್ರಯಕ್ಕೆ ಬಂದಿದ್ದಾರೆ. ಬ್ರಾಹ್ಮಣರನ್ನು ರಕ್ಷಿಸುವವನು ನಾನಲ್ಲ. ಭಗವಂತನೇ ಆಗಿದ್ದರೂ ನನ್ನ ಪ್ರಯತ್ನ ನನ್ನ ಕರ್ತವ್ಯದ ಚಿಂತನವನ್ನು ನಾನು ಮಾಡಬೇಕು'' ಎಂದು ಧೌಮ್ಯರ ಬಳಿ ತನ್ನ ಮನೋಗತವನ್ನು ಹೇಳಿದನು. ಧೌಮ್ಯರು ''ಧರ್ಮರಾಜಾ! ಸಿರಿರಮಣನ ಸಿರಿಪಾದವನ್ನು ನಂಬಿದ ನಿನಗೆ ಯಾವಸಂಪತ್ತಿಗೆ ಏನು ಕಡಿಮೆ? ಸೂರ್ಯಾಂತರ್ಗತನಾದ ಶ್ರೀಮನ್ನಾರಾಯಣನನ್ನು ಕುರಿತು ತಪೋನಿರತನಾಗು'' ಎಂದರು. ಗುರುವಾಕ್ಯದಂತೆ ಧರ್ಮರಾಜನು ದೇವಬ್ರಾಹ್ಮಣರ ಸೇವೆಗಾಗಿ ಭಗವಂತನನ್ನು ಕುರಿತು ಪ್ರಾರ್ಥಿಸತೊಡಗಿದನು. ನಿಸ್ವಾರ್ಥ ನಿಷ್ಠನಿಗೆ ಸಂತುಷ್ಟನಾದ ದೇವನು ಅಕ್ಷಯಪಾತ್ರೆ ಒಂದನ್ನು ಕರುಣಿಸಿದನು. ಹರಿಕೊಟ್ಟ ಅಕ್ಷಯಪಾತ್ರೆ ಎಂದರೇನು ಸಾಮಾನ್ಯವೇ? ಅದು ಸಕಲಸಂಪತ್ತನ್ನೂ ಕರುಣಿಸಿ ಭಗವತ್ಸಾಧಕರ ಸಾಧನೆ ನೆರವೇರಿಸುತ್ತಿತ್ತು. ಷಡ್ರಸೋಪೇತವಾದಂಥ ಚತುರ್ವಿಧಾನ್ನವು ಅನೇಕ ಸಹಸ್ರಸಂಖ್ಯೆಯಜನರು ಭೋಜನಮಾಡುವಷ್ಟು ಅಕ್ಷಯಪಾತ್ರೆ ಕರುಣಿಸುತ್ತಿತ್ತು. ಅಷ್ಟೇ ಅಲ್ಲ, ದ್ರವ್ಯದಕ್ಷಣೆಗಳು. ದಿವ್ಯವಸ್ತ್ರಾಭರಣಗಳು, ರತ್ನಗಳು, ಬ್ರಾಹ್ಮಣರಿಗೆ ದಾನಕೊಡಲು ಯೋಗ್ಯವಾದಂಥ ಶ್ರೇಷ್ಠಗೋವುಗಳು. ಹೀಗೆ ಏನು ಸಂಕಲ್ಪಮಾಡಿದರೆ ಅದನ್ನು ಅಕ್ಷಯಪಾತ್ರೆ ಕರೆದುನೀಡುತ್ತಿತ್ತು. ಅಕ್ಷಯಪಾತ್ರೆಯಲ್ಲಿ ಶ್ರೀಕೃಷ್ಣನು ಸನ್ನಿಹಿತನಾಗಿ ಧರ್ಮರಾಜನ ಬಳಿ ಇರುವಾಗ ಅವನಿಗೇನು ಚಿಂತೆ? ಸಹಸ್ರ ಸಂಖ್ಯೆಯ ಬ್ರಾಹ್ಮಣರು ಬಂಗಾರದ ತಟ್ಟೆಗಳಲ್ಲಿ ಮೃಷ್ಟಾನ್ನಭೋಜನ ಮಾಡುತ್ತಿದ್ದರು.

ಧರ್ಮಕಂಟಕನಾದ ಕಿರ್ಮೀರನನ್ನು ಭೀಮಸೇನನು ವಧಿಸಿ ಧರ್ಮಕ್ಕೆ ಆಶ್ರಯ ನೀಡಿದನಂತರ, ಬ್ರಾಹ್ಮಣರೆಲ್ಲರೂ ನಿರಾತಂಕದಿಂದ ಜಪತಪಾನುಷ್ಠಾನಗಳನ್ನು ಮಾಡುತ್ತ ಧರ್ಮರಾಜನ ಆಶ್ರಯವನ್ನು ಅಪೇಕ್ಷಿಸಿದ ಅನೇಕ ದೇಶದ ಪ್ರಜಾಕೋಟಿಗಳು ಧರ್ಮರಾಜನು ಎಲ್ಲಿದ್ದಾನೋ ಅದೇ ಪುಣ್ಯಕ್ಷೇತ್ರವೆಂದು ಹೋಗುತ್ತ ಅಲ್ಲಿ ಬಂದು ನೆಲಸುತ್ತಿದ್ದರು. ಧರ್ಮರಾಜನು ಎಲ್ಲರನ್ನು ಸಂತೋಷದಿಂದ ಸ್ವಾಗತಿಸಿ ಪ್ರತಿನಿತ್ಯವೂ ಲಕ್ಷಗೋದಾನಮಾಡುತ್ತಿದ್ದನು. ನೂರು ಭಾರತೂಕದ ಬಂಗಾರವನ್ನು ಬ್ರಾಹ್ಮಣರಿಗೆ ಪ್ರತಿನಿತ್ಯವೂ ದಾನಕೊಡುತ್ತಿದ್ದನು. ಹೀಗೆ ಧರ್ಮರಾಜನು ವಿಪ್ರಪೂಜೆ, ದೇವಪೂಜೆ, ಭಗವತತ್ತ್ವವಿಚಾರಗಳು ಮೊದಲಾದ ಭಗವತ್ಕಾರ್ಯ ಸಾಧನೆಗಳಲ್ಲಿ ಸತ್ಕಾಲಕ್ಷೇಪಮಾಡುತ್ತ ದೇವೇಂದ್ರನಂತೆ ಶೋಭಿಸುತ್ತಿದ್ದನು.

## ಧೃತರಾಷ್ಟ್ರನ ದೌರ್ಭಾಗ್ಯ

ಧೃತರಾಷ್ಟ್ರನಿಗೆ ಮಕ್ಕಳ ಅಧರ್ಮಕಾರ್ಯ ಅವರಿಗೆ ಅನಿಷ್ಟವೆಂದು ತಿಳಿದಿತ್ತು. ಅವರಿಗಾಗಿ ಬಹಳ ಚಿಂತೆಹತ್ತಿತು. ದುರ್ಯೋಧನನ ಆಸೆ ಈಡೇರಿತು. ಪಾಂಡವರು ಕಾಡಿಗೆ ಹೊರಟುಹೋದರು. ತಾನೇ ಅಖಂಡ ಮಂಡಲಾಧಿಪನೆಂದು ಸಂತೋಷದಿಂದ ಹಿಗ್ಗಿದ್ದಾನೆ. ಆದರೆ ಅವನ ಸಂತೋಷಕ್ಕೆ ಪಾಂಡವರಿಂದ ಯಾವಕ್ಷಣದಲ್ಲಿ ಭಂಗ ಬರುತ್ತದೆಂದು ಹೇಳಲಾಗುವುದಿಲ್ಲ. ಮುಂದೇನು ದಾರಿ? ಎಂದು ದುಃಖದಿಂದ ''ವಿದುರಾ! ನೀನು ನನ್ನ ಆಪ್ತನಾದ್ದರಿಂದ ನನ್ನ ಮನೋವೇದನೆಯನ್ನು ನಿನಗೆ ತಿಳಿಸುತ್ತಿದ್ದೇನೆ. ನನ್ನ ಮಕ್ಕಳು ಇದೇ ರೀತಿ ಸದಾ ಸಂತೋಷದಿಂದ ಇರುವುದಕ್ಕೆ ಏನಾದರೂ ಉಪಾಯಹೇಳು. ಅವರಿಗೆ ವಿಪತ್ಸಂಭವಿಸಿದ್ರೆ ನಾನು ಸಹಿಸಲಾರೆ. ಪಾಂಡವರು ಎಲ್ಲಿದ್ದರೂ ಅವರು ತಮ್ಮ ಧರ್ಮಬಲದಿಂದ ಆನಂದದಿಂದಲೇ ಮೆರೆಯುತ್ತಾರೆ. ನನ್ನ ಮಕ್ಕಳಿಗೆ ಧರ್ಮದ ಬಲವಿಲ್ಲ. ಆದ್ದರಿಂದ ಅವರಿಗೆ ಕ್ಷೇಮವಾಗತಕ್ಕ ಉಪಾಯವನ್ನು ತಿಳಿಸು'' ಎಂದನು. ವಿದುರನು ''ಧೃತರಾಷ್ಟ್ರಾ! ನೀನು ಪಾಂಡವರು ಕಾಡಿನಲ್ಲೇ ಇರಲಿ. ನನ್ನ ಮಕ್ಕಳಿಗೆ ಈ ರಾಜ್ಯಸುಖ ಶಾಶ್ವತವಾಗಲಿ ಎಂಬ ಅರ್ಥದಿಂದ ಮಾತನಾಡುತ್ತಿದ್ದಿ. ಅದೆಂದಿಗೂ ಸಾಧ್ಯವಿಲ್ಲ. ನಿನಗೆ ನಿನ್ನ ಮಕ್ಕಳು ನನ್ನ ಕಣ್ಮುಂದೆ ಸಾಯದೆ ಬದುಕಿರಬೇಕೆಂಬ ಆಸೆ ಇದ್ದರೆ ಪಾಂಡವರನ್ನು ಕರೆಸಿಕೊಂಡು ಅವರ ರಾಜ್ಯ ಅವರಿಗೆ ಕೊಡುವುದೊಂದೇ ಉಪಾಯ ಮತ್ತಾವ ಉಪಾಯದಿಂದಲೂ ನಿನ್ನ ಮಕ್ಕಳನ್ನು ನೀನು ಉಳಿಸಿಕೊಳ್ಳಲಾರೆ'' ಎಂದನು.

ವಿದುರನ ಮಾತು ಧೃತರಾಷ್ಟ್ರನಿಗೆ ವಿಷಸದೃಶವಾಯಿತು. ಸಿಟ್ಟಿನಿಂದ ''ವಿದುರಾ! ನಾನು ನಿನ್ನನ್ನು ಪರಮಾಪ್ತನೆಂದು ನಂಬಿದ್ದೇನೆ. ಆದ್ದರಿಂದಲೇ ಉಭಯರಿಗೂ ಘರ್ಷಣೆ ಉಂಟಾಗದಂತೆ ಏನಾದರೂ ಒಂದು ಯುಕ್ತಿಯನ್ನು ಸೂಚಿಸು'' ಎಂದು ಕೇಳಿದೆನು.

ನಿನಗೆ ನನ್ನ ಮಕ್ಕಳ ಹಿತಚಿಂತನೆಗಿಂತಲೂ ಪಾಂಡವರ ಹಿತಚಿಂತನೆಯೇ ಅಧಿಕವಾಗಿರುವುದರಿಂದ ನನ್ನ ಹಠವಾದಿಮಕ್ಕಳು ಹೇಗಾದರೂ ಸಾಯದೆ ಬದುಕಿರಲೆಂಬ ಕರುಣ ನಿನಗೆ ಲೇಶಮಾತ್ರವೂ ಇಲ್ಲ. ನನ್ನ ಅಂತರಂಗದ ದುಃಖವನ್ನು ನೀನು ಅರಿತುಕೊಳ್ಳದೆ ಅದನ್ನು ಮತ್ತಷ್ಟು ಅಭಿವೃದ್ಧಿಗೊಳಿಸುತ್ತಿರುವಿ. ಇಂಥ ಬಂಧುಗಳು ಇದ್ದರೂ ಒಂದೆ ಸತ್ತರೂ ಒಂದೆ. ಇನ್ನು ರಾಜಕಾರಣದ ಯಾವ ವಿಷಯಕ್ಕೂ ತಲೆಹಾಕಬೇಡ. ನನ್ನ ವಿಶ್ವಾಸಕ್ಕೆ ನೀನು ಪಾತ್ರನಲ್ಲ'' ಎಂದುಬಿಟ್ಟನು.

ವಿದುರನು ಗತಲೋಚನನ ಅಮಿತಮೋಹವನ್ನು ತಿಳಿದು ಪಶ್ಚಾತ್ತಾಪಪಟ್ಟನು. ಸ್ವಲ್ಪದಿನ ಇವನನ್ನು ಅಗಲಿ ಪಾಂಡವರಬಳಿಗೆ ಹೋಗಿ ಇದ್ದುಬಿಟ್ಟರೆ ಒಳ್ಳೆಯದು. ಇಲ್ಲದಿದ್ದರೆ ಇವನು ಮೋಹಪಾಶಕ್ಕೆಸಿಕ್ಕಿ ನರಳಾಡುವುದನ್ನು ನೋಡಿದರೆ ಹರಿದ್ವೇಶಿಗಳ ಪಾಪದರ್ಶನದ ದುಃಖ ಅನುಭವಿಸಬೇಕಾಗುತ್ತದೆಂದು ಅಲ್ಲಿರದೆ ಪಾಂಡವರಬಳಿಗೆ ಹೊರಟನು.

ಪಾಂಡವರಿಗೆ ವಿದುರನೆಂದರೆ ಬಹಳ ಅಭಿಮಾನವಾದ್ದರಿಂದ ಅವನನ್ನು ಸಂತೋಷದಿಂದ ಸ್ವಾಗತಿಸಿ ಹಸ್ತಿನಾವತಿಯ ಸಕಲ ಸಮಾಚಾರಗಳನ್ನು ಒಬ್ಬರಿಗೊಬ್ಬರು ಹೇಳಿಕೊಂಡು ವಿನೋದದಿಂದ ದ್ವೇಶಾಸೂಯೆಗಳ ಪರಿವೆಯೇ ಇಲ್ಲದಂತೆ ಆನಂದವಾಗಿದ್ದರು.

ಹಸ್ತಿನಾವತಿಯಲ್ಲಿ ಈಗ ಧೃತರಾಷ್ಟ್ರನಿಗೆ ವಿದುರನ ಸಾಮೀಪ್ಯವೂ ತಪ್ಪಿತು. ಹಿತಚಿಂತಕರೇ ಇಲ್ಲದಂತಾಯಿತು. ಅದಲ್ಲದೆ ವಿದುರನು ಮಹಾರಾಜಕಾರಿಣಿ. ಅವನು ತನ್ನ ಬುದ್ಧಿಚಾತುರ್ಯದಿಂದ ಪಾಂಡವರನ್ನು ಅಖಂಡರಾಜ್ಯ ಮಂಡಲಾಧಿಪರನ್ನಾಗಿ ಬೇಕಾದರೂ ಮಾಡಬಲ್ಲನು. ಅವನನ್ನು ಕರೆಸಿಕೊಂಡರೇ ಒಳ್ಳೆಯದು ಎಂದು ಯೋಚಿಸಿ ''ಸಂಜಯಾ! ವಿದುರನು ನನ್ನ ಬಳಿ ಬರುವವರೆಗೂ ನಾನು ಜಲಪಾನವನ್ನೂ ಮಾಡುವುದಿಲ್ಲ'' ಎಂದು ನನ್ನ ಮಾತನ್ನು ಅವನಿಗೆ ತಿಳಿಸಿ ಕರೆದುಕೊಂಡುಬಾ'' ಎಂದು ಹೇಳಿಕಳುಹಿಸಿದನು.

ಸಂಜಯನು ವಿದುರನ ಬಳಿಗೆಬಂದು ''ವಿದುರಾ! ಧೃತರಾಷ್ಟ್ರನು ನಿನ್ನನ್ನು ಅಗಲಿರಲಾರ. ವಿದುರನು ಬರುವವರೆಗೂ ನಾನು ಜಲಪಾನವನ್ನೂ ಮಾಡುವುದಿಲ್ಲ' ಎಂದು ಹಠೋಪವಾಸ ಹಿಡಿದಿದ್ದಾನೆ'' ಎಂದು ಹೇಳಿದಾಗ ವಿದುರನ ಮನಸ್ಸು ಮರುಕಗೊಂಡಿತು. ಆಗ ಪಾಂಡವರನ್ನು ಕುರಿತು ''ಪಾಪ ಧೃತರಾಷ್ಟ್ರನುನೀಚ ಮಕ್ಕಳನ್ನು ಹಡೆದು ಬಿಸೀತುಪ್ಪ ಉಗಳಲಾರೆ ನುಂಗಲಾರೆ ಎಂಬ ನಾಡುನುಡಿಯಂತೆ ಅವನು ಪಾಪದಕುಡಿಗಳನ್ನು ನಸುಕಿಹಾಕಲೂ ಆಗದೆ ಉಳಿಸಿಕೊಳ್ಳಲೂ ಆಗದೆ ಚಿಂತೆಯಲ್ಲಿ ಬೇಯುತ್ತಿದ್ದಾನೆ. ಅವನ ಬಳಿಗೇ ಹೋಗುತ್ತೇನೆ'' ಎಂದು ಹೇಳಿ ಪಾಂಡವರ ಅನುಮತಿ ಪಡೆದು ಧೃತರಾಷ್ಟ್ರನ ಬಳಿಗೆ ಬಂದನು.

ಧೃತರಾಷ್ಟ್ರನು ವಿದುರನನ್ನು ಆಲಂಗಿಸಿಕೊಂಡು ಹಿರಿಯನಾದ ನನ್ನ ಒಂದು ಚಿಕ್ಕಮಾತಿಗೇ ನೀನು ಹೀಗೆ ಮುನಿಸಿಕೊಂಡು ಹೋಗುವುದೆ? ನೀನು ನನಗೇ ಧರ್ಮೋಪದೇಶ

ಮಾಡುವವನಾಗಿದ್ದಿ'' ಎಂದು ಹೇಳಿ ಸಮಾಧಾನ ಮಾತುಗಳಿಂದ ಸಂತೋಷಪಡಿಸಿದನು.

ದುರ್ಯೋಧನಾದಿಗಳು ವಿದುರನನ್ನು ನಮ್ಮ ತಂದೆ ಬೈದು ಓಡಿಸಿದ್ದಾನಂತೆ. ಈಗ ನಮಗೆ ಅವನ ಪೀಡೆಯೂತಪ್ಪಿತು. ಈಗನಾವು ಪಾಂಡವರ ನಾಶಕ್ಕೆ ಏನು ಬೇಕಾದರೂ ಸಂಚು ಮಾಡಬಹುದು'' ಎಂದು ಕುಯುಕ್ತಿಗಳನ್ನು ಹುಡುಕುತ್ತ ದುರಾಲೋಚನೆಯ ದುಷ್ಟಸಭೆಯಲ್ಲಿ ಆಲೋಚನೆಮಾಡುತ್ತಿರುವಾಗ ಮತ್ತೆ ವಿದುರನು ಬಂದಿದ್ದಾನೆಂಬುದನ್ನು ತಿಳಿದು ಖೇದದಿಂದ ಒಳಗೊಳಗೇ ದ್ವೇಷದ ವಿಷವನ್ನು ಹಬ್ಬಿಸುತ್ತಿದ್ದರು.

## ಬಾದರಾಯಣರ ಭವಿಷ್ಯವಾಣಿ

ಭಗವತ್ಸಂಕಲ್ಪದಂತೆ ಪಾಪಿಗಳ ಪಾಪದಕೊಡ ತುಂಬಬೇಕಾಗಿತ್ತು. ಹದಿನೆಂಟು ಅಕ್ಷೋಹಿಣೀಸೇನಾನಿಕರು ಕುರುಕ್ಷೇತ್ರದ ರಣರಂಗದಲ್ಲಿ ಹತವಾಗಿ ಭೂಭಾರಹರಣ ಆಗಬೇಕಾಗಿತ್ತು. ಧರ್ಮಾಧರ್ಮದ ತತ್ತ್ವವನ್ನು ಲೋಕಕ್ಕೆ ತಿಳಿಸುತ್ತಲೇ ಸಂಕಲ್ಪವನ್ನು ನಡೆಸಲಿಕ್ಕಾಗಿ ವೇದವ್ಯಾಸರು ಧೃತರಾಷ್ಟ್ರನಿಗೆ ಪ್ರತ್ಯಕ್ಷವಾಗಿ ''ಧೃತರಾಷ್ಟ್ರಾ! ನಿನ್ನ ಮಕ್ಕಳು ನಿರಪರಾಧಿಗಳಾದ ಪಾಂಡವರನ್ನು ಕೊಲ್ಲಲು ಕುಕರ್ಮಗಳನ್ನು ನಡೆಸುತ್ತಿದ್ದಾರೆ. ಅಧರ್ಮಕ್ಕೆ ಎಂದಿಗೂ ಜಯವಿಲ್ಲ. ನಿನ್ನ ಮಕ್ಕಳು ಬದುಕುವ ಆಸೆ ನಿನಗಿದ್ದರೆ ಬುದ್ಧಿಹೇಳು'' ಎಂದರು.

''ಸ್ವಾಮೀ! ನನಗೆ ನನ್ನ ಮಕ್ಕಳ ಪಾಪಕರ್ಮವನ್ನು ತಡೆಯುವ ಸಾಮರ್ಥ್ಯವಿದ್ದರೆ ಇಷ್ಟು ಅನರ್ಥ ಆಗುತ್ತಿರಲಿಲ್ಲ. ಈಗ ನನ್ನ ಬುದ್ಧಿಯೇ ನನ್ನ ವಶದಲ್ಲಿಲ್ಲದಂತಾಗಿದೆ. ನಿಮಗೆ ನನ್ನ ಮಕ್ಕಳು ಬದುಕಿರಬೇಕೆಂಬ ವಿಶ್ವಾಸವಿದ್ದರೆ ನೀವೇ ಅವರನ್ನು ಪರಿವರ್ತಿಸಬಹುದು'' ಎಂದನು.

ಆಗ ವೇದವ್ಯಾಸರು ''ಧೃತರಾಷ್ಟ್ರಾ ಧರ್ಮದ್ವೇಶಿಗಳೊಡನೆ ಸಂಭಾಷಣೆ ಅವರೊಡನೆ ವಾಸಮಾಡುವುದು, ಅವರ ಅನ್ನ ತಿನ್ನುವುದು ಇವೆಲ್ಲವೂ ನಿಷೇಧ. ಆದ್ದರಿಂದ ನಾನು ಅವನಿಗೆ ಉಪದೇಶ ಮಾಡುವುದಿಲ್ಲ. ಇನ್ನು ಕೆಲವುದಿನಗಳಲ್ಲಿ ಮೈತ್ರೇಯ ಋಷಿಗಳು ನಿನ್ನಲ್ಲಿಗೆ ಬಂದು ಅವರು ಹೇಳುತ್ತಾರೆ. ಅವರು ಶ್ರೀಹರಿಪ್ರೇರಣಾನುಸಾರ ನಿನ್ನ ಮಕ್ಕಳಿಗೆ ಉಪದೇಶ ಮಾಡಿದಾಗ ಅವರ ಮಾತಿಗೆ ಮನ್ನಣೆಕೊಡದೆ ನಿನ್ನ ಮಕ್ಕಳು ದುರಾತ್ಮರಾಗಿಯೇ ಇದ್ದರೆ ಅವರ ಶಾಪದಿಂದ ನಿನ್ನಮಕ್ಕಳು ಒಬ್ಬರೂ ಇಲ್ಲದಂತೆ ನಾಶಹೊಂದುತ್ತಾರೆ. ದುರ್ಯೋಧನನಿಗೆ ಭೀಮಸೇನನ ಗದೆ ಮೃತ್ಯುವಾಗಿ ಸಜ್ಜನರನ್ನು ಸಂರಕ್ಷಣೆ ಮಾಡುತ್ತದೆ'' ಎಂದು ಹೇಳಿದರು.

ವೇದವ್ಯಾಸರು ಸರ್ವಸ್ವತಂತ್ರರು. ಆ ಕ್ಷಣದಲ್ಲೇ ಅವನನ್ನು ಸಂರಕ್ಷಿಸಲೂಬಹುದಾಗಿತ್ತು. ಕೊಲ್ಲಲೂಬಹುದಾಗಿತ್ತು. ಅದು ಲೋಕೋದ್ಧಾರಕ್ಕೆ ಕಾರಣವಾಗುವುದಿಲ್ಲ. ಪಾಪಿಗಳಿಗೆ

ಪಾಪವೇ ವೃದ್ಧಿಯಾಗಬೇಕು. ಅವರು ಅಂಧಂತಮಸ್ಸಿಗೇ ಹೋಗಬೇಕು. ಸಜ್ಜನರ ಸಂರಕ್ಷಣೆ ನಡೆದು ಧರ್ಮ ನೆಲೆಗೊಳ್ಳಬೇಕು. ಆದ್ದರಿಂದ ಮೂಲಕಲಿ ದುರ್ಯೋಧನನನ್ನು ಭೀಮಸೇನನೇ ಕೊಂದು ತನ್ನ ಸಾಧನೆಯನ್ನು ಭಗವದರ್ಪಣ ಮಾಡಿದಾಗಲೇ ಪಾಪದ ಕೊಳೆ ನಾಶವಾಗಿ ಧರ್ಮ ಪ್ರಕಾಶಿಸುತ್ತದೆ'' ಎಂದು ಧೃತರಾಷ್ಟ್ರನಿಗೆ ಮುನ್ಸೂಚನೆಯ ಮಾತುತಿಳಿಸಿ ಅದೃಶ್ಯರಾದರು.

## ಮೈತ್ರೇಯರ ಆಗಮನ

ಮೈತ್ರೇಯರು ಮಹಾತಪಸ್ವಿಗಳು. ಅಪರೋಕ್ಷಜ್ಞಾನಿಗಳಾದ ಅವರಿಗೆ ಭಗವಂತನ ಸಂಕಲ್ಪ ತಿಳಿದಿತ್ತು. ''ದೇವಾ! ನಾನು ನಿನ್ನ ಪ್ರೇರಣೆಯಂತೆ ಹಸ್ತಿನಾವತಿಗೆ ಹೋಗುತ್ತೇನೆ. ನೀನು ನಡೆಸಿದಂತೆ ನಡೆದು ಮುಖ್ಯಪ್ರಾಣನೊಡನೆ ನೀನು ನುಡಿಸಿದಂತೆ ನುಡಿದು ನಿನಗೆ ನನ್ನ ಸೇವೆಯನ್ನು ಅರ್ಪಣ ಮಾಡುತ್ತೇನೆ'' ಎಂದು ಪ್ರತಿಜ್ಞೆಮಾಡಿ ಹೊರಟರು.

ಮೈತ್ರೇಯರ ಆಗಮನದಿಂದ ಧೃತರಾಷ್ಟ್ರನು ಆನಂದಪಟ್ಟು ಅವರನ್ನು ಆದರಿಸಿ ಸತ್ಕಾರಮಾಡಿ ಮಕ್ಕಳೆಲ್ಲರನ್ನು ಕರೆಯಿಸಿಕೊಂಡು ಎಲ್ಲರಿಂದಲೂ ಋಷಿಗಳಿಗೆ ಪಾದಪೂಜೆ ಮಾಡಿಸಿದನು.

ಮೈತ್ರೇಯರು ''ಧೃತರಾಷ್ಟ್ರಾ! ನಿನಗೆ ಪಾಂಡವರ ಸತ್ಯವಾದ ಪರಾಕ್ರಮ ತಿಳಿದಿದೆ. ಆದಾಗ್ಯೂ ಧರ್ಮವನ್ನು ಕಾಡುಪಾಲು ಮಾಡಿ ಅಧರ್ಮವನ್ನು ನಿನ್ನಬಳಿ ಇಟ್ಟುಕೊಂಡಿರುವಿ. ಅಮೃತವನ್ನು ಬಿಸುಟು ಹಾಲಾಹಲವಿಷವನ್ನು ಬಳಿಇಟ್ಟುಕೊಂಡರೆ ಅದರಿಂದ ನಿನಗೆ ಸುಖಸಿಕ್ಕೀತೆ? ಯೋಚಿಸು. ಭೀಮಸೇನನು ನಿನ್ನಮಗನ ಪರಾಕ್ರಮಕ್ಕೆ ಅಂಜಿ ಓಡಿಹೋಗಿದ್ದಾನೆಂದು ತಿಳಿಯಬೇಡ. ಪಾಂಡವರು ಪುರುಷಸಿಂಹಗಳು. ನಿನ್ನಮಕ್ಕಳು ಅವರಮುಂದೆ ನರಿಗಳು. ಅವರು ಇಲ್ಲಿಂದ ಹೊರಟವರೇ ಮೊದಲು ಮಾಡಿದ ಕಾರ್ಯ ಏನೆಂದು ತಿಳಿದರೆ ಅವರ ಪರಾಕ್ರಮ ಎಂತಹದೆಂದು ತಿಳಿಯುತ್ತದೆ. ಭೀಮಸೇನನು ಬಕಾಸುರನ ತಮ್ಮನಾದ ಕೀರ್ಮೀರನೆಂಬ ದೈತ್ಯನು ಅನೇಕರನ್ನು ಕೊಂದು ನರಭಕ್ಷಕನಾಗಿ ಮೆರೆಯುತ್ತಾನೆಂದು ತಿಳಿದು ಅವನ ಸಂಹಾರಕ್ಕಾಗಿಯೇ ಕೀರ್ಮೀರಕಾಡಿಗೆ ಪಾಂಡವರೊಡನೆ ಹೋದನು. ಅಲ್ಲಿ ಆದೈತ್ಯನನ್ನು ಕೊಂದು ಅನೇಕರನ್ನು ಕೊಂದು ತಿನ್ನುತ್ತಿದ್ದ ಅವನ ಸಂಹಾರದಿಂದ ಜನಾರ್ಧನನೂ ಜನರೂ ಸಂತೋಷಪಡುವಂತೆ ಮಾಡಿದನು.

ಧರ್ಮರಾಜನಲ್ಲಿದ್ದ ಅನೇಕ ವಿದ್ವಾಂಸರು ಬ್ರಾಹ್ಮಣರು ಎಲ್ಲರೂ ಧರ್ಮವೇ ತಮಗೆ ಸರಿಯಾದ ಆಶ್ರಯವೆಂದು ತಿಳಿದು ಧರ್ಮರಾಜನನ್ನೇ ಹಿಂಬಾಲಿಸಿ ಹೊರಟು ಹೋಗಿರುವುದರಿಂದ ಅವರೆಲ್ಲರ ರಕ್ಷಣೆಗಾಗಿ ಧರ್ಮರಾಜನು ತನ್ನ ತಪೋಬಲದಿಂದ ಅಕ್ಷಯಪಾತ್ರೆಯನ್ನು ಪಡೆದು ತನ್ನ ಬಳಿ ಇರುವ ಹತ್ತುಸಾವಿರ ಸನ್ಯಾಸಿಗಳನ್ನು ಎಂಭತ್ತೆಂಟು

ಸಾವಿರ ಋಷಿಗಳನ್ನು ಅವರೆಲ್ಲರಿಗೂ ಮೂವತ್ತು ಮೂವತ್ತು ಮಂದಿ ದಾಸರನ್ನು ನಿಯಾಮಕಮಾಡಿ ಇಷ್ಟುಜನರನ್ನೂ ಧರ್ಮರಾಜನು ಸಕಲಸೌಲಭ್ಯದಿಂದ ಸಂರಕ್ಷಿಸುತ್ತಿದ್ದಾನೆ. ಪ್ರತಿನಿತ್ಯವೂ ಲಕ್ಷಗೋದಾನ ಸುವರ್ಣದಾನಾದಿಗಳನ್ನು ತಾರತಮ್ಯಾನುಸಾರ ಬ್ರಾಹ್ಮಣರಿಗೆ ದಾನಮಾಡುತ್ತಿದ್ದಾನೆ. ಅವನು ಕಾಡಿನಲ್ಲಿದ್ದರೂ ತನ್ನ ಧರ್ಮಬಲದಿಂದ ಸಾಮ್ರಾಜ್ಯ ಸುಖವನ್ನೇ ಅನುಭವಿಸುತ್ತಲಿದ್ದಾನೆ. ಪಾಂಡವರನ್ನು ಕಾಡುಪಾಲುಮಾಡಿ ನಾನು ಎಲ್ಲಾ ಸಂಪತ್ತನ್ನೂ ವಶಪಡಿಸಿಕೊಂಡೆನೆಂದು ತಿಳಿದು ಸಂತೋಷಪಡಬೇಡಿರಿ. ಇಷ್ಟರಲ್ಲೇ ಭೀಮನ ಗದೆ ನಿಮ್ಮ ಬೆನ್ನಟ್ಟಿ ಬರುತ್ತದೆ'' ಎಂದು ಶ್ರೀಹರಿಪ್ರೇರಣಾನುಸಾರ ದುಷ್ಟರ ದುರಾಗ್ರಹವನ್ನು ಕೆರಳಿಸುವ ಮಾತನ್ನಾಡಿದರು.

ದುರ್ಯೋಧನನು ಬರಲಿ ಬರಲಿ ನಾವೂ ಅದಕ್ಕೇ ಕಾದಿದ್ದೇವೆ ಎಂದು ತೊಡೆತಟ್ಟಿ ಗಹಗಹಿಸಿ ವ್ಯಂಗ್ಯನಗು ನಕ್ಕನು.

ಆಗ ಮೈತ್ರೇಯರು ''ಎಲಾ ದುರ್ಯೋಧನಾ, ನನ್ನ ಮಾತನ್ನು ನಿರಾಕರಿಸಿ ಭೀಮನ ಗದೆಯನ್ನು ಲಕ್ಷಿಸದೆ ಅಟ್ಟಹಾಸದಿಂದ ತೊಡೆತಟ್ಟಿ ಹಾಸ್ಯಮಾಡಿದ ನಿನ್ನ ತೊಡೆಯನ್ನು ಭೀಮಸೇನನು ಇಷ್ಟರಲ್ಲೇ ಮುರಿದು ಬೀಳಿಸಿ ತನ್ನ ಎಡಗಾಲಿನಿಂದ ಶ್ರೀಹರಿನಿಂದಕನಾದ ನಿನ್ನನ್ನು ಒದೆಯುವ ಅವನ ಸಾಹಸ ಬೇಗ ನಡೆಯುತ್ತದೆ. ಭೀಮಸೇನನಿಗೇ ಜಯವೆಂದೂ ನಾನೂ ನಿನಗೆ ತಿಳಿಸಲೆಂದೇ ಬಂದಿದ್ದೇನೆ'' ಎಂದು ಖಡಾಖಂಡಿತವಾಗಿ ತಿಳಿಸಿದರು. ಮೈತ್ರೇಯರ ಬೆಂಕಿಯ ಕಿಡಿಗಳಂತಹ ನುಡಿಗಳಿಗೆ ಧೃತರಾಷ್ಟ್ರನ ಧೈರ್ಯ ಸುಟ್ಟು ಭಸ್ಮವಾಯಿತು. ಮೈತ್ರೇಯರನ್ನು ಅಂಗಲಾಚಿ ಬೇಡಿದನು. ಮೈತ್ರೇಯರು ಮಾತನಾಡದೆ ಹೊರಟುಹೋದರು. ಧೃತರಾಷ್ಟ್ರನ ಚಿಂತೆ ಬರಬರುತ್ತ ಅಧಿಕವಾಯಿತು. ಭೀಮಬಲ, ಶ್ರೀಕೃಷ್ಣನ ಮಹಿಮೆ, ಋಷಿಶಾಪ, ಇದೆಲ್ಲದರಿಂದಲೂ ನನ್ನ ಮಕ್ಕಳು ಖಂಡಿತ ಉಳಿಯತಕ್ಕವರಲ್ಲವೆಂದು ದುಃಖದಿಂದ ತಪ್ತನಾದನು.

## ಸರ್ವವ್ಯಾಪ್ತ ಶ್ರೀಕೃಷ್ಣ ಪಾಂಡವರಿಗೆ ಪ್ರತ್ಯಕ್ಷನಾದ

ಶ್ರೀಕೃಷ್ಣನು ಪಾಂಡವಕೌರವರಿಗೆ ಜೂಜಾಟನಡೆದಿದ್ದು ಪಾಂಡವರು ಕಾಡು ಸೇರಿದ್ದು ಯಾವುದನ್ನು ಅರಿಯದವನಂತೆ ಸಾಲ್ವನೊಡನೆ ಸಮರ ನಡೆಸುತ್ತ ಇದ್ದುಬಿಟ್ಟಿದ್ದನು. ನಂತರ ಪಾಂಡವರ ವನವಾಸ ಭೀಮನು ಕಿರ್ಮೀರವನದಲ್ಲಿ ಕಿರ್ಮೀರನನ್ನು ಕೊಂದಿದ್ದು ಎಲ್ಲಾ ವಿಚಾರವನ್ನು ದೇಶದೇಶಗಳಲ್ಲಿ ಹರಡುವಂತೆ ಮಾಡಿದ ಮಹಾಮಹಿಮನೂ ತಾನೇ ಆಗಿದ್ದರೂ ಏನೂ ಅರಿಯದವನಂತೆ ತಾನೂ ಎಲ್ಲರೊಡನೆ ಪಾಂಡವರ ವೃತ್ತಾಂತವನ್ನು ಹೊಸದಾಗಿ ತಿಳಿದವನಂತೆ ನಟಿಸುತ್ತ ಸತ್ಯಭಾಮಾದೇವಿಯೊಂದಿಗೆ ಬಲರಾಮನೊಡಗೂಡಿ ಪಾಂಡವರ ಬಳಿಗೆ ಬಂದನು.

ಶ್ರೀಕೃಷ್ಣನು ಬಂದದಿನವೇ ದ್ರುಪದರಾಜ ಧೃಷ್ಟದ್ಯುಮ್ನ ಮೊದಲಾದವರೂ ಬಂದು ಸೇರಿದರು. ಶ್ರೀಕೃಷ್ಣನು ಪಾಂಡವರಿಂದ ಸಕಲ ಪೂಜಾದಿಗಳನ್ನು ಸ್ವೀಕಾರಮಾಡಿ ನಂತರ ಎಲ್ಲವನ್ನು ವಿವರವಾಗಿ ಕೇಳಿ ತಿಳಿದನು. ಆಮೇಲೆ ನಾನು ದ್ವಾರಕೆಯಲ್ಲೇ ಇದ್ದಿದ್ದರೆ ನಿಮಗೆ ಜೂಜಾಟದ ಪೀಡೆ ಉಂಟಾಗುತ್ತಿರಲಿಲ್ಲ. ತಕ್ಷಣ ಬಂದು ತಪ್ಪಿಸುತ್ತಿದ್ದೆನು. ನಾನು ಸಾಲ್ವನೊಡನೆ ಯುದ್ಧಕ್ಕೆ ಹೋಗಿದ್ದಕಾರಣ ನನಗೆ ಈ ವಿಚಾರ ಗೊತ್ತಾಗಲಿಲ್ಲ. ಇಷ್ಟು ಅನರ್ಥಕ್ಕೆ ಕಾರಣವಾಯಿತು. ಎಂದು ಸಾಮಾನ್ಯ ನರನಂತೆ ನಟನೆಮಾಡುತ್ತ ಕೋಪವನ್ನು ಮುಖಕಮಲದಲ್ಲಿ ತೋರ್ಪಡಿಸಿ ಈಗಲೇ ನಾನು ಆ ಪಾಪಿಗಳನ್ನು ಧ್ವಂಸಮಾಡಿ ಬರುತ್ತೇನೆ'' ಎಂದು ಹಸ್ತಿನಾವತಿಗೆ ಹೊರಟವನಂತೆ ತೋರ್ಪಡಿಸಿದಾಗ ಧರ್ಮರಾಜನು ''ಸ್ವಾಮೀ! ಕೃಷ್ಣಾ! ನಾನು ಆಟದಲ್ಲಿ ಸೋತು ಪ್ರತಿಜ್ಞೆಯಂತೆ ಕಾಡಿಗೆ ಬಂದಿದ್ದೇನೆ. ಅದಕ್ಕೆ ಭಂಗ ಉಂಟಾಗುವ ಕಾರ್ಯ ಮಾಡಬೇಡ'' ಎಂದು ಕೃಷ್ಣನ ಪಾದಗಳ ಮೇಲೆಬಿದ್ದು ಪ್ರಾರ್ಥಿಸಿಕೊಂಡನು.

ಆಗ ದ್ರೌಪದಿಯು ಕೆದರಿದ ಕೇಶರಾಶಿಯುಳ್ಳವಳಾಗಿ ಜ್ವಲಿಸುತ್ತ ಶ್ರೀಕೃಷ್ಣನ ಸಮೀಪಕ್ಕೆ ಓಡಿಬಂದು ನಮಸ್ಕಾರಮಾಡಿ ''ಸ್ವಾಮೀ! ಅಚಿಂತ್ಯಮಹಿಮಾ! ಚತುರ್ವಿಧನಾಶರಹಿತಾ! ರಮಾಬ್ರಹ್ಮಾದಿಗಳ ಪ್ರಭೂ! ನೀನು ಸರ್ವಜ್ಞಮೂರ್ತಿ ಆಗಿದ್ದರೂ ನನ್ನತಂದೆಯ ಮುಂದೆ ಅನುಭವಿಸಿದ ಸಂಕಟವನ್ನು ತೋಡಿಕೊಳ್ಳಬೇಕೆಂಬ ಆತಂಕದಿಂದಲೂ ನನ್ನ ಸುಖದುಃಖಗಳೆಲ್ಲವೂ ನಿನ್ನ ಅಧೀನವಾದ್ದರಿಂದ ಅದನ್ನು ನಿನಗೇ ಅರ್ಪಣಮಾಡಬೇಕೆಂದೂ ಬಂದಿದ್ದೇನೆ. ದುರ್ಯೋಧನಾದಿ ದೈತ್ಯಭಾವದ ದುಷ್ಟರೆಲ್ಲರೂ ಸೇರಿ ಧರ್ಮರಾಜನನ್ನು ಮೋಸದಾಟಕ್ಕೆ ಸೆಳೆದುಕೊಂಡು ಅವನಿಂದ ಸಕಲವನ್ನೂ ಕಸಿದುಕೊಂಡಿದ್ದಷ್ಟೇ ಅಲ್ಲದೆ ತಮ್ಮಂದಿರೊಡನೆ ನನ್ನನ್ನು ಪಣಕ್ಕೆ ಒಡ್ಡುವಂತೆ ಮಾಡಿ ಪಾಶವಿದ್ಯದಿಂದ ಎಲ್ಲರನ್ನು ಗೆದ್ದು ನನ್ನ ಬಳಿಗೆ ದುಶ್ಯಾಸನನನ್ನು ರಾಜಸಭೆಗೆ ಎಳೆತರುವಂತೆ ಹೇಳಿಕಳುಹಿಸಿದನು. ನಾನು ರಜಸ್ವಲೆಯಾಗಿರುವ ಕಾರಣ ರಾಜಸಭೆಗೆ ಬರಬಾರದೆಂದು ಹೇಳಿದರೂ ನನ್ನನ್ನು ಬಿಡದೆ ಮುಂದಲೆ ಹಿಡಿದೆಳೆದೊಯ್ದನು. ಅನೇಕ ಹಿರಿಯರು, ಗುರುಗಳು ಎಲ್ಲರೂ ಭಯಭೀತರಾಗಿ ಅವರ ದುಷ್ಕಾರ್ಯಕ್ಕೆ ಅಂಜಿ ಕುಳಿತಿರುವಾಗ ಎಲ್ಲರಮುಂದೆ ಕರ್ಣಾದಿಗಳು ಆಡಿದ ನೀಚವಾಕ್ಯಗಳು ವಿಷದ ಹನಿಗಳಂತೆ ನನ್ನ ಹೃದಯವನ್ನು ಹೊಕ್ಕರೂ ನಿನ್ನ ಕರುಣಾಮೃತದಿಂದ ಅದನ್ನೆಲ್ಲವನ್ನು ತುಚ್ಛೀಕರಿಸಿ ವೀರಭಾವದಿಂದ ಇದಿರಿಸುವ ಶಕ್ತಿ ನನಗೆ ನೀನೇ ಕರುಣಿಸಿರುವಿ ಎಂದು ನಂಬಿದ್ದೇನೆ. ನಂತರ ದುರ್ಯೋಧನನು ತನ್ನ ತೊಡೆಯನ್ನು ಹಾಸಿ ನನ್ನನ್ನು ವಿಲಾಸಿನಿಯರನ್ನು ಕರೆದಂತೆ ಕರೆದಾಗ ಭೀಮಸೇನನು ಆಗ ಉಗ್ರನಾಗಿ ತೊಡೆಹಾಸಿ ದ್ರೌಪದಿಯನ್ನು ಕರೆದಿರುವಿ. ಅದೇ ತೊಡೆಯನ್ನು ನನ್ನ ಗದೆಯಿಂದ ಬಡಿದು ಬೀಳಿಸುತ್ತೇನೆ'' ಎಂದು ಪ್ರತಿಜ್ಞೆ ಮಾಡಿದನು.

ಆಗ ದುರ್ಯೋಧನನು ಮತ್ತಷ್ಟು ಕ್ರೋಧವಶನಾಗಿ ''ದುಶ್ಯಾಸನಾ! ಈ ದ್ರೌಪದೀ ಈಗ ನನ್ನ ತೊತ್ತು. ಈಕೆಯ ಸೀರೆಯನ್ನು ಸೆಳೆದು ಮಾನಭಂಗ ಮಾಡು'' ಎಂದನು. ಆಗ ಯಾರೂ ನನ್ನ ರಕ್ಷಣೆಗೆ ಬರಲಿಲ್ಲ. ಸರ್ವಕಾಲದಲ್ಲೂ ಸಕಲ ವಿಪತ್ತುಗಳನ್ನು ಪರಿಹಾರಮಾಡುವ ಪ್ರಭೂ ನೀನೊಬ್ಬನೇ ಮತ್ತಾರೂ ನನ್ನನ್ನು ರಕ್ಷಿಸಲಾರರೆಂಬ ದೃಢಭಾವ ನನ್ನದಾದ್ದರಿಂದ ನಿನ್ನನ್ನೇ ಮೊರೆಯಿಟ್ಟು ಪ್ರಾರ್ಥಿಸುತ್ತ ಅಸ್ವತಂತ್ರಳಾದ ನಾನು ಯಾವ ಪ್ರಯತ್ನವನ್ನು ಮಾಡದೆ ಸುಮ್ಮನೆ ಧ್ಯಾನಮಗ್ನಳಾದೆನು. ಆಗ ನನಗೆ ಅಕ್ಷಯಾಂಬರವನ್ನಿತ್ತು ಕಾಪಾಡಿದ ನನ್ನ ನಿಜವಾದ ಸ್ವಾಮೀ ನೀನೇ ಆಗಿರುವಿ'' ಎಂದು ಹೇಳುತ್ತ ಕೆದರಿದ ಕೂದಲಿಂದ ಕೆರಳಿದ ಸಿಂಹದಂತೆ ಆಗಿ ತನ್ನ ಪಾದಗಳ ಮೇಲೆ ಬಿದ್ದು ಹೊರಳಾಡುತ್ತಿರುವ ದ್ರೌಪದಿಯನ್ನು ಎಬ್ಬಿಸಿ ''ದ್ರೌಪದೀ! ಸಿರಿಮುಡಿಯಿಂದ ಅಲಂಕೃತಳಾಗಿ ಸಿರಿದೇವಿಯಂತೆ ಶೋಭಿಸುತ್ತಿದ್ದ ನಿನ್ನ ಪವಿತ್ರಮುಡಿಯನ್ನು ಬಿಚ್ಚಿಹರಡಿದ ಆ ಪಾಪಿಗಳು ರಣರಂಗದಲ್ಲಿ ನಿನ್ನ ಪತಿಯಿಂದ ಸತ್ತುಬಿದ್ದಾಗ ನಿನ್ನ ಶತೃಗಳ ಹೆಂಡಂದಿರು ತಮ್ಮ ಪತಿಗಳ ಶವದಮೇಲೆ ಬಿಡುಗೂದಲಿಂದ ಬಿದ್ದು ಹೊರಳಾಡುವುದನ್ನು ಇಷ್ಟರಲ್ಲೇ ನೋಡುತ್ತಿ ದುಃಖಿಸಬೇಡ'' ಎಂದು ಹೇಳುತ್ತ ತನ್ನ ಅಮೃತವಚನಗಳಿಂದ ಮಹಾತ್ಮಳಾದ ದ್ರೌಪದಿಯನ್ನು ಸಂತೋಷಪಡಿಸಿದನು.

ನಂತರ ಧರ್ಮರಾಜನನ್ನು ಕುರಿತು ಧರ್ಮರಾಯಾ ನಾನು ದ್ವಾರಾವತಿಯಲ್ಲಿದ್ದಿದ್ದರೆ ಜೂಜಿನ ಅನರ್ಥ ನಡೆಯುತ್ತಿರಲಿಲ್ಲ. ನಾನು ಸಾಲ್ವನ ಸಂಹಾರಕ್ಕಾಗಿ ಹೊರಟಾಗ ಪಾಪಿಗಳು ಸಮಯಕಾದು ನಿನ್ನನ್ನು ವಂಚಿಸಿದ್ದಾರೆ'' ಎಂದು ಸ್ವಾಮಿಯ ನರಲೋಕವಿಡಂಬನೆಯಿಂದ ಮಾತನಾಡಿದರೆ ಧರ್ಮರಾಜ ಭಗವಂತನ ಮಹಿಮಾ ರಹಸ್ಯವನ್ನು ತಿಳಿಯದೆ ''ಕೃಷ್ಣಾ! ನೀನು ಇಲ್ಲದ ಕಾರಣದಿಂದಲೇ ನಾವು ಅಮೋಘ ಸಂಕಟಕ್ಕೀಡಾದೆವು'' ಎಂದು ತಾನೂ ಮರುಗಿದನು.

ಧರ್ಮರಾಜನು ಶ್ರೀಕೃಷ್ಣನ ಮಾತಿಗೆ ಭ್ರಾಂತಿಗೊಂಡು ಸ್ವಾಮಿಗೆ ಅವ್ಯಾಪ್ತಿಯ ಜ್ಞಾನದಿಂದ ದೋಶಕ್ಕೊಳಗಾದನು. ಆದ್ದರಿಂದಲೇ ಧರ್ಮರಾಜನು ತನಗೆ ಯೋಗ್ಯತೆ ಮೀರಿದ ರಾಜಸೂಯಯಾಗದಲ್ಲಿ ಪುಣ್ಯಸಂಪಾದನೆ ಮಾಡಿದ್ದರೂ ಹ್ರಾಸವಾಗಿ ಭೀಮಾದಿಗಳಿಗೆ ಸೇರಿತು. ಏಕೆಂದರೆ ಭೀಮನು ಶ್ರೀಕೃಷ್ಣ ಅತೀತ. ಆಗಮ್ಯ ಭೂತಭವಿಷ್ಯದ್ವರ್ತಮಾನವೆಲ್ಲವನ್ನೂ ತಿಳಿದ ಸರ್ವಜ್ಞಮೂರ್ತಿ. ಸರ್ವವ್ಯಾಪ್ತ ಎಂಬ ಸುಜ್ಞಾನವನ್ನು ಚೆನ್ನಾಗಿ ಅರಿತವನಾದ್ದರಿಂದ ಅವನು ನಿರ್ದೋಶಿಯಾದನು. ಶ್ರೀಕೃಷ್ಣನು ಭೀಷ್ಮದ್ರೋಣ ಧೃತರಾಷ್ಟ್ರಾದಿಗಳ ಮುಂದೆ ''ನೀವು ಪಾಂಡವರನ್ನು ಕಾಡಿಗೆ ಅಟ್ಟಿ ನನಗೆ ವಿರೋಧವಾದ ಕಾರ್ಯವನ್ನೇ ಮಾಡಿದ್ದೀರಿ'' ಎಂದು ಹೇಳಿದಾಗ ಭೀಷ್ಮಾದಿಗಳು ಕಲಿಯ ಆವೇಶದಿಂದ ಶ್ರೀಕೃಷ್ಣ ನಿಷ್ಪಕ್ಷಪಾತಿ ಧರ್ಮ ಪರವಹಿಸಿ ಮಾತನಾಡಿದ್ದಾನೆಂದು ತಿಳಿಯದೆ ಶ್ರೀಕೃಷ್ಣನು ಪಾಂಡವರ ಮೇಲಿನ ಅಭಿಮಾನದಿಂದ

ನಮ್ಮನ್ನು ಅಪ್ರೀತಿಯಿಂದ ನೋಡಿದನೆಂದು ತಿಳಿದಕಾರಣ ಅವರ ಪುಣ್ಯ ಹ್ರಾಸವಾಗಿ ಭೀಮಾದಿಗಳಿಗೆ ಸೇರಿತು. ಅವರು ವೇದವ್ಯಾಸರನ್ನು ನಾರಾಯಣನೇ ಎಂದು ತಿಳಿಯದೆ ಅಜ್ಞಾನದಿಂದ ನಡೆದಿದ್ದ ಕಾರಣದಿಂದಲೂ ಪುಣ್ಯಕ್ಷಯವಾಯಿತು. ದುರ್ಯೋಧನಾದಿಗಳು ವೇದವ್ಯಾಸರು ಒಬ್ಬ ಋಷಿ ಮಾತ್ರ ಎಂದು ತಿಳಿದಕಾರಣ ಅವರಿಗೆ ಪಾಪಬುದ್ಧಿ ಕ್ಷಣಕ್ಷಣಕ್ಕೂ ವೃದ್ಧಿಯಾಗುತ್ತಿತ್ತು.

ಧರ್ಮರಾಜನು ಮೋಸದ ಜೂಜಿನಲ್ಲೂ ಕ್ಷಮಾಗುಣ ತೋರಿಸಿದ್ದು ದೋಶವೆಂದು ಸಂದೇಹಪಡಬಾರದು. ಬಲಿಷ್ಠರನ್ನು ಬಲದಿಂದ ಸೋಲಿಸಲಾಗದಿದ್ದರೆ ಕ್ಷಮಾ ಎಂಬ ಖಡ್ಗದಿಂದ ಕೊಲ್ಲಬಹುದು ಎಂದು ತಿಳಿದನು. ಅದಲ್ಲದೆ ಭೀಮನು ಮುಂದೆ ತನ್ನ ಬಾಹುವಿಕ್ರಮದಿಂದ ಈ ಪಾಪಿಗಳನ್ನು ಧ್ವಂಸಮಾಡಿ ಭಗವದರ್ಪಣ ಮಾಡುತ್ತಾನೆ ಎಂಬುದನ್ನು ತಿಳಿದಿದ್ದನು. ದ್ರೌಪದಿಯು ನೀಚರು ಸಭೆಯಮುಂದೆ ಮಾನಭಂಗ ಮಾಡಲೆಳಿಸಿದರೂ ಅವರಿಗೆ ತಕ್ಕಶಿಕ್ಷೆ ಆಗಲೇ ಕೊಟ್ಟು ಧರ್ಮವನ್ನು ಪ್ರಕಾಶ ಪಡಿಸಲಿಲ್ಲ. ಏಕೆಂದರೆ ಭಾರತೀದೇವಿಗೆ ಆ ದುಷ್ಟರನ್ನು ಕ್ಷಣಮಾತ್ರದಲ್ಲಿ ಸುಟ್ಟುಹಾಕುವುದು ಹೆಚ್ಚಿನ ಮಾತಾಗಿರಲಿಲ್ಲ. ಆದರೆ ಭೀಮಸೇನನ ಪರಾಕ್ರಮ ದೇವರದೇವನಾದ ಶ್ರೀಕೃಷ್ಣನ ಮಹಿಮೆ ಲೋಕದ ಜನರು ತಿಳಿಯಬೇಕೆಂಬ ಧರ್ಮದಿಂದ ತನ್ನ ತಪೋಶಕ್ತಿಯನ್ನು ಪ್ರಯೋಗಮಾಡದೆ ಶ್ರೀಕೃಷ್ಣನನ್ನು ಧ್ಯಾನಮಾಡಿ ಶತೃಗಳನ್ನು ಜಯಿಸಿದಳು.

ಹೀಗೆ ಶ್ರೀಕೃಷ್ಣನ ಮಹಿಮೆ ಅನಂತವಾದದ್ದು. ಅವರವರ ಯೋಗ್ಯತೆಗೆ ತಕ್ಕಹಾಗೆ ಜ್ಞಾನಾಜ್ಞಾನಗಳನ್ನು ಕೊಟ್ಟು ಲೌಕಿಕ ವ್ಯಾಪಾರಗಳನ್ನು ನಡೆಸಿ ಪಾಪಾತ್ಮರನ್ನು ಅಂಧಂತಮಸ್ಸಿಗೆ ಹಾಕುತ್ತಾನೆ. ಧರ್ಮಾತ್ಮರನ್ನು ಪುಣ್ಯಸಾಧನೆ ಮಾಡಲಿಕ್ಕೆ ಪ್ರೇರಣೆಮಾಡುತ್ತಾನೆ.

ಶ್ರೀಕೃಷ್ಣನು ಪಾಂಡವರ ಜೊತೆಗೆ ಕೆಲವುದಿನಗಳಿದ್ದು ಅವರನ್ನು ಸಂತೋಷಪಡಿಸಿದನು. ಸತ್ಯಭಾಮಾದೇವಿಯು ದ್ರೌಪದಿಗೆ ಸ್ತ್ರೀಧರ್ಮದ ರಹಸ್ಯಗಳನ್ನು ಉಪದೇಶಮಾಡಿ ಸಮಾಧಾನಪಡಿಸುತ್ತಿದ್ದಳು. ಧೃಷ್ಟದ್ಯುಮ್ನನು ತಂಗಿಯಾದ ದ್ರೌಪದಿಯನ್ನು ಸಮಾಧಾನದ ಮಾತುಗಳಿಂದ ಸಂತೋಷಪಡಿಸಿ ಆಕೆಯ ಐದುಮಂದಿ ಪುತ್ರರನ್ನೂ ತನ್ನ ಜೊತೆಯಲ್ಲಿ ಪಾಂಚಾಲನಗರಿಗೆ ಕರೆದುಕೊಂಡು ಹೋದನು.

ಧರ್ಮರಾಜನು ದುಷ್ಟಕೇತು ಎಂಬ ರಾಜನತಂಗಿ ದೇವಕಿ ಎಂಬುವಳನ್ನು ವಿವಾಹವಾಗಿದ್ದನು. ಆಕೆಯನ್ನು ದುಷ್ಟಕೇತು ತವರುಮನೆಗೆ ಕರೆದುಕೊಂಡು ಹೋದನು.

ನಕುಲನು ಮದ್ರದೇಶದ ಅರಸನಾದ ಶಲ್ಯನಪುತ್ರಿಯನ್ನು ವಿವಾಹವಾಗಿದ್ದನು. ಸಹದೇವನು ಜರಾಸಂಧನ ಮಗಳನ್ನು ವಿವಾಹವಾಗಿದ್ದನು. ನಕುಲನಿಗೆ ಪಾರ್ವತಿ ಎಂಬ ಮತ್ತೊಬ್ಬ ಪತ್ನಿಯೂ ಇದ್ದಳು. ಪೂರ್ವದಲ್ಲಿ ಈಕೆ ತಿಲೋತ್ತಮೆ ಎಂಬ ಹೆಸರಿನ ಅಪ್ಸರೆ

ಆಗಿದ್ದಳು. ಇವಳು ಅನುರಾಯನ ಮಗಳು. ಇವರು ಮೂವರೂ ಕುಂತೀದೇವಿಯ ಬಳಿ ಹಸ್ತಿನಾವತಿಯಲ್ಲೇ ಇದ್ದರು. ಅರ್ಜುನನ ಪತ್ನಿ ಸುಭದ್ರೆಯನ್ನೂ ಆಕೆಯಮಗ ಅಭಿಮನ್ಯುವನ್ನೂ ಶ್ರೀಕೃಷ್ಣನು ದ್ವಾರಕಾನಗರಕ್ಕೆ ಕರೆದುಕೊಂಡುಹೋದನು.

ಧರ್ಮರಾಜನು ಸದಾ ಸಚ್ಛಾಸ್ತ್ರಾಭ್ಯಾಸ ಸತ್ಕಥಾಶ್ರವಣ ಜಪತಪಾದಿಗಳನ್ನು ಋಷಿಮುನಿಗಳೊಂದಿಗೆ ಆಚರಿಸುತ್ತ ಆನಂದದಿಂದಿದ್ದನು. ಭೀಮನು ಧರ್ಮರಾಜನ ಬ್ರಹ್ಮಚರ್ಯ ನಿಷ್ಠೆಯ ತೇಜಸ್ಸು ಅವನ ತಪಸ್ಸು. ಎಲ್ಲದರ ಜೊತೆಗೆ ಅಮೋಘವಾದ ದಾನಧರ್ಮಾದಿಗಳು ಇವೆಲ್ಲ ಸತ್ಸಾಧನೆಗಳಿಂದ ಅವನು ಅನುಭವಿಸುತ್ತಿದ್ದ ಆನಂದವನ್ನು ನೋಡಿ ಧರ್ಮರಾಜನು ರಾಜ್ಯಸುಖವನ್ನು ತೃಣೀಕರಿಸಿ ಈ ವನಸಾಮ್ರಾಜ್ಯದ ಸುಖಕ್ಕಿಂತಲೂ ಅಧಿಕ ಸುಖವೇ ಇಲ್ಲವೆಂದು ಬಾರಿಬಾರಿಗೂ ಹೇಳುತ್ತ ನಲಿಯುತ್ತಿರುವುದನ್ನು ನೋಡಿದರೆ ರಾಜ್ಯಭಾರದ ಚಿಂತೆಯನ್ನೇ ಪೂರ್ಣವಾಗಿ ಮರೆತಂತಿದೆ. ಮಣ್ಣಿನ ಭೂಮಿಗಾಗಿ ಗುರುಹಿರಿಯರ ಸಂಗಡ ಜಗಳಕ್ಕೆ ನಿಂತು ಕೊಲೆಗಡುಕರಂತೆ ಎದುರಾಳಿಗಳನ್ನು ಕೊಂದು ಅಶಾಶ್ವತ ಸಂಪತ್ತಿಗಾಗಿ ಬಡಿದಾಡುವುದೇ ಬೇಡ. ಇದೇ ನಮಗೆ ಶಾಶ್ವತ ಸುಖವಾಗಿರಲಿ'' ಎಂದುಬಿಟ್ಟರೆ ದೈತ್ಯಸಂಹಾರ ಭೂಭಾರಹರಣಕ್ಕಾಗಿ ನಾವು ಅವತಾರ ಮಾಡಿದ್ದು ವ್ಯರ್ಥವಾಗುತ್ತದೆ. ಹಾಗಾಗದಂತೆ ಅವನ ಬಾಯಿಂದ ವನವಾಸ ಅಜ್ಞಾತವಾಸಗಳ ನಂತರ ರಾಜ್ಯಭಾರ ಮಾಡಬೇಕು. ಎಂಬ ಪ್ರತಿಜ್ಞಾವಾಕ್ಯ ಹೊರಡುವಂತೆ ಮಾಡಿ ಮುಂದಿನ ಭಗವತ್ಕಾರ್ಯಸಾಧನೆಗೆ ಕುಂದು ಬರದಂತೆ ಮಾಡಬೇಕೆಂದು ಯೋಚಿಸಿದನು.

ದ್ರೌಪದಿಯನ್ನು ಕುರಿತು ''ದ್ರೌಪದೀ ನೀನು ಧರ್ಮರಾಜನ ಬಳಿಗೆ ಹೋಗಿ 'ಧರ್ಮರಾಜಾ! ನಾವು ಕೌರವರ ಮೋಸದಿಂದ ವನವಾಸಕ್ಕೆ ಬಂದಿದ್ದೇವೆ. ಮತ್ತಾವ ವ್ರತದೀಕ್ಷೆಯಿಂದಲೂ ಬಂದಿಲ್ಲ. ಮೋಸಗಾರರನ್ನು ಮೋಸದಿಂದಲೇ ಸೋಲಿಸಿ ಧರ್ಮಪಾಲನೆ ಮಾಡಬೇಕು. ದುರ್ಜನರ ಬಳಿ ಸಜ್ಜನಿಕೆ ಸತ್ಯ ಮೊದಲಾದ ಧರ್ಮಗಳಿಂದ ನಡೆದರೆ ಅದು ಅಧರ್ಮವೇ ಆಗುತ್ತದೆ. ಆದ್ದರಿಂದ ನಾವೀಗ ಹನ್ನೆರಡು ತಿಂಗಳನ್ನು ಕಳೆದಿದ್ದೇವೆ. ಅದನ್ನೇ ಹನ್ನೆರಡು ವರ್ಷವೆಂದು ತಿಳಿದರೆ ತಪ್ಪಾಗುವುದಿಲ್ಲ. ಒಂದು ತಿಂಗಳು ಕಳೆದರೆ ಅಜ್ಞಾತವಾಸದ ಒಂದುವರ್ಷದ ಅವಧಿಯೂ ಮುಗಿಯಿತೆಂದು ತಿಳಿದು ವೈರಿಗಳನ್ನು ಇದಿರಿಸಿ ರಾಜ್ಯವನ್ನು ವಶಮಾಡಿಕೊ' ಎಂಬ ಅರ್ಥದಿಂದ ಮಾತನಾಡು. ಹೋಗು'' ಎಂದು ಹೇಳಿದನು. ದ್ರೌಪದೀದೇವಿಗೆ ಪತಿಯ ಮನದಿಂಗಿತ ತಿಳಿಯಿತು. ಅದಕ್ಕೆ ತಕ್ಕಮಾತನ್ನೇ ಆಡಲು ಧರ್ಮರಾಜನಬಳಿ ಹೋದಳು. ಧರ್ಮರಾಜನನ್ನು ಕುರಿತು ''ಮಹಾರಾಜಾ! ರಾಜನೀತಿಯನ್ನು ಅರಿತವರಾದ ತಾವು ದುಷ್ಕೃತನದಿಂದ ಧರ್ಮವನ್ನೇ ನಿರ್ಮೂಲಮಾಡಲಿಚ್ಛಿಸುವ ಪಾಪಿಗಳಲ್ಲೂ ಹೀಗೆ ಕ್ಷಮಾಗುಣವನ್ನು ತೋರಿಸುತ್ತಿರುವುದು ಸರಿಯೆ? ಅರಸರಿಗೆ ಕ್ಷಮಾಗುಣ ಮಿತಿಮೀರಿದರೆ ದುಷ್ಟಶಿಕ್ಷಣವೇ ಇಲ್ಲದಂತಾಗಿ

ಪಾಪಾಕರ್ಮಗಳಿಗೆ ಎಡೆಮಾಡಿಕೊಟ್ಟಂತಾಗುತ್ತದೆ. ರಾಜರಿಗೆ ಖಂಡನೆ ಮಂಡನೆಗಳೆರಡೂ ಇದ್ದಾಗಮಾತ್ರ ಧರ್ಮಧ್ವಜ ನೆಲೆನಿಲ್ಲಲು ಸಾಧ್ಯ'' ಎಂದಳು.

''ದ್ರೌಪದೀ! ಭೂದೇವಿಯು ತನ್ನ ಮಡಿಲಲ್ಲಿಟ್ಟು ಸಾಕುವ ಮಕ್ಕಳು ತನ್ನ ತೊಡೆಯಮೇಲೇ ಎಷ್ಟೋ ಅನ್ಯಾಯ ಅಕರ್ಮಗಳನ್ನು ಮಾಡಿ ಅಸಹ್ಯಕರವಾಗಿ ವರ್ತಿಸಿದರೂ ಕೋಪಗೊಂಡು ಅವರನ್ನು ತಳ್ಳದೆ ಕ್ಷಮಾಗುಣದಿಂದ ಎಲ್ಲವನ್ನೂ ಸಹಿಸಿಕೊಂಡು ಸಂರಕ್ಷಣೆಮಾಡುತ್ತಾಳೆ. ರಾಜರೂ ಸಹಾ ಅದೇರೀತಿ ಭೂತಾಯಿಯಂತೆ ಕ್ಷಮಾಶೀಲರಾಗಿರಬೇಕು.

ದುರ್ಯೋಧನನು ನಮ್ಮನ್ನು ದ್ವೇಶಿಸಲಿಲ್ಲ. ನಮ್ಮ ರಾಜ್ಯಕ್ಕಾಗಿ ಆಸೆಪಟ್ಟು ಅಕಾರ್ಯಮಾಡಿದನು. ಅವನ ಅಭಿಲಾಷೆ ಈಡೇರಿಸಿದ್ದಾಯಿತು. ಅದಕ್ಕಾಗಿ ಮತ್ಸರ ಮಸೆದು ಲೋಕಕ್ಕೇ ಹಾನಿ ಉಂಟಾಗುವಂತೆ ನಡೆಯುವುದು ಪಾಪಕರ್ಮವಾಗುತ್ತದೆ. ನಮ್ಮ ರಾಜ್ಯ ಅವನು ಕಸಿದಿರಬಹುದು. ಆದರೆ ನಮ್ಮ ಆತ್ಮಶಕ್ತಿ ಆನಂದವನ್ನು ಅವನು ಎಂದಿಗೂ ಕಸಿಯಲಾರ. ಸರ್ವೇಶ್ವರನಾದ ಸರ್ವಸ್ವತಂತ್ರನಾದ ಸ್ವಾಮಿ ನಮಗಿರುವಾಗ ಆ ರಾಜ್ಯದಿಂದ ಏನಾಗಬೇಕಾಗಿದೆ'' ಎಂದನು.

ಅದನ್ನು ದ್ರೌಪದಿ ಒಪ್ಪಲಿಲ್ಲ. ''ಅರಸಾ! ನಿಮ್ಮ ಧರ್ಮಪ್ರವಚನ ಸ್ವಾರ್ಥವೆನಿಸುತ್ತದೆ. ಲೋಕದಲ್ಲಿ ಸತ್ಯವಾದುದ್ದನ್ನು ಅಸತ್ಯವೆಂದೂ ಅಸತ್ಯವನ್ನು ಸತ್ಯವೆಂದೂ ಪ್ರಚಾರಮಾಡುವ ಕುಕರ್ಮಿಗಳನ್ನು ಖಂಡಿತ ದಂಡಿಸಲೇಬೇಕು. ಸತ್ಯವಾವುದು? ಅಸತ್ಯವಾವುದೆಂಬ ಸ್ವಚ್ಛಜ್ಞಾನವನ್ನು ಸಜ್ಜನರು ತಿಳಿಯುವಂತೆಯೂ, ಪಾಪಕರ್ಮ ಬಹಳ ಅಪಾಯಕಾರಿ ಎಂಬ ದೃಢನಂಬಿಕೆ ಪ್ರತಿಯೊಬ್ಬರಿಗೂ ಉದಿಸುವಂತೆಯೂ ಮಾಡಿ ಧರ್ಮಪ್ರಕಾಶದಿಂದ ಜಗತ್ತು ಬೆಳಗುವಂತೆ ಮಾಡಿದವನೇ ನಿಜವಾದ ರಾಜನೆನಿಸುವನು. ನಿನ್ನ ಮಾತು ನಿನ್ನ ಆತ್ಮೋದ್ಧಾರಕ್ಕೆ ಮಾತ್ರ ಸಾಧನವಾಗುವಂಥ ಮಾತಾಯಿತು''

''ಅರಸಾ ನೀನು ಹೇಳಿದಂತೆ ಎಲ್ಲರಿಗೂ ಸುಖ-ದುಃಖಗಳನ್ನುಂಟು ಮಾಡತಕ್ಕವನು ನಮ್ಮ ಆರಾಧಕನಾದ ಸ್ವಾಮಿಯೇ ನಿಜ. ರಮಾ, ಬ್ರಹ್ಮ, ರುದ್ರಾದಿಗಳೂ ಅವನ ಆಧೀನರಾಗಿದ್ದಾರೆ. ಅವರ ಉಸಿರಾಟವೇ ಶ್ರೀಹರಿಯ ಅಧೀನವೆಂದಮೇಲೆ ಮನುಷ್ಯರು ಅಸ್ವತಂತ್ರರೆಂದು ಬೇರೆ ಹೇಳಬೇಕಾಗಿಯೇ ಇಲ್ಲ. ಸರ್ವೋತ್ತಮನಾದ ಶ್ರೀಹರಿಯು ಲೋಕಕ್ಕೆ ಶೃತಿ-ಸ್ಮೃತಿಗಳನ್ನು ನಿರ್ಮಾಣಮಾಡಿಕೊಟ್ಟು ಅವನ ಆಜ್ಞಾನುಸಾರ ಅಧಿಕಾರವಿದ್ದವರು. ಸುಕರ್ಮ ಅಕರ್ಮಗಳನ್ನು ಮಾಡಲು ಸ್ವತಂತ್ರ ನೀಡಿದ್ದಾನೆ. ವಿಹಿತ ಕರ್ಮವನ್ನೇ ಮಾಡು. ನಿಷಿದ್ಧ ಕರ್ಮವನ್ನು ಬಿಡು ಎಂದು ಎಲ್ಲವನ್ನೂ ತೋರಿಸಿದ್ದಾನೆ. ಶೃತಿ ಸ್ಮೃತಿಗಳಲ್ಲಿ ಹೇಳಿದಪ್ರಕಾರ ಜೀವಪರಾಧೀನ ಕರ್ತೃವಾಗಿ ಆತ್ಮಾನಾತ್ಮ ವಿಚಾರ ಮಾಡಬೇಕು. ಸುಕರ್ಮ ಅಕರ್ಮಗಳ ಫಲಾಫಲಗಳನ್ನು ಜೀವನೇ ಅನುಭವಿಸುವನಾದ್ದರಿಂದ ನಿಷೇಧ ಕಾರ್ಯಗಳನ್ನು

ಖಂಡಿಸಿ ವಿಧಿಪೂರ್ವಕ ಕರ್ಮಗಳನ್ನು ಆಚರಿಸಲೇಬೇಕು. ಸ್ವಾಮಿ ಸರ್ವತಂತ್ರ ಸ್ವತಂತ್ರನಾದ್ದರಿಂದ ಅವನಿಗೆ ದೋಶ ಲೇಪವಿಲ್ಲ. ಜೀವನಿಗೆ ಪಾಪಪುಣ್ಯಗಳು ಎರಡೂ ಅಂಟಿರುವುದರಿಂದ ಪಾಪವನ್ನು ಮರ್ಧನಮಾಡಿ ಪುಣ್ಯವನ್ನು ವೃದ್ಧಿಗೊಳಿಸುವ ಪ್ರಯತ್ನ ಮಾಡಲೇಬೇಕು. ರಾಜನಾದ ನೀನು ಪಾಪವನ್ನು ಮರ್ಧನ ಮಾಡದೆ ಹೀಗೆ ಪಾಪವೆಂಬ ವಿಷದಘಾಟು ಲೋಕವನ್ನೇ ನಾಶಮಾಡುತ್ತಿದ್ದರೂ ಸ್ವಾರ್ತಸುಖಲೋಲುಪನಾಗಿರುವುದು ಸರಿಯಲ್ಲ'' ಎಂದಳು. ದ್ರೌಪದಿಯು ತನ್ನ ಪತಿಯ ಅಂತರ್ಗತ ನಾರಾಯಣನ ಸೇವಾಮನೋಭಾವವಿಟ್ಟು ದಿಟ್ಟತನದಿಂದ ನುಡಿದಿದ್ದರೂ ಅದು ದೋಶವಲ್ಲ ಧರ್ಮವೇ ಆಯಿತು.

ಧರ್ಮರಾಜನು ದ್ರೌಪದಿಯ ಧರ್ಮವಚನಕ್ಕೆ ನಿರುತ್ತರನಾದರೂ ಸೋಲು ತೋರ್ಪಡಿಸದೆ ''ದ್ರೌಪದೀ! ಸಾಕು ನಿನ್ನ ಕುತರ್ಕ. ನಾನು ಶ್ರೀಹರಿ ಸರ್ವಸ್ವತಂತ್ರನೆಂದು ತಿಳಿದವನಾದ್ದರಿಂದ ಎಲ್ಲವೂ ಅವನ ಅಧೀನವೆಂದು ಪ್ರತಿನಿಮಿಷದಲ್ಲಿ ಬರುವ ಸುಖದುಃಖಗಳೆರಡನ್ನು ಸ್ವಾಗತಿಸಿ ಅವನ ಪ್ರೇರಣೆಯಂತೆ ನಡೆಯತಕ್ಕವನು ನೀನು ಜೀವನೂ ಸ್ವತಂತ್ರನೆಂದೂ ಸಕಲ ಸುಖಾಸುಖಗಳಿಗೂ ಅವನೂ ಕಾರಣನಾಗುತ್ತಾನೆಂದೂ ಹೇಳುತ್ತಿರುವಿ. ಇದು ನಿನ್ನ ಅಜ್ಞಾನ'' ಎಂದುಬಿಟ್ಟನು. ಧರ್ಮರಾಜನ ಮಾತು ದ್ರೌಪದಿಗೆ ಅಸಮ್ಮತವಾದರೂ ದೊಡ್ಡವರಲ್ಲಿ ನಮ್ಮ ವಚನಚಾತುರ್ಯದಿಂದ ಮುಖಬಂಗ ಮಾಡಬಾರದೆಂಬ ಸ್ತ್ರೀಧರ್ಮದಂತೆ ಮಾತನಾಡಲಿಲ್ಲ.

## ಸ್ವಚ್ಛಜ್ಞಾನದ ಸವಿತಿರಳು

ಧರ್ಮರಾಜನು ದ್ರೌಪದಿಯ ತತ್ತ್ವಸಾರವನ್ನು ತಿಳಿದು ಸಂತೋಷಹೊಂದಿದರೂ ತೋರ್ಪಡಿಸದೆ ತನ್ನ ನಿರ್ಧಾರದಲ್ಲೇ ಮುಕ್ತಾಯಗೊಳಿಸಿದ್ದನ್ನು ನೋಡಿದ ಭೀಮನು ಆಗ ''ಅರಸಾ! ಮಾನಿನಿಯಮಾತನ್ನು ಏತಕ್ಕಾಗಿ ಮುರಿದಿದ್ದಿ. ಎಂಬ ನಿನ್ನ ಮನೋಗತ ನಾನು ಅರಿತೆನು. ನೀನು ಹೇಳಿದಂತೆ ಶ್ರೀಮನ್ನಾರಾಯಣನೇ ಸರ್ವಸ್ವತಂತ್ರನೆಂಬುದನ್ನು ಎಲ್ಲರೂ ನಂಬಲೇಬೇಕು.

ಸ್ವಾಮಿ ಸರ್ವರಿಗೂ ಗುರುವಾದ ಪ್ರಯುಕ್ತ ಅವನು ಶೃತಿ-ಸ್ಮೃತಿಗಳಲ್ಲಿ ಹೇಳಿದ ಪ್ರಕಾರ ಸಕಲ ಜೀವರೂ ನಿತ್ಯಕರ್ತವ್ಯವನ್ನು ನಿಷ್ಠೆಯಿಂದ ಮಾಡಲೇಬೇಕು. ನಮ್ಮಲ್ಲಿ ಶ್ರೀಹರಿಯಿಂದ ನಿಯಮಿಸಲ್ಪಟ್ಟ ತತ್ತ್ವಾಭಿಮಾನಿದೇವತೆಗಳನ್ನು ಕುರಿತು ನಾವು ''ನಮ್ಮನ್ನು ಧರ್ಮಮಾರ್ಗದಲ್ಲೇ ನಡೆಸಿರಿ'' ಎಂದು ಪ್ರತಿಕ್ಷಣದಲ್ಲೂ ಪ್ರಾರ್ಥಿಸುತ್ತಲಿರಬೇಕು. ಪಾಪಕರ್ಮಗಳು ನುಗ್ಗಿಬಂದರೂ ಅದನ್ನು ನಿಗ್ರಹಮಾಡಿ ಪುಣ್ಯಕರ್ಮಗಳನ್ನು ಸ್ವಾಗತಿಸಬೇಕು. ಧರ್ಮಕಾರ್ಯ ನಮ್ಮ ಪ್ರಯತ್ನದಿಂದ ನಡೆದಾಗ ಅದನ್ನು ಸ್ವಾಮಿಯೇ ಅನುಗ್ರಹಿಸಿದ

ಭಾಗ್ಯವೆಂಬ ಭಾವದಿಂದ ಅವನಿಗೇ ಅರ್ಪಣಮಾಡಿ ಸಂತೋಷಪಡಬೇಕು. ಪ್ರತ್ಯಕ್ಷ ಆಗಮ ಅನುಮಾನಕ್ಕೆ ವಿರುದ್ಧವಾಗದಂತೆ ಕಾರ್ಯೋನ್ಮುಖರಾಗಬೇಕು. ಜೀವಿಯು ಅಸ್ವತಂತ್ರನಾದರೂ ಭೋಜನಾದಿ ಕ್ರಿಯೆಗಳನ್ನು ಮಾಡಲಿಕ್ಕೆ ಸ್ವತಂತ್ರ ಕೊಟ್ಟಿದ್ದಾನೆ. ಜೀವಕ್ಕೆ ಯೋಗ್ಯತಾಕರ್ಮ ಸಿದ್ಧವಾಗಿದೆ. ಪ್ರತಿ ಜೀವರ ಯೋಗ್ಯತಾಕರ್ಮವೂ ದೇವರ ಆಧೀನ ಆ ಬ್ರಹ್ಮಸ್ತಂಭಪರಿಯಂತ ಸ್ವಾಮಿ ಬಲ್ಲವನಾಗಿದ್ದರೂ ಪ್ರಯತ್ನವಿಲ್ಲದೆ ಯೋಗ್ಯತೆ ಲಭ್ಯವಿಲ್ಲ. ಪ್ರಯತ್ನಮಾಡಿ ಯೋಗ್ಯತೆಯನ್ನು ಸಂಪಾದಿಸಿಕೊಂಡಾಗ ಅವರವರ ಯೋಗ್ಯತಾನುಸಾರ ಸ್ವಾಮಿ ಫಲಾಫಲಗಳನ್ನು ಕೊಡುತ್ತಾನೆ.

ಡೊಂಬರಾಟದವನು ಏಕಾಂತದಲ್ಲಿ ತಾನೊಬ್ಬನೇ ಆಡಿಕೊಂಡರೆ ಹಣ ಯಾರು ಕೊಡುತ್ತಾರೆ? ಅದರಂತೆ ಹೊರಪ್ರಪಂಚದಲ್ಲಿ ಧರ್ಮಜೀವನದ ಹೋರಾಟ ಯೋಗ್ಯರೀತಿಯಲ್ಲಿ ನಡೆಸುತ್ತಿದ್ದರೆ ಅವನ ಯೋಗ್ಯತೆಗೆ ತಕ್ಕಫಲ ಸ್ವಾಮಿಯಿಂದ ಸಿಗುತ್ತದೆ. ಅದನ್ನು ಅಹಂಭಾವವಿಲ್ಲದೆ ದೇವರೇ ನಡೆಸಿದ್ದಾನೆಂಬ ಭಾವದಿಂದ ಅವನಿಗೇ ಅರ್ಪಣ ಮಾಡಿದಾಗ ಅವನೇ ನಿಜವಾದ ಸುಖಿ ಎನಿಸುತ್ತಾನೆ.

ನಿಷೇಧ ಧರ್ಮಗಳನ್ನು ನಾಶಪಡಿಸಲಿಕ್ಕಾಗಿ ಅಡಿಗಡಿಗೂ ಪ್ರಯತ್ನಪಡುತ್ತಲೇ ಇರಬೇಕು. ಭಗವಂತನು ತೋರಿಸಿರುವ ಧರ್ಮ ಸೂಕ್ಷ್ಮಗಳನ್ನು ಶ್ರದ್ಧೆಯಿಂದ ಅರಿತು ಪಾಲಿಸಬೇಕು. ಇಲ್ಲದಿದ್ದರೆ ನೀನು ಮಾಡುವ ಧರ್ಮವೂ ಮಹಾಪಾಪಕರ್ಮವೇ ಆಗುತ್ತದೆ. ಪರಬ್ರಹ್ಮನು ನಾಲ್ಕುವರ್ಣಗಳನ್ನು ವಿಂಗಡಿಸಿ ಅವರವರಿಗೆ ಯೋಗ್ಯವಾದ ಧರ್ಮವನ್ನೇ ಆಚರಿಸಲು ತೋರಿಸಿದ್ದಾನೆ. ಬ್ರಾಹ್ಮಣರು ವೇದವನ್ನು ಓದಿ ಅವರ ಅರ್ಥವನ್ನು ಗುರುಮುಖೇನ ಅರಿತು ತನ್ನಲ್ಲಿ ಅಳವಡಿಸಿಕೊಂಡು ಮಂತ್ರಾರ್ಥಗಳ ಪ್ರಕಾರ ತಾರತಮ್ಯಾನುಸಾರ ಸಕಲದೇವತೆಗಳನ್ನು ಪೂಜಿಸಬೇಕು. ಬ್ರಾಹ್ಮಣರು ಶ್ರೀಮನ್ನಾರಾಯಣನ ಮುಖದಿಂದ ಹುಟ್ಟಿದವರಾದ ಕಾರಣ ಅದೇ ಅವರ ಸತ್ಸಾಧನೆಯ ಮುಖ್ಯವಸ್ತುವಾಗಬೇಕು. ವೇದಾದಿ ಸಚ್ಛಾಸ್ತ್ರಗಳನ್ನು ಸರಿಯಾದ ರೀತಿಯಲ್ಲಿ ಅರಿತು ಸಜ್ಜನರಿಗೆ ಉಪದೇಶಮಾಡಿ ಲೋಕಕಲ್ಯಾಣದ ಕಾರ್ಯ ನಿರತನಾದವನು ಬ್ರಾಹ್ಮಣನೆನಿಸುವನು.

ಕ್ಷತ್ರಿಯರು ಭಗವಂತನ ಬಾಹುವಿಂದ ಹುಟ್ಟಿದವರಾದಕಾರಣ ಧರ್ಮಕಂಟಕರಾದ ಪಾಪಿಗಳನ್ನು ತಮ್ಮ ಬಾಹುಗಳಿಂದ ದಂಡಿಸಿ ಧರ್ಮಪಾಲನೆ ಮಾಡಬೇಕು. ವೇದ ಓದಬೇಕು. ಯಜ್ಞಾದಿ ಕರ್ಮಗಳನ್ನು ಮಾಡಬೇಕು.

ವೈಶ್ಯರು ದೇವರ ತೊಡೆಯಿಂದ ಹುಟ್ಟಿದವರಾದಕಾರಣ ಅವರು ಪ್ರಜಾವೃದ್ಧಿಮಾಡಬೇಕು. ವ್ಯಾಪಾರ ಗೋರಕ್ಷಣೆ ಕೃಷಿ ಮೊದಲಾದ ವೃತ್ತಿಗಳಲ್ಲಿ ನಿರತರಾಗಬೇಕು. ವೇದವನ್ನು ಓದಬೇಕು. ಶೂದ್ರರು ಶ್ರೀನಾರಾಯಣನ ಪಾದದಿಂದ ಹುಟ್ಟಿದವರಾದಕಾರಣ ಇವರು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ -ಈ ಮೂರು ವರ್ಣದವರ ಸೇವೆಯಿಂದ ಅವರಿಗೆ ಶಿಷ್ಯರಾಗಿರಬೇಕು.

ನಾವು ದೇವಾಂಶರು ಕ್ಷತ್ರಿಯ ಕುಲದಲ್ಲಿ ಹುಟ್ಟಿದ್ದೇವೆ. ಬಲಾಧಿಕ್ಯರಾಗಿರುವುದರಿಂದ ಕ್ಷಮಾವೃತ್ತಿಯನ್ನು ನಾವು ಅವಲಂಬಿಸಬಾರದು. ದೇವಾಂಶರಾದ ನಾವು ಶ್ರೀಹರಿ ಒಬ್ಬನನ್ನು ಬಿಟ್ಟು ಬೇರೆ ಯಾವ ದೇವರನ್ನು ಮತ್ತಾರನ್ನೂ ಯಾಚಿಸಿ ಬದುಕಬಾರದು. ಈ ಧರ್ಮವನ್ನು ಮೂಲನಾರಾಯಣನು ಆದಿಸೃಷ್ಟಿಯಲ್ಲಿ ಮಾಡಿರುತ್ತಾನೆ.

ನಾಲ್ಕು ವರ್ಣದವರೂ ಶ್ರೀಹರಿಯೇ ಸರ್ವೋತ್ತಮನೆಂದೂ ಸಕಲದೇವತೆಗಳೂ ಅವನ ಪರಿವಾರವೆಂದೂ ತಿಳಿದು ತಾರತಮ್ಯಾನುಸಾರ ನಿರಂತರ ಪೂಜೆ ಮಾಡಬೇಕು. ಇಂಥ ಶುದ್ಧಜ್ಞಾನೋಪದೇಶ ಮಾಡಿದವರೇ ನಿಜವಾದ ಗುರುಗಳೆಂದು ಭಾವಿಸಿ ನಡೆಯಬೇಕು.

ಶ್ರೀಲಕ್ಷ್ಮೀದೇವಿಯರಿಂದಲೇ ಪೂಜೆ ಮಾಡಿಸಿಕೊಳ್ಳುತ್ತಿರುವ ನಾರಾಯಣನು ಸದಾ ಆನಂದಪೂರ್ಣನಾಗಿದ್ದಾನೆ. ಅವನಿಗೆ ರಮಾದೇವಿಯರಿಂದ ಸುಖವಾಗುತ್ತದೆಂದು ತಿಳಿಯಬಾರದು. ರಮಾದೇವಿಯರಿಗೆ ಆನಂದ ಕೊಡಲಿಕ್ಕಾಗಿಅವರಿಂದ ಪೂಜೆ ಸ್ವೀಕಾರಮಾಡುತ್ತಾನೆ. ಇನ್ನು ಅನ್ಯರ ಪೂಜೆ ಅವನಿಗೇನು ಬೇಕು?

ಸಂಕಲ್ಪಮಾತ್ರದಿಂದಲೇ ಎಲ್ಲವನ್ನೂ ನಡೆಸಬಲ್ಲ ಸ್ವಾಮಿ ನಮ್ಮಿಂದ ದೈತ್ಯವಧೆ ಮಾಡಿಸಬೇಕಾಗಿಲ್ಲ. ನಮಗೆ ಕೀರ್ತಿ, ಯಶಸ್ಸು, ಪುಣ್ಯಫಲ ಕರುಣಿಸಲಿಕ್ಕಾಗಿ ನಮಗೆ ದುಷ್ಟಶಿಕ್ಷಣ ಕಾರ್ಯ ನೇಮಿಸಿದ್ದಾನೆ. ಇಂಥ ಕರುಣಾಳುವಾದ ಸ್ವಾಮಿಯನ್ನು ದ್ವೇಶಮಾಡತಕ್ಕವರನ್ನು ಹೇಗೆಕೊಂದರೂ ಪಾಪವಿಲ್ಲ. ಮಹಾಪುಣ್ಯ ಲಭಿಸುತ್ತದೆ. ಆದ್ದರಿಂದ ವಿಷ್ಣು ವೈಷ್ಣವ ದ್ವೇಶಿಗಳಾದ ದುರ್ಯೋಧನಾದಿಗಳನ್ನು ನಾವು ಕೊಂದರೆ ಪಾಪವಿಲ್ಲ. ಭಗವತ್ಕಾರ್ಯಕ್ಕೆ ಸೇವೆಸಲ್ಲಿಸಿದ ಪುಣ್ಯ ಲಭಿಸುತ್ತದೆ. ಶಕುನಿ ಪರಮಪಾಪಿಷ್ಠನಾಗಿದ್ದಾನೆ. ಪಾಶವಿದ್ಯದಿಂದ ನಮ್ಮ ರಾಜ್ಯಸಂಪತ್ತನ್ನು ಅಪಹರಿಸಿಕೊಂಡನು. ಆದರೂ ಆಪಾಪಿಯನ್ನು ನೀನು ಕೊಲ್ಲಬಾರದು. ರಾಜನು ರಾಜರನ್ನೇ ಕೊಲ್ಲಬೇಕೆಂದು ರಾಜಧರ್ಮವಿದೆ. ರಾಜನು ಬೇರೆಯವರಿಗೆ ಸೆರೆಸಿಕ್ಕವರನ್ನೂ ರಾಜನ ಮಕ್ಕಳನ್ನೂ ಅವಿವಾಹಿತರನ್ನೂ ಕೊಲ್ಲಬಾರದು. ರಾಜನ ಸಹೋದರರನ್ನು ಕೊಲ್ಲಬಹುದು. ಈ ಧರ್ಮವನ್ನು ಪಂಚರಾತ್ರಾಗಮದಲ್ಲಿ ಹೇಳಲ್ಪಟ್ಟಿದೆ. ಪಾಶವಿದ್ಯವನ್ನು ಕಲಿಯುವುದೇ ಮಹಾದೋಶ. ಅಂಥ ಆಟವನ್ನು ನೀನು ಆಡಿರುವಿ. ಆದ್ದರಿಂದಲೇ ಲೋಕದ ದೂಶಣೆಗೆ ಒಳಗಾದೆ. ಮೋಸದಿಂದ ಕಸಿದುಕೊಂಡ ಸಂಪತ್ತನ್ನು ಪರಾಕ್ರಮದಿಂದ ಕಸಿದುಕೊಂಡರೆ ಪಾಪವಿಲ್ಲ.

ಗಂಡನು ಸಂಪಾದಿಸಿದ ಸಂಪತ್ತಿಗೆ ಹೆಂಡತಿ ಒಬ್ಬಳೇ ಅಧಿಕಾರಸ್ಥಳು. ಅದನ್ನು ಅಣ್ಣತಮ್ಮಂದಿರು ಅನುಭವಿಸಲು ಅವರಿಗೆ ಅಧಿಕಾರವಿಲ್ಲ. ಅದನ್ನು ಪರಾಕ್ರಮದಿಂದ ಕಸಿಯಬಹುದು. ಅನ್ಯಸ್ತ್ರೀಗೆ ಕಾಮುಕಭಾವದಿಂದ ಕೊಟ್ಟ ಆಸ್ತಿಯನ್ನು ಕಸಿದುಕೊಂಡರೆ ಪಾಪವಿಲ್ಲ. ಈ ಪ್ರಕಾರ ರಾಜಧರ್ಮ ಇರುವುದರಿಂದ ಕಪಟತನದಿಂದ ಕಸಿದುಕೊಂಡಿರುವ ನಮ್ಮ ರಾಜ್ಯವನ್ನು ಪರಾಕ್ರಮದಿಂದ ನಾವು ಕಿತ್ತುಕೊಳ್ಳಬೇಕಾಗಿರುವುದೇ ಧರ್ಮ. ನೀನು

ನಮಗೆ ಹಿರಿಯನಾದ್ದರಿಂದ ನಿನ್ನ ಆಜ್ಞೆಯಂತೆ ನಾವು ನಡೆದೆವು. ಆಗಿದ್ದು ಆಯಿತು, ಈಗ ಅಪ್ಪಣೆ ಕೊಡು. ಆ ಹರಿದ್ವೇಶಿಗಳನ್ನು ಕೊಂದು ನಿನ್ನ ಸಕಲೈಶ್ವರ್ಯವನ್ನು ಕಿತ್ತುತಂದು ನಿನಗೊಪ್ಪಿಸುವೆನು.

ಹನ್ನೆರಡುವರ್ಷ ವನವಾಸ ಒಂದು ವರ್ಷ ವನವಾಸ ಮಾಡಬೇಕೆಂಬ ಪ್ರತಿಜ್ಞೆ ನಿನ್ನದಲ್ಲವೆ? ಧರ್ಮಶಾಸ್ತ್ರದಲ್ಲಿ ಹೇಳಿರುವಂತೆ ವೇದದಲ್ಲಿ ಸಾವಿರವರ್ಷ ಯಾಗಮಾಡಬೇಕೆಂದು ಹೇಳಿದ್ದರೂ ಮಾನವರಿಗೆ ನೂರುವರ್ಷ ಮಾತ್ರ ಆಯುಃ ಪ್ರಮಾಣವಾದ್ದರಿಂದ ಒಂದು ಮಾಸಕ್ಕೆ ಒಂದು ವರ್ಷದ ಅನುಸಂಧಾನವಿಟ್ಟು ಯಜ್ಞಮಾಡಿದರೂ ತಪ್ಪಿಲ್ಲವೆಂದು ಹೇಳುವುದರಿಂದ ಅದರಂತೆ ನಮಗೂ ಹನ್ನೆರಡು ತಿಂಗಳ ವನವಾಸ ಇಂದಿಗೆ ಮುಗಿದಿರುವುದರಿಂದ ಇನ್ನು ಒಂದು ವರ್ಷದ ಅಜ್ಞಾತವಾಸದ ಪ್ರತಿಜ್ಞೆಯನ್ನು ಒಂದುತಿಂಗಳು ಮಾಡಿಮುಗಿಸಿದರೆ ಆಯಿತು. ನಿನ್ನ ಮಾತು ಸತ್ಯವಾಯಿತು. ಪಾಪಿಗಳನ್ನು ಕೊಲ್ಲಲು ಕಾಲವಿಳಂಬ ಮಾಡಬಾರದು. ಶೀಘ್ರ ರಾಜ್ಯಸಂರಕ್ಷಣಾ ಮಾಡಲು ಇಚ್ಛಾ ಉಳ್ಳವರಾಗಬೇಕು. ಎಂದು ಭೀಮನು ಧರ್ಮಪ್ರವಚನ ಮಾಡುತ್ತಿದ್ದರೆ ಧರ್ಮರಾಜ ನಡುಗಿದನು. ''ಭೀಮಾ! ದಯವಿಟ್ಟು ನನ್ನ ಪ್ರತಿಜ್ಞೆಗೆ ಭಂಗ ಉಂಟುಮಾಡಬೇಡಪ್ಪಾ. ನಿನ್ನ ಧರ್ಮಸೂಕ್ಷ್ಮದಂತೆ ಈಗ ನಾವು ನಡೆದರೆ ಲೋಕನಿಂದನೆಗೆ ಒಳಗಾಗುತ್ತೇವೆ. ಅಣ್ಣನೆಂದು ಎಷ್ಟು ಗೌರವಾದರಗಳಿಂದ ನನ್ನನ್ನು ಸಂತೋಷಪಡಿಸುವೆಯೋ ಅಷ್ಟೇ ಮಾತಿನ ಖಡ್ಗದಿಂದ ಇರಿದು ಮನೋವೇದನೆ ಉಂಟು ಮಾಡುತ್ತಿ. ಅಂದೇ ನೀನು ಕೌರವರ ಮಾತಿನಂತೆ ನನ್ನನ್ನು ತ್ಯಜಿಸಿಬಿಟ್ಟಿದ್ದರೆ ನಿಮಗೆ ಈ ಕಷ್ಟವೇ ಬರುತ್ತಿರಲಿಲ್ಲ.

ಭೀಮಾ ನೀನು ಏನೇ ಹೇಳಿದರೂ ನನ್ನ ಪ್ರತಿಜ್ಞೆಯಂತೆ ಹನ್ನೆರಡು ವರ್ಷ ವನವಾಸ, ಒಂದು ವರ್ಷ ವನವಾಸ ಮುಗಿಯುವವರೆಗೂ ನಾನು ರಾಜ್ಯವನ್ನು ಇಚ್ಛಿಸುವವನಲ್ಲ. ಹದಿಮೂರು ವರ್ಷಗಳನ್ನು ವ್ರತದಂತೆ ಮುಗಿಸಿದನಂತರ ನಿನ್ನ ಮಾತಿನಂತೆಯೇ ಆಗಲಿ'' ಎಂದನು.

ಭೀಮಸೇನನು ಧರ್ಮರಾಜನಿಂದ ಆ ಮಾತನ್ನು ಆಡಿಸಲಿಕ್ಕಾಗಿಯೇ ಇಷ್ಟು ವಾಗ್ವಜ್ರಗಳನ್ನು ಅವನಮೇಲೆ ಚೆಲ್ಲಿ ಅವನಿಂದ ತನಗೆ ಬೇಕಾದ ವಾಕ್ಕಾರವನ್ನು ಸ್ವೀಕಾರಮಾಡಿ ಸಂತೋಷದಿಂದ ''ಅಣ್ಣಾ! ನಿನ್ನ ಆಜ್ಞೆಯಂತೆ ನಾವು ಹದಿಮೂರು ವರ್ಷ ಕಳೆಯುತ್ತೇವೆ. ಯುದ್ಧದ ಗೊಡವೆಗೆ ಹೋಗುವುದಿಲ್ಲ. ನಂತರ ಬಿಡುವುದಿಲ್ಲ'' ಎಂದು ಹೇಳಿ ಒಪ್ಪಿಸಿದನು.

## ವೇದವ್ಯಾಸರಿಂದ ಮಂತ್ರೋಪದೇಶ

ಯುದ್ಧದ ಕಾಳಜಿಯೇ ಬೇಡವೆಂದು ನಿಶ್ಚಿಂತೆಯಿಂದಿದ್ದ ಧರ್ಮರಾಜನಿಗೆ ಈಗ ಮತ್ತೆ ಯುದ್ಧದ ಚಿಂತೆ ಹತ್ತಿತು. ಕೌರವರ ಪಕ್ಷದಲ್ಲಿರುವ ದ್ರೋಣ-ಭೀಷ್ಮ-ಕರ್ಣಾದಿಗಳೆಲ್ಲರೂ

ಪರಶುರಾಮನ ಶಿಷ್ಯರು. ಮಂತ್ರಾಸ್ತ್ರಗಳಲ್ಲಿ ಪ್ರಖ್ಯಾತರಾಗಿದ್ದಾರೆ. ಭೀಮನು ಅಸ್ತ್ರಜ್ಞನಾಗಿದ್ದರೂ ಅವನು ಶ್ರೀಹರಿ ಒಬ್ಬನನ್ನು ಬಿಟ್ಟು ಮಿಕ್ಕಾವ ದೇವತೆಗಳನ್ನೂ ಉಪಾಸನೆ ಮಾಡತಕ್ಕವನಲ್ಲ. ಶ್ರೀಹರಿ ಆಜ್ಞೆ ಆದರೆ ಮಾತ್ರ ಮಂತ್ರಾಸ್ತ್ರಗಳನ್ನು ಪ್ರಯೋಗಮಾಡುತ್ತಾನೆ. ಭೀಮನನ್ನು ಬಿಟ್ಟರೆ ಅರ್ಜುನನು ಭೀಷ್ಮಾದಿಗಳಿಗೆ ಪ್ರತಿವೀರನಾಗಿದ್ದಾನೆ'' ಎಂದು ಧರ್ಮರಾಜನು ಯೋಚಿಸುತ್ತಿರುವಾಗ ಭೀಮನು ''ಧರ್ಮರಾಜಾ! ಅವ್ಯಾಹತ ಷಡ್ಗುಣೈಶ್ವರ್ಯ ಸಂಪನ್ನನಾದಂಥ ಶ್ರೀಕೃಷ್ಣ ನಮಗಿರುವಾಗ ಅದರಚಿಂತೆ ನನಗೇಕೆ? ಎಂದುಹೇಳಿ ಧರ್ಮರಾಜನ ಹೃತ್ಸರೋವರದಲ್ಲಿ ವನವಾಸ ಅಜ್ಞಾತವಾಸ ಮುಗಿದಾಕ್ಷಣ ಯುದ್ಧ ಸಿದ್ಧವಾಗುತ್ತದೆಂಬುದನ್ನು ತುಂಬಿ ಹೊರಟುಹೋದನು.

ಧರ್ಮರಾಜನು ಮುಂದೆ ಯುದ್ಧ ಹೇಗೆ ನಡೆಸಲು ಸಾಧ್ಯ. ಶತ್ರು ಪಕ್ಷದಲ್ಲಿ ಮಹಾಪ್ರಬಲರು ಅಸಂಖ್ಯಾತರಿದ್ದಾರೆ ಎಂದು ಚಿಂತಿಸುತ್ತಿರುವಾಗ ವೇದವ್ಯಾಸರು ಎದುರಿಗೆ ಬಂದು ''ಧರ್ಮರಾಜಾ! ನೀನು ಯುದ್ಧದಬಗ್ಗೆ ಏನೂ ಚಿಂತಿಸಬೇಡ. ನಿನಗೆ ದಿವ್ಯಮಂತ್ರೋಪದೇಶ ಮಾಡುತ್ತೇನೆ. ಆ ಮಂತ್ರಶಕ್ತಿಯಿಂದ ನಿಮಗೆ ಸಕಲದೇವತೆಗಳೂ ಸಕಲಬಗೆಯ ಶಸ್ತ್ರಾಸ್ತ್ರಗಳನ್ನು ಅನುಗ್ರಹಿಸುವರು. ಆ ದಿವ್ಯಾಸ್ತ್ರಗಳಿಂದ ನೀವು ಶತ್ರುಗಳನ್ನು ವಿನಾಶಪಡಿಸುತ್ತೀರಿ. ನಾನು ನಿನಗೆ ಉಪದೇಶಮಾಡಿದ ಮಂತ್ರವನ್ನು ನೀನು ಅರ್ಜುನನಿಗೆ ಉಪದೇಶಮಾಡು'' ಎಂದರು. ಅರ್ಜುನನೂ ಸಮೀಪದಲ್ಲೇ ಇದ್ದರೂ ಅವನಿಗೇಕೆ ಮಾಡಲಿಲ್ಲವೆಂದರೆ ಅರ್ಜುನನಿಗಿಂತಲೂ ದೊಡ್ಡವನೂ ಯಮಧರ್ಮನಂಶಸಂಭೂತನೂ ಆದ ಧರ್ಮರಾಜನಿಗೆ ಉಪದೇಶ ಮಾಡಿದರೆ ಅವನಿಂದ ಅರ್ಜುನನಿಗೆ ಉಪದೇಶವಾದರೆ ಅಧಿಕಫಲ ದೊರಕುತ್ತದೆಂದು ಸಾಕ್ಷಾತ್ ವೇದವ್ಯಾಸರೇ ಧರ್ಮರಾಜನಿಗೆ ಉಪದೇಶ ಮಾಡಿದರು.

ಧರ್ಮರಾಜನು ವೇದವ್ಯಾಸರ ಆಜ್ಞೆಯಂತೆ ಅರ್ಜುನನಿಗೆ ಉಪದೇಶಕೊಟ್ಟು ಇಂದ್ರಕೀಲ ಪರ್ವತಕ್ಕೆ ತಪಸ್ಸಿಗಾಗಿ ಕಳುಹಿಸಿದನು.

## ದೇವತೆಗಳಿಂದ ಅರ್ಜುನನಿಗೆ ಅಮೂಲ್ಯಾಸ್ತ್ರಾನುಗ್ರಹ

ಅರ್ಜುನನು ವೇಧವ್ಯಾಸರಿಂದ ಲಭಿಸಿದ ಮಂತ್ರಸಿದ್ಧಿಗಾಗಿ ತಪಸ್ಸು ಮಾಡಲು ಇಂದ್ರಕೀಲ ಪರ್ವತಕ್ಕೆ ಬಂದನು. ಅಲ್ಲಿ ಉಗ್ರತಪೋನಿರತನಾಗಿರಲು ಮೂಕಾಸುರನು ಭಯಂಕರ ಹಂದಿಯರೂಪವನ್ನು ತಾಳಿ ಕೋರೆದಾಡಿಗಳಿಂದ ಕೂಡಿ ಕಾಡೇ ಅದರುವಂತೆ ಗರ್ಜನೆಮಾಡುತ್ತ ಸಿಕ್ಕಿದವರನ್ನು ಸೀಳಿಸಿಗಿದು ತಿನ್ನುವಂತೆ ಓಡಿ ಬರುತ್ತಿರುವಾಗ ಅರ್ಜುನನು ತನ್ನ ತಪಸ್ಸಿಗೆ ಭಂಗ ಉಂಟುಮಾಡಿದ್ದ ಕ್ರೂರ ಪ್ರಾಣಿಯನ್ನು ಗಾಂಡೀವ ಧನಸ್ಸಿನಿಂದ ಹೊಡೆದು ಕೆಡವುದರಲ್ಲಿ ಆ ಸಮಯಕ್ಕೆ ಸರಿಯಾಗಿ ಶಿವಪಾರ್ವತಿಯರು ಬೇಡರಂತೆ

ವೇಷತಾಳಿ ಅದನ್ನು ಬೆನ್ನಟ್ಟಿ ಬರುತ್ತಿರುವಂತೆ ತೋರಿಸಿದರು. ರುದ್ರನೂ ಅರ್ಜುನನ ಬಾಣಕ್ಕೆ ಸರಿಯಾದ ಬಾಣವನ್ನೇ ಪ್ರಯೋಗಿಸಿದನು.

ತೀವ್ರ ಬಾಣಗಳಿಂದ ಮೂಕಾಸುರನು ಸತ್ತನು. ನಾನು ಹಂದಿಯನ್ನು ಬೆನ್ನಟ್ಟಿಬಂದು ನನ್ನ ಪರಾಕ್ರಮದಿಂದ ಕೊಂದಿದ್ದೇನೆ. ನನ್ನ ಬೇಟೆಗೆ ನೀನು ಬಾಣಬಿಟ್ಟಿರುವುದು ತಪ್ಪು. ನನ್ನೊಡನೆ ಯುದ್ಧಕ್ಕೆ ನಿಲ್ಲು'' ಎಂದನು. ಅರ್ಜುನನು ''ಎಲಾ ಕಿರಾತ! ನಿನ್ನ ಹುಸಿಬಾಣಕ್ಕೆ ಆ ಅಸುರನು ಸತ್ತಿಲ್ಲ. ನನ್ನ ಬಾಣದಿಂದಲೇ ಸತ್ತಿದ್ದಾನೆ. ಈಗ ನೋಡು ನನ್ನ ಅಸ್ತ್ರಚಾತುರ್ಯ. ಆಗ ನಿನಗೇ ತಿಳಿಯುತ್ತದೆ'' ಎಂದು ತೀವ್ರಬಾಣಗಳಿಂದ ಬಾರಿಸುತ್ತಿದ್ದರೂ ಕಿರಾತನು ಎಲ್ಲವನ್ನು ನುಂಗಿ ಮಾಯಗೊಳಿಸುತ್ತಿದ್ದನು. ಅಕ್ಷಯ ಬತ್ತಳಿಕೆ ಬರಿದಾಯಿತು. ಶಸ್ತ್ರದಿಂದ ಹೊಡೆದರೆ ಅದನ್ನು ಶಿವನು ನುಂಗಿ ಹಾಕಿದನು. ಅದು ಆದನಂತರ ದ್ವಂದ್ವಯುದ್ಧ ಆರಂಭವಾಯಿತು. ಆಗ ಶಿವನು ಅರ್ಜುನನನ್ನು ಕೈಕಾಲುಕಟ್ಟಿ ದೂರಕ್ಕೆ ಎಸೆದನು. ಅರ್ಜುನ ಬಿದ್ದ ರಭಸಕ್ಕೆ ಮೂರ್ಛೆಹೋದನು. ಪಾರಿಜಾತಾಪಹರಣ ಕಾಲದಲ್ಲಿ ಇಂದ್ರನು ಶ್ರೀಹರಿಯನ್ನು ಕುರಿತು ''ನನ್ನ ಮಗ ಅರ್ಜುನನಿಗೆ ಯಾರಿಂದಲೂ ಸೋಲುಬರಬಾರದು'' ಎಂದು ವರಪಡೆದಿದ್ದರೂ ಈಗ ಸೋಲಿಗೆ ಕಾರಣವೇನೆಂದರೆ ಅದಕ್ಕಿಂತಲೂ ಮೊದಲು ಶಿವನು ಮೂಲನಾರಾಯಣನಲ್ಲಿ ತನಗೆ ತನಗಿಂತಲೂ ಕೆಳಗಿನವರಲ್ಲಿ ಸೋಲು ಬರಬಾರದು'' ಎಂದು ವರಪಡೆದುಕೊಂಡು ಬಿಟ್ಟಿದ್ದನಾದಕಾರಣ ಆ ವರಪ್ರಸಾದದಿಂದ ಶಿವನು ಅರ್ಜುನನನ್ನು ಸೋಲಿಸಿದನು.

ಶಿವನಿಗೆ ಕೊಟ್ಟ ವರವನ್ನು ಸತ್ಯಮಾಡಲಿಕ್ಕಾಗಿಯೇ ವೇದವ್ಯಾಸರು ಅರ್ಜುನನಿಗೆ ವೈಷ್ಣವ ಮಂತ್ರವನ್ನು ಕರುಣಿಸಲಿಲ್ಲ. ವೈಷ್ಣವ ಮಂತ್ರ ಪ್ರಯೋಗವನ್ನು ಅರ್ಜುನನು ಮಾಡಿದ್ದರೆ ಶಿವನಿಗೇ ಸೋಲು ಸಿದ್ಧವಾಗಿ ಬರುತ್ತಿತ್ತು.

ಅರ್ಜುನನು ಮೂರ್ಛೆಯಿಂದ ಎಚ್ಚೆತ್ತನಂತರ ನದಿಯಲ್ಲಿ ಸ್ನಾನಾದಿಗಳನ್ನು ಮುಗಿಸಿ ವೇದವ್ಯಾಸರಿಂದ ಲಭಿಸಿದ ಮಂತ್ರದಿಂದ ರುದ್ರದೇವರ ಪೂಜೆಮಾಡಲು ಅವನು ಅರ್ಚಿಸಿದ ಗಂಧಪುಷ್ಪಾದಿಗಳು ಕಿರಾತರೂಪಿಯಾಗಿ ಬಂದಿದ್ದ ಶಿವನಮೇಲೆ ಕಾಣಿಸಿತು. ಇವನೇ ರುದ್ರದೇವನೆಂದು ತಿಳಿದ ಅರ್ಜುನನು ಅವನಿಗೆ ನಮಸ್ಕಾರಮಾಡಿ ಸ್ತುತಿಸಲು ರುದ್ರನು ಸಂತುಷ್ಟನಾಗಿ ಶ್ರೀಹರಿಯಾಜ್ಞೆಯಂತೆ ಅವನಿಗೆ ಪಾಶುಪತಾಸ್ತ್ರವನ್ನು ಕೊಟ್ಟನು. ಅರ್ಜುನನಿಂದ ಪ್ರಯೋಗಿಸಲ್ಪಟ್ಟಿದ್ದ ಆಯುಧಗಳನ್ನು ಶಿವನು ತನ್ನಲ್ಲಿ ಸೇರಿಸಿಕೊಂಡಿದ್ದನು. ಅದೆಲ್ಲವನ್ನು ಅವನಿಗೇ ಕೊಟ್ಟನು. ಅಷ್ಟದಿಕ್ಪಾಲಕರೆಲ್ಲರೂ ಪ್ರತ್ಯಕ್ಷವಾಗಿಬಂದು ಅರ್ಜುನನಿಗೆ ತಮ್ಮ ತಮ್ಮ ಆಯುಧಗಳನ್ನು ಕೊಟ್ಟರು. ದೇವೇಂದ್ರನು ಅರ್ಜುನನನ್ನು ಆಲಂಗಿಸಿಕೊಂಡು ''ಪುತ್ರಾ ನಿನ್ನ ಪರಾಕ್ರಮಕ್ಕೆ ಸಂತೋಷಪಟ್ಟೆನು. ರಥಸಾರಥಿಗಳನ್ನು ಕಳುಹಿಸುವೆನು. ನನ್ನ ಲೋಕಕ್ಕೆ ಬಂದು ಸಕಲದೇವತೆಗಳಿಂದಲೂ ಸನ್ಮಾನಹೊಂದು'' ಎಂಬುದಾಗಿ ಹೇಳಿದನು.

ಸ್ವರ್ಗಲೋಕದಿಂದ ಅರ್ಜುನನಿಗಾಗಿ ಮಣಿಖಚಿತ ರಥ ಸಿದ್ಧವಾಗಿ ಬಂದಿತು. ಐವತ್ತು ಲಕ್ಷ ಯೋಜನದ ದೂರದಲ್ಲಿರುವ ಸ್ವರ್ಗಲೋಕಕ್ಕೆ ಮಾತಳಿ ಅರೆಕ್ಷಣದಲ್ಲಿ ಕರೆದುಕೊಂಡುಹೋದನು. ದೇವಲೋಕದಲ್ಲಿ ಸಮಸ್ತ ದೇವತೆಗಳೂ ಅರ್ಜುನನನ್ನು ಇದಿರ್ಗೊಂಡು ವೈಭವೋಪೇತವಾದ ಸ್ವಾಗತ ಸಂಭ್ರಮದಿಂದ ಕರೆತಂದು ದೇವೇಂದ್ರನ ಸಿಂಹಾಸನದಲ್ಲಿ ಕೂಡಿಸಿದರು.

ದೇವೇಂದ್ರನು ಮಗನ ಮನಮೋಹಕ ಸೌಂದರ್ಯವನ್ನು ಪ್ರಖ್ಯಾತ ಪರಾಕ್ರಮವನ್ನು ನೋಡಿ ಆನಂದಹೊಂದಿದನು. ಅರ್ಜುನನು ಐದುವರ್ಷಗಳವರೆಗೂ ಸ್ವರ್ಗಲೋಕದಲ್ಲೇ ಇದ್ದು ಸಕಲವಿದ್ಯಗಳನ್ನು ಅಭ್ಯಾಸಮಾಡಿದನು. ಒಂದುದಿನ ಊರ್ವಶಿಯು ದೇವರಾಜನ ಸಭೆಯಲ್ಲಿ ನರ್ತನ ಮಾಡುವಾಗ ಅರ್ಜುನನೂ ಕುಳಿತುನೋಡುತ್ತಿದ್ದನು. ದೇವೇಂದ್ರನ ಪ್ರತಿಬಿಂಬದಂತೆ ರಾರಾಜಿಸುತ್ತಿದ್ದ ಅರ್ಜುನನ ರೂಪಕ್ಕೆ ಸಂತೋಷಪಟ್ಟು ಅವನನ್ನು ವರಿಸಲು ಸಮೀಪಕ್ಕೆ ಬಂದು ಸಲಿಗೆಯಿಂದ ವರ್ತಿಸುತ್ತಿರಲು ಅರ್ಜುನನು ಅವಳ ಮನೋಗತವನ್ನರಿತು ನೀನು ದೇವತಾಸ್ತ್ರೀ ನಾವು ಮನುಷ್ಯರು. ನೀನು ನಮ್ಮಕುಲಕ್ಕೆ ತಾಯಿಯಾಗಿರುವಿ. ನಮ್ಮ ಹಿರಿಯರು ನಿನ್ನಲ್ಲಿ ಹುಟ್ಟಿರುತ್ತಾರೆ. ನನ್ನ ತಂದೆ ದೇವೇಂದ್ರನೇ ನಿನ್ನನ್ನು ವರಿಸಿರುವುದರಿಂದ ನೀನು ನನಗೆ ತಾಯಿಯಾದ್ದರಿಂದ ನನ್ನನ್ನು ಮಗನೆಂದು ವಾತ್ಸಲ್ಯದಿಂದ ನೋಡು'' ಎಂದುಬಿಟ್ಟನು.

ಆಗ ಊರ್ವಶಿಯು ''ಅರ್ಜುನಾ! ನನ್ನನ್ನು ಪಡೆಯಲಿಕ್ಕಾಗಿ ಎಷ್ಟೋ ಮಹಾತ್ಮರು ತಪಸ್ಸುಮಾಡುತ್ತಾರೆ. ಹೀಗಿರುವಾಗ ನಾನಾಗಿ ನಿನ್ನ ಬಳಿ ಬಂದರೂ ತಿರಸ್ಕಾರದಿಂದ ನರಲೋಕದ ಧರ್ಮವನ್ನು ಮುಂದಿಟ್ಟು, ನಿರಾಕರಿಸಿದ ನೀನು ಶಂಡನಾಗು'' ಎಂದು ಶಪಿಸಿದಳು.

ಊರ್ವಶಿಯ ಶಾಪವನ್ನು ದೇವೇಂದ್ರನು ನಿವಾರಿಸಬಹುದಾಗಿತ್ತು. ಏಕೆ ನಿವಾರಿಸಲಿಲ್ಲವೆಂದರೆ ಮುಂದೆ ಅರ್ಜುನನು ಅಜ್ಞಾತವಾಸ ಮಾಡುವಾಗ ಷಂಡತ್ವದಿಂದ ನರ್ತನಾದಿಗಳನ್ನು ಮಾಡುವ ನಾಟ್ಯಸ್ತ್ರೀಯಂತೆ ಇರಲು ಅನುಕೂಲವಾಗುತ್ತದೆಂದು ಸೂಚಿಸಿದನು.

ಹಿಂದೆ ಚಿತ್ರಸೇನ ಗಂಧರ್ವನು ಅರ್ಜುನನಿಂದ ಅಗ್ನ್ಯಾಸ್ತ್ರವನ್ನು ಕಲಿತು ಗಂಧರ್ವವಿದ್ಯವನ್ನು ಕಲಿಸುತ್ತೇನೆ'' ಎಂದು ಹೇಳಿದಾಗ ಈಗ ಬೇಡ. ಕಾಲಾಂತರದಲ್ಲಿ ಕಲಿಸು'' ಎಂದುಹೇಳಿದ್ದನು.

ಈಗ ಚಿತ್ರಸೇನನಲ್ಲಿ ಐದುವರ್ಷಗಳ ಕಾಲ ಗಂಧರ್ವ ವಿದ್ಯವನ್ನು ಅಭ್ಯಾಸಮಾಡಿದನು. ಒಂದುದಿನ ಅರ್ಜುನನು ದೇವೇಂದ್ರನನ್ನು ಕುರಿತು ನಮ್ಮ ಅಣ್ಣತಮ್ಮಂದಿರು ನನ್ನ ವಿಯೋಗದಿಂದ ಬಹಳ ನನ್ನ ಬಗ್ಗೆ ಚಿಂತಿಸುತ್ತಿರುತ್ತಾರೆ. ಅವರಿಗೆ ನನ್ನ ಸಮಾಚಾರವನ್ನು

ತಿಳಿಸುವುದರ ಜೊತೆಗೆ ವನವಾಸವನ್ನು ಒಂದೇಕಡೆಗೆ ನಿಂತು ನಡೆಸಬೇಕೆಂದರೆ ಬಹಳ ಬೇಸರವಾಗುತ್ತದೆ. ಆದ್ದರಿಂದ ಅನೇಕ ತೀರ್ಥಕ್ಷೇತ್ರಗಳ ಸಂಚಾರಮಾಡುತ್ತ ಕಳೆದರೆ ಸಂತೋಷದಿಂದಲೇ ವನವಾಸವನ್ನು ಮುಗಿಸಬಹುದೆಂದು ಹೇಳಿಕಳುಹಿಸು'' ಎಂದನು. ಅರ್ಜುನನ ಅಭಿಲಾಷೆಯಂತೆ ದೇವೇಂದ್ರನು ಲೋಮಶಮಹರ್ಷಿಗಳನ್ನು ಕರೆಸಿಕೊಂಡು ನೀವು ಪಾಂಡವರಿಗೆ ಅರ್ಜುನನ ಯೋಗಕ್ಷೇಮ ಸಮಾಚಾರವನ್ನು ತಿಳಿಸಿ ಅವರನ್ನು ಪುಣ್ಯಕ್ಷೇತ್ರದರ್ಶನಕ್ಕೆ ಕರೆದುಕೊಂಡು ಹೋಗಿ ಅವರ ಮನಸ್ಸಿಗೆ ಆನಂದವನ್ನು ಮಾಡಿರಿ'' ಎಂದು ಹೇಳಿ ಕಳುಹಿಸಿದನು.

ಲೋಮಶಮಹರ್ಷಿಗಳ ಆಗಮನ ಧರ್ಮರಾಜನಿಗೆ ಶುಭೋದಯವೆನಿಸಿತು. ಮಹರ್ಷಿವರರನ್ನು ಪೂಜಿಸಿ ''ಮುನಿಪುಂಗವಾ! ನಮ್ಮ ಅರ್ಜುನ ಎಲ್ಲಿದ್ದಾನೆ? ಅವನ ಸಮಾಚಾರ ತಿಳಿಯದೆ ಚಿಂತಿಸುತ್ತಿದ್ದೇನೆ ಎಂದನು. ಲೋಮಶರು ''ಧರ್ಮರಾಜಾ! ಅರ್ಜುನನು ತನ್ನ ಅಸಮಾನ ಪರಾಕ್ರಮದಿಂದ ರುದ್ರನನ್ನು ಸಂತೋಷಪಡಿಸಿ ಪಾಶುಪತಾಸ್ತ್ರವನ್ನು ಪಡೆದಿದ್ದಾನೆ. ಅಷ್ಟೇಅಲ್ಲದೆ ಸಕಲ ದೇವತಾಗಣವೂ ಅವನಿಗೆ ಸಮಸ್ತ ಮಂತ್ರಾಸ್ತ್ರಗಳನ್ನು ಕೊಟ್ಟು ಅನುಗ್ರಹಿಸಿದ್ದಾರೆ. ಈಗ ದೇವೇಂದ್ರನ ಸಿಂಹಾಸನದಲ್ಲಿ ಕುಳಿತು ಸ್ವರ್ಗದಲ್ಲಿ ಶೋಭಿಸುತ್ತಿದ್ದಾನೆ. ಅರ್ಜುನನು ನನ್ನ ಸಹೋದರರು ವನವಾಸ ಒಂದೇಕಡೆಗೆ ಇದ್ದು ಆಚರಿಸುವುದೆಂದರೆ ಬಹಳ ಬೇಸರವಾಗುತ್ತದೆ. ಅನೇಕ ತೀರ್ಥಕ್ಷೇತ್ರಗಳಿಗೆ ನೀವೂ ಅವರೊಡನೆ ಸಂಚಾರ ಹೊರಟು ಅನೇಕರಾಜರುಗಳು ಹಿಂದೆ ರಾಜ್ಯಹೀನರಾಗಿ ತಮ್ಮ ಸತ್ಯಪರಾಕ್ರಮದಿಂದ ಮತ್ತೆ ರಾಜರಾಗಿ ಅಮರಕೀರ್ತಿಪಡೆದ ಕಥಾಶ್ರವಣ ಮಾಡಿಸಬೇಕೆಂದು ದೇವೇಂದ್ರನೂ ಅರ್ಜುನನೂ ಅಪೇಕ್ಷೆಪಟ್ಟರು'' ಎಂದು ಹೇಳಿದಾಗ ಧರ್ಮರಾಯನು ದೇವೇಂದ್ರನು ತಮ್ಮ ಮೇಲಿನ ಅಂತಃಕರುಣದಿಂದ ಅನುಗ್ರಹಮಾಡಿ ಮುನಿವರರನ್ನು ಕಳುಹಿಸಿದ್ದಾನೆಂಬ ಸಂತೋಷದಿಂದ ಲೋಮಶರೊಡಗೂಡಿಕೊಂಡು ಅನೇಕ ಪುಣ್ಯಕಥಾ ಶ್ರವಣಮಾಡುತ್ತ ಈ ಭೂಮಂಡಲದಲ್ಲಿ ನಾಲ್ಕುದಿಕ್ಕುಗಳಲ್ಲೂ ಎಷ್ಟು ತೀರ್ಥಕ್ಷೇತ್ರಗಳಿವೆಯೇ ಅಷ್ಟು ಕಡೆಗಳಿಗೂ ಯಾತ್ರಾಸಂಚಾರ ಮಾಡುವ ಸಂಕಲ್ಪದಿಂದ ತಮ್ಮಂದಿರೊಡಗೂಡಿ ಹೊರಟನು. ಆಗ ಧರ್ಮರಾಯನ ಜೊತೆಯಲ್ಲಿ ಎಂಭತ್ತೆಂಟುಸಾವಿರ ಋಷಿಗಳು ಹತ್ತುಸಾವಿರ ಸನ್ಯಾಸಿಗಳು ಹೊರಟರು. ಒಂದೊಂದು ಕ್ಷೇತ್ರದಲ್ಲಿ ಒಂದೊಂದು ದಿನವಿದ್ದು ತೀರ್ಥಸ್ನಾನ ದೇವರ ದರ್ಶನಾದಿಗಳನ್ನು ಮುಗಿಸಿ ತ್ರಿಕಾಲಸಂಧ್ಯಾವಂದನೆಯೇ ಮೊದಲಾದ ಭಗವದ್ಧರ್ಮಗಳನ್ನು ಆಚರಿಸುತ್ತ ಎಲ್ಲವನ್ನು ಸಂಚಾರಮಾಡಿ ಕೊನೆಗೆ ಆ ಪುಣ್ಯವನ್ನು ಶ್ರೀಕೃಷ್ಣನಿಗೆ ಅರ್ಪಿಸಬೇಕೆಂದು ಪ್ರಭಾಸ ಕ್ಷೇತ್ರಕ್ಕೆ ಬಂದರು.

ಪಾಂಡವರು ತೀರ್ಥಯಾತ್ರೆ ಮುಗಿಸಿ ಬಂದಿದ್ದಾರೆಂಬ ಸುದ್ದಿ ಶ್ರೀಕೃಷ್ಣ ಬಲರಾಮರಿಗೆ ತಿಳಿದಾಕ್ಷಣವೇ ಅತ್ಯುತ್ಸಾಹದಿಂದ ಪ್ರಭಾಸಕ್ಷೇತ್ರಕ್ಕೆ ಬಂದರು. ಯಾದವ ವೀರರೆಲ್ಲರೂ

ಪಾಂಡವರನ್ನು ನೀವು ಅಸಂಖ್ಯಾತ ಪುಣ್ಯಕ್ಷೇತ್ರದರ್ಶನ ಮಾಡಿಬಂದವರೆಂದು ಹೇಳುತ್ತ ನಮಸ್ಕಾರ ಮಾಡಿದರು. ಸಕಲ ತೀರ್ಥಗಳು ಶ್ರೀಕೃಷ್ಣನೇ ಆಗಿದ್ದಾನೆ. ಇಂಥ ಪುಣ್ಯಕ್ಷೇತ್ರದ ಸಮೀಪದಲ್ಲೇ ಇರತಕ್ಕ ನಿಮಗಿಂತಲೂ ಪುಣ್ಯವಂತರಿಲ್ಲವೆಂದು ಲೋಮಶರು ಹೊಗಳಿ ಶ್ರೀಕೃಷ್ಣನ ಮಹಿಮೆಯನ್ನು ಕೊಂಡಾಡಿ ನಮಸ್ಕಾರ ಮಾಡಿದರು.

ಬಲರಾಮನು ಭೀಮಸೇನನನ್ನು ನೋಡಿದನು. ಬಲವಂತನಾದ ಲೋಕವಿಖ್ಯಾತನಾದ ಭೀಮಸೇನನು ತನ್ನ ಪರಾಕ್ರಮ ಪೌರುಷಗಳೆಲ್ಲವನ್ನು ಅಂತರ್ಮುಖವಾಗಿ ಮಾಡಿಕೊಂಡು ಋಷಿವೃತ್ತಿಯಿಂದಿರುವುದನ್ನು ನೋಡಿ ಅವನ ಅಂತಃಕರುಣ ಕಲಕಿತು. ಬಲರಾಮ ಕೌರವನ ಪಕ್ಷಪಾತಿ ಆಗಿದ್ದರೂ ಅವನು ಮಾಡಿದ ಮೋಸಕ್ಕೆ ಉಗ್ರನಾದನು. ತುಚ್ಛಮಾತುಗಳಿಂದ ನಿಂದಿಸಲು ಸಾತ್ಯಕಿಯು ''ಬಲರಾಮಾ! ಸುಮ್ಮನೆ ದೂಶಣೆ ಮಾಡಿದರೆ ಫಲವಿಲ್ಲ. ನನಗೆ ಆಜ್ಞೆಮಾಡು. ಈಗ ಆ ಪಾಪಿಕೌರವರೆಲ್ಲರನ್ನು ನಿರ್ಮೂಲಮಾಡಿ ರಾಜ್ಯ ಪಾಂಡವರಿಗೊಪ್ಪಿಸುತ್ತೇನೆ. ಒಂದುವೇಳೆ ಧರ್ಮರಾಜನು ಪ್ರತಿಜ್ಞೆಗೆ ತಪ್ಪುವುದಿಲ್ಲ. ರಾಜ್ಯ ನನಗೆ ಬೇಡ ಎಂದರೆ ಅಭಿಮನ್ಯುವನ್ನು ಸಿಂಹಾಸನದಲ್ಲಿ ಕೂಡಿಸಿ ಪಟ್ಟಾಭಿಷೇಕ ಮಾಡುತ್ತೇವೆ'' ಎಂದು ಯಾದವ ವೀರರೆಲ್ಲರೂ ಕೆರಳಿ ನಿಂದಿರಲು ಕೃಷ್ಣನು ನಗುತ್ತ ಪಾಂಡವರ ಕಡೆಗೆ ನೋಡಿದನು. ಆಗ ಧರ್ಮರಾಯನು ಶ್ರೀಕೃಷ್ಣನನ್ನು ಕುರಿತು ''ಕೃಷ್ಣಾ! ಸರ್ವರ ಹೃದಯ ಮಂಟಪದಲ್ಲಿ ನೆಲಸಿ ಎಲ್ಲರ ಮನೋಗತವನ್ನು ಅರಿತಿರುವಿ. ನಿನ್ನ ಇಚ್ಛೆಯಂತೆ ನಡೆಯತಕ್ಕವರು ನಾವು'' ಎಂದು ಹೇಳಿದನು. ಕೃಷ್ಣನು ಧರ್ಮರಾಜನಮಾತಿನ ರಹಸ್ಯವನ್ನರಿತು, ''ಸಾತ್ಯಕೀ! ನೀನು ಪಾಂಡವರ ಮೇಲಿನ ಅಭಿಮಾನದಿಂದ ಮಾತನಾಡಿರುವಿ. ಆದರೆ ಪಾಂಡವರು ಅದಕ್ಕೆ ಒಪ್ಪತಕ್ಕವರಲ್ಲ. ಅವರು ಪರರ ಪರಾಕ್ರಮವನ್ನು ಆಶ್ರಯಮಾಡತಕ್ಕವರಲ್ಲ. ತಮ್ಮ ಅಮಿತ ವಿಕ್ರಮವನ್ನು ಶತೃತಂಡದವರಿಗೆ ತೋರಿಸಿ ರಣಚಂಡಿಯನ್ನು ಶತ್ರುಗಳ ನೆತ್ತರಿನ ಅಭಿಷೇಕದಿಂದ ತೃಪ್ತಿಪಡಿಸಿ ರಾಜ್ಯವನ್ನು ಸ್ವಾಧೀನಪಡಿಸಿಕೊಳ್ಳಲು ವೀರಸಂಕಲ್ಪದಿಂದಿದ್ದಾರೆ'' ಎಂದನು. ಪಾಂಡವರಿಗೆ ಶ್ರೀಕೃಷ್ಣನು ತಮ್ಮ ಬಗ್ಗೆ ಆಡಿದ ಅನುಗ್ರಹ ವಾಕ್ಯಗಳನ್ನು ಕೇಳಿ ಆನಂದಪಟ್ಟರು. ತಮ್ಮ ತೀರ್ಥಯಾತ್ರೆಯ ಸಕಲಪುಣ್ಯಕರ್ಮಗಳನ್ನು ಶ್ರೀಕೃಷ್ಣನಿಗೆ ಅರ್ಪಣಮಾಡಿ ನಮಸ್ಕಾರಮಾಡಿದರು.

## ಸೌಗಂಧಿಕದ ಸೌರಭ

ಶ್ರೀಕೃಷ್ಣನು ಪಾಂಡವರನ್ನು ಹಿತನುಡಿಗಳಿಂದ ಹೊಗಳಲು ಪಾಂಡವರು ಪ್ರಭಾಸಕ್ಷೇತ್ರದಿಂದ ಶ್ರೀಕೃಷ್ಣನಾಜ್ಞೆಯಂತೆ ಹಿಮವತಪರ್ವತದ ಕಡೆಗೆ ಹೊರಟರು. ಸಾವಿರ ಯೋಜನದ ಎತ್ತರದ ಹಿಮಾಲಯವನ್ನು ದ್ರೌಪದಿ ಏರಲಾರಳೆಂದು ಭಾವಿಸಿ ಭೀಮನು ಘಟೋತ್ಕಜನನ್ನು ಸ್ಮರಿಸಿದಾಗ ಘಟೋತ್ಕಜನು ತನ್ನ ಪರಿವಾರ ದೈತ್ಯರೊಡನೆ ಬಂದು

ತಂದೆತಾಯಿಯರಿಗೆ ನಮಸ್ಕಾರಮಾಡಿ ''ಏನಪ್ಪಣೆ?'' ಎಂದನು. ಹಿಮವತ್ಪರ್ವತದ ಪ್ರಯಾಣವನ್ನರಿತು ತನ್ನ ಸಂಗಡ ಬಂದಿದ್ದ ಘೋರಾಕಾರದ ದೈತ್ಯರಿಗೆ ಸಕಲ ಬ್ರಾಹ್ಮಣರನ್ನು ಎತ್ತಿಕೊಂಡು ಕರೆದೊಯ್ಯುವಂತೆ ಹೇಳಿಕಳುಹಿಸಿ ತಾನು ತಂದೆ ತಾಯಿಗಳನ್ನು ಧರ್ಮರಾಜ ನಕುಲಸಹದೇವರನ್ನು ಎತ್ತಿಕೊಂಡು ಹಿರೇಬದರಿಯಕಡೆಗೆ ಹೊರಟನು. ಅಲ್ಲಿ ವೇದವ್ಯಾಸರ ಸನ್ನಿಧಾನದಲ್ಲಿಳಿಸಿ ಭೀಮಸೇನನ ಅಪ್ಪಣೆಪಡೆದು ಹೊರಟುಹೋದರು.

ಪಾಂಡವರು ಗಂಧಮಾದನ ಪರ್ವತದಲ್ಲಿ ನರನಾರಾಯಣಾಶ್ರಮದಲ್ಲಿ ಪೂಜೆ ಮಾಡಿಕೊಂಡು ಸುಖಿಗಳಾಗಿದ್ದರು. ಒಂದುದಿನ ದ್ರೌಪದೀದೇವಿಯು ಆಶ್ರಮದಲ್ಲಿರುವಾಗ ಗರುಡನು ಒಂದು ಘಟಸರ್ಪವನ್ನು ಹಿಡಿದುಕೊಂಡು ರಭಸದಿಂದ ಹಾರುವಾಗ ಅವನ ರೆಕ್ಕೆಯಿಂದ ಬೀಸಿದ ಗಾಳಿಯ ರಭಸಕ್ಕೆ ಒಂದು ಸೌಗಂಧಿಕಾಪುಷ್ಪ ಹಾರಿ ಬಂದು ದ್ರೌಪದಿಯ ಬಳಿ ಬಿದ್ದಿತು.

ಆ ಪುಷ್ಪವು ಆಗತಾನೇ ಉದಿಸಿದ ಬಾಲಸೂರ್ಯನಂತೆ ಕಾಂತಿವುಳ್ಳದ್ದಾಗಿ ವನಪ್ರದೇಶವೆಲ್ಲವನ್ನೂ ತನ್ನ ಸುಗಂಧದಿಂದ ಹರಡಿ ಪರಿಮಳಯುಕ್ತವನ್ನಾಗಿ ಮಾಡಿತು.

ದ್ರೌಪದಿಯು ಸೌಗಂಧಿಕದ ಸಂದೇಶವನ್ನರಿತಳು. ಸೌಗಂಧಿಕ ಜಡವಸ್ತುವಾಗಿದ್ದರೂ ಇದರಲ್ಲಿ ಅಂತರ್ಗತನಾಗಿರುವ ಮಹಾವಿಷ್ಣು ''ನಿನ್ನ ಪತಿಯನ್ನು ದೈತ್ಯಸಂಹಾರಕ್ಕೆ ಕಳುಹಿಸು'' ಎಂದು ಆದೇಶಕಳುಹಿಸಿದ್ದಾನೋ ಎನ್ನುವಂತೆ ನನಗೆ ಇದರ ಮೇಲೆ ಬಹಳ ಅಭಿಲಾಷೆ ಉಂಟಾಗಿದೆ. ಇದು ಸಾಮಾನ್ಯ ಪುಷ್ಪವಲ್ಲ. ಸಂಪದ್ಭರಿತಸ್ಥಳದಲ್ಲಿ ಸುರಕ್ಷಿತಗೊಂಡ ಈವಸ್ತು ಸುಲಭವಾಗಿ ಸಿಗತಕ್ಕದ್ದಲ್ಲವೆಂದು ತಿಳಿದು ಭೀಮನನ್ನು ಕುರಿತು ''ಈ ಪುಷ್ಪದ ಸೌಂದರ್ಯ ಪರಿಮಳದ ಸೊಗಸು ಎಲ್ಲವೂ ಅಪೂರ್ವವಾದದ್ದು. ಇದನ್ನು ಪಡೆದುಕೊಳ್ಳಬೇಕೆಂಬ ಆಸೆ ನನಗುಂಟಾಯಿತು. ಈ ಪುಷ್ಪವು ನನ್ನ ಮನಸ್ಸನ್ನು ಸೆಳೆಯುತ್ತಿರುವುದು ಯಾವುದೋ ಒಂದು ಮಹತ್ಕಾರ್ಯಕ್ಕಾಗಿಯೇ ಎಂದು ಭಾವಿಸುತ್ತೇನೆ'' ಎಂದಳು.

ಭೀಮನು ಸೌಗಂಧಿಕಪುಷ್ಪ ಎಲ್ಲಿದ್ದರೂ ತರುತ್ತೇನೆಂಬ ಸಂಕಲ್ಪದಿಂದ ಹೊರಟನು. ಗದಾಧರನಾಗಿ ಗಂಧಮಾದನ ಪರ್ವತವನ್ನು ಮೆಟ್ಟಿನಿಂತಾಗ ಗಿರಿಶಿಖರಗಳು ನಡುಗಿದವು. ಆಗ ದೇವತೆಗಳು ಭೀಮಸೇನನು ಸೌಗಂಧಿಕಾಪುಷ್ಪದ ನಿಮಿತ್ತವಿಟ್ಟು ದೈತ್ಯಸಂಹಾರದ ದೇವತಾಕಾರ್ಯಕ್ಕಾಗಿಯೇ ಹೊರಟಿದ್ದಾನೆಂದು ಮಾತನಾಡಿಕೊಂಡು ಭೀಮನಿಗೆ ಶುಭವನ್ನೇ ಕೋರುತ್ತಿದ್ದರು. ಭೀಮನು ರಭಸದಿಂದ ಬರುತ್ತಿದ್ದರೆ ಅವನ ವೇಗಕ್ಕೆ ಹೆಮ್ಮರಗಳೂ ಉರುಳಿಬೀಳುತ್ತಿದ್ದವು. ಭೀಮನ ಅದ್ಭುತ ವೇಗ ಅವನ ಗರ್ಜನೆಗಳನ್ನು ನೋಡಿದ ದೈತ್ಯರು ಮರಣಸಂಕಟದಿಂದ ಸಿಂಹ, ಹುಲಿ, ಕರಡಿಗಳಂತೆ ಕ್ರೂರಮೃಗಗಳ ರೂಪಧರಿಸಿ ಅವನನ್ನು ಸಿಗಿದು ತಿನ್ನುವಂತೆ ಬರುತ್ತಿದ್ದರೆ ಸರ್ವಜ್ಞಮೂರ್ತಿಯಾದ ಭೀಮನು ಆ ದುಷ್ಟರಾಕ್ಷಸರನ್ನು ಎಡಗಾಲಲ್ಲಿ ಮೆಟ್ಟಿ ಸಿಗಿದು ಎಸೆದು ಮುಂದೆ ಮುಂದ ಸಾಗುತ್ತಿದ್ದನು. ಅಸಮಬಲಶಾಲಿಯಾದ

ಭೀಮನು ಅನೇಕ ದೈತ್ಯರನ್ನು ಲೀಲಾಜಾಲವಾಗಿ ಕೊಲ್ಲುತ್ತ ಬರುತ್ತಿರುವಾಗ ದಾರಿಯಲ್ಲಿ ಅಡ್ಡವಾಗಿ ಬಿದ್ದಿದ್ದ ಅದ್ಭುತಾಕಾರದ ಒಂದು ಬಾಲವನ್ನು ಕಂಡನು.

ಭೀಮನಿಗೆ ಅಜ್ಞಾನವಿಲ್ಲ. ಆವನು ಸ್ವಚ್ಛಜ್ಞಾನ ಉಳ್ಳವನು. ತನ್ನ ಮೂಲರೂಪವನ್ನು ಸ್ಮರಣೆಗೆ ತಂದುಕೊಂಡನು. ಇದು ತನ್ನದೇ ಆದ ಇನ್ನೊಂದು ರೂಪವೆಂದು ತಿಳಿದಿದ್ದರೂ ಮೂಲರೂಪಕ್ಕು ತನ್ನ ರೂಪಕ್ಕು ವ್ಯತ್ಯಾಸವಿಲ್ಲದಿದ್ದರೂ ಮೂಲರೂಪಕ್ಕೆ ಮಹತ್ವ ಕೊಟ್ಟು ಮಾತನಾಡಿದರೆ ದೋಶವಿಲ್ಲವೆಂದು ಆ ಬಾಲವನ್ನು ದಾಟಿ ಹಾರಿಹೋಗದೆ ಗದೆಯಿಂದ ಸರಿಸಿದಾಗ ಬಾಲ ಅಲ್ಲಾಡದಿರಲು ಮಾನವ ಧರ್ಮವನ್ನವಲಂಬಿಸಿ ದೈತ್ಯರಿಗೆ ಮೋಹವನ್ನುಂಟುಮಾಡಲಿಕ್ಕಾಗಿ ಮೂಲರೂಪಕ್ಕೆ ಅಧಿಕ ಸಾಮರ್ಥ್ಯವನ್ನು ಕೊಟ್ಟು ತನ್ನ ಬಲಹ್ರಾಸಮಾಡಿದ.

ಹನುಮಂತನು ತ್ರೇತಾಯುಗದವನು. ಭೀಮಸೇನನು ದ್ವಾಪರಾಂತ್ಯದಲ್ಲಿ ಅವತರಿಸಿದವನು. ಕಾಲಧರ್ಮವನ್ನವಲಂಬಿಸಿ ಎರಡು ಅವತಾರಗಳ ಬಲಾಬಲವನ್ನು ಪ್ರಕಟಮಾಡಿ ತೋರಿಸಿದರು.

ಭೀಮಸೇನನಿಗೆ ಮೂಲರೂಪದ ಶಕ್ತಿ ಇದ್ದರೂ ಅದನ್ನು ಪ್ರಕಟಮಾಡದೆ ಯುಗಾನುಸಾರವಾಗಿ ನಡೆದನು.

ಭೀಮನು ಹನುಮಂತನನ್ನು ಕುರಿತು ''ನೀನು ಶ್ರೀರಾಮಾವತಾರ ಕಾಲದಲ್ಲಿ ಭಗವತ್ಕಾರ್ಯಸಾಧನೆಗಾಗಿ ಹೊರಟಾಗ ಬೃಹದ್ರೂಪ ತಾಳಿ ಸಮುದ್ರಲಂಘನ ಮಾಡಿದಿ ಎಂದು ಹೇಳುತ್ತಾರೆ. ನಾನು ನಿನ್ನ ಆ ಮಹದ್ರೂಪವನ್ನು ನೋಡಲಪೇಕ್ಷಿಸುವೆನು ತೋರಿಸು'' ಎಂದನು. ಆಗ ಹನುಮಂತನು ತನ್ನ ಬೃಹದ್ರೂಪವನ್ನು ತೋರಿಸಿ ಭೀಮನ ಅಪೇಕ್ಷೆಯಂತೆ ಅವನಿಗೆ ಶತಕೋಟಿ ರಾಮಚರಿತ್ರೆಯ ಸಾರಾಮೃತವನ್ನಿತ್ತು ನಾಲ್ಕುಯುಗದ ಧರ್ಮಸೂಕ್ಷ್ಮಗಳನ್ನು ತಿಳಿಸಿದನು. ನಂತರ ಭೀಮಸೇನನು ತನ್ನ ಆರಾಧನಾಮೂರ್ತಿಯಾದ ಶ್ರೀಕೃಷ್ಣನನ್ನು ಶ್ರೀರಾಮರೂಪದಿಂದ ಹನುಮಂತನಲ್ಲಿ ಕಂಡು ನಮಸ್ಕಾರಮಾಡಿದಾಗ ಹನುಮಂತನ ಅಂತರ್ಗತನಾದ ಶ್ರೀರಾಮನು ''ನಿನಗೆ ಬೇಕಾದ ವರ ಕೇಳು'' ಎಂದನು.

ಆಗ ಭೀಮನು ಹನುಮಂತಾ ದುಷ್ಟರಾದ ರಾಕ್ಷಸರ ತಂಡದಲ್ಲಿ ನೀನು ಶ್ರೀರಾಮಸೇವಾಸಕ್ತನಾಗಿ ಯುದ್ಧಮಾಡುವಾಗ ನಿನ್ನ ಗರ್ಜನೆಯನ್ನು ಕೇಳಿದ ಮಾತ್ರದಿಂದಲೇ ಅನೇಕ ರಾಕ್ಷಸರು ಸಾಯುತ್ತಿದ್ದರಂತೆ. ಆದ್ದರಿಂದ ನನ್ನ ತಮ್ಮನಾದ ಅರ್ಜುನನ ಧ್ವಜಸ್ತಂಭದಲ್ಲಿ ನೀನು ನೆಲಸಿರಬೇಕು. ಕುರುಕ್ಷೇತ್ರದ ಮಹಾಯುದ್ಧ ಸಮಯದಲ್ಲಿ ನನ್ನ ಗರ್ಜನೆ ನಿನ್ನ ಗರ್ಜನೆ ಎರಡೂ ಮಿಲನವಾಗಿ ಅದರಿಂದಲೇ ಅನೇಕ ದೈತ್ಯರು ಸಾಯುವಂತಾಗಬೇಕು'' ಎಂದು ಕೇಳಿದಾಗ ''ಹಾಗೆಯೇ ಆಗಲಿ'' ಎಂದು ಒಪ್ಪಿ ಅರ್ಜುನನಿಗೆ ಹನುಮದ್ಧ್ವಜನಾಗಿ

ನೆಲಸಿದ್ದು ಭಗವತ್ಕಾರ್ಯ ಸಾಧನೆಗೆ ನೆರವಾದನು. ಎಂದರೆ ಅವತಾರಗಳಲ್ಲಿ ಭೇದ ಜ್ಞಾನದ ನಾಶಕ್ಕಾಗಿ ಧ್ವನಿ ಒಂದುಗೂಡಿಸಿದ. ನಂತರ ಹನುಮಂತನು ಭೀಮನು ಹೊರಟಿರುವ ಕಾರಣವನು ತಿಳಿದು ಅವನನ್ನು ಮುಂದಿನ ಕಾರ್ಯಸಾಧನೆಗೆ ಕಳುಹಿಸಿ ತಾನು ಅಲ್ಲೇ ತಪೋನಿರತನಾಗಿದ್ದನು. ವಿಡಂಬನೆಗಾಗಿ ಆಗ ಭೀಮಸೇನನು ಹನುಮಂತನಿಂದ ಅಪ್ಪಣೆಪಡೆದು ಮುಂದೆ ಹೊರಟನು. ಗಂಧಮಾದನ ಪರ್ವತವನ್ನು ಏರಿ ಸೌಗಂಧಿಕ ಎಲ್ಲಿ ಸಿಗುತ್ತದೆಂದು ಸುತ್ತಮುತ್ತಲೂ ಕಣ್ಣುಗಳನ್ನು ಅರಳಿಸಿ ನೋಡಿದನು. ದೂರದಲ್ಲಿ ಜನಸಂಚಾರವಿಲ್ಲದ ಘೋರದಾನಪತಂಡದಿಂದ ತುಂಬಿರುವ ರಮ್ಯ ಸ್ಥಳವನ್ನು ಕಂಡನು. ಅತ್ತಕಡೆಯಿಂದ ಸೌಗಂಧಿಕಾಪುಷ್ಪದ ಪರಿಮಳ ತುಂಬಿಬರುತ್ತಿತ್ತು. ಇನ್ನು ಸ್ವಲ್ಪ ಮುಂದೆ ನೋಡಿದರೆ ಸುಂದರವಾದ ರತ್ನರಚಿತ ಸರೋವರ ಕಂಡನು. ಸುವರ್ಣರ ಚಿತಸೋಪಾನ. ನವರತ್ನದಿಂದ ಮಾಡಲ್ಪಟ್ಟ ಮಂಟಪಗಳು ಕಂಭಗಳು ಮೊದಲಾದುವುಗಳಿಂದ ಆ ಸುಗಂಧೋದಕ ಸರೋವರವು ರಾರಾಜಿಸುತ್ತಿತ್ತು. ಅದರಲ್ಲಿ ಅಂದವಾದ ಕಮಲಗಳು ಕಾಂತಿಯುಕ್ತವಾಗಿ ಅರಳಿ ಆನಂದತುಂಬುವುದನ್ನು ಕಂಡನು.

ಆಗ ಇಂಥ ರೂಪ-ಗುಣಗಳಿಂದ ತುಂಬಿದ ಈ ಪುಷ್ಪದಲ್ಲಿ ನನ್ನ ಸ್ವಾಮಿಯ ವಿಶೇಷ ಸನ್ನಿಧಾನ ಇರುವುದರಿಂದಲೇ ದ್ರೌಪದೇವಿ ಇದನ್ನು ಅಪೇಕ್ಷೆ ಪಟ್ಟಿದ್ದಾಳೆ. ಆಕೆಯ ಮನದಭಿಲಾಷೆ ಈಡೇರಿಸುತ್ತೇನೆ ಎಂಬ ಸಂಕಲ್ಪದಿಂದ ನೀರಿಗೆ ಹಾರಿದನು. ಅದು ಕುಬೇರನ ಉದ್ಯಾನವನ ಆಗಿತ್ತು. ಅದರ ಸುತ್ತಮುತ್ತಲೂ ಸಹಸ್ರ ಸಂಖ್ಯೆಯ ಕುಬೇರನ ಬೃತ್ಯರು ಭಯಂಕರ ಆಯುಧಪಾಣಿಗಳಾಗಿ ಕಾವಲು ಕಾಯುತ್ತಿದ್ದರು. ಭೀಮನು ಕೊಳದಲ್ಲಿ ಮುಳುಗಿ ನೀರನ್ನು ಮುಗಿಲೆತ್ತರಕ್ಕೆ ಹಾರಿಸಿ ಪುಷ್ಪಗಳನ್ನು ಬಾಚಿಕೊಳ್ಳುತ್ತಿರುವುದನ್ನು ನೋಡಿ ಭಯದಿಂದ ಓಡಿಬಂದು ''ನೀನಾರು? ಇಲ್ಲಿಗೆ ಜನರಾರೂ ಬರಕೂಡದು. ಆದ್ದರಿಂದಲೇ ಈ ಸ್ಥಳದಲ್ಲಿ ಸದಾ ಕಾಯುತ್ತಲಿರುತ್ತೇವೆ. ನಿನಗೆ ಬದುಕಿರಬೇಕೆಂಬ ಇಚ್ಛೆ ಇದ್ದರೆ ಈಗಲೇ ಇಲ್ಲಿಂದ ಹೊರಟುಹೋಗು'' ಎಂದು ದರ್ಪದಿಂದ ನುಡಿದರು.

ಆಗ ಭೀಮಸೇನನು ಅವರೆಲ್ಲರನ್ನೂ ಒಂದುಸಲ ತನ್ನ ಉಸುರಿನ ರಭಸದಿಂದ ಹೊಟ್ಟನ್ನು ಹಾರಿಸುವಂತೆ ಹಾರಿಸಿಬಿಟ್ಟನು.

ಕ್ರೋಧನಾಮಕ ರಾಕ್ಷಸರು ಹತ್ತುಸಾವಿರ ಲಕ್ಷ - ನೂರುಕೋಟಿ ರಾಕ್ಷಸರು ಅನೇಕ ಭಯಂಕರ ಆಯುಧಗಳ ಸಹಿತರಾಗಿ ಬಂದು ಭೀಮನನ್ನು ಮುತ್ತಿದರು. ಅವರೆಲ್ಲರೂ ರುದ್ರನಿಂದ ವರಪಡೆದುಬಂದಿದ್ದೇವೆ. ನಮಗೆ ಸೋಲಿಲ್ಲ, ಮರಣ ಭಯವಂತೂ ಇಲ್ಲವೇ ಇಲ್ಲವೆಂಬ ಧೈರ್ಯದಿಂದ ಬೊಬ್ಬಿಡುತ್ತಿರಲು ನಿಮ್ಮಶಿವನು ಹರಿದ್ವೇಶಿಗಳನ್ನು ಎಂದಿಗೂ ರಕ್ಷಿಸುವುದಿಲ್ಲ ಎಂದು ಹೇಳುತ್ತ ಅವರು ಶಿವನಿಂದ ಪಡೆದ ಆಯುಧಗಳನ್ನು ಧೈತ್ಯಸಂಹಾರದ ಸಂಕಲ್ಪದಂತೆ ಛಿದ್ರಗೊಳಿಸಿದನು.

ಶಿವನು ತನ್ನ ಪ್ರಭುವಾದ ನಾರಾಯಣನ ಅಧೀನನಾದ್ದರಿಂದ ನಾರಾಯಣನ ಆಜ್ಞೆಯಂತೆ ಬಂದಿರುವ ನನಗೆ ಅವನು ಜಯವನ್ನೇ ಉಂಟುಮಾಡುವನೆಂದು ಹೇಳುತ್ತ ಬಹಳ ಕ್ರೂರಕರ್ಮಿಗಳಾದ ಲಕ್ಷಮಂದಿ ರಾಕ್ಷಸರನ್ನು ಕೊಂದು ಉಳಿದವರನ್ನು ಕೊಲ್ಲದೆ ಓಡಿಸಿದನು. ನಂತರ ಕೊಳದೊಳಗೆ ಇಳಿದು ತನ್ನ ನೀಳಬಾಹುಗಳಿಂದ ಪಂಚವರ್ಣದ ಪುಷ್ಪಗಳನ್ನು ಬಾಚಿಕೊಂಡು ಕೊಂಕಳಲ್ಲಿ ಸಿಕ್ಕಿಸಿಕೊಂಡು ಗಂಧಮಾದನದ ಕಡೆಗೆ ಹೊರಟನು.

ಹೊರವಲಯದಲ್ಲೇ ಮೂರುಪದ್ಮರಾಕ್ಷಸರು ಕಾವಲಿದ್ದರು. ಅವರೆಲ್ಲರೂ ರಣದಬ್ಬರದಿಂದ ಮೇಲೆಬರಲು ಅವರೆಲ್ಲರಿಗೂ ಮಣಿಮಂತನೆಂಬ ಒಬ್ಬ ದೈವದ್ವೇಷೀ ರಾಕ್ಷಸನು ಮುಖಂಡನಾಗಿರಲು ಅವನನ್ನು ಕೊಂದು ಎಲ್ಲರನ್ನು ಬಡಿದೋಡಿಸಿದನು. ಮಣಿಮಂತನೆಂಬುವನು ಭೀಮನಿಂದ ಸತ್ತು ಕಲಿಯುಗದಲ್ಲಿ ಹುಟ್ಟಿ ದುಶ್ಶಾಸ್ತ್ರಗಳನ್ನು ರಚಿಸಿ ಜೀವೇಶ್ವರರಿಬ್ಬರಿಗೂ ಐಕ್ಯವನ್ನು ಉಪದೇಶ ಮಾಡುತ್ತ ಸರ್ವಗುಣ ಪರಿಪೂರ್ಣನೂ ಸರ್ವೇಶ್ವರನೂ ಆದ ಶ್ರೀಹರಿಯನ್ನು ನಿರ್ಗುಣನೆಂತಲೂ ನಿರಾಕಾರನೆಂತಲೂ ಹೇಳುತ್ತ ಸ್ವಚ್ಛಶಾಸ್ತ್ರಗಳನ್ನು ಮಿಥ್ಯಾಜ್ಞಾನದಿಂದ ಕುಶಾಸ್ತ್ರಗಳನ್ನು ರಚಿಸಿದನು. ಮಣಿಮಂತನು ಮಹಾಪರಾಕ್ರಮಿ ಆದ್ದರಿಂದ ಕುಬೇರನಿಗೆ ಮಿತ್ರನಾಗಿದ್ದನು. ಇವನು ಸತ್ತನೆಂದು ಕುಬೇರನು ಭೀಮನೊಡನೆ ಯುದ್ಧಕ್ಕೆ ಬಂದನು. ಭೀಮನ ಸತ್ಯವಾದ ಬಲಪರಾಕ್ರಮಗಳಿಂದ ಆಶ್ಚರ್ಯಹೊಂದಿ ಭೀಮಸೇನನೇ ಈತನೆಂದು ತಿಳಿದನಂತರ ಯುದ್ಧವನ್ನು ನಿಲ್ಲಿಸಿದನಂತರ ಅವನಿಗೆ ಪೂರ್ವವೃತ್ತಾಂತ ಸ್ಮರಣೆಗೆ ಬಂದಿತು. ಮಣಿಮಂತನಂಥ ಅಸಮ ಬಲಿಷ್ಠನನ್ನು ಕೊಲ್ಲಬೇಕಾದರೆ ಭೀಮ ಒಬ್ಬನಿಂದ ಮಾತ್ರಸಾಧ್ಯ. ಹಿಂದೆ ಒಂದುಬಾರಿ ಮಣಿಮಂತನು ಆಕಾಶಗಾಮಿಯಾಗಿ ಹೋಗುವಾಗ ಅಗಸ್ತ್ಯರ ಮೇಲೆ ಉಗುಳಿ ಅಪಚಾರಮಾಡಿದ ಪ್ರಯುಕ್ತ ಮುನಿವರರು ನಿನಗೆ ಭೀಮಸೇನನ ಕೈಲಿ ಮರಣಬರಲಿ'' ಎಂದು ಶಾಪಕೊಟ್ಟಿದ್ದರು. ಬ್ರಾಹ್ಮಣರ ವಾಕ್ಯ ಸತ್ಯವಾಯಿತು'' ಎಂದು ತಿಳಿದು ಭೀಮಸೇನನ್ನು ಉಪಚರಿಸಿ ಸನ್ಮಾನಿಸಿ ಕಳುಹಿಸಿಕೊಟ್ಟನು.

ಇತ್ತ ಧರ್ಮರಾಜನು ಭೀಮಗರ್ಜನೆಯನ್ನು ದೂರದಿಂದ ಕೇಳಿ ಭೀಮನು ಯಾರೋ ರಾಕ್ಷಸರ ಸಂಗಡ ಯುದ್ಧಕ್ಕೆ ಹೋದಂತಿದೆ. ಅಪಶಕುನಗಳು ಬೇರೆ ಮೇಲಿಂದಮೇಲೆ ಕಾಣುತ್ತಿದೆ ಎಂದು ಭಯದಿಂದ ನಕುಲಸಹದೇವರನ್ನು ಕುರಿತು ಇನ್ನೂ ಅರ್ಜುನನು ಬರಲಿಲ್ಲ. ಭೀಮನಾದರೋ ರಾಕ್ಷಸ ಸಂಹಾರದ ಯೋಚನೆಯಲ್ಲೇ ಯಾವಾಗಲೂ ಇರುತ್ತಾನೆ. ಮುಂದೇನು ಅಪಾಯ ಸಂಭವಿಸುತ್ತದೋ ಎಂದು ಚಿಂತಿಸಿ ''ದ್ರೌಪದೀ! ಭೀಮಸೇನ ಎಲ್ಲಿಗೆ ಹೋದನು?'' ಎಂದು ಕೇಳಿದನು. ಆಗ ದ್ರೌಪದಿಯು ಮಹಾಪ್ರಭಾವಶಾಲಿಯೂ ಮಹಾರುದ್ರನ ಪರಮಮಿತ್ರನೂ ಆದ ಕುಬೇರನನ್ನು ಸಕಲ ದೈತ್ಯಪಡೆಯೂ ದೇವತೆಗಳ ಭಯದಿಂದ ಮೊರೆಹೊಕ್ಕಿದ್ದಾರೆ. ಆ ದೈತ್ಯರು ಕುಬೇರನ ಉದ್ಯಾನವನದಲ್ಲಿ ಅವನ ಅತ್ಯಂತ

ಪ್ರೀತಿಕರವಾದ ಪದ್ಮಸರೋವರನ್ನು ಕಾದುಕೊಂಡಿದ್ದಾರೆ. ಅವರೆಲ್ಲರ ಸಂಹಾರ ಭೀಮಸೇನನಿಂದ ನಡೆಯಬೇಕೆಂಬ ಸಂಕಲ್ಪದಿಂದ ವಾಯುದೇವರು ಕುಬೇರನ ಕೊಳದಿಂದ ಒಂದು ಪಂಚವರ್ಣದ ಅತ್ಯಮೂಲ್ಯ ಸೌಗಂಧಿಕಾ ಪುಷ್ಪ ಒಂದನ್ನು ನನ್ನಬಳಿಗೆ ಕಳುಹಿಸಿದರು. ನಾನು ವಾಯುದೇವರ ಸಂದೇಶವನ್ನರಿತು ಭೀಮನನ್ನು ಕುರಿತು ನನಗೆ ಸೌಗಂಧಿಕಾಪುಷ್ಪ ಬೇಕೆಂದು ಕೇಳಿ ಕಳುಹಿಸಿದೆನು. ನನ್ನ ಪ್ರಾರ್ಥನೆಯಂತೆ ಕೈಲಿ ಗದೆ ಹಿಡಿದು ಮನುಷ್ಯರಿಗೆ ಅಸಾಧ್ಯವಾದ ಪರ್ವತವನ್ನು ಏರಿಹೋದರು'' ಎಂದು ಹೇಳಿದಳು.

ಆಗ ಧರ್ಮರಾಯನು ಭೀಮನೊಬ್ಬನೇ ಆ ಅಸಂಖ್ಯ ದೈತ್ಯರೊಡನೆ ಹೋರಾಡಿ ಜಯಶೀಲನಾಗಿ ಬರುವುದೆಂದರೆ ಬಹಳ ಕಷ್ಟವೆಂದು ಚಿಂತಿಸಿ ಘಟೋತ್ಕಚನನ್ನು ಸ್ಮರಿಸಿದನು. ಆಗ ಘಟೋತ್ಕಚನು ಅನೇಕ ರಾಕ್ಷಸರೊಂದಿಗೆ ಬರಲು ''ಪುತ್ರಾ! ನಿನ್ನತಂದೆ ಕುಬೇರ ರಾಜ್ಯದಲ್ಲಿರುವ ಕ್ರೋಧನಾಮಕ ಕ್ರೂರರಾಕ್ಷಸರನ್ನು ಸಂಹಾರಮಾಡಲು ಒಬ್ಬನೇ ಹೋಗಿರುವುದರಿಂದ ಬಹಳ ಹೆದರಿದ್ದೇನೆ. ಈಗಲೇ ಅವನಬಳಿಗೆ ಹೋಗುವ ನಡೆ'' ಎಂದಾಗ ಘಟೋತ್ಕಚನು ಧರ್ಮರಾಯನನ್ನು ಹೆಗಲಮೇಲೇರಿಸಿಕೊಂಡು ತನ್ನ ಅನುಯಾಯಿಗಳೊಡನೆ ಬರುತ್ತಿರುವಾಗ ಎದುರಿಗೆ ಭೀಮಸೇನನು ಕೋಟಿ ರಾಕ್ಷಸರ ಸಂಹಾರಮಾಡಿ ಕುಬೇರನಿಂದ ಸಂತೋಷದ ಸತ್ಕಾರ ಪಡೆದು ಸೌಗಂಧಿಕಪುಷ್ಪಗಳ ಪ್ರಕಾಶವನ್ನು ಸುಗಂಧವನ್ನು ಎಲ್ಲೆಡೆಗಳಲ್ಲೂ ಹರಡುತ್ತ ರಭಸದಿಂದ ಬರುತ್ತಿರುವುದನ್ನು ನೋಡಿದ ಧರ್ಮರಾಜನಿಗೆ ಆದ ಆನಂದ ಅಷ್ಟಿಷ್ಟಲ್ಲ. ಧರ್ಮರಾಜನು ಭೀಮನ ಬಳಿಗೆ ಓಡಿಬಂದು ಆಲಂಗಿಸಿ ''ಭೀಮಾ! ನೀನು ಅರ್ಜುನ ಇಬ್ಬರೂ ನನಗೆ ಎರಡು ಕಣ್ಣುಗಳಂತಿದ್ದೀರಿ. ಅರ್ಜುನ ದೇವಲೋಕದಿಂದ ಇನ್ನು ಬರಲಿಲ್ಲ. ನೀನು ಹೀಗೆ ದೈತ್ಯಸಂಹಾರಕ್ಕೆಂದು ಒಬ್ಬನೇ ಹೊರಟುಬಂದಿರುವಿ. ನೀನೇನಾದರೂ ದೈತ್ಯರ ಕೈಲಿ ಸತ್ತರೆ ನಮ್ಮ ಗತಿ ಏನು? ನಾವೆಲ್ಲರೂ ಕಾಡುಪಾಲಾಗಿ ಹೋಗಬೇಕಾಗಿತ್ತು ಎಂದು ಹೇಳುತ್ತ ''ತಮ್ಮಾ! ನನ್ನನ್ನು ಬಿಟ್ಟು ಹೀಗೆ ಒಬ್ಬನೇ ಅಗಲಿ ಹೋಗಬೇಡಪ್ಪಾ. ನಾನು ನಿನ್ನ ವಿರಹವನ್ನು ತಾಳಲಾರೆ'' ಎಂದುಹೇಳುತ್ತ ಭೀಮನ ಪರಾಕ್ರಮ ಗುಣಗಳನ್ನು ಹೊಗಳಿ ಸಂತೋಷಪಟ್ಟನು. ಕುಬೇರನ ಇಚ್ಛೆಯಂತೆ ಪಾಂಡವರು ಗಂಧಮಾದನ ಪರ್ವತದಲ್ಲಿ ನಾಲ್ಕು ವರ್ಷಗಳ ಕಾಲ ಸೌಖ್ಯದಿಂದ ಇದ್ದರು.

## ಸ್ವರ್ಗದಲ್ಲಿ ಅರ್ಜುನನ ಅಸಮಪರಾಕ್ರಮ

ಅರ್ಜುನನು ಅಮರಾವತಿಯಲ್ಲಿ ಸುರರಾಜನೊಡನೆ ಸಂತೋಷದಿಂದ ನಾಲ್ಕುವರ್ಷಗಳ ಕಾಲ ಇದ್ದು ನಂತರ ಸಹೋದರರನ್ನು ನೋಡಲು ಇಚ್ಛಿಸಿ ದೇವೇಂದ್ರನ ಅನುಮತಿ ಕೇಳಿದನು.

ದೇವೇಂದ್ರನು ''ಅರ್ಜುನಾ! ನೀನು ಕಲಿತ ವಿದ್ಯಗಳಿಗೆ ಗುರುದಕ್ಷಣೆ ಕೊಡಬೇಕು.

ಏನು ಕೊಡುವೆ?'' ಎಂದನು. ''ನೀನು ಕೇಳಿದ್ದು ಕೊಡಲು ಸಿದ್ಧನಿರುವೆನು'' ಎಂದು ಅರ್ಜುನನು ಹೇಳಿದಾಗ ''ಪಾರ್ಥಾ! ನನಗೆ ಕಡುವೈರಿಗಳಾದ ನಿವಾತಕವಚರೆಂಬುವರು ಮೂರುಕೋಟಿ ಇದ್ದಾರೆ. ಆದೈತ್ಯರು ಮಹಾಪ್ರಬಲರಾಗಿ ಬ್ರಹ್ಮದೇವರ ವರಬಲದಿಂದ ಅವಧ್ಯರಾಗಿ ಮೆರೆಯುತ್ತಿದ್ದಾರೆ. ನಾನು ಬ್ರಹ್ಮದೇವರನ್ನುಕುರಿತು ಆದೈತ್ಯರು ನಿನ್ನ ವರದಿಂದ ದೇವತೆಗಳೆಲ್ಲರಿಗೂ ಪೀಡಕರಾಗಿ ಉರುವಣಿಸುತ್ತಿದ್ದಾರೆ. ಅವರನ್ನು ವಧೆಮಾಡಲು ನೀನೇ ಉಪಾಯ ಹೇಳು'' ಎಂದಾಗ ''ನೀನು ಮನುಷ್ಯನಾಗಿ ಅವತರಿಸಿದಾಗ ಈ ದೈತ್ಯರೆಲ್ಲರನ್ನು ವಿನಾಶಗೊಳಿಸುವಿ'' ಎಂದು ಹೇಳಿದ್ದಪ್ರಕಾರ ನೀನು ನನ್ನ ಆವೇಶವುಳ್ಳವನಾದ್ದರಿಂದ ಆವರನ್ನು ಸಂಹಾರಮಾಡುವ ಸಾಮರ್ಥ್ಯ ನಿನಗುಂಟಾಗುತ್ತದೆ. ನೀನು ಅವರನ್ನು ವಧಿಸಿ ದೇವತೆಗಳ ಕಷ್ಟನಿವಾರಣೆ ಮಾಡಿದರೆ ಅದೇ ನನಗೆ ಗುರುದಕ್ಷಣೆ'' ಎಂದನು.

ಅರ್ಜುನನು 'ಹಾಗೆಯೇ ಆಗಲಿ' ಎಂದು ನಿವಾತಕವಚರ ಸ್ಥಳಕ್ಕೆ ಯುದ್ಧಕ್ಕಾಗಿ ಹೊರಟನು. ಆಗ ದೇವತೆಗಳೆಲ್ಲರೂ ಮಹದಾನಂದದಿಂದ ಅರ್ಜುನನಿಗೆ ಮಂಗಳಾಶಾಸನವನ್ನು ಹೇಳಿ ದೇವದತ್ತವೆಂಬ ಶಂಖವನ್ನು ಕೊಟ್ಟು ಕಳುಹಿಸಿದರು.

ಅರ್ಜುನನು ರಣದುತ್ಸಾಹದಿಂದ ಧನುಸ್ಸಿನ ಠಂಕಾರಶಬ್ದದಿಂದಲೂ ಶಂಖನಾದದಿಂದಲೂ ರಣನಾದದಿಂದ ಹೋಗಿ ಮುತ್ತಿಗೆ ಹಾಕಲು ಬ್ರಹ್ಮದೇವರ ವರಬಲದಿಂದ ಗರ್ವದಿಂದ ಮೆರೆಯುತ್ತಿದ್ದ. ನಿವಾತಕವಚರು ಮದೋನ್ಮತ್ತರಾಗಿ ಬಂದು ಅರ್ಜುನನನ್ನು ಅನೇಕ ಶಸ್ತ್ರಾಸ್ತ್ರಗಳಿಂದ ಪೀಡಿಸತೊಡಗಿದರು.

ಅರ್ಜುನನು ಅವರೊಂದಿಗೆ ಘೋರಕಾಳಗ ನಡೆಸಿ ಎಲ್ಲರನ್ನು ಅಕ್ಷಯಬತ್ತಳಿಕೆಯಿಂದ ತಲೆಕತ್ತರಿಸಿ ಕೆಳಗುರುಳಿಸಿ ಜಯಶಾಲಿಯಾಗಿ ಬರುತ್ತಿರುವಾಗ ಪೌಲೋಮ ಕಾಲಕೇಯರು ಅರವತ್ತು ಸಹಸ್ರಮಂದಿ ಬಂದು ಅರ್ಜುನನನ್ನು ಮುತ್ತಿ ಅಸ್ತ್ರದ ಮಳೆ ಸುರಿಸಿದರು. ಆಗ ಅರ್ಜುನನು ಸ್ವಾಮಿಯು ಶ್ರೀರುದ್ರದೇವನು ಕರುಣಿಸಿದ ಪಾಶುಪತಾಸ್ತ್ರದಲ್ಲಿ ಅಂತರ್ಗತನಾಗಿದ್ದಾನೆಂಬ ಜ್ಞಾನದಿಂದ ಪ್ರಯೋಗಮಾಡಿದಾಗ ಆ ಪಾಶುಪತಾಸ್ತ್ರವು ಅನೇಕ ಸಹಸ್ರ ವೈರಿಗಳನ್ನು ತರಿದು ಹಾಕಿತು. ದೈತ್ಯರ ಪಟ್ಟಣವನ್ನು ಸುಟ್ಟು ಬೂದಿಯ ರಾಶಿಯನ್ನಾಗಿ ಮಾಡಿ ಜಯಘೋಷದಿಂದ ಸ್ವರ್ಗಕ್ಕೆ ಹೊರಟು ಬಂದನು.

ಸುರರಾಜನಿಗೆ ನಿವಾತಕವಚರ ವಧಾವೃತ್ತಾಂತವೆಲ್ಲವನ್ನು ತಿಳಿಸಿ ಎಲ್ಲರಿಂದಲೂ ಮನ್ನಣೆಯನ್ನು ಪಡೆದು ದೇವೇಂದ್ರನಿಂದ ತನ್ನ ಸಹೋದರರಿರುವ ಗಂಧಮಾದನಕ್ಕೊರಡಲು ಅಪ್ಪಣೆಪಡೆದು ಪಾಂಡವರ ಬಳಿಗೆ ಬಂದು ಸಕಲವೃತ್ತಾಂತವನ್ನು ತಿಳಿಸಿ ಎಲ್ಲರನ್ನು ಸಂತೋಷಪಡಿಸಿದನು.

ಹೀಗೆ ಕೆಲವುದಿನಗಳು ಕಳೆದನಂತರ ಭೀಮನು ಧರ್ಮರಾಜನನ್ನು ಕುರಿತು ''ನಾವು

ವನವಾಸಕ್ಕೆ ಬಂದು ಇಂದಿಗೆ ಒಂಭತ್ತು ವರ್ಷ ಆಯಿತು. ನಾವೀಗ ನಮ್ಮ ರಾಜ್ಯದಿಂದ ಐವತ್ತು ಸಾವಿರ ಯೋಜನದ ದೂರದಲ್ಲಿದ್ದೇವೆ. ಆದ್ದರಿಂದ ನಾವು ನಮ್ಮ ರಾಷ್ಟ್ರದ ಸಮೀಪದಲ್ಲೇ ಇದ್ದು ವನವಾಸ ಅಜ್ಞಾತವಾಸಗಳ ಅವಧಿ ಮುಗಿದನಂತರವಾದರೂ ರಾಜ್ಯವನ್ನು ಶತೃಗಳಿಂದ ಸ್ವಾಧೀನ ಮಾಡಿಕೊಳ್ಳುವ ಪ್ರಯತ್ನ ಪಡಬೇಕು. ನಾವು ಭಗವದಾಜ್ಞೆಯನ್ನು ಮೀರದಂತೆ ಪಾಲಿಸಬೇಕು. ನಾವು ವೀರಕ್ಷತ್ರಿಯರಾದ್ದರಿಂದ ಬ್ರಾಹ್ಮಣವೃತ್ತಿಯನ್ನು ಅವಲಂಬಿಸಿದರೆ ದೋಶಬರುತ್ತದೆ. ಬ್ರಾಹ್ಮಣರಿಗೆ ಬಾಹ್ಯಶತೃಗಳನ್ನು ಕೊಲ್ಲತಕ್ಕ ಅಧಿಕಾರವಿಲ್ಲ. ಮನುಷ್ಯರಲ್ಲಿ ಹುಟ್ಟುವ ಅಂತಃಶತೃಗಳಾದ ಕಾಮಕ್ರೋಧಾದಿ ಶತೃಗಳನ್ನು ಶೃತಿವಾಕ್ಯಗಳು ಹೇಳಿರುವಂತೆ ಅವರ ಆಧಾರ ಪಡೆದು ಜ್ಞಾನವೆಂಬ ಖಡ್ಗವನ್ನು ಪ್ರಯೋಗಿಸಿ ವೈರಿಗಳನ್ನು ಕೊಲ್ಲುವ ಸಾಮರ್ಥ್ಯ ಹೊಂದಬೇಕು. ಕ್ಷತ್ರಿಯರಾದ ನಮ್ಮ ಧರ್ಮವೇನೆಂದರೆ ದುಷ್ಠರೂ ಅಧರ್ಮಿಗಳೂ ಹರಿನಿಂದಕರೂ ಆದ ಪಾಪಿಗಳನ್ನು ಧ್ವಂಸಮಾಡಬೇಕು. ಧರ್ಮದ್ರೋಹ ಮಾಡಬಾರದು'' ಎಂದು ಹೇಳಿ ಘಟೋತ್ಕಚನನ್ನು ಕರೆದು ಅವನ ಸಹಾಯದಿಂದ ದಕ್ಷಿಣದಿಕ್ಕಿಗೆ ಹೊರಟು ಬಂದು ಅಲ್ಲಿ ನೆಲಸಿದರು.

ಅಲ್ಲಿ ತಮ್ಮ ನಿತ್ಯವಿಧಿಗಳನ್ನು ಧರ್ಮದಿಂದ ಆಚರಿಸುತ್ತ ಗೋಬ್ರಾಹ್ಮಣ ರಕ್ಷಣೆಯಲ್ಲಿ ನಿರತರಾಗಿದ್ದರು.

ಒಂದುದಿನ ಭೀಮಸೇನನು ಮೃಗಬೇಟೆಗಾಗಿ ದೂರದಕಾಡಿಗೆ ಹೋದನು. ಆ ಸಮಯದಲ್ಲಿ ಋಷಿಶಾಪದಿಂದ ಅಜಗರ ಜನ್ಮ ಹೊಂದಿದ್ದ ನಹುಷನು ಶಾಪಮುಕ್ತನಾಗಲು ಭೀಮನ ಕಾಲನ್ನು ಬಲವಾಗಿ ಸುತ್ತುಕೊಂಡನು. ಭೀಮನಿಗೆ ಒಂದು ಅಜಗರನ ಬಂಧನವನ್ನು ಬಿಡಿಸಿಕೊಳ್ಳುವುದು ದೊಡ್ಡಮಾತಾಗಿರಲಿಲ್ಲ. ಋಷಿಶಾಪಗ್ರಸ್ಥನಾಗಿದ್ದ ನಹುಷನೇ ಈ ಅಜಗರ ಎಂದು ತಿಳಿದಕಾರಣ ಬ್ರಾಹ್ಮಣರ ವಾಕ್ಯಸತ್ಯವೇ ಆಗಬೇಕಾದ್ದರಿಂದ ಬಿಡಿಸಿಕೊಳ್ಳುವ ಪ್ರಯತ್ನ ಮಾಡಲಿಲ್ಲ. ಅಜಗರನು ಕೇಳಿದ ಪ್ರಶ್ನೆಗಳಿಗೆ ಉತ್ತರ ಹೇಳಿದಂತೆ ಅಜಗರನ ಶ್ಶಾಪವಿಮೋಚನೆ ಆಗುತ್ತಿತ್ತು. ಭೀಮನಿಗೆ ವಿದ್ಯೋಪಜೀವ ನಿಶೇಧ ಕರ್ಮವೆಂಬ ಪ್ರತಿಜ್ಞೆ ಉಳ್ಳವನಾದ್ದರಿಂದ ಅಜಗರನ ಪ್ರಶ್ನೆಗೆ ಉತ್ತರಹೇಳದೆ ನಿಂತಿದ್ದನು.

ಭೀಮನು ಬೇಟೆಗೆಂದು ಹೋದವನು ಎಷ್ಟು ಹೊತ್ತಾದರೂ ಬರದೇ ಇರಲು ಕಾರಣವೇನೆಂದು ಧರ್ಮರಾಜನು ಹುಡುಕುತ್ತ ಹೊರಟನು. ಭೀಮನು ಯಾವದಿಕ್ಕಿಗೆ ಹೋಗಿದ್ದಾನೆಂದು ಯೋಚಿಸುತ್ತ ಬರುತ್ತಿರಲು ಮಾರ್ಗದಲ್ಲಿ ಸಾಲುಮರಗಳು ಉರುಳಿ ಬಿದ್ದಿರುವುದನ್ನು ನೋಡಿ ಭೀಮನು ಈ ಮಾರ್ಗದಿಂದಲೇ ಹೋಗಿದ್ದಾನೆ. ಆದ್ದರಿಂದಲೇ ಅವನ ರಭಸಕ್ಕೆ ವೃಕ್ಷಗಳು ಮುರಿದುಬಿದ್ದಿವೆ'' ಎಂದುಕೊಂಡು ಬರುತ್ತಿದ್ದರೆ ಭೀಮನು ಒಂದು ಹಾವಿನ ಸುತ್ತಿಗೆ ಬಂಧಿತನಾಗಿ ನಿಂತಿರುವುದನ್ನು ಕಂಡು ಭೀಮ ಹಿಮವತ್ಪರ್ವತವನ್ನೇ ಕಿತ್ತೆಸೆಯುವಂಥವನು ಇವನಿಗೆ ಈ ಅಜಗರನ ಬಂಧನವೇ? ಎಂದು ಸಂದೇಹದಿಂದ

ಆ ಹಾವನ್ನು ಕುರಿತು ''ನೀನಾರು?'' ಎಂದು ಪ್ರಶ್ನೆ ಮಾಡಿದನು.

## ಧರಣೀಪತಿಯ ಧರ್ಮ-ಕ್ಷಯಗೊಂಡಿತು

''ಧರ್ಮರಾಜಾ! ನಾನು ನಿಮ್ಮ ವಂಶದವನೇ ಆದ ನಹುಷರಾಜನು. ನನ್ನ ಈ ದುರ್ಗತಿಗೆ ಕಾರಣ ಕೇಳು.

ದೇವೇಂದ್ರನು ಶ್ರೀಹರಿಯ ಪ್ರೇರಣಾನುಸಾರ ವೃತ್ರಾಸುರನನ್ನು ಕೊಂದು ಲೋಕೋಪಕಾರಮಾಡಿದ್ದರೂ ಬ್ರಹ್ಮಣಹತ್ಯ ದೋಶವೆಂದು ಜಗತ್ತಿಗೆ ತೋರಿಸಲಿಕ್ಕಾಗಿ ದುಃಖವನ್ನನುಭವಿಸಲು ಪಾಪಭೀತಿಯಿಂದ ಒಂದು ಕಮಲದ ದಂಟಿನಲ್ಲಿ ಅಡಗಿಕೊಂಡಿದ್ದನು. ಸ್ವರ್ಗಲೋಕದಲ್ಲಿ ರಾಜನಿಲ್ಲಂದಾತಗಲು ದೇವತೆಗಳೆಲ್ಲರೂ ಬ್ರಹ್ಮದೇವರ ಆಜ್ಞೆಯಂತೆ ನನ್ನಬಳಿಗೆ ಬಂದು ನಹುಷರಾಜಾ! ನೀನು ಸ್ವಗದಲೋಕದರಸನಾಗಲು ಬ್ರಹ್ಮನ ಆಜ್ಞೆ ಆಗಿದೆ. ಬಾ' ಎಂದು ಹೇಳಿ ದೇವತೆಗಳೆಲ್ಲರೂ ತಮ್ಮ ತಪಸ್ಸು-ವೀರ್ಯ-ಬಲಗಳನ್ನು ನನಗೆ ಕೊಟ್ಟು ಸ್ವರ್ಗರಾಜ್ಯದಲ್ಲಿ ಪಟ್ಟಾಭಿಷೇಕಮಾಡಿದರು.

ನನಗೆ ಇಂದ್ರಪದವಿ ದೊರಕಿದ್ದು ಶ್ರೀಹರಿಯ ಕೃಪಾಭಾಗ್ಯದಿಂದ ಎಂಬ ಸುಜ್ಞಾನ ಬರದೆ ನನ್ನ ಪುಣ್ಯಾಧಿಕ್ಯದಿಂದ ಎಂಬ ಅಜ್ಞಾನ ಒಂದಡರಿ ಭಗವಂತನನ್ನು ಮರೆತ ದೋಶದಿಂದ ಕಾಮಕ್ರೋಧಾದಿಗಳೆಂಬ ಅಸುರರು ನನ್ನಲ್ಲಿ ಪ್ರವೇಶ ಮಾಡಿದರು. ಮಹಾಪತಿವ್ರತೆಯಾದ ಶಚೀದೇವಿಯನ್ನೇ ವಶಪಡಿಸಿಕೊಂಡು ಸುಖಲೋಲುಪನಾಗಬೇಕೆಂಬ ನೀಚಬುದ್ಧಿ ಉಂಟಾಗಿ ಆಕೆಯನ್ನು ಪೀಡಿಸತೊಡಗಿದೆನು. ಆಗ ಶಚೀದೇವಿಯು ನನ್ನ ಪೀಡೆಯಿಂದ ಭಯಪಟ್ಟವಳಾಗಿ ದೇವಗುರುಗಳಾದ ಬೃಹಸ್ಪತ್ಯಾಚಾರ್ಯನನ್ನು ಮೊರೆಹೊಕ್ಕಳು. ಶಚೀದೇವಿಯು ಬೃಹಸ್ಪತ್ಯಾಚಾರ್ಯರು ಹೇಳಿಕೊಟ್ಟ ಉಪಾಯದಂತೆ ನನಗೆ ''ನಾನು ನಿನ್ನ ಅಭಿಲಾಷೆಯಂತೆ ನಿನ್ನ ವಶಳಾಗಿರುತ್ತೇನೆ. ಆದರೆ ನೀನು ಸಪ್ತರ್ಷಿಗಳ ಕೈಲಿ ಅಂದಣವನ್ನು ಹೊರಸಿಕೊಂಡು ನನ್ನ ಅಂತಃಪುರಕ್ಕೆ ಬರಬೇಕು'' ಎಂದಳು.

ಸಕಲಪುಣ್ಯವನ್ನು ಕಳೆದುಕೊಂಡು ಅಸುರಾವೇಶಯುಕ್ತನಾದ ನಾನು ಹುಚ್ಚುಕಾಮದಿಂದ ಅದಕ್ಕೂ ಒಪ್ಪಿ ಬಂಗಾರದ ಅಂದಣವನ್ನೇರಿ ಸಪ್ತರ್ಷಿಗಳಿಂದ ಹೊರಿಸಿಕೊಂಡು ಗರ್ವಮದಭರಿತನಾಗಿ ಕುಳಿತು ಬ್ರಹ್ಮಣದೇವತೆಗಳಿಂದ ಸೇವೆ ಮಾಡಿಸಿಕೊಂಡ ಪಾಪಫಲದಿಂದ ದೈವದ್ರೋಹದ ಪಾಪಕ್ಕೊಳಗಾದೆನು. ವೇದ ಅಪ್ರಮಾಣವೆಂದು ಹೇಳಿ ಭಗವದ್ವಾಕ್ಯವನ್ನೇ ಅಸತ್ಯವೆಂದು ಹಳಿದ ಘೋರಪಾಪವೂ ನನ್ನನ್ನು ಸುತ್ತಿಕೊಂಡಿತು. ಶ್ರೀಹರಿಯ ಅತ್ಯಂತ ಪ್ರಿಯರಾದ ಬ್ರಾಹ್ಮಣರನ್ನು ನನ್ನಕಾಲಿಂದ ಒದ್ದೆನು. ಇಂಥ ಘೋರತರ ಪಾಪಗಳು ನನ್ನಿಂದ ನಡೆದಾಗ ಸಪ್ತಋಷಿಗಳು ನನ್ನ ಪಾಪದ ಬಿಂದಿಗೆ ತುಂಬಿ ಪೂರ್ಣನೀಚತ್ವ ನನಗೆ ಉಂಟಾಗಿದ್ದರೂ ದೇವೇಂದ್ರನ ಸಿಂಹಾಸನವೇರಿದ ನಹುಷನಿಗೆ ತಾವು ಶಾಪಕೊಡತಕ್ಕ

ಅಧಿಕಾರವಿಲ್ಲವೆಂಬ ಧರ್ಮದಂತೆ ತಮ್ಮ ಜಟೆಯೊಳಗೆ ಇದ್ದ ಭೃಗುಋಷಿಗಳೊಳಗೆ ಬ್ರಹ್ಮದೇವರನ್ನು ಆಹ್ವಾನಮಾಡಿ ನನಗೆ ಅಜಗರ ಜನ್ಮಬರುವಂತೆ ಶಾಪಕೊಟ್ಟರು. ನಾನು ಬ್ರಾಹ್ಮಣವಾಕ್ಯದಂತೆ ಆಕ್ಷಣವೇ ಸ್ವರ್ಗದಿಂದ ಕೆಳಗುರುಳಿ ಅಜಗರನಾಗಿ ಬಿದ್ದಿದ್ದೇನೆ.

ನಾನು ಅಜಗರ ವ್ರತದಿಂದ ಅನೇಕವರ್ಷಗಳ ಕಾಲ ತಪಃಸ್ಸಾಧನೆ ಮಾಡಿ ದೇವತೆಗಳನ್ನು ಕುರಿತು ಮೊರೆಯಿಟ್ಟು ಪ್ರಾರ್ಥಿಸಿದಾಗ ''ನಿನ್ನ ಶಾಪವಿಮೋಚನೆ ಆಗಬೇಕಾದರೆ ಕಲಿಮರ್ಧನನಾದ ಭೀಮಸೇನನು ಬೇಟೆಯ ನಿಮಿತ್ತದಿಂದ ನಿನ್ನಬಳಿಗೆ ಬರುತ್ತಾನೆ. ಆಗ ನೀನು ಅವನ ಕಾಲುಹಿಡಿದುಕೊಂಡು ಪ್ರಶ್ನೆ ಕೇಳಿದಾಗ ಅವನು ವಿದ್ಯೋಪಜೀವನಕ್ಕೆ ಒಪ್ಪುವುದಿಲ್ಲ. ಆಮೇಲೆ ಅವನ ಅಣ್ಣನಾದ ದರ್ಮರಾಜನು ಬಂದು ನಿನ್ನ ಪ್ರಶ್ನೆಗೆ ಉತ್ತರ ಹೇಳುತ್ತಾನೆ. ಆಗ ನಿನ್ನ ಅಜಗರದೇಹ ಹೋಗಿ ನಿನ್ನ ನಿಜರೂಪ ಬರುತ್ತದೆ'' ಎಂದು ಹೇಳಿದ್ದರು. ಅದರಂತೆ ಈಗ ಎಲ್ಲವೂ ನಡೆದಿತು. ''ಧರ್ಮರಾಜಾ! ಸಕಲದೇವತೆಗಳೂ ನನಗೆ ಕೊಟ್ಟಿದ್ದ ಪುಣ್ಯವೆಲ್ಲವೂ ಈಗ ಭೀಮನಿಗೆ ಸೇರಿತು'' ಎಂದು ಹೇಳಿ ಅಜಗರನು ಧರ್ಮರಾಜನನ್ನು ಪ್ರಶ್ನೆಕೇಳಿದಾಗ ಧರ್ಮರಾಜನು ನಹುಷನು ನಮ್ಮಕುಲದ ಹಿರಿಯನಾದ್ದರಿಂದ ಆತನಲ್ಲಿ ವಿದ್ಯೋಪಜೀವನಮಾಡಿದರೆ ದೋಶವಿಲ್ಲವೆಂಬ ಧರ್ಮದಂತೆ ಪ್ರಶ್ನೆಗಳಿಗೆ ಸಮಂಜಸ ಉತ್ತರವನ್ನು ಹೇಳಿದಾಗ ಅಜಗರನ ಶಾಪವಿಮೋಚನೆ ಆಗಿ ಅವನಿಗೆ ದಿವ್ಯದೇಹ ಬಂದಿತು. ದಿವ್ಯವಸ್ತ್ರಾಭರಣಗಳಿಂದ ಸುಶೋಭಿತನಾದ ರಾಜನು ಭೀಮ-ಧರ್ಮರಾಜರಿಗೆ ನಮಸ್ಕಾರಮಾಡಿ ಸ್ವರ್ಗಲೋಕಕ್ಕೆ ಹೊರಟುಹೋದನು.

ಆಗ ದೇವೇಂದ್ರನು ತನ್ನ ಪ್ರಾರಬ್ಧಕರ್ಮವನ್ನು ಕಳೆದುಕೊಂಡ ಅವನಿಗೇ ಸ್ವರ್ಗಲೋಕದ ಪ್ರಭುತ್ವವನ್ನು ಕೊಟ್ಟರು.

ಇತ್ತ ಧರ್ಮರಾಯನು ಬೀಮನ ಸಂಗಡ ತಮ್ಮ ಸ್ಥಳಕ್ಕೆ ಬಂದನಂತರ ಭೀಮನ ಕರುಣಾಜನಕ ಮಹಿಮೆಯನ್ನು ಎಲ್ಲರ ಮುಂದೂ ಧರ್ಮರಾಜನು ತಿಳಿಸಿದಾಗ ದ್ರೌಪದಿ ಮತ್ತು ಸಮಸ್ತ ಋಷಿಗಳೂ ಭೀಮನು ಹಾಲಾಹಲವಿಷದ ಅನೇಕಸರ್ಪಗಳ ಕಡಿತಕ್ಕು ಕುಂದದವನು ಅದರ ವಿಷಕ್ಕೆ ಅಂಜದವನು ಘೋರಸರ್ಪಗಳು ಅವನ ಒಂದು ಕಿರುಬೆರಳು ಸೋಂಕಿದಾಗ ನೂರುಯೋಜನದ ದೂರಹೋಗಿಬಿದ್ದವು. ಅವನನ್ನು ಕಚ್ಚಿದಾಗ ಹಾವುಗಳ ಹಲ್ಲೇ ಪುಡಿ ಆದವು. ಇಂಥ ಮಹಬಲಿಷ್ಠನು ಅಜಗರವನ್ನು ತನ್ನ ಪಾದದಂಗುಷ್ಠದಿಂದ ಹೊಸಗಿಹಾಕಬಹುದಾಗಿತ್ತು. ಹಾಗೆಮಾಡದೆ ನಹುಷರಾಜನ ಉದ್ಧಾರಕ್ಕಾಗಿ ಶಾಂತನಾಗಿ ಸಹಿಸಿದ್ದಾನೆ. ಅಸುರರಿಗೆ ಅಜ್ಞಾನ ಕೊಡಲಿಕ್ಕಾಗಿ ಒಂದು ಅಜಗರನ ಕಟ್ಟನ್ನು ಬಿಡಿಸಿಕೊಳ್ಳಲಾರದವನಂತೆ ತನ್ನ ಬಲ ನಿಗ್ರಹಮಾಡಿಕೊಂಡು ಸಹಿಸಿದ್ದಾನೆ. ಭೀಮನು ಎಷ್ಟು ಕಠೋರನೋ ಅಷ್ಟೂ ತನ್ನವರಿಗೆ ಮೃದುವಾಗಿ ರಕ್ಷಣೆಕೊಡುತ್ತಾನೆ ಎಂದು ಹೊಗಳಿದರು. ಧರ್ಮರಾಜನು ''ಭೀಮಾ! ನಿನ್ನ ಪ್ರಿಯಬಂಧುಗಳಾದ ನಮಗೆ ನಿನ್ನ ಅಪಜಯ ನೋಡುವಂಥ

ದುಃಖವನ್ನು ಮಾತ್ರ ಎಂದಿಗೂ ಕೊಡಬೇಡಪ್ಪಾ. ಇಂಥ ವಿಚಿತ್ರಕರ್ಮಗಳ ರಹಸ್ಯವನ್ನು ತಿಳಿಯದನಾವು ಅಪ್ರತ್ಯಕ್ಷವಾದ ನಿನ್ನ ಜಯವನ್ನು ತಿಳಿಯದೆ ದುಃಖಪಡುವಂತೆ ಮಾಡಬೇಡ'' ಎಂದು ಕೇಳಿಕೊಂಡನು.

ಇದುನಡೆದ ಕೆಲವೇದಿನಗಳಲ್ಲಿ ಪಾಂಡವರು ಹಿಮವತ್ಪರ್ವತದಿಂದ ಕುರುಕ್ಷೇತ್ರದ ಕಡೆಗೆ ಬಂದರು. ಆಗ ಕೃಷ್ಣನು ಪಾಪ ಪಾಂಡವರು ವನವಾಸದಲ್ಲಿ ವ್ರತೋಪವಾಸಗಳಿಂದ ಬಳಲಿದ್ದಾರೆ. ಅವರಿಗೆ ನನ್ನ ದರ್ಶನಾನಂದವನ್ನು ಕೊಟ್ಟು ಆನಂದಪಡಿಸಬೇಕೆಂದು ಅವರಬಳಿಗೆ ಸತ್ಯಭಾಮೆಯೊಡಗೂಡಿಬಂದನು. ಪಾಂಡವರಿಗೆ ಶ್ರೀಕೃಷ್ಣನ ದರ್ಶನದ ಆನಂದ ಅವರ್ಣನೀಯವಾಗಿತ್ತು. ಶ್ರೀಕೃಷ್ಣನಿಗೆ ರಮಾಸಹಿತವಾಗಿ ಪೂಜಾದಿಗಳೆಲ್ಲವೂ ನಡೆದನಂತರ ತಾವು ವನವಾಸದಲ್ಲಿ ಅನುಭವಿಸಿದ ಪ್ರತಿಯೊಂದು ವಿಚಾರಗಳನ್ನು ದೇವರಮುಂದೆ ನಿವೇದಿಸಿಕೊಂಡರು. ಸತ್ಯಭಾಮಾದೇವಿಯರು ಸಕಲ ವೇದಗಳಿಗೂ ಅಭಿಮಾನಿಯಾಗಿದ್ದರೂ ಗುರುಪತ್ನಿಯಾದ ಭಾರತೀದೇವಿಯಿಂದ ಸ್ತ್ರೀಧರ್ಮವನ್ನು ಲೋಕಕ್ಕೆ ಉಪದೇಶಕೊಡಿಸಬೇಕೆಂಬ ಸಂಕಲ್ಪದಿಂದ ದ್ರೌಪದಿಯನ್ನು ಕುರಿತು ''ದ್ರೌಪದೀ! ನೀನು ರಾಜಪುತ್ರಿ ವೀರಪತ್ನಿಯಾಗಿ ಮೆರೆದವಳು ಸೌಂದರ್ಯ ಸುಕುಮಾರಿಯಾಗಿ ರಾಜಭೋಗವನ್ನನುಭವಿಸಿದವಳು ಆದಾಗ್ಯೂ ಕಠಿಣ ಕಾಡಿನ ವಾಸಕ್ಕೆ ಭಯಪಡದೆ ಐವತ್ತುಸಾವಿರ ಯೋಜನದ ದೂರದವರೆಗೂ ವನಸಂಚಾರಮಾಡಿರುವಿ ಎಂದರೆ ಆಶ್ಚರ್ಯ. ಗಿರಿಶಿಖರಗಳನ್ನು ಏರಿಳಿಯಬೇಕು. ಕೆರೆ, ತೊರೆ ನದಿ -ಮೊದಲಾದ ಜಲಸಮುದಾಯದ ಪ್ರದೇಶಗಳನ್ನು ದಾಟಿ ಹೋಗಬೇಕು. ಕಲ್ಲು ಮುಳ್ಳುಗಳ ಹಾದಿಯಲ್ಲಿ ಬರಿಕಾಲಲ್ಲಿ ನಡೆಯಬೇಕು. ಅಂಥ ಕಷ್ಟಕಾಲದಲ್ಲಿ ಪತಿಗಳೊಡನೆ ಸಂತೋಷದಿಂದ ಇದ್ದು ಅವರ ಸಕಲ ಚಿಂತೆಗಳನ್ನು ನಿವಾರಣೆಮಾಡಲು ಪ್ರಯತ್ನಪಡುತ್ತಿರುವ ನಿನ್ನ ಅಪಾರ ಸಾಮರ್ಥ್ಯವನ್ನು ನೀನು ಹೇಗೆ ಪಡೆದಿರುವಿ? ನಮಗೆ ಇಂಥ ಸಾಧನೆಯ ರಹಸ್ಯವನ್ನು ತಿಳಿಸು'' ಎಂದು ಕೇಳಿದಳು.

ದ್ರೌಪದಿಯು ಸಂತೋಷದಿಂದ ರಮಾನಾರಾಯಣರ ಸನ್ನಿಧಿಯಲ್ಲಿ ಪತಿವ್ರತಾಧರ್ಮವನ್ನು ಅರ್ಪಣಮಾಡಿದರೆ ಸ್ವಾಮಿ ಸಂತುಷ್ಟನಾಗುತ್ತಾನೆಂದು ಭಾವಿಸಿ ಸತ್ಯಭಾಮಾದೇವಿಗೆ ನಮಸ್ಕಾರಮಾಡಿ ಹೇಳಿದಳು.

''ಸ್ತ್ರೀಯರಿಗೆ ಪತಿಯೇ ಪರದೇವತೆ ಎಂದು ಭಾವಿಸಬೇಕು. ಸ್ತ್ರೀಯರು ಯಾವ ವ್ರತೋಪವಾಸಗಳನ್ನು ಆಚರಿಸಬೇಕಾದರೂ ಪತಿಯ ಅಪ್ಪಣೆ ಪಡೆಯಬೇಕು. ಪತಿವ್ರತಾಸ್ತ್ರೀಯು ಯಾವ ದೇವರನ್ನು ಪೂಜಿಸಿದರೂ ಪತ್ಯಂತರ್ಗತ ಲಕ್ಷ್ಮೀನಾರಾಯಣರನ್ನು ಅನುಸಂಧಾನಪೂರ್ವಕ ಉಪಾಶಿಸಿ ಪೂಜಾದಿಗಳನ್ನು ಅರ್ಪಣ ಮಾಡಬೇಕು. ಪತಿ ಹೇಗಿದ್ದರೂ ಪರದೇವತೆ ಎಂಬ ಭಾವವಿಟ್ಟು ಅತ್ಯಂತ ಶ್ರದ್ಧಾಭಕ್ತಿಯಿಂದ ನಡೆಯಬೇಕು. ಆಪತ್ಕಾಲಬಂದಾಗ ಉದಾಸೀನಮಾಡಬಾರದು. ಕಷ್ಟ ಸುಖಗಳೆರಡಕ್ಕೂ ಸಮಭಾಗಿನಿಯಾಗಿ ಸಂತೋಷಪಡಿಸಲು

ಪ್ರಯತ್ನಪಡಬೇಕು.

ಪತಿಯು ಧರ್ಮದ ಹೆಜ್ಜೆಯನ್ನು ತಪ್ಪಿಹಾಕಿದಾಗ ಎಚ್ಚರಕೊಟ್ಟು ಹಿತನುಡಿಗಳಿಂದ ಸನ್ಮಾರ್ಗ ಪ್ರವರ್ತಕಳಾಗಿ ಸದಾ ಹಿತಚಿಂತನವನ್ನೇ ಮಾಡತಕ್ಕ ಸಾಧ್ವಿಗೆ ಸುಖಸಂತೋಷಗಳ ಸಂಪತ್ತು ಒಲಿದು ಬರುತ್ತವೆ'' ಎಂದು ಅನೇಕ ಸ್ತ್ರೀಧರ್ಮಗಳನ್ನು ಹೇಳಿ ಲಕ್ಷ್ಮೀದೇವಿಗೆ ಸಮರ್ಪಣ ಮಾಡಿದಳು.

ಸಾಕ್ಷಾತ್ ಲಕ್ಷ್ಮೀದೇವಿಯೇ ಆಗಿರುವ ಸತ್ಯಭಾಮಾದೇವಿಯು ಅಜ್ಞಾನಿಗಳಿಗೆ ಮೋಹ ಉಂಟುಮಾಡಲಿಕ್ಕಾಗಿ ದ್ರೌಪದಿಯಿಂದ ಅನೇಕ ಸ್ತ್ರೀಧರ್ಮಗಳನ್ನು ಉಪದೇಶಗೊಂಡವಳಂತೆ ನಟಿಸಿದಳು. ಅದೂ ಅಲ್ಲದೆ ಯೋಗ್ಯ ಸ್ತ್ರೀಯರು ಸ್ತ್ರೀಧರ್ಮವನ್ನು ಅನುಷ್ಠಾನಕ್ಕೆ ತಂದುಕೊಂಡು ಉದ್ಧಾರವಾಗಲಿಕ್ಕಾಗಿಯೂ ದ್ರೌಪದಿಯಿಂದ ನುಡಿಸಿದಳು.

## ಜಯದ್ರಥನ ಅಪಜಯ

ಒಂದುದಿನ ಪಾಂಡವರು ದ್ರೌಪದಿಯ ಕಾವಲಿಗೆ ಧೌಮ್ಯರನ್ನು ಇರಿಸಿ ತಾವೆಲ್ಲರೂ ಬೇಟೆಗಾಗಿ ಹೊರಟರು.

ಅತ್ತ ಜಯದ್ರಥನು ಮತ್ತೆ ಮದುವೆ ಮಾಡಿಕೊಳ್ಳಬೇಕೆಂಬ ಇಚ್ಛೆಯಿಂದ ಕನ್ಯಾನ್ವೇಷಣಕ್ಕಾಗಿ ಚತುರಂಗಸೇನೆಯೊಡನೆ ಹೊರಟವನು ಮಾರ್ಗದಲ್ಲಿ ಪಾಂಡವರಿದ್ದ ಸ್ಥಳಕ್ಕೆ ಬಂದು ಅಲ್ಲಿ ದ್ರೌಪದಿಯು ಒಬ್ಬಳೇ ಇರುವುದನ್ನು ಕಂಡನು.

ದ್ರೌಪದಿಯ ದಿವ್ಯತೇಜಸ್ಸು ಪರಿಸರವೆಲ್ಲವೂ ಬೆಳಗುತ್ತಿರುವುದನ್ನು ನೋಡಿ ಚಪಲಚಿತ್ತನಾಗಿ ಇಂಥ ಸೌಂದರ್ಯದರಾಶಿಯೇ ಸಿಕ್ಕಿರುವಾಗ ಬೇರೆಹೆಣ್ಣಿಗಾಗಿ ಏಕೆ ಹುಡುಕಬೇಕೆಂದು ಮಂತ್ರಿಯನ್ನು ಕುರಿತು ''ಆ ಹೆಣ್ಣನ್ನು ಎಳೆದುಕೊಂಡು ಬಾ'' ಎಂದು ಆಜ್ಞೆಮಾಡಿದನು.

ಆಗ ಕೋಟಿಕಾಶನೆಂಬ ಹೆಸರಿನ ಮಂತ್ರಿಯು ಪಾಂಡವರ ಆಶ್ರಮದೊಳಗೆ ನುಗ್ಗಿ ದ್ರೌಪದಿಯ ಬಳಿಗೆಬಂದು ಆಕ್ರಮಣ ಮಾಡಲು ಅಬ್ಬರಿಸುತ್ತಿದ್ದರೆ ದ್ರೌಪದಿಯು ಅವನನ್ನು ನೀಚವಾಕ್ಯದಿಂದ ನಿಂದಿಸಿ ರಣಚಂಡಿಯಂತೆ ಅವನನ್ನು ತೆಗಳುತ್ತಿರಲು ಭಯದಿಂದ ಮಂತ್ರಿಯು ಹೊರಟುಹೋದನು.

ಜಯದ್ರಥನೇ ಆಗ ನುಗ್ಗಿಬಂದು ದ್ರೌಪದಿಯನ್ನು ಎಳೆಯುತ್ತಿರಲು ''ಎಲಾ ಪಾಪೀ! ನಾನು ಪರರ ಪತ್ನಿ ಆಗಿದ್ದೇನೆ. ಸಿಂಹಿಣಿಯನ್ನು ನರಿಮುಟ್ಟಲಾದೀತೇ? ಪುರುಷರಿಲ್ಲದ ಸಮಯದಲ್ಲಿ ಹೇಡಿಯಂತೆ ಕಾದಿದ್ದು ಪರಸ್ತ್ರೀಯನ್ನು ಅಪಹರಿಸಲೆತ್ನಿಸುವ ನಿನ್ನ ಜನ್ಮಕ್ಕೆ ಧಿಕ್ಕಾರ' ಎಂದು ಹೇಳುತ್ತ ತಳ್ಳಿದಾಗ ಜಯದ್ರಥನು ಮುಗ್ಗುರಿಸಿ ಬಿದ್ದು ಮೂರ್ಛೆಹೋದನು.

ದ್ರೌಪದಿಗೆ ಜಯದ್ರಥನನ್ನು ಕೊಂದುಬಿಡುವಷ್ಟು ಸಾಮರ್ಥ್ಯವಿದ್ದರೂ, ಈ ಪಾಪಿಗಳ ಪಾಪ ಇನ್ನು ವೃದ್ಧಿಗೊಂಡು ಇವರ ಮರಣ ನನ್ನ ಪುರುಷರಿಂದಲೇ ಭಗವತ್ಸಂಕಲ್ಪದಂತೆ ನಡೆಯಬೇಕೆಂದು ರಥದಲ್ಲಿ ಕುಳಿತಳು.

ದ್ರೌಪದಿಯು ಸಿಂಹಿಣಿಯಂತೆ ಚೀರುವ ಅವಳ ಧ್ವನಿ ಪಾಂಡವರಿಗೆ ಕೇಳಿಸಿತು. ಓಡಿಬಂದರೆ ಆಶ್ರಮದಲ್ಲಿ ಧೌಮ್ಯರು ನಡೆದಸಂಗತಿ ತಿಳಿಸಿದಾಗ ಭೀಮಾರ್ಜುನರು ರಥದಹಿಂದೆ ಓಡಿದರು. ಭೀಮಾರ್ಜುನರು ಸಿಂಹನಾದದಿಂದ ಓಡಿಬರುವುದನ್ನು ನೋಡಿದ ದ್ರೌಪದಿ ರಥದಿಂದ ಕೆಳಗೆಹಾರಿ ಅವರಬಳಿಗೆ ಬಂದಳು. ಆಗ ಭೀಮಾರ್ಜುನರು ರಥದಮೇಲೇರಿ ಜಯದ್ರಥನ ಪ್ರಧಾನಿಯನ್ನು ಮೊದಲು ಕೊಂದರು. ನಂತರ ನಕುಲಸಹದೇವರನ್ನು ದ್ರೌಪದಿಯ ಸಂಗಡ ಆಶ್ರಮಕ್ಕೆ ಕಳುಹಿಸಿದರು. ಜಯದ್ರಥನು ರಥವನ್ನು ವೇಗವಾಗಿ ಓಡಿಸಿಕೊಂಡು ಹೊರಟಾಗ ಭೀಮನು ಅವನ ರಥದಹಿಂದೆ ಓಡಿ ಹಿಡಿದುನಿಲ್ಲಿಸಿ ರಥವನ್ನು ಮುರಿದು ಪುಡಿಮಾಡಿ ಬಿಸಾಡಿದನು. ನಂತರ ಜಯದ್ರಥನು ಓಡಿಹೋಗುತ್ತಿದ್ದರೆ ಅವನನ್ನು ಹಿಡಿದೆಳೆತಂದು ''ಎಲಾ ಪಾಪೀ! ಈಗಲೇ ನಿನ್ನನ್ನು ದ್ರೌಪದಿಯು ಮುಂದೆ ಕೆಡವಿಕೊಲ್ಲುತ್ತೇನೆ'' ಎಂದಾಗ ಧರ್ಮರಾಯನು ''ಭೀಮಾ! ಬೇಡಪ್ಪಾ! ಅವನನ್ನು ಕೊಂದು ನಮ್ಮತಂಗಿ ವಿಧವೆಯಾಗುವುದನ್ನು ನಾವು ನೋಡುವುದು ಬೇಡ ಬಿಟ್ಟುಬಿಡು'' ಎಂದನು.

ಆಗ ಭೀಮನು ಅವನನ್ನು ದ್ರೌಪದಿಯ ಕಾಲುಗಳ ಮೇಲೆ ಕೆಡವಿ ''ದ್ರೌಪದಿಯನ್ನು ನಿನ್ನ ದಾಸನಾಗಿದ್ದೇನೆ. ನನಗೆ ಪ್ರಾಣಭಿಕ್ಷೆ ನೀಡು'' ಎಂದು ಕೇಳಿಕೊ. ಬಿಟ್ಟುಬಿಡುತ್ತೇನೆ'' ಎಂದು ಹೇಳಿ ವಿಕಾರಮುಂಡನವನ್ನು ಮಾಡಿ ವಿರೂಪಗೊಳಿಸಿ ಹೊಡೆದೋಡಿಸಿದನು.

ಜಯದ್ರಥನು ಭೀಮನಿಂದ ಸಾಕಷ್ಟು ಏಟನ್ನು ತಿಂದು ಅವಮಾನದಿಂದ ಕಪ್ಪಿಟ್ಟಮುಖವನ್ನು ಯಾರಿಗೂ ತೋರಿಸದೆ ತಲೆಮುಸುಕಿನಿಂದ ಅರಮನೆಯನ್ನು ಸೇರಿ ಪಾಂಡವರನ್ನು ಕೊಲ್ಲುತ್ತೇನೆಂಬ ಹಠದಿಂದ ತಪಸ್ಸಿಗೆ ತೊಡಗಿದನು.

ಜಯದ್ರಥನು ಬಂದು ಪುಂಡಾಟದಿಂದ ಪೀಡಿಸಿ ಭೀಮನಕೈಲಿ ಹೊಡೆಸಿಕೊಂಡು ಹೋದ ಕೆಲವೇ ನಿಮಿಷಗಳಲ್ಲಿ ಮಾರ್ಕಂಡೇಯರು ಧರ್ಮರಾಯನ ಆಶ್ರಮಕ್ಕೆ ಬಂದರು.

ಮುನಿಗಳಿಗೆ ಮಹಾರಾಜನು ಮಹದಾನಂದದಿಂದ ಸತ್ಕಾರಮಾಡಿ ''ಮುನಿವರ್ಯಾ! ನೀವು ಬಹಳ ಪುರಾತನಕಾಲದ ಮಹಾಪುರುಷರು. ನೀವು ಕಾಣದ ದೇಶವಿಲ್ಲ, ನೀವು ಅರಿಯದ ರಾಜರಿಲ್ಲ. ನೀವು ನನ್ನಂಥ ಹತಭಾಗ್ಯರಾಜರನ್ನು ನೋಡಿದ್ದೀರಾ! ಹೇಳಿರಿ. ಸಾಮ್ರಾಜ್ಯಸಂಪತ್ತುಗಳೆಲ್ಲವನ್ನು ಜೂಜಿನಲ್ಲಿ ಸೋತು ಲೋಕಪ್ರಖ್ಯಾತ ಸಹೋದರರನ್ನು ಕಾಡುಪಾಲುಮಾಡಿದ ನಿರ್ಭಾಗ್ಯರಾಜರನ್ನು ನೀವು ನೋಡಿದ್ದೀರಾ! ಹೇಳಿರಿ'' ಎಂದು

ದುಃಖಪಡುತ್ತ "ಮುನಿವರ್ಯ ನಮ್ಮನ್ನೇ ಅನುಸರಿಸಿ ಹಗಲಿರುಳೂ ನಮ್ಮ ಹಿತಚಿಂತನೆಗಾಗಿಯೇ ಹಾತೊರೆಯುವ ಪತಿವ್ರತಾ ಪತ್ನಿಯನ್ನು ಪರಪುರುಷರು ಪೀಡಿಸುವಷ್ಟು ದುರವಸ್ಥೆಪಟ್ಟ ಪ್ರಖ್ಯಾತರಾಜರನ್ನು ನೀವು ಎಲ್ಲಾದರೂ ನೋಡಿದ್ದೀರಾ? ಹೇಳಿರಿ" ಎಂದು ಕೇಳುತ್ತಿದ್ದನು.

ಧರ್ಮರಾಜನ ಮನಃಖೇದವನ್ನು ತಿಳಿದ ಮಾರ್ಕಂಡೇಯರು ಧರ್ಮರಾಜನನ್ನು ಸಮಾಧಾನಪಡಿಸುತ್ತ ಮಾರ್ಕಂಡೇಯರು ಬಹಳ ಕಷ್ಟ ಸಂಭವಿಸಿದಾಗ ಶ್ರೀರಾಮಚರಿತ್ರವನ್ನು ಶ್ರವಣಮಾಡಿದರೆ ಕಷ್ಟಪರಿಹಾರವಾಗುತ್ತದೆಂಬ ಧ್ಯೇಯದಿಂದ ಶ್ರೀರಾಮಚಂದ್ರನು ನರಾವತಾರಮಾಡಿ ತೋರಿಸಿದ ಮಹಿಮಾಪ್ರಕಾಶವನ್ನು ಸ್ವಾರಸ್ಯವಾಗಿ ಧರ್ಮರಾಜನ ಮುಂದೆ ಹೇಳಿದರು. "ಅಯ್ಯಾ! ಅರಸಾ! ರಾಮನು ನಿನಗಿಂತಲೂ ನೂರುಪಟ್ಟು ದುಃಖಪಟ್ಟಿದ್ದಾನೆ. ನೀನು ವನವಾಸದಲ್ಲಿದ್ದರೂ ಸಾಮ್ರಾಜ್ಯಾಧಿಪತಿಯಂತೆಯೇ ಮೆರೆಯುತ್ತಿರುವಿ. ರಾಮನು ಸಕಲಸಂಪತ್ತುಗಳನ್ನು ದೂರಸರಿಸಿ ವನಚರರ ರೀತಿಯಿಂದಲೇ ಇರುತ್ತಿದ್ದನು. ನಿನಗೆ ದಿಗ್ಗಜಗಳೋಪಾದಿಯ ನಾಲ್ಕು ಜನ ಸಹೋದರರಿದ್ದಾರೆ. ಭೀಮನಂಥ ಪುರುಷಸಿಂಹ ನಿನ್ನನ್ನು ಸದಾಗದಾಪಾಣಿಯಾಗಿ ರಕ್ಷಿಸುವ ದೀಕ್ಷೆ ಉಳ್ಳವನಾಗಿದ್ದಾನೆ. ರಾಮನಿಗೆ ಲಕ್ಷ್ಮಣನೊಬ್ಬನೇ ತಮ್ಮನಿಂದೊಡಗೂಡಿ ಹದಿನಾಲ್ಕು ವರ್ಷ ವನವಾಸ ಸೀತಾದೇವಿಯೊಡನೆ ಅನುಭವಿಸುವ ಪ್ರಸಂಗ ಒದಗಿತು. ಶ್ರೀರಾಮಚಂದ್ರನು ತಾನಿದ್ದ ಕಾಡನ್ನೇ ಅಯೋಧ್ಯವನ್ನಾಗಿ ಮಾಡಬಲ್ಲ ಮಹಿಮನಾದರೂ ಮಾನವರು ಎಂಥಕಷ್ಟಬಂದರೂ ತಮ್ಮ ಸತ್ಯವೆಂಬ ಖಡ್ಗದಿಂದ ಅದನ್ನು ಕತ್ತರಿಸಿ ಜಯಶೀಲರಾಗಬೇಕೆಂಬ ನೀತಿ ತೋರಿಸಿದ್ದಾನೆ. ಶ್ರೀರಾಮಚಂದ್ರನ ವಕ್ಷಸ್ಥಳವಾಸಿನಿಯಾದ ಸೀತಾದೇವಿ ತನ್ನ ಆಕೃತಿಯನ್ನು ಜಗಕ್ಕೆ ತೋರಿಸಿ ಸ್ತ್ರೀಧರ್ಮವನ್ನು ಹೇಗೆ ಪಾಲಿಸಬೇಕೆಂದು ಎಷ್ಟು ಸುಂದರವಾಗಿ ತೋರಿಸಿದಳು? ಅವರು ಮಾಡಿತೋರಿಸಿದ ಧರ್ಮದ ತತ್ವೋಪದೇಶದ ಲೀಲಾನಾಟಕದಲ್ಲಿ ನೀನು ಒಂದುಸಾಸವೆ ಕಾಳಿನಷ್ಟೂ ಅನುಭವಿಸಿಲ್ಲ. ದ್ರೌಪದಿ ಒಂದು ಮುಹೂರ್ತ ಪಾಪಿಗಳಿಂದ ಪೀಡಿತಳಾಗಿದ್ದರೆ ಸೀತಾಕೃತಿ ದುಷ್ಟರಾವಣನ ಕೈಸೆರೆಗೆ ಸಿಕ್ಕು ಎಷ್ಟುದಿನ ದುಃಖಪಟ್ಟಳು? ಅದನ್ನು ನೀನು ಚಿಂತಿಸಬೇಡವೆ? ಸೀತಾ ಆಕೃತಿಯೇ ರಾಕ್ಷಸರ ಪೀಡೆಗೆ ಒಳಗಾಗಿದ್ದರೂ ಸೀತಾರಾಮರ ನೀತಿಶಾಸ್ತ್ರದ ಮಹಾನ್‌ಚರಿತ್ರೆಯ ರಹಸ್ಯವನ್ನು ತಿಳಿದಾಗ ಜೀವಿಗಳಿಗೆ ಕಷ್ಟವಾವುದು? ಸುಖವಾವುದು? ಎಂಬ ಅರಿವು ಬಂದು ಸುಖದುಃಖಗಳ ವಿಕಾರರಹಿತರಾಗಿ ಸ್ವಚ್ಛಜ್ಞಾನದಿಂದ ಶಾಶ್ವತ ಸುಖ ಅನುಭವಿಸುತ್ತಾರೆ. "ಧರ್ಮರಾಜಾ! ನೀನು ಧರ್ಮದ ಮರ್ಮವನ್ನರಿತ ಮಹಾತ್ಮನಾದಾಗ್ಯೂ ನೀನು ಭಗವಂತನಿಂದ ಸಕಲ ಸೌಖ್ಯದಿಂದಲೇ ಸದಾ ನಿರತನಾಗಿದ್ದರೂ ದೇವೋತ್ತಮನ ಸ್ಮರಣೆ ನಿನ್ನಲ್ಲಿ ಸ್ಥಿರಗೊಂಡಿರುವ ದೊಡ್ಡ ಭಾಗ್ಯಕ್ಕಿಂತಲೂ ದೊಡ್ಡಭಾಗ್ಯ ಮತ್ತೇನಿದೆ?" ಎಂದು ಅನೇಕ ಮಹಾತ್ಮರ ಪುಣ್ಯಕಥನದೊಳಗಿರುವ ತತ್ತ್ವರಹಸ್ಯಗಳನ್ನು ಮಾರ್ಕಂಡೇಯರು ಧರ್ಮರಾಜನಿಗೆ ಉಪದೇಶಮಾಡುತ್ತಲೇ ಧರ್ಮರಾಜನ ಮನ್ಮಂದಿರವನ್ನು ಸುಜ್ಞಾನಜ್ಯೋತಿಯಿಂದ ಮತ್ತಷ್ಟು ಪ್ರಕಾಶಗೊಳಿಸಿದರು.

## ಮತ್ಸರಮಂತ್ರದ ಮೋಹಕಯಜ್ಞ

ಜಯದ್ರಥನು ಭೀಮಾರ್ಜುನರಿಂದ ಅವಮಾನಗೊಂಡ ಸೇಡಿನಿಂದ ಪಾಂಡವರನ್ನು ಕೊಲ್ಲಬೇಕೆಂಬ ಹಠದಿಂದ ರುದ್ರದೇವರನ್ನು ಕುರಿತು ಅತಿ ಕಠಿಣ ತಪಸ್ಸನ್ನು ಮಾಡಿದನು. ರುದ್ರದೇವನು ಹರಿದ್ವೇಶಿಯನ್ನು ನಿಗ್ರಹ ಮಾಡಲಿಕ್ಕಾಗಿಯೇ ಅನುಗ್ರಹ ತೋರಿಸಿ ಪ್ರತ್ಯಕ್ಷನಾದನು.

''ದೇವಾ! ಪಾಂಡವರನ್ನು ನಾನು ಕೊಲ್ಲಬೇಕು. ಅವರು ನನ್ನಕೈಲಿ ಸಾಯುವಂತೆ ವರನೀಡು'' ಎಂದನು. ಅದಕ್ಕೆ ಶಿವನು ''ಜಯದ್ರಥಾ! ಪಾಂಡವರಲ್ಲಿ ಅರ್ಜುನನು ನಿನಗಿಂತಲೂ ಮೊದಲು ನನ್ನನ್ನು ಕುರಿತು ತಪಸ್ಸುಮಾಡಿ ಶತ್ರುನಿಗ್ರಹದ ವರವನ್ನು ಪಡೆದು ಪಾಶುಪತಾಸ್ತ್ರವನ್ನು ಪಡೆದಿರುವುದರಿಂದ ಅವನೊಡನೆ ನೀನು ಯುದ್ಧಮಾಡಿದರೂ ಅವನನ್ನು ಸೋಲಿಸಲಾಗುವುದಿಲ್ಲ. ಇನ್ನು ನಾಲ್ವರೊಡನೆ ಯುದ್ಧಮಾಡಿ ಸೋಲಿಸಬಹುದು'' ಎಂದು ಶಿವನು ಜಯದ್ರಥನಿಗೆ ವರವನ್ನು ಕೊಟ್ಟದ್ದಕಾರಣದಿಂದಲೇ ಪರಮವೈಷ್ಣವಶಿಖಾಮಣಿಯಾದ ಶಿವನ ವಾಕ್ಯವನ್ನು ಪಾಲಿಸಬೇಕೆಂಬ ಧ್ಯೇಯದಿಂದ ಭೀಮನು ಜಯದ್ರಥನನ್ನು ಕೊಲ್ಲದೆ ಅವನೊಡನೆ ಯುದ್ಧವನ್ನು ಮಾಡದೆ ಉಳಿಸಿದ್ದನು.

ಹೀಗೆ ಕುಹಕಿಗಳು ಎಷ್ಟೋ ಕುತಂತ್ರಗಳನ್ನು ನಡೆಸಿದರೂ ಪಾಂಡವರನ್ನು ಏನೂ ಮಾಡಲಾರದವರಾಗಿ ಒಳಗೊಳಗೇ ದ್ವೇಶದ ಕತ್ತಿಯನ್ನು ಮಸೆಯುತ್ತಲೇ ಇರುವಾಗ ಪಾಂಡವರು ಈಗ ಕುರುದೇಶದ ಸಮೀಪಕ್ಕೇ ಬಂದಿದ್ದಾರೆಂದು ತಿಳಿದ ದುರ್ಯೋಧನನು ಪಾಂಡವರು ರಾಜಸೂಯಯಾಗಮಾಡಿ ನಮ್ಮನ್ನು ಅಪಮಾನಗೊಳಿಸಿದರು. ಅಂತಃಪುರದಸ್ತ್ರೀಯರೊಡನೆ ದ್ರೌಪದಿಯು ನನ್ನನ್ನು ನೋಡಿ ಪರಿಹಾಸದಿಂದ ನಗುವಿನ ವಿಷದಮುಳ್ಳಿನಿಂದ ನನ್ನ ಮನಸ್ಸನ್ನು ಘಾಯಗೊಳಿಸಿದ ವೇದನೆ ನನಗೆ ತಡೆಯಲಾಗುತ್ತಿಲ್ಲ. ಈಗ ನಾವೂ ವೈಭವಯುಕ್ತವಾದ ಯಾಗ ಮಂಟಪವನ್ನು ರಚಿಸಿ ಅವರಿಗಿಂತಲೂ ಅಧಿಕರೀತಿಯಿಂದ ನಡೆಸಿ ಪಾಂಡವರನ್ನೂ ಯಾಗಕ್ಕೆ ಸ್ವಾಗತಿಸಿ ಅನೇಕರೀತಿಯಿಂದ ಅವರನ್ನು ಅವಮಾನಗೊಳಿಸಿ ದ್ರೌಪದಿಯ ದುರ್ಗತಿಯನ್ನು ನೋಡಿದ ನಮ್ಮ ಸಿರಿವಂತರೆಲ್ಲರೂ ನಗುವಂತೆ ಮಾಡಬೇಕು. ಅವಳ ಪರಿಹಾಸದ ನಗುವಿಗೆ ತಕ್ಕಶಾಸ್ತಿ ಆಗಲೇಬೇಕೆಂದು ದೇವೇಂದ್ರನ ಅಮರಾವತಿಗೆ ಸರಿಸಮಾನವಾದ ಯಾಗಮಂಟಪವನ್ನು ರಚಿಸಿ ''ದುಶ್ಯಾಸನಾ! ದುರ್ಯೋಧನನು ರಾಜಸೂಯಯಾಗ ಮಾಡಲಿದ್ದಾನೆ. ಯಾಗಕ್ಕೆ ನಿಮ್ಮನ್ನು ಆಹ್ವಾನಿಸುತ್ತಿದ್ದಾನೆ'' ಎಂದು ದೂತನಕೈಲಿ ಅಮಂತ್ರಣವನ್ನು ಪಾಂಡವರಿಗೆ ಕಳುಹಿಸು'' ಎಂದು ಹೇಳಿದನು.

ದೂತನು ತಂದ ದುರ್ಯೋಧನನ ಯಾಗದ ಆಹ್ವಾನವನ್ನು ಭೀಮನು ನೋಡಿ ವನವಾಸ ಸ್ವಲ್ಪಮಾತ್ರ ಉಳಿದಿದೆ. ಅದು ಮುಗಿದನಂತರ ಒಂದು ವರ್ಷದ ಅಜ್ಞಾತವಾಸವನ್ನು

ಸರಿಯಾಗಿ ಮುಗಿಸಿದನಂತರ ಪಾಂಡವರು ರಣಯಜ್ಞಕ್ಕೆ ಬರುತ್ತಾರೆ. ಅದಕ್ಕೆ ಸಿದ್ಧನಾಗಿರು'' ಎಂದು ನಿನ್ನ ರಾಜನಿಗೆ ತಿಳಿಸುಹೋಗು'' ಎಂದು ಹೇಳಿಕಳುಹಿಸಿದನು. ಯಾಗದಿಂದಲೂ ಸೇಡನ್ನು ತೀರಿಸಿಕೊಳ್ಳಲಾಗದಿರಲು ಹೇಗಾದರೂಮಾಡಿ ಪಾಂಡವರನ್ನು ನಮ್ಮ ಐಶ್ವರ್ಯ ವೈಭವದಿಂದ ತಲೆತಗ್ಗಿಸುವಂತೆ ಮಾಡಬೇಕು. ಅವರು ನಾರುಡಿಗೆಯಿಂದ ಕೃಶದೇಹ ಉಳ್ಳವರಾಗಿರುವಾಗ ನಮ್ಮ ಸಾಮ್ರಾಜ್ಯಸಂಪತ್ತಿನ ವೈಭವವನ್ನು ನೋಡಿ ಲಜ್ಜೆಯಿಂದ ಸಂಕಟಪಡುತ್ತಿದ್ದರೆ ಅವರ ಮುಂದೆ ನಾವು ನಮ್ಮ ಸರ್ವಾಭರಣ ಭೂಷಿತೆಯರಾದ ರಾಣಿಯರ ಜೊತೆಗೆ ಸುಖಲೋಲುಪರಾಗಿ ಅವರನ್ನು ಹಾಸ್ಯಮಾಡಬೇಕು'' ಎಂದು ಯೋಚಿಸಿದರು. ಪಾಂಡವರು ದ್ವೈತವನದಲ್ಲಿದ್ದಾರೆಂದು ತಿಳಿಯಿತು. ನಾವೀಗ ಘೋಷಯಾತ್ರೆಯ ವ್ಯಾಜದಿಂದ ನಮ್ಮ ಅತ್ಯಧಿಕವಾದ ಸಿರಿಸಂಪತ್ತುಗಳನ್ನು ಸಂತೋಷದಿಂದ ಮೆರೆಸುತ್ತ ಅವರ ಬಳಿಗೆ ವಿಚಿತ್ರ ವೈಭವದೊಡನೆ ಹೊರಡಬೇಕು'' ಎಂದು ಯೋಚಿಸಿ ಹೊರಡಲು ಸಿದ್ಧತೆಗಳನ್ನು ಮಾಡಿದರು.

ದುರ್ಯೋಧನನು ತನ್ನ ಅಪಾರವಾದ ರಾಜವೈಭವದಿಂದ ಸಂಪತ್ತನ್ನು ಕಾಡಿನಲ್ಲಿ ಕಾಠಿಣ್ಯಜೀವನಿಂದ ಕುಂದಿಹೋಗಿರುವ ಪಾಂಡವರು ನೋಡಿ ಸಂಕಟದಿಂದ ದುಃಖಿತಪ್ತರಾಗಿ ಬಂದು ಶರಣಾಗತರಾಗಿ ನಮ್ಮ ಆಶ್ರಯವನ್ನು ಅಪೇಕ್ಷಿಸುತ್ತಾರೆ. ಅವರನ್ನು ಉಪಹಾಸ್ಯದಿಂದ ದೂರತಳ್ಳಿ ನಮ್ಮ ಸಿರಿತನವನ್ನು ಮರೆಸಿ ಮರಗುವಂತೆ ಮಾಡಬೇಕು'' ಎಂಬ ನೀಚಬುದ್ಧಿಯಿಂದ ನವರತ್ನಖಚಿತ ರಥಗಳನ್ನೇರಿ ಸಕಲಾಭರಣಗಳಿಂದಲೂ ದಿವ್ಯಾಂಬರಗಳಿಂದಲೂ ಅಲಂಕೃತರಾಗಿ ಸಕಲದಿಕ್ಕುಗಳಲ್ಲೂ ಸುಗಂಧದ್ರವ್ಯಗಳಿಂದ ಪರಿಮಳವನ್ನು ಹರಡುತ್ತ ಹೊನ್ನಿನ ಹೊಳೆಯೇ ಹರಿದುಬರುತ್ತದೋ ಎನ್ನುವಂತೆ ಪಾಪಿಗಳ ಸಮೂಹದೊಡನೆ ಅನೇಕ ಬಗೆಯ ವಾದ್ಯಘೋಷದಿಂದ ಮೆರವಣಿಗೆಯೋಪಾದಿ ಹೊರಟುಬಂದರು.

ಸ್ವರ್ಗದಲ್ಲಿ ದೇವೇಂದ್ರನು ದುರುಳನ ದುರ್ವರ್ತನೆ ನೋಡಿ ದುರ್ಮದದಿಂದ ಬರುತ್ತಿರುವ ದುರಾತ್ಮರ ಸೊಕ್ಕನ್ನು ಮುರಿದು ಪರಮ ಧರ್ಮನಿರತರಾದ ಪಾಂಡವರನ್ನು ಮದಕರಿಗಳೋಪಾದಿಯಲ್ಲಿಮೆರೆಸಿ ಮಾತ್ಸರ್ಯದ ಮಾರಿಗಳಿಗೆ ಮಸಿಬಳಿದು ಕಳುಹಿಸುವಂತಾಗಬೇಕೆಂದು ಚಿತ್ರರಥಗಂಧರ್ವವನ್ನು ಕುರಿತು, ''ನೀನು ಈ ಕ್ಷಣದಲ್ಲೇ ಅರವತ್ತುಸಹಸ್ರಕೋಟಿ ಗಂಧರ್ವರ ಸೇನೆಯೊಡನೆ ಪಾಂಡವರಿರುವ ದ್ವೈತವನಕ್ಕೆ ಹೋಗಿ ಅಲ್ಲಿಗೆ ಬಂದಿರುವ ದುರ್ಬುದ್ಧಿಯಾದ ದುರ್ಯೋಧನನ ಅಸಂಖ್ಯ ಸೇನೆಯನ್ನು ನಾಶಗೊಳಿಸಿ ದುರ್ಯೋಧನನನ್ನು ಕೈಸೆರೆಹಿಡಿದು ಎಳೆದುಕೊಂಡು ಬಾ'' ಎಂದು ಆಜ್ಞೆ ಮಾಡಿದನು. ದುರ್ಯೋಧನ ಮೂಲಕಲಿ ಆದ್ದರಿಂದ ಚಿತ್ರಸೇನ ಗಂಧರ್ವನಿಗೆ ಅವನನ್ನು ಸೋಲಿಸಲಾಗದಿದ್ದರೂ ಅವನಿಗೆ ನಾರಾಯಣನವರ ಬ್ರಹ್ಮದೇವರವರ ದೇವೇಂದ್ರನವರ ಎಲ್ಲವನ್ನೂ ಸಂಪಾದಿಸಿದ್ದ ಕಾರಣದಿಂದ ಉತ್ತಮ ದೇವತೆಗಳ ವರಬಲದಿಂದ ಗೆಲ್ಲಬಹುದೆಂಬ

ಧೈರ್ಯದಿಂದ ಹೊರಟನು.

ದ್ವೈತವನದ ಒಂದು ಕೊಳದಲ್ಲಿ ಅರವತ್ತುಸಾವಿರ ಗಂಧರ್ವರೊಡನೆ ಜಲಕ್ರೀಡೆ ಆಡುತ್ತ ಲಗ್ಗೆ ಮಾಡುತ್ತಿದ್ದರು.

ಆಗ ದುರ್ಯೋಧನನ ಭಟರುಗಳು ಬಂದು ಕುರುಸಾರ್ವಭೌಮ ರಾಜಾಧಿರಾಜ ದುರ್ಯೋಧನ ರಾಜನು ಘೋಷಯಾತ್ರೆಗಾಗಿ ಅದ್ಭುತ ವೈಭವದಿಂದ ಆಗಮಿಸುತ್ತಿದ್ದಾನೆ. ಆದ್ದರಿಂದ ನೀವೆಲ್ಲರೂ ಬೇಗ ಇಲ್ಲಿಂದ ಹೊರಟುಹೋಗಿ'' ಎಂದು ಹೇಳಿದರು. ಆಗ ಗಂಧರ್ವರು ಅವರನ್ನು ತೃಣೀಕರಿಸಿ ನಗುತ್ತ ''ಎಲಾ ನರಕುನ್ನಿಗಳೇ! ನಾವು ಯಾರೆಂದು ತಿಳಿದು ನಿಮ್ಮ ದರ್ಪವನ್ನು ತೋರಿಸುತ್ತಿದ್ದೀರಿ. ದೇವಲೋಕದರಸನಾದ ದೇವೇಂದ್ರನ ಭೃತ್ಯರು. ಅವನ ಆಜ್ಞೆಪಡೆದು ಬಂದ ನಾವು ಹುಲುಮಾನವರ ಬೆದರಿಕೆಯ ಮಾತಿಗೆ ಹೆದರುವವರಲ್ಲ. ನಿಮ್ಮರಾಜ ಹಿಂದಿರುಗಿ ಹೋಗದಿದ್ದರೆ ಅವನ ದರ್ಪ ಧೂಳೀಪಟವಾದೀತೆಂದು ತಿಳಿಸುಹೋಗು'' ಎಂದು ಹೇಳಿದಾಗ ಭೃತ್ಯರು ಗಂಧರ್ವರ ವೀರವಾಣಿ ಅವರ ಅಟ್ಟಹಾಸಗಳಿಗೆ ಅಳುಕಿ ಕೌರವರಾಜನ ಬಳಿಗೆ ಬಂದು ಗಂಧರ್ವರಿಂದ ತಮಗೆ ಸಿಕ್ಕಿದ ಅವಮಾನದ ಮಾತಿನಪೆಟ್ಟನ್ನು ತಿಳಿಸಿದರು. ದುರ್ಯೋಧನನು ಸಿಟ್ಟಿನಿಂದ ಸೆಟೆದುನಿಂತು ಆ ಗಂಧರ್ವರನ್ನು ಗಂಧದೋಪಾದಿ ಅರೆದುಬಿಡುತ್ತೇನೆ'' ಎಂದು ಕ್ರೋಧದಿಂದ ಕಿಡಿಕಾರುತ್ತ ಗಂಧರ್ವರೊಡನೆ ಕಲಿತನದಿಂದ ಕದನಕ್ಕೆ ನಿಂತನು. ಗಂಧರ್ವರಿಗೂ ಕೌರವದಳಕ್ಕೂ ಕರಾಳ ಕದನ ಪ್ರಾರಂಭವಾದಾಗ ಕರ್ಣನು ಅವರಕೈಲಿ ಸೋಲುವ ಪರಿಸ್ಥಿತಿ ಒದಗಿದಾಗ ನಾವು ಬಂದಿರುವುದು ಪಾಂಡವರೊಂದಿಗೆ ಸ್ಪರ್ಧೆಗಾಗಿ ಇವರೊಡನೆ ನಮಗೇಕೆ ಜಗಳ? ಎಂದು ಹೇಳುತ್ತ ವಿಕರ್ಣನ ರಥವೇರಿ ಹೊರಟುಹೋದನು.

ನಂತರ ಚಿತ್ರಸೇನನು ದುರ್ಯೋಧನನನ್ನು ಕೈಸೆರೆಹಿಡಿದು ಅವನನ್ನು ಸಹೋದರರು ಸತಿಯರಿಂದೊಡಗೂಡಿ ಹಗ್ಗದಿಂದ ಬಿಗಿದು ಹೊತ್ತುಕೊಂಡು ಆಕಾಶಗಾಮಿಯಾಗಿ ಹೋಗುತ್ತಿದ್ದನು. ಆಗ ದುರ್ಯೋಧನನ ಭೃತ್ಯರು ನಮ್ಮರಾಜ ಶತ್ರುಗಳಿಗೆ ಕೈಸೆರೆ ಸಿಕ್ಕನು. ಅವನನ್ನು ಬಿಡಿಸಿಕೊಳ್ಳುವ ಧೀರರು ನಮ್ಮಲ್ಲಿ ಯಾರೂ ಇಲ್ಲ. ಧರ್ಮರಾಜನನ್ನೇ ಮೊರೆಕೇಳಿ ಮಹಾರಾಜನನ್ನು ಬಿಡಿಸಿಕೊಡು'' ಎಂದು ಕೇಳುವುದೇ ಈಗ ನಮಗೆ ಬದುಕಲುದಾರಿ'' ಎಂದು ಯೋಚಿಸಿ ಎಲ್ಲರೂ ಧರ್ಮರಾಜನ ಬಳಿಗೆ ಬಂದು, ಶರಣಾಗತರಾಗಿ ''ಧರ್ಮರಾಜಾ! ಗಂಧರ್ವರು ತಮ್ಮ ಪರಾಕ್ರಮದಿಂದ ಕುರರಾಜನನ್ನು ಕೈಸೆರೆಹಿಡಿದು ನಮ್ಮ ಭರತಕುಲಕ್ಕೇ ಕಳಂಕ ಬರುವಂತೆ ಮಾಡಿದ್ದಾನೆ. ಕುರುರಾಜನನ್ನು ಅವನ ಪರಿವಾರದೊಂದಿಗೆ ಹಗ್ಗದಿಂದ ಕಟ್ಟಿ ಎಳೆದೊಯ್ಯುತ್ತಿದ್ದಾನೆ. ಅವರನ್ನು ಬಿಡಿಸಿ ವಂಶದ ಗೌರವವನ್ನು ಉಳಿಸಿರ'' ಎಂದು ಕೇಳಿಕೊಂಡರು.

ಆಗ ಭೀಮನು ''ಧರ್ಮರಾಜಾ! ಕುರುರಾಜನ ಸೊಕ್ಕು ಮುರಿಯಲಿಕ್ಕಾಗಿಯೇ

ದೇವೇಂದ್ರನು ಗಂಧರ್ವನ ಕೈಲಿ ಆ ಕೆಲಸ ಮಾಡಿಸಿದ್ದಾನೆ. ದುರ್ಯೋಧನನು ನಮ್ಮಿಂದ ಸಕಲಸಂಪತ್ತನ್ನು ಮೋಸದಿಂದ ಅಪಹರಿಸಿಕೊಂಡು ಪರರಿಂದ ಸುಲಿದುಕೊಂಡ ಸಂಪತ್ತಿಗೆಲ್ಲಾ ನಾನೇ ಸಾರ್ವಭೌಮನೆಂಬ ಜಂಭದಿಂದ ನಾವೀಗ ನಿರ್ಧನಿಕರಾಗಿದ್ದೇವೆ. ನಮ್ಮ ಮುಂದೆ ತನ್ನ ಸಿರಿತನವನ್ನು ಮೆರೆಸಬೇಕೆಂದು ಈಗ ಬಂದಿದ್ದಾನೆ. ನಾವು ರಾಜಸೂಯಯಾಗ ಮಾಡಿದ್ದೇವೆಂಬ ಅಸೂಯೆಯಿಂದ ತಾನೂ ಅದಕ್ಕಿಂತಲೂ ಅಧಿಕರೀತಿಯಿಂದ ಯಾಗಮಾಡಿ ನಮಗಿಂತಲೂ ತಾನೇ ದೊಡ್ಡವನೆಂದು ಲೋಕ ತಿಳಿಯಬೇಕೆಂದೂ ನಾವು ತಲೆತಗ್ಗಿಸಬೇಕೆಂದೂ ಪೌಂಡ್ರಕಯಾಗವನ್ನು ಮಾಡಿ ನಮ್ಮನ್ನು ಕರೆದನು. ನಾವು ಹೋಗಲಿಲ್ಲ. ಅದಕ್ಕಾಗಿ ಈಗ ಘೋಷಯಾತ್ರೆಯ ನಿಮಿತ್ತವಿಟ್ಟು ಬಂದು ತನ್ನ ವೈಭವವನ್ನು ನಮ್ಮ ಮುಂದೆ ಪ್ರದರ್ಶನಮಾಡಿ ನಮ್ಮನ್ನು ಹೀನಾಯಗೊಳಿಸಲು ಬಂದಿರುವುದರಿಂದ ದೇವೇಂದ್ರನು ತಕ್ಕಶಾಸ್ತಿ ಮಾಡಿದ್ದಾನೆ. ಅದಕ್ಕಾಗಿ ಮರಗಬೇಡ'' ಎಂದನು. ಧರ್ಮರಾಜನು ಆದರೂ ಪಶ್ಚಾತ್ತಾಪಪಡುತ್ತಿರಲು ''ಅಣ್ಣಾ! ನಮ್ಮನ್ನು ಅವಮಾನಪಡಿಸಲು ಬಂದಿದ್ದ ಪಾಪಿಯನ್ನು ದೇವೇಂದ್ರನು ಆ ಪಾಪಿಯೇ ಅವಮಾನಗೊಳ್ಳುವಂತೆ ಚಿತ್ರಸೇನನನ್ನು ಕಳುಹಿಸಿ ಅವನನ್ನು ಅವನ ಸ್ತ್ರೀಯರನ್ನು ಪಾಶದಿಂದ ಬಿಗಿದು ಎಳೆದೊಯ್ಯುವಂತೆ ಹೇಳಿದ್ದರಿಂದ ಚಿತ್ರಸೇನನು ನಮಗೆ ಉಪಕಾರಮಾಡಲು ಬಂದಿದ್ದಾನೆ. ಅವನೊಂದಿಗೇ ನಾವು ಯುದ್ಧಕ್ಕೆ ನಿಲ್ಲುವುದು ಧರ್ಮವೇ ನೀನೇ ಯೋಚಿಸು'' ಎಂದನು.

ಧರ್ಮರಾಜನು ''ಭೀಮಾ, ನನ್ನ ಮಾತನ್ನು ನೀವಾರೂ ಕೇಳುತ್ತಿಲ್ಲ. ಎಲ್ಲರೂ ಹಗೆತನದ ಮಾತನ್ನೇ ಆಡಿ ದ್ವೇಶಸಾಧನೆ ಮಾಡುತ್ತಿದ್ದೀರಿ. ನಾನೇ ಹೋಗಿ ಬಿಡಿಸಿಕೊಂಡು ಬರೋಣವೆಂದರೆ ನಾನು ಒಂದುದಿನದ ಯಜ್ಞದೀಕ್ಷಿತನಾಗಿರುವುದರಿಂದ ಸೀಮೋಲ್ಲಂಘನೆ ಮಾಡಬಾರದು. ಭೀಮಸೇನಾ ನಾವು ನೂರಾಐದುಮಂದಿ ಅಣ್ಣತಮ್ಮಂದಿರೂ ಒಂದೆ ಎಂಬ ಭಾವದಿಂದ ಶತೃಪಕ್ಷವನ್ನು ಗೆಲ್ಲಬೇಕು. ಆಗ ಪರರಾಜರು ನಮ್ಮರಾಜ್ಯಕ್ಕೆ ಮುತ್ತಿಗೆ ಹಾಕಲು ಆಸ್ಪದವಿರುವುದಿಲ್ಲ. ದುರ್ಯೋಧನ ನಿನಗೆ ವೈರಿ ಆಗಿದ್ದರೂ ಅವನನ್ನು ನೀನು ಪರರಾಜರಿಂದ ಬಿಡಿಸಿಕೊಂಡರೆ ಆ ಕೀರ್ತಿ ನಿನಗೇ ಬರುತ್ತದೆ. ಎಂದು ಧರ್ಮರಾಯನನ್ನು ಕೇಳಿಕೊಳ್ಳುತ್ತಿರಲು ನಾಲ್ಕುಜನ ಸಹೋದರರೂ ಗಂಧರ್ವನ ಬೆನ್ನಟ್ಟಿಹೋದರು.

ಭೀಮನು ಸಿಂಹನಾದದಿಂದ ಗದಾಸಹಿತ ಓಡಿಬರುವುದನ್ನು ಕಂಡು ಚಿತ್ರಸೇನನು ''ಪಾಂಡವರೇ! ನೀವು ಸಿಂಹಗಳು. ಈ ದುರ್ಯೋಧನ ಕುನ್ನಿ. ಪರರಿಂದ ಸುಲಿದುಕೊಂಡ ಕಳ್ಳವಸ್ತುಗಳನ್ನು ನಿಮ್ಮಮುಂದೆ ಪ್ರದರ್ಶನಮಾಡಲು ಬಂದಿರುವ ಇವನಿಗೆ ತಕ್ಕಶಿಕ್ಷೆ ಕೊಡಬೇಕೆಂದು ದೇವೇಂದ್ರನು ಹೇಳಿದಪ್ರಕಾರ ಎಳೆದೊಯ್ಯುತ್ತಿದ್ದೇನೆ'' ಎನ್ನಲು ಭೀಮನು ನಗುತ್ತ ''ಚಿತ್ರಸೇನಾ! ಈಗ ನಾನು ನಮ್ಮಣ್ಣನ ಆಜ್ಞೆಯಂತೆ ಇವನನ್ನು ನೀನುಬಿಗಿದ ಪಾಶದ ಸಹಿತವಾಗಿಯೇ ಅವನು ಬಳಿಗೆ ಎಳೆದೊಯ್ಯುತ್ತೇನೆ ಬಿಟ್ಟುಬಿಡು'' ಎಂದುಹೇಳಿದ

ದುರ್ಯೋಧನನನ್ನು ಕಟ್ಟುಸಹಿತವಾಗಿಯೇ ಸೇನಾಸಮೂಹದಮುಂದೆ ಎಳೆದುಕೊಂಡುಹೋಗಿ ಧರ್ಮರಾಜನ ಕಾಲುಗಳಮೇಲೆ ಕೆಡವಿದನು.

ಆಗ ಚಿತ್ರಸೇನನು ''ಧರ್ಮರಾಜಾ! ಈ ಖೂಳನು ನಿಮಗೆ ಅವಮಾನಪಡಿಸಬೇಕೆಂಬ ದುರ್ಬುದ್ಧಿಯಿಂದ ನಿಮ್ಮ ಸಂಪತ್ತನ್ನು ಕದ್ದು ನಿಮ್ಮಮುಂದೇ ತನ್ನ ಸಿರಿತವನ್ನು ಮೆರೆಸಲು ಬಂದಿದ್ದ ಕಾರಣದಿಂದ ದೇವೇಂದ್ರನು ನನಗೆ ಆ ಪಾಪಿದುರ್ಯೋಧನನನ್ನು ಹಗ್ಗದಲ್ಲಿ ಬಿಗಿದು ಎಳೆದು ತಾ'' ಎಂದು ಆಜ್ಞೆಮಾಡಿದ ಕಾರಣ ಎಳೆದುಕೊಂಡು ಹೋಗುತ್ತಿದ್ದೆನು'' ಎಂದು ಹೇಳಿದನು.

ಆಗ ಧರ್ಮರಾಜನು ದುರ್ಯೋಧನನ ಪಾಶಬಂಧನವನ್ನೂ ಬಿಚ್ಚಿಸಿ ''ದುರ್ಯೋಧನಾ! ಇನ್ನುಮೇಲಾದರೂ ಇಂಥ ದುಃಸ್ಸಾಹಸಕ್ಕೆ ಮನಗೊಡದೆ ಮದಮಾತ್ಸರ್ಯಗಳನ್ನು ತ್ಯಜಿಸಿ ನಿನ್ನ ರಾಜ್ಯದಲ್ಲಿ ಸುರಕ್ಷಿತವಾಗಿ ಬದುಕಿಕೋ ಹೋಗಪ್ಪಾ!'' ಎಂದು ಬುದ್ಧಿವಾದವನ್ನು ಹೇಳಿ ಕಳುಹಿಸಿದನು.

ದುರ್ಯೋಧನನಿಗೆ ಧರ್ಮರಾಜನ ಉಪದೇಶ ಭೀಮನ ತೆಗಳಿಕೆಗಳಿಂದ ಕೂಡಿದ ಎಳೆದಾಟ ಚಿತ್ರಸೇನನ ವಿಷಸದೃಶವಾದ ನುಡಿಗಳು ಎಲ್ಲವೂ ಒಂದಕ್ಕಿಂತಲೂ ಒಂದು ಅಧಿಕವಾದ ಇರಿತಗಳಾದವು. ಮಾತಿನ ವಿಷದ ಮುಳ್ಳುಗಳಿಂದ ಚುಚ್ಚಿಸಿಕೊಂಡ ಅವನ ಮನಸ್ಸು ಮರುಕದ ಹೊಂಡದಲ್ಲಿ ಮುಳುಗಿತು. ಇನ್ನು ನಾನು ಬದುಕಿರಬಾರದು. ಪ್ರಾಣತ್ಯಾಗವೇ ನನಗೆ ಸರಿಯಾದ ಮಾರ್ಗವೆಂದುಕೊಂಡು ಅತೀವ ದುಃಖದಿಂದ ಬರುತ್ತಿದ್ದನು. ಮುಂದೆ ಕರ್ಣನು ಬರುತ್ತಿದ್ದನು. ದುರ್ಯೋಧನನನ್ನು ನೋಡಿ ಆದರದಿಂದ ಆಲಂಗಿಸಿಕೊಂಡು ''ದುರ್ಯೋಧನಾ! ನೀನು ಮಹಾಪರಾಕ್ರಮಿ ಆದಕಾರಣ ಆ ಕ್ರೂರಶತೃಗಳಿಂದ ಉಳಿದುಬಂದೆ'' ಎಂದು ಹೊಗಳಿದನು. ದುರ್ಯೋಧನನು ಲಜ್ಜೆಯಿಂದ ತಲೆತಗ್ಗಿಸಿ ''ಮಿತ್ರಾ! ಸುಮ್ಮನೆ ಏತಕ್ಕಾಗಿ ನನ್ನನ್ನು ಹೊಗಳುತ್ತಿ? ನನ್ನನ್ನು ಚಿತ್ರಸೇನ ಗಂಧರ್ವನು ನನ್ನನ್ನು ಒಂದು ಪ್ರಾಣಿಯನ್ನು ಎಳೆದೊಯ್ಯುವಂತೆ ಹಗ್ಗದಿಂದ ಬಿಗಿದು ಎಳೆದುಕೊಂಡು ಹೋಗುತ್ತಿದ್ದರೆ ಭೀಮಾರ್ಜುನರಿಬ್ಬರೂ ಅಲ್ಲಿಗೆಬಂದು ನನ್ನನ್ನು ಅಸ್ತ್ರಗಳ ಹೊಡೆತದಿಂದ ದೇಹವನ್ನು ಛಿದ್ರಪಡಿಸುತ್ತಿದ್ದಾಗ ಗಂಧರ್ವನು ಪಾಂಡವರು ಸಿಂಹಗಳೆಂದೂ ನಾನು ಶುನಕವೆಂದೂ ಹೀಯಾಳಿಸುತ್ತ ನಿಮ್ಮ ಸಂಪತ್ತನ್ನೇ ಕದ್ದು ನಿಮ್ಮೆದುರಿಗೇ ಮೆರೆಯಲು ಬಂದಿರುವ ಈ ಭಂಡ ನನ್ನ ದೇವೇಂದ್ರನಪ್ಪಣೆಯಂತೆ ಎಳೆದುಕೊಂಡು ಹೋಗುತ್ತಿದ್ದೇನೆ'' ಎಂದನು. ಆಮಾತಿಗೆ ಭೀಮನುನಕ್ಕು ''ಗಂಧರ್ವರಾಜಾ! ಈಗ ನಾನು ನಮ್ಮಣ್ಣನ ಆಜ್ಞೆಯಂತೆ ಎಳೆದೊಯ್ಯುತ್ತೇನೆ ಬಿಡು'' ಎಂದುಹೇಳುತ್ತ ದರದರನೆ ಅವನು ಎಳೆದುಕೊಂಡುಹೋಗಿ ಧರ್ಮರಾಯನ ಕಾಲುಗಳ ಮೇಲೆ ನನ್ನನ್ನು ಕೆಡವಿದನು. ಆಗ ಚಿತ್ರಸೇನನು ಈ ಪಾಪಿಗೆ ಕರುಣ ತೋರಿಸಬೇಡ. ನಿಮ್ಮನ್ನು ಸಂಕಟಕ್ಕೀಡು ಮಾಡಬೇಕೆಂದು ಬಂದ ಇವನೇ ಈಗ

ಸಂಕಟಕ್ಕೊಳಗಾಗಬೇಕು'' ಎಂದು ಹೇಳಿದನು.

ಆಗ ಧರ್ಮರಾಜನು ಎಲ್ಲರಿಗೂ ಸಮಾಧಾನಹೇಳಿ ನನ್ನನ್ನು ಕಟ್ಟಿದ್ದ ಹಗ್ಗವನ್ನು ಬಿಚ್ಚಿ ನನ್ನಮೇಲೆ ಅನುಕಂಪವನ್ನು ತೋರಿಸುತ್ತ ''ಇನ್ನಾದರೂ ನೀಚಬುದ್ಧಿಯನ್ನು ತ್ಯಜಿಸಿ ಒಳ್ಳೆಯವನಾಗಿ ಬದುಕಿಕೊ ಹೋಗು'' ಎಂದು ಮಾತಿನ ಛಡೀ ಏಟಿನಿಂದ ನನ್ನನ್ನು ಕಳುಹಿಸಿದನು.

ಇದಕ್ಕಿಂತಲೂ ದೊಡ್ಡಶಿಕ್ಷೆ ಇನ್ನೇನು ಬೇಕು? ನಾನು ಇನ್ನು ಬದುಕಿದ್ದರೂ ಸತ್ತಂತೆಯೇ ಎಂದು ಹೇಳಿ ಹಠೋಪವಾಸದಿಂದ ಮಲಗಿದನು.

## ಮೂಲಕಲಿ ದುರ್ಯೋಧನನಿಗೆ ಮೂಲದೈತ್ಯರ ಬೆಂಬಲ

ದುರ್ಯೋಧನನು ಸೋಲಿನಸಂಕಟ ಸಹಿಸಲಾರದೆ ಉಪವಾಸದಿಂದ ಪ್ರಾಣತ್ಯಾಗ ಮಾಡುವ ಪ್ರತಿಜ್ಞೆ ಮಾಡಿದಾಗ ಪಾತಾಳಲೋಕದ ದೈತ್ಯರೆಲ್ಲರೂ ಚಿಂತೆಗೊಳಗಾದರು. ನಮ್ಮಪಕ್ಷದ ಮೂಲಕಲಿ ದುರ್ಯೋಧನನು ಮರಣ ಹೊಂದಿದರೆ ದೈತ್ಯಕುಲನಾಶಹೊಂದಿ ದೇವತಾಪಕ್ಷ ವೃದ್ಧಿಗೊಂಡು ನಮ್ಮವಂಶವೇ ನಿರ್ವಂಶವಾಗುತ್ತದೆ. ಎಂಬ ದುಃಖದಿಂದ ತಮ್ಮ ಗುರುಗಳಾದ ಶುಕ್ರಾಚಾರ್ಯರನ್ನು ಮೊರೆಹೊಕ್ಕರು.

ಅವರ ಸಲಹೆಯಂತೆ ಒಂದು ಕ್ಷುದ್ರಶಕ್ತಿಯುತವಾದ ಭೂತನ್ನ ಸೃಷ್ಟಿಸಿ ''ನೀನು ಭೂಲೋಕಕ್ಕೆ ಹೋಗಿ ನಮ್ಮ ನಾಯಕನಾದ ದುರ್ಯೋಧನನನ್ನು ಹೊತ್ತುಕೊಂಡುಬಾ'' ಎಂದು ಆಜ್ಞೆ ಮಾಡಿದರ ಭೂತವು ದುರ್ಯೋಧನನನ್ನು ಹೊತ್ತುಕೊಂಡು ಪಾತಾಳಲೋಕಕ್ಕೆ ತಂದಿತು. ಸ್ವಲ್ಪಹೊತ್ತಿನನಂತರ ದುರ್ಯೋಧನನಿಗೆ ಎಚ್ಚರವಾಗಲು ಸುತ್ತಮುತ್ತಲೂ ಇದ್ದ ದೈತ್ಯರೆಲ್ಲರೂ ಅವನನ್ನು ಕುರಿತು, ''ಕುರುರಾಜಾ! ನೀನು ನಮ್ಮೆಲ್ಲರಿಗೂ ಮೂಲಗುರು ಆಗಿರುವಿ. ನಮ್ಮ ದೈತ್ಯಕುಲವನ್ನು ವೃದ್ಧಿಗೊಳಿಸಲಿಕ್ಕಾಗಿಯೇ ಅವತಾರಮಾಡಿರುವಿ. ಈಗ ಸಾಯುವ ಪ್ರತಿಜ್ಞೆ ಮಾಡಿದರೆ ನಿನ್ನ ಅವತಾರವೇ ವ್ಯರ್ಥವಾಗುತ್ತದೆ. ಇನ್ನು ಮುಂದೆ ನಿನಗೆ ಸೋಲಾಗದಂತೆ ನಾವು ಸಕಲಪ್ರಯತ್ನದಿಂದಲೂ ಸಾಧನೆಮಾಡುತ್ತೇವೆ. ಕೃಷ್ಣನಿಂದ ಹತನಾದ ನರಕಾಸುರನೇ ಈಗ ಕರ್ಣನಲ್ಲಿ ಸೇರಿ ಕೃಷ್ಣಾರ್ಜುನರನ್ನು ಕೊಲ್ಲುವ ದೀಕ್ಷೆವಹಿಸಿದ್ದಾನೆ. ಭೀಮನನ್ನು ಗೆಲ್ಲಲಾಗದಿದ್ದರೂ ಭೀಷ್ಮನಲ್ಲಿ ಹೊಕ್ಕು ಅವನಿಂದ ಕೊಲ್ಲಿಸುತ್ತೇವೆ. ನಿನ್ನ ಜಯಕ್ಕಾಗಿ ನಾವು ರುದ್ರದೇವರನ್ನು ಕುರಿತು ಘೋರತಪಸ್ಸನ್ನು ಮಾಡುತ್ತೇವೆ. ನಿನಗೆ ಸೋಲಿನ ಚಿಂತೆಬೇಡ. ಈ ರಹಸ್ಯವನ್ನು ನೀನು ಯಾರಮುಂದೂ ಹೇಳದೆ ಗೋಪ್ಯವಾಗಿರಿಸು'' ಎಂದುಹೇಳಿ ದುರ್ಯೋಧನನಿಗೆ ಧೈರ್ಯೋತ್ಸಾಹಗಳನ್ನು ತುಂಬಿದರು. ನಂತರ ಭೂತವು ಮತ್ತೆ ದುರ್ಯೋಧನನನ್ನು ಅವನ ಸ್ಥಳದಲ್ಲಿರಿಸಿ ಹೊರಟುಹೋಯಿತು.

ದುರ್ಯೋಧನನಿಗೆ ಇದೆಲ್ಲವೂ ಒಂದು ಕನಸಿನಂತೆ ಭಾಸವಾಯಿತು. ಎಚ್ಚರವಾದೊಡನೆ ಅವನಿಗೆ ಹೊಸ ಉತ್ಸಾಹ ಹುರುಪು ಮೈಗೂಡಿ ಬಂದು ಆನಂದದಿಂದಿದ್ದನು. ದುರ್ಯೋಧನನು ದುಃಖ ದುಮ್ಮಾನಗಳಿಲ್ಲದೆ ಭೃತ್ಯರಿಂದ ಉಪಚಾರಮಾಡಿಸಿಕೊಳ್ಳುವುದನ್ನು ನೋಡಿದ ಕರ್ಣ ದುಶ್ಯಾಸನಾದಿಗಳು ಆನಂದತುಂದಿಲರಾಗಿ ಅವನಬಳಿಗೆ ಬಂದು ಅವನನ್ನು ಕುರಿತು ಹರ್ಷೋತ್ಸಾಹ ತುಂಬಿದ ಮಾತುಗಳಿಂದ ಶ್ಲಾಘಿಸತೊಡಗಿದರು.

''ದುರ್ಯೋಧನಾ! ನಿನ್ನನ್ನು ಗಂಧರ್ವರಾಜನು ಯಾವುದೋ ಒಂದು ಭಂಗಿಯಲ್ಲಿ ನೀನು ಮೈಮರೆತಿರುವಾಗ ಅಕಸ್ಮಾತ್ತಾಗಿ ಕೈಸೆರೆಹಿಡಿದಿದ್ದು ಒಂದು ದೊಡ್ಡ ಮಾತಲ್ಲ. ಅವನು ಏನೇನೋ ಉನ್ಮತ್ತವಾಕ್ಯಗಳಿಂದ ಹರಟಿದನೆಂದು ಕೊರಗಬೇಡ. ಪಾಂಡವರು ನಿನ್ನ ಭೃತ್ಯರಾದ ಕಾರಣದಿಂದ ನಿನ್ನನ್ನು ಗಂಧರ್ವನಿಂದ ಬಿಡಿಸಿ ನಿನಗೆ ಸೇವೆ ಸಲ್ಲಿಸಿದ್ದಾರೆಂದು ತಿಳಿ. ಅದು ನಿನ್ನಕೀರ್ತಿಗೆ ಕುಂದಲ್ಲ.

ನಿನ್ನಮುಂದೆ ನಾನು ಅರ್ಜುನನ್ನ ಕೊಂದು ಅವರ ಕೈಲಿ ನನ್ನ ಕಾಲನ್ನು ತೊಳೆಸಿಕೊಳ್ಳುವೆನು. ಅದುವರೆಗೂ ನಾನು ಬೇರೆ ಯಾರ ಕೈಲೂ ಕಾಲನ್ನು ತೊಳೆಸಿಕೊಳ್ಳುವುದಿಲ್ಲ. ಇದೇ ನನ್ನ ಪ್ರತಿಜ್ಞೆ'' ಎಂದನು. ಹೀಗೆ ಕರ್ಣನು ಶಕುನಿಯೊಡಗೂಡಿ ದುರ್ಯೋಧನನಿಗೆ ಧೈರ್ಯೋತ್ಸಾಹಗಳನ್ನು ತುಂಬಿ ಹಸ್ತಿನಾವತಿಗೆ ಕರೆದುಕೊಂಡುಬಂದರು.

## ಸುರಪತಿಯಿಂದ ಕರ್ಣನ ಕವಚಕುಂಡಲಗಳ ಹರಣ

ಕರ್ಣನು ಅರ್ಜುನನನ್ನು ಕೊಲ್ಲಲು ಪ್ರತಿಜ್ಞೆಮಾಡಿದನಂತರ ದೇವೇಂದ್ರನು ಅವನ ದೈವದತ್ತ ಸಂಪತ್ತುಗಳನ್ನು ಕಸಿದು ದುರ್ಬಲನನ್ನಾಗಿ ಮಾಡಬೇಕೆಂಬ ಸಂಕಲ್ಪ ಮಾಡಿದನು. ಆಗ ಸೂರ್ಯನೂ ಭಗವತ್ಸೇವಾಸಂಕಲ್ಪದಿಂದ ಕರ್ಣನ ಸ್ವಪ್ನದಲ್ಲಿ ಕಾಣಿಸಿಕೊಂಡು ''ಕರ್ಣಾ! ನಿನ್ನಬಳಿಗೆ ನಾಳೆಯದಿನ ದೇವೇಂದ್ರನುಬಂದು ನಿನ್ನ ರಕ್ಷಾಕವಚದಂತಿರುವ ಕರ್ಣಕುಂಡಲ ಮತ್ತು ಕವಚವನ್ನು ಕೇಳುತ್ತಾನೆ. ನಿನ್ನ ಮೃತ್ಯುನಾಶಕರವಾದ ಆ ಶಕ್ತಿಯುತ ವಸ್ತುಗಳನ್ನು ನೀನು ದಾನಮಾಡಿದರೆ ನಿನಗೆ ಮರಣತಪ್ಪುವುದಿಲ್ಲ. ಆದ್ದರಿಂದ ಕೊಡಬೇಡ'' ಎಂದು ಹೇಳಿದನು. ಆಗ ಕರ್ಣನು ಸ್ವರ್ಗಾಧಿಪತಿಯು ಬ್ರಾಹ್ಮಣವೇಷದಿಂದ ಬಂದು ದಾನಕೇಳಿದರೆ ನಾನು ಇಲ್ಲವೆನ್ನಲಾರೆ. ಬ್ರಾಹ್ಮಣರು ಬಂದು ನನ್ನ ದೇಹವನ್ನೇ ಯೋಚಿಸಿದರೂ ನಾನು ಇಲ್ಲವೆನ್ನಲಾರೆ. ಇದೇ ನನ್ನ ಪ್ರತಿಜ್ಞೆ'' ಎಂದನು. ಈಗ ಸೂರ್ಯನು ಮತ್ತೊಂದು ಮಹತ್ಕಾರ್ಯವನ್ನು ಅವನಿಂದ ಮಾಡಿಸಲಿಕ್ಕಾಗಿ ಅವನಮೇಲೆ ಅಭಿಮಾನ ತೋರಿಸುತ್ತ ''ಕರ್ಣಾ! ದಾನಮಾಡುವುದೇ ನಿನ್ನ ಪ್ರತಿಜ್ಞೆ ಆಗಿದ್ದರೆ ಇಂದ್ರನಿಂದ ಶಕ್ತ್ಯಾಯುಧವನ್ನು ಪಡೆದುಕೊಂಡಾದರೂ ದಾನ ಮಾಡು'' ಎಂದುಹೇಳಿ ಮರೆಯಾದನು.

ಮರುದಿನ ದೇವೇಂದ್ರನು ವಿಪ್ರವೇಶದಿಂದ ಕರ್ಣನ ಬಳಿಗೆ ಬಂದು ''ಕರ್ಣಾ!

ನೀನು ದಾನಮಾಡುವುದರಲ್ಲಿ ಪ್ರಖ್ಯಾತನೆಂದು ಪ್ರಸಿದ್ಧಿಯಾಗಿರುವಿ. ಆದ್ದರಿಂದ ನಿನ್ನಲ್ಲಿ ನಾನು ಯಾಚನೆಗಾಗಿ ಬಂದಿದ್ದೇನೆ. ಕೊಡುವೆಯಾ?'' ಎಂದು ವಾಗ್ದಾನಪಡೆದು ''ಕರ್ಣಾ ನಿನ್ನ ಕವಚಕುಂಡಲಗಳನ್ನು ಕೊಡು'' ಎಂದು ಕೇಳಿದನು. ಕರ್ಣನಿಗೆ ಬಂದಿರುವನು ದೇವೇಂದ್ರನೆಂದು ತಿಳಿಯಿತು. ಸೂರ್ಯನ ಮಾತನ್ನು ಸ್ಮರಿಸಿ ಸಂತೋಷದಿಂದ ತನ್ನ ದೇಹದಲ್ಲಿ ತನ್ನ ಹುಟ್ಟಿನೊಂದಿಗೇ ಹುಟ್ಟಿಬಂದಿರುವ ಕವಚಕುಂಡಲಾದಿಗಳನ್ನು ಆಯುಧದಿಂದ ಛೇದಿಸಿ ಹೊರತೆಗೆದು ಸಂತೋಷದಿಂದ ದಾನಮಾಡಿದನು.

ಆಗ ದೇವೇಂದ್ರನು ''ಕರ್ಣಾ! ನಿನ್ನ ದಾನಕ್ಕೆ ಮೆಚ್ಚಿದೆನು. ನಿನಗೆ ಬೇಕಾದ ವರ ಕೇಳು'' ಎಂದನು.

ಕರ್ಣನು ಶಕ್ತ್ಯಾಯುಧವನ್ನು ಕೇಳಲು, ಅದನ್ನು ಕೊಟ್ಟು ''ಕರ್ಣಾ! ಈ ಆಯುಧವು ನಿನ್ನ ಶತೃವನ್ನು ಸಂಹಾರಮಾಡಿದನಂತರ ಮತ್ತೆ ನನ್ನ ಬಳಿಗೇ ಬಂದು ಸೇರುತ್ತದೆ. ಆದ್ದರಿಂದ ಇದನ್ನು ನಿನ್ನ ವೈರಿಯನ್ನು ಕೊಲ್ಲಲಿಕ್ಕೆ ಮೀಸಲಾಗಿರಿಸಿಕೊ'' ಎಂದುಹೇಳಿ ತನ್ನ ಕಾರ್ಯ ನೆರವೇರಿತೆಂಬ ಸಂತೋಷದಿಂದ ಹೊರಟುಹೋದನು.

## ಯಮಧರ್ಮನಿಂದ ಪಾಂಡವ ಪರೀಕ್ಷೆ

ಕೌರವನು ಕುಹಕಬುದ್ಧಿಯಿಂದ ಬಂದು ಮತ್ಸರದ ಕಿಚ್ಚನ್ನು ಪಾಂಡವರಿರುವ ಅರಣ್ಯಕ್ಕೆ ಇಟ್ಟು ಉರಿಸಬೇಕೆಂದು ಬಂದಿದ್ದರೂ ಆ ಕಿಚ್ಚನ್ನು ತಮ್ಮ ತಪೋತಂಪಿನಿಂದ ಶಮನಗೊಳಿಸಿ ಕಳುಹಿಸಿದ ನಂತರ ಅವರಿಗೆ ಕೆಲವುದಿನಗಳನಂತರ ಮತ್ತೊಂದು ಸಂಶೋಧನೆಯ ಸನ್ನಿವೇಶ ಒದಗಿತು.

ಅವರ ಆಶ್ರಮದ ಬಳಿ ಇರುವ ಒಬ್ಬ ಋಷಿಕುಮಾರನು ಒಂದುದಿನ ತನ್ನ ಅಗ್ನಿಮಥನದ ಕಾಷ್ಠವನ್ನು ಒಂದು ಮರಕ್ಕೆ ನೇತುಹಾಕಿದಾಗ ಯಮಧರ್ಮರಾಜನು ಕೋಣನ ರೂಪದಿಂದ ಅಲ್ಲಿಗೆ ಬಂದು ಗಿಡಕ್ಕ ನೇತುಹಾಕಿದ್ದ ಕಾಷ್ಠವನ್ನು ತನ್ನ ಕೋಡಿಗೆ ಸಿಕ್ಕಿಸಿಕೊಂಡು ಓಡಿಹೋಯಿತು. ಮುನಿಕುಮಾರನಿಗೆ ಕೋಣನ ಹಿಂದೆ ಓಡಲು ಸಾಧ್ಯವಾಗದೆ ಪಾಂಡವರ ಬಳಿಗೆಬಂದು ''ಸ್ವಾಮೀ! ನನ್ನ ಅಗ್ನಿಕಾಷ್ಠವನ್ನು ಒಂದು ಕಾಡುಕೋಣ ಕೊಂಬಿಗೆ ಸಿಕ್ಕಿಸಿಕೊಂಡು ಓಡಿತು. ''ನನಗೆ ಅದನ್ನು ತಂದುಕೊಟ್ಟು ನನ್ನ ಯಜ್ಞಕಾರ್ಯ ನಿಲ್ಲದಂತೆ ಉಪಕಾರ ಮಾಡಿರಿ'' ಎಂದು ಕೇಳಿಕೊಂಡನು.

ಆಗ ಧರ್ಮರಾಯನ ಆಜ್ಞೆಯಂತೆ ಸಹದೇವನು ಕೋಣನನ್ನು ಹಿಂಬಾಲಿಸಿ ಓಡಿದನು. ಎಷ್ಟು ಓಡಿದರೂ ಕೋಣನನ್ನು ಹಿಡಿಯಲು ಸಾಧ್ಯವಾಗದೆ ಬಿಸಿಲಲ್ಲಿ ದಣಿದಿದ್ದ ಅವನು ಅಲ್ಲೇ ಸಮೀಪದಲ್ಲಿದ್ದ ಒಂದು ಸರೋವರದಲ್ಲಿ ನೀರು ಕುಡಿಯಲು ಹೋದನು.

ಆಗ ಯಮನು ಯಕ್ಷರೂಪದಿಂದ ಇಲ್ಲಿ ನೀರು ಕುಡಿಯಬೇಕಾದರೆ ನನ್ನಪ್ರಶ್ನೆಗೆ ಉತ್ತರ ಹೇಳಿ ನೀರು ಕುಡಿಯಬೇಕು'' ಎಂದನು. ಸಹದೇವನು ವಿದ್ಯೋಪಜೀವನ ನಿಷೇಧವೆಂದು ಯಕ್ಷನ ಮಾತನ್ನು ನಿರಾಕರಿಸಿ ನೀರುಕುಡಿದಾಗ ಮೂರ್ಛೆಬಿದ್ದನು. ಎಷ್ಟು ಹೊತ್ತಾದರೂ ಸಹದೇವನು ಬರದಿರಲು ನಕಲನು ಬಂದರೆ ಅವನಿಗೂ ಅದೇಗತಿ ಆಗಿ ಅವನೂ ಬಿದ್ದನು. ಭೀಮಾರ್ಜುನರು ಬಂದಾಗ ಯಕ್ಷನ ಮಾತು ಕೇಳಿ ಯಮಧರ್ಮರಾಜನೇ ಯಕ್ಷರೂಪದಿಂದ ಬಂದು ಪ್ರಶ್ನೆ ಕೇಳುತ್ತಿದ್ದಾನೆ ಎಂದು ಭೀಮನಿಗೆ ತಿಳಿಯಿತು. ಅವನಿಗೆ ಅಜ್ಞಾನವಿಲ್ಲವಾದರೂ ಯಮನ ಮಾತಿಗೆ ಮನ್ನಣೆಕೊಟ್ಟು ತಾನೂ ಮಲಗಿದನು. ಭೀಮಾರ್ಜುನರೂ ಬಹಳ ವೇಳೆಯಾದರೂ ಬಾರದಿರಲು ಧರ್ಮರಾಜನಿಗೆ ಭಯ ಉಂಟಾಯಿತು. ಅವರು ನಡೆದುಬಂದ ಮಾರ್ಗದಲ್ಲೇ ಬಂದನು. ಎಷ್ಟುದೂರಬಂದರೂ ಕೋಣನೂ ಕಾಣಲಿಲ್ಲ. ಸಹೋದರರ ಸುಳಿವೂ ಕಾಣಲಿಲ್ಲ. ಮುಂದೆ ಜಲಾಶಯವಿದೆ ಎಂಬ ಸೂಚನೆ ಕಂಡುಬಂದು ಅಲ್ಲಿಗೆ ಬಂದುನೋಡಿದರೆ ನಾಲ್ಕುಜನರೂ ಮೂರ್ಛಿತರಾಗಿಬಿದ್ದಿದ್ದರು. ಧರ್ಮರಾಜನು ಆಶ್ಚರ್ಯದಿಂದ ಚಿಂತಿಸುವಾಗ ಯಮನು ಬಕಪಕ್ಷಿಯಾಗಿ ನೀರಿನಲ್ಲಿ ನಿಂತು ನಿನ್ನ ಸಹೋದರರು ನನ್ನ ಮಾತನ್ನು ನಿರಾಕರಿಸಿ ನೀರುಕುಡಿದು ಜ್ಞಾನಶೂನ್ಯರಾಗಿ ಮಲಗಿದ್ದಾರೆ. ನನ್ನ ಪ್ರತಿಜ್ಞೆಯಂತೆ ಇಲ್ಲಿ ನೀರು ಕುಡಿಯಬೇಕಾದರೆ ನಾನು ಕೇಳುವ ಪ್ರಶ್ನೆಗಳಿಗೆ ಉತ್ತರ ಹೇಳಿ ನಂತರ ಜಲಪಾನಮಾಡಬೇಕು. ಇಲ್ಲದಿದ್ದರೆ ಸಾಯುತ್ತಾರೆ'' ಎಂದನು. ಧರ್ಮರಾಜನು ವಿದ್ಯೋಪಜೀವನ ಅಧರ್ಮವಾದರೂ ಈಗ ನನ್ನ ತಮ್ಮಂದಿರು ಬದುಕಬೇಕೆಂಬ ಧ್ಯೇಯವಿಟ್ಟು ನಿನಗೆ ಉತ್ತರ ಹೇಳುತ್ತೇನೆ ಕೇಳು'' ಎಂದನು. ಯಮನು ಆಗ ಧರ್ಮಸೂಕ್ಷ್ಮದ ಅನೇಕ ಶುದ್ಧಸಿದ್ಧಾಂತಗಳ ಪ್ರಶ್ನೆ ಕೇಳಿದರೆ ಧರ್ಮರಾಜನು ಸಮಂಜಸವಾದ ಶ್ರೀಹರಿತತ್ವಕ್ಕೆ ಕಿಂಚಿತ್ತೂ ವಿರೋಧ ಬರದಂತೆ ಉತ್ತರ ಕೇಳಿದಾಗ ಸಮವರ್ತಿಗೆ ಸಂತೋಷ ಉಂಟಾಯಿತು. ''ಧರ್ಮರಾಜಾ! ನಿನಗೆ ಬೇಕಾದ ವರವನ್ನು ಕೇಳು'' ಎಂದನು. ''ನನ್ನ ತಮ್ಮ ನಕುಲನು ಎಚ್ಚರಗೊಂಡು ಏಳಲಿ'' ಎಂದನು.

ಆಗ ಯಮಧರ್ಮನು ''ಧರ್ಮರಾಜಾ! ನೀನು ಭೀಮಾರ್ಜುನರನ್ನು ನಿನ್ನ ಎರಡು ಕಣ್ಣುಗಳೆಂದು ಭಾವಿಸಿ ಅವರನ್ನು ಪ್ರೀತಿಸುತ್ತಿ. ನೀವು ಒಡಹುಟ್ಟಿದ ಒಂದುತಾಯಿಯ ಮಕ್ಕಳಾಗಿದ್ದೀರಿ. ನಕುಲನು ಬಲತಮ್ಮ. ಅವನು ನಿನ್ನ ತಮ್ಮಂದಿರಿಗಿಂತಲೂ ಬಲಾಢ್ಯನೂ ಅಲ್ಲ. ಆದರೂ ಅವನನ್ನು ಬದುಕಿಸಿಕೊಳ್ಳುವ ಯೋಚನೆ ಏಕೆ ಮಾಡಿದಿ?'' ಎಂದನು.

''ಕುಂತೀದೇವಿಯ ಮಕ್ಕಳಲ್ಲಿ ನಾನೊಬ್ಬನು ಉಳಿದಿರುವುದರಿಂದ ಮಾದ್ರೀದೇವಿಯ ಮಕ್ಕಳಲ್ಲಿ ನಕುಲನು ಒಬ್ಬನು ಬದುಕಿದರೆ ಇಬ್ಬರೂ ತಾಯಂದಿರನ್ನು ಸಮದೃಷ್ಟಿಯಿಂದ ನೋಡಿದ ಪುಣ್ಯ ಬರುತ್ತದೆಂದು ಕೇಳಿದೆನು'' ಎಂದನು.

ಆಗ ಯಮಧರ್ಮರಾಯನು ''ಧರ್ಮರಾಜಾ! ನಿನ್ನಲ್ಲಿ ಧರ್ಮವೆಂಬುದು ಕಣಕಣದಲ್ಲೂ ತುಂಬಿರುವುದರಿಂದಲೇ ನಿಸ್ವಾರ್ಥದಿಂದ ಬಲತಮ್ಮನ ಪ್ರಾಣವನ್ನು ಇಚ್ಛಿಸಿದಿ. ನಿನ್ನ ಸಹೋದರರೆಲ್ಲರೂ ಸತ್ತಿಲ್ಲ. ಎಲ್ಲರೂ ಈಗ ಏಳುತ್ತಾರೆ'' ಎಂದಾಕ್ಷಣ ನಾಲ್ಕುಜನರೂ ಕಣ್ಬಿಟ್ಟು ಎದ್ದರು. ಆಗ ಯಮಧರ್ಮರಾಜನು ''ನೀವು ಅರಣ್ಯವಾಸವನ್ನು ಹೇಗೆ ನಿರಾಯಾಸದಿಂದ ನಿರ್ಮೋಹ ಉಳ್ಳವರಾಗಿ ಕಳೆದರೋ ಅದೇ ರೀತಿ ಅಜ್ಞಾತವಾಸವನ್ನು ಒಂದುವರ್ಷ ನಿಮ್ಮ ರೂಪವನ್ನು ಅಚ್ಛಾದಿಸಿಕೊಂಡು ಯಾರೊಬ್ಬರೂ ನಿಮ್ಮ ನಿಜಸ್ವರೂಪವನ್ನು ಅರಿಯದಂತೆ ಸುರಕ್ಷಿತವಾಗಿ ಕಳೆದು ರಾಜ್ಯಸಿರಿಯನ್ನು ವಶಪಡಿಸಿಕೊಂಡು ಆನಂದದಿಂದ ಶತೃನಿಗ್ರಹ ಕಾರ್ಯವನ್ನು ನೆರವೇರಿಸಿ ಭಗವತ್ಕಾರ್ಯನಿರತರಾಗಿರಿ'' ಎಂದು ವರವಿತ್ತು ಕಳುಹಿಸಿದನು.

ನಂತರ ಧರ್ಮರಾಜನು ಬ್ರಾಹ್ಮಣವರನಿಗೆ ಕೊಟ್ಟವಚನ ಸತ್ಯವಾಗುವಂತೆ ಅವನಿಗೆ ಅಗ್ನಿಮಥನ ಕಾಷ್ಠವನ್ನು ಕೊಟ್ಟು ಅದೃಶ್ಯನಾದನು.

ಧರ್ಮರಾಜನು ತನ್ನ ತಂದೆಯ ಸಂದರ್ಶನಾನಂದದಿಂದ ಹಿಂದಿರುಗಿ ಆಶ್ರಮಕ್ಕೆ ಬಂದು ಮುನಿಕುಮಾರನ ಅಗ್ನಿಕಾಷ್ಠವನ್ನು ಕೊಟ್ಟು ಎಲ್ಲಾ ಬ್ರಾಹ್ಮಣರೊಡಗೂಡಿ ಅನೇಕ ಧರ್ಮತತ್ತ್ವಗಳನ್ನು ಜಿಜ್ಞಾಸೆ ಮಾಡುತ್ತ ಒಂದೊಂದು ನಿಮಿಷವನ್ನು ರಸನಿಮಿಷಗಳನ್ನಾಗಿ ಮಾಡಿಕೊಂಡು ಸಚ್ಚಿದಾನಂದಮೂರ್ತಿಯ ಸತ್ಕಥನದೊಳಗಿರುವ ತತ್ತ್ವಸಂಪತ್ತುಗಳನ್ನು ಹೃದಯಸಂಪುಟದಲ್ಲಿ ಶೇಖರಿಸಿಡುತ್ತಿದ್ದರು. ಶ್ರೀಹರಿಭಕ್ತರು ಸುಖದುಃಖಗಳೆರಡು ಸ್ವಾಮಿಯ ಮಹಾಪ್ರಸಾದವೆಂಬ ಭಾವನೆಯಿಂದ ಇದ್ದಾಗ ಅವರಿಗೆ ವಿಸ್ಮರಣೆಯ ದುಃಖ ಲೇಪವಾಗದಂತೆ ಸದಾ ಶ್ರೀಶಭಕ್ತಿಯ ಶಾಶ್ವತ ಸಂತೋಷ ಅವರಿಗೆ ತಾನೇತಾನಾಗಿ ಬಂದು ನೆಲಸುತ್ತದೆ ಎಂಬುದಕ್ಕೆ ಪಾಂಡವರು ಹನ್ನೆರಡುವರ್ಷದ ವನವಾಸವನ್ನು ವನಭೋಗದಂತೆ ಅನುಭವಿಸಿದ್ದೇ ಸಾಕ್ಷಿಯಾಗಿದೆ. ಎಂಭತ್ತೆಂಟುಸಾವಿರ ಋಷಿಗಳು ಹತ್ತುಸಾವಿರ ಸನ್ಯಾಸಿಗಳು ಅವರಮುಖೇನ ಭಗವತ್ಕಥಾ ಶ್ರವಣ ಮಾಡುತ್ತ ಅರಣ್ಯದಲ್ಲಿ ರಸನಿಮಿಷಗಳನ್ನು ಅನುಭವಿಸಿದ ಪುಣ್ಯಾತ್ಮರ ಪಾವನಚರಿತ್ರೆ ಪಾಪಹಾರಕವಾದದ್ದು.

## ಅಜ್ಞಾತವಾಸದಲ್ಲಿ ನಡೆದ ಅಮಾನುಷತ್ವ

ಪಾಂಡವರು ಹನ್ನೆರಡುವರ್ಷದ ವನವಾಸವನ್ನು ವನಭೋಗದಂತೆ ಹನ್ನೆರಡು ಕ್ಷಣಗಳೋಪಾದಿಯಲ್ಲಿ ಸುಖದಿಂದ ಕಳೆದನಂತರ ಒಂದುವರ್ಷದ ಅಜ್ಞಾತವಾಸದ ಸಂಕಲ್ಪವನ್ನು ಶ್ರೀಹರಿಪ್ರೀತ್ಯರ್ಥವಾಗಿ ಎಂಬ ಭಾವನೆಯಿಂದ ಮಾಡಿದರು. ಪಾಂಡವರು ಯಾವ ಬಲಿಷ್ಠರಿಗೂ ಹೆದರುತ್ತಿರಲಿಲ್ಲ. ಭಗವಂತನ ಆಜ್ಞೆಗೆ ಮಾತ್ರ ಕಿಂಚಿತ್ತೂ ದೋಷಲೇಪವಾಗಬಾರದೆಂಬ ಭಯಭಕ್ತಿಯಿಂದ ಹೆಜ್ಜೆಹಾಕುತ್ತಿದ್ದರು.

ಧರ್ಮರಾಜನಿಗೆ ಈಗ ತನ್ನನ್ನು ಆಶ್ರಯಿಸಿಬಂದಿರುವ ಬಹುಸಂಖ್ಯೆಯ ಬ್ರಾಹ್ಮಣವರರನ್ನು ಒಪ್ಪಿಸುವ ಬಗೆ ಹೇಗೆ? ಎಂಬ ಆತಂಕವಾಯಿತು. ಧೌಮ್ಯರನ್ನು ಕುರಿತು ''ಆಚಾರ್ಯರೇ! ಈಗ ನಾನು ಬ್ರಾಹ್ಮಣರನ್ನು ಅಗಲಿಹೋಗಲು ಅವರಾರೂ ಒಪ್ಪುತ್ತಿಲ್ಲ. ಆದ್ದರಿಂದ ನೀವು ಅವರ ಮನಸ್ಸಿಗೆ ಖೇದಪಡಿಸದ ರೀತಿಯಿಂದ ಎಲ್ಲರ ಮುಂದೂ ಈ ಧರ್ಮರಾಜನು ಭಗವತ್ಸಂಕಲ್ಪದಂತೆ ಅಜ್ಞಾತವಾಸಕ್ಕೆ ಸಹೋದರರೊಡಗೂಡಿ ಹೋಗಬೇಕಾಗಿರುವುದರಿಂದ ಈಗ ನೀವೆಲ್ಲರೂ ಆಶೀರ್ವದಿಸಿ ಕಳುಹಿಸಬೇಕಾಗಿ ಪ್ರಾರ್ಥಿಸುತ್ತಿದ್ದಾನೆ'' ಎಂದು ತಿಳಿಸಿರಿ ಎಂದನು. ಆಗ ಧೌಮ್ಯರು ಸಭೆಸೇರಿಸಿ ಧರ್ಮರಾಜನ ಮಾತನ್ನು ಎಲ್ಲರಮುಂದೂ ತಿಳಿಸಲು ಸಮಸ್ತರೂ ಧರ್ಮರಾಜನಿಗೆ ಮಂಗಳಾಶಾಸನವನ್ನು ಹೇಳಿ ಪಾಂಡವರನ್ನು ದ್ರೌಪದಿಯೊಡನೆ ಕಳುಹಿಸಿ ತಾವು ಧೌಮ್ಯಾಚಾರ್ಯರೊಡಗೂಡಿ ತಪೋವನದ ಕಡೆ ನಡೆದರು. ಪಾಂಡವರು ಸಮಾಲೋಚನೆಮಾಡಿ ತಮ್ಮ ಅಜ್ಞಾತವಾಸಕ್ಕೆ ವಿರಾಟನಗರವೇ ಪ್ರಶಸ್ತವಾದ ಸ್ಥಳವೆಂದು ಯೋಚಿಸಿ ವಿರಾಟನಗರದ ಕಡೆಗೆ ಪ್ರಯಾಣ ಬೆಳಸಿದರು. ನಗರ ಪ್ರವೇಶ ಮಾಡುವ ಮೊದಲು ದುರ್ಗಾದೇವಿಯ ಬಳಿಗೆ ಹೋಗಿ ಆ ತಾಯಿಯ ದರ್ಶನ ಪಡೆದು ತಮ್ಮ ಶಸ್ತ್ರಾಸ್ತ್ರಗಳನ್ನು ದೇವಿಯು ಸುರಕ್ಷಿತಗೊಳಿಸುವಂತೆ ಪ್ರಾರ್ಥಿಸಿಕೊಳ್ಳಬೇಕೆಂದು ದುರ್ಗಾಂಬೆಯ ದರ್ಶನಕ್ಕೆ ಹೋದರು. ''ತಾಯೇ! ದುರ್ಗಾದೇವಿ, ನೀನು ಶ್ರೀಕೃಷ್ಣನಿಗೆ ಪ್ರೀತಿಯ ಭಗಿನಿ ಆದ್ದರಿಂದ ನಿನ್ನ ಆಶ್ರಯ ಕೋರಿ ಬಂದಿದ್ದೇವೆ.

ನಾವು ಈಗ ಒಂದುವರ್ಷ ಅಜ್ಞಾತವಾಸದ ದೀಕ್ಷೆಯಲ್ಲಿರುತ್ತೇವೆ. ಆದ್ದರಿಂದ ನಮ್ಮ ಮಂತ್ರಾಸ್ತ್ರಗಳಲ್ಲಿನ ಅಭಿಮಾನಿದೇವತೆಗಳು ಅಲ್ಲಿರದೆ ತಮ್ಮ ಸ್ಥಾನಕ್ಕೆ ಹೊರಟುಹೋಗುವುದರಿಂದ ಈ ಸಕಲ ಶಸ್ತ್ರಾಸ್ತ್ರಗಳನ್ನು ನೀನೇ ಕಾದುಕೊಂಡಿದ್ದು ನಮ್ಮ ಅಜ್ಞಾತವಾಸ ಮುಗಿದನಂತರ ಸಕಲ ಮಂತ್ರಾಸ್ತ್ರಗಳ ಅಭಿಮಾನಿದೇವತೆಗಳನ್ನು ನೀನು ಅದರಲ್ಲಿ ಆಹ್ವಾನಿಸಿ ನಮಗೆ ಜಯದ ಶುಭಮುಹೂರ್ತ ನೀಡು. ನಮಗೆ ಅಜ್ಞಾತವಾಸದಲ್ಲೂ ಶ್ರೀಕೃಷ್ಣನ ಪವಿತ್ರ ಸ್ಮರಣೆಗೆ ಕುಂದುಬರದಂತೆ ಕಾಪಾಡು'' ಎಂದು ಪ್ರಾರ್ಥಿಸಿಕೊಂಡರು.

ಪಾಂಡವರ ಕರಸ್ಪರ್ಷತಪ್ಪಿದ ಧನುರ್ಬಾಣಗಳು ಪ್ರಾಣರಹಿತ ದೇಹದಂತೆ ಇದ್ದುದ್ದರಿಂದ ಅವನ್ನು ಶವದ ಆಕಾರವಾಗಿಯೇ ಕಟ್ಟಿ ಶಮೀವೃಕ್ಷದಲ್ಲಿ ಕಟ್ಟಿದರು.

ಧರ್ಮರಾಜನು ತನ್ನ ಧರ್ಮದೀಕ್ಷೆಗೆ ಅನುಗುಣವಾದ ಸನ್ಯಾಸರೂಪವನ್ನೇ ಸ್ಮರಿಸಿದಾಗ ವೇದವ್ಯಾಸರ ಮಹದನುಗ್ರಹದಿಂದ ಅವನಿಗೆ ಅದೇ ರೂಪಉಂಟಾಯಿತು. ಅವರು ಕೃತಕವಾಗಿ ವೇಷಹಾಕಿಕೊಳ್ಳಲಿಲ್ಲ. ಭೀಮಸೇನನು ರಾಜಗೃಹದಲ್ಲಿ ಪರರ ಕೈಯ್ಯಿಂದ ಭೋಜನಾದಿಗಳನ್ನು ಸೇವಿಸಿದರೆ ಅಪಾಯಸಂಭವವಾಗಬಹುದು. ಆದ್ದರಿಂದ ನಾನೇ ನನ್ನ ಸಹೋದರರಿಗೆ ಅಡಿಗೆಮಾಡಿ ನೀಡಿದಾಗ ಯಾವ ಭಯವೂ ಇರುವುದಿಲ್ಲ. ಅದೂ ಅಲ್ಲದೆ ನಾನು ಶ್ರೀಹರಿಗೆ ಪ್ರೀತಿಕರವಾಗುವಂತೆ ಯೋಗ್ಯರೀತಿಯಲ್ಲಿ ಪಾಕಮಾಡಿ ದೇವರ ನೈವೇದ್ಯವಾದ

ಭೋಜನದಿಂದ ಮಾಲಿನ್ಯರಹಿತನಾಗಿರಬಹುದೆಂಬ ಧ್ಯೇಯದಿಂದ ವಲಲನೆಂಬ ಅಡಿಗೆಯವನಾದನು.

ಅರ್ಜುನನು ಊರ್ವಶಿಯಿಂದ ಮೊದಲೇ ಸಿದ್ಧಪಡಿಸಿಕೊಂಡಿದ್ದಂತೆ ನಾಟ್ಯಗಾರ್ತಿಯಾಗಿ ಬೃಹನ್ನಳೆ ಎಂಬ ಹೆಸರನ್ನೂ ಪಡೆದನು. ನಕುಲನು ಸೂತಕಾರ್ಯ ನಿಪುಣನೆಂದು ಹೇಳಿ ಸೂತರೂಪಧಾರಣೆ ಮಾಡಿದನು. ಸಹದೇವನು ಗೋಪಾಲನಾಗಿ ಶ್ರೇಷ್ಠಕರ್ಮವನ್ನವಲಂಬಿಸಿದ್ದನು.

ದ್ರೌಪದಿಯು ವಿರಾಟರಾಜನು ನಮಗೆ ಆಶ್ರಯನೀಡಿದ್ದು ಒಂದು ಕಾರಣವೆಂದರೆ ರಾಜರಲ್ಲಿ ವಿಷ್ಣುವಿನಂಶವಿರುವುದರಿಂದ ಸುಧೇಷ್ಣಾರಾಣಿಯಲ್ಲಿ ಲಕ್ಷ್ಮೀನಾರಾಯಣರ ಅನುಸಂಧಾನದಿಂದ ಸೇವೆ ಮಾಡಿಕೊಂಡು ಭಗವದರ್ಪಣ ಮಾಡುತ್ತೇನೆಂದು ಸಂಕಲ್ಪಮಾಡಿ ಆಕೆಯನ್ನು ಅಲಂಕಾರಾದಿಗಳಿಂದ ಸೇವಿಸುತ್ತ ಸಂತೋಷಪಡಿಸುತ್ತಿದ್ದಳು. ದ್ರೌಪದಿಯು ಮಹಾರಾಣಿಯನ್ನು ಕುರಿತು ಮೊದಲೇ ಪ್ರತಿಜ್ಞೆ ಮಾಡಿದ್ದಳು. ''ನನಗೆ ನೀನು ಕೀಳುಕಾರ್ಯಗಳನ್ನು ಮಾಡಲು ಆಜ್ಞೆಮಾಡಬಾರದು. ಎಂಜಲು ಪದಾರ್ಥಗಳನ್ನು ನನಗೆ ತಿನ್ನಲು ಕೊಡಬಾರದು. ದಾಸಿಯರ ಕೈಲಿ ಮಾಡಿಸಿಕೊಳ್ಳುವಂತೆ ನನ್ನಿಂದ ಕಾಲುತೊಳೆಸಿಕೊಳ್ಳುವುದೇ ಮೊದಲಾದ ಹೀನಕೃತ್ಯಗಳನ್ನು ಮಾಡಿಸಿಕೊಂಡರೆ ನನ್ನ ಪತಿಗಳಾದ ಧರ್ಮಾನಿ ಲೇಂದ್ರಾಶ್ವಿನೀ ದೇವತೆಗಳೆಂಬ ಹೆಸರಿನ ಐದುಜನ ಪತಿಗಳು ಗಂಧರ್ವಲೋಕದಿಂದ ಬಂದು ನಿನಗೆ ಶಿಕ್ಷೆಕೊಡುತ್ತಾರೆ. ಆದ್ದರಿಂದ ನನ್ನಿಂದ ಅಂಥಯಾವ ಕಾರ್ಯಗಳನ್ನು ಮಾಡಿಸಬೇಡ. ನನಗೆ ಆಶ್ರಯನೀಡಿದ ನಿನಗೆ ನನ್ನಪತಿಗಳಿಂದ ಅಶುಭವಾಗಬಾರದೆಂಬ ಅಭಿಮಾನದಿಂದ ನಿನಗೆ ನನ್ನ ರಹಸ್ಯವನ್ನು ತಿಳಿಸಿದೆನು'' ಎಂದು ಹೇಳಿದಳು.

ಭೀಮಸೇನನು ತಾನು ಪಾಕಶಾಸ್ತ್ರದಲ್ಲಿ ಪ್ರಸಿದ್ಧನೆಂದು ಪ್ರಖ್ಯಾತನಾದದ್ದಲ್ಲದೆ ತನ್ನ ಬಾಹುವಿಕ್ರಮದಿಂದ ದುಷ್ಟಧ್ವಂಸನವನ್ನು ಮಾಡಬಲ್ಲೆನೆಂಬ ಅಸಮಾನ ಶಕ್ತಿಯನ್ನು ಆಗಾಗ ಮಂದಿಯ ಮುಂದೆ ಪ್ರಕಟಗೊಳಿಸುತ್ತಿದ್ದನು.

## ಜಟ್ಟಿ ಕಾಳಗ

ಒಮ್ಮೆ ಜೀಮೂತನೆಂಬ ಒಬ್ಬ ಜಗಜ್ಜಟ್ಟಿ ಎಂದು ಪ್ರಸಿದ್ಧಿ ಪಡೆದಿದ್ದವನು ವಿರಾಟರಾಜ್ಯಕ್ಕೆ ಬಂದು ಮುತ್ತಿಗೆ ಹಾಕಿದ. ಆಗ ರಾಜನ ಆಸ್ಥಾನದಲ್ಲಿದ್ದ ಜಟ್ಟಿಗಳು ಜೀಮೂತಜಟ್ಟಿಯು ರುದ್ರದೇವರಿಂದ ವರಪಡೆದವನಾದ್ದರಿಂದ ಅವನ ಜೊತೆಗೆ ಯುದ್ಧಮಾಡುವುದು ಅಪಾಯವೆಂದು ಭಯಪಟ್ಟು ಓಡಿಹೋದರು. ಕೀಚಕನಿಲ್ಲದ ಸಮಯವನ್ನೇ ಕಾದು ಬಂದಿದ್ದ ಆ ಜಟ್ಟಿಯ ಸಂಗಡ ಹೋರಾಡುವರ್‍ಯಾರೂ ಇಲ್ಲದಿರಲು ವಿರಾಟರಾಜನು ತನ್ನ ಆಪ್ತನಾಗಿದ್ದ ಕಂಕಸನ್ಯಾಸಿಯ ಬಳಿಗೆಬಂದು ''ನನಗೀಗ ವಿಷಮಪರಿಸ್ಥಿತಿ ಬಂದೊದಗಿದೆ. ಕೀಚಕನು

ಈಗ ಇಲ್ಲದಿರುವುದರಿಂದ ಧೈರ್ಯವಾಗಿ ಜೀಮೂತನಸಂಗಡ ಯುದ್ಧಮಾಡಲು ಸಮರ್ಥರಾಗದೆ ಓಡಿದ್ದಾರೆ. ಈಗ ಇದಕ್ಕೆ ಸರಿಯಾದ ಉಪಾಯಹೇಳು'' ಎಂದನು.

ಕಂಕನು ರಾಜನನ್ನು ಕುರಿತು ''ಮಹಾರಾಜಾ! ಹೆದರಬೇಡ. ನಿನ್ನ ಅರಮನೆಯಲ್ಲಿ ಪಾಕಶಾಲೆಯಲ್ಲಿ ಚಾಕರಿ ಮಾಡುತ್ತಿರುವ ವಲಲನೆಂಬುವನು ಮಹಾಬಲಿಷ್ಠನಂತೆ ಕಾಣುತ್ತಾನೆ. ಅವನು ಆಗಾಗ ಹುಲಿ ಸಿಂಹಗಳ ಜೊತೆಗೆ ಕಾಳಗನಡೆಸಿದ್ದನ್ನು ನಾನೂ ನೋಡಿದ್ದೇನೆ. ನಿಜಕ್ಕೂ ಅವನು ನಿನ್ನ ವೈರಿಯನ್ನು ಸೋಲಿಸಬಲ್ಲನು. ಅವನನ್ನು ಕಳುಹಿಸು'' ಎಂದು ಹೇಳಿದನು.

ವಿರಾಟರಾಜನು ವಲಲನನ್ನು ಕರೆಸಿಕೊಂಡು ''ಅಯ್ಯಾ! ನೀನು ಜಟ್ಟಿಕಾಳಗದಲ್ಲಿ ಸಮರ್ಥನಾಗಿರುವಿ ಎಂದು ಕಂಕನು ತಿಳಿಸಿದನು. ಈಗ ಜಟ್ಟಿ ಕಾಳಗಕ್ಕಾಗಿ ಬಂದಿರುವ ಜೀಮೂತನೆಂಬುವನೊಡನೆ ಕಾಳಗ ನಡೆಸಬಲ್ಲೆಯಾ?'' ಎಂದು ಕೇಳಿದನು.

ಆಮಾತಿಗೆ ಭೀಮನು ''ಮಹಾರಾಜಾ! ಮಹಾದೇವ ಮತ್ತು ಸನ್ಯಾಸಿಯ ಅನುಗ್ರಹವಿದ್ದರೆ ಆಗಲಿ'' ಎಂದನು. ಎಂದರೆ ಮಹಾದೇವ ಶಬ್ಧವಾಚ್ಯನಾದ ರುದ್ರದೇವನ ಮತ್ತು ಸನ್ಯಾಸಿಶಬ್ಧವಾಚ್ಯನಾದ ಧರ್ಮರಾಜನ ಅಂತರ್ನಿಯಾಮಕನಾದ ಶ್ರೀಮನ್ನಾರಾಯಣನ ಅನುಗ್ರಹದಿಂದ ಮಾಡಬಲ್ಲೆನು ಎಂಬ ಅನುಸಂಧಾನವಿಟ್ಟು ಹೇಳಿದನು.

ಇಬ್ಬರಿಗೂ ಅಮೋಘಯುದ್ಧ ನಡೆಯಿತು. ಬರಬರುತ್ತ ಜೀಮೂತವಾಹನನ ಬಲ ಬತ್ತಿಹೋಯಿತು. ಕೆಲಹೊತ್ತು ಕ್ರೀಡೆಗಾಗಿ ಅವನೊಡನೆ ಹೋರಾಡಿ ಭೀಮನು ಒಂದು ಗುದ್ದುಗುದ್ದಿದಾಗ ಜೀಮೂತವಾಹನನು ರಕ್ತಕಾರಿ ಸತ್ತುಹೋದನು.

ವಿರಾಟರಾಜನು ವಲಲನ ಅಮೋಘ ಪರಾಕ್ರಮಕ್ಕೆ ಮೆಚ್ಚಿದನು. ಅಂದಿನಿಂದಲೂ ಅವನಬಗ್ಗೆ ಅಭಿಮಾನ ಅಧಿಕವಾಯಿತು. ಹೀಗೆ ಹತ್ತುತಿಂಗಳನ್ನು ನಿರಾಯಾಸದಿಂದ ಅಗೋಚರವಾಗಿ ಅಜ್ಞಾತವಾಸ ಕಳೆದರು.

## ಕೀಚಕನ ನೀಚ ಕಾರ್ಯ

ರಾಜಪತ್ನಿ ಸುಧೇಷ್ಣೆಯ ತಮ್ಮ ಕೀಚಕನು ದಿಗ್ವಿಜಯ ಮುಗಿಸಿ ಅಕ್ಕನ ಭೇಟಿಗಾಗಿ ಬಂದನು. ಅಂತಃಪುರದಲ್ಲಿ ಹೊಸಹೆಣ್ಣೊಂದು ಅವನ ಕಣ್ಮುಂದೆ ಮಿಂಚಿತು. ದ್ರೌಪದಿಯ ಮುಖಚಂದ್ರಕ್ಕೆ ರಾಹುವಿನ ದೃಷ್ಟಿ ಬಿಡಿದಾಗ ಭಾರತೀದೇವಿ ಕೀಚಕನ ಸಂಹಾರ ತನ್ನ ಪತಿಯಿಂದಲೇ ಆಗಬೇಕೆಂಬ ಭವಿಷ್ಯವನ್ನು ತಿಳಿದು ತನ್ನ ಕಾಂತಿ ಮತ್ತಷ್ಟು ವೃದ್ಧಿಗೊಳಿಸಿ ಕೀಚಕನ ಹೃದಯವನ್ನು ಸುಡುತ್ತಿದ್ದಳು.

ಸುಧೇಷ್ಣೆ ತಮ್ಮನ ಕಣ್ಣು ಕಮಲಾಕ್ಷಿಯ ಮೇಲೆ ಬಿದ್ದಿತೆಂಬ ಭಯದಿಂದ ಹೆದರಿದಳು.

ಅಂದಿನಿಂದಲೂ ಕೀಚಕನು ಏಕಾಂತದಲ್ಲಿ ದ್ರೌಪದಿಯ ಬಳಿಗೆಬಂದು ಏನೇನೋ ನೀಚವಾಕ್ಯಗಳಿಂದ ಹಲಬುತ್ತ ಪೀಡಿಸುತ್ತಿದ್ದನು. ದ್ರೌಪದಿ ಒಂದುತಿಂಗಳವರೆಗೂ ಅವನಿಂದ ತಪ್ಪಿಸಿಕೊಂಡು ಅವನ ಪಾಪವಾಕ್ಯಗಳು ತನ್ನ ಕಿವಿಗೆ ಬೀಳದಂತೆ ಮರೆಯಾಗಿ ಹೊರಟುಹೋಗುತ್ತಿದ್ದಳು.

ಕೀಚಕನು ಆದರೂ ಅವಳನ್ನು ಬಿಡದೆ ಒಂದುದಿನ ಬಲಾತ್ಕಾರದಿಂದ ತಡೆದುನಿಲ್ಲಿಸಿ "ದ್ರೌಪದೀ ನೀನೇಕೆ ನನ್ನನ್ನು ಹೀಗೆ ನಿರಾಕರಿಸುತ್ತಿದ್ದಿ? ನನ್ನ ಪ್ರಾರ್ಥನೆಯನ್ನು ನಿಂತುಕೇಳು. ನನ್ನ ಪರಾಕ್ರಮವನ್ನು ಲೋಕವೇ ಕೊಂಡಾಡುತ್ತದೆ. ನಿನ್ನಂಥ ಸುಂದರಿಯರು ನನ್ನ ಪಾದಸೇವೆಗಾಗಿ ಎಷ್ಟೋ ಜನ ಕಾದಿದ್ದರೂ ನನಗೆ ನಿನ್ನನ್ನು ನೋಡಿದಾಗಿನಿಂದಲೂ ನಿನ್ನನ್ನು ಪಡೆಯಲೇಬೇಕೆಂಬ ಆಸೆ ಕ್ಷಣಕ್ಷಣಕ್ಕೂ ವೃದ್ಧಿಯಾಗುತ್ತಿದೆ. ನಾನು ಎಂಥ ಸುಂದರಿಯರು ನನ್ನನ್ನು ವಿವಾಹವಾಗಬೇಕೆಂದು ಕಾಲಿಗೆಬಿದ್ದು ಬೇಡಿದರೂ ಕಡೆಗಣ್ಣಿನಿಂದಲೂ ನೋಡದೆ ನನ್ನ ಸ್ವಾಭಿಮಾನದಿಂದ ಶ್ರೇಷ್ಠಪುರುಷನೆನಿಸಿದ ಧೀರನು. ಆದರೂ ಈಗ ನಿನ್ನ ಮೋಹನರೂಪಕ್ಕೆ ಮನಸೋತು ನಿನ್ನ ಕಾಲಿಗೆ ನಾನೇ ಬಿದ್ದು ಬೇಡಿಕೊಳ್ಳುತ್ತಿದ್ದೇನೆ. ನನ್ನ ಅತುಲೈಶ್ವರ್ಯವೆಲ್ಲವನ್ನು ನಿನ್ನ ಆಧೀನದಲ್ಲಿರುವಂತೆ ಮಾಡುವೆನು. ನನ್ನನ್ನು ವಿವಾಹವಾಗಿರುವ ರಾಜಕುವರಿಯರೆಲ್ಲರೂ ನಿನ್ನ ಚರಣಸೇವಕರಾಗಿರುವಂತೆ ಮಾಡುವೆನು. ನಾನೂ ನಿನ್ನ ದಾಸನೆಂಬ ಭಾವದಿಂದ ನಿನ್ನ ಸೇವಕನಾಗಿರುತ್ತೇನೆ. ನನ್ನನ್ನು ನಿನ್ನವನನ್ನಾಗಿ ಮಾಡಿಕೊಂಡು ಕಾಪಾಡು" ಎಂದು ಬಡಬಡಿಸುತ್ತ ನಿರ್ಲಜ್ಜೆಯಿಂದ ಮುಂದೆಮುಂದೆ ಬರುವ ಕೀಚಕನನ್ನು ದ್ರೌಪದಿಯು ದೂರತಳ್ಳಿ "ಎಲೋ ಪಾಪೀ! ನಿನಗೆ ಇನ್ನು ಎರಡುದಿನ ಬದುಕಿರಬೇಕೆಂಬ ಆಸೆ ಇದ್ದರೆ ಬೇಗ ಇಲ್ಲಿಂದ ಹೊರಟುಹೋಗು. ಇಲ್ಲದಿದ್ದರೆ ನನ್ನ ಪತಿಗಳೇ ಬಂದು ನಿನಗೆ ಗತೀ ಕಾಣಿಸುತ್ತಾರೆ" ಎಂದು ಹೇಳಿ ಹೊರಟುಹೋದಳು.

ಕೀಚಕನು ಆದರೂ ಬಿಡದೆ ಸುಧೀಷ್ಣೆಯ ಬಳಿಗೆಹೋಗಿ "ಅಕ್ಕಾ! ನಿನ್ನಬಳಿ ಇರುವ ಸೈರಂಧ್ರಿಯನ್ನು ನನಗೆ ಬಿಟ್ಟಿರಲು ಆಗುತ್ತಿಲ್ಲ. ಹೇಗಾದರೂ ಆಕೆ ನನ್ನ ವಶವಾಗುವಂತೆ ಮಾಡು" ಎಂದು ಕೇಳಿಕೊಂಡನು. ಮಹಾರಾಣಿ ತಮ್ಮನ ಮಾತುಕೇಳಿ ತಲ್ಲಣಿಸಿದಳು. "ಬೇಡಪ್ಪಾ! ನೀನು ಅವಳನ್ನು ಮರೆತುಬಿಡು. ಆಕೆ ಮೊದಲೇ ತನಗೆ ಐದುಮಂದಿ ಗಂಧರ್ವರು ಸದಾ ಬೆಂಬಲವಾಗಿರುತ್ತಾರೆಂದೂ ಏನು ಅವಳಬಗ್ಗೆ ಅಪಚಾರನಡೆದರೂ ಅವರು ಆಗಲೇ ತಕ್ಕಶಿಕ್ಷೆ ಕೊಡುತ್ತಾರೆಂದೂ ಹೇಳಿದ್ದಾಳೆ. ಆದ್ದರಿಂದಲೇ ನಾನು ನನ್ನ ಪತಿಯನ್ನೂ ಬಹಳ ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದೇನೆ. ನೀನು ಅನರ್ಥಕ್ಕೆ ಮನಗೊಟ್ಟರೆ ಅನಾಹುತವೇ ನಡೆದುಹೋಗಬಹುದು. ಆದ್ದರಿಂದ ನೀನು ಇನ್ನುಮೇಲೆ ನನ್ನ ಅಂತಃಪುರಕ್ಕೆ ಬರಬೇಡ" ಎಂದಳು. ಆದರೂ ಕೀಚಕನು ಹಠಹಿಡಿದನು. ನೀನು ಏನಾದರೂ ನೆಪವಿಟ್ಟು, ಅವಳನ್ನು ನನ್ನಮನೆಗೆ ಕಳುಹಿಸು. ಯಾವ ದೇವರೇ ಬಂದರೂ

ನಾನು ಹೆದರುವವನಲ್ಲ. ಸೈರಂಧ್ರಿ ನನಗೆ ಸಿಗದಿದ್ದರೆ ನಾನು ಪ್ರಾಣನೀಗುವುದು ಖಂಡಿತ'' ಎಂದಾಗ ಸುಧೇಷ್ಣೆಯು ''ಬೇಡ ವಿಷಸದೃಶಳಾದ ಈಕೆಯ ಸಂಪರ್ಕ ನಿನಗೆ ಸುಖಕೊಡುವುದಿಲ್ಲ. ಮಹಾವಿಪತ್ತೇ ಸಂಭವಿಸುತ್ತದೆ. ನಿನಗೆ ಬೇಕಾದರೆ ಸೈರಂಧ್ರಿಗಿಂತಲೂ ಅಧಿಕ ಸೌಂದರ್ಯದ ಹೆಣ್ಣನ್ನು ಹುಡುಕಿ ತಂದುಕೊಡುತ್ತೇನೆ'' ಎಂದು ಎಷ್ಟುಹೇಳಿದರೂ ಕೇಳದೆ ''ವಿಷಪಾನ ಮಾಡುತ್ತೇನೆ'' ಎಂದು ಹಠಹಿಡಿದಾಗ ಸಹೋದರನ ಮೇಲಿನ ವಾತ್ಸಲ್ಯದಿಂದ ನೀನು ಇಷ್ಟು ಹಠಮಾಡಿದರೆ ಆಕೆಯನ್ನು ನಿನ್ನ ಬಳಿಗೆ ಮಧುತರುವ ಕಾರ್ಯ ನಿಮಿತ್ತದಿಂದ ಕಳುಹಿಸುತ್ತೇನೆ'' ಎಂದು ಹೇಳಿಕಳುಹಿಸಿದಳು. ಎರಡುದಿನ ಕಳೆದನಂತರ ''ಸೈರಂಧ್ರೀ! ನನಗೆ ಕುಡಿಯಲು ಮಧುಪಾನ ಬೇಕಾಗಿರುವುದರಿಂದ ನನ್ನ ತಮ್ಮನ ಬಳಿಹೋಗಿ ಕೇಳಿ ತೆಗೆದುಕೊಂಡುಬಾ'' ಎಂದಳು.

ಭಾರತೀದೇವಿಯವರಿಗೆ ವಾಯುದೇವರೇ ಪೂರ್ಣಾಶ್ರಯನೀಡಿ ಸದಾ ಸಂರಕ್ಷಣೆ ಮಾಡುತ್ತಿರುವಾಗ ಒಬ್ಬ ಸಾಮಾನ್ಯ ಸ್ತ್ರೀಲಂಪಟನ ಭಯ ಆಕೆಗುಂಟಾಗುತ್ತದೆಯೇ? ಆದರೂ ಅಸುರಜನರ ಮೋಹನಾರ್ಥವಾಗಿ ''ತಾಯೇ! ನನಗೆ, ಆತನ ಬಳಿಗೆ ಹೋಗಲು ಆಜ್ಞೆ ಮಾಡಬೇಡಿರಿ. ಅವನ ಬುದ್ಧಿ ಸ್ವಚ್ಛವಲ್ಲ'' ಎಂದಳು.

ಮಹಾರಾಣಿಗೆ ಸೈರಂಧ್ರಿಯ ಮಾತಿನಿಂದ ಸ್ವಲ್ಪಸಿಟ್ಟು ಬಂದಿತು. ''ನೀನು ನನಗೆ ದಾಸಿಯಾದಮೇಲೆ ನಾನು ಹೇಳಿದ ಕೆಲ್ಸ ಮಾಡಲೇಬೇಕು. ಹೋಗು ಬೇಗ ಪಾನೀಯವನ್ನು ತಂದುಕೊಡು'' ಎಂದಳು.

''ನಿಮ್ಮ ಮಾತಿನಂತೆ ಹೋಗುತ್ತೇನೆ. ಮುಂದೇನಾದರೂ ವಿಪತ್ತು ಸಂಭವಿಸಿದರೆ ಅದಕ್ಕೆ ನಾನು ಹೊಣೆಯಲ್ಲ. ಈ ಮಾತನ್ನು ನಿಮಗೆ ನಾನು ಮೊದಲೇ ತಿಳಿಸಿದ್ದೇನೆ'' ಎಂದು ಹೇಳಿ ಹೊರಟುಹೋದಳು. ಆವೇಳೆಗೆ ಕೀಚಕನು ದ್ರೌಪದಿಯ ಆಗಮನಕ್ಕಾಗಿಯೇ ಆತುರದಿಂದ ಕಾಯುತ್ತ ಅನೇಕ ಭೋಗವಸ್ತುಗಳನ್ನು ಸಿದ್ಧಪಡಿಸಿಟ್ಟುಕೊಂಡು ಮುಂದಿನಸುಖಕ್ಕಾಗಿ ಕನಸುಕಾಣುತ್ತಿದ್ದನು.

ದ್ರೌಪದಿಬಂದಳು. ತನ್ನ ಸುಖದರಾಶಿಯೇ ತನ್ನನರಸಿ ಬಂದಿತೆಂದು ಮಹದಾನಂದದಿಂದ ಎದ್ದುಹೋಗಿ ''ಬಾ ನನ್ನ ರಾಣೀ'' ಎಂದು ಆದರದಿಂದ ಕೈಹಿಡಿಯಲು ಹೋದಾಗ ಸೈರಂಧ್ರಿಯು ''ಥೂ ಪಾಪೀ! ಪರಸ್ತ್ರೀ ಎಂದರೆ ನಿನಗೆ ಅಷ್ಟು ಸುಲಭವೆಂದು ತಿಳಿದೆಯಾ? ದೂರ ಸರಿ'' ಎಂದು ತಳ್ಳಿ ಓಡಿದಳು.

ಕೀಚಕನು ಉನ್ಮತ್ತನಾಗಿ ನಿರ್ಲಜ್ಜೆಯಿಂದ ಅವಳ ಹಿಂದೆ ಓಡಿ ಎಳೆದಾಗ ಅವಳು ಕೈಕೊಡವಿಕೊಂಡು ರಾಜಸಭೆಯ ಸಮೀಪಕ್ಕೆ ಓಡುತ್ತ ''ಕೃಷ್ಣಾ! ಹರೇ! ಮುಕುಂದಾ! ದುಷ್ಟವಧೆಗೆ ಭೀಮನಿಗೆ ಪ್ರೇರಣೆ ಇತ್ತು ಕಾಪಾಡು ಸ್ವಾಮೀ!'' ಎಂದು ಪ್ರಾರ್ಥಿಸುತ್ತಿದ್ದಳು.

ವಾಯುಕುಮಾರನು ದಿವ್ಯದೃಷ್ಟಿಯಿಂದ ಪಾಪಿಯ ಪಾಪಚರ್ಯೆಯನ್ನು ತಿಳಿದನು. ಆಗ ಹೇತಿನಾಮಕನಾದ ಒಬ್ಬ ಘೋರ ರಾಕ್ಷಸನು ಅದೃಶ್ಯನಾಗಿಯೇ ಬಂದು ಕೀಚಕನನ್ನು ಬಲವಾಗಿ ಒದ್ದು ಬೀಳಿಸಿದನು. ಮೂಗುಬಾಯಿಗಳಲ್ಲಿ ರಕ್ತವನ್ನು ಸುರಿಸುತ್ತ ಕೀಚಕನು ಬಿದ್ದಿರಲು ಭೀಮನು ಒಂದು ದೊಡ್ಡ ಮರವನ್ನು ಕಿತ್ತುಕೊಂಡು ಅವನನ್ನು ಬಡಿದುಹಾಕಲು ಹೋಗುವಾಗ ಧರ್ಮರಾಯನು ಭೀಮನು ದುಷ್ಟವಧೆಯ ಆತುರದಿಂದ ಧಾವಿಸುತ್ತಿದ್ದಾನೆಂದು ತಿಳಿದು, ಅವನ ಬಳಿಗೆ ಬಂದು ಆತುರಬೇಡ ಅರೆನಿಮಿಷ ಯೋಚಿಸಿ ಕಾರ್ಯಸಾಧನೆ ಮಾಡು ಎಂದು ಸೂಚಿಸಿದನು. ಭೀಮಸೇನನು ಈ ಕೆಲಸ ಈಗಬೇಡ. ನಾಳೆ ಮಾಡಿ ಶ್ರೀಕೃಷ್ಣನಿಗೆ ದುಷ್ಟಸಂಹಾರದ ಸೇವೆ ಅರ್ಪಣ ಮಾಡುವೆನು'' ಎಂದುಕೊಂಡು ಸುಮ್ಮನೆ ಹೊರಟುಹೋದನು.

ದ್ರೌಪದಿ ರಾತ್ರಿ ಸಮಯದಲ್ಲಿ ಎಲ್ಲರೂ ನಿದ್ರಿಸಿದನಂತರ ಭೀಮನ ಬಳಿಗೆ ಬಂದು ''ನನಗೆ ಲೋಕಪ್ರಖ್ಯಾತ ಪತಿಗಳಿದ್ದಾರೆಂದು ಹೇಳಿದರೂ ಕೀಚಕನು ತಿರಸ್ಕಾರದಿಂದ ಅಲ್ಲಗಳೆದು ನನ್ನನ್ನು ಒಬ್ಬ ವಿಲಾಸಿನಿಯಂತೆ ನೋಡಿದ್ದಾನೆ. ಅವನ ಪಾಪ ತುಂಬಿದಮೇಲೆ ಬದುಕಿರಬಾರದು. ಆದಷ್ಟು ಜಾಗ್ರತೆ ಅವನ ಸಂಹಾರಕಾರ್ಯ ನೆರವೇರಿಸು'' ಎಂದಳು.

ಭೀಮನು ದ್ರೌಪದಿಯನ್ನು ಸಂತೋಷಪಡಿಸಿ ''ದೇವೀ! ನಾನು ದುಷ್ಟಸಂಹಾರಕ್ಕೆ ಮೊದಲು ನಿನ್ನನ್ನು ಪಾಪಿಗಳ ಹೃದಯ ಪಿಪಾಸೆಗೆ ಪ್ರಯೋಗಮಾಡಿ ನಂತರ ನನ್ನ ಬಾಹುವಿಕ್ರಮದ ಪ್ರಯೋಗ ನಡೆಸುತ್ತೇನೆ. ಈಗ ನಾನು ಅರೆಕ್ಷಣದಲ್ಲಿ ಅರೆದುಹಾಕುವುದು ದೊಡ್ಡಮಾತಲ್ಲ. ನಿನಗೆ ಸಂತೋಷಪಡಿಸಬೇಕಾದರೆ ನಿನ್ನ ಕಣ್ಣೆದುರಿಗೆ ಆ ಪಾಪಿಯನ್ನು ಕಾಡಿಸಿ ಪೀಡಿಸಿ ಯಾತನೆ ಅನುಭವಿಸಿ ಸಾಯುವಂತೆ ಮಾಡಬೇಕು. ಆದ್ದರಿಂದ ಈಗ ನೀನು ಅವನು ನಿನ್ನಬಳಿಗೆ ಬಂದಾಗ ಅವನನ್ನು ಕುರಿತು, ''ನಾನು ನಿನ್ನ ಇಷ್ಟದಂತೆ ನಡೆಯಲು ಏಕೆ ಒಪ್ಪುತ್ತಿಲ್ಲವೆಂದರೆ ನನ್ನ ಪತಿಗಳಾದ ಗಂಧರ್ವರು ಖೇಚರಮಾರ್ಗದಿಂದ ಸದಾ ಸಂಚಾರಿಗಳಾಗಿಯೇ ಇರುತ್ತಾರೆ. ಅವರು ಲೋಕಸಂಚಾರಮಾಡುವಾಗ ದಿವ್ಯದೃಷ್ಟಿಯಿಂದ ನಮ್ಮಿಬ್ಬರ ಸ್ನೇಹವನ್ನು ತಿಳಿದರೆ ಸುಟ್ಟು ಭಸ್ಮಮಾಡಿಬಿಡುತ್ತಾರೆ. ಆದ್ದರಿಂದ ರಾತ್ರಿಸಮಯದಲ್ಲಿ ನೃತ್ಯಾಗಾರದಲ್ಲಿ ನೀನು ಇರು. ನಾನು ಆ ವೇಳೆಯಲ್ಲಿ ಯಾರಿಗೂ ಅರಿವಾಗದಂತೆ ಬರುತ್ತೇನೆ'' ಎಂದು ಹೇಳು. ಮುಂದಿನ ಅವನ ಮರಣಸಮಾಗಮದ ಸುಖವನ್ನು ಪಾಪಿ ಅನುಭವಿಸುವುದನ್ನು ನೀನು ನೋಡಿ ಆನಂದಪಡು'' ಎಂದು ಹೇಳಿಕಳುಹಿಸಿದನು. ದ್ರೌಪದಿ ಸಂತೋಷದಿಂದ ತನ್ನ ಸ್ಥಳಕ್ಕೆ ಬಂದಳು. ಮಾರನೆಯದಿನ ಮತ್ತೆ ಕೀಚಕನು ಬಂದು ''ನೀನು ನನ್ನನ್ನು ಅಪಮಾನಗೊಳಿಸಿದರೂ ನನಗೆ ಕೋಪವಿಲ್ಲ. ನನ್ನ ಅಭಿಲಾಷೆ ಈಡೇರಿಸು'' ಎಂದು ಕೈಮುಗಿದು ಕೇಳಿದನು. ಆಗ ಸೈರಧ್ರಿಯು ''ನಿನಗೆ ನನ್ನಮೇಲೆ ಅಷ್ಟು ಆಸೆ ಇಟ್ಟಿರುವುದಾದರೆ ನಾನು ನನ್ನಪತಿಗಳ ಕಣ್ತಪ್ಪಿಸಿ ನಿನ್ನಬಳಿ ಬರಬೇಕು. ಅವರು ಗಂಧರ್ವಲೋಕದಿಂದ ಸದಾ

ಲೋಕಸಂಚಾರಮಾಡುತ್ತಲಿರುತ್ತಾರೆ. ನಮ್ಮಿಬ್ಬರ ಅಕೃತ್ಯ ಕಂಡರೆ ಆಗಲೇ ಸುಟ್ಟು ಭಸ್ಮಮಾಡಿ ಶಾಪವನ್ನು ಕೊಡುತ್ತಾರೆ. ಆದ್ದರಿಂದ ನಾನು ರಾತ್ರಿಸಮಯದಲ್ಲಿ ಯಾರಿಗೂ ಗೋಚರವಾಗದಂತೆ ನಾಟ್ಯಾಗಾರಕ್ಕೆ ಬರುತ್ತೇನೆ. ನೀನೂ ಅಲ್ಲಿಗೆ ಗೋಪ್ಯವಾಗಿ ಬಂದು ನಿನ್ನ ಆಸೆ ಈಡೇರಿಸಿಕೊ'' ಎಂದಳು.

ಸೈರಂಧ್ರಿಯಮಾತು ಕೀಚಕನಿಗೆ ಸಂತೋಷದ ಸಂಭ್ರಮವನ್ನು ಹೊತ್ತು ತಂದಂತಾಯಿತು. ಆನಂದದಿಂದ ಶಯ್ಯಾಗಾರವನ್ನು ಶೃಂಗರಿಸಿ ಅಲ್ಲಿ ಸಕಲ ಸುಖಭೋಗವಸ್ತುಗಳನ್ನು ಸಿದ್ಧಪಡಿಸಿದನು. ಭೀಮಸೇನನು ಕೀಚಕನ ಮರಣಸಿದ್ಧತೆಗಳೆಲ್ಲವನ್ನು ನೋಡಿ ದ್ರೌಪದಿಯನ್ನು ಕುರಿತು ''ದ್ರೌಪದೀ! ಈಗ ಕೀಚಕನು ಯಮಾಲಯವನ್ನು ಪ್ರವೇಶಮಾಡುವಂತೆ ಶಯ್ಯಾಗಾರವನ್ನು ಪ್ರವೇಶಮಾಡುತ್ತಾನೆ. ಮೃತ್ಯು ಅವನನ್ನು ಸ್ವಾಗತಮಾಡಿ ಸತ್ಕಾರಮಾಡಬೇಕಲ್ಲವೆ? ಆದ್ದರಿಂದ ಈಗ ನಾವಿಬ್ಬರೂ ಮೊದಲೇ ಅವನ ಸ್ವಾಗತಕ್ಕಾಗಿ ಹೋಗೋಣಬಾ'' ಎಂದು ಕರೆದುಕೊಂಡು ನಾಟ್ಯಾಗಾರದಲ್ಲಿ ಪ್ರವೇಶಮಾಡಿದನು. ಅಮೃತವನ್ನು ಅಪಹಾರಮಾಡಿದ ದೈತ್ಯರನ್ನು ಸಂಹಾರಮಾಡಲಿಕ್ಕಾಗಿ ಶ್ರೀಹರಿಯು ಮೋಹಿನಿ ರೂಪಧಾರಣೆ ಮಾಡಿದಂತೆ ಭೀಮಸೇನನೂ ಭಾರತೀದೇವಿಯರ ಹೃದಯಾಮೃತದ ಅಪಹಾರಕ್ಕಾಗಿ ಬರುವ ದೈತ್ಯನ ಸಂಹಾರಕ್ಕಾಗಿ ಸ್ತ್ರೀವೇಷ ಧರಿಸಿಕೊಂಡನು. ''ದ್ರೌಪದೀ ನಿನ್ನಮೇಲೆ ಕಣ್ಣುಹಾಕಿದವರು ಹೇಗೆ ಮತ್ತೆ ಕಣ್ಣುಹಾಕದಂತೆ ಮುಚ್ಚಿಬಿಡುವರೆಂಬುದನ್ನು ಈಗ ಪ್ರತ್ಯಕ್ಷವಾಗಿ ನೋಡಿ ಆನಂದಪಡು. ನಮ್ಮ ರಕ್ಷಕನಾದ ಶ್ರೀನಾರಾಯಣನು ನನ್ನಕೈಯ್ಯಿಂದ ದುಷ್ಟವಧೆ ಹೇಗೆ ಮಾಡಿಸುತ್ತಾನೆಂಬುದನ್ನು ನೀನು ನನ್ನ ಸಮೀಪದಲ್ಲೇ ಇದ್ದು ನೋಡುವುದಕ್ಕೆ ಕೀಚಕನು ನಿನಗೆ ಸುವರ್ಣಾವಕಾಶವನ್ನು ಕಲ್ಪಿಸಿಕೊಟ್ಟಿದ್ದಾನೆ. ಆ ಕಂಭದ ಹಿಂದೆ ನಿಂತು ನೋಡು'' ಎಂದು ಹಂಸತೂಲಿಕಾಲಲ್ಪದ ಮೇಲೆ ರತ್ನಾಭರಣಗಳಿಂದಲಂಕರಿಸಿಕೊಂಡು ಪೀತಾಂಬರಿಧಾರಿಯಾಗಿ ಮಲಗಿದನು.

ಕೆಲವೇ ನಿಮಿಷಗಳಲ್ಲಿ ಕೀಚಕನು ರಸನಿಮಿಷಗಳನ್ನು ಅನುಭವಿಸುವ ಆತುರದ ವೈಭವದಿಂದ ಬಂದು ಮಂಚದಮೇಲೆ ಮಲಗಿರುವ ಮಾರುತಿದೇವನನ್ನು ಮಾನಿನೀಮಣಿ ಎಂಬ ಮೋಹದಿಂದ ಅಪ್ಪುಗೆಯ ಸುಖಕ್ಕಾಗಿ ಸ್ವಚ್ಛಕಾಯನನ್ನು ತುಚ್ಛನುಡಿಗಳಿಂದ ಅಪ್ಪಿಕೊಂಡಾಗ ಕಾದ ಕಬ್ಬಿಣದ ಕಂಬವನ್ನು ಅಪ್ಪಿದಂತೆ ಆನಂದಕ್ಕೆ ಬದಲಾಗಿ ಸಂಕಟವಾಯಿತು. ದೇವತಾಸ್ತ್ರೀಯರನ್ನು ಬಯಸಿದ ದೈತ್ಯರಿಗೆ ದನುಜಾರಿ ಏನು ಶಿಕ್ಷೆ ಕೊಡುತ್ತಾನೆಂಬುದನ್ನು ಕಾಮಾಂಧನಿಗೆ ಕಣ್ಮುಂದೆ ಕಾಣಿಸುತ್ತಿದ್ದಾನೋ ಎನ್ನುವಂತೆ ಕೀಚಕನಿಗೆ ಕಠೋರವಾದ ಕತ್ತಿಯನ್ನು ಆಲಂಗಿಸಿಕೊಂಡಂತೆ ಆಯಿತು.

ಆಗ ಕೀಚಕನು ''ಇದು ಮೋಸಕೃತ್ಯ. ಈಗ ನಿನ್ನನ್ನು ಕಟ್ಟಿಹಾಕಿ ಆ ಸೈರಂಧ್ರಿಯನ್ನು ಎಳೆತಂದು ನಿನ್ನೆದುರಿಗೇ ರಮಿಸುವೆನು'' ಎಂದು ಹೇಳುತ್ತ ಮುಷ್ಟಿಯುದ್ಧಕ್ಕೆ ನಿಂತನು.

ಮದಾಂಧನೊಡನೆ ಭೀಮನು ಸ್ವಲ್ಪಹೊತ್ತು ಸೆಣಸಾಡಿ ವಜ್ರಮುಷ್ಟಿಯಿಂದ ಕುಟ್ಟಿ ಮಾಂಸದ ಮುದ್ದೆಯನ್ನಾಗಿ ಮಾಡಿದನು. ಎಲಬನ್ನು ಕಿತ್ತುಕೊಂಡು ಒಂದಕ್ಕೊಂದನ್ನು ಮಸೆದು ಅಗ್ನಿಯನ್ನು ಉತ್ಪತ್ತಿಮಾಡಿ ''ದ್ರೌಪದೀ! ಈ ನಿನ್ನ ಪಾತಿವ್ರತ್ಯದ ತೇಜಸ್ಸೇ ಈತನನ್ನು ನಿರ್ನಾಮಮಾಡಿತು. ನನ್ನಂತರ್ಗತನಾದ ಸ್ವಾಮಿಯು ನಿನ್ನನ್ನು ಕೆಣಕಿದ ಮಹಾಪಾಪಿಯನ್ನು ನನ್ನ ಮುಷ್ಟಿಯೊಳಗೆ ಸೇರಿ ಕೊಂದಿದ್ದಾನೆ. ಇನ್ನು ನಿರಾತಂಕದಿಂದ ಹೋಗು'' ಎಂದು ತಾನು ಸ್ನಾನಾಚಮನಗಳಿಂದ ಭಗವತ್ಸೇವಾರೂಪವಾದ ದುಷ್ಟವಧಾಕಾರ್ಯವನ್ನು ಮುಗಿಸಿ ಕೃಷ್ಣಾರ್ಪಣ ಬುದ್ಧಿಯಿಂದ ತನ್ನ ಸ್ಥಳಕ್ಕೆ ಹೋದನು.

## ಉಪಕೀಚಕರ ವಧೆ

ಕೀಚಕನಿಗೆ ಮಹಾಪರಾಕ್ರಮಿಗಳು ರುದ್ರದೇವರಿಂದ ಅವಧ್ಯ ವರವನ್ನು ಪಡೆದವರೂ ಆದ ಶತಸಹೋದರರಿದ್ದರು. ರಾತ್ರಿ ನಾಟ್ಯಾಗಾರದಲ್ಲಿ ಗುದ್ದಿನ ಶಬ್ಧ, ಅಪಸ್ವರದ ಅರಚಾಟವನ್ನು ಕೇಳಿದ. ಕಾವಲುಗಾರರು ಭಯದಿಂದ ಓಡಿಹೋದರು.

ಕೀಚಕನ ಸಹೋದರರಿಗೂ ಸುದ್ದಿಮುಟ್ಟಿತು. ಎಲ್ಲರೂ ಅಬ್ಬರಿಸುತ್ತ ಅರಮನೆಯಲ್ಲಿ ಮಹಾರಾಣಿಗೆ ಅಲಂಕಾರ ಸೇವೆ ಮಾಡುವ ಸೈರಂಧ್ರಿಯಿಂದಲೇ ಈ ಅನಾಹುತನಡೆದಿದೆ. ಅವಳು ತನ್ನ ಪತಿಗಳು ಗಂಧರ್ವಲೋಕದಲ್ಲಿದ್ದಾರೆ. ನನ್ನ ತಂಟೆಗೆ ಬಂದವರನ್ನು ಬಿಡುವುದಿಲ್ಲ ಎಂದು ಬೆದರಿಸುತ್ತಿದ್ದಳು. ಅವಳೇ ಈ ಕಾರ್ಯವನ್ನು ಮಾಡಿಸಿದ್ದಾಳೆ. ಕೀಚಕನ ಜೊತೆಯಲ್ಲಿ ಅವಳನ್ನು ಹಗ್ಗದಲ್ಲಿ ಬಿಗಿದು ಇಬ್ಬರ ಶವಸಂಸ್ಕಾರವನ್ನೂ ಜೊತೆಯಲ್ಲೇ ಮಾಡಿದರೆ ನಮ್ಮ ಸಹೋದರನಿಗೆ ಆತ್ಮಶಾಂತಿ ಸಿಗುತ್ತದೆ'' ಎಂದು ಮಾತನಾಡಿಕೊಂಡು ಎಲ್ಲರೂ ಒಟ್ಟಾಗಿ ದ್ರೌಪದಿಯನ್ನು ಮುತ್ತಿಕೊಂಡರು. ದ್ರೌಪದಿಯು ಎಲ್ಲರನ್ನು ಹತ್ತಿರ ಬರಲೀಸದೆ ಪಾಂಡವರು ಮೊದಲೇ ಗೊತ್ತು ಮಾಡಿಕೊಂಡಿದ್ದ ಸಂಕೇತನಾಮ ಜಯ-ಜಯಂತ-ಜಯತ್ಸೇನ-ಜಯದ್ಬಲ ಮೊದಲಾದ ಹೆಸರುಗಳಿಂದ ಕೂಗಿದಳು. ದ್ರೌಪದಿಯ ಆರ್ತನಾದ ಭೀಮನಿಗೆ ಕೇಳಿದ್ದೇ ತಡ ಓದಿ ಎದುರಿಗೆ ಆಕಾಶದೆತ್ತರಕ್ಕೆ ಬೆಳದಿದ್ದ ಒಂದು ಮರವನ್ನು ಪಟಪಟನೆ ಮುರಿದು ಕೈಲಿಹಿಡಿದು ದೈತ್ಯಸಮೂಹವೆಲ್ಲವನ್ನೂ ಬಡಿಬಡಿದು ಎಲ್ಲರನ್ನು ಅಂಧಂತಮಸ್ಸಿಗೆ ರವಾನಿಸಿದನು.

ದುಷ್ಟಧ್ವಂಸನ ಕಾರ್ಯವನ್ನು ಮುಗಿಸಿ ಸ್ನಾನಶುದ್ಧಾಚಮನಾದಿಗಳನ್ನು ಮುಗಿಸಿ ಯಾರಿಗೂ ಗೊತ್ತಾಗದಂತೆ ಇದ್ದುಬಿಟ್ಟನು.

ದ್ರೌಪದಿ ನಸುಬೆಳಕಿನಲ್ಲಿ ಮೆಲ್ಲಗೆ ಹೆಜ್ಜೆಹಾಕುತ್ತ ತನ್ನ ಸ್ಥಳಕ್ಕೆ ಬರುತ್ತಿದ್ದರೆ ಎಲ್ಲರೂ ಅವಳನ್ನೇ ನೋಡುತ್ತ ಭಯದಿಂದ ಹಿಂದೆ ಸರಿಯುತ್ತಿದ್ದರು. ಸುಧೇಷ್ಣಾದೇವಿಗೂ ಸೈರಂಧ್ರಿಯ ಸಮಾಚಾರ ತಿಳಿದಿತ್ತು. ಮುಖನೋಡಿ ಮಾತನಾಡಿಸದೆ ಕ್ರೋಧದೃಷ್ಟಿಯಿಂದಿರಲು ದ್ರೌಪದಿಯು ಅಂಜದೆ-ಅಳುಕದೆ ''ಅಮ್ಮಾ! ನನ್ನದೇನೂ ತಪ್ಪಿಲ್ಲ. ಮೊದಲೇ ನಾನು ಈ ಬಗ್ಗೆ ನಿಮ್ಮಲ್ಲಿ

ನಾನು ಖಡಾಖಂಡಿತವಾಗಿ ತಿಳಿಸಿದ್ದೆನು. ಅದೇ ರೀತಿ ಈಗ ನಡೆದಿದೆ. ನೀವು ಎಷ್ಟು ಹೇಳಿದರೂ ಕೇಳದೆ ನನ್ನನ್ನು ನಿಮ್ಮ ಸಹೋದರನ ಬಳಿಗೆ ಕಳುಹಿಸಿದಿರಿ. ಅವನ ದುಶ್ಕೃತ್ಯಕ್ಕೆ ನನ್ನಪತಿಗಳು ತಕ್ಕಶಾಸ್ತಿ ಮಾಡಿದ್ದಾರೆ. ಪರನಾರಿಯರು ಮಾತೆಗೆ ಸಮಾನರೆಂದು ತಿಳಿಯದೆ ಮನಬಂದಂತೆ ಮಾತನಾಡಿದ್ದಕ್ಕೆ ಮರಣಶಿಕ್ಷೆ ಆಯಿತು.

ಉಳಿದ ನಿನ್ನ ನೂರಾರುಮಂದಿ ಸಹೋದರರೂ ನನ್ನನ್ನು ಆ ಪಾಪಿಯ ಸಂಗಡ ಕಟ್ಟಿ ದಹನಕಾರ್ಯ ಮಾಡಹೊರಟಾಗ ಅವರಿಗೂ ಅವನಗತಿಯೇ ಸಿಕ್ಕಿತು. ಇದರಲ್ಲಿ ನನ್ನ ತಪ್ಪೇನಿದೆ? ರುದ್ರದೇವರಿಂದ ವರಪಡೆದು ಅಮರರಾಗಿದ್ದೇವೆಂದ ಮಾಡಬಾರದ ಅಕಾರ್ಯ ಮಾಡಿದರೆ ಮಹಾವಿಷ್ಣುವಿಗೆ ಪರಮಭಕ್ತನಾದ ಶಿವನು ವಿಷ್ಣುಭಕ್ತರ ಕೈಲಿ ಕೊಲ್ಲಿಸುತ್ತಾನೆ. ತನ್ನ ಮಾತುಸುಳ್ಳಾದರೂ ವಿಷ್ಣುನಿಂದಕರನ್ನು ಉಳಿಸಬಾರದೆಂದೇ ಶಿವನದೀಕ್ಷೆ'' ಎಂದು ದಿಟ್ಟತನದಿಂದ ಹೇಳಿದಾಗ ಮಹಾರಾಣಿಯ ಮೈ ನಡುಗಿತು. ''ಸೈರಂಧ್ರೀ! ಇಂದಿಗೇ ನಿನ್ನ ಸೇವೆ ನನಗೆ ಕೊನೆಯಾಗಲಿ. ದಯವಿಟ್ಟು ಮೊದಲು ಇಲ್ಲಿಂದ ಎಲ್ಲಾದರೂ ಹೊರಟುಹೋಗು. ನಿನ್ನ ಸೌಂದರ್ಯಸಂಪತ್ತಿಗೆ ಸೋಲದ ಪುರುಷರಾರು? ನಿನ್ನಿಂದ ನನ್ನ ಸೌಭಾಗ್ಯವೂ ಸರಿದುಹೋಗುವಂತೆ ಆದೀತು. ಮೊದಲು ನೀನು ಇಲ್ಲಿಂದ ಹೊರಟುಹೋಗು'' ಎಂದು ಹೇಳಿದಳು.

''ಮಹಾರಾಣೀ ಆಶ್ರಯ ಬೇಡಿಬಂದವರಿಗೆ ಆಶ್ರಯ ನೀಡಬೇಕಾದ್ದು ನಿನ್ನ ದರ್ಮ. ನಾನು ಹೆಚ್ಚುದಿನ ಇಲ್ಲಿ ಇರುವುದಿಲ್ಲ. ನನ್ನ ಶಾಪವಿಮೋಚನೆ ಆದಾಕ್ಷಣವೇ ಒಂದುಘಳಿಗೆಯೂ ಇರದೆ ಹೊರಟುಹೋಗುತ್ತೇನೆ'' ಎಂದು ಹೇಳಿದಾಗ ಸುಧಷ್ಣೆಗೆ ಅವಳನ್ನು ಹೆಚ್ಚು ಮಾತಾಡಿ ಮನನೋಯಿಸಿದರೆ ಮುಂದೇನು ವಿಪತ್ತು ಬರುತ್ತದೋ ಎಂಬ ಭಯದಿಂದ ಒಪ್ಪಿಗೆ ಇತ್ತಳು.

## ದುರ್ಯೋಧನನ ದುರಾಲೋಚನೆ

ಇತ್ತ ಹಸ್ತಿನಾವತಿಯಲ್ಲಿ ಕೌರವರಾಜನು ಗುಪ್ತಸಭೆ ಸೇರಿಸಿ ''ಪಾಂಡವರು ಹನ್ನೆರಡುವರ್ಷ ವನವಾಸ ಮುಗಿಸಿ ಈಗ ಅಜ್ಞಾತವಾಸದಲ್ಲಿದ್ದಾರೆ. ಒಂದುವರ್ಷದೊಳಗಾಗಿ ಅವನನ್ನು ನಾವು ನೋಡಿದರೆ ಮತ್ತೆ ಹನ್ನೆರಡುವರ್ಷ ವನವಾಸ ಮಾಡಬೇಕೆಂಬ ನಮ್ಮ ಪಣದಂತೆ ಈಗ ಅವರನ್ನು ಹುಡುಕಲು ಗೂಢಚಾರರನ್ನು ಕಳುಹಿಸಬೇಕೆಂದು ಯೋಚಿಸಿ ದಿಕ್ಕುದಿಕ್ಕಿಗೂ ಗೂಢಚಾರರನ್ನು ಕಳುಹಿಸಿದರು.

ಗೂಢಚಾರರು ಬಹಳ ಚಮತ್ಕಾರದಿಂದ ಮೂಲೆಮೂಲೆಗಳಲ್ಲಿ ಹುಡುಕಿದರೂ ಪಾಂಡವರು ಪತ್ತೆ ಆಗಲಿಲ್ಲ.

ಆಮೇಲೆ ವಿರಾಟನಗರದಲ್ಲಿ ಅವರಿಗೆ ಒಂದು ಹೊಸಸುದ್ದಿ ಸಿಕ್ಕಿತು. ಅರಮನೆಯಲ್ಲಿ ಒಬ್ಬ ಸೇವಕಿಯ ನಿಮಿತ್ತದಿಂದ ಕೀಚಕನು ಗಂಧರ್ವನಿಂದ ಸತ್ತನಂತೆ. ಅಷ್ಟೇಅಲ್ಲದೆ ಕೀಚಕನು ಅಪೇಕ್ಷೆಪಟ್ಟ ಆ ಹೆಂಗಸನ್ನು ಅವನೊಡನೆಯೇ ದಹನಮಾಡಬೇಕೆಂದು ಪ್ರಯತ್ನಿಸಿದ ಅವನ ಸಹೋದರರು ನೂರೈದುಮಂದಿಯನ್ನು ಗಂಧರ್ವನೇ ಮರದಿಂದ ಬಡಿದು ಕೊಂದಿದ್ದಾನಂತೆ. ಇದು ಬಹಳ ಆಶ್ಚರ್ಯಸಂಗತಿ. ರುದ್ರನಿಂದ ಅವಧ್ಯ ವರವನ್ನು ಪಡೆದ ಅಷ್ಟುಮಂದಿಯನ್ನು ಒಬ್ಬನು ಮರದಿಂದ ಬಡಿದು ಮೈಮುರಿದುಕೊಂದಿದ್ದಾನೆಂದರೆ ಯಾರೋ ಮಹಾಬಲಿಷ್ಠನೇ ಮಾಡಿದ್ದಾನೆ. ನಮಗೆ ಪಾಂಡವರು ಕಾಣದಿದ್ದರೂ, ಈ ಸುದ್ದಿ ಪುರಜನರಿಂದ ಕೇಳಿ ಅವರನ್ನು ಕಂಡಷ್ಟೆ ಹರ್ಷವಾಯಿತು'' ಎಂದು ಮಾತನಾಡಿಕೊಂಡು ರಾಜನಿಗೆ ಯಥಾರ್ಥ ಸಂಗತಿಗಳನ್ನು ಸ್ವಾರಸ್ಯವಾಗಿ ಹೇಳಿ ತಿಳಿಸಿದರು.

ಕೀಚಕನ ವಧೆ ಒಬ್ಬ ರೂಪವತಿಯಾದ ಸೇವಕ ಹೆಂಗಸಿನ ನಿಮಿತ್ತ ಆಯಿತೆಂದರೆ ಆ ಸ್ತ್ರೀ ಸಾಮಾನ್ಯಳಲ್ಲ. ಕೀಚಕನಿಗೆ ಸುಂದರಿಯರಿಗೆ ಏನುಕಡಿಮೆ? ಅವನೇ ಅಷ್ಟು ಮೋಹಿಸಿದನೆಂದರೆ ಅವಳು ದ್ರೌಪದಿಯೇ ಆಗಿರಬೇಕು. ಕೀಚಕನಂಥ ಪರಾಕ್ರಮಶೂರನನ್ನು ಕೊಲ್ಲುವುದಕ್ಕೆ ಸಾಮಾನ್ಯರಿಂದ ಸಾಧ್ಯವಿಲ್ಲ. ಲೋಕದಲ್ಲಿ ಭೀಮ ಬಲರಾಮ ಶಲ್ಯ ಕೀಚಕ ಈ ನಾಲ್ಕುಜನರೂ ಸಮಬಲಶಾಲಿಗಳೆಂದು ಪ್ರಖ್ಯಾತಗೊಂಡಿದ್ದಾರೆ. ಕೀಚಕನನ್ನು ಕೊಂದಿರುವುದು ಭೀಮನೆಂದೇ ಈಗ ಸ್ಪಷ್ಟವಾಗಿ ತಿಳಿಯುತ್ತದೆ. ಅವನ ಸಹೋದರರನ್ನೂ ಒಬ್ಬನೇ ಮರವನ್ನು ಮುರಿದುಕೊಂಡು ಹೊಡೆದು ಕೊಂದಿರುವುದು ಭೀಮನಿಂದೇ ನಡೆದಿದೆ ಎಂದು ಸಂದೇಹವಿಲ್ಲದೆ ಹೇಳಬಹುದು'' ಎಂದು ಭೀಷ್ಮ ದ್ರೋಣಾದಿಗಳೊಡನೆ ಯೋಚನೆಮಾಡಿ ಪಾಂಡವರು ವಿರಾಟರಾಜನರಮನೆಯಲ್ಲೇ ಇದ್ದಾರೆಂದು ದೃಢಪಡಿಸಿಕೊಂಡರು. ಕುಹಕಿಗಳು ಒಂದು ಕುತಂತ್ರ ಹೂಡಿದರು. ನಾವೀಗ ಪಾಂಡವರನ್ನು ನೋಡಬೇಕಾದರೆ ವಿರಾಟನ ಹಸುಗಳನ್ನು ಕೈಸೆರೆಹಿಡಿದು ಸಾಗಿಸಬೇಕು. ಆಗ ಪಾಂಡವರು ಹಸುಕರುಗಳಿಗೆ ಹಾಲುಣಿಸಿದೆ. ತಾವು ಭೋಜನಸ್ವೀಕಾರ ಮಾಡುವುದಿಲ್ಲವಾದ್ದರಿಂದ ಹಸುಗಳನ್ನು ಬಿಡಿಸಿಕೊಳ್ಳಲಿಕ್ಕೆ ಬಂದೇ ಬರುತ್ತಾರೆ. ಆದ್ದರಿಂದ ಭೀಷ್ಮ-ದ್ರೋಣಾದಿವೀರರು ಉತ್ತರದಿಕ್ಕಿಗೆ ಹೋಗಿ ವಿರಾಟನ ಗೋಸಂಪತ್ತನ್ನು ಸೆರೆಹಿಡಿದು ನಮ್ಮರಾಜ್ಯಕ್ಕೆ ಸಾಗಿಸಲಿ'' ಎಂದು ಅವರಿಗೆ ರಣವೀಳ್ಯೆಯನ್ನು ಕೊಟ್ಟನು.

ನಂತರ ಕೀಚಕನ ಕಡುವೈರಿಯಾಗಿದ್ದ ಸುಶರ್ಮನೆಂಬುವನನ್ನು ಕರೆಸಿಕೊಂಡು ನಿನ್ನ ರಾಜ್ಯಕೋಶವೆಲ್ಲವನ್ನು ಕಸಿದುಕೊಂಡಿರುವ ಕೀಚಕನು ಈಗ ಸತ್ತಿದ್ದಾನೆ. ನೀನೀಗ ಸೇಡನ್ನು ತೀರಿಸಿಕೊಳ್ಳಲು ತಕ್ಕಸಮಯ ಒದಗಿದೆ. ನೀನೀಗ ಆ ರಾಜ್ಯಕ್ಕೆ ದಂಡೆತ್ತಿಹೋಗಿ ದಕ್ಷಿಣದಿಕ್ಕಿನಲ್ಲಿರುವ ವಿರಾಟರಾಜನ ಗೋಹಿಂಡುಗಳನ್ನು ಸೆರೆಹಿಡಿದು ಸಾಗಿಸು'' ಎಂದು ಹೇಳಿ ಅವನನ್ನು ಕಳುಹಿಸಿದನು.

ಹೀಗೆ ವ್ಯವಸ್ಥೆಮಾಡಿದ ದುರ್ಯೋಧನನು ಉತ್ತರದಿಕ್ಕಿನ ಕಡೆಗೂ ದಕ್ಷಿಣದಿಕ್ಕಿನ ಕಡೆಗೂ ವಿರಾಟರಾಜನ ಗೋವುಗಳನ್ನು ಅಪಹರಿಸಿ ತರುವುದಕ್ಕಾಗಿ ಸೈನಿಕರನ್ನು ಹುರಿದುಂಬಿಸಿ ಹೊರಡಿಸಿದನು. ಆಗ ದುರ್ಯೋಧನನ ಕಡೆಯಿಂದ ಹೊರಟ ಗೋಹಿಡುಕರಲ್ಲಿ ಕೆಲವರು ಸುಶರ್ಮನ ಸೈನ್ಯ ಸಮೂಹದೊಡನೆ ಹೊರಟರು.

## ದಕ್ಷಿಣ ದಿಕ್ಕಿನ ಗೋಹಿಡುಕರು

ದುರ್ಯೋಧನನಿಂದ ಕಳುಹಿಸಲ್ಪಟ್ಟ ಗೋವಿನ ಚೋರರು ವಿರಾಟನಗರದ ಹೊರ ಅಂಚಿನ ಹುಲ್ಲುಗಾವಲಿನಲ್ಲಿ ಮನಸಾರೆ ಮೇಯುತ್ತಿದ್ದ ಗೋವುಗಳನ್ನು ನಾನಾವಿಧವಾಗಿ ಹಿಂಸಿಸುತ್ತ ಅವನ್ನು ಬಲಾತ್ಕಾರವಾಗಿ ಅವುಗಳ ಕೋಡುಗಳನ್ನು ಹಿಡಿದು ಎಳೆದು ಪೀಡಿಸುತ್ತ ಕೈಸೆರೆಹಿಡಿದು ಎಳೆದುಕೊಂಡು ಹೋಗುತ್ತಿದ್ದರು. ಗೋಪಾಲಕರು ತಡೆಯಲು ಬಂದಾಗ ಅವರೆಲ್ಲರನ್ನು ಕೊಂದು ಲಗ್ಗೆ ಎಬ್ಬಿಸಿ ಎಳೆದೊಯ್ಯುತ್ತಿದ್ದರು. ಆಗ ಕೆಲವುಮಂದಿ ಗೊಲ್ಲರು ಅವರಿಂದ ತಪ್ಪಿಸಿಕೊಂಡು ಓಡಿಹೋಗಿ ರಾಜನಿಗೆ ''ಮಹಾಪ್ರಭೂ! ನಮ್ಮ ಹಸುಗಳೆಲ್ಲವನ್ನೂ ಯಾರೋ ಪರರಾಜ್ಯದ ಸೈನಿಕರು ಬಂದು ಎಳೆದುಕೊಂಡು ಹೋಗುತ್ತಿದ್ದಾರೆ. ಬಹಳ ಜನರನ್ನು ಕೊಂದಿದ್ದಾರೆ'' ಎಂದು ತಿಳಿಸಿದನು.

ವಿರಾಟರಾಜನು ಶತ್ರುರಾಜರ ಮುತ್ತಿಗೆಯನ್ನು ಕೇಳಿ ಹೆದರಿದನು. ಪ್ರಧಾನಿಗಳನ್ನು ಕುರಿತು ''ಇದುವರೆವಿಗೂ ನಮ್ಮರಾಜ್ಯಕ್ಕೆ ಕೀಚಕನ ಬಲಬಾಹುಗಳು ನಮ್ಮರಾಜ್ಯಕ್ಕೆ ಉಕ್ಕಿನ ಪಂಜರದಂತೆ ಕಾವಲಿತ್ತು. ಒಬ್ಬ ಶತ್ರುಗಳೂ ನಮ್ಮರಾಜ್ಯಕ್ಕೆ ಬರುತ್ತಿರಲಿಲ್ಲ. ಸುರಕ್ಷಿತವಾಗಿದ್ದವು. ಈಗ ಕೀಚಕನು ಸತ್ತಿದ್ದಾನೆಂದು ತಿಳಿದ ಶತ್ರುಗಳು ಒಮ್ಮೆಲೇ ನುಗ್ಗಿಬಂದು ಪೀಡಿಸಹತ್ತಿದ್ದಾರೆ. ಮುಂದೆ ನಮಗೆ ಬೆಂಬಲವಿತ್ತು ರಕ್ಷಿಸುವ ವೀರರಾರಿದ್ದಾರೆ? ನಮಗೆ ರಕ್ಷಕರಿಲ್ಲದೆ ಅನಾಥರಾದೆವು'' ಎಂದು ದುಃಖಪಡುವಾಗ ಕಂಕವೇಷದಲ್ಲಿದ್ದ ಧರ್ಮರಾಯನು ''ರಾಜಾ! ಕಷ್ಟ ಬಂದಿತೆಂದು ಧೈರ್ಯ ಗುಂದುವುದು ಕ್ಷತ್ರಿಯರಾಜರಿಗೆ ಅವಲಕ್ಷಣ. ನಿನ್ನಬಳಿ ಅಡಿಗೆಯವನಾಗಿರುವಬಲ್ಲವನೆಂಬುವನು ಬಹಳ ಬಲಶಾಲಿ ಎಂಬುದನ್ನು ನೀನೂ ಅವನು ಎಷ್ಟೋಮಂದಿ ಜಟ್ಟಿಗಳನ್ನು ಸೋಲಿಸಿರುವುದನ್ನು ನೋಡಿ ಚೆನ್ನಾಗಿ ತಿಳಿದಿರುವಿ. ಅವನನ್ನು ಗೋರಕ್ಷಣೆಗೆ ಕರೆದುಕೊಂಡು ಹೋದರೆ ಶತ್ರುತಂಡವನ್ನು ತುಂಡುಮಾಡಿ ಗೋಹಿಂಡುಗಳನ್ನು ಅವರಿಂದ ಕಸಿದು ಕಾಡಿಸುತ್ತಾನೆ. ಹೆದರಬೇಡ. ಹೊರಡು ನಾನೂ ಬರುತ್ತೇನೆ'' ಎಂದುಹೇಳಿ ಸೈನ್ಯಸಮೇತರಾಗಿ ಹೊರಟರು.

ಎರಡು ತಂಡದವರಿಗೂ ಘೋರವಾದ ಹೋರಾಟ ನಡೆಯಿತು. ಭೀಮನು ಶತ್ರುಗಳು ಸಾಗಿಸುತ್ತಿದ್ದ ಗೋಮಂದೆಯನ್ನು ಈ ವಿರಾಟನ ರಾಜ್ಯದಕಡೆಗೆ ಸುಗಮವಾಗಿ ಸಾಗಿಸಿಕೊಂಡು ಬರುತ್ತಿದ್ದರು. ಆವೇಳೆಗೆ ಸುಶರ್ಮನು ವಿರಾಟರಾಜನನ್ನು ಕೈಸೆರೆ ಹಿಡಿದನು. ಧರ್ಮರಾಜನು

ನೋಡಿ ''ಭೀಮಾ! ನಮ್ಮ ಆಶ್ರಯದಾತನಾದ ರಾಜನನ್ನು ಬಿಡಿಸಿಕೊ'' ಎಂದನು. ಭೀಮನು ಓಡಿಬಂದು ಸುಶರ್ಮನನ್ನು ಚೆನ್ನಾಗಿ ಹೊಡೆದು ಮೂರ್ಛೆಗೆಡಹಿ ಧರ್ಮರಾಜನನ್ನು ಬಿಡಿಸಿದನು. ಆಮೇಲೆ ಸುಶರ್ಮನನ್ನು ವಿರಾಟರಾಜನ ಕಾಲುಗಳ ಮೇಲೆ ಹೋಗಿ ಬೀಳುವಂತೆ ಎಸೆದಾಗ ಅವನು ಚೆಂಡಿನಂತೆ ಹಾರಿಹೋಗಿ ಅವನ ಕಾಲುಗಳಮೇಲೆ ಬಿದ್ದನು. ಭೀಮನು ಧರ್ಮರಾಜನ ಮಾತಿನಂತೆ ಸುಶರ್ಮನನ್ನು ಕೊಲ್ಲದೆ ಬಿಟ್ಟುಬಿಟ್ಟನು. ದಕ್ಷಿಣದಿಕ್ಕಿನಲ್ಲಿ ವಿರಾಟರಾಜನು ಯುದ್ಧಕ್ಕೆ ಹೋದನೆಂದುತಿಳಿದನಂತರ ಉತ್ತರದಿಕ್ಕಿಗೆ ಭೀಷ್ಮಾದಿಗಳು ಗೋವುಗಳನ್ನು ಹಿಡಿಯಲು ಹೋದರೆ ಈಗ ಪಾಂಡವರೇ ಯುದ್ಧಕ್ಕೆ ಬರುತ್ತಾರೆಂಬ ದುರ್ಯೋಧನನ ಕುತಂತ್ರದೊಡನೆ ಭೀಷ್ಮದ್ರೋಣಾದಿಗಳೂ ಸೇನಾನಿಕರಪೊಂದಿಗೆ ವಿರಾಟರಾಜ್ಯಕ್ಕೆ ಹೊರಟರು.

## ಉತ್ತರದಿಕ್ಕಿನಲ್ಲಿ ಗೋಹಿಂಸಕರ ಲಗ್ಗೆ

ಭೀಷ್ಮದ್ರೋಣಾದಿಗಳಿಗೆ ನಿರಪರಾಧಿಗಳಾದ ಗೋದೇವತೆಗಳಿಗೆ ಹಿಂಸೆಕೊಡುವುದು ಸ್ವಲ್ಪವೂ ಇಷ್ಟವಿರಲಿಲ್ಲ. ದುರ್ಯೋಧನನು ಅವರನ್ನು ಶರಣುಹೋಗಿ ವಾಗ್ದಾನ ಪಡೆದಿದ್ದನು. ಅವನಮಾತಿನ ಬಲೆಯೊಳಗೆ ಸಿಕ್ಕಿದ್ದು ಒಂದು ಕಾರಣ, ಅವನ ಪಾಪದನ್ನ ಭುಂಜಿಸಿದ ಪಾಪದ ಕಾರಣ, ಕಲಿಯ ಆವೇಶದ ಕಾರಣತ್ರಯಗಳಿಂದಲೂ ಭೀಷ್ಮ, ದ್ರೋಣರೂ ಅಶ್ವತ್ಥಾಮ ಕರ್ಣಾದಿಗಳೊಡಗೂಡಿ ವಿರಾಟರಾಜ್ಯದ ಉತ್ತರದಿಕ್ಕಿನ ಗೋವುಗಳನ್ನು ಸೆರೆಹಿಡಿದು ಪಾಂಡವರ ಅಜ್ಞಾತವಾಸವನ್ನು ಕೆಡಸಲಿಕ್ಕಾಗಿ ಗೋಮಂದೆಯೊಳಗೆ ನುಗ್ಗಿ ಲಗ್ಗೆ ಎಬ್ಬಿಸಿದರು. ತಡೆಯಲು ಬಂದವರನ್ನು ಬಡಿದೋಡಿಸುತ್ತ ಸಕಲಗೋವುಗಳನ್ನೂ ನಾನಾಪರಿಯಾಗಿ ಹಿಂಸೆಮಾಡುತ್ತ ಸೆರೆಹಿಡಿದು ಸಾಗಿಸುತ್ತಿದ್ದರು. ಗೋಪಾಲಕರು ಭಯದಿಂದ ರೋಧನಮಾಡುತ್ತ ''ಅಯ್ಯೋ ನಮ್ಮರಾಜನೂ ಇಲ್ಲ ಯುದ್ಧಕ್ಕೆ ಹೊರಟುಹೋಗಿದ್ದಾನೆ. ನಮ್ಮ ಗೋಸಂಪತ್ತನ್ನು ಶತೃಗಳು ಅಪಹರಿಸಿ ಒಯ್ಯುತ್ತಿದ್ದಾರೆ. ಮುಂದೇನು ಗತಿ? ಎಂದು ಅಳುತ್ತಬಂದು ಮಂತ್ರಿಗಳಿಗೆ ತಿಳಿಸಿದಾಗ ಅವರು ರಾಜಕುಮಾರನಿಗೆ ಹೇಳಿದರು.

ಉತ್ತರಕುಮಾರನು ಅಂತಃಪುರದಲ್ಲಿ ನಿರಾತಂಕದಿಂದ ಸುಖಲೋಲನಾಗಿರುವಾಗ ಯುದ್ಧದ ಕಾಳಜಿ ಬೇಡವೆನಿಸಿತು. ನನಗೆ ಸರಿಯಾದ ಸಾರಥಿ ಇದ್ದಿದ್ದರೆ ಪ್ರಚಂಡತನದಿಂದ ಶತೃತಂಡವನ್ನು ತುಂಡರಿಸಿ ಬರುತ್ತಿದ್ದೆನು ಎಂಬ ಜಾರಿಕೆಯ ಮಾತಿನಿಂದ ಕಾಂತಾ ಕದಂಬದಲ್ಲಿ ಕಳವಳದ ಮಾತನ್ನು ಆಡುತ್ತಿದ್ದಾಗ ಅಲ್ಲೇ ಇದ್ದ ಸೈರಂಧ್ರಿ ''ಯುವರಾಜರೇ! ಸಾರಥಿಗಾಗಿ ನೀವು ಯೋಚಿಸುವುದಾದರೆ ಬೃಹನ್ನಳೆಯು ಸಾರಥಿತನದಲ್ಲಿ ಬಹಳ ಪ್ರಸಿದ್ಧಳು. ನೀವು ಬೃಹನ್ನಳೆಯನ್ನು ಸಾರಥಿಮಾಡಿಕೊಂಡು ಯುದ್ಧಕ್ಕೆ ಹೊರಟರೆ ಜಯಶೀಲರಾಗಿ ಬರುವುದರಲ್ಲಿ ಸಂದೇಹವಿಲ್ಲ'' ಎಂದಳು.

ಉತ್ತರನು ನಗುತ್ತ ಆ ಶಂಡನನ್ನು ಸಾರಥಿಮಾಡಿಕೊಳ್ಳಲು ನೀನು ಹೇಳಿದಂತೆ ನಾನು ಹೊರಟರೆ ಶಂಡನನ್ನು ಸಾರಥಿಯನ್ನಾಗಿ ಮಾಡಿಕೊಂಡ ವೀರನೂ ಅವನ ಪ್ರತಿರೂಪನೇ ಎಂದು ಅಪಹಾಸ್ಯದಿಂದ ನನ್ನನ್ನು ತಿರಸ್ಕಾರಮಾಡುವಂತೆ ಆಗಬಾರದು'' ಎಂದು ಒಪ್ಪದಿರಲು ''ಬೃಹನ್ನಳೆ ಸಾಮಾನ್ಯವ್ಯಕ್ತಿಯಲ್ಲ. ಖಾಂಡವದಹನ ಕಾಲದಲ್ಲಿ ಅರ್ಜುನನಿಗೆ ಸಾರಥಿಯಾಗಿ ಅವನ ಮೆಚ್ಚುಗೆಗೆ ಪಾತ್ರವಾಗಿರುವುದರಿಂದಲೇ ನಿನಗೆ ಧೈರ್ಯವಾಗಿ ಹೇಳುತ್ತಿದ್ದೇನೆ'' ಎಂದು ಬಲವಂತನಾಗಿ ಒಪ್ಪಿಸಿದಳು.

ಉತ್ತರೆಯು ತನ್ನ ಗುರುಗಳಾದ ಬೃಹನ್ನಳೆಯ ಬಳಿಗೆಬಂದು ''ನೀವು ಸಾರಥಿತನದಲ್ಲಿ ಬಹಳ ನಿಪುಣರೆಂದೂ ವೀರಪಾರ್ಥನ ಬಳಿ ಸಾರಥಿಯಾಗಿದ್ದಿರೆಂದೂ ತಿಳಿದು ನನಗೆ ಬಹಳ ಸಂತೋಷವಾಯಿತು. ನನ್ನ ಅಣ್ಣನಾದ ಉತ್ತರನಿಗೆ ಈಗ ನೀವು ಸಾರಥಿಯಾಗಿ ನಮಗೆ ಈಗ ಒದಗಿರುವ ಶತೃಪೀಡೆಯನ್ನು ಪರಿಹರಿಸಬೇಕಾಗಿ ಪ್ರಾರ್ಥಿಸುತ್ತೇನೆ'' ಎಂದು ಕೇಳಿದಳು.

ಆಗ ಉತ್ತರನು ಬೃಹನ್ನಳೆಗೆ ಕವಚವೇ ಮೊದಲಾದ ಯುದ್ಧಕ್ಕೆ ಅವಶ್ಯವಾದ ವೇಶಭೂಷಣಗಳನ್ನು ತರಿಸಿಕೊಡಲು ಬೃಹನ್ನಳೆ ಕವಚವನ್ನು ಹಿಂದುಮುಂದಾಗಿ ಹಾಕಿಕೊಳ್ಳಲು ತೊಡಗಿದಾಗ ಉತ್ತರನು ನಗುತ್ತಬಂದು ತಾನೇ ತೊಡಿಸಿದನು. ಏಕೆಂದರೆ ಅರ್ಜುನನು ಯುದ್ಧಕ್ಕೆ ಹೊರಡುವಾಗ ಕವಚವನ್ನು ತಾವೇ ತೊಟ್ಟು ಹೋಗಬಾರದೆಂಬ ಅರ್ಥದಿಂದ ಹಾಗೆಮಾಡಿದನು.

ಅರ್ಜುನನು ರಥಾಶ್ವವನ್ನು ತಾನೇ ಆರಿಸಿತಂದು ಸಿದ್ಧನಾಗಿ ಹೊರಟಾಗ ಆಗ ಉತ್ತರಕುಮಾರನಿಗೆ ನಾರಿಯರೆಲ್ಲರೂ ಆರತಿ ಎತ್ತಿ ಶುಭವನ್ನು ಕೋರಿ ಉತ್ಸಾಹದ ಮಾತುಗಳಿಂದ ಕಳುಹಿಸಿದರು. ಉತ್ತರಾದೇವಿಯು ತನ್ನ ಸಹೋದರರಿಗೆ ರಣೋತ್ಸಾಹತುಂಬಲಿಕ್ಕಾಗಿ ''ಅಣ್ಣಾ! ನೀನು ರಣರಂಗದಲ್ಲಿ ಶತೃತಂಡವನ್ನು ಕೊಂದು ಅವರು ಧರಿಸಿಕೊಂಡಿದ್ದ ರತ್ನಾಭರಣಗಳನ್ನು ನನಗೆ ತಂದುಕೊಡು. ನಾನು ನನ್ನ ಬೊಂಬೆಗಳಿಗೆ ಅಲಂಕಾರ ಮಾಡುತ್ತೇನೆ'' ಎಂದು ಹೇಳಿ ಉತ್ಸಾಹದಿಂದ ಕಳುಹಿಸಿಕೊಟ್ಟಳು.

ಉತ್ತರ ಕುಮಾರನು ಬೃಹನ್ನಳೆಯ ಸಾರಥ್ಯಕ್ಕೆ ಆಶ್ಚರ್ಯಪಟ್ಟನು. ಬೃಹನ್ನಳೆಯ ಕೈಚಳಕವನ್ನು ನೋಡಿದರೆ ಈತನು ವೀರಪಾರ್ಥನೇ ಆಗಿರಬಹುದಾ? ಎಂಬ ಸಂದೇಹ ಬರುತ್ತಿದೆ ಎಂದು ಭಾವಿಸಿದನು. ಅವನ ಮುಖದಲ್ಲಿ ಉಕ್ಕಿಬರುತ್ತಿದ್ದ ವೀರವರ್ಚಸ್ಸು ಶತೃತಂಡವನ್ನು ಪ್ರಚಂಡತನದಿಂದ ಖಂಡಿಸಬೇಕೆಂಬ ಸಮರ ಸಂತೋಷಗಳನ್ನು ನೋಡಿ ಬೆರಗಾದನು.

ಕುರುಸೇನೆ ಸಮೀಪಕ್ಕೆ ಬಂದಾಗ ಕುರುವೀರರ ರಣಕಹಳೆಗಳ ಘೋಷಣೆ ಅವರ

ರಣದಬ್ಬರದ ಸಿಂಹನಾದಗಳು ಸಿಡಿಲುಬಡಿದಂತೆ ಬಂದು ಅಪ್ಪಳಿಸುತ್ತಿದ್ದವು. ಸೇನಾಸಮುದ್ರ ಅಲೆಗಳಂತೆ ಮೇಲೆಮೇಲೆ ಒತ್ತರಿಸಿ ಬರುತ್ತಿದ್ದರೆ ಆದಿ ಅಂತ್ಯವೇ ಕಾಣದಂತೆ ಭೂಮಂಡಲದಗಲಕ್ಕೂ ಕಾಣುತ್ತಿತ್ತು. ಪರ್ವತಾಕಾರದ ಆನೆಗಳು ಕೋಡುಗಲ್ಲಿನಂತೆ ಅಸಂಖ್ಯವಾಗಿ ಕಾಣುತ್ತಿದ್ದವು. ಆ ರಣರಂಗದ ಭೀಕರ ದೃಶ್ಯವನ್ನು ಉತ್ತರನು ನೋಡಿದನು.

ಬೃಹನ್ನಳೆಯ ಸೆರಗನ್ನು ಹಿಡಿದುಕೊಂಡು ''ಅಬ್ಬಾ! ನಾನು ಎಷ್ಟೋ ರಣರಂಗವನ್ನು ನೋಡಿದ್ದೇನೆ. ಆದರೆ ಇಂಥ ರಣಚಂಡಿಗಳೋಪಾದಿಯ ಸೈನಿಕರು ಇಂಥ ರಣರಭಸವನ್ನು ನಾನು ಕೇಳಿಯೂ ಇಲ್ಲ. ಇವರ ಸಮರದ ಸಿದ್ಧತೆಗಳನ್ನು ನೋಡಿಯೇ ನನಗೆ ಮೈನಡುಕಬಂದಿದೆ. ಇವರ ರಣನಾದದಿಂದಲೇ ನನ್ನ ಹೃದಯ ಒಡೆಯುವಂತಾಗಿದೆ. ಇನ್ನು ಇವರ ಶಸ್ತ್ರಾಸ್ತ್ರಗಳ ಇರಿತವನ್ನು ನಾನು ಖಂಡಿತವಾಗಿಯೂ ಸಹಿಸಲಾರೆ. ''ಬೃಹನ್ನಳೆ ಇವರನ್ನು ನಾವು ಇದಿರಿಸುವ ಸಾಹಸಕ್ಕೆ ನಿಲ್ಲುವುದು ಬೇಡ. ಈ ವೀರರು ನಮ್ಮ ಹಸುಗಳನ್ನು ಮಾತ್ರ ಅಪಹರಿಸಲು ಬಂದವರಲ್ಲ. ನಮ್ಮ ರಾಜ್ಯದ ಉಸಿರನ್ನೇ ಅಪಹರಿಸಲು ಬಂದ ಯಮಕಿಂಕರರಾಗಿ ಬಂದಿದ್ದಾರೆ. ಅವರು ಏನುಬೇಕಾದರೂ ಕೊಂಡುಹೋಗಲಿ. ನಮ್ಮ ಪ್ರಾಣ ಒಂದನ್ನು ಬಿಟ್ಟುಹೋದರೆ ಸಾಕು. ಬಾ ಮುಂದೆ ಹೋಗುವ ಸಾಹಸ ತೋರಿಸದೆ ಹಿಂದೆ ಸರಿಯುವ ಉಪಕಾರಮಾಡಿ ನನ್ನನ್ನು ಉಳಿಸಿ ನೀನೂ ಉಳಿದುಕೋ. ನಮ್ಮ ರಾಜ್ಯವೂ ಆಗ ಉಳಿಯುತ್ತದೆ'' ಎಂದು ಕೈಮುಗಿದು ದೀನನಾಗಿ ಪ್ರಾರ್ಥಿಸಿಕೊಳ್ಳುತ್ತಿದ್ದನು. ಬೃಹನ್ನಳೆ ರಥದ ವೇಗವನ್ನು ಅಧಿಕಮಾಡಿ ಓಡಿಸುವಾಗ ಉತ್ತರನು ಕೆಳಗೆ ಧುಮುಕಿ ಓಡತೊಡಗಿದನು.

ಆಗ ಬೃಹನ್ನಳೆ ತಾನೂ ರಥದಿಂದ ಧುಮುಕಿ ಉತ್ತರವನ್ನು ತನ್ನ ನೀಳಬಾಹುಗಳಿಂದ ಎತ್ತಿ ಅನಾಮತ್ತಾಗಿ ರಥದಲ್ಲಿ ಹಾಕಿಕೊಂಡು ಹೊರಟನು.

ಇಂಥ ಸೊಗಸಾದ ದೃಶ್ಯವನ್ನು ಭೀಷ್ಮ-ದ್ರೋಣರು ನೋಡಿದರು. ಓಡುತ್ತಿರುವನು ಉತ್ತರಕುಮಾರ. ವಿರಾಟನು ದುರ್ಯೋಧನನ ಕುತ್ಸಿತದಂತೆ ದಕ್ಷಿಣದಿಕ್ಕಿನ ಗೋರಕ್ಷಣೆಗಾಗಿ ಹೋಗಿರುವುದರಿಂದ ಅವನ ಮಗ ಬಂದಿದ್ದಾನೆ. ಸಾರಥಿ ಅರ್ಜುನನೇ ನಿಜ ಅವನ ಲಕ್ಷಣಗಳಿಂದ ಸಂದೇಹವಿಲ್ಲದೆ ನಂಬಬಹುದು. ಅಜ್ಞಾತವಾಸದಲ್ಲಿರುವುದರಿಂದ ವೇಷ ಬದಲಾವಣೆ ಮಾಡಿಕೊಂಡಿದ್ದಾನೆ'' ಎಂದು ಅರಿತು ಮಾತನಾಡಿಕೊಂಡರು. ಅರ್ಜುನನು ಉತ್ತರನನ್ನು ರಥದಲ್ಲಿ ಬಿಗಿದು ಓಡಿಸುತ್ತಿದ್ದರೆ, ''ಬೃಹನ್ನಳೇ! ಏತಕ್ಕಾಗಿ ಹೀಗೆ ನನ್ನನ್ನು ಕೊಲ್ಲುವ ಯೋಚನೆ ಮಾಡುತ್ತಿರುವಿ? ನಾನು ಎಷ್ಟು ನಿನ್ನನ್ನು ಕೈಮುಗಿದು ಕೇಳಿಕೊಂಡರೂ ಹೀಗೆ ನನ್ನನ್ನು ಶತೃಗಳಿಗೆ ಬಲಿಕೊಡುವಂತೆ ಏಕೆ ಎಳೆದೊಯ್ಯುತ್ತಿರುವಿ? ನಾನು ನಿನಗೆ ಏನು ಅಂಥ ಅಪರಾಧವನ್ನು ಮಾಡಿದ್ದೇನೆ?'' ಎಂದು ಭಯದಿಂದ ಬಡಬಡಿಸುತ್ತಿದ್ದನು.

ಅರ್ಜುನನು ಅತ್ಯಧಿಕವೇಗವಾಗಿ ಸ್ಮಶಾನದ ಕಡೆಗೆ ರಥ ಓಡಿಸಿದನು. ಈಗ ಮತ್ತಷ್ಟು ಭಯದಿಂದ ''ಏಕೆ ಸ್ಮಶಾನದ ಕಡೆಗೆ ಹೋಗುತ್ತಿರುವಿ? ಬೇಡ. ಅಮಂಗಳದ ಸ್ಥಳಕ್ಕೆ

ನನ್ನನ್ನು ಏಕೆ ಕರೆದುಕೊಂಡುಹೋಗುತ್ತಿರುವಿ?'' ಎಂದು ಪ್ರಲಾಪ ಮಾಡುತ್ತಿರುವಾಗ ಬೃಹನ್ನಳೆಯು ನಗುತ್ತ, ''ಉತ್ತರಕುಮಾರಾ! ನಾನು ಶಂಡನಲ್ಲ. ವೀರಪಾರ್ಥ. ಅರ್ಜುನನೆಂದು ತಿಳಿದು ಧೈರ್ಯದಿಂದಿರು. ನಿನ್ನನ್ನು ಕೊಲ್ಲಲಿಕ್ಕಾಗಿ ನಾನು ಕರೆತಂದಿಲ್ಲ. ಒಂದುವರ್ಷಕಾಲ ನಮಗೆ ನಿಮ್ಮ ಆಶ್ರಯನೀಡಿ ರಕ್ಷಣೆಕೊಟ್ಟ ಕೃತಜ್ಞತೆಯಿಂದ ನಿಮಗೆ ಉಪಕಾರಮಾಡಲು ನಿನ್ನನ್ನು ಕರೆದುಕೊಂಡು ಬಂದಿದ್ದೇನೆ. ನೀನು ಸುಮ್ಮನೆ ಕುಳಿತು ನನ್ನ ಶತ್ರುಮರ್ಧನದ ಕಾರ್ಯ ನನ್ನಲ್ಲಿರುವ ಶ್ರೀಹರಿ ಹೇಗೆ ನಡೆಸುತ್ತಾನೆಂಬುದನ್ನು ನೋಡಿ ಸಂತೋಷಪಡು'' ಎಂದನು. ಆಗ ಉತ್ತರನಿಗೆ ಆಶ್ಚರ್ಯ ಆನಂದ ಎರಡೂ ತುಂಬಿಬಂದವು. ಭಾಷ್ಪಾನಂದದಿಂದ ''ಅರ್ಜುನಾ! ಮಹಾತ್ಮನಾದ ನಿನ್ನನ್ನು ಅರಿಯದೆ ಅಜ್ಞಾನದಿಂದ ಅಪಚಾರದ ಮಾತುಗಳಿಂದ ನಿನಗೆ ಅಪ್ರೀತಿ ತೋರಿಸಿದೆನು. ಕ್ಷಮಿಸು'' ಎಂದು ನಮಸ್ಕಾರಮಾಡಿದನು. ಅರ್ಜುನನು ಆಗ ''ರಾಜಕುಮಾರಾ! ನಿನ್ನನ್ನು ಸ್ಮಶಾನಭೂಮಿಗೆ ಏತಕ್ಕಾಗಿ ಕರೆದುಕೊಂಡು ಬಂದಿದ್ದೇನೆಂದರೆ ಶತ್ರುಗಳ ಜೊತೆಗೆ ಯುದ್ಧಮಾಡಬೇಕಾದರೆ ಆಯುಧಗಳು ಬೇಡವೇ? ಅದಕ್ಕಾಗಿ'' ಎಂದನು. ''ಅರ್ಜುನಾ! ಆಯುಧ ಈ ಸ್ಮಶಾನದಲ್ಲಿ ಸಿಗುತ್ತವೆಯಾ?'' ಎಂದನು.

''ಅಗೋ ಅಲ್ಲಿನೋಡು. ಆ ಶಮೀವೃಕ್ಷದ ಮೇಲೆ ಶವದ ಆಕಾರವಾಗಿ ಕಾಣುತ್ತಿರುವುದೇ ಪಾಂಡವರ ಆಯುಧಗಳು'' ಎಂದನು.

''ಅರ್ಜುನಾ! ಹಾಗಾದರೆ ಪಾಂಡವರಲ್ಲಿ ಇನ್ನು ನಾಲ್ಕು ಜನರೆಲ್ಲಿದ್ದಾರೆ?'' ಎಂದನು. ''ಎಲ್ಲರೂ ನಿಮ್ಮ ಅರಮನೆಯಲ್ಲೇ ಇದ್ದೇವೆ. ಕಂಕನೆಂಬುವನೇ ಧರ್ಮರಾಯ. ಬಲ್ಲವನೆಂಬುವನು ಭೀಮಸೇನ. ಅಶ್ವಪಾಲಕ, ಗೋಪಾಲಕರು ನಕುಲಸಹದೇವರು'' ಎಂದನು.

''ಅರ್ಜುನಾ! ನಿನ್ನ ದಶನಾಮಗಳನ್ನು ಯಾರು ಪಠಣಮಾಡುತ್ತಾರೋ ಅವರು ವಿಜಯಶಾಲಿಗಳಾಗುತ್ತಾರೆಂದು ನಾನು ಕೇಳಿದ್ದೇನೆ. ಆ ನಾಮಗಳನ್ನು ನನಗೆ ಉಪದೇಶಮಾಡಿ ನನಗೆ ಅಪಜಯದ ಅಶುಭ ಬರದಂತೆ ಅನುಗ್ರಹ ಮಾಡು'' ಎಂದನು. ಆಗ ಅರ್ಜುನನು ತನ್ನ ದಶನಾಮಗಳನ್ನು ಉಪದೇಶಮಾಡಿದನು. ಅರ್ಜುನ, ಫಲ್ಗುಣ, ಪಾರ್ಥ, ಕಿರೀಟಿ, ಶ್ವೇತವಾಹನ, ಭೀಭತ್ಸು, ವಿಜಯ, ಕೃಷ್ಣ, ಸವ್ಯಸಾಚಿ, ಧನಂಜಯ. ಈ ನಾಮಗಳು ನನಗೆ ಅನ್ವರ್ಥನಾಮವಾಗಿ ಶ್ರೀಕೃಷ್ಣನಿಂದ ಲಭ್ಯವಾಯಿತು.'' ಎಂದನು.

ನಂತರ ವೃಕ್ಷವನ್ನೇರಿ ಶಸ್ತ್ರಾಸ್ತ್ರಗಳೆಲ್ಲವನ್ನು ತೆಗೆದು ''ಉತ್ತರಾ! ನೋಡು ಈ ಶ್ರೇಷ್ಠಕರವಾದ ಮಂತ್ರಾಸ್ತ್ರಗಳು ಯಾರ್ಯಾರದೆಂಬುದನ್ನು ಹೇಳುತ್ತೇನೆ ಕೇಳು. ಈ ದೇವದತ್ತವಾದ ಶಸ್ತ್ರಾಸ್ತ್ರದ ದರ್ಶನದಿಂದ ನಿನ್ನಲ್ಲಿ ರಣದುತ್ಸಾಹ ಮೈಗೂಡಿಬಂದು ಹುರಿದುಂಬಿಸುತ್ತೇವೆ'' ಎಂದುಹೇಳಿ ಎಲ್ಲಾ ಶಸ್ತ್ರಾಸ್ತ್ರಗಳನ್ನು ತೋರಿಸಿ ಉತ್ತರವನ್ನು ಆನಂದಪಡಿಸಿದನು.

## ಸವ್ಯಸಾಚಿಯ ಸಮರ ಸಾಹಸ

ಆಮೇಲೆ ಅರ್ಜುನನು ಉತ್ತರನ ಕೈಯಿಂದಲೇ ತನ್ನ ಆಯುಧವಾದ ಗಾಂಡೀವಧನಸ್ಸನ್ನು ದೇವದತ್ತನೆಂಬ ಶಂಖವನ್ನು ತೆಗೆಸಿಕೊಂಡು ಮಿಕ್ಕೆಲ್ಲರ ಆಯುಧಗಳನ್ನು ಮೊದಲಿನಂತೆಯೇ ಕಟ್ಟಿಸಿ ವೃಕ್ಷದಮೇಲಿಡಿಸಿ ಯುದ್ಧಕ್ಕೆ ಹೊರಡುವ ಸಂಕಲ್ಪಮಾಡಿದಾಗ ಅಗ್ನಿದೇವರಿಂದ ರಥವೂ ಹನುಮಧ್ವಜವೂ ಬಂದಿತು. ಅರ್ಜುನನು ದೇವದತ್ತಶಂಖವನ್ನು ಒಮ್ಮೆ ಊದಿದಾಗ ಕೌರವಸೇನೆ ಎಲ್ಲವೂ ಪಾರ್ಥನೇ ಯುದ್ಧಕ್ಕೆ ಬಂದಿದ್ದಾನೆಂದು ತಿಳಿದು ಯುದ್ಧಸನ್ನದ್ಧರಾದರು.

ಅರ್ಜುನನ ಶಂಖನಾದ ಕೇಳಿದ ಹಸುಗಳು ತಮ್ಮ ಸ್ವಾಮಿಯ ಪರಮಭಕ್ತನು ಊದಿದ ಶಂಖನಾದ ಕೇಳಿದಾಕ್ಷಣ ತಮ್ಮನ್ನು ಬಂಧಿಸಿದ್ದ ಶತೃಪಕ್ಷದ ಸೈನಿಕರನ್ನು ಕೊಂಬುಗಳಿಂದ ದೂಡುತ್ತ ನುಗ್ಗಿ ಅರ್ಜುನನ ಬಳಿಗೆ ಓಡಿಬರುತ್ತಿದ್ದವು.

ಹಸುಗಳ ಹಿಂಡನ್ನು ಎಳೆದುಕೊಂಡು ಹೋಗುತ್ತಿದ್ದ ಸೈನಿಕರನ್ನು ಹೊಡೆಯಲಿಕ್ಕಾಗಿ ಉತ್ತರನನ್ನು ರಥದ ಮಾಕಿಯ ಮೇಲೆ ಕೂಡಿಸಿ ತಾನೇ ಶತೃತಂಡವನ್ನು ಹೊಡೆದೊಡೆದು ಉರುಳಿಸುತ್ತ ಬರುತ್ತಿದ್ದನು. ಆಗ ಭೀಷ್ಮದ್ರೋಣಾದಿ ವೀರರು ಬಂದು ಅರ್ಜುನನನ್ನು ಎದುರಿಸಿದಾಗ ಅರ್ಜುನನು ಎಲ್ಲರನ್ನು ಬಾಣದ ರಾಶಿಯಲ್ಲಿ ಹೂತುಬಿಟ್ಟನು. ನಂತರ ಅರ್ಜುನನು ಭೀಷ್ಮರು ಮತ್ತು ದ್ರೋಣರಿಬ್ಬರನ್ನು ಬಿಟ್ಟು ಎಲ್ಲರಿಗೂ ಸಮ್ಮೋಹನಾಸ್ತ್ರವನ್ನು ಪ್ರಯೋಗಮಾಡಲು ಎಲ್ಲರೂ ಮೂರ್ಛೆಹೊಂದಿದರು.

''ಉತ್ತರಕುಮಾರಾ! ಶತೃವೀರರೆಲ್ಲರೂ ನಿದ್ರೆಯಲ್ಲಿ ಮೈಮರೆತು ವಿರಮಿಸಿದ್ದಾರೆ. ಈಗ ನೀನುಹೋಗಿ ನಿನ್ನತಂಗಿ ಕೇಳಿರುವ ರತ್ನಾಭರಣಗಳೆಲ್ಲವನ್ನು ಅವರ ದೇಹದಿಂದ ಕಳಚಿಕೊಂಡುಬಾ. ಅವರ ವಸ್ತ್ರಾಭರಣಗಳೆಲ್ಲವನ್ನು ನಿರ್ಭಯದಿಂದ ಸುಲಿದುಕೊಂಡುಬಾ. ಆದರೆ ಭೀಷ್ಮರು, ದ್ರೋಣರು ಇಬ್ಬರನ್ನು ಮಾತ್ರ ಮುಟ್ಟಬೇಡ. ಅವರು ಎಚ್ಚರದಿಂದಲೇ ಇದ್ದು ನನ್ನ ಸಾಹಸವನ್ನು ನೋಡಿ ಸಂತೋಷದಿಂದ ಹರಸುತ್ತಿದ್ದಾರೆ. ಅವರಿಗೆ ಕೈಮುಗಿದುಬಾ'' ಎಂದು ಹೇಳಿಕಳುಹಿಸಿದನು.

ಅರ್ಜುನನು ಕುರುವೀರರೆಲ್ಲರನ್ನು ಸೋಲಿಸಿ ಹಸುಗಳ ಮಂದೆಯನ್ನು ಪುರದಕಡೆಗೆ ಸುರಕ್ಷಿತವಾಗಿ ಕಳುಹಿಸಿದನಂತರ ಶಮಿವೃಕ್ಷದಡಿಗೆ ಬಂದು ಆಯುಧಗಳನ್ನು ಅದೇ ಸ್ಥಳದಲ್ಲಿ ಭದ್ರಪಡಿಸಿಟ್ಟು ಅಗ್ನಿರಥ, ಹನುಧ್ವಜಗಳನ್ನು ತಮ್ಮ ಸ್ಥಾನಕ್ಕೆ ಕಳುಹಿಸಿ ಉತ್ತರಕುಮಾರನ ರಥವೇರಿ ತಾನು ಸಾರಥಿಯಾಗಿ ಉತ್ತರನನ್ನು ವೀರಯೋಧನಂತೆ ಕೂಡಿಸಿ ರಾಜಕುಮಾರನಿಗೆ ಜಯಘೋಷವನ್ನು ಮೊಳಗಿಸುತ್ತ ನಗರದ ಹೆಬ್ಬಾಲಿಗೆ ಬಂದು ವಿಜಯವಾರ್ತೆ ಕಳುಹಿಸಿದನು. ಉತ್ತರಕುಮಾರನನ್ನು ಹೊಗಳುಭಟ್ಟರಿಂದ ಹೊಗಳಿಸುತ್ತ ಅನೇಕವಿಧ ವಾದ್ಯವೈಭವಗಳೊಂದಿಗೆ ಮಂಗಳದ್ರವ್ಯಗಳಿಂದೊಡಗೂಡಿ ಪುರಪ್ರವೇಶ ಮಾಡಿಸಿದರು.

ವಿರಾಟರಾಜನು ಮಗನು ಜಯಶೀಲನಾಗಿ ಬರುತ್ತಿರುವ ಶುಭವಾರ್ತೆತಿಳಿದು ಅನೇಕ ದಾನದಕ್ಷಣೆಗಳಿಂದ ಬ್ರಹ್ಮಣ ಆರಾಧನೆಮಾಡಿ ಸಂತೋಷದಿಂದ ''ಇದು ನನ್ನ ಮಗನು ಜಯಸಿರಿಯನ್ನು ಒಡಗೂಡಿ ಬಂದ ಶುಭಮುಹೂರ್ತ, ಆನಂದದ ಮುಹೂರ್ತ, ಬಾ ಒಂದು ಆಟ ಆಡು'' ಎಂದು ಕಂಕನನ್ನು ಕರೆದನು. ಆಟ ಪ್ರಾರಂಭಮಾಡಿ ''ಕಂಕಾ! ನನ್ನಮಗನ ಸಾಹಸ ಎಷ್ಟು ಅದ್ಭುತವಲ್ಲವೇ? ಮಹಾಪ್ರಸಿದ್ಧರಾದ ಕುರುವೀರರನ್ನೇ ಗೆದ್ದು ಬಂದಿದ್ದಾನೆ'' ಎಂದು ಹರ್ಷದಿಂದ ಹಾಡಿಹೊಗಳುತ್ತಿರಲು, ''ಮಹಾರಾಜಾ! ನಿನ್ನ ಮಗನಿಗೆ ಜಯವಾಗಿರುವುದಕ್ಕೆ ಕಾರಣ ಬೃಹನ್ನಳೆ'' ಎಂದನು.

ವಿರಾಟರಾಜನು ಅತ್ಯಧಿಕ ಆನಂದದಿಂದ ಮಗನ ವಿಜಯವೈಭವ ಕೊಂಡಾಡುವಾಗ ಕಂಕನು ಮುರಿದುಮಾತನಾಡಿದ್ದಕ್ಕೆ ಬಹಳ ಸಿಟ್ಟುಬಂದು ''ಏನು? ಗೆದ್ದಿರುವುದು ಶಂಡ ಬೃಹನ್ನಳೆಯೇ? ನನ್ನ ಮಗ ನಪುಂಸಕನಿಗಿಂತಲೂ ಕಡೆ ಎಂದು ತೆಗಳುವ ನಿನಗೆ ಏನು ಶಿಕ್ಷೆಕೊಟ್ಟರೂ ತಪ್ಪಿಲ್ಲ'' ಎಂದು ದಾಳದಿಂದ ಅವನ ಹಣೆಗೆ ರೋಷದಿಂದ ಹೊಡೆದಾಗ ರಕ್ತ ಬಳಬಳನೆ ಸುರಿಯತೊಡಗಿತು. ಆಗ ಆ ರಕ್ತ ಭೂಮಿಯ ಮೇಲೆ ಬಿದ್ದರೆ ರಾಜನಿಗೆ ಅರಿಷ್ಟವಾಗುತ್ತದೆ. ಎಂಬ ಭಯದಿಂದ ದ್ರೌಪದಿ ಓಡಿಬಂದು ಸುರಿವರಕ್ತ ಕೆಳಗೆ ಬೀಳದಂತೆ ಸೆರಗಿನಿಂದ ಒರಸಿದಳು.

ಭೀಮಾರ್ಜುನರಿಗೆ ವಿರಾಟನು ಧರ್ಮರಾಜನನ್ನು ಹೊಡೆದದ್ದನ್ನು ನೋಡಿ ಒಂದೇಏಟಿಗೆ ಅವನನ್ನು ಮುಗಿಸಿಬಿಡುವಂತೆ ಬರುತ್ತಿರುವುದನ್ನು ನೋಡಿದ ಧರ್ಮರಾಜನು ಅವರನ್ನು ತಡೆದು, ನಾವು ಒಂದುವರ್ಷ ಅಜ್ಞಾತವಾಸಮಾಡಲು ಇವರ ಆಶ್ರಯ ಸಿಕ್ಕು ಸುರಕ್ಷಿತವಾಗಿ ನೆರವೇರಿಸಿದ್ದೇವೆ. ನಮಗೆ ಇವರಿಂದ ಉಪಕಾರವಾಗಿರುವುದರಿಂದ ದ್ವೇಶಮಾಡಬಾರದು. ವಿರಾಟರಾಜನು ನಾವಾರೆಂದು ತಿಳಿಯದೆ ಅಜ್ಞಾನದಿಂದ ಮಾಡಿದ ತಪ್ಪು ತಪ್ಪಿಲ್ಲ'' ಎಂದು ಸಮಾಧಾನಪಡಿಸಿ ಕಳುಹಿಸಿದನು.

## ಸುಮನಸರ ಶುಭೋದಯ

ಪಾಂಡವರು ಹನ್ನೆರಡು ವರ್ಷ ವನವಾಸವನ್ನು ಒಂದು ಕ್ಷಣವನ್ನು ವ್ಯರ್ಥಗೊಳಿಸದಂತೆ ಸಚ್ಛಾಸ್ತ್ರಶ್ರವಣಾದಿಗಳಲ್ಲಿ ಕಳೆದು ಅಧಿಕ ಪುಣ್ಯವನ್ನು ಸಂಪಾದಿಸಿಕೊಂಡರು. ಅದಾದನಂತರ ಒಂದುವರ್ಷದ ಅಜ್ಞಾತವಾಸವನ್ನು ವಿರಾಟರಾಜನರಮನೆಯಲ್ಲಿ ತಮ್ಮ ಭಗವತ್ಸಾದನೆಗೆ ಲೋಪದೋಶಗಳ ಲೇಪವಾಗದಂತೆ ಅಗೋಚರರಾಗಿದ್ದು ಆನಂದದಿಂದ ಕಳೆದರು. ಹದಿಮೂರುವರ್ಷಗಳ ವ್ರತವನ್ನು ನಿಷೇಧವಿಲ್ಲದಂತೆ ಮುಗಿಸಿ ಕೃಷ್ಣಾರ್ಪಣವೆಂದರು.

ಶ್ರೀಕೃಷ್ಣನಿಗೆ, ಪ್ರೀತಿಕರವಾಗುವಂತೆ ಭೀಮಸೇನನು ದುಷ್ಟಧ್ವಂಸನ ಕಾರ್ಯವನ್ನು ಸಂಕಲ್ಪಮಾಡಿದಂತೆ ಅರಣ್ಯವಾಸದಲ್ಲಿ ಅನೇಕ ಹರಿದ್ವೇಶಿಗಳನ್ನು ನಾಶಪಡಿಸಿ ಶ್ರೀಹರಿಭಕ್ತರಿಗೆ

ಸುರಕ್ಷೆಕೊಟ್ಟು ಅಜ್ಞಾತವಾಸದಲ್ಲೂ ಜೀಮೂತನೆಂಬ ಮಹಾಪಾಪಿಯನ್ನು ಕೀಚಕನನ್ನೂ ಅವನ ಸಹೋದರರನ್ನು ಸಂಹಾರಮಾಡಿ ಸಜ್ಜನರಿಗೆ ಒದಗುತ್ತಿದ್ದ ಉಪದ್ರವಗಳನ್ನು ತಪ್ಪಿಸಿದನು. ಶ್ರೀಕೃಷ್ಣನಿಗೆ ಅತ್ಯಂತ ಪ್ರೀತಿದಾಯಕವಾದ ಗೋವುಗಳು ಶತೃಗಳ ಕೈಗೆ ಸಿಕ್ಕು ಹಿಂಸೆಪಡುತ್ತಿದ್ದಾಗ ಅವುಗಳ ಬಂಧನವನ್ನು ಬಿಡಿಸಿ ತಂತಮ್ಮ ಕರುಗಳೊಂದಿಗೆ ಸ್ವಸ್ಥಾನದಲ್ಲಿ ಸಂತೋಷವಾಗಿರುವಂತೆ ಮಾಡಿದ ಅರ್ಜುನನ ಕಾರ್ಯಕ್ಕೂ ಶ್ರೀಕೃಷ್ಣನು ಸುಪ್ರೀತನಾದನು.

ಹೀಗೆ ಧರ್ಮದೀಕ್ಷೆಯಲ್ಲೇ ಇದ್ದು ಹದಿಮೂರು ವರ್ಷಗಳನ್ನು ಕಳೆದ ಪಾಂಡವರಿಗೆ ಶುಭೋದಯವಾಯಿತು. ರಾಜಕುಮಾರನಾದ ಉತ್ತರನು ಪಾಂಡವರಿಗೆ ಮಂಗಳಮಹೋತ್ಸವದ ಸಿದ್ಧತೆಗಳೆಲ್ಲವನ್ನು ವ್ಯವಸ್ಥೆ ಮಾಡಿದನು. ಮರುದಿನ ವಿಜಯದಶಮಿ ಶಮೀವೃಕ್ಷದಲ್ಲಿ ಪಾಂಡವರಿಗೆ ವಿಜಯಾಂಕುರವಾಯಿತು. ಮಂಗಳ ಮಜ್ಜನಕಾರ್ಯವಾದನಂತರ ದೇವಾತಾಕಾರ್ಯಗಳನ್ನು ಮುಗಿಸಿ ಕ್ಷತ್ರಿಯ ಧರ್ಮವನ್ನವಲಂಬಿಸಿ ಪ್ರಜಾಪಾಲನೆಯ ದೀಕ್ಷೆಯಿಂದ ಧರ್ಮರಾಜನನ್ನು ಸಿಂಹಾಸನದಮೇಲೆ ಕೂಡಿಸಿದರು. ದ್ರೌಪದೀ ಸಮೇತವಾಗಿ ಧರ್ಮರಾಜನು ಉತ್ತರನ ಪ್ರಾರ್ಥನೆಯಂತೆ ಸಿಂಹಾಸನವನ್ನು ಏರಿಕುಳಿತಿರಲು ನಾಲ್ಕುಜನ ಸಹೋದರರೂ ಅವನ ಆಜ್ಞಾಧಾರಕರಾಗಿ ಸೇವೆಸಲ್ಲಿಸುತ್ತಿದ್ದರು.

ಆ ಸಮಯದಲ್ಲಿ ವಿರಾಟರಾಜನು ತನ್ನ ಮಗನಿಂದ ಪಾಂಡವರ ವೃತ್ತಾಂತವನ್ನೆಲ್ಲವನ್ನು ತಿಳಿದು ಸಂತೋಷದಿಂದ ಬಂದು ನಮಸ್ಕಾರ ಮಾಡಿದನು. ''ಮಹಾತ್ಮರೇ! ತಮ್ಮಂಥ ಧರ್ಮಮೂರ್ತಿಗಳು ಇಷ್ಟುದಿನ ನನ್ನ ಸನಿಹದಲ್ಲಿದ್ದ ಕಾರಣದಿಂದಲೇ ನನಗೆ ಆ ದಿನಗಳೆಲ್ಲವೂ ಶುಭವನ್ನೇ ಹೊತ್ತುತಂದು ನನ್ನ ಉನ್ನತಿಗೆ ಕಾರಣವಾದವು. ಸಜ್ಜನರ ಸಂಗ ಶಾಶ್ವತ ಸುಖ ಪ್ರಾಪ್ತಮಾಡುತ್ತದೆ.

ನಮ್ಮಿಂದ ಅನೇಕ ಅಪರಾಧಗಳು ಅಜ್ಞಾನದಿಂದ ಎಷ್ಟೋ ನಡೆದುಹೋಯಿತು. ತಾವು ಎಲ್ಲವನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿಕೊಳ್ಳುತ್ತೇವೆ.

''ಧರ್ಮರಾಜಾ! ಅರ್ಜುನನು ನನ್ನಮಗಳಿಗೆ ವಿದ್ಯಾದಾನ ಮಾಡಿದ್ದಾನೆ. ನನ್ನ ಮಗನ ಪ್ರಾಣರಕ್ಷಣೆಮಾಡಿ ಪ್ರಚಂಡ ಶತೃಗಳನ್ನು ಸೋಲಿಸಿ ನಮಗೆ ಕೀರ್ತಿ-ಆಯಸ್ಸು ಎಲ್ಲವನ್ನು ಉಂಟುಮಾಡಿರುತ್ತಾನೆ. ಆದ್ದರಿಂದ ಅವನಿಗೆ ನನ್ನ ಅತ್ಯಂತ ಪ್ರೀತಿಪಾತ್ರಳಾದ ಸುಗುಣಶೀಲಳಾದ ಉತ್ತರೆಯನ್ನು ಕೊಟ್ಟು ವಿವಾಹ ಮಾಡಬೇಕೆಂಬ ನನ್ನ ಆಸೆಯನ್ನು ನೆರವೇರಿಸು'' ಎಂದು ಕೇಳಿದನು.

ಅರ್ಜುನನು ಒಪ್ಪಲಿಲ್ಲ. ''ಮಹಾರಾಜಾ! ನಿನ್ನ ಮಗಳಿಗೆ ನಾನು ಗುರುವಾದ್ದರಿಂದ ತಂದೆಗೆ ಸಮಾನನಾಗಿದ್ದೇನೆ. ನನ್ನ ಮಗ ಅಭಿಮನ್ಯು ನಿನಗೆ ಅಳಿಯನಾಗಲು ತಕ್ಕವರನಾಗಿದ್ದಾನೆ. ಅವನು ಅಸಮಾನ ವೀರನೂ ಸುಂದರಕಾಯನೂ ಶ್ರೀಕೃಷ್ಣನಿಗೆ ಸೋದರಳಿಯನೂ

ಆಗಿರುವುದರಿಂದ ಅವನಿಗೆ ಉತ್ತರಾದೇವಿಯನ್ನು ತಂದುಕೊಂಡು ನನಗೆ ಸೊಸೆಯನ್ನಾಗಿ ಮಾಡಿಕೊಳ್ಳುತ್ತೇನೆ'' ಎಂದು ಹೇಳಿದಾಗ ವಿರಾಟರಾಜನಿಗೂ ಸುಧೇಷ್ಣಾದೇವಿಗೂ ಆದ ಆನಂದ ಅಪಾರವಾಗಿತ್ತು.

ಧರ್ಮರಾಜನು ಶ್ರೀಕೃಷ್ಣನನ್ನು ಬಿಟ್ಟು ಅವನ ಅಪ್ಪಣೆ ಆಗದೆ ಯಾವ ಕಾರ್ಯವನ್ನು ಮಾಡುವವನಲ್ಲ. ಆದ್ದರಿಂದ ''ಅಭಿಮನ್ಯು ಉತ್ತರೆಯರ ವಿವಾಹ ಶ್ರೀಕೃಷ್ಣನ ಅನುಮತಿ ಪಡೆದ ನಂತರ ನಿರ್ಧಾರವಾಗಲಿ ಮೊದಲು ದೂತರ ಕೈಲಿಓಲೆ ಬರೆದುಕಳುಹಿಸಿ ಶ್ರೀಕೃಷ್ಣ ಬಲರಾಮರನ್ನು ಇಲ್ಲಿಗೆ ಕರೆಸಿಕೊಳ್ಳುವ ಕಾರ್ಯ ಶೀಘ್ರವಾಗ ನಡೆಯಲಿ'' ಎಂದು ಹೇಳಿದನು.

ಪಾಂಡವರು ತಮ್ಮ ವಿಜಯವಾರ್ತೆಯನ್ನು ಸರ್ವಜ್ಞಮೂರ್ತಿಯಾದ ಶ್ರೀಕೃಷ್ಣನಿಗೆ ಅರ್ಪಣಮಾಡುವ ಧ್ಯೇಯದಿಂದ ಓಲೆಯನ್ನು ಹೇಗೆ ಬರೆದರೆಂದರೆ ''ಶ್ರೀಕೃಷ್ಣಾ! ನಿನ್ನ ಅನುಗ್ರಹ ಬಲದಿಂದ ಅಜ್ಞಾತವಾಸದ ತುದಿಯಲ್ಲಿ ಒದಗಿದ ಯುದ್ಧದಲ್ಲಿ ವಿಜಯರಾದೆವು. ವಿರಾಟರಾಜನ ಮನೆಯಲ್ಲಿ ಒಂದುವರ್ಷ ಅಜ್ಞಾತವಾಸವನ್ನು ಸುಸೂತ್ರವಾಗಿ ಮುಗಿಸಿರುವುದು ನಿನ್ನ ಕರುಣಾಬಲದಿಂದಲೇ ಎಂಬುದನ್ನು ಬೇರೆ ಹೇಳಬೇಕಾಗಿಯೇ ಇಲ್ಲ.

ಈಗ ವಿರಾಟರಾಜನು ತನ್ನ ಪುತ್ರಿಯಾದ ಉತ್ತರೆಯನ್ನು ಅಭಿಮನ್ಯುವಿಗೆ ಕೊಟ್ಟು ವಿವಾಹಮಾಡಬೇಕೆಂದು ನಿನ್ನ ಪ್ರೇರಣಾನುಸಾರ ಸಂಕಲ್ಪ ಮಾಡಿರುತ್ತಾನೆ. ಅದು ನಿನ್ನ ಇಚ್ಛೆ ಇದ್ದರೆ ನಡೆಯುತ್ತದೆ. ನೀನು ಬಲರಾಮಾದಿಗಳೊಂದಿಗೆ ಬರಬೇಕೆಂದು ನಾವೆಲ್ಲರೂ ಭಕ್ತಿಪೂರ್ವಕವಾಗಿ ನಿನ್ನನ್ನು ಪ್ರಾರ್ಥಿಸಿಕೊಳ್ಳುತ್ತಿದ್ದೇವೆ'' ಎಂದು ಬರೆದು ಕಳುಹಿಸಿದನು.

ವಿರಾಟರಾಜನು ಪಾಂಡವರ ವಾಸಕ್ಕಾಗಿ ಉಪಪ್ಲಾವ್ಯವೆಂಬ ಸುಂದರನಗರವನ್ನು ಸಕಲ ಸೌಲಭ್ಯಗಳೊಡನೆ ಸಿದ್ಧಪಡಿಸಿ ಅಲ್ಲಿ ಪಾಂಡವರು ಸಂತೋಷಯುಕ್ತರಾಗಿರುವಂತೆ ಸುವ್ಯವಸ್ಥೆಮಾಡಿದನು. ಪಾಂಡವರು ವುಪಪ್ಲಾವ್ಯನಗರಕ್ಕೆ ಹೋಗಿ ಅಲ್ಲಿ ನೆಲಸಿದರು. ಶ್ರೀಕೃಷ್ಣನು ವಿರಾಟರಾಜನ ಕರೆಯೋಲೆಯನ್ನು ಅಂಗೀಕರಿಸಿ ಸಕಲ ವೈಭವದೊಂದಿಗೆ ಪರಿವಾರಸಮೇತನಾಗಿ ಬಂದನು. ಸಕಲ ದೇಶದ ರಾಜರೂ ಪಾಂಡವರ ಬಳಿಗೆ ವಿರಾಟರಾಜನ ಆಹ್ವಾನದಂತೆ ಸೇನಾನಿಕರದೊಂದಿಗೆ ಬಂದುಬಂದು ಸೇರಿದರು. ವಿರಾಟರಾಜನು ಬಂದ ರಾಜರೆಲ್ಲರಿಗೂ ಅವರವರಿಗೆ ತಕ್ಕಂತೆ ಸ್ಥಾನಮಾನಗಳನ್ನು ಏರ್ಪಡಿಸಿದ್ದನು. ಅಸಂಖ್ಯ ವೀರರು ಸಂತೋಷ ಸಂಭ್ರಮಗಳಿಂದ ಪಾಂಡವರ ಸುಖಸಂದರ್ಶನ ಮತ್ತು ವಿವಾಹ ಸಂಭ್ರಮದ ಸಿರಿನೋಟದ ಸುಖಾನುಭವಕ್ಕೆ ಬಂದು ಉಪಪ್ಲಾವ್ಯದಲ್ಲಿ ನೆಲಸಿದರು.

ಶ್ರೀಕೃಷ್ಣವೆಂಬ ಅಕ್ಷಯ ಸಂಪತ್ತೇ ಅಲ್ಲಿ ನೆಲಸಿರುವಾಗ ಇನ್ನು ಯಾವ ಸಂಪತ್ತಿಗೆ ತಾನೇ ಏನು ಕಡಿಮೆ? ಅಭಿಮನ್ಯು ಉತ್ತರಾದೇವಿಯರ ವಿವಾಹಮಹೋತ್ಸವ ಅತ್ಯಧಿಕ

ವೈಭವದಿಂದ ನೆರವೇರಿತು. ಸಕಲದೇವತೆಗಳೂ ವಿವಾಹಮಂಟಪದಲ್ಲಿ ಶ್ರೀಕೃಷ್ಣನೆಂಬ ಸೂರ್ಯನ ಸನ್ನಿಧಿಯಲ್ಲಿ ನಕ್ಷತ್ರಗಳಂತೆ ಪ್ರಕಾಶಮಾನರಾಗಿ ಶೋಭಿಸುತ್ತಿದ್ದರು.

ವಿರಾಟರಾಜನು ಅಳಿಯನಿಗೆ ಚತುರಂಗಸೇನೆ ಅನೇಕ ಶ್ರೇಷ್ಟರಾದ ದಾಸದಾಸೀ ಜನರು, ರತ್ನಾಭರಣಗಳು, ಪ್ರತಿಯೊಂದು ವಸ್ತುಗಳನ್ನು ಬಳುವಳಿಕೊಟ್ಟನು.

ಶ್ರೀಕೃಷ್ಣನು ಬೀಗರಿಗೆಲ್ಲರಿಗೂ ಅಮೂಲ್ಯ ಉಡುಗೊರೆ ವಸ್ತುಗಳನ್ನು ಕೊಟ್ಟನು. ಅರಮನೆಯಲ್ಲಿ ಕಾರ್ಯನಿರ್ವಾಹಕರೆಲ್ಲರಿಗೂ ಅಭಿಮಾನದಿಂದ ಅನೇಕ ವಸ್ತುಗಳನ್ನು ಕೊಟ್ಟನು. ಮಂತ್ರಿಮಂಡಲದವರೇ ಮೊದಲಾದವರಿಗೂ ಬಹುಮಾನಿಸಿ ಸಂತೋಷಪಡಿಸಿದನು. ಶ್ರೀಕೃಷ್ಣನ ವರದಹಸ್ತದಿಂದ ಬಹುಮಾನಿತರಾದವರೆಲ್ಲರ ಆನಂದಕ್ಕೂ ಮಿತಿ ಇರಲಿಲ್ಲ.

ಹೀಗೆ ನಾಲ್ಕು ದಿನಗಳು ವಿವಾಹ ಮಹೋತ್ಸವವು ಸಂಭ್ರಮದಿಂದ ನೆರವೇರಲು, ವಿವಾಹಕ್ಕೆ ಬಂದಿದ್ದ ರಾಜರುಗಳೆಲ್ಲರೂ ಶ್ರೀಕೃಷ್ಣನ ಮಾತಿನಂತೆ ಚತುರಂಗ ಸೇನೆಯೊಡನೆ ಉಪಪ್ಲಾವ್ಯದಲ್ಲೇ ಇದ್ದರು. ಧರ್ಮರಾಜನ ರಾಜ್ಯವನ್ನು ಕೌರವರು ಕಬಳಿಸಬೇಕೆಂದು ಸನ್ನಾಹ ನಡೆಸುತ್ತಿದ್ದಾರೆ. ಅದು ಸಾಧ್ಯವಿಲ್ಲ. ಧರ್ಮರಾಜನಿಗೆ ರಾಜ್ಯ ತಾನಾಗಿಯೇ ಬಂದುಸೇರುತ್ತದೆ. ಎಂದು ಎಲ್ಲರೂ ಮಾತನಾಡಿಕೊಂಡು ಸಕಲರಾಜರೂ ಪಾಂಡವರಿಗೆ ಬೆಂಬಲರಾಗಿ ಸೇನಾನಿಕರದೊಂದಿಗೆ ಉಪಪ್ಲಾವ್ಯದಲ್ಲೇ ನೆಲಸಿದರು. ಶ್ರೀಕೃಷ್ಣನು ''ಧರ್ಮರಾಜಾ! ನಿಮಗೆ ಸಾಮ್ರಾಜ್ಯ ತನಗೆ ತಾನೇ ಬಂದುಸೇರುವಂತೆ ನಾನು ಮಾಡುತ್ತೇನೆ. ಏಕೆಂದರೆ ಧರ್ಮಪಾಲಕರು ತಮಗಾಗಿ ತಾವು ಯಾವ ಸುಖವನ್ನೂ ಇಚ್ಛಿಸದಿದ್ದರೂ ಸಕಲ ಪುರುಷಾರ್ಥಗಳೂ ತಾವೇ ತಾವಾಗಿ ಬಂದು ನೆಲಸುತ್ತವೆ. ಸ್ವಚ್ಛಜ್ಞಾನದಿಂದ ಶ್ರೀಹರಿಯನ್ನು ನಂಬಿದವರಿಗೆ ಇಷ್ಟಪ್ರಾಪ್ತಿ. ಅನಿಷ್ಟನಿವೃತ್ತಿ ಎಂಬುದನ್ನು ನಂಬಿನಡೆದ ನಿಮಗೆ ವಿಪತ್ಸಂಭವ ಇಲ್ಲವೇ ಇಲ್ಲ'' ಎಂದು ಪಾಂಡವರನ್ನು ಅಡಿಗಡಿಗೂ ಭದ್ರವಚನದಿಂದ ಆನಂದಪಡಿಸುತ್ತಿದ್ದನು.

## ಶ್ರೀಶನ ಸಭಾಸಂಭಾಷಣೆ

ವಿವಾಹ ಕಾರ್ಯಗಳೆಲ್ಲವೂ ಮುಗಿದನಂತರ ಶ್ರೀಕೃಷ್ಣನು ಯಾದವ ಮುಖ್ಯರುಗಳೊಡನೆ ದ್ರುಪದರಾಜ ವಿರಾಟರಾಜ ಮೊದಲಾದ ಮುಖ್ಯರಾಜರುಗಳನ್ನು ಒಟ್ಟುಗೂಡಿಸಿ ಸಭೆ ಸೇರಿಸಿದನು. ಅದು ಆಪ್ತ ಮಿತ್ರರು ಮಾತ್ರ ಸೇರಿದ ಸಭೆ ಆದ್ದರಿಂದ ಎಲ್ಲರೂ ಮೊದಲು ಶ್ರೀಕೃಷ್ಣನ ಮುಖಕಮಲದಿಂದ ಹೊರಹೊಮ್ಮಿಬರುವ ರಸನುಡಿಗಳನ್ನು ಏನೆಂದು ಕೇಳಿ ತಿಳಿಯಲಿಕ್ಕಾಗಿ ಶ್ರೀಕೃಷ್ಣನ ಸಿರಿವದನವನ್ನೇ ನೋಡುತ್ತ ಕುಳಿತಿದ್ದರು. ಆಗ ಕೃಷ್ಣನು ದ್ರುಪದನನ್ನು ಕುರಿತು ''ದ್ರುಪದಾ! ನಾವು ಮದುವೆಗಾಗಿ ಬಂದವರು ಊಟ ಉಡುಗೊರೆ ಮುಗಿಸಿಕೊಂಡು ಹೊರಡತಕ್ಕವರು. ''ನೀನಾದರೋ! ಹೆಣ್ಣುಕೊಟ್ಟ ಮಾವನಾದ್ದರಿಂದ ಅವರ ಹಿತಚಿಂತನೆ ಮಾಡಬೇಕಾದವನು.

ದುರ್ಯೋಧನನು ಮೋಸದಿಂದ ರಾಜ್ಯವನ್ನು ಕಸಿದುಕೊಂಡು ಪಾಂಡವರನ್ನು ಕಾಡುವಾಸಕ್ಕೆ ಕಳುಹಿಸಿದ್ದೇ ದೊಡ್ಡ ಅಪರಾಧ. ಆದರೂ ಸೈರಿಸಿ ವನವಾಸ ಅಜ್ಞಾತವಾಸವನ್ನು ಹದಿಮೂರು ವರ್ಷಗಳು ಅವನ ಮಾತಿನಂತೆ ಕಳೆದುಬಂದಿದ್ದಾರೆ. ಈಗಲಾದರೂ ಅವರರಾಜ್ಯ ಅವರಿಗೆ ಬಿಟ್ಟುಕೊಡದೆ ಎಲ್ಲವನ್ನೂ ತಾನೇ ಅನುಭವಿಸಬೇಕೆಂದೂ ಪಾಂಡವರಿಗೆ ಕಾಡೇ ಸ್ಥಿರವೆಂದೂ ಹೇಳುತ್ತಿದ್ದಾನಂತೆ.

ಆದ್ದರಿಂದ ಈಗ ಧೌಮ್ಯಾಚಾರ್ಯರನ್ನು ಅವನ ಬಳಿಗೆ ಕಳುಹಿಸಿ ಅವನಿಂದ ಏನು ಉತ್ತರ ಬರುತ್ತದೋ ಎಂದು ತಿಳಿದು ಮುಂದಿನ ವ್ಯವಸ್ಥೆ ಮಾಡಬೇಕು'' ಎಂದು ಹೇಳಿದನು.

ಎಲ್ಲರ ಅಭಿಪ್ರಾಯದಂತೆ ಆಚಾರ್ಯರು ಹಸ್ತಿನಾವತಿಗೆ ಹೋಗಿ ಅಲ್ಲಿ ಕೌರವರ ಮನದಾಳವನ್ನು ಹೊರಗೆಡುಹಿ ಬರಬೇಕೆಂದು ಹೊರಟರು.

## ಧೌಮ್ಯರ ಧರ್ಮಸಂದೇಶ

ಆಚಾರ್ಯರು ಹಸ್ತಿನಾವತಿಯ ಅಂಧನೃಪನ ಅರಮನೆಗೆ ಆಗಮಿಸಿದರು. ಧೃತರಾಷ್ಟ್ರನು ಪಾಂಡವರಿಂದ ಕಳುಹಿಸಲ್ಪಟ್ಟ ಪುರೋಹಿತರ ಬಳಿ ಅವರ ಸಕಲವೃತ್ತಾಂತವನ್ನು ತಿಳಿಯಬೇಕೆಂಬ ಕುತೂಹಲದಿಂದ ಸ್ವಾಗತ ಸತ್ಕಾರಗಳೆಲ್ಲವನ್ನೂ ಮುಗಿಸಿದನಂತರ ''ಧೌಮ್ಯರೇ! ಪಾಂಡವರು ಎಲ್ಲಿದ್ದಾರೆ? ಅವರು ಹೇಗೆ ಯಾವ ರೀತಿಯಿಂದಿದ್ದಾರೆ? ಅವರ ಅಭಿಪ್ರಾಯವೇನು?'' ಎಲ್ಲವನ್ನು ತಿಳಿಸಿರಿ'' ಎಂದು ಕೆರಳಿದ ಕುತೂಹಲದಿಂದ ಕೇಳಿದನು.

''ಧೃತರಾಷ್ಟ್ರಾ! ಪಾಂಡವರಿಗೆ ಕಷ್ಟ ಬರಬೇಕೆಂದು ಎಷ್ಟೇ ಪ್ರಯತ್ನಪಟ್ಟರೂ ಅವರಿಗೆ ಸುಖವೇ ಸದಾ ಸಿದ್ಧವಾಗಿ ಸೇರುತ್ತದೆ. ಕಾಡಿನ ಕಡುಕಷ್ಟವನ್ನು ಧರ್ಮರಾಜನು ಯಾವ ಲೋಪವೂ ಇಲ್ಲದೆ ಸುಖಸಾಮ್ರಾಜ್ಯದಲ್ಲಿ ಹೇಗೆ ಅನುಭವಿಸುತ್ತಿದ್ದನೋ ಅದೇರೀತಿ ಆನಂದದಿಂದಿದ್ದನು.

ಸಹಸ್ರ ಸಹಸ್ರ ಸಂಖ್ಯೆಯ ಋಷಿಗಳಿಗೆ, ದ್ವಿಜಶ್ರೇಷ್ಠರಿಗೆ, ಅನ್ನದಾನ ಗೋದಾನ ಹಿರಣ್ಯದಾನಾದಿಗಳನ್ನು ಮಾಡುತ್ತ ತೀರ್ಥಯಾತ್ರಾದಿಗಳ ಆನಂದವನ್ನು ಅನುಭವಿಸುತ್ತ ಸಕಲ ಸತ್ಕರ್ಮಗಳಿಂದಲೂ ಧರ್ಮತೇಜಸ್ಸನ್ನು ಬೆಳಗಿಸಿ ಯಾವಾಗಲೂ ಶಾಂತಚಿತ್ತನಾಗಿ ಕಾಮಕ್ರೋಧಾದಿಗಳಿಗೆ ಅವಕಾಶ ಕೊಡದಂತೆ ಸ್ವಚ್ಛಮಾನಸವಾಗಿ ಸಂತೋಷದಿಂದಿದ್ದಾನೆ.

ಇನ್ನು ಭೀಮಸೇನನ ವಿಚಾರವಂತೂ ತಿಳಿಸಬೇಕಾಗಿಯೇ ಇಲ್ಲ. ಅವನು ಅರಣ್ಯವಾಸದಲ್ಲಿದ್ದಾಗ ಮಾಡಿದ ಒಂದೊಂದು ಅದ್ಭುತಕಾರ್ಯಗಳನ್ನು ಬ್ರಹ್ಮೇಂದ್ರಾದಿಗಳೆಲ್ಲರೂ ನೋಡಿ ಆಶ್ಚರ್ಯಪಡುತ್ತಿದ್ದರು. ಇನ್ನು ಹುಲುಮಾನವರ ಮಾತೇನು? ಮಹಾತಪೋಬಲ ಬಾಹುಬಲಗಳಿಂದ ಮದಭರಿತನಾಗಿ ಅನೇಕ ಸಾಧುಸಜ್ಜನರ

ಪ್ರಾಣಹಿಂಸಕನಾಗಿದ್ದ ಕೀರ್ಮೀರನನ್ನು ಭೀಮಸೇನನು ಲೀಲಾಜಾಲವಾಗಿ ಕೊಂದಿದ್ದಾನೆ.

ಅನೇಕ ತೀರ್ಥಕ್ಷೇತ್ರಗಳಲ್ಲಿ ತೀರ್ಥಕ್ಷೇತ್ರಕ್ಕೆ ಬರುವ ಭಕ್ತಜನರನ್ನು ಕೊಂದುತಿನ್ನುತ್ತಿದ್ದ ಮೂರುಕೋಟಿ ರಾಕ್ಷಸರನ್ನು ಭೀಮನು ಸಂಹಾರಮಾಡಿ ದೇಶಕ್ಕೆ ರಕ್ಷಣೆ ಕೊಟ್ಟಿದ್ದಾನೆ. ಜಗತ್ಪ್ರಖ್ಯಾತರಾದ ಪರಾಕ್ರಮವೀರರೆನಿಸಿದ ಜರಾಸಂಧ, ಬಕಾಸುರ, ಹಿಡಂಬ ಮೊದಲಾದವರೆಲ್ಲರೂ ಭೀಮಸೇನನ ತೋಳ್ಗಾಣದಲ್ಲಿ ಅರೆಸಿಕೊಂಡು ಅಂಧಂತಮಸ್ಸಿಗೆ ಬಿದ್ದಿದ್ದಾರೆ. ಜಟಾಸುರನೆಂಬ ಒಬ್ಬ ಘೋರ ರಾಕ್ಷಸನು ಪಾರ್ವತಿಯನ್ನು ಕುರಿತು ತಪಸ್ಸುಮಾಡಿ ಅವಧ್ಯನಾಗಿ ಅನೇಕ ಜನರನ್ನು ಕೊಂದು ಅಸ್ಥಿಗಳನ್ನು ಪರ್ವತದೋಪಾದಿ ರಾಶಿ ಒಟ್ಟಿದ್ದನು. ಒಂದುದಿನ ಆತನು ಪಾಂಡವರ ಆಶ್ರಮಕ್ಕೆ ಬ್ರಾಹ್ಮಣವೇಷದಿಂದ ಬಂದು ಭೋಜನ ಬೇಡಿದನು. ಭೀಮಸೇನನಿಗೆ ಎಂದಿಗೂ ಅಜ್ಞಾನವಿಲ್ಲ. ಬಂದವನು ಜಟಾಸುರ ಎಂದು ಗೊತ್ತಾದರೂ ಬ್ರಹ್ಮಣನಂತೆ ಬಂದು ಮಧ್ಯಾಹ್ನಕಾಲದಲ್ಲಿ ಭಿಕ್ಷಾಂದೇಹಿ ಎಂದಕಾರಣ ಈಗ ಇವನ ವಧೆ ಆಗಬಾರದು ಮುಂದೆ ಆಗಲಿ'' ಎಂದುಕೊಂಡು ಬಿಟ್ಟುಬಿಟ್ಟನು.

ಕೆಲವುದಿನಗಳನಂತರ ಅರ್ಜುನನೂ ಇಂದ್ರಕೀಲಪರ್ವತಕ್ಕೆ ಹೋದಮೇಲೆ ಒಂದುದಿನ ಭೀಮಸೇನನೂ ಬೇಟೆಗೆಂದು ಹೊರಹೊರಟಾಗ ನಿರ್ಭಯದಿಂದ ನುಗ್ಗಿ ದ್ರೌಪದಿಯನ್ನು ನಕುಲಸಹದೇವರನ್ನೂ ಎತ್ತಿಕೊಂಡು ಓಡಿದನು.

ಭೀಮಸೇನನ ದಿವ್ಯದೃಷ್ಟಿಗೆ ದೈತ್ಯನ ದುಶ್ಕೃತ್ಯ ಗೋಚರವಾಗಿ ಸಿಂಹನಾದದಿಂದ ಒಂದೇ ನೆಗೆತಕ್ಕೆ ಹಾರಿಬರುವ ಭೀಮಸೇನನ ರೌದ್ರತೆಯನ್ನು ನೋಡಿದ ಜಟಾಸುರನು ಹೆಗಲಮೇಲೆ ಹೊತ್ತಿದ್ದ ನಕುಲ ಸಹದೇವರನ್ನು ದ್ರೌಪದಿಯನ್ನು ಕೆಳಗೆಹಾಕಿ ಪ್ರಾಣಭಯದಿಂದ ಓಡಹತ್ತಿದನು.

ಓಡಿದರೆ ಬಿಡುವನೇ ''ನಿಲ್ಲು ನೀಚಾ!'' ಎಂದು ಅಬ್ಬರಿಸುತ್ತ ಅವನಮೇಲೆ ನೆಗೆದು ಕೆಳಗುರುಳಿಸಿ ಅಸುರನ ವಿಶಾಲ ಶರೀರವನ್ನು ಕಾಲಿನಲ್ಲಿ ಮೆಟ್ಟಿ ಕೆಸರಿನಂತೆ ತುಳಿದು ಮುದ್ದೆಮಾಡಿದನು.

ಭೀಮಸೇನನ ಸಾಹಸ ಅವರ್ಣನೀಯವಾದದ್ದು. ಸಜ್ಜನರ ರಕ್ಷಣೆಗಾಗಿಯೂ ಅಸುರಜನರ ಸಂಹಾರಕ್ಕಾಗಿಯೂ ಭೂಮಂಡಲದಲ್ಲಿ ಅವತರಿಸಿರುವ ದೇವತಾಪುರುಷನೆಂದು ತಿಳಿದವರಿಗೆ ಭಯವಿಲ್ಲ. ಅರ್ಜುನನ ಸಾಹಸ ಕಡಿಮೆ ಎಂದು ಉದಾಸೀನ ಮಾಡಬೇಡ. ಅವನು ವೇದವ್ಯಾಸರ ಆಜ್ಞೆಯಂತೆ ಶಿವನನ್ನು ಕುರಿತು ತಪಸ್ಸುಮಾಡಿ ಸಕಲ ದೇವತೆಗಳಿಂದಲೂ ಮಂತ್ರಾಸ್ತ್ರಗಳನ್ನು ಪಡೆದಿದ್ದು ಅವನ ಪರಾಕ್ರಮಪುಷ್ಪವನ್ನು ಶಿವನಿಗೆ ಅರ್ಪಣೆಮಾಡಿದ ಪ್ರಭಾವದಿಂದಲೇ ಎಂದು ತಿಳಿ. ನಂತರ ಸುರರಾಜನು ಅರ್ಜುನನನ್ನು ಸ್ವರ್ಗಲೋಕಕ್ಕೆ ಕರೆದುಕೊಂಡುಹೋದನು. ಅಲ್ಲಿ ಅರ್ಜುನನು ವಿದ್ಯೋಪದೇಶಪಡೆದ ನಂತರ ದೇವೇಂದ್ರನು

ಅರ್ಜುನಾ ನಿವಾತಕವಚರು ಪೌಲೋಮ ಕಾಲಕೇಯರನ್ನು ನೀನು ಕೊಂದು ಆ ದೈತ್ಯಸಂಹಾರದ ಕಾರ್ಯವನ್ನೇ ನನಗೆ ಗುರುದಕ್ಷಣೆಯಾಗಿ ಸಲ್ಲಿಸು'' ಎಂದು ಹೇಳಿದಂತೆ ಆ ದೈತ್ಯರನ್ನೆಲ್ಲಾ ಕೊಂದು ಆನಂದಪಡಿಸಿದ ಅರ್ಜುನನ ಶರವೇಗವನ್ನು ನಿನ್ನಮಕ್ಕಳು ತಡೆಯಲಾರರು. ಭೀಮಾರ್ಜುನರು ಇಷ್ಟು ಪರಾಕ್ರಮ ಸಿಂಹಗಳಂತಿದ್ದರೂ ಧರ್ಮರಾಜನ ಆಜ್ಞೆಯನ್ನು ಮೀರದಂತೆ ಗುರುಭಕ್ತಿಯಿಂದ ನಡೆಯುತ್ತಾರೆ. ಪಾಂಡವರಲ್ಲಿ ಇಂಥ ಧರ್ಮಜ್ಞಾನ ತುಂಬಿರುವುದರಿಂದಲೇ ಸಕಲ ಚೇತನಾಚೇತನ ಜಗತ್ತಿಗೂ ಸ್ವಾಮಿಯಾದ ಶ್ರೀಕೃಷ್ಣನು ''ಪಾಂಡವರು ನನಗೆ ಪಂಚಪ್ರಾಣ ಎನ್ನುತ್ತಾನೆ. ಪಂಚಪ್ರಾಣಿಗಳಿಗೂ ಕೃಷ್ಣನೋ ಒಡನೆಯನಾದಾಗ್ಯೂ ಕೃಷ್ಣನೇ ಪಾಂಡವರ ಆಧೀನನಂತೆ ಇದ್ದಾನೆ.

ಪಾಂಡವರಲ್ಲಿ ಧರ್ಮಬಲ ಇರುವುದರಿಂದಲೇ ಅವರಿಗೆ ದೇಹಬಲವನ್ನು ದೇವರೇ ಅಮೋಘವಾಗಿ ಕೊಟ್ಟಿದ್ದಾನೆ. ಅವರು ಅಸುರ ಪರಾಕ್ರಮಿಗಳಲ್ಲ. ಸತ್ಯಪರಾಕ್ರಮಿಗಳಾದ್ದರಿಂದ ನಿನ್ನ ಮಕ್ಕಳ ಕ್ಷುಲ್ಲಕ ಪರಾಕ್ರಮ ಅವರನ್ನು ಗೆಲ್ಲಲು ಸಾಧ್ಯವಿಲ್ಲ. ಧೃತರಾಷ್ಟ್ರಾ ನಿನಗೆ ಪುತ್ರಶೋಕ ಉಂಟಾಗಬಾರದೆಂಬ ಅಂತಃಕರುಣದಿಂದ ಈ ಮಾತು ಹೇಳಿದ್ದೇನೆ ಎಂದರೂ ಯಾರಬಾಯಲ್ಲೂ ಪಾಂಡವರಿಗೆ ರಾಜ್ಯಕೊಡುವ ಮಾತೇ ಬರಲಿಲ್ಲ. ಆಗ ಧೌಮ್ಯರು ಇಂಥ ಕಲಿ ಆವೇಶವಿರುವ ಸ್ಥಳದಲ್ಲಿ ಬಹಳಹೊತ್ತು ಇರಬಾರದೆಂಬ ಭಾವದಿಂದ ಅಲ್ಲಿರದೆ ಹೊರಟುಬಂದರು.

ಉಪಪ್ಲಾವ್ಯದಲ್ಲಿ ಶ್ರೀಕೃಷ್ಣನು ಎಲ್ಲರ ಮುಂದೂ ಧೌಮ್ಯರನ್ನು ಕುರಿತು ''ಧೃತರಾಷ್ಟ್ರ ರಾಜ್ಯದಬಗ್ಗೆ ಏನುಹೇಳಿದ?'' ಎಂದು ಪ್ರಶ್ನೆಮಾಡಿದಾಗ ದುರ್ಯೋಧನನು ಪಾಂಡವರಿಗೆ ರಾಜ್ಯಕೊಡುವ ಮಾತೂ ಆಡಲಿಲ್ಲ. ನಾನು ಅವನಮುಂದೆ ಧೃತರಾಷ್ಟ್ರನನ್ನು ಕುರಿತು ಎಷ್ಟು ಉಪದೇಶಮಾಡುತ್ತಿದ್ದರೂ ತಂದೆಮಕ್ಕಳಾರೂ ಪಾಂಡವರು ತಮ್ಮ ರಾಜ್ಯ ತಾವು ವಹಿಸಿಕೊಂಡು ಇರಲಿ'' ಎಂಬ ಮಾತು ಆಡಲಿಲ್ಲ. ದುರ್ಯೋಧನನು ಅಟ್ಟಹಾಸದಿಂದ ಪಾಂಡವರನ್ನು ಅಪಹಾಸ್ಯಮಾಡಿ ನಗುತ್ತಿದ್ದನು'' ಎಂದು ಹೇಳಿದರು. ಶ್ರೀಕೃಷ್ಣನು ಧೌಮ್ಯರ ಬಾಯಿಂದ ಎಲ್ಲಾರಾಜರ ಮುಂದೂ ಕೌರವರ ಕ್ರೂರತನವನ್ನು ಪ್ರಕಟಮಾಡಿಸಿದನಂತರ, ''ಧರ್ಮರಾಜಾ! ನಾನು ಈಗ ದ್ವಾರಾವತಿಗೆ ಹೋಗಬೇಕಾಗಿದೆ ಹೊರಡುತ್ತೇನೆ'' ಎಂದು ಹೇಳಿ ಹೊರಟುಹೋದನು.

## ಶ್ರೀಕೃಷ್ಣ ನನಗಿರಲಿ - ಅಸಂಖ್ಯ ಸೇನಾ ನಿನಗಾಗಲಿ

ಧೌಮ್ಯರು ಪಾಂಡವರ ವೃತ್ತಾಂತವನ್ನು ತಿಳಿಸಿ ಹೊರಟುಹೋದನಂತರ ದುರ್ಯೋಧನನು ಮತ್ಸರ ಮನಸ್ಸಿನಿಂದ ದ್ವೇಶದಿಂದ ದೂಶಿಸುತ್ತ ಪಾಂಡವರು ಒಳಗೊಳಗೇ ನಮ್ಮೊಡನೆ ಯುದ್ಧಮಾಡುವ ಸಿದ್ಧತೆಗಳನ್ನು ನಡೆಸುತ್ತಿದ್ದಾರೆ. ಈಗಾಗಲೇ ಅನೇಕ ವೀರರಾಜರು

ಸೈನ್ಯಸಮೇತರಾಗಿ ಹೋಗಿ ಅಲ್ಲಿ ನೆಲಸಿ ಕತ್ತಿ ಮಸೆಯುತ್ತಿದ್ದಾರೆ. ಮೇಲುನೋಟದಲ್ಲಿ ತಮ್ಮ ಸಭ್ಯತೆ ತೋರಿಸುತ್ತ ಸಂಧಾನದ ಮಾತನಾಡುತ್ತಾರೆ. ಅವರ ಇಂಥ ಅಸಾಧ್ಯವಾದ ಕಾರ್ಯಗಳೆಲ್ಲವೂ ಕೃಷ್ಣನ ಬೆಂಬಲಿದಂದಲೇ ನಡೆಯುತ್ತಿವೆ. ಆ ಕೃಷ್ಣ ಅನೇಕ ಚಾತುರ್ಯಗಳನ್ನು ಬಲ್ಲವನು. ಪಾಂಡವ ಪಕ್ಷಪಾತಿಯಾಗಿ ನಿಂತು ನಮ್ಮನ್ನು ತುಳಿಯಬೇಕೆಂದು ಅವರಿಗೆ ಇಷ್ಟು ಪ್ರಾಬಲ್ಯವನ್ನು ಕೊಟ್ಟು ಮೆರಸುತ್ತಿದ್ದಾನೆ. ಅವರಿಗೆ ಅವನೊಬ್ಬನ ಬಲವಾದರೆ ನಮಗೆ ಭೀಷ್ಮರಂತಹ ವೀರಮಣಿಗಳು ಸಹಸ್ರ ಸಂಖ್ಯೆಯಲ್ಲಿದ್ದಾರೆ. ಎಂಬುದನ್ನು ಅರಿಯದೆ ಪಾಂಡವರು ನಮ್ಮ ಮೇಲೇ ಯುದ್ಧಕ್ಕೆ ಬರುತ್ತಿದ್ದಾರೆ. ಈಗ ನಾವು ಅವರಿಗೆ ಪೂರ್ಣಾಶ್ರಯಕೊಟ್ಟು ಕುಣಿಸುತ್ತಿರುವ ಆ ಕೃಷ್ಣನನ್ನು ನಮ್ಮಕಡೆಗೇ ಸೆಳೆದುಕೊಂಡರೆ ಅವರು ನಿರಾಶ್ರಿತರಾಗಿ ತಮಗೆ ವನವಾಸವೇ ಸಾಕು ಎಂಬ ಭಾವದಿಂದ ಸುಮ್ಮನಾದರೆ ಯುದ್ಧದ ಕಾಳಜಿಯೂ ತಪ್ಪುತ್ತದೆ. ಇದೇ ಸುಲಭೋಪಾಯ'' ಎಂದು ದುರ್ಯೋಧನನು ರಹಸ್ಯವಾಗಿ ಯೋಚಿಸಿ ಕೃಷ್ಣನನ್ನು ತನ್ನವನನ್ನಾಗಿ ವಂಚಿಸಿ ಸೆಳೆದುಕೊಳ್ಳುವ ಕುಹಕಬುದ್ಧಿಯಿಂದ ಹೊರಟನು.

ಗೂಢಚಾರರಿಂದ ಪಾಂಡವರಿಗೆ ದುರ್ಯೋಧನನು ಶ್ರೀಕೃಷ್ಣನನ್ನು ತನಗೆ ಬೆಂಬಲನೀಡಿ ಸಹಕರಿಸಬೇಕೆಂದು ಕೇಳಿಕೊಳ್ಳಲು ಹೊರಟಿದ್ದಾನೆಂದು ತಿಳಿಯಿತು. ಆಗ ಧರ್ಮರಾಯನು ಬೆಚ್ಚಿಬಿದ್ದು ''ಏನು? ದುರ್ಯೋಧನ ಕೃಷ್ಣನ ಸಹಕಾರ ಕೇಳಲು ಹೋಗುತ್ತಾನಾ? ಭೀಮಾ! ನಮ್ಮ ಶ್ರೀಕೃಷ್ಣ ಭಕ್ತವತ್ಸಲ ಕರುಣಾಮಯಿ ದುರ್ಯೋಧನನು ಶರಣಾಗತನಾದಾಗ ನಮ್ಮ ಕೈಬಿಟ್ಟುಬಿಟ್ಟರೆ ನಮ್ಮ ಗತಿಏನು?'' ಎಂದು ಶೋಕತಪ್ತನಾಗಲು ಭೀಮನು ನಗುತ್ತ ಅಣ್ಣ ಶ್ರೀಕೃಷ್ಣನನ್ನು ಸ್ವಚ್ಛಜ್ಞಾನದಿಂದ ನಿಸ್ವಾರ್ಥರಾಗಿ ನಂಬಿದವರಿಗೆ ಮಾತ್ರ ಅವನ ಕರುಣಾಸಂಪತ್ತು ಸಿಗುತ್ತದೆ. ಅಸೂಯೆಯಿಂದ ಅವನನ್ನು ಬೂಟಾಟಿಕೆಯ ಸ್ನೇಹದಿಂದ ಒಲಿಸಿಕೊಳ್ಳಲು ಪ್ರಯತ್ನಪಟ್ಟರೆ ಅವನು ಅಷ್ಟು ಸುಲಭನೇ?'' ಎಂದು ಸಮಾಧಾನ ಮಾಡಿದಾಗ್ಯೂ ಧರ್ಮರಾಜನು ಕಳವಳದಿಂದ ''ಅರ್ಜುನಾ! ನೀನು ದುರ್ಯೋಧನನಿಗಿಂತಲೂ ಮೊದಲು ಶ್ರೀಕೃಷ್ಣನ ಬಳಿಗೆ ಹೋಗಿ ಶರಣುಹೊಕ್ಕು ನಿನ್ನನ್ನು ನಂಬಿರುವ ನಮ್ಮಿಂದ ದೂರವಾಗಬೇಡ'' ಎಂದು ಪ್ರಾರ್ಥಿಸಿಕೊ'' ಎಂದು ಹೇಳಿಕಳುಹಿಸಿದನು.

ಅರ್ಜುನನು ಸದಾ ತನ್ನ ಮನೋಮಾಣಿಕ್ಯಮಂಟಪದಲ್ಲಿ ಶ್ರೀಕೃಷ್ಣಮೂರ್ತಿಯನ್ನು ಸ್ಥಾಪಿಸಿಕೊಂಡು ಭಕ್ತಿಪಾಶದಿಂದ ಬಂಧಿಸಿಟ್ಟುಕೊಂಡಿರುವ. ನಮ್ಮನ್ನು ಕೃಷ್ಣ ಬಿಡುವುದಿಲ್ಲ. ಎಂಬ ದೃಢಭಾವದಿಂದಿದ್ದನು. ಸರ್ವಾಂತರ್ಯಾಮಿಯೂ ಸರ್ವವ್ಯಾಪ್ತನೂ ಆದ ಸ್ವಾಮಿ ಅವನಲ್ಲೂ ಇದ್ದಾನೆ. ನನ್ನಲ್ಲೂ ಇದ್ದಾನೆ. ಅವರವರ ಅಂತರ್ಭಾವವನ್ನು ಅರಿತು ಅವರವರಿಗೆ ತಕ್ಕಂತೆ ಸಿಗುತ್ತಾನೆ. ಎಂದು ಚಿಂತಿಸುತ್ತ ಶ್ರೀಕೃಷ್ಣನಲ್ಲಿ ಪೂರ್ಣನಂಬಿಕೆಯಿಟ್ಟು ಹೊರಟುಬರುತ್ತಿದ್ದನು. ಮುಂಚಿತವಾಗಿಯೇ ಹೊರಟಿದ್ದ ದುರ್ಯೋಧನನು ದ್ವಾರಕೆಗೆ ಬಂದನು. ಅಸುರರಿಗೆ ಅಜ್ಞಾನವನ್ನೇ ಕೊಡುವ ಸ್ವಾಮಿ ಯೋಗನಿದ್ರಾಮುದ್ರಿತನಾಗಿರುವುದನ್ನು ನೋಡಿ

''ಕೃಷ್ಣ ಮಲಗಿದ್ದಾನೆ. ಅವನು ನಿದ್ರೆಯಿಂದ ಎಚ್ಚರಗೊಳ್ಳುವವರೆಗೂ ಕಾಯಬೇಕಲ್ಲಾ ಎಂಬ ಭಾವದಿಂದ ಅವನನ್ನು ನೋಡಿ ನಾನೀಗ ಅವನನ್ನು ಆಕರ್ಶಣಮಾಡಲಿಕ್ಕಾಗಿ ಅವನಿಗೆ ವಿನಯತೋರಿಸಲಿಕ್ಕಾಗಿ ಕಾಯಬೇಕು ಎಂದುಕೊಂಡನು. ಶ್ರೀಕೃಷ್ಣನು ಶುಭಾಂಗನೆಂದೂ ಋಚಿರಾಂಗದನೆಂದೂ ತಿಳಿಯದ ಅಜ್ಞಾನಿಯು ಶ್ರೀಕೃಷ್ಣನ ಮಂಗಳಾಂಗಗಳಲ್ಲಿ ಭೇದವನ್ನು ಕಲ್ಪಿಸಿ ಅವನ ಪಾದಾಶ್ರಯದಲ್ಲಿ ಕುಳಿತುಕೊಳ್ಳುವುದು ಹೀನಾಯವೆಂದರಿತು, ಶಿರೋಭಾಗದ ಕಡೆಗೆ ರಾಜಠೀವಿಯಿಂದ ಕುಳಿತಿದ್ದನು. ಅರ್ಜುನನು ದ್ವಾರಕಾಪುರವೇ ದೇವಮಂದಿರವೆಂದು ತಿಳಿದು ಅದರ ಹೆಬ್ಬಾಗಿಲಲ್ಲೇ ನಮಸ್ಕಾರಮಾಡಿ ಶ್ರೀಕೃಷ್ಣನ ಮಂದಿರದ ಗರ್ಭಗುಡಿಯೊಳಗೆ ಭಕ್ತಿಯಿಂದ ಪ್ರವೇಶಮಾಡಿ ಮೊದಲು ಪಾದದರ್ಶನಮಾಡಿ ನಮಸ್ಕಾರಮಾಡಿ ಪಾದದಡಿಯಲ್ಲೇ ಧ್ಯಾನಾಸಕ್ತನಾಗಿ ಕುಳಿತಿದ್ದನು.

ಕೆಲವು ವೇಳೆ ಆದನಂತರ ಶ್ರೀಕೃಷ್ಣನು ಎಚ್ಚರಹೊಂದಿದವನಂತೆ ಕಣ್ತೆರೆದವನೇ ಪಾರ್ಥನಮೇಲೆ ದೃಷ್ಠಿಹಾಯಿಸಿದವನಂತೆ ತೋರಿ ''ಓಹೋ! ಏನು ಅರ್ಜುನಾ? ಯಾವಾಗ ಬಂದಿ?'' ಎಂದನು. ಆಗ ದುರ್ಯೋಧನನು ಮೊದಲೇ ಅರ್ಜುನನನ್ನು ನೋಡಿ ಮಾತನಾಡಿಸುತ್ತಿದ್ದಾನೆ. ನಾನು ಅವನಿಗಿಂತಲೂ ಮೊದಲೇ ಬಂದು ಕಾದಿದ್ದರೂ ವ್ಯರ್ಥವಾಯಿತೆಂಬ ಕ್ರೋಧದಿಂದ ''ಕೃಷ್ಣಾ! ನಾನೂ ನಿನ್ನನ್ನು ಕಾಣಲಿಕ್ಕಾಗಿ ಮೊದಲೇ ಬಂದು ಕಾದಿದ್ದೇನೆ'' ಎಂದು ಅನಂತನೇತ್ರನಾದ ಸ್ವಾಮಿಗೆ ಅಪೂರ್ಣತೆಯನ್ನು ತೋರಿಸಿ ಮಾತನಾಡಿದನು. ಆಗ ಕೃಷ್ಣನು ಓಹೋ ಕುರುಪತಿಯೂ ಬಂದಿರುವೆಯಾ? ಬಹಳ ಸಂತೋಷ. ವುಭಯತರೂ ಬಂದಕಾರಣ ತಿಳಿಸಿರಿ'' ಎಂದನು. ಆಗ ದುರ್ಯೋಧನನು ''ಕೃಷ್ಣಾ! ಸಮರ ಸಂಭವವಾದರೆ ನೀನು ಬೇರಾವ ಪಕ್ಷಕ್ಕು ಹೋಗದೆ ನಮ್ಮ ಪಕ್ಷದಲ್ಲೇ ಇರಬೇಕು'' ಎಂದನು.

ನಂತರ ಅರ್ಜುನನು ''ಕೃಷ್ಣಾ! ನೀನು ನಮ್ಮ ಸಕಲ ಕಷ್ಟಸುಖಗಳ ತಾಕಲಾಟಗಳಲ್ಲೂ ನಮ್ಮ ಇಡೀ ಜೀವನದ ಹೋರಾಟದಲ್ಲೂ ನಮ್ಮನ್ನು ಅಗಲಿಹೋಗದೆ ಅಂದರೆ ಅಜ್ಞಾನ ಕೊಡದೆ ನಮ್ಮಲ್ಲಿ ಸ್ಥಿರಗೊಂಡಿರಬೇಕೆಂಬುದನ್ನು ಕೇಳಲಿಕ್ಕಾಗಿಯೇ ಬಂದಿರುವೆನು. ನಮಗೆ ನಿನ್ನ ಸ್ಮರಣೆಯೇ ಸರ್ವಸಂಪತ್ತು'' ಎಂದನು. ಕೃಷ್ಣನು ''ನನ್ನನ್ನೇಕೆ ನೀವಿಬ್ಬರೂ ಇಷ್ಟು ಕೇಳುತ್ತಿದ್ದೀರಿ? ನಾನು ಯುದ್ಧ ಮಾಡುವವನಲ್ಲ. ನನ್ನಲ್ಲಿ ಸೇನಾಬಲವೂ ಇಲ್ಲ. ನನ್ನಿಂದ ಏನೂ ಪ್ರಯೋಜನವಿಲ್ಲ. ನನ್ನ ಅಣ್ಣ ಬಲರಾಮ ಇದ್ದಾನೆ. ಅವನಬಲ ಅಸಮಾನ್ಯವಾದದ್ದು ಅವನ ಬಳಿ ಇರುವ ಸೇನೆಯೋ ಅಪಾರ. ಆದ್ದರಿಂದ ನೀವಿಬ್ಬರೂ ಯೋಚಿಸಿರಿ. ನಿಮಗೆ ಬಲರಾಮ ನಾರಾಯಣೀ ಸೇನಾಸಾಗರ ಬೇಕೊ? ನಾನು ಬೇಕೊ?'' ಎಂದನು. ಆಗ ಅರ್ಜುನನು ಬೇಗ ''ಕೃಷ್ಣಾ! ನಾವು ನಿರಾಶ್ರಿತರು. ನಿನ್ನ ಆಶ್ರಯ ಒಂದಿದ್ದರೆ ಹೇಗೋ ಹಾಗೆ ಬದುಕಿರಬಲ್ಲೆವು. ಅಪಾರ ಸೈನ್ಯದ ಆಸೆ ನನಗಿಲ್ಲ'' ನೀನೊಬ್ಬನೇ ನಮಗೆ ಸಮಸ್ತಬಲ''

ಎಂದನು. ದುರ್ಯೋಧನನು ಆಗ ಕೃಷ್ಣನು ನಿರಾಯುಧನಾಗಿದ್ದಾನೆ. ಅವನೀಗ ಯುದ್ಧವನ್ನು ಮಾಡುವುದಿಲ್ಲವೆಂದು ಬೇರೆ ಹೇಳುತ್ತಾನೆ. ಅವನನ್ನು ಏಕೆ ಆಶಿಸಬೇಕು. ಬಲರಾಮನಾದರೋ ಬಲಾಧಿಕ್ಯನಾಗಿದ್ದಾನೆ. ಹತ್ತುಲಕ್ಷ ಸಂಖ್ಯೆ ವೀರವಿಕ್ರಮಶೂರರಾದ ನಾರಾಯಣೀ ಸೈನ್ಯ ಅವನ ಸ್ವಾಧೀನಕ್ಕೆ ಕೃಷ್ಣ ಒಪ್ಪಿಸಿದ್ದಾನೆ. ಆ ಬಲಸಂಪತ್ತು ದೊರಕುವಾಗ ಕೃಷ್ಣನಿಂದ ನನಗೇನಾಗಬೇಕಾಗಿದೆ. ಅವನು ಪಾಂಡವರ ಬಳಿಯಲ್ಲೇ ಇರಲಿ. ಬೇಡವೆಂದವರಾರು? ಎಂದುಕೊಂಡು, ''ಕೃಷ್ಣಾ! ನೀನು ಎಷ್ಟಾದರೂ ಪಾಂಡವ ಪಕ್ಷಪಾತಿ. ಅವರ ಕಡೆಗೇ ಹೋಗು. ನನಗೆ ನಾರಾಯಣೀಸೈನ್ಯದ ಬಲವನ್ನಾದರೂ ಕೊಡು'' ಎಂದು ವಾಗ್ದಾನಪಡೆದು ಬಲರಾಮನ ಬಳಿಗೆಬಂದು ''ಬಲರಾಮಾ! ನಾನು ಕೃಷ್ಣನನ್ನು ಕೇಳಿ ನಾರಾಯಣೀಸೇನಾಬಲವನ್ನು ನನ್ನದನ್ನಾಗಿ ಮಾಡಿಕೊಂಡಿದ್ದೇನೆ. ಅವರ ಜೊತೆಗೆ ನಿನ್ನ ಬೆಂಬಲವೂ ಇದ್ದರೆ ನನಗೆ ಸೋಲಿನ ಭಯವಿಲ್ಲ. ನನ್ನ ಪ್ರಾರ್ಥನೆ ಒಪ್ಪಿಕೊ'' ಎಂದನು. ''ದುರ್ಯೋಧನಾ! ನಾನು ಶ್ರೀಕೃಷ್ಣನಿಗೆ ಎಂದೂ ವಿರೋಧಪಕ್ಷದಲ್ಲಿ ನಿಂತು ದ್ರೋಹಮಾಡತಕ್ಕವನಲ್ಲ. ನನಗೆ ನೀನೂ ಬೇಕು. ಕೃಷ್ಣನು ಮುಖ್ಯವಾಗಿ ನನಗೆ ಬೇಕಾಗಿರುವುದರಿಂದ ನಾನು ಯಾರ ಪಕ್ಷವನ್ನು ವಹಿಸದೆ ತೀರ್ಥಯಾತ್ರೆಗೆಂದು ಹೊರಟುಹೋಗುತ್ತೇನೆ'' ಎಂದುಬಿಟ್ಟನು.

ದುರ್ಯೋಧನನು ಬಲರಾಮಕೃಷ್ಣರ ಅನುಮತಿಯಂತೆ ಕೃತವರ್ಮನಬಳಿಗೆ ಹೋಗಿ ಅವನಿಂದ ಒಂದು ಅಕ್ಷೋಹಿಣಿಸೈನ್ಯವನ್ನು ಪಡೆದು ಸದಾಸಮೇತನಾಗಿ ಸಂತೋಷದಿಂದ ಗಜಪುರಿಗೆ ಬಂದನು.

ಭೀಷ್ಮಾದಿಗಳು ದುರ್ಯೋಧನನು ಪಾಂಡವರಮೇಲೆ ಯುದ್ಧಕ್ಕೆನಿಂತು ಅವರನ್ನುನಿರ್ಮೂಲಮಾಡಲು ಕುಕೃತ್ಯಗಳನ್ನು ನಡೆಸುತ್ತಿರುವುದು ಚೆನ್ನಾಗಿತಿಳಿದಿದ್ದರು. ಆದರೆ ಅವರಲ್ಲಿ ಕಲಿ ಆವೇಶಇದ್ದುದು ಒಂದುಕಾರಣವಾದರೆ ಮೊದಲಿನಿಂದಲೂ ಧೃತರಾಷ್ಟ್ರ ಕುರುಡನೆಂಬ ಕರುಣದಿಂದ ಅವನ ಬಳಿ ಇದ್ದುದುರಂತಕಾಲದಲ್ಲಿ ಅವನನ್ನು ಬಿಟ್ಟುಹೋಗುವುದು ಸರಿಯಲ್ಲವೆಂದುಯೋಚಿಸಿ ದುರ್ಯೋಧನನಿಗೆ ಕೈಬೊಂಬೆಗಳಂತಾಗಿ ಅವನು ಹೇಳಿದಂತೆ ಕುಣಿಯುತ್ತಿದ್ದರು.

ದುರ್ಯೋಧನನು ಹನ್ನೊಂದು ಅಕ್ಷೋಹಿಣಿ ಸೈನ್ಯವನ್ನು ಕೂಡಿಸಿದನು. ಶಲ್ಯನು ತನ್ನ ಅಮೋಘಸೇನಾನಿಕರದೊಂದಿಗೆ ಪಾಂಡವರಿಗೆ ಬೆಂಬಲಕೊಡಲುಹೊರಟ್ಟಿದ್ದಾನೆಂಬುದನ್ನು ಗೂಢಚಾರದಿಂದತಿಳಿದ ಕುರುಪತಿಯು ಶಲ್ಯನು ಬರುವಮಾರ್ಗದಲ್ಲಿವಿಧ ವಿಧವಾದ ಸತ್ಕಾರಗಳು ಸ್ವಾಗತಸಮಾರಂಭಗಳು ನಡೆಯುವಂತೆ ವ್ಯವಸ್ಥೆಮಾಡಿದನು. ಉಪಪ್ಲಾವ್ಯಪುರಕ್ಕೆ ಪಾಂಡವರಬಳಿಗೆ ಹೊರಟ ಶಲ್ಯನುದಾರಿಯಲ್ಲಿ ವೈಭವೋಪೇತನಾಗಿ ನಡೆಯುತ್ತಿರುವ ಊಟೋಪಚಾರಗಳು ವಿಶ್ರಾಂತಿನಿಲಯಗಳ ವೈಭವಗಳು ಮಾರ್ಗದುದ್ದಕ್ಕು ಶಲ್ಯ

ಮಹಾರಾಜನನ್ನೇ ಹಾಡಿಹೊಗಳಿ ಕೊಂಡಾಡುವ ಪ್ರಶಂನಾವಳಿಗಳು ಎಲ್ಲವನ್ನುನೋಡಿ ಹರ್ಷದಿಂದ ಹಿಗ್ಗಿ ಎಲ್ಲವನ್ನುಅನುಭವಿಸುತ್ತ ಬಂದನು.

ಅದು ದುರ್ಯೋಧನನ ಸ್ವಾರ್ಥಕ್ಕಾಗಿ ನಡೆಸಿದ ಕೃತ್ರಿಮ ಸತ್ಕಾರವೆಂದು ತಿಳಿದನಂತರ ಪಶ್ಚಾತ್ತಾಪಪಟ್ಟನು. ದುರ್ಯೋದನನು ಬಂದು ತನ್ನ ಸೆಳೆತದ ಮಾತುಗಳಿಂದ ಕಾಲಿಗೆಬೀಳಲು ದುಷ್ಟರ ಬಲೆಯಲ್ಲಿಸಿಕ್ಕಶಲ್ಯ ನೊಂದು ''ದುರ್ಯೋದನಾ ನಾನು ಈಗ ಹೊರಟಿರುವುದು ಪಾಂಡವರ ಭೇಟಿಗಾಗಿ ಅವರನ್ನು ನೋಡಿಕೊಂಡು ಬರುತ್ತೇನೆ'' ಎಂದು ಮಾತುಕೊಟ್ಟು ಪಾಂಡವರ ಬಳಿಗೆ ಬಂದನು.

''ಧರ್ಮರಾಜ ನನ್ನ ಆತ್ಮೀಯಬಂಧುಗಳಾದ ನಿಮ್ಮ ಸಹಾಯಕ್ಕಾಗಿ ನಾನು ಚತುರಂಗಸೇನೆಯೊಡನೆ ಬರುತ್ತಿರುವಾಗ ದುರ್ಯೋಧನನು ತನ್ನ ಸತ್ಕಾರದ ಸೆಳೆತದಿಂದ ಸಿಕ್ಕಿಸಿಕೊಂಡು ಪಾಪದಬಲೆಯಲ್ಲಿ ಸೇರುವಂತೆ ಕುತಂತ್ರನಡೆಸಿದನು ನಿಮ್ಮ ಶತ್ರುಪಕ್ಷದಲ್ಲಿ ನಿಂತು ನಾನು ಯುದ್ಧಮಾಡುವ ಸಂಭವ ಒದಗಿತು'' ಎಂದು ದಃಖಪಟ್ಟನು

ಪಾಂಡವರಿಗೆ ಅದರಿಂದ ಮಹಾನಷ್ಟವಾಯಿತೆಂದು ದುಃಖವಾಗಲಿಲ್ಲ ''ಶಲ್ಯಾ! ಖೇದಪಡಬೇಡ ನಮಗೆ ಶ್ರೀಕೃಷ್ಣನ ರಕ್ಷಾಕವಚವೇ ಲಭ್ಯವಾಗಿರುವಾಗ ಚಿಂತೆಏಕೆ ? ನಿನ್ನ ಅಭಿಮಾನ ನಮಗಿರುವುದರಿಂದ ನಿನ್ನಮನಸ್ಸು ನಮಗೆಕೊಟ್ಟು ಬರೀ ದೇಹಮಾತ್ರ ಅವನ ವಶವಾದಂತಾಯಿತು. ಆದ್ದರಿಂದ ಅವರಪಕ್ಷದಲ್ಲಿದ್ದರೂ ನಮಗೆ ನಿನ್ನಉಪಕಾರ ಸಿಕ್ಕೇಸಿಗುತ್ತದೆ ಕರ್ಣನಿಗೆ ಪರಶುರಾಮರ ಶಾಪವಿರುವಂತೆ ಅವನಿಗೆ ನಮ್ಮಮೇಲೆ ಸ್ಪರ್ಧೆಹುಟ್ಟುವಂತೆಮಾಡು. ಕ್ಷಣಕ್ಷಣಕ್ಕೂ ಅವನ ವಿರೋಧಪಕ್ಷವನ್ನು ಹೊಗಳುತ್ತ ಅವನ ರಣದುತ್ಸಾಹ ಕುಗ್ಗುವಂತೆ ಮಾಡಬೇಕು'' ಎಂದು ಕರ್ಣನ ದೌರ್ಬಲ್ಯದ ರಹಸ್ಯ ತಿಳಿಸಿದರು.

## ಗತಲೋಚನನ ಸ್ವಾರ್ಥಪ್ರಲಾಪ

ಧೃತರಾಷ್ಟ್ರನಿಗೆ ಧೌಮ್ಯರಿಂದ ಪಾಂಡವರ ವೃತ್ತಾಂತ ತಿಳಿದಾಗಿನಿಂದಲೂ ಭಯಪರಿತಾಪದಿಂದ ಪರಿತಪಿಸುತ್ತಿದ್ದನು. ಪಾಂಡವರು ಈಗ ಕೆರಳಿದ ಸಿಂಹಗಳಂತಿದ್ದಾರೆ. ಅವರು ನಡೆಸುತ್ತಿರುವ ಯುದ್ಧದ ಸಿದ್ಧತೆಗಳನ್ನು ಕೇಳಿದರೇ ಭಯವಾಗುತ್ತದೆ. ಹದಿಮೂರು ವರ್ಷಗಳಿಂದಲೂ ರಾಜ್ಯಭ್ರಷ್ಟನಾಗಿ ಕಾಡಿನಲ್ಲಿ ಅಲೆಯುತ್ತಿದ್ದವರು ಮೂರುದಿನಗಳಲ್ಲಿ ಸೇನಾಸಾಗರವನ್ನೇ ಸಜ್ಜುಗೊಳಿಸಿ ಯುದ್ಧಕ್ಕೆ ಕಾಯುತ್ತಿದ್ದಾರೆಂದರೆ ಅವರ ಪ್ರತಿಭೆಯನ್ನು ಎಷ್ಟುಹೊಗಳಿದರೆ ತಾನೇ ಸಾಕಾದೀತು?

ಈಗ ಏನಾದರೂ ಮಾಡಿ ಧರ್ಮರಾಜನನ್ನು ಕೇಳಿಕೊಂಡು ಯುದ್ಧನಿಲ್ಲಿಸಿ ನನ್ನ ಮಕ್ಕಳಿಗೆ ಬರುವ ವಿಪತ್ತನ್ನು ಪರಿಹಾರಮಾಡಬೇಕು. ಇಲ್ಲದಿದ್ದರೆ ಒಬ್ಬರೂ ಉಳಿಯುವುದಿಲ್ಲ

ಎಂದು ಯೋಚಿಸಿ ಸಂಜಯನನ್ನು ಕರೆಸಿಕೊಂಡು ''ಸಂಜಯಾ! ನೀನು ಧರ್ಮರಾಜನಬಳಿಗೆ ಹೋಗಿ ಅವನಿಗೆ ಕರುಣೆಹುಟ್ಟುವಂತೆಮಾತನಾಡಿ ಯುದ್ಧನಡೆಯದಂತೆ ಮಾಡಿಬಾ'' ಎಂದು ಹೇಳಿಕಳುಹಿಸಿದನು.

ಸಂಜಯನು ಪಾಂಡವರಬಳಿಗೆ ಬಂದು ಸ್ನೇಹಪರವಾಗಿ ಮಾತುಕಥೆಗಳಾದನಂತರ ಧರ್ಮರಾಜನನ್ನುಕುರಿತು ಧರ್ಮರಾಜಾ! ಹತ್ತಿ ಉರಿಯುವ ಯುದ್ಧವೆಂಬ ಮಹಾಜ್ವಾಲೆಯನ್ನು ಕ್ಷಮೆ ಎಂಬ ತಂಪುನೀರಿನಿಂದ ಶಾಂತಪಡಿಸು ಈಗ ನೀವು ಅನೇಕ ತೀರ್ಥಕ್ಷೇತ್ರಗಳ ಸಂಪರ್ಕದಿಂದಲೂ ಅನೇಕ ಋಷಿಮುನಿಗಳ ಉಪದೇಶದಿಂದಲೂ ಜಪತಪಾದಿಗಳಿಂದಲೂ ಯೋಗೀಶ್ವರರಾಗಿ ಅಗ್ನಿಯಂತೆ ಪವಿತ್ರಾತ್ಮರಾಗಿ ಬೆಳಗುತ್ತಿರುವುದರಿಂದ ಯುದ್ಧದಿಂದ ಪ್ರಾಣಹತ್ಯದ ಪಾಪಕ್ಕೆ ಒಳಗಾಗದೆ ಶಾಂತರೀತಿಯಿಂದ ದುರ್ಯೋಧನನನ್ನು ಕ್ಷಮಿಸಿ ಕುಲಕ್ಷಯಕ್ಕೆ ಕಾರಣವಾದ ಯುದ್ಧಕ್ಕೆ ಮನಕೊಡದೆ ಶಾಂತತೆ ನೆಲೆಗೊಳ್ಳುವಂತೆ ಮಾಡಬೇಕೆಂದು ನಿಮ್ಮ ದೊಡ್ಡಪ್ಪ ನಿಮಗೆ ತಿಳಿಸಲು ನನ್ನನ್ನು ಕಳುಹಿಸಿದ್ದಾನೆ'' ಎಂದನು. ಧರ್ಮರಾಜನು ಧೃತರಾಷ್ಟ್ರನು ಯುದ್ಧಕ್ಕೆ ಬರಬೇಡಿರಿ. ರಾಜ್ಯದ ಆಸೆಬಿಟ್ಟು ನಿಮ್ಮಪಾಡಿಗೆ ನೀವು ಕಾಡಿನಲ್ಲೇ ಇದ್ದುಬಿಡಿ. ನೀವೇನಾದರೂ ಈಗ ಯುದ್ಧಕ್ಕೆ ಬಂದರೆ ನನಗೆ ಕುಲಕ್ಷಯದ ಸಂಕಟ ತಪ್ಪಿದ್ದಲ್ಲ ಎಂದು ಸಂಜಯನೊಂದಿಗೆ ಹೇಳಿಕಳುಹಿಸಿದ್ದಾನೆ.

ಅಪರೋಕ್ಷಜ್ಞಾನಿಯಾದ ಭೀಮನು. ಮುಂದಿನ ಈ ಭವಿಷ್ಯವನ್ನರಿತೇ ಅಂದು ನನ್ನ ಕೈಲಿ ಪ್ರತಿಜ್ಞೆಮಾಡಿಸಿದ್ದಾನೆ. ಈಗನಾನು ಪ್ರತಿಜ್ಞೆಗೆ ತಪ್ಪದೆಯುದ್ಧವನ್ನೇ ಮಾಡಬೇಕು ಎಂದು ಯೋಚಿಸಿದ ಧರ್ಮರಾಯನು ಸಂಜಯನನ್ನು ಕುರಿತು ''ಸಂಜಯಾ! ಕುಲಕ್ಷಯ ಮಾಡಬಾರದೆಂಬ ಧರ್ಮದಿಂದಲೇ ದುರ್ಯೋಧನನು ಮೋಸದ ಜೂಜಿನಲ್ಲಿ ರಾಜ್ಯ ಅಪಹರಿಸಿ ನಮ್ಮನು ಅರಣ್ಯವಾಸಕ್ಕೆ ಕಳುಹಿಸಿದರೂ ಯುದ್ಧದಗೂಡವೆಗೆ ಹೋಗದೆ ಅವನಮಾತಿನಂತೆ ಹನ್ನೆರಡುವರ್ಷವನವಾಸ ಒಂದುವರ್ಷ ಅಜ್ಞಾತವಾಸ ಮುಗಿಸಿದ್ದೇನೆ ಈಗ ಅವನಮಾತಿನಂತೆ ನಮ್ಮರಾಜ್ಯನಮಗೆಕೊಟ್ಟರೆ ಯುದ್ಧಕ್ಕೆ ಆಸ್ಪದವಿಲ್ಲದೆ ಶಾಂತತೆಯಿಂದ ಇರಬಹುದು. ಧೃತರಾಷ್ಟ್ರನಿಗೆ ಯುದ್ಧನಡೆಯಬಾರದೆಂಬ ಧ್ಯೇಯವಿದ್ದರೆ ಮಾತಿನಂತೆ ನಡೆಯಲು ಮಕ್ಕಳಿಗೆ ತಿಳಿಸಲು ಹೇಳು. ರಾಜ್ಯವನ್ನೂ ಕೊಡುವುದಿಲ್ಲ. ಯುದ್ಧವನ್ನು ಮಾಡುವುದು ಬೇಡ ಎಂಬ ಧರ್ಮಹೀನರಮಾತನ್ನುಕೇಳಿದರೆ ಪಾಪವೇ ಬರುತ್ತದೆ. ಆದ್ದರಿಂದ ಧರ್ಮರಕ್ಷಣೆಗಾಗಿ ಯುದ್ಧಮಾಡಿದರೆ ಪಾಪವಿಲ್ಲ ಯುದ್ಧವೇನಡೆಯುತ್ತದೆ'' ಎಂದು ಹೇಳಿಬಿಡು ಎಂದು ಧರ್ಮರಾಜನು ಹೇಳಿಕಳುಹಿಸಿದನು.

ಧರ್ಮರಾಜನು ಹೀಗೆ ಖಡಾಖಂಡಿತವಾಗಿ ಮಾತನಾಡಿದ್ದು ಸಂಜಯನಿಗೆ ಆನಂದವೂಆಯಿತು. ಆಶ್ಚರ್ಯವೂಆಯಿತು. ಧರ್ಮರಾಜಾ ನಿನ್ನಮಾತು ಪ್ರಮಾಣಪೂರ್ವಕವಾದದ್ದು ಎಂದು ಹೇಳಿ ಹೊರಟುಹೋದನು.

ಶ್ರೀಕೃಷ್ಣನು ಭೀಮಸೇನಾ! ಧರ್ಮರಾಜನು ಮುನಿವೃತ್ತಿಯನ್ನು ತ್ಯಜಿಸಿಕ್ಷತ್ರಧರ್ಮದ ವೀರಾವೇಶವನ್ನು ಅವಲಂಬಿಸುವಂತೆನೀನು ಅವನ ವೈರಾಗ್ಯವಾಣಿಗೆ ಬೀಗಮುದ್ರಿಕೆ ಒತ್ತಿ ವೀರರಸ ಹೊರಹೊಮ್ಮಿಬರುವಂತೆಮಾಡಿರುವ ನಿನ್ನ ಬುದ್ಧಿಚಾತುರ್ಯವನ್ನು ಹೊಗಳಲೇಬೇಕು ಎಂದನು. ಸಂಜಯನು ಉಪಪ್ಲಾವ್ಯನಗರದಿಂದ ಹಸ್ತಿನಾವತಿಗೆ ಹೊರಟು ಊರುಸೇರಿದಾಗ ಅಸ್ತಮಾನವಾಗಿತ್ತು ಆಗಲೇ ಧೃತರಾಷ್ಟ್ರನು ಸಂಜಯನನ್ನು ಕರೆಸಿಕೊಂಡು ಸಂಜಯಾ! ಹೋದಕಾರ್ಯವಿನಾಯಿತು ಬೇಗ ಹೇಳು ಎಂದು ಕಾತುರದಿಂದ ಕೇಳಿದನು.

ಸಂಜಯನು ''ಧೃತರಾಷ್ಟ್ರ! ಮುಖ್ಯಸಂಗತಿ ತಿಳಿಸಬೇಕೆಂದರೆ ಯುದ್ಧ ಧೃತರಾಷ್ಟ್ರನಿಗೆ ಇಷ್ಟವಿಲ್ಲದಿದ್ದರೆ ರಾಜ್ಯಹಿಂದಿರುಗಿಸಿಕೊಡಿಸಲಿ ದುರ್ಯೋಧನನು ಬಂಡತನದಿಂದ ನಡೆದರೆ ನಾವೂ ಬಂಡರಾಗಿಯೇ ಅವನ ಸೊಕ್ಕನ್ನುಮುರಿಯಬೇಕು ಸಂಧಾನವೋ? ಸಮರವೋ? ಯಾವುದನ್ನು ಧೃತರಾಷ್ಟ್ರ ನಿರ್ಧರಿಸಿದ್ದಾನೆ? ಕೇಳು'' ಎಂದು ತಿಳಿಸಿದರು. ಇನ್ನು ವಿಸ್ತಾರವಾಗಿ ತಿಳಿಸಬೇಕೆಂದರೆ ನಾಳೆ ಸಭೆಸೇರಿಸು ಎಲ್ಲರಮುಂದೆ ಹೇಳುತ್ತೇನೆ. ಮುಖ್ಯವಾಗಿ ನೀನು ತಿಳಿಯುವುದೆಂದರೆ ಸೌಜನ್ಯದಿಂದ ನಡೆದರೆ ಸುಖ. ವಿರೋಧದಿಂದನಡೆದರೆ ಸಮರತಪ್ಪಿದ್ದಲ್ಲ ''ಎಂದು ಅವರಿಂದ ತಿಳಿದು ಬಂದೆನು'' ಎಂದು ಹೇಳಿದನು

ಸಂಜಯನು ತಂದ ಉತ್ತರದಿಂದ ಗತಲೋಚನನು ಸಹಿಸಲಾರದ ಸಂಕಟಕ್ಕೀಡಾದನು. ರಾತ್ರಿಮಲಗಿ ಕಣ್ಮುಚ್ಚಿದರೆ ಸಾಕು ಭೀಮನಗದೆ ಎದುರಿಗೆ ಬಂದುನಿಂತಂತಾಗುತ್ತಿತ್ತು. ಧೃತರಾಷ್ಟ್ರನು ಬಾಹ್ಯದೃಷ್ಟಿಯಿಂದ ಕುರುಡನಾಗಿ ಸದಾ ಕಣ್ಮುಚ್ಚಿರುತ್ತಿದ್ದನು. ಒಳದೃಷ್ಟಿಯಲ್ಲಿ ತನ್ನ ಮಕ್ಕಳಬಗ್ಗೆ ಏನೇನೋ ಆಶಾಗೋಪುರಕಟ್ಟಿ ವಿಹರಿಸುತ್ತಿದ್ದನು. ಈಗ ಆ ಗೋಪುರ ಕುಸಿದುಬಿತ್ತು. ಅವನ ಭವಿಷ್ಯವೂ ಕುಸಿಯಿತು. ಕಳವಳದಿಂದ ಕಂಗಾಲಾದನು. ಕ್ಷಣ ಕ್ಷಣಕ್ಕೂ ಮಕ್ಕಳ ಮರಣಕ್ಕೆ ಕಾದಿರುವ ರಣಮಾರಿ ಹತ್ತಿರ ಹತ್ತಿರಕ್ಕೆಬಂದು ಹಲವು ಬಗೆಯಲ್ಲಿ ಪೀಡಿಸತೊಡಗಿದಾಗ ಬಹಳಹೆದರಿದನು. ನನ್ನ ಈ ಅಂತರಂಗದಲ್ಲಿ ಹತ್ತಿಉರಿಯುತ್ತಿರುವ ಬೇಗೆಯನ್ನು ವಿದುರನು ತನ್ನ ಆತ್ಮೀಯವಾದ ನುಡಿಗಳಿಂದ ಆರಿಸುತ್ತಾನೆಂಬ ಅಭಿಲಾಷೆಯಿಂದ ಕರೆಸಿಕೊಂಡನು.

ವಿದುರನನ್ನು ಆಲಂಗಿಸಿಕೊಂಡು ದುಃಖಪಡುತ್ತ ವಿದುರಾಃ ಸಂಜಯನು ಪಾಂಡವರಿಂದ ಕ್ರೋಧದ ಕಿಡಿಗಳನ್ನು ತುಂಬಿತಂದು ನನ್ನ ಅಂತರಂಗಕ್ಕೆ ಸುರಿದು ನನ್ನನ್ನು ಸಂಕಟದ ಹೊಂಡದಲ್ಲಿ ಮುಳುಗಿಸಿದ್ದಾನೆ. ಇದರಿಂದ ನಾನು ತಪ್ಪಿಸಿಕೊಳ್ಳಲು ತಕ್ಕ ಉಪಾಯವನ್ನು ಹೇಳಿ ಈ ನನ್ನ ಮನಃತಾಪವನ್ನು ಆರಿಸು ಎಂದು ಪ್ರಾರ್ಥಿಸಿಕೊಂಡನು.

## ವಿದುರನೀತಿ

''ಧೃತರಾಷ್ಟ್ರ ಅಧರ್ಮ ಅನ್ಯಾಯಗಳೆಂಬ ಅಸುರರು ನಿನ್ನಲ್ಲಿನೆಲಸಿ ಇರಿಯುತ್ತಿದ್ದಾರೆ ಆದ್ದರಿಂದ ನಿನಗೆ ನಿದ್ರೆಬರುತ್ತಿಲ್ಲ. ನಿನ್ನನ್ನು ಮದ-ಮತ್ಸರಗಳೆಂಬ ಆರುಬಗೆಯ ಶತೃಗಳು ಅವಲಂಬಿಸಿ ನಿನ್ನ ಹೃದಯಮಂಟಪದಲ್ಲಿ ಮುಖ್ಯಪ್ರಾಣನೊಡಗೂಡಿ ವಿಹರಿಸುತ್ತಿರುವ ಶ್ರೀಹರಿಯ ಚಿಂತನಕ್ಕೆ ಆಸ್ಪದಕೊಡದಂತೆ ಅಶಾಶ್ವತವಾದ ಲೌಕಿಕಮೋಹದಲ್ಲಿ ಮುಳುಗಿಸಿರುವುದೇ ನಿನ್ನ ತೊಳಲಾಟಕ್ಕೆ ಕಾರಣವಾಗಿದೆ. ಸರ್ವಸ್ವತಂತ್ರವಾದ ಸ್ವಾಮಿಯ ಚಿಂತನವನ್ನೂ ಮರೆತವನಿಗೆ ಧೈರ್ಯ-ಪರಾಕ್ರಮ ಸ್ಥೈರ್ಯಮೊದಲಾದ ಗುಣಸಂಪತ್ತುಗಳು ಅವನಿಂದ ಅಗಲಿ ಹೊರಟುಹೋಗುವುದರಿಂದ ಭಯ-ಭೀತಿ-ಅಧೈರ್ಯಗಳು ಸೇರಿ ಅವನ ಸಕಲ ಸುಖಗಳನ್ನು ಕಸಿದುಕೊಳ್ಳುತ್ತದೆ. ಆದ್ದರಿಂದಲೇ ನಿನಗೆ ನಿದ್ರಾಸುಖ ಇಲ್ಲದಂತಾಯಿತು.

ಪರರಸ್ವತ್ತನ್ನು ತನ್ನದನ್ನಾಗಿ ಮಾಡಿಕೊಳ್ಳಬೇಕೆಂಬ ಚೋರನಿಗೆ ಸದಾಪರರನಾಶ ತನ್ನ ಉನ್ನತಿಗಾಗಿ ಹಂಬಲಿಸುವವನಿಗೂ ಮನಮಾಲಿನ್ಯದಿಂದ ನಿದ್ರಾಸುಖ ದೂರವಾಗುತ್ತದೆ.

ಸ್ತ್ರೀ ಲಂಪಟನಾದವನು ಕ್ಷಣಿಕವಾದ ಅನಿಶ್ಚಿತವಾದ ವಿಷಯಸುಖಕ್ಕಾಗಿ ತನ್ನಅಮೂಲ್ಯ ಸುಖವನ್ನು ಮರೆತು ಉನ್ಮತ್ತತೆಯಿಂದ ಭ್ರಮಿತನಾಗುವುದರಿಂದ ಅವನಿಗೆ ಸುಖನಿದ್ರೆ ಇಲ್ಲದಂತಾಗಿ ದೀರ್ಘನಿದ್ರೆಪ್ರಾಪ್ತವಾಗುತ್ತದೆ.

ಹೀಗೆ ನೀನೂ ನಿನ್ನ ಮನೋದೌರ್ಬಲ್ಯದಿಂದ ನಿದ್ರೆಯನ್ನು ಕಳೆದುಕೊಂಡಿರುವಿ. ಧೃತರಾಷ್ಟ್ರ! ಪಾಂಡುವರು ದೇವರನ್ನು ನಂಬಿದ್ದಾರೆ. ಅವರನ್ನು ಹಿಂಸೆಮಾಡಿದವರಿಗೆ ದೇವರೇ ತಕ್ಕಶಿಕ್ಷೆಕೊಡುತ್ತಾನೆ.

ದೇಹಬಲಕ್ಕಿಂತಲೂ ದೈವಬಲವೇ ದೊಡ್ಡದು. ಅವರಲ್ಲಿ ಸ್ವಾಮಿನಿಂತು ದುಷ್ಟರನ್ನು ಧ್ವಂಸಪಡಿಸುತ್ತಾನೆಂಬುದನ್ನು ಬೇರೆ ಹೇಳಬೇಕಾಗಿಯೇ ಇಲ್ಲ. ನೀನು ನಿನ್ನನೂರು ಮಕ್ಕಳನ್ನು ಉಳಿಸಿಕೊಳ್ಳಲು ಪಾಂಡವರೈದುಜನರನ್ನು ಕೊಲ್ಲಬೇಕೆಂದುಯೋಚಿಸಿದರೆ ನಿನ್ನ ನೂರು ಮಕ್ಕಳು ಅವರಿಂದಲೇ ಹತರಾಗುವುದನ್ನುನೀನು ನೋಡಬೇಕಾಗುತ್ತದೆ. ಇದು ಭಗವಂತನ ಪ್ರತಿಜ್ಞೆ. ಅದನ್ನು ಮೀರಿನಡೆಯಲು ಬ್ರಹ್ಮಾದಿಗಳು ಶಕ್ತರಲ್ಲ. ಶ್ರೀಹರಿಸಂಕಲ್ಪವೇ ಸ್ಥಿರಸಂಕಲ್ಪ ಭಗವಂತನ ಭಕ್ತರನ್ನು ದ್ವೇಶಿಸಿದವರನ್ನು ಸ್ವಾಮಿ ತನ್ನನ್ನುದ್ವೇಶಮಾಡುವವರಿಗಿಂತಲೂ ಅಧಿಕಪಾಪಿಗಳೆಂದು ಬಾವಿಸಿರುವುದರಿಂದ ನೀವು ಪಾಂಡವರನ್ನು ದ್ವೇಶಮಾಡಿದರೆ ನಿಮಗೆ ಇಲ್ಲೂದುಃಖ ಪರದಲ್ಲೂದುಃಖ ತಪ್ಪಿದ್ದಲ್ಲ''ಎಂದು ಬಹಳವಿಧದಲ್ಲಿ ವಿದುರನು ಹೇಳಿದರೂ, ಧೃತರಾಷ್ಟ್ರನ ಅಂತಃಕರುಣ ಅರಳಲಿಲ್ಲ. ವಿದುರಾ! ಭಗನ್ನಾಮಸ್ಮರಣದಿಂದ ಜಿತಮನಸ್ಸು ಅಘನಾಶ ಎಲ್ಲವೂ ಪ್ರಾಪ್ತವಾಗುತ್ತದೆಂದು ನೀನು ನನಗೆ ಹೇಳುತ್ತಲೇ ಇರುತ್ತಿ. ನನಗೆ ನಾರಾಯಣಸ್ಮರಣೆ ಮನಸ್ಸಿನಲ್ಲಿ ಸ್ಥಿರಗೊಳ್ಳುವಂತೆ ನೀನು ಅವನ ಮಹಿಮೆಗಳನ್ನುತಿಳಿಸಿ

ನನಗೆ ದಿವ್ಯಜ್ಞಾನ ಲಭ್ಯವಾಗುವಂತೆಮಾಡು ಸುಜ್ಞಾನದಿಂದ ನನ್ನ ಅಜ್ಞಾನಗಳನ್ನು ನಿವಾರಿಸಿಕೊಂಡು ಬಂಧನಶಕ್ತಿಯಿಂದ ಬಿಡಿಸಿಕೊಳ್ಳುತ್ತೇನೆ'' ಎಂದನು.

ವಿದುರನು ನಗುತ್ತ ಧೃತರಾಷ್ಟ್ರ! ನಾವು ಪಾಪಕರ್ಮವಾವುದು? ಪುಣ್ಯಕರ್ಮವಾವುದು? ಎಂಬುದನ್ನು ಅರಿತೂ ಮತ್ತೆ ಮತ್ತೆ ಪಾಪವನ್ನೇಮಾಡುತ್ತಿದ್ದರೆ ಜ್ಞಾನೋಪದೇಶಪಡೆದರೆ ಏನುಫಲ? ಮನಸ್ಸನ್ನು ನಿರ್ಲಿಪ್ತವಾಗಿರಿಸಿಕೊಂಡು ವೈರಾಗ್ಯಭಾವದಿಂದ ಸ್ವಚ್ಛಬುದ್ಧಿಯಿಂದ ಉಪದೇಶಪಡೆದರೆ ಆಗ ಭಗವನ್ನಾಮ ಸ್ಮರಣೆಯ ಭಾಗ್ಯ ತಾನೇತಾನಾಗಿ ಬಂದು ಸ್ವಾಮಿಗೆ ಮನೋಪುಷ್ಪಅರ್ಪಿಸಿದಾಗ ನವವಿಧಭಕ್ತಿದೇವತೆಗಳು ಒಲಿದುಬಂದು ಅವನಲ್ಲಿ ಒಡಮೂಡಿದಾಗ ಜ್ಞಾನೋಪದೇಶಪಡೆದರೆ ಪುಟಕ್ಕಿಟ್ಟ ಚಿನ್ನದಂತೆ ಮನಸ್ಸುಪರಿಪಕ್ವವಾಗಿ ಹೃದಯಪದ್ಮ ವಿಕಸಿತಗೊಳ್ಳುತ್ತದೆ.

ದುಷ್ಟಕಾರ್ಯಕ್ಕೆ ಮನಸ್ಸು ಅಂಜಿದಾಗ ಸ್ವಾಮಿಯಲ್ಲಿ ಸ್ವಚ್ಛಭಕ್ತಿಮಾಡಿದ ಫಲದಿಂದ ಅವನ ಕೃಪೆಲಭಿಸಿತೆಂದು ಆನಂದಪಡಬೇಕು. ''ಧೃತರಾಷ್ಟ್ರ ಶ್ರೀಮನ್ನಾರಾಯಣನಲ್ಲಿ ನನಗೆ ಸುಜ್ಞಾನ ಉದಯವಾಗುವಂತೆ ಉಪದೇಶಮಾಡೆಂದು ನೀನು ಕೇಳಿದಂತೆ ಸ್ವಾಮಿಯ ತತ್ವಜ್ಞಾನವನ್ನು ಉಪದೇಶಮಾಡಲಿಕ್ಕೆ ಯೋಗ್ಯತೆಇರಬೇಕು. ನೀಚರು ತನಗಿಂತ ಶ್ರೇಷ್ಠವರ್ಗದಿಂದ ಭಗವನ್ಮಹಿಮಾವರ್ಣನೆ ಶ್ರವಣ ಮಾಡಿದರೆ ದೋಷವಿಲ್ಲ. ನಿನ್ನ ಮನಸ್ಸಿನ ಮಾಲಿನ್ಯವನ್ನು ಕಳೆಯುವಂಥ ತತ್ತ್ವೋಪದೇಶಮಾಡುವ ಯೋಗ್ಯತೆ ನನಗಿಲ್ಲ. ಏಕೆಂದರೆ ನನ್ನತಾಯಿ ಶ್ರೀವೇದವ್ಯಾಸರ ಅನುಗ್ರಹದಿಂದ ನನ್ನನ್ನು ಹಡೆದಿದ್ದರೂ ಆಕೆ ಶೂದ್ರಜಾತಿಯವಳಾದ್ದರಿಂದ ಅವಳಲ್ಲಿ ಉದಸಿದ ನಾನು ನಿನಗಿಂತಲೂ ನೀಚನಾಗಿದ್ದೇನೆ. ಬ್ರಹ್ಮಮಾನಸಪುತ್ರನಾದ ಸನತ್ಸುಜಾತರನ್ನೂ ನೀನು ಸ್ಮರಿಸು ಅವರು ನಿನಗೆ ಅಮೋಘವಾದ ತತ್ತ್ವಸಾರವನ್ನು ಉಪದೇಶಮಾಡುತ್ತಾರೆ'' ಎಂದನು

ಧೃತರಾಷ್ಟ್ರನಿಗೆ ಒಂದೊಂದು ನಿಮಿಷಕಳೆಯುವುದೂ ಘೋರವಿಷಕಂಟಕನಿಮಿಷದಂತೆ ಭಾಸವಾಗುತ್ತಿತ್ತು ಭಗವಂತನ ಕರುಣದ ಹನಿ ಮನಸ್ಸಿಗೆ ಸೋಂಕಿದರೆ ಸಂಕಟ ಶಮನವಾಗಬಹುದೆಂಬ ಕಾತುರದಿಂದ ಸನತ್ಸುಜಾತರನ್ನು ಭಕ್ತಿಯಿಂದ ಸ್ಮರಿಸಿದಾಗ ವಿದುರನ ಮಾತು ಸತ್ಯಮಾಡಲಿಕ್ಕಾಗಿ ಪ್ರತ್ಯಕ್ಷರಾದರು.

## ಸನತ್ಸುಜಾತರತತ್ತ್ವಸಾರ

ಧೃತರಾಷ್ಟ್ರನು ನಮಸ್ಕಾರಮಾಡಿ ಮಹಾತ್ಮರೇ! ನನ್ನಲ್ಲಿ ಭೀತಿಎಂಬ ಭೂತನ ಆವೇಶವಾಗಿ ಬಹಳ ತಲ್ಲಣಗೊಳ್ಳುತ್ತಿದ್ದೇನೆ ಎಷ್ಟು ಜ್ಞಾನೋಪದೇಶ ಪಡೆದರೂ ಮೋಹಾದಿಗಳೆಂಬ ಅಜ್ಞಾನ ನನ್ನಿಂದ ತೊಲಗುತ್ತಿಲ್ಲ. ಆದ್ದರಿಂದ ನೀವು ನನಗೆ ಭಗವಂತನನ್ನು ಸರಿಯಾದ ಜ್ಞಾನದಿಂದ ತಿಳಿಸಿಕೊಟ್ಟು ನನ್ನಲ್ಲಿ ಹತ್ತಿಉರಿಯುತ್ತಿರುವ ದುಃಖವೆಂಬ ಅಗ್ನಿಯನ್ನು

ಶಮನಮಾಡಿರಿ ಎಂದು ಪ್ರಾರ್ಥಿಸಿಕೊಂಡನು.

ಸನತ್ಸುಜಾತರು ಧೃತರಾಷ್ಟ್ರನನ್ನುಕುರಿತು. ''ಧೃತರಾಷ್ಟ್ರ! ನೀನು ಭಗವಂತನನ್ನು ಕಾಣಲಿಕ್ಕಾಗಿ ಘೋರತಪಸ್ಸುಮಾಡಿ ಪ್ರತ್ಯಕ್ಷಮಾಡಿಕೊಳ್ಳಬೇಕಾಗಿಲ್ಲ.

ನಿನ್ನ ಎದುರಿಗೇ ಪ್ರತ್ಯಕ್ಷವಾಗಿ ಕಾಣುವ ಶ್ರೀಕೃಷ್ಣನೇ ನಾರಾಯಣನಾಗಿದ್ದಾನೆಂದು ನಂಬಬೇಕು. ಬ್ರಹ್ಮಾದಿ ಸಕಲದೇವತೆಗಳೂ ಅವರ ಆಧೀನರಾಗಿರುವುದರಿಂದ ಅವನೇ ಸರ್ವಸ್ವತಂತ್ರನೆಂದುತಿಳಿದು ಅವನ ಆಜ್ಞೆಪಾಲಿಸಿದಾಗ ಎಲ್ಲಾದೇವತೆಗಳೂ ಸಂತೋಷಪಟ್ಟು ಸಕಲ ಶುಭಗಳನ್ನುನೀಡುತ್ತಾರೆ. ನೀನು ಶ್ರೀಕೃಷ್ಣನಮಾತೇ ವೇದವಾಕ್ಯಕ್ಕಿಂತಲೂ ಶ್ರೇಷ್ಠವೆಂಬ ಭಾವದಿಂದ ನಡೆದರೆ ಅವನಿಂದಲೇ ನಿಯಾಮಕನಾಗಿರುವ ರುದ್ರದೇವರು ಮನಸ್ಸಿಗೆ ಅಭಿಮಾನಿದೇವರಾಗಿರುವುದರಿಂದ ಶ್ರೀಹರಿಭಕ್ತನೆಂಬ ಅಭಿಮಾನದಿಂದ ನಿನ್ನ ಮನಸ್ಸಿನೊಳಗೆ ಹೊಕ್ಕಿರುವ ಸಂಶಯ-ಸಂಕಟ-ದುರಭಿಮಾನಗಳನ್ನೆಲ್ಲಾ ದೂರಮಾಡಿ ನಿನಗೆ ಶಾಂತಿ-ಧೈರ್ಯ ಸ್ಥೈರ್ಯಾದಿಗಳನ್ನಿತ್ತು ಕಾಪಾಡುತ್ತಾರೆ. ಪಾಂಡವರು ಪ್ರಧಾನದೇವ ಶ್ರೀಕೃಷ್ಣನೇ ಎಂದು ಚೆನ್ನಾಗಿ ತಿಳಿದು ಗುಣಪೂರ್ಣನೂ ಸುಖಪೂರ್ಣನೂ ಆದ ಸ್ವಾಮಿತೋರಿಸಿದ ಧರ್ಮಮಾರ್ಗದಲ್ಲೇ ಜೀವನಯಾತ್ರೆ ನಡೆಸುತ್ತಿರುವುದರಿಂದಲೇ ಅವರಿಗೆ ಸಕಲದೇವತೆಗಳೂ ಒಲಿದು ಧೈರ್ಯ-ಸಾಹಸ- ಪರಾಕ್ರಮ-ಸಂತೋಷ-ಬಲ-ಸಂಪತ್ತು ಎಲ್ಲವನ್ನೂ ಮೊಗೆ ಮೊಗೆದಿತ್ತು ಅವರನ್ನು ಸುಖಸಾಗರದಲ್ಲಿ ನಲಿಸುತ್ತಿರುತ್ತಾರೆ.

ದೇವೋತ್ತಮನಾದ ಶ್ರೀಹರಿಯನ್ನುಬಿಟ್ಟುನೀನು ಸಕಲದೇವರುಗಳನ್ನು ಒಲಿಸಿಕೊಂಡರೆ ನಿನಗೆ ಸಕಲಭಾಗ್ಯಗಳೂದೊರಕುತ್ತವೆ. ಆದರೆ ಅದು ಶಾಶ್ವತವೂ ಅಲ್ಲ. ಸುಖದಾಯಕವೂಅಲ್ಲ. ಹೇಗೆಂದರೆಭಗವಂತನದಾಸರಾದ ಸಕಲದೇವತೆಗಳೂ ತಮ್ಮ ಪ್ರಭು ಮಹಾವಿಷ್ಣುವಿನ ಅನುಗ್ರಹಪಾತ್ರರಾದ್ದರಿಂದ ಸ್ವಾಮಿಯನ್ನುವಿರೋಧಿಸಿದವನನ್ನು ಅವರೂ ವಿರೋಧಿಸಿಕಲಿಮಲದೋಶವನ್ನುಂಟುಮಾಡಿ ಅವರಪಾಪದಿಂದ ಅವರೇ ದಗ್ಧವಾಗುವಂತೆ ಮಾಡುತ್ತಾರೆ. ಆದ್ದರಿಂದ ಮಹಾವಿಷ್ಣುವೆ ಆಗಿರುವಶ್ರೀಕೃಷ್ಣನ ಅತ್ಯಂತ ಪ್ರೀತಿಪಾತ್ರರಾದ ಪಾಂಡವರನ್ನು ನೀನು ಪಕ್ಷಪಾತದಿಂದ ನೋಡಿ ನಿನ್ನಮಕ್ಕಳುರಾಜನಾಗಿರಲಿ. ಪಾಂಡವರು ಕಾಡುಜೀವಿಗಳಾಗಿರಲಿ ಎಂದು ಅಪೇಕ್ಷೆಪಟ್ಟರೆ ಸರ್ವರಲ್ಲೂ ವ್ಯಾಪ್ತವಾದ ಸ್ವಾಮಿ ನಿನ್ನ ಸಂಕಲ್ಪವನಮ್ನು ಸುಳ್ಳುಮಾಡಿ ನಿನ್ನಮಕ್ಕಳಿಗೆ ಕಾಡೇಮರಣಭೂಮಿಆಗುವಂತೆ ಮಾಡುತ್ತಾನೆ. ತನ್ನ ಭಕ್ತರಿಗೆ ಸಾರ್ವಭೌಮರಾಗುವಂತೆ ಅನುಗ್ರಹಿಸಿತ್ತಾನೆ. ನೀನು ಶ್ರೀಕೃಷ್ಣನಮಾತನ್ನು ಒಪ್ಪಿ ನಿನ್ನಮಕ್ಕಳ ಮಾತ್ಸರ್ಯಮುರಿಯದಿದ್ದರೆ ನಿನಗೆ ಈ ದುಃಖಕ್ಕೆ ಪರಿಹಾರವೇ ಇಲ್ಲ ಇದೇ ಶಾಶ್ವತವಾಗಿ ಮರಣಪರಿಯಂತ ಅನುವಿಸಬೇಕಾಗುತ್ತದೆ. ಧೃತರಾಷ್ಟ್ರ! ನಿನಗೆ ಇನ್ನು ಹೆಚ್ಚು ಧರ್ಮಸೂಕ್ಷ್ಮಗಳನ್ನು ಹೇಳಿ ಭಗವಂತನಲ್ಲಿ ನಿನಗೆ ದಿವ್ಯಜ್ಞಾನ ಒಡಮೂಡುವಂತೆ ಮಾಡಿದರೂ ನಿನ್ನಲ್ಲಿಮೋಹವೆಂಬ ಮೂಲಕಲಿ ಅವತರಿಸಿ ಬಂದು ನಿನ್ನ ಹೃದಯಕೋಶವನ್ನು

ಕಲಕಿ ಬಗ್ಗಡಮಾಡುತ್ತಿರುತ್ತಾನಾದ್ದರಿಂದ ಸುಜ್ಞಾನದ ತಿಳಿ ಹೆಚ್ಚುಹೊತ್ತುಉಳಿಯದೆ ಅದು ಬಗ್ಗಡವಾಗುವ ದುಃಖಸಂಭವವಿದೆ. ಧೃತರಾಷ್ಟ್ರ! ನೀನು ಶ್ರೀವೇದವ್ಯಾಸದೇವನ ಅನುಗ್ರಹಪಾತ್ರನಾದ್ದರಿಂದವೈರಾಗ್ಯಭಾಗ್ಯ ನಿನ್ನನ್ನು ಬಿಟ್ಟಗಲದೆ ಆಗಾಗ ಎಚ್ಚರಕೂಡುತ್ತದೆ. ನಿರ್ಲಿಪ್ತವಾಗಿ ಸುಖದುಃಖಎರಡೂ ಸ್ವಾಮಿಯ ಆಧೀನವೆಂದು ತಿಳಿದು ಸುಳ್ಳು ಸುಖಕ್ಕೆ ಬಲಿಯಾಗಿ ಧರ್ಮವಿರೋಧಿ ಆಗದಂತೆ ಜಿತಮನಸ್ಕನಾಗಬೇಕು. ನಿನ್ನ ಹೊರದೃಷ್ಟಿ ಕುರುಡಾದಂತೆ ಒಳದೃಷ್ಟಿಯನ್ನೂ ಕುರುಡು ಮಾಡದಂತೆ ಜ್ಞಾನಜ್ಯೋತಿಯಿಂದ ಸ್ವಾಮಿಯನ್ನು ಕಂಡು ಸ್ವಚ್ಛವಾದ ಮನೋಪುಷ್ಪವನ್ನು ಅರ್ಪಿಸಿದರೆ ಕರುಣಾಳು ನಿನ್ನ ಮನಕಲಕುವ ಕಳವಳವನ್ನು ಕಳೆದು ಕಾಪಾಡುತ್ತಾನೆ ಎಂದು ಅನೇಕ ತತ್ವಸಾರ ನುಡಿಗಳೆಂಬ ಅಮೃತದ ಹನಿಗಳನ್ನು ಧೃತರಾಷ್ಟ್ರನ ಬುದ್ಧಿ ಕಲಶಕ್ಕೆ ತುಂಬಿದರು.

ಧೃತರಾಷ್ಟ್ರನಲ್ಲಿ ದೇವತಾವೇಶವಿದ್ದಾಗ ಧರ್ಮತತ್ವದ ಸುಖ ಅನುಭವಿಸುತ್ತಿದ್ದನು. ಕಲಿ ಆವೇಶದಿಂದ ಸ್ವಾಭಿಮಾನ ಸ್ವಾರ್ಥತೆಯ ದುಶ್ಕರ್ಮದ ಜ್ಞಾನದಿಂದ ದುಃಖವನ್ನು ಅನುಭವಿಸುತ್ತಿದ್ದನು.

## ಸಮರ ಸನ್ನಾಹ

ಉಪಪ್ಲಾವ್ಯದಲ್ಲಿ ಧರ್ಮರಾಜನು ಸಂಜಯನಿಂದ ಧೃತರಾಷ್ಟ್ರನ ಮನೋಗತ ತಿಳಿದಾಗಿನಿಂದಲು ಒಂದುಕಡೆ ಪ್ರತಿಜ್ಞಾಪಾಲನೆಯ ದೀಕ್ಷೆಯಾದರೆ ಇನ್ನೊಂದುಕಡೆ ವೃಥಾ ಕದನವಾದರೆ ಅಸಂಖ್ಯ ಜೀವ ಹತ್ಯೆಗಳು ನಡೆದು ಕಣ್ಣೀರಿನ ಕೋಡಿ ಹರಿಸಬೇಕಾಗುತ್ತದೆಂಬ ಚಿಂತೆ, ಹೀಗಾಗಿ ವ್ಯಾಕುಲಚಿತ್ತದಿಂದ ಕೃಷ್ಣನನ್ನು ಕುರಿತು ''ಕೃಷ್ಣಾ ! ನನಗೆ ಧೃತರಾಷ್ಟ್ರನ ಮಾತು ಮೀರಲಿಕ್ಕಾಗುತ್ತಿಲ್ಲ. ಪ್ರತಿಜ್ಞೆಯನ್ನೂ ತಪ್ಪುವಂತಿಲ್ಲ. ಸಂಜಯನು ಬಂದು ನಮ್ಮ ಅಭಿಪ್ರಾಯವೇನೆಂದು ತಿಳಿದುಹೋದವನು ಮತ್ತೆ ಕೌರವರ ಮನೋಗತವೇನೆಂದು ತಿಳಿಸಲಿಲ್ಲ. ಆದ್ದರಿಂದ ಈಗ ನೀನೇ ಮಾರ್ಗದರ್ಶನ ನೀಡಬೇಕು. ನಿನ್ನ ಆಜ್ಞೆ ಆದರೆ ಈಗಲೇ ದುಷ್ಟ ನಿಗ್ರಹ ಕಾರ್ಯೋನ್ಮುಖರಾಗಿ ಹೊರಟು ಅನೇಕ ದೈತ್ಯರಾಜರುಗಳನ್ನು ಸಂಹಾರಮಾಡಿ ರಾಜ್ಯಪರಿಪಾಲನದ ಸೇವಾಮಾಡಿ ನಿನಗೆ ಅರ್ಪಣ ಮಾಡಬಹುದು. ಅದಕ್ಕೆ ನಿನ್ನ ಸಲಹೆ ಸಹಕಾರಗಳೇ ಮೂಲವಾದ್ದರಿಂದ ನಮಗೆ ಮುಂದಿನ ಮಾರ್ಗತೋರಿಸು'' ಎಂದನು.

ಧರ್ಮರಾಜಾ ಪಾಂಡವರ ಕುಹಕ ಬುದ್ದಿ, ಅವರ ವೈರಭಾವಗಳನ್ನು ಲೋಕ ತಿಳಿದಮೇಲೆ ನೀವು ಯುದ್ಧಕ್ಕೆ ಹೊರಟರೆ ಅದು ಜನನಿಂದೆಗೆ ಕಾರಣವಾಗುವುದಿಲ್ಲ. ಮೊದಲೇ ನೀವು ಯುದ್ಧಕ್ಕೆ ಹೊರಟರೆ ಪಾಂಡವರು ದ್ವೇಶವನ್ನು ಮಸೆದು ಕೌರವವಂಶವನ್ನು ನಾಶಗೈದು ಅಖಂಡ ರಾಜ್ಯದ ಸಾರ್ವಭೌಮರೆನ್ನಿಸಿದ್ದಾರೆಂಬ ಕಳಂಕ ಹೊರಬೇಕಾಗುತ್ತದೆ. ಆದ್ದರಿಂದ ನಾನು ಮೊದಲು ಹಸ್ತಿನಾವತಿಗೆ ದುರ್ಯೋಧನನೊಂದಿಗೆ ಸಂಧಾನ ಮಾಡಿಕೊಳ್ಳಲ್ಲಿಕ್ಕೆ

ಪಾಂಡವರ ದೂತನಾಗಿ ಹೊರಟಿದ್ದೇನೆಂದು ದಾರಿಯುದ್ದಕ್ಕೂ ಎಲ್ಲರಿಗೂ ಹೇಳುತ್ತಾ ಸಕಲ ಮುನಿತಂಡದೊಡನೆ ಹಸ್ತಿನಾಪುರಿಗೆ ಹೋಗಿ ಅಲ್ಲಿ ದುರ್ಯೋಧನನ ಕ್ರೋಧಕೆರಳುವಂತೆ ಅನೇಕ ನೀತಿ ವಾಕ್ಯಗಳಿಂದ ಉಪದೇಶಮಾಡುತ್ತೇನೆ. ಅದು ಸಜ್ಜನರಿಗೆ ಸಮ್ಮತವಾದರೂ ಅಸಜ್ಜನರಿಗೆ ಕೊಳ್ಳಿಯ ಇರಿತದಂತೆ ವೇದನೆ ಆಗುತ್ತದೆ. ಅವನು ನನ್ನ ಮಾತನ್ನು ನಂಬಿ ಒಪ್ಪದೆ ಯುದ್ಧವನ್ನೇ ಮಾಡಿ ರಾಜ್ಯ ತೆಗೆದುಕೊಳ್ಳಲಿ ಎಂದು ಎಲ್ಲರ ಮುಂದೂ ನುಡಿಯುವಂತೆಮಾಡಿ ಕದನವನ್ನೇ ಕಟ್ಟಿತರುತ್ತೇನೆ. ಆಗ ನಿಮ್ಮ ಸಜ್ಜನಿಕೆಗೆ ಭಂಗ ಬರುವುದಿಲ್ಲ'' ಎಂದುಹೇಳಿ ಹರಿ ಹಸ್ತಿನಾವತಿಗೆ ಹೊರಟನು.

ದೇವ ದೇವೋತ್ತಮನಾದ ಸ್ವಾಮಿ ದೂತನಾಗಿ ಹೊರಟಾಗ ಅವನ ಮುಖಪದ್ಮದಲ್ಲಿ ಉಕ್ಕುತ್ತಿದ್ದ ಕರುಣದ ರಸವನ್ನು ಅನುಭವಿಸಿದ ಭೀಮಸೇನನು ''ಸ್ವಾಮೀ ಕೃಷ್ಣ! ಕೌರವರ ಬಳಿ ಸಂಧಾನ ಮಾಡಿಕೊಂಡು ಬಾ ಕದನದಿಂದ ಕುಲಕ್ಷಯ ಆಗುವುದುಬೇಡ'' ಎಂದನು. ಭೀಮಸೇನನ ಮಾತು ಹೊರನೋಟದಲ್ಲಿ ಅಧರ್ಮಕ್ಕೆ ಕರುಣೆ ತೋರಿಸಿದಂತೆ ಕಂಡರೂ ಅವನ ಅಂತರ್ಭಾವ ರಹಸ್ಯ ಏನೆಂದರೆ ಈಗ ಕೃಷ್ಣ ದೈತ್ಯ ಕುಲವನ್ನು ಕ್ಷಯಗೊಳಿಸಲಿಕ್ಕಾಗಿಯೇ ಹೊರಟಿದ್ದಾನೆ. ನಾನು ಯುದ್ಧಬೇಡವೆಂದರೆ ನೀನು ಯುದ್ಧವನ್ನೇ ಮಾಡಬೇಕೆಂದು ಆಜ್ಞೆಮಾಡುತ್ತಾನೆ. ಭಗವದಾಜ್ಞೆ ಆದರೆ ನನಗೆ ಬಲ-ಪರಾಕ್ರಮ, ಸಾಹಸ-ಉತ್ಸಾಹ-ಬುದ್ಧಿ ಎಲ್ಲವೂ ಮೈಗೂಡಿಬಂದು ಶತ್ರುನಿಗ್ರಹದ ಶಕ್ತಿ ವೃದ್ಧಿಯಾಗುತ್ತದೆಂಬ ಭಾವದಿಂದಲೂ, ಅಸುರರಿಗೆ ಅಜ್ಞಾನ ಬರಲಿಕ್ಕಾಗಿಯೂ ಹಾಗೆ ಹೇಳಿದನು. ಹರಿಯಮತಕ್ಕೂ-ಹನುಮನಮತಕ್ಕೂ ಭೇದ ತಿಳಿದರೆ ದೋಶ ಬರುತ್ತದೆ.

ಶ್ರೀಕೃಷ್ಣ ಭೀಮನ ಮಾತನ್ನು ಕೇಳಿತಿಳಿದು ಅವನಿಗೆ ಉತ್ಸಾಹ ಬರುವ ಮಾತನ್ನೇ ಆಡಿದನು. ಭೀಮ ನೀನು ಆಡಿದ ಮಾತು ನಿನ್ನ ಬಲಪರಾಕ್ರಮಗಳನ್ನು ಮೆಟ್ಟಿನಿಂತು ಆಡಿದ ಮಾತಾಗಿದೆ. ಕ್ಷಾತ್ರ ತೇಜಸ್ಸಿನಿಂದ ಮೋಹ ಸುಟ್ಟುಹಾಕದೆ ವಂಶೋದ್ಧಾರವಾಗಬೇಕೆಂಬ ಆಸೆ ನಿನಗೇಕೆ ಉಂಟಾಯಿತು? ದುಷ್ಟ ಮರ್ಧನದ ಮಹಾದೀಕ್ಷೆ ಮಾಯವಾಯಿತೇಕೆ? ಎಂದನು.

ಸ್ವಾಮೀ ವದನಾರದಿಂದ ಹೊರಟ ಅನುಗ್ರಹವಾಕ್ಯದಿಂದ ಭೀಮಸೇನ ಭಾಷ್ಪಾನಂದಗೊಂಡು ತನ್ನ ದುಷ್ಟಶಕ್ತಿಗಳ ಧ್ವಂಸನದ ಸೇವಾಸಂಕಲ್ಪವನ್ನು ಹರಿಗೆ ಅರ್ಪಣಮಾಡಿ ''ಸ್ವಾಮಿ! ನನ್ನ ಛಲ ಕುಗ್ಗಿಲ್ಲ, ಪ್ರತಿಜ್ಞೆ ಸಡಿಲಗೊಳ್ಳಲಿಲ್ಲ ನಿನ್ನ ಬಲವಾದ ಆಜ್ಞೆ ಎಂಬ ಕೋಟೆಯೊಳಗೆ ನುಗ್ಗಿ ನೀನು ತೋರಿಸಿದ ಮಾರ್ಗದಲ್ಲೇ ನಡೆಯುತ್ತಿರುವ ನನಗೆ ಯಾವ ಬಂಧನಗಳೂ ಬರುವುದಿಲ್ಲ. ಸ್ವಾಮಿ! ನಿನ್ನ ಆಜ್ಞೆಯಾದರೆ ಈ ಬ್ರಹ್ಮಾಂಡವನ್ನು ಎರಡುಹೋಳುಮಾಡಿ ತಾಳಬಾರಸುತ್ತ ನಿನ್ನನ್ನು ಕೊಂಡಾಡಿ ಕುಣಿದಾಡುತ್ತೇನೆ'' ಎಂದು ತನ್ನ ಬಲವನ್ನು ಶ್ರೀಹರಿಗೆ ಉತ್ಸಾಹದಿಂದ ಅರ್ಪಿಸಿದಾಗ ಕೃಷ್ಣನು ''ಭೀಮಾ! ನೀನು

ಬ್ರಹ್ಮಾಂಡವನ್ನೇ ಸೀಳಿ ತಾಳ ಬಾರಸುವುದಕ್ಕಿಂತಲೂ ಹೆಚ್ಚು ಸಾಹಸ ಮಾಡಬಲ್ಲೆ. ನಿನ್ನ ಪೂರ್ಣ ಸಾಹಸವನ್ನೂ ಪ್ರಕಟಮಾಡಲಿಲ್ಲ ಕಲಿಯ ಪ್ರಭಾವದಿಂದ ಪ್ರಬಲರಾದ ದುಷ್ಟ ಶಕ್ತಿಗಳನ್ನು ನೀನು ಲೀಲಾಜಾಲವಾಗಿ ಧ್ವಂಸಮಾಡುತ್ತಿ. ದೈತ್ಯ ನಾಶಕರವಾದ ನಿನ್ನ ಪುಣ್ಯಕಾರ್ಯದಿಂದ ನಾನು ನಿನಗೆ ಪರಮಾನುಗ್ರಹ ಮಾಡಿರುವೆನು'' ಎಂದು ಭೀಮನನ್ನು ಸಂತೋಷಪಡಿಸಿದ. ಶ್ರೀಕೃಷ್ಣನು ಅರ್ಜುನನನ್ನು ನೋಡಿ ''ನಿನ್ನ ಅಭಿಪ್ರಾಯವೇನು? ಸಮರವೋ? ಸಂಧಾನವೋ?'' ಎಂದನು. ಅರ್ಜುನನು ''ಕೃಷ್ಣಾ! ಪಾಪಿಗಳನ್ನು ಕೊಲ್ಲುವುದು ಧರ್ಮವೇ ಆದರೂ, ಅವರ ನಿಮಿತ್ತವಾಗಿ ಗುರುಗಳು ಹಿರಿಯರು ಎಲ್ಲರನ್ನೂ ಕೊಲ್ಲಬೇಕಾಗುತ್ತದೆ. ಆದ್ದರಿಂದ ಸಾಧ್ಯವಾದಷ್ಟೂ ಸಂಧಾನಕ್ಕೇ ಪ್ರಯತ್ನಪಡು'' ಎಂದನು. ಇದರಿಂದ ಅರ್ಜುನನಿಗೂ ಶ್ರೀಕೃಷ್ಣನ ಸರ್ವೋತ್ತಮತ್ವದಲ್ಲಿ ಸ್ವಲ್ಪ ಶಂಕೆ ಇತ್ತು ಎಂಬುದನ್ನು ತಿಳಿಯಬಹುದು.

ನಂತರ ನಕುಲನು ಅಜ್ಞಾನದೋಶದಿಂದ ''ಕೃಷ್ಣಾ! ಹಸ್ತಿನಾವತಿಯ ನಮ್ಮ ಬಂಧುಗಳು ಮಹಾಪಾಪಿಗಳು ಅವರ ಸಹವಾಸ ಬಹಳ ಅಪಾಯ ಆದ್ದರಿಂದ ಜಾಗೃತನಾಗಿ ಕಾರ್ಯಸಾಧನೆ ಮಾಡಿಕೊಂಡು ಬಾ'' ಎಂದನು. ಸಹದೇವನು ''ಕೃಷ್ಣಾ! ಪಾಪಿಗಳು ಬದುಕಿದ್ದರೆ ಅಧರ್ಮ ವೃದ್ಧಿಯಾಗುತ್ತದೆ ಯುದ್ಧವೇ ಆಗುವಂತೆ ಮಾಡು'' ಎಂದನು.

ಆಮೇಲೆ ದ್ರೌಪದಿ ಗುರುಪತ್ನಿ ಆದ್ದರಿಂದ ಸ್ವಚ್ಛ ಮನಸ್ಸಿನಿಂದ ಅಜ್ಞಾನದ ಸೋಂಕಿಲ್ಲದ ಮಾತನಾಡಿದಳು. ''ಕೃಷ್ಣಾ! ನಿನ್ನ ಅವತಾರವೇ ಧರ್ಮಸಂಸ್ಥಾಪನಾಕಾರ್ಯಕ್ಕಾಗಿ ಆಗಿರುವಾಗ ನಿನ್ನ ಸಂಕಲ್ಪವೇ ಸತ್ಯ ಸಂಕಲ್ಪವಾಗಿರುವಾಗ ಅನ್ಯರ ಸಂಕಲ್ಪ ಏನುಪ್ರಯೋಜನಾ ನಿನ್ನ ಇಚ್ಛೆಯಂತೆಯೇ ಸಕಲವೂ ನಡೆಯುತ್ತದೆ ನಿನಗೆ ಯಾರ ಸಹಕಾರ ಸಲಹೆಗಳ ಅವಶ್ಯವಿಲ್ಲದಿದ್ದರೂ ವಿಡಂಬನೆಯಿಂದ ಎಲ್ಲರನ್ನೂ ಮೋಹಗೊಳಿಸುತ್ತಿರುವಿ'' ಎಂದು ಹೇಳಿದಳು.

ಹೀಗೆ ಅವರವರ ಯೋಗ್ಯತಾನುಸಾರ ಸ್ವಾಮಿಯ ಜ್ಞಾನವನ್ನು ಹೊಂದಿದ್ದ ಪಾಂಡವರು ಶ್ರೀಕೃಷ್ಣನ ಮುಂದೆ ತಮ್ಮ ಇಚ್ಛೆಯನ್ನು ಪ್ರಾರ್ಥಿಸಿಕೊಂಡು ಕಳುಹಿಸಿದರು.

ಶ್ರೀಕೃಷ್ಣನು ರಮಾಬ್ರಹ್ಮಾದಿಗಳಿಂದ ಸೇವಿಸಲ್ಪಟ್ಟನಾದಾಗ್ಯೂ ತನ್ನ ಭಕ್ತವಾತ್ಸಲ್ಯತೆಯನ್ನು ಸದ್ಭಕ್ತರೆಲ್ಲರೂ ತಿಳಿದು ಆನಂದ ಪಡಬೇಕೆಂಬ ಸಂಕಲ್ಪದಿಂದ ದೂತನಾಗಿ ಹೋಗುತ್ತಿರುವಾಗ ದೇವತೆಗಳೆಲ್ಲರೂ ಉತ್ಸಾಹದಿಂದ ಸಾಲುಗಟ್ಟಿನಿಂತು ಮಹದಾನಂದದಿಂದ ನೋಡುತ್ತಾ ಶ್ರೀಕೃಷ್ಣನ ಕರುಣೆಯನ್ನು ಕೊಂಡಾಡುತ್ತಿದ್ದರು. ಋಷ್ಯಾಶ್ರಮಗಳ ಮಾರ್ಗದಲ್ಲಿ ಶ್ರೀಕೃಷ್ಣ ಹೊರಟು ಬರುವಾಗ ಸಕಲ ಋಷಿಮುನಿಗಳೂ ಶ್ರೀಕೃಷ್ಣನ ಪಾದ ಪೂಜಾದಿಗಳನ್ನೂ ಮಾಡಿ ಕೃಷ್ಣಾ! ನೀನು ಭಕ್ತರ ಪರವಾಗಿ ವಾದಮಾಡಲು ಹೋಗುತ್ತಿರುವುದರಿಂದ ನಿನ್ನ ಭಕ್ತವಾತ್ಸಲ್ಯದ ರಸ ನುಡಿಗಳಲ್ಲಿ ತುಂಬಿಬರುವ ಧರ್ಮವೆಂಬ ಸುಗಂಧ ಸೌರಭವನ್ನು ನಾವೆಲ್ಲರೂ

ಅನುಭವಿಸಿ ಆನಂದ ಪಡಲು ಇಚ್ಚಿಸುತ್ತೇವೆ ಸ್ವಾಮೀ ನಮಗೂ ಅಪ್ಪಣೆಕೊಡು'' ಎಂದು ಕೇಳಿಕೊಂಡು ಋಷಿಗಳ ತಂಡವು ಶ್ರೀಕೃಷ್ಣನನ್ನು ಹಿಂಬಾಲಿಸಿ ಹೊರಟಿತು.

ಹಸ್ತಿನಾವತಿಯ ರಾಜನಿಗೆ ಶ್ರೀಕೃಷ್ಣ ಬರುತ್ತಿದ್ದಾನೆಂಬ ಸುದ್ದಿ ತಿಳಿದೊಡನೆ ತನ್ನ ಐಶ್ವರ್ಯ, ವೈಭವ ಗೌರವಾದಿಗಳೆಲ್ಲವನ್ನು ಕೃಷ್ಣನ ಮುಂದೆ ಪ್ರದರ್ಶನಮಾಡಿ ಅವನು ಆಶ್ಚರ್ಯಪಡುವಂತೆ ಮಾಡಬೇಕು ನನ್ನನ್ನು ಗೌರವದಿಂದ ಹೊಗಳಿ ಪಾಂಡವರು ನತದೃಷ್ಟರೆಂದು ತಿರಸ್ಕಾರಮಾಡಬೇಕು ಎಂಬ ಡಂಭದಿಂದ ಪುರ ಶೃಂಗಾರಗಳು ಸ್ವಾಗತ ಸಮಾರಂಭಕ್ಕಾಗಿ ನಡೆಸಿದ ವಸ್ತುಪ್ರದರ್ಶನಗಳು ಸತ್ಕಾರಕ್ಕಾಗಿ ಅನೇಕ ಬಗೆಯ ಊಟೋಪಚಾರಗಳ ಸಿದ್ಧತೆ ಎಲ್ಲವೂ ಒಂದಕ್ಕಿಂತಲೂ ಒಂದು ಅಮೋಘವಾಗಿರುವಂತೆ ಸಿದ್ಧಪಡಿಸಿ ನವರತ್ನಾಭರಣಗಳಿಂದ ಅಲಂಕರಿಸಿಕೊಂಡು ತನ್ನ ಸ್ತ್ರೀಯರೊಡನೆ ವಾದ್ಯವೈಭವದಿಂದ ಕಾದಿದ್ದನು.

ಅವನಿಗಿಂತಲೂ ಮೊದಲು ಸುಜ್ಞಾನ ಸಂಪನ್ನರನೇಕರು ನಮ್ಮ ಸ್ವಾಮಿ ಜಗದಾದಿವಂದ್ಯ, ಸಿರಿದೇವಿಯರಮಣ ದೂತಕಾರ್ಯಕ್ಕಾಗಿ ಬರುವ ಅವನ ಸೊಗಸಿನ ಸವಿಯನ್ನನುಭವಿಸಬೇಕೆಂದು ಸ್ತುತಿಸ್ತೋತ್ರಾದಿಗಳಿಂದ ಕೊಂಡಾಡುತ್ತಾ ಓಡಿಬಂದು ಶ್ರೀಕೃಷ್ಣನ ಮುಖ ಚಲ್ವಿಕೆ ಕರುಣಾರಸತುಂಬಿದ ಕಮಲನೇತ್ರಗಳ ಸೌಂದರ್ಯಗಳನ್ನು ಭಕ್ತಿಎಂಬ ಕಲಶದಲ್ಲಿ ತುಂಬಿಕೊಂಡು ಪಾನಮಾಡುತ್ತಾ ಶ್ರೀಕೃಷ್ಣನ ಚರಣಪದ್ಮವನ್ನು ತಮ್ಮ ಅಂತಃಕರುಣವೆಂಬ ಭಕ್ತಿರಸದಿಂದ ನೋಡುತ್ತಿದ್ದರು.

ಧೃತರಾಷ್ಟ್ರನು ಭೀಷ್ಮನನ್ನು ಮುಂದುಮಾಡಿಕೊಂಡು ಶ್ರೀಕೃಷ್ಣನನ್ನುಭಕ್ತಿಯಿಂದ ಕರೆತಂದು ಸಿಂಹಪೀಠದಲ್ಲಿ ಕೂಡಿಸಿ ಅರ್ಘ್ಯಪಾದ್ಯಗಳಿಂದ ಸತ್ಕಾರಮಾಡಿದನು. ಶ್ರೀಕೃಷ್ಣನು ಧೃತರಾಷ್ಟ್ರನ ಸತ್ಕಾರ ಸ್ವೀಕರಿಸಿದ ನಂತರ ಭೀಷ್ಮಾದಿ ಸಕಲರೂ ಕೃಷ್ಣ ನಮ್ಮ ಮನೆಗೂ ಬರುತ್ತಾನೆ ನಾವೂ ಅವನಿಗೆ ಸತ್ಕಾರ ಮಾಡಬೇಕೆಂದು ಕಾತುರದಿಂದ ಕಾಯುತ್ತಿದ್ದರು. ಕಲಿಮಲದ್ವೇಶದಿಂದ ಪಾಪದ ಅನ್ನಸಂಪರ್ಕದಿಂದಿರುವ ಅವರ್‍ಯಾರ ಮನೆಗೂ ಹೋಗಲಿಲ್ಲ. ಧುರ್ಯೋಧನನು ಬಗೆಬಗೆಯ ಮೃಷ್ಟಾನ್ನಗಳಿಂದ ವಿವಿದೋಪಚಾರಗಳಿಂದ ಕೃಷ್ಣನನ್ನು ವಶಪಡಿಸಿಕೊಂಡು ತನ್ನ ಕುತಂತ್ರದ ಕುಣಿಕೆಯಲ್ಲಿ ಸಿಕ್ಕಿಸಿಕೊಳ್ಳುವ ಭಾವನೆಯಿಂದ ಆದರವನ್ನು ತೋರಿಸುತ್ತ ಶ್ರೀ ಕೃಷ್ಣನ ಆಗಮನವನ್ನು ಆನಂದದಿಂದ ಎದುರು ಕಾಯುತ್ತಿದ್ದಾನೋ ಎನ್ನುವಂತೆ ತೋರಿಸುತ್ತ ಒಳಗೆ ಕಳಂಕ ತುಂಬಿಕೊಂಡು ಹೊರಗೆ ಕಾತುರತೆ ಕಾಣಿಸುತ್ತ ಕಾಯುತ್ತಿದ್ದನು. ಸರ್ವಜ್ಞಮೂರ್ತಿ ಧುರ್ಯೋಧನನ ಮನೆಯಮುಂದೆ ಋಷಿವರರ ಸಂಗಡ ಮಾತನಾಡುತ್ತ ಹೊರಟುಬಂದವನು ಅವನಕಡೆಗೂ ತಿರಗುನೋಡದೆ ಮುಂದೆಮುಂದೆ ಬಂದು ದ್ರವ್ಯಾದಿಗಳಿಂದ ಸತ್ಕಾರಮಾಡಲು ಬರುತ್ತಿರುವವರನ್ನು ಉದಾಸೀನದಿಂದ ತೃಣೀಕರಿಸಿ ಪರಮಭಕ್ತನಾದ ವಿದುರನ ಮನೆಗೆ ಹೋದನು.

ವಿದುರನು ಪ್ರತ್ಯಕ್ಷವಾಗಿ ಸ್ವಾಮಿ ಬಂದಿದ್ದರು ತನ್ನ ಹೃನ್ಮಂದಿರದಲ್ಲಿ ಏಕಾಂತವಾಗಿ

ಸೇವೆ ಸಲ್ಲಿಸುತ್ತಿದ್ದ ತನ್ನ ಹೃದಯವಾಸಿಯನ್ನೇ ಕುರಿತು ಧ್ಯಾನಮಾಡುತ್ತಾ ಧ್ಯಾನ ಮಗ್ನನಾಗಿದ್ದನು.

## ವಿದುರನ ವೈರಾಗ್ಯವೈಭವ

ಸ್ವಾಮಿಗೆ ಯಾವ ವೈಭವವನ್ನು ಆನಂದದಿಂದ ಅಂಗೀಕಾರ ಮಾಡುತ್ತಾನೆಂಬುದನ್ನು ಅಜ್ಞಾನಿ ಧುರ್ಯೋಧನ ತಿಳಿಯದೆ ಭೋಗವಸ್ತುಗಳ ವೈಭವವನ್ನು ವಂಚನೆಯ ಭಾವದಿಂದ ತೋರಿಸುತ್ತ ಕಪಟ ಪ್ರೀತಿಯಿಂದ ಕರೆದರೆ ಕರುಣಾಳು ಕಡೆಗಣಿಸಿ ಮುಂದೆ ಹೊರಟಾಗ ಭಕ್ತನ ಭವ್ಯವಾದ ಸ್ವಚ್ಚ ಮನಸ್ಸಿನ ಮಹಾಕರೆ ಅವನ ಮನಸ್ಸಿಗೆ ಮುಟ್ಟಿತು.

ವಿದುರನ ಅಂತರಂಗದರಮನೆಯಲ್ಲಿ ವಿರಾಜಿಸುತ್ತಿದ್ದ ಕೃಷ್ಣ ಈಗ ಕಣ್ಮುಂದೆ ಪ್ರತ್ಯಕ್ಷವಾಗಿದ್ದನ್ನು ನೋಡಿ ಭಾವೋದ್ರೇಕದಿಂದ ಕುಣಿದು ಸಿರಿಪಾದದ ಮೇಲೆ ಶಿರಸ್ಸೆಂಬ ಪುಷ್ಪವನ್ನು ಏರಿಸಿ ಸ್ತುತಿಸಿದನು. ಶುದ್ಧವಾದ ಗಂಗಾಜಲದಿಂದ ಪಾದಗಳನ್ನು ತೊಳೆದು ಪ್ರೋಕ್ಷಿಸಿಕೊಂಡು ತನ್ನ ಸಾಧನೆಗಾಗಿಯೇ ಶ್ರೀಶನು ಕರುಣಿಸಿದ ವಸ್ತುಗಳಿಗೂ ಪ್ರೋಕ್ಷಣೆ ಮಾಡಿದನು. 'ದೇವಾ' ಸ್ವಾಮಿ! ಈ ಜನ್ಮ ಸಾರ್ಥಕ ಹೊಂದಲೆಂಬ ಕರುಣದಿಂದ ಬಳಿಗೆಬಂದು ಮಂಗಳಮಯ ದರ್ಶನಾನಂದವನ್ನು ಕೊಟ್ಟು ಈದೇಹೇಂದ್ರಿಯಗಳನ್ನು ಪಾವನಗೊಳಿಸಲಿಕ್ಕಾಗಿ ನಿನ್ನ ಸಾಮೀಪ್ಯ ಸಂದರ್ಶನಸ್ಪರ್ಶಾದಿ ಭಾಗ್ಯಗಳಿಂದ ಇಂದಿನ ಆಯಸ್ಸನ್ನು ಸಾರ್ಥಕ ಪಡಿಸಿದ ನಿನ್ನನ್ನು ಏನೆಂದು ಸ್ತೋತ್ರಮಾಡಬೇಕೆಂಬುದು ನನಗೆ ತಿಳಿಯದಂತಾಗಿದೆ. ನಿನ್ನನ್ನು ಹೊಗಳಲಿಕ್ಕೆ ಯಾವಶಬ್ದವನ್ನು ಉಚ್ಚರಿಸ ಹೋದರೂ ಅಲ್ಪವೆಂದೇ ಮನಸ್ಸಿಗೆ ಅತೃಪ್ತಿಯಾಗುತ್ತಿದೆ. ವೇದಗಳೇ ನಿನ್ನನ್ನು ಹೊಗಳಲು ಸಾಧ್ಯವಿಲ್ಲವೆಂದು ಹಂಬಲಿಸುವಾಗ ಇನ್ನು ಅಲ್ಪಮತಿಗಳಿಗೆ ಪೂರ್ಣಗುಣನ ಗುಣಗಾನ ಹೇಗೆತಾನೇ ಸಾಧ್ಯವಾದೀತು? ಎಂದು ಹೇಳುತ್ತಾ ಶ್ರೀಕೃಷ್ಣನ ರೂಪರಾಶಿಯನ್ನು ಆನಂದದಿಂದ ನೋಡಿ ನೋಡಿ ಹಿಗ್ಗುತ್ತಿದ್ದನು. ಷೋಡಶೋಪಚಾರ ಪೂಜೆಗಳನ್ನುಮಾಡಿ ನವವಿಧ ಭಕ್ತಿಯನ್ನು ವೃದ್ಧಿಗೊಳಿಸುತ್ತ ಸಾಕ್ಷಾತ್ತಾಗಿ ನಾರಾಯಣನೇ ನನಗೆ ಇಂದು ಲಭ್ಯವಾಗಿರುವಾಗ ನನ್ನ ಸೇವೆಯಲ್ಲಿ ಕಿಂಚಿತ್ತು ಲೋಪವಾಗದಂತೆ ಸಲ್ಲಿಸಬೇಕೆಂಬ ಉತ್ಸಾಹದಿಂದ ಚತುರ್ವಿಧಾನ್ನವನ್ನು ಶ್ರೀಕೃಷ್ಣನಿಗೆ ಸಮರ್ಪಣೆ ಮಾಡಿದನು. ಅನೇಕ ಉಪಚಾರದ ನುಡಿಗಳಿಂದ ಊಟ ಮಾಡಿಸುತ್ತಿದ್ದನು.

ವಿದುರನು ಸಲ್ಲಿಸಿದ ಸೇವೆಗಳೆಲ್ಲವನ್ನು ಸ್ವಾಮಿ ಸ್ವೀಕರಿಸಿ ಸಂತೋಷಪಡಿಸಿದನು.

## ಶ್ರೀಕೃಷ್ಣನ ಸಂಧಾನದ ಸೊಗಸು

ಕೃಷ್ಣ ಪಾಂಡವರ ದೂತನಾಗಿ ಬಂದಿದ್ದಾನೆ. ಅವನಿಂದ ಪಾಂಡವರ ಬಗ್ಗೆಬರುವ ಮಾತುಗಳನ್ನು ಕೇಳಬೇಕೆಂಬ ಕುತೂಹಲದಿಂದ ಧುರ್ಯೋಧನ ದೊಡ್ಡಸಭೆ ಸೇರಿಸಿದ ಸಭಾವೈಭವವಂತೂ ಹೇಳತೀರದು.

ಕೃಷ್ಣ ನನ್ನನ್ನು ತಿರಸ್ಕಾರಮಾಡಿ ಆತಿಥ್ಯವನ್ನು ಸ್ವೀಕರಿಸದೆ ವಿದುರನ ಮನೆಗೆ ಹೋಗಿ ಅವಮಾನಪಡಿಸಿದ್ದಾನೆ. ಈಗ ಅವನಿಗೂ ನಮ್ಮಿಂದ ಅವಮಾನವಾಗಬೇಕು. ಅವನಿಗೆ ಯಾರೊಬ್ಬರೂ ಮಾನ್ಯತೆ ಕೊಡಬಾರದು ಎಂದು ಕುಯುಕ್ತಿಯನ್ನು ಎಲ್ಲರಿಗೂ ಹೇಳಿ ತಾನು ಸಿಂಹಾಸನವೇರಿ ದರ್ಪದಿಂದ ಮೇಲೆ ಕುಳಿತನು. ತಾನು ರಾಜ, ಕೃಷ್ಣ ದೂತನೆಂಬ ಗರ್ವದಿಂದ ಇದ್ದನು.

ಶ್ರೀಕೃಷ್ಣನು ಸಭಾಪ್ರವೇಶ ಮಾಡಿದ ತಕ್ಷಣವೇ ಎಲ್ಲರೂ ತಮಗೇ ಅರಿವಿಲ್ಲದ ರೀತಿ ಎದ್ದು ಕೃಷ್ಣನಿಗೆ ಸ್ವಾಗತ ಸಮಾರಂಭದಿಂದ ಕರೆತಂದರು. ಸಿಂಹಾಸನದಲ್ಲಿ ಕುಳಿತ್ತಿದ್ದ ದುರ್ಯೋಧನ ಆಗ ಉರುಳಿ ಕೃಷ್ಣನ ಕಾಲಡಿ ಬಿದ್ದನು. ಅದು ಪವಾಡವಲ್ಲ ಸಕಲಚೇತನಾಚೇತನ ವಸ್ತುಗಳಲ್ಲೂ ಅಂತರ್ಯಾಮಿಯಾದ ಶ್ರೀಕೃಷ್ಣನು ಅಷ್ಟಮದಗಳಿಂದಲೂ ಮೆರೆಯುವ ದುರ್ಯೋಧನನ ಧುರಭಿಮಾನವನ್ನು ಮುರಿಯುವ ಇಚ್ಚೆಯಿಂದ ಕೆಡವಿದನು. ಕೃಷ್ಣನು ಅವನನ್ನು ಎಬ್ಬಿಸಿ ಸಮಾದಾನಮಾಡಿ ತಾನು ಸಿಂಹಾಸನದಲ್ಲಿ ಕುಳಿತನು. ನಂತರ ಧೃತರಾಷ್ಟ್ರನನ್ನು ಕುರಿತು ವಿಚಿತ್ರವೀರ್ಯಪುತ್ರಾ: ಎಂದು ಸಂಬೋದಿಸಿದನು. ಏಕೆಂದರೆ ವೇದವ್ಯಾಸನಾಮದಿಂದ ನಾನೇ ನಿನಗೆ ಜನ್ಮಕೊಟ್ಟ ತಂದೆಯಾಗಿರುವುದರಿಂದ ಮಗನೆಂಬ ಮಮತೆಯಿಂದ ಹೇಳುತ್ತಿದ್ದೇನೆಂದು ಕೃಷ್ಣನು ಧೃತರಾಷ್ಟ್ರನಿಗೆ ಹೇಳುತ್ತಿದ್ದಾನೋ ಎಂದು ಭೀಷ್ಮಾದಿ ಹಿರಿಯರೆಲ್ಲರೂ ಭಾವಿಸುವಂತೆ ವಿಚಿತ್ರಮಹಿಮನು ಮಾತನಾಡುತ್ತಿದ್ದನು.

''ನಿನ್ನ ಮಗ ಧರ್ಮರಾಜನು ನಿರ್ದೋಷನಾಗಿದ್ದಾನೆ. ಅವನಿಗೆ ನೀನು ಹಿಂಸೆಪಡಿಸಬಾರದು. ಅವನ ರಾಜ್ಯವನ್ನು ಮೋಸದಿಂದ ಕಸಿದುಕೋಂಡು ಕಾಡಿಗೆ ಅಟ್ಟಿದ್ದೀರಿ. ಇದು ಪಾಪಕರ್ಮ. ಈಗ ನಿನ್ನ ವಂಶ ಉಳಿಯಬೇಕೆಂಬ ಆಸೆ ನಿನಗಿದ್ದರೆ ಮೊದಲು ಪಾಂಡವರನ್ನು ಕರೆಸಿಕೊಂಡು ಅವರ ಭಾಗದ ರಾಜ್ಯಅವರಿಗೆ ಬಿಟ್ಟುಕೊಡು ಅದರಿಂದ ನಿನ್ನ ಕುಲವೃದ್ಧಿಹೊಂದುತ್ತದೆ. ಧರ್ಮಾರ್ಥ ಕಾಮಗಳೆಲ್ಲವೂ ನಿನ್ನ ಕರಗತವಾಗಿ ಕೀರ್ತಿವಂತನಾಗುವೆ. ನನ್ನ ಮಾತನ್ನು ತಿರಸ್ಕಾರ ಮಾಡಿ ಮಗನ ಮೇಲಿನ ಮೋಹದಿಂದ ಪಾಂಡವರಿಗೆ ದ್ರೋಹಮಾಡಿದರೆ ನಿನ್ನ ವಂಶವೇ ನಾಶ ಹೊಂದಿ ಅಪಕೀರ್ತಿಗೊಳಗಾಗಿ ಅನಾಥನಾಗುತ್ತಿ. ಸತ್ಯವಾದ ನೀತಿ ವಾಕ್ಯಗಳೆಲ್ಲವು ಭಗದ್ವಚನಗಳೆಂದು ತಿಳಿದು ಮನ್ನಣೆ ಕೊಟ್ಟು ನಡೆಯದಿದ್ದರೆ ನರಕಾದ್ಯನರ್ಥ ಸಂಕಟಗಳನ್ನು ಇಹಪರಗಳೆರಡರಲ್ಲೂ ಅನುಭವಿಸಬೇಕಾಗುತ್ತದೆ'' ಎಂದು ಹೇಳಿದನು.

ಕೃಷ್ಣನು ಪ್ರಯೋಗಿಸಿದ ವಾಕ್ಬಾಣದಿಂದ ಇಡೀ ಸಭಾ ನಡುಗಿತು. ಧೃತರಾಷ್ಟ್ರನ ಹೃದಯದಲ್ಲಿ ಕೆಂಡವನ್ನು ಸುರಿದಂತೆ ಸಂಕಟವಾಯಿತು. ''ಅಪ್ಪಾ! ಕೃಷ್ಣಾ! ನೀನು ಸರ್ವಸ್ವತಂತ್ರ. ಸರ್ವಶಕ್ತನೆಂದು ಸಕಲ ದೇವ ಋಷಿಗಳೂ ಹೇಳುತ್ತಾರೆ. ನಾನಾದರೋ ಕಣ್ಣುಕಾಣದ ಕುರುಡ. ನನ್ನನ್ನು ನೀನು ಹೀಗೆ ಬ್ರಹ್ಮಾಸ್ತ್ರದಂತಹ ಮಾತಿನ ಶರಜಾಲದಿಂದ ಇರಿದರೆ

ನಾನು ಏನುತಾನೇ ಮಾಡಬಲ್ಲೆನು ಸ್ವಾಮಿ.

ನನ್ನ ಮಗ ಪಾಪಬುದ್ಧಿ ಉಳ್ಳವನು ಅವನ ಮನದಲ್ಲಿ ನೀನು ಹೊಕ್ಕು ಅವನನ್ನು ಪರಿವರ್ತಿಸುವುದು ನಿನಗೆ ದೊಡ್ಡಮಾತಲ್ಲ ಅವನಿಗೆ ಧರ್ಮಬುದ್ಧಿಕೊಟ್ಟು ನನ್ನ ವಂಶ ಉಳಿಸು ಕೃಷ್ಣಾ'' ಎಂದು ಪ್ರಾರ್ಥಿಸಿಕೊಂಡನು.

ಆಗ ಕೃಷ್ಣನು ''ದುರ್ಯೋಧನ! ನೀನು ಇಷ್ಟುದೊಡ್ಡ ಸಾಮ್ರಾಜ್ಯವನ್ನು ಆಳುವ ಧರಣೀವಲ್ಲಭನಾಗಿದ್ದರೂ ಇನ್ನು ಬಾಲಕನಂತೆ ಹುಡುಗಾಟಿಕೆಯ ಚೇಷ್ಟೆಗಳಿಂದ ಮತ್ತನಾಗಬೇಡ. ಇಡೀ ಭರತಖಂಡದ ಹಿತಾಹಿತಗಳ ಜವಾಬ್ದಾರಿ ನಿನ್ನದಾಗಿರುವಾಗ ನಿನ್ನೊಬ್ಬನ ಸುಖವೇ ಸುಖವೆಂಬ ಸ್ವಾರ್ಥ ಉಳ್ಳವನಾದರೆ ಮಹಾವಿಪತ್ತು ಸಂಭವಿಸುತ್ತದೆ. ಅನ್ಯಾಯದಿಂದ ಅಪಹರಿಸಿದ ಸ್ವತ್ತು ಸುಖಕ್ಕೆ ಸಿಗುವುದಿಲ್ಲ ಸಂಕಟದ ಕೊರಕಲಲ್ಲಿ ಕೆಡವುತ್ತದೆಂಬ ಭಯದಿಂದ ಧರ್ಮರಾಜನನ್ನು ಕರೆಸಿಕೊಂಡು ಅವನ ರಾಜ್ಯ ಅವನಿಗೆ ಕೊಟ್ಟು ಕಾತುರದಿಂದ ಕಾಯುತ್ತಿರುವ ಕದನದ ದಳ್ಳುರಿಯಿಂದ ತಪ್ಪಿಸಿಕೊಂಡು ಬದುಕಿಕೊ''ಎಂದನು.

ಶ್ರೀಕೃಷ್ಣನ ವೇದವಾಕ್ಯದಲ್ಲಿ ಧರ್ಮಸೂಕ್ಷ್ಮಗಳು ತುಂಬಿದ್ದರೂ ದುರ್ಯೋಧನನ ಮನಸ್ಸಿನಲ್ಲಿ ಕ್ರೋಧದ ಕಿಡಿಗಳನ್ನು ತುಂಬಿ ಕೆರಳಿಸುವಂತೆ ಅವನನ್ನು ಹೋರಾಟಕ್ಕೆ ಹೊಡೆದೆಬ್ಬಿಸುವಂತೆ ಅಸುರ ಜನರಿಗೆ ವಿಪರೀತಜ್ಞಾನ ಉಂಟಾಗುವಂತೆ ಪ್ರಭಾವ ಬೀರುವಂತಿತ್ತು.

ಸಭಾಭವನದಲ್ಲಿ ಕುಳಿತ್ತಿದ್ದ ಸಕಲ ಋಷಿವರರೂ, ರಾಜರ್ಷಿವರರೂ, ಭೀಷ್ಮಾದಿ ಹಿರಿಯರು ಶ್ರೀಕೃಷ್ಣನ ವೇದವಾಕ್ಯಗಳನ್ನು ಶ್ರವಣಮಾಡಿ ನಮ್ಮಕಿವಿಗಳು ಪವಿತ್ರವಾದವು ಎಂದು ಮಾತನಾಡಿಕೊಂಡು ಕನಿಕರದಿಂದ ದುರ್ಯೋಧನನ್ನು ಕುರಿತು''ದುರ್ಯೋಧನಾ! ಶ್ರೀಕೃಷ್ಣನ ಮಾತುಗಳನ್ನು ಶ್ರದ್ದೆಯಿಂದ ಮನನಮಾಡಿಕೊಂಡು ನೀನು ಅದರಂತೆ ನಡೆದರೆ ಸರ್ವರಿಗೂ ಶುಭೋದಯವಾಗುತ್ತದೆ. ಕೃಷ್ಣನ ಮಾತೆಂದರೆ ಸಾಮಾನ್ಯ ಜನರು ಪಕ್ಷವಿಪಕ್ಷಗಳ ಭೇದದಿಂದ ಆಡತಕ್ಕೆ ಸುಳ್ಳಿನ ಕಂತೆಗಳಲ್ಲ. ಸತ್ಯವಾದ ಸ್ಥಿರವಾದ ಎಂದೆಂದಿಗೂ ನಾಶವಾಗದಂಥ ಸ್ವಚ್ಛಸುಖದ ಹಿತನುಡಿ ಎಂದು ತಿಳಿ'' ಎಂದು ಉಪದೇಶಮಾಡುತ್ತಿದ್ದರೆ ದೇವಸಭೆಯಲ್ಲಿ ಕಲಿದೋಶರಹಿತವಾದ ಶುದ್ದವಾಕ್ಯಗಳನ್ನು ಕೇಳಲಾರದ ಕಲಿಮಲದೋಶ ಉಳ್ಳವರಾದ ದುರ್ಯೋಧನ, ದುಶ್ಯಾಸನ, ಶಕುನಿ, ಕರ್ಣ ಮೊದಲಾದವರೆಲ್ಲರೂ ಕೃಷ್ಣನನ್ನು ಮತ್ಸರದಿಂದ ನೋಡುತ್ತ ಸಭಾತ್ಯಾಗಮಾಡಿ ಹೊರಟುಹೋದರು. ಕರ್ಣನು ಸ್ವಭಾವತ:ಧುಷ್ಟನಲ್ಲ. ಸೂರ್ಯಾಂಶ ಸಂಭೂತನಾದರು ಶ್ರೀಕೃಷ್ಣನನ್ನು ಏಕೆ ವಿರೋಧಮಾಡಿದನೆಂದರೆ ಅವನಲ್ಲಿ ಕಲಿ ಆವೇಶವಿತ್ತು. ಮತ್ತು ಅವನು ದುರ್ಯೋಧನನ ಮನೆಯಲ್ಲಿ ಪಾಪದನ್ನ ತಿಂದ ಫಲದಿಂದಲೂ ಹರಿದ್ವೇಶಿಗಳ ಆಶ್ರಯ ಪಡೆದ ಪಾಪದಿಂದಲೂ ಶ್ರೀಕೃಷ್ಣನಾರೆಂದು ತಿಳಿದಿದ್ದರೂ ಅಜ್ಞಾನದಿಂದ ನಡೆದನು. ಕರ್ಣನ ಅಂತರಂಗ ಕೃಷ್ಣಸಕಲ ಸ್ವತಂತ್ರಗುಣಪೂರ್ಣ ಎಂಬುದನ್ನು ಸಾರಿಸಾರಿ ಹೇಳುತ್ತಿತ್ತು.

ವಿಕರ್ಣನು ಸ್ವಭಾವತ: ಭಗವದ್ವೇಶಿ ಆಗಿದ್ದನು. ಅವನು ಶ್ರೀಕೃಷ್ಣನ ಮಹಿಮಾಪೂರ್ಣತೆ ತಿಳಿದಿರಲಿಲ್ಲ. ಆದರೂ ಕೃಷ್ಣ ರಾಜಕಾರಣದಲ್ಲಿ ಬಹಳ ಚತುರ ಅವನಿಗೆ ಜನರನ್ನು ಮೋಡಿಯಿಂದ ಸೆಳೆದುಕೊಳ್ಳೊಶಕ್ತಿಯಿದೆ. ಚಮತ್ಕಾರಿ ಎಂದು ತಿಳಿದು ಅವನನ್ನು ದ್ವೇಶಮಾಡಬಾರದೆಂದು ಬೂಟಾಟಿಕೆಯನ್ನು ತೋರಿಸಿ ಕೃಷ್ಣನನ್ನು ಹೊಗಳುತ್ತಿದ್ದನು, ಆದ್ದರಿಂದ ಅವನಿಗೆ ಹೀನಗತಿಯೇ ಸಿಕ್ಕಿತು. ಕರ್ಣ ಜೀವನದ ಹೋರಾಟಕ್ಕೆ ಸಿಕ್ಕು ಕೃಷ್ಣನನ್ನು ದ್ವೇಶಿಸಿದರೂ ಸ್ವಾಮಿಯನ್ನು ಸ್ವಚ್ಛ ಜ್ಞಾನದಿಂದ ಅರಿತಿದ್ದ ಆದ್ದರಿಂದ ಅವನಿಗೆ ಶುಭಗತಿ ಸಿಕ್ಕಿತು.

ದುರ್ಯೋಧನಾದಿಗಳು ಅನೇಕ ತಪಸ್ವಿಗಳು ಪವಿತ್ರಾತ್ಮರು ದೇವತೆಗಳು ನೆರೆದ ಸಭೆಯೊಳಗೆ ಕುಹಕ ಕುತಂತ್ರಗಳಿಗೆ ಆಸ್ಪದವಿಲ್ಲದೆ ಪವಿತ್ರ ಪ್ರವಚನಗಳೇ ಹೊರಹೊಮ್ಮಿ ಬರುತ್ತಿರುವುದನ್ನು ಕೇಳಲಾರದವರಾದರು. ಇಡೀ ಸಭೆಯೇ ಕೃಷ್ಣನ ಪರವಹಿಸಿ ತಮ್ಮನ್ನು ತೆಗಳಿಮಾತನಾಡುವುದನ್ನು ಸಹಿಸಲಾರದವರಾದರು. ಈ ಕೃಷ್ಣನು ಯಾವುದೋ ಓಂದು ವಿಧವಾದ ಮೋಡಿಯಿಂದ ಎಲ್ಲರನ್ನೂ ತನ್ನತ್ತಸೆಳೆಯುತ್ತಾನೆ ಎಂದು ಸ್ವಾಮಿಯಿಂದ ಅಜ್ಞಾನವೆಂಬ ಪಾಶದಿಂದ ಬಿಗಿಯಲ್ಪಟ್ಟ ಅಸುರರು ಇದಕ್ಕೆ ಉಪಾಯವೇನು?'' ಎಂದು ಗುಪ್ತಸಭೆ ಸೇರಿಸಿದರು. ''ಕೃಷ್ಣನ ಚಮತ್ಕಾರದ ಮಾತುಗಳಿಗೆ ಧೃತರಾಷ್ಟ್ರಗಾಂಧಾರಿಯರು ಕರಗಿ ನೀರಾಗಿ ಹೋದರು ಋಷಿಮುನಿಗಳು ಕೃಷ್ಣನ ವಚನಾಮೃತ ತಮಗೆ ಸಿಕ್ಕಿತೆಂದು ಚಪ್ಪರಿಸುತ್ತಾ ನಮಗೇ ಉಪದೇಶಮಾಡಲು ಬರಹತ್ತಿದರು. ಇದೆಲ್ಲಾವನ್ನು ನೋಡಿದರೆ ಕೃಷ್ಣನ ಮಾತಿನ ಆಕರ್ಶಣಶಕ್ತಿ ಜಗತ್ತನ್ನೇ ತಲೆಕೆಳಗಾಗಿ ಮಾಡುವಂತಿದೆ. ಆದ್ದರಿಂದ ಇವನನ್ನು ಯಾರೊಂದಿಗೂ ಸಂಪರ್ಕಿಸಲು ಬಿಡದಂತೆ ಕೈಕಾಲು ಕಟ್ಟಿ ಕಾರಾಗೃಹದಲ್ಲಿ ಬಂಧಿಸಿಟ್ಟುಬಿಡಬೇಕು. ಆಗ ಪಾಂಡವರ ಸೊಕ್ಕು ಅಡಗುತ್ತದೆ. ಕೃಷ್ಣನ ಕಾಟವೂ ತಪ್ಪುತ್ತದೆ'' ಎಂದು ಆಲೋಚನೆ ಮಾಡಿದರು.

ದುರ್ಯೋಧನಾದಿ ಖಳರು ಶ್ರೀಕೃಷ್ಣನನ್ನು ಹಗ್ಗದಿಂದ ಕಟ್ಟಿ ಕಾರಾಗೃಹಕ್ಕೆ ಹಾಕುವುದಕ್ಕೆ ಒಳಸಂಚನ್ನು ನಡೆಸುತ್ತಿರುವುದನ್ನು ಯಾದವ ವೀರರು ಗೂಡಚಾರರಿಂದ ತಿಳಿದು ಸಾತ್ಯಕಿಗೆ ಹೇಳಿದರು. ಯಾದವ ವೀರರಿಗೆ ಕೃಷ್ಣ ನಾರಾಯಣನೆಂಬ ಜ್ಞಾನವಿರಲಿಲ್ಲ ಆದರೆ ಆವನಲ್ಲಿ ಅವಿಚ್ಛಿನ್ನಭಕ್ತಿಯಿತ್ತು.

ಆಗ ಸಾತ್ಯಕಿ ಕೃಷ್ಣನ ಸಮೀಪಕ್ಕೆ ಶತ್ರುಗಳು ಹೋಗದಂತೆ ಸೇನಾದಳವನ್ನು ಕಾವಲಿರಿಸಿ ತಾನೊಬ್ಬನು ಕೃಷ್ಣನ ಬಳಿಗೆ ಬಂದು ''ಕೃಷ್ಣಾ!ದುರ್ಯೋಧನಾದಿ ದುಷ್ಟರೆಲ್ಲರೂ ಸೇರಿ ನಿನ್ನನ್ನು ಕೈಸೆರೆಹಿಡಿದು ಸೆರೆಮನೆಯೊಳಗೆ ಸೇರಿಸಲು ಹೊಂಚುಹಾಕುತ್ತಿದ್ದಾರೆ. ಇನ್ನು ಇಲ್ಲಿದ್ದರೆ ಅಪಾಯ ತಪ್ಪಿದಲ್ಲ ಬೇಗ ಇಲ್ಲಿಂದ ಹೊರಟು ಬಿಡು'' ಎಂದನು. ಸಾತ್ಯಕಿಯ ಮಾತನ್ನು ಕೇಳಿದ ಕೃಷ್ಣನು ನಗುತ್ತ ಧೃತರಾಷ್ಟ್ರ! ನಿನ್ನ ಮಕ್ಕಳೆಲ್ಲರೂ ಒಟ್ಟುಗೂಡಿ ನನ್ನನ್ನು ಕಟ್ಟಿಹಾಕುತ್ತಾರಂತೆ ನಿನಗೂ ಅವರ ಪರಾಕ್ರಮವನ್ನುನೋಡಲು ಕಣ್ಣು ಕೊಡುತ್ತೇನೆ ನೋಡಿ ಆನಂದಪಡು ಎಂದು ಹೇಳಿ ಧೃತರಾಷ್ಟ್ರನಿಗೆ ದಿವ್ಯದೃಷ್ಟಿಯನ್ನು ಕೊಟ್ಟನು. ದುರುಳರ ಗುಂಪು ನುಗ್ಗಿಬಂದು

ಕೃಷ್ಣನನ್ನು ಕಟ್ಟಬೇಕೆಂದರೆ ಅನಂತಸೂರ್ಯರು ಏಕಕಾಲದಲ್ಲಿ ಬೆಳಗಿಬಂದಂತೆ ಪ್ರಕಾಶ ತುಂಬಿ ಹೋಯಿತು ಎಲ್ಲರೂ ಕೃಷ್ಣನಂತೆಯೇ ಕಾಣುತ್ತಿದ್ದರು. ಅದರ ಸಮೂಹದಲ್ಲೇ ಅವರವರೇ ಕೃಷ್ಣನೆಂಬ ಭ್ರಮೆಯಿಂದ ಒಬ್ಬರನ್ನೊಬ್ಬರು ಕಟ್ಟಿಕೊಳ್ಳುತ್ತಿದ್ದರು ಎಳೆದಾಡುತ್ತಿದ್ದರು.

ಧೃತರಾಷ್ಟ್ರಗಾಂಧಾರಿಯರು ಮಕ್ಕಳ ಮೂರ್ಖತನವನ್ನು ಶ್ರೀ ಕೃಷ್ಣನ ಅದ್ಭುತಲೀಲೆಯನ್ನು ನೋಡಿ ಆಶ್ಚರ್ಯಹೊಂದಿ ದುಃಖಪಟ್ಟರು. ಕೃಷ್ಣಾ! ನೀನು ನನಗೆ ದೃಷ್ಟಿಯನ್ನು ಕೊಟ್ಟಿರುವೆ ಆದರಿಂದ ನನಗೆ ಸುಖಕ್ಕೆ ಬದಲು ದುಃಖವೇ ಆಗುತ್ತಿದೆ. ಬೇಡಪ್ಪ ನಾನು ಮೂರ್ಖ ಮಕ್ಕಳ ಪಾಪಕಾರ್ಯವನ್ನು ನೋಡಲಾರೆ ನಾನು ಕುರುಡನಾಗಿಯೇ ಇರುತ್ತೇನೆ'' ಎಂದು ಕೇಳಿಕೊಂಡನು. ಕೃಷ್ಣನು ಧೃತರಾಷ್ಟ್ರನ ಅಂತರಂಗ ಪಶ್ಚಾತ್ತಾಪದಿಂದ ಪರಿತಪಿಸುವುದನ್ನು ನೋಡಿ ಅವನನ್ನು ದೃಷ್ಟಿ ಶೂನ್ಯನನ್ನಾಗಿಯೇ ಮಾಡಿದನು. ತನ್ನ ವಿಶ್ವರೂಪವನ್ನು ಆಚ್ಛಾದಿಸಲು ಎಲ್ಲರ ಕಣ್ಮುಂದೇ ಕೃಷ್ಣ ಮೊದಲಿನ ರೂಪವನ್ನೆ ತೋರಿಸುತ್ತ ನಿಂತಿರಲು ದುರ್ಯೋಧನಾದಿಗಳೆಲ್ಲರೂ ಲಜ್ಜೆಯಿಂದ ಹೊರಟುಹೋದರು.

ದುರ್ಯೋಧನನು ತಮೋಯೋಗ್ಯನಾದ್ದರಿಂದ ಅವನನ್ನು ಅಧರ್ಮಮಾರ್ಗಕ್ಕೇ ಸ್ವಾಮಿ ಎಳೆಯುತ್ತಿದ್ದನು. ಅಂಧಂತಮನಸ್ಸಿಗೆ ದುರ್ಯೋಧನ ಯೋಗ್ಯನಾದ್ದರಿಂದ ಅವನಿಗೆ ಉತ್ತಮಜ್ಞಾನವನ್ನು ಕೊಡದೆ ಕೆರಳಿಸಿ ''ದುರ್ಯೋಧನನು ನಾನು ಎಷ್ಟು ಹಿತೋಪದೇಶಮಾಡಿದರು ಕೇಳಲಿಲ್ಲ ಅವನು ಯುದ್ಧವನ್ನೇ ನಿಶ್ಚಯಮಾಡಿದ್ದಾನೆ'' ಎಂದು ಸಮಸ್ತರಿಗೂ ತಿಳಿಸಿ ಕುಂತಿದೇವಿಯ ಬಳಿಗೆ ಬಂದನು.

ಕುಂತಿದೇವಿಯನ್ನು ಕುರಿತು ''ನೀನು ಸಮಯಕಾದು ಕರ್ಣನೊಬ್ಬನನ್ನೇ ಸಂಧಿಸಿ ನಿನ್ನ ಮಾತೃ ಸಂಬಂಧವನ್ನು ಅವನಿಗೆ ಮೊದಲು ತಿಳಿಸಿ ನಂತರ ಅವನಿಂದ ಎರಡು ವಾಗ್ದಾನಪಡೆ ಏನೆಂದರೆ ತೊಟ್ಟಬಾಣ ತೊಡಬಾರದು ಮತ್ತು ಪಾಂಡವರೈದು ಜನರಲ್ಲಿ ನೀನು ಒಬ್ಬರನ್ನೂ ಕೊಲ್ಲಬಾರದು ಎಂಬ ಎರಡು ಮಾತು ನಡೆಸಿಕೊಡು'' ಎಂದು ಕೇಳು ಎಂದು ಹೇಳಿಕೊಟ್ಟನಂತರ. ಕುಂತಿ! ದುರ್ಯೋಧನನು ನಿನ್ನ ಮಕ್ಕಳಿಗೆ ರಾಜ್ಯಕೊಡಲು ಒಪ್ಪಲಿಲ್ಲ ಪಾಂಡವರ ದೂತನಾಗಿ ಬಂದ ನಾನು ಈಗ ಉಪಪ್ಲಾವ್ಯಕ್ಕೆ ಹೊರಟ್ಟಿದ್ದೇನೆ ನಿನ್ನ ಮಕ್ಕಳಿಗೆ ನಿನ್ನ ಸಂದೇಶ ತಿಳಿಸು ಎಂದಾಗ ಕುಂತಿಯು ''ಕೃಷ್ಣಾ! ನನ್ನ ಮಕ್ಕಳು ವೀರಕ್ಷತ್ರಿಯರಾಗಿದ್ದಾರೆ. ಮುಖ್ಯವಾಗಿ ನಿನ್ನ ಬಲವಾದ ಆಶ್ರಯ ಅವರಿಗಿರುವುದರಿಂದ ಅಂಜಬೇಕಾಗಿಲ್ಲ ಯುದ್ಧವನ್ನೇ ನಡೆಸಿ ರಾಜ್ಯ ವಶಪಡಿಸಿಕೊಳ್ಳಲೀ ಎಂದಳು. ಕೃಷ್ಣನು ಹೀಗೆ ಎಲ್ಲರ ಮನಸ್ಸನ್ನು ಬಹಿರಂಗಪಡಿಸಿ ಎಲ್ಲರ ಮುಂದು ಕೌರವರಿಂದಲೇ ಕಾದಾಟ ಪ್ರಾರಂಭವಾಯಿತೆಂದು ಖಚಿತಪಡಿಸಿದನಂತರ ಕೃಷ್ಣ ತಾನು ವಹಿಸಿಕೊಂಡು ಬಂದ ದೂತಕಾರ್ಯವನ್ನು ಅಚ್ಚುಕಟ್ಟಾಗಿ ಪೂರೈಸಿ ಯಾರು ಯಾರಿಗೆ ಏನೇನು ಯಾವರೀತಿಯಲ್ಲಿ ಹೇಳಬೇಕೋ ಅದೇರೀತಿಯಲ್ಲಿ ಹೇಳಿ ಧೃತರಾಷ್ಟ್ರ ಭೀಷ್ಮಾದಿಗಳೆಲ್ಲರಿಗೂ ದುರ್ಯೋಧನನು

ಶಾಂತಿ, ಸ್ನೇಹಗಳಿಗೆ ಒಪ್ಪುತ್ತಿಲ್ಲವೆಂದು ಎಲ್ಲರೂ ತಿಳಿದಿದ್ದೀರಿ ನಾನು ಇದ್ದಸಂಗತಿ ಪಾಂಡವರಿಗೆ ತಿಳಿಸುತ್ತೇನೆಂದು ಉಪಪ್ಲಾವ್ಯಕ್ಕೆ ಹೊರಟನು. ಕೃಷ್ಣನನ್ನು ಕಳುಹಿಸಿಕೊಡಲು ಭೀಷ್ಮಾದಿಗಳು ಹೊರಟಾಗ ಕರ್ಣನು ಅವರ ಜೊತೆಯಲ್ಲಿದ್ದನು.

ಕರ್ಣ, ಅಶ್ವತ್ಥಾಮರು ದುರ್ಯೋಧನನಿಗೆ ಬಹಳ ಆಪ್ತರಾದ್ದರಿಂದ ಕೃಷ್ಣ ಹೋಗುವಾಗ ಏನು ಚಮತ್ಕಾರದಿಂದ ಭೀಷ್ಮಾದಿಗಳ ಮನಸ್ಸಿನಲ್ಲಿ ವಿಷಬೀಜವನ್ನುಬಿತ್ತಿಹೋಗುತ್ತಾನೋ ಎಂಬ ಭಯದಿಂದ ಬಂದಿದ್ದರು. ಸರ್ವಾಂತರ್ಗತನಾದ ಶ್ರೀಕೃಷ್ಣನು ಕರ್ಣನ ಮನದಾತಂಕವೇನೆಂದು ಅರಿಯನೇ? ರಥ ಏರಿದ ಕೃಷ್ಣ ಕರ್ಣನನ್ನು ಮಂದಹಾಸದಿಂದ ನೋಡಿ ''ಕರ್ಣ! ಬಾ' ಎಂದು ಕೈಬೀಸಿ ಕರೆದನು. ಕರ್ಣನಿಗೆ ಆಶ್ಚರ್ಯವಾಗಿ ಇದೇನು ನಾನು ಕೃಷ್ಣನ ವೈರಿ ಪಕ್ಷದವನಾದರೂ ನನ್ನನ್ನು ಕರೆಯುತ್ತಿದ್ದಾನೆ ನನಗಿನ್ನೇನು ಕಾದಿದೆಯೋ? ಎಂದು ಭಯದಿಂದ 'ಕೃಷ್ಣಾ! ನನ್ನೊಡನೆ ಏನು ಏಕಾಂತ' ನಾನು ನಿನ್ನ ಶತ್ರುವಿನ ಆಪ್ತಮಿತ್ರ ನನ್ನನ್ನುಕರೆಯಬೇಡ'' ಎಂದನು.

ಆಗ ಕೃಷ್ಣನು ಕರ್ಣನನ್ನು ರಥದಮೇಲೇರಿಸಿಕೊಂಡು ಅತ್ಯಂತ ಸಮೀಪದಲ್ಲಿ ಕೂಡಿಸಿಕೊಂಡು ''ಕರ್ಣಾ! ನೀನು ನನಗೆ ದೂರದವನಲ್ಲವಪ್ಪಾ!ನನ್ನ ವಂಶದವನೇ ಆಗಿದ್ದಿ ನನ್ನ ಸೋದರತ್ತೆಯ ಮಗ ನೀನು. ನನಗೆ ಪಾಂಡವರೆಂದರೆ ಬಹಳ ಪ್ರೀತಿ ನನ್ನ ಪ್ರಾಣವೆಂದೇ ಅರಿತಿದ್ದೇನೆ. ನೀನು ನನ್ನ ಸೋದರತ್ತೆಯಾದ ಕುಂತೀದೇವಿಯಲ್ಲಿ ಜನಿಸಿದವನು ಧರ್ಮರಾಜನಿಗೆ ನೀನು ಅಣ್ಣನಾಗಿದ್ದಿ. ಪುಣ್ಯಾತ್ಮಳಾದ ಕುಂತೀದೇವಿ ದೂರ್ವಾಸರಿಂದ ಉಪದೇಶಿಸಲ್ಪಟ್ಟ ಮಂತ್ರದಿಂದ ಸೂರ್ಯನನ್ನು ಕರೆದು ಅವನಿಂದ ನಿನ್ನನ್ನು ಹಡೆದಿದ್ದಾಳೆಂದರೆ ನೀನೇನು ಸಾಮಾನ್ಯನೇ? ಪಾಂಡುರಾಜನ ವರಪುತ್ರನಾಗಿ ಹಸ್ತಿನಾವತಿಯ ಚಕ್ರವರ್ತಿಯಾಗಬೇಕಾದ ನೀನು ಆ ಹೀನ ದುರ್ಯೋಧನನ ಎಂಜಲಿಗೆ ಕೈವೊಡ್ಡುವುದೆ? ನಿನ್ನನ್ನುಸೂತಪುತ್ರನೆಂದು ಲೋಕ ಸುಳ್ಳುಅಪಾದನೆ ಹೊರಿಸಿದೆ ಕುಂತೀ ವಿವಾಹಕ್ಕೆ ಮುಂಚೆ ಬಾಲಬುದ್ಧಿಯಿಂದ ದೂರ್ವಾಸರಿಂದ ಉಪದೇಶಗೊಂಡ ಮಂತ್ರೋಚ್ಚಾರಣೇ ಮಾಡಿದಳು ಆಗ ಸೂರ್ಯಮಂತ್ರ ಪ್ರಭಾವದಿಂದ ನಿನ್ನನ್ನು ಕರುಣಿಸಿದಾಗ ಕುಂತಿ ಜನದೂಷಣೆಗೆ ಹೆದರಿ ನಿನ್ನನ್ನು ಗಂಗೆಗೆ ಹಾಕಿದಳು. ನೀನು ಸೂತನ ಕೈಸೇರಿ ಅವನಿಂದ ಪಾಲನೆ ಪೋಷಣೆ ಹೊಂದಿದ ಕಾರಣ ಸೂತ ಪುತ್ರನೆಂದು ಜನ ತಿಳಿದಿದ್ದಾರೆ. ಸರ್ವಜ್ಞರಾದ ಪರಶುರಾಮರು ನೀನು ಸೂರ್ಯ ಪುತ್ರನೆಂದು ತಿಳಿದೇ ನಿನ್ನನ್ನು ಶಿಷ್ಯನಾಗಿ ಅಂಗೀಕರಿಸಿ ನಿನಗೆ ವಿದ್ಯಾದಾನ ಮಾಡಿದ್ದಾರೆ. ಇಂಥ ಮಹಾಪುಣ್ಯವಂತನಾದ ನೀನು ಹೀನಬುದ್ಧಿಯ ಕುಲನಾಶಕ್ಕೆ ಮೂಲನಾಗಿ ಕಲಿದೋಶ ಉಳ್ಳ ದುರ್ಯೋಧನನನ್ನು ಆಶ್ರಯ ಮಾಡಬಾರದು. ಬಾ ಪಾಂಡವರಿಗೆ ನೀನೇ ತಂದೆಯ ಸ್ಥಾನದಲ್ಲಿ ನಿಂತು ಮಾ[illegible]ನ ನೀಡಿ ನೀನೇ ಸಿಂಹಾಸನವನ್ನು ಏರಿ ಕೀರ್ತಿವಂತನಾಗು'' ಎಂದು ಹೇಳಿ ಕರ್ಣನ [illegible]ಲ್ಲಿದ್ದ ಸ್ನೇಹಸರೋವರವನ್ನು ಕಲಕಿ ಬಗ್ಗಡ ಮಾಡಿದನು.

ಕರ್ಣನು ಸ್ವಭಾವತ: ಉತ್ತಮನಾದರೂ ಕಲಿ ಆವೇಶದಿಂದ ಶ್ರೀಕೃಷ್ಣನಿತ್ತಕಲ್ಲು ಸಕ್ಕರೆಯ ಮಹತ್ವವನ್ನು ಅರಿಯದಾದೆನು ಕಲ್ಲು ಕಠೋರವಾದರು ಸಿಹಿ ತುಂಬಿದೆ ಎಂಬ ವಿವೇಕವಿಲ್ಲದೆ ಅಳತೊಡಗಿದನು. ಕೃಷ್ಣ! ನನ್ನನ್ನು ಕೊಂದೆ ನನ್ನನ್ನು ನಂಬಿದ ದುರ್ಯೋಧನನನ್ನು ಇಂದೇ ಕೊಂದಂತಾಯಿತು. ನನಗೆ ಪದವಿ ಕೀರ್ತಿ ಏನೂ ಬೇಕಾಗಿಲ್ಲ! ನೀನು ಏನೇಕೊಟ್ಟರು ನಾನು ನನಗೆ ಪುರ್ಣಾಶ್ರಯ ನೀಡಿರುವ ದುರ್ಯೋಧನನನ್ನು ಮಾತ್ರ ಬಿಡಲಾರೆ ಎಂದನು ಏಕೆಂದರೆ ಕಲಿಗೆ ದೇವರ ಆಶ್ರಯ ಹಿತವಲ್ಲ ಅವನಿಗೆ ದೈತ್ಯರ ಆಶ್ರಯವೇ ಶ್ರೇಯಸ್ಕರ ಆದರಂತೆ ಕರ್ಣನಿಂದ ಮಾತು ಹೊರಟಿತು.

ಶ್ರೀ ಕೃಷ್ಣನು ಕರ್ಣನ ಮನಸ್ಸಿನಲ್ಲಿಹೊಕ್ಕಿರಿದು ನಂತರ ಅಶ್ವತ್ಥಾಮನನ್ನು ಕರೆದು ''ಅಶ್ವತ್ಥಾಮ! ನೀನು ಗುರುಪುತ್ರ ಅಷ್ಟೇ ಅಲ್ಲದೆ ಶ್ರೇಷ್ಟಬ್ರಾಹ್ಮಣ ಕುಲದವನು ನಿನಗೆ ಪಾಪಿಗಳ ಸಹವಾಸ ಯೋಗ್ಯವಲ್ಲ ಪಾಂಡವರ ಪಕ್ಷಕ್ಕೆ ಬಾ'' ಎಂದನು.

ಕೃಷ್ಣಾ! ನಾನು ನನ್ನ ತಂದೆ ಪಕ್ಷವನ್ನು ಬಿಡತಕ್ಕವನಲ್ಲ ಪಾಂಡವರು ನನ್ನ ತಂದೆಯ ತಂಟೆಗೆ ಬರದಿದ್ದರೆ ನಾನು ಅವರೊಡನೆ ಯುದ್ಧಕ್ಕೆ ಹೋಗುವುದಿಲ್ಲ. ಅವರು ನನ್ನ ತಂದೆಯನ್ನು ಎದರಿಸಿದಾಗ ನಾನು ಅವರೊಡನೆ ಯುದ್ಧಮಾಡದೆ ಬಿಡತಕ್ಕವನಲ್ಲ'' ಎಂದನು. ಹೀಗೆ ಕೃಷ್ಣನು ಕುಂತಿ, ಕರ್ಣ, ಅಶ್ವತ್ಥಾಮ ಎಲ್ಲರ ಮನಸ್ಸಿನಲ್ಲೂ ದೈತ್ಯ ಧ್ವಂಸನ ಕಾರ್ಯಕ್ಕೆ ನಾಂದಿ ಕಲಶವನ್ನು ಸ್ಥಾಪಿಸಿ ಮುಂದಿನ ಸಿದ್ದತೆಗೆ ಹೊರಟನು.

ಸ್ವಾಮಿ ಸಂಕಲ್ಪ ಮಾತ್ರದಿಂದಲೇ ಏನು ಬೇಕಾದರೂ ಮಾಡಬಲ್ಲ ಸರ್ವ ಸ್ವತಂತ್ರನಾದಾಗ್ಯೂ ಅಸುರ ಜನರಿಗೆ ಅಜ್ಞಾನ ವೃದ್ಧಿಪಡಿಸಲಿಕ್ಕಾಗಿ ಅನೇಕ ತಂತ್ರಗಳನ್ನು ಮಾಡಿದವನಂತೆ ವಿಡಂಬನೆ ತೋರಿಸಿದ ದೇವೋತ್ತಮನ ಕಥಾ ಸವಿಯನ್ನೂ ಎಷ್ಟು ಸವಿದರು ಸಾಲದಂತಿದೆ.

## ಕರ್ಣನಿಗೆ ಕುಂತಿ ಚುಚ್ಚಿದ ಮತ್ತೊಂದು ಮುಳ್ಳು

ಕರ್ಣನಿಗೆ ಕೃಷ್ಣನಿಂದ ತನ್ನ ಕುಲಗೋತ್ರಗಳ ರಹಸ್ಯಗಳನ್ನು ಕೇಳಿದಾಗಿನಿಂದಲೂ ದುರ್ಯೋಧನನಿಗೆ ತನ್ನ ಸ್ವಚ್ಛಸೇವೆ ಸಲ್ಲಿಸಲಾರದಂತಾಯಿತಲ್ಲ ಎಂಬ ಖೇದ ತುಂಬಿತು.

ನೀನು ಪಾಂಡವ, ಪಾಂಡುರಾಜನ ಹಿರಿಯಪುತ್ರ ಎಂಬ ಮಾತು ಸದಾ ಅವನ ಕಿವಿಯಲ್ಲಿ ಅಪ್ಪಳಿಸುತ್ತಿತ್ತು.

ಒಂದು ದಿನ ಗಂಗಾತೀರದಲ್ಲಿ ಪ್ರಾತ:ಸ್ನಾನಾಹ್ನಿಕಗಳಲ್ಲಿ ನಿರತನಾಗಿರುವಾಗ ಕುಂತಿ ಬಂದಳು. ಈಕೆ ಹರಿಯ ವಾಗ್ಬಾಣದಿಂದ ಹಾರಿಬಂದವಳೆಂದು ಬಾವಿಸಿ 'ಕುಂತೀ! ಏತಕ್ಕಾಗಿ ಇಲ್ಲಿಗೆ ಒಂಟಿಯಾಗಿ ಬಂದಿರುವಿ?' ಎಂದನು. 'ಕಂದಾ: ನಿನ್ನ ತಾಯಿ ಮಮತೆಯಿಂದ

ಮಾತನಾಡಿಸಲು ಬರಬಾರದೆ' ಎಂದಳು. ತಾಯೆ: ಅಂದು ರಾಜಸಭೆಯಲ್ಲಿ ಗುರುಹಿರಿಯರೆಲ್ಲರೂ ನನ್ನನ್ನು ಸೂತಪುತ್ರನೆಂದು ಹೀನಾಯಮಾಡಿ ತಳ್ಳಿದಾಗ ''ಕರ್ಣ ಸೂತಪುತ್ರನಲ್ಲ ಪಾಂಡುರಾಜನ ಪುತ್ರ ಎಂದು ಹೇಳಿ ನನಗೆ ಸ್ಥಾನಮಾನಗಳನ್ನು ತಾಯಿ ಕೊಡಿಸಲಿಲ್ಲ. ದುರ್ಯೋಧನ ನನಗೆ ರಾಜ್ಯಕೊಟ್ಟ, ಮಾತೃವಾತ್ಸಲ್ಯವನ್ನು ಕೊಟ್ಟ ಆದ್ದರಿಂದ ಅವನೇ ನನಗೆ ನಿಜವಾದ ತಾಯಿ'' ಎಂದನು. ಆಗ ಕುಂತಿಯು ಕರ್ಣ! ದೈವಸಂಕಲ್ಪದಂತೆ ಎಲ್ಲವೂ ನಡೆಯಿತೆಂದು ತಿಳಿ. ಈಗ ನಿನ್ನ ತಾಯಿ ನಿನ್ನ ಬಳಿಗೆ ಯಾಚನೆಗಾಗಿ ಬಂದಿದ್ದೇನೆ ನೀಡುವೆಯಾ?'' ಎಂದಳು ''ನಾನು ದುರ್ಯೋಧನನ ಸ್ವತ್ತು ನನ್ನನ್ನು ಬಿಟ್ಟು ಮಿಕ್ಕದನ್ನು ಏನು ಬೇಕಾದರು ಕೇಳು ಎಂದನು.ಕರ್ಣಾ ನನ್ನ ಐದು ಮಂದಿ ಪುತ್ರರಲ್ಲಿ ನೀನು ಯಾರೊಬ್ಬರನ್ನೂ ಕೊಲ್ಲಬಾರದು'' ಎಂದಳು ತಾಯೇ! ನಾನು ನಿನ್ನ ನಾಲ್ಕು ಜನ ಪುತ್ರರ್ಯಾರ ಮೇಲು ಯುದ್ಧಮಾಡುವುದಿಲ್ಲ ಅರ್ಜುನನೊಡನೆ ಯುದ್ಧಮಾಡುತ್ತೇನೆ. ಅರ್ಜುನ ಸತ್ತರೆ ನಾನು ಸೇರಿ ನಿನಗೆ ಐದು ಜನ ಪುತ್ರರಿದ್ದೇವೆಂದು ಭಾವಿಸು ನಾನು ಸತ್ತರೆ ಆಗಲೂ ನಿನಗೆ ಐದು ಜನ ಪುತ್ರರಿದ್ದೇ ಇರುತ್ತಾರೆ ಎಂದನು ನಂತರ ಕುಂತೀಯು ''ಕರ್ಣ! ತೊಟ್ಟ ಬಾಣ ತೋಡುವುದಿಲ್ಲವೆಂಬ ಪ್ರತಿಜ್ಞೆಮಾಡು''ಎಂದಳು ಕರ್ಣ ಪ್ರತಿಜ್ಞೆ ಮಾಡಿ ಈ ಮಾತು ಸರ್ವಜ್ಞನಾದ ಕೃಷ್ಣನೇ ಹೇಳಿಕೊಟ್ಟ ಮಾತೆಂದು ಭಾವಿಸಿ 'ಹಾಗೆಯೇ ಆಗಲಿ' ಎಂದು ಮಾತು ಕೊಟ್ಟು ಕಳುಹಿಸಿದನು. ಹಸ್ತಿನಾವತಿಯಲ್ಲಿ ಎಲ್ಲರ ಮನಸ್ಸನ್ನು ಸಮರದತ್ತ ಸೆಳೆದ ಶ್ರೀಕೃಷ್ಣ ಉಪ ಪ್ಲಾವ್ಯಕ್ಕೆ ಬಂದು ''ದುರ್ಯೋಧನ ನಿಮಗೆ ಸ್ನೇಹದಿಂದ ರಾಜ್ಯವನ್ನು ಕೊಡುವುದಿಲ್ಲವೆಂಬ ಅಭಿಪ್ರಾಯ ತಿಳಿಸಿದನು. ಕದನದಿಂದಲೇ ರಾಜ್ಯ ಕಸಿಯಬೇಕಾಗಿರುವುದರಿಂದ ಇನ್ನು ಅಲಸ್ಯ ಅನುಮಾನಗಳಿಗೆ ಎಡೆಗೊಡದೆ ಹೋರಾಟಕ್ಕೆ ಹೊರಡಿರಿ'' ಎಂದು ಶ್ರೀ ಕೃಷ್ಣನ ಆಜ್ಞೆ ಆದೊಡನೆ ಪಾಂಡವರು ತಮ್ಮ ಸ್ವಾಮಿ ಕೃಷ್ಣನನ್ನೇ ಮಾರ್ಗದರ್ಶನನನ್ನಾಗಿ ನಂಬಿ ಹನ್ನೊಂದು ಅಕ್ಷೋಹಿಣೀ ಸೇನಾಸಾಗರದೊಡನೆ ರಣದುತ್ಸಾಹದಿಂದ ಹೊರಟರು.

## ಹೋರಾಟ ಧರಣೆಗಾಗಿ ಅಲ್ಲ ಧರ್ಮಕ್ಕಾಗಿ.

ಶ್ರೀ ಕೃಷ್ಣನಾಜ್ಞೆಯಂತೆ ಧರ್ಮ ಕ್ಷೇತ್ರವಾದ ಕುರುಭೂಮಿಯಲ್ಲಿ ಧರ್ಮಾಧರ್ಮಗಳ ಸ್ಪರ್ಧೆಗಾಗಿ ಕುರು ಪಾಂಡವರ ಇತ್ತಂಡ ಸೇನೆಯು ಸೇರಿತು.

ಎರಡು ಸೇನಾಸಾಗರದ ಮಧ್ಯದಲ್ಲಿ ಹೋರಾಟದ ನೌಕೆ ಸಿದ್ಧವಾಯಿತು. ಪಾಂಡವರ ಸೇನಾಸಾಗರದ ನೌಕೆಗೆ ಭೀಮಸೇನ ಅಂಬಿಗನಾದನು. ಕೌರವರ ಸೇನಾಸಾಗರದ ನೌಕೆಗೆ ಭೀಷ್ಮರು ಅಂಬಿಗರಾದರು. ಅರ್ಜುನನ ರಥಕ್ಕೆ ಶ್ರೀ ಕೃಷ್ಣ ಸಾರಥಿಯಾಗಿ ಎರಡು ಸೇನಾಸಾಗರದ ಮಧ್ಯದಲ್ಲಿ ಅರ್ಜುನನ ಅಭಿಲಾಷೆಯಂತೆ ಎರಡು ಸೈನ್ಯಗಳ ಮಧ್ಯದಲ್ಲಿ

ರಥವನ್ನು ನಿಲ್ಲಿಸಿದನು. ಕೃಷ್ಣನು ಅರ್ಜುನನ ರಣದುತ್ಸಾಹಕ್ಕೆ ಕಡಿವಾಣವನ್ನು ಹಾಕಿ ಅರ್ಜುನಾ ನಿನ್ನ ಪ್ರತಿಪಕ್ಷವನ್ನು ನೋಡು ಎಂದು ಎಲ್ಲರನ್ನು ತೋರಿಸಿದಾಗ ಕ್ಷಣಕ್ಕೆ ಮುಂಚೆ ತೋರಿಸಿದ ಯುದ್ಧೋದ್ದೀತ್ಸಾಹವನ್ನು ಮೇಲೇಳದಂತೆ ಅದುಮಿದನು. ಮೋಹದ ಗೊಂದಲಕ್ಕೆ ಸಿಕ್ಕಿದ ಮುದುರಿದ ಮನದಿಂದ ''ಕೃಷ್ಣ! ನನಗೆ ರಾಜ್ಯಬೇಕಿಲ್ಲ ವ್ಯಾಜ್ಯವನ್ನು ನಿಲ್ಲಿಸಿಬಿಡು'' ಎಂದನು.

ಪಾರ್ಥ: ಕರ್ಮಹೀನನಾಗಬೇಡ ನಿನ್ನ ಧರ್ಮ ನಿನಗೆ ಶ್ರೇಷ್ಠ ಎಂದನು ''ಕೃಷ್ಣ! ಭೀಷ್ಮ,ದ್ರೋಣ,ಕೃಪ, ಅಶ್ವತ್ಥಾಮಾದಿಗಳೆಲ್ಲರೂ ಪೂಜ್ಯರು ಇವರೆಲ್ಲರೂ ಕೊಂದು ಕೊಲೆಪಾತಕತನದಿಂದ ಸಂಪಾದಿಸಿದ ರಾಜ್ಯ ನನಗೆ ಸುಖ ಕೊಟ್ಟೀತೆ? ನನಗೆ ಗಾಂಡೀವವನ್ನು ಹಿಡಿಯಲೇ ಆಗುತ್ತಿಲ್ಲ'' ಎಂದು ಕೆಳಗಿರಿಸಿದನು. ಇಂಥ ಅರ್ಜುನನ ವಿಷಾದಯೋಗವೇ ಜಗತ್ತಿಗೆ ಸುಯೋಗವನ್ನು ತಂದಿತು. ಅರ್ಜುನನ ಮನೋದೌರ್ಬಲ್ಯ ಕೇವಲ ಮೊಹದಿಂದ ಎಂಬುದನ್ನು ಸ್ವಾಮಿ ಲೋಕಕ್ಕೆ ತೋರಿಸಿದನು. ಮೋಹವೆಂದರೆ ನಾನು ನನ್ನದು ನನ್ನಿಂದ ಎಂಬ ಗೋಂದಲವನ್ನುಂಟು ಮಾಡುವ ಒಂದು ಶತ್ರು ಇದು ಬೇಕು ಅದು ಬೇಡ ಎಂಬ ಪಕ್ಷಪಾತದಿಂದ ಪಾಪದಿಂದ ಮಕ್ತರಾಗಿ ಹಿಂಸಾ ಜೀವಿಗಳನ್ನು ಮರ್ಧನಮಾಡಿ ಸಧರ್ಮವನ್ನು ಸಂರಕ್ಷಿಸುವ ವಿವೇಕವನ್ನು ಕಳೆದುಕೊಂಡು ಸ್ವಾರ್ತಸುಖಾಭಿಲಾಸೆಯಿಂದ ಧರ್ಮಹೀನನಾಗಿ ಪಾಪಕರ್ಮಿಗಳನ್ನು ಖಂಡಿಸದೇ ಇದ್ದರೆ ದೈವ ದ್ರೋಹಿಗಳಾಗಿ ನರಕದಲ್ಲಿ ಬೀಳುತ್ತಾರೆ. ಸ್ವಧರ್ಮವನ್ನು ತ್ಯಜಿಸಿ ಪರಧರ್ಮವನ್ನವಲಂಬಿಸಿದರೆ ಅದೋಗತಿ ಆಗುತ್ತದೆ.

ಶೃತುಸ್ಮೃತಿಗಳ ವಾಕ್ಯದಂತೆ ವರ್ಣಾಶ್ರಮಧರ್ಮಗಳನ್ನು ಪಾಲಿಸಲೇಬೇಕು. ಧರ್ಮ ಸೂಕ್ಷ್ಮವನ್ನರಿತು ಸುಕರ್ಮಚರಣೆ ಮಾಡಿ ಅದರ ಫಲಾಫಲಗಳನ್ನು ನಾರಾಯಣನಿಗೆ ಅರ್ಪಣಮಾಡಿ ತಾನು ನಿರ್ಲಿಪ್ತ ಭಾವದಿಂದ್ದರೆ ಅದೇ ವೈರಾಗ್ಯ.

ರಮಾಬ್ರಹ್ಮಾದಿ ದೇವತೆಗಳಿಗೇ ಶ್ರೀಹರಿ ಪ್ರಧಾನದೇವರಾಗಿರುವಾಗ ನಿನಗೇನು ಸ್ವತಂತ್ರವಿದೆ? ಇವರೆಲ್ಲರನ್ನು ಕೊಲ್ಲುವಷ್ಟು ಸ್ವತಂತ್ರ ನಿನಗಿದೆ ಎಂಬ ಅಹಂಕಾರ ಬಿಡು. ಪ್ರತಿ ಜೀವಿಗಳಿಗೂ ಅವರವರ ಯೋಗ್ಯತಾನುಸಾರ ಜನನ ಮರಣಗಳನ್ನು ಸುಖ ದುಃಖಗಳನ್ನು ಕೊಡುವವನು ಶ್ರೀಹರಿ ಒಬ್ಬನೇ ಆದ್ದರಿಂದ ಅವನ ಸಂಕಲ್ಪದಂತೆ ನಿನ್ನಿಂದ ಯುದ್ಧ ಆಗೇ ಆಗುತ್ತದೆ. ಅದರಿಂದ ತಪ್ಪಿಸಿಕೊಂಡು ಹೋಗಲಿಕ್ಕೆ ನೀನು ಸ್ವತಂತ್ರನಲ್ಲ. ನನ್ನ ಅನುಗ್ರಹದಿಂದ ನೀನು ಶತ್ರುಗಳನ್ನು ಕೊಂದು ಶ್ರೀ ಹರಿ ಸೇವಾ ಎಂಬ ಭಾವದಿಂದ ಅರ್ಪಣಮಾಡಿದರೆ ಫಲ ಸಿಗುತ್ತದೆ. ನಾನು ಸರ್ವತ್ರವ್ಯಾಪ್ತನಾಗಿ ಸಕಲರ ಹೃತ್ಕಮಲಗಳಲ್ಲೂಇದ್ದರೂ ನಿರ್ಲಿಪ್ತನು. ನನ್ನ ಮೂಲರೂಪ-ಅಂತರ್ಯಾಮಿರೂಪ-ಅವತಾರರೂಪ ಎಲ್ಲವೂ ಅಭೇದವೆಂದು ತಿಳಿದು ಉಪಾಸನೆ ಮಾಡಬೇಕು. ನನಗೆ ಅಪೂರ್ಣತೆಯಿಲ್ಲ ಚತುರ್ವಿಧನಾಶರಹಿಯಿತನಾಗಿದ್ದೇನೆ. ಇದನ್ನೆಲ್ಲಾ ನೀನು ಪ್ರತ್ಯಕ್ಷ ಕಾಣಬೇಕಾದರೆ ನನ್ನ ಬೃಹದ್ರೂಪವನ್ನು ತೋರಿಸುತ್ತೇನೆ ನೋಡಿ ನಿನ್ನ ಯೋಗ್ಯತೆಗೆ

ತಕ್ಕಷ್ಟು ತಿಳೀ'' ಎಂದು ಹೇಳಿ ತನ್ನ ಮೂಲರೂಪದಲ್ಲಿ ಸ್ವಲ್ಪ ಮಾತ್ರ ಅರ್ಜುನನಿಗೆ ತೋರಿಸಿದನು.

ಅರ್ಜುನನು ಅವನಿಗೆ ಲಭ್ಯವಿದಷ್ಟು ಕಂಡಾಗ ಸ್ವಾಮಿಯ ಬಾಯಲ್ಲಿ ಭೀಷ್ಮ, ದ್ರೋಣಾದಿ ಸಕಲ ವೀರರೂ ಸಿಕ್ಕು ಸಂಕಟ ಪಡುತ್ತಿರುವುದನ್ನು ನೋಡಿದ ಅರ್ಜುನನು ಇವರೆಲ್ಲರನ್ನು ಆಗಲೇ ಕೃಷ್ಣನೇ ಕೊಂದುಬಿಟ್ಟಿದ್ದಾನೆ ಎಲ್ಲರಿಗೂ ಮರಣಕಾಲ ಸಂಭವಿಸಿದೆ ಎಂದುಕೊಂಡನು. ಸಕಲ ಬ್ರಹ್ಮಾಂಡಗಳನ್ನು ಧರಿಸುವ ಶ್ರೀ ಕೃಷ್ಣನಲ್ಲಿ ಯಾವುದು ನೋಡಿ ಯಾವುದು ಬಿಡುವುದು ದಿವ್ಯಪ್ರಕಾಶದ ಅದ್ಭುತಾಕಾರವನ್ನು ಅರ್ಜುನನು ನೋಡಲು ಸಮರ್ಥನಾಗಲಿಲ್ಲ. ಕೃಷ್ಣಾ! ನಿನ್ನ ಈ ಮಹಿಮಾ ಪ್ರಕಾಶಯುಕ್ತ ರೂಪ ನೋಡಲು ನಾನು ಶಕ್ತನಲ್ಲ ನನ್ನ ಕಣ್ಣುಮನಗಳಿಗೆ ಅತ್ಯಧಿಕ ಸುಖ ಹಿತಗಳನ್ನು ಕೂಡತಕ್ಕ ನಿನ್ನ ಭವ್ಯಮೂರ್ತಿಯನ್ನು ತೋರಿಸು ನಿನ್ನ ಈ ಅದ್ಭುತರೂಪ ಅಲ್ಪನಾದ ನಾನು ನೋಡುವುದಕ್ಕೆ ಯೋಗ್ಯನಲ್ಲ ಅಚ್ಛಾದಿಸಿ ನನ್ನನ್ನು ರಕ್ಷಿಸುಸ್ವಾಮಿ'' ಎಂದು ಪ್ರಾರ್ಥಿಸಿಕೊಂಡನು.

ಹೀಗೆ ಅಮಾನುಷ ಮಹಿಮನಾದ ಶ್ರೀ ಕೃಷ್ಣನು ಹದಿನೆಂಟು ಅಕ್ಷೋಹಿಣಿ ಸೇನಾಸಾಗರದಿಂದ ಕೂಡಿದ ರಣರಂಗದ ಮಧ್ಯದಲ್ಲಿ ಅರ್ಜುನನ ಮುಂದೆ ಮಾರ್ಗದರ್ಶಕನಾಗಿ ನಿಂತು ಅವನ ಪರಾಕ್ರಮದ ಕಡಿವಾಣವನ್ನು ಹಿಡಿದು ರಣಚೆಂಡಿಗಳಂತಿದ್ದ ವೀರರ ರಣದಬ್ಬರ ರಣಕಹಳೆಗಳು ಕರಾಳ ಕೂಗಾಟ ಮದ್ದಾನೆಗಳ ನುಗ್ಗಾಟಗಳ ಗದ್ದಲದ ಸದ್ದಡುಗುವಂತೆ ಹದಿನೆಂಟು ಅಧ್ಯಾಯಗಳೆಂಬ ತತ್ವರತ್ನಗಳ ಪ್ರವಚನಮಾಲೆಯನ್ನು ಪ್ರಕಾಶಗೊಳಿಸಿ ಅಜ್ಞಾನವೆಂಬ ದುಃಖವನ್ನು ನಿವಾರಣೆಮಾಡಿ ಸಜ್ಜನರನ್ನು ಸಂರಕ್ಷಿಸಿದ ಶ್ರೀ ಕೃಷ್ಣನ ಕರುಣವನ್ನು ಹೊಗಳಬೇಕಾದರೆ ಬಹಳ ಜನ್ಮಗಳ ತಪೋ ಪುಣ್ಯವಿದ್ದರೆ ಮಾತ್ರ ಆ ಪುಣ್ಯ ಲಭ್ಯವಾಗುತ್ತದೆ.

ಪುಣ್ಯಾತ್ಮನಾದ ಕುಂತೀಪುತ್ರನಾದ ಅರ್ಜುನನು ಶ್ರೀಕೃಷ್ಣನಿಂದ ಒಡಮಾಡಿ ಬಂದ ತತ್ವಾಮೃತಪಾನ ಮಾಡಿ ತನ್ನನ್ನು ಪೀಡಿಸಿ ಕಾಡಿಸುತಿದ್ದ ಮೋಹಾದಿ ಶತ್ರುಗಳನ್ನು ನಿಗ್ರಹಮಾಡಿ ಪುಷ್ಟಿ ಹೊಂದಿ ಸ್ವಾಮೀ! ನಿನ್ನ ವಾಕ್ಬಾಣಕ್ಕೆ ಅಂಜಿ ನನ್ನಲ್ಲಿದ್ದ ಎಲ್ಲಾ ಅಜ್ಞಾನಶತ್ರುಗಳೂ ಓಡಿಹೋದರು. ನಾನೀಗ ಸ್ವಚ್ಛಜ್ಞಾನದಿಂದ ಸಂದೇಹವಿಲ್ಲದೆ ನನ್ನ ಪರಾಕ್ರಮದಿಂದ ಶತ್ರು ತಂಡವನ್ನು ನಿಗ್ರಹಮಾಡಿದ ಸೇವಾ ನಿನಗರ್ಪಣೆಮಾಡಿ ನನ್ನ ದೋಷವನ್ನು ಕಳೆದುಕೊಳ್ಳುವೆನು'' ಎಂದು ಹೇಳಿ ಉತ್ಸಾಹದಿಂದ ಗಾಂಡೀವಧಾರಣೆಮಾಡಿ ಭುಭಾರಹರಣ ಕಾರ್ಯಕ್ಕೆ ದೀಕ್ಷಾಬದ್ಧನಾದನು. ಅರ್ಜುನನ ಧನಸ್ಸಿನ ಠಂಕಾರ ಶಬ್ದ ಮೊಳಗಿದಾಗ ಭೀಮಸೇನ ಭೀಷ್ಮಾದಿಗಳೆಲ್ಲರು ಸಂತೋಷದಿಂದ ಅರ್ಜುನನ ಧನು:ಠಂಕಾರ ದುಷ್ಟ ಸಂಹಾರಕಾರ್ಯಕ್ಕೆ ಶ್ರೀಕೃಷ್ಣನಿಂದ ಆಜ್ಞಪ್ತನಾಗಿದ್ದೇನೆ ಎಂದು ಸಮರಸಂದೇಶ ನೀಡುತ್ತಿದ್ದಾನೆಂದು ಮಾತನಾಡಿಕೊಂಡರು. ಭೀಮಸೇನನು ಸ್ವಾಮೀ ಆಜ್ಞೆ ಆಯಿತೆಂದು ಸಿಂಹನಾದದಿಂದ ಹರ್ಷೋತ್ಸಾಹ ತೋರಿಸುತ್ತ ದುಷ್ಟಶಿಕ್ಷಾಕಾರ್ಯದ ಮುಖಂಡನಾಗಿ ಮುಂದೆ ಬಂದು ದೈತ್ಯರನ್ನು

ಕುಟ್ಟಹಾಕಲು ಕೈಬೀಸಿ ಕರೆಯುತ್ತಿದ್ದನು.

ಸೈನಿಕರು ಭೀಮನ ರಣದುತ್ಸಾಹ ರೌದ್ರತೆಗಳನ್ನು ನೋಡಿ ಭಯದಿಂದ ನಡುಗುತ್ತಿದ್ದಾಗ ಪ್ರಮುಖ ವೀರರು ತಮ್ಮ ಸೈನಿಕರು ಭೀಮನಿಗೆ ಭಯಪಟ್ಟು ಹಿಮ್ಮೆಟ್ಟುವುದನ್ನು ಕಂಡು ಏನಾದರೂ ಪ್ರಯತ್ನದಿಂದ ಈ ಭೀಮನನ್ನು ಮೊದಲು ಮುಗಿಸಿದರೆ ಮುಂದಿನ ಮಾರ್ಗ ಸುಗಮವಾಗುತ್ತದೆಂದು ಭಾವಿಸಿ ಅನೇಕ ಸಂಖ್ಯೆಯ ವೀರರೆಲ್ಲರೂ ಒಟ್ಟಾಗಿ ಭೀಮನನ್ನು ಮುತ್ತಿಕೊಂಡು ಅವನನ್ನು ಅಸ್ತ್ರ ರಾಶಿಯಲ್ಲಿ ಮುಚ್ಚಿದರು. ಆದರೂ ಭೀಮನು ಕದಲದೆ ನಿಂತಿದ್ದನು.

ಈಗ ಹದಿಮೂರು ವರ್ಷಗಳಿಂದಲೂ ನಮ್ಮ ಪರಾಕ್ರಮವನ್ನು ಶಾಂತಿಎಂಬ ವ್ರತತೊಟ್ಟು ತ್ಯಾಜ್ಯ ಮಾಡಿದ್ದೆವು. ಇಂದಿಗೆ ಆ ವ್ರತ ಸಮಾಪ್ತವಾಯಿತು. ಹುದುಗಿಸಿಕೊಂಡಿದ್ದ ಪರಾಕ್ರಮ ಜ್ವಾಲೆ ಒಮ್ಮೆಲೆ ಭುಗಿಲ್ ಎಂದು ಮೇಲೆದ್ದರೆ ಒಂದೇ ಸಲ ಹದಿನೆಂಟು ಅಕ್ಷೋಹಿಣಿ ಸೇನಾನಿಕರವೂ ಭೂಗತವಾಗಿ ಬಿಡುತ್ತದೆ. ಆದ್ದರಿಂದ ಕ್ರೋಧಾಗ್ನಿಯನ್ನು ನಿಧಾನವಾಗಿ ಸ್ವಾಗತಿಸಿ ಸಂತೋಷವಾಗಿ ಯುದ್ಧಕೇಳಿಯ ರಸಾನುಭವ ಅನುಭವಿಸೋಣ ಎಂಬ ಭಾವದಿಂದ ಬೆಟ್ಟದಂತೆ ದಿಟ್ಟನಾಗಿ ನಿಂತಿದ್ದನು. ಆಗ ಅಭಿಮನ್ಯು, ಪ್ರತಿವಿಂಧ್ಯ ಮೊದಲಾದ ವೀರರು ಬಂದು ಭೀಮನನ್ನು ಮುತ್ತಿದ್ದ ಸೈನಿಕರನ್ನು ತಮ್ಮ ಬಾಣಗಳಿಂದ ಚದುರಿಸಲು ಅವರ ಉರಿನಾಲಿಗೆಯಂತಿದ್ದ ಬಾಣಗಳು ಕೌರವ ಸೈನಿಕರ ಶರೀರದೊಳಗೆ ನುಗ್ಗಿ ಇರಿಯುತ್ತಿದ್ದವು. ಆಗ ಅವರೆಲ್ಲರೂ ಓಡಿಹೋಗಿ ಭೀಷ್ಮನ ಮೊರೆ ಹೊಕ್ಕರು.

ಆಗ ಭೀಷ್ಮಾದಿಗಳೆಲ್ಲರೂ ಪಾಂಡವ ಪಕ್ಷದಲ್ಲಿ ನುಗ್ಗಿ ಅನೇಕ ಸೈನಿಕರನ್ನು ಕೊಂದು ಹೆದರಿಸುತ್ತಿರುವಾಗ ಭೀಮನು ಓಡಿ ಬಂದು ಭೀಷ್ಮಾದಿಗಳೊಡನೆ ಯುದ್ಧಮಾಡುವಾಗ ಇತ್ತ ಶಲ್ಯನು ವಿರಾಟರಾಜನ ಪುತ್ರ ಉತ್ತರನನ್ನು ಕೊಂದನು. ರಾಜಪುತ್ರ ಸತ್ತನೆಂದು ಪಾಂಡವ ಸೈನಿಕರು ಓಡುತ್ತಿರಲು ಅರ್ಜುನನು ಅಭಿಮನ್ಯುವಿನೊಡನೆ ಭೀಷ್ಮನ ಮುಂದೆ ಬಂದನು. ಆಗ ಭೀಷ್ಮನು ದ್ರುಪದರಾಯನ ಸೈನಿಕರನ್ನು ಹೊಡೆದೋಡಿಸುತ್ತಿದ್ದರೂ ಅರ್ಜುನನು ಭೀಷ್ಮರ ಮೇಲೆ ಯುದ್ಧಕ್ಕೆ ಹೋಗಲಿಲ್ಲ. ಭೀಷ್ಮನೂ ಅರ್ಜುನನ ಮೇಲೆ ಯುದ್ಧಕ್ಕೆ ಹೋಗಲಿಲ್ಲ.

ಭೀಮಾರ್ಜುನರು ತಮ್ಮ ಬೀಗರ ಮಗ ಉತರಕುಮಾರನು ಸತ್ತಾಗ ಶೋಕ ಸೂಚನೆ ವ್ಯಕ್ತ ಪಡಿಸುತ್ತ ಯುದ್ಧವನ್ನು ನಿಲ್ಲಿಸಿ ಶಿಬಿರಕ್ಕೆ ಹೊರಟುಹೋದರು. ಅಂದಿನ ತಮ್ಮ ಅಪಜಯ ಮುಂದಿನ ದಿನದ ಜಯ ಎಂಬ ಜಯೋಪಜಯದ ಸೂತ್ರಧಾರನಾದ ಶ್ರೀಕೃಷ್ಣನನ್ನು ಆಶ್ರಯ ಹೊಂದಿ ಕಳೆದರು.

## ಸೆಣಸಾಟದಲ್ಲಿ ಶ್ರೀಶನ ಸರಸಾಟ

ರಾಜಪುತ್ರನ ಮರಣದಲ್ಲಿ ಮುಕ್ತಾಯಗೊಂಡ ಹಿಂದಿನ ದಿನದ ಯುದ್ಧದಲ್ಲಿ ಸೋಲು ಸಂಭವಿಸಿತೆಂದು ಧರ್ಮರಾಜ ಖೇದಗೊಂಡನು. ಅಣ್ಣ ತಮ್ಮಂದಿರಿಗೆ ಅಂತಃಕಲಹಗಳುಂಟಾಗಿ ರಣೋತ್ಸವದ ಹರ್ಷ ಹಿಗ್ಗ ಬೇಕೆಂಬ ಸಂಕಲ್ಪದಿಂದಲೇ ಕೃಷ್ಣ ಅವರಲ್ಲಿ ಹೊಕ್ಕು ಮಾತಿನ ಸಿಡಿಮದ್ದುಗಳನ್ನು ಪ್ರಯೋಗ ಮಾಡಿಸುತ್ತಿದ್ದನು. ''ಅರ್ಜುನಾ! ನಿನ್ನ ಪರಾಕ್ರಮ ರಸವನ್ನು ಕೌರವವೀರರು ತಮ್ಮ ತೀಕ್ಷ್ಣ ಬಾಣಗಳಿಂದ ಸೆಳೆದುಕೊಂಡಿದ್ದಾರೆ. ನಿವಾತಕವಚರನ್ನು ಪುಲೋಮ ಕಾಲಕೇಯರನ್ನು ಕೊಂದನೆಂದು ಕೊಚ್ಚಿಕೊಳ್ಳುತ್ತಿದ್ದ ನಿನ್ನ ಬಾಯಿಗೆ ಕೌರವರು ನಮ್ಮ ರಾಜಪುತ್ರನನ್ನು ಕೊಂದು ಬೀಗ ಹಾಕಿದಂತಾಯಿತು. ಇನ್ನು ನಿನ್ನ ಪರಾಕ್ರಮ ವಾಣಿನಿಲ್ಲಿಸಿ ರಣರಂಗದಿಂದ ತಪ್ಪಿಸಿಕೊಂಡು ಓಡಿಹೋಗಿ ಅಂತಃಪುರವನ್ನು ಸೇರಕೊ'' ಎಂದು ಮುಂತಾಗಿ ಮೂದಲಿಸಿ ಮಾತನಾಡಿದಾಗ ಕೃಷ್ಣನು ಧರ್ಮರಾಜಾ! ನಿಮ್ಮನಿಮ್ಮಲ್ಲೇ ಜಗಳ ಹತ್ತಿದರೆ ವೈರಿಗಳು ಗರಿಕಟ್ಟಿನಿಂತು ನಿಮ್ಮನ್ನು ಕೆಸರಿನಂತೆ ತುಳಿದು ಬಿಡುತ್ತಾರೆ. ಸೋಲು ಗೆಲುವು ಯಾರ ಅಧೀನದಲ್ಲೂ ಇರುವುದಿಲ್ಲ ಪ್ರಯತ್ನ ನಿಮ್ಮದು ಫಲಾಪಲಗಳು ಪರಮಾತ್ಮನದು ಎಂದು ಭಾವಿಸಿ ನಿರ್ಲಿಪ್ತರಾಗಿ ಕರ್ಮಮಾಡಿರಿ. ಇಂದಿನ ಸೋಲು ನಾಳೆ ಗೆಲುವನ್ನು ತರುತ್ತದೆಂಬ ನಂಬಿಕೆಯಿಂದ ಫಲಾಫಲಗಳನ್ನು ಭಗವಂತನಿಗರ್ಪಿಸಿ ಕಾರ್ಯೋನ್ಮುಖರಾಗಿರಿ ಎಂದು ಪಾಂಡವರಿಗೆ ಬಲ-ಜ್ಞಾನ-ಧರ್ಮ ಎಲ್ಲವನ್ನು ತುಂಬಿ ಅವರನ್ನು ಸಮರಸಿಂಹಗಳಾಗಿ ಸೆಣಸಾಡುವಂತೆ ಮಾಡಿದ ಕೃಷ್ಣ.

ಅತ್ತ ಕರ್ಣನ ಮಹತ್ತರವಾದ ಪರಾಕ್ರಮಕ್ಕೆ ಭೀಷ್ಮರ ಬೆಂಬಲವುಸಿಕ್ಕರೆ ಅವರಿಬ್ಬರಿಂದ ಹೊರಡುವ ಕ್ರೋಧದ ಕಿಡಿ ಬಾಣಗಳಿಂದ ಪಾಂಡವ ಸೈನಿಕರು ಉಳಿಯುವುದಿಲ್ಲವೆಂದು ಕರ್ಣನಿಗೂ ಭೀಷ್ಮನಿಗೂ ತಿಕ್ಕಾಟ ಹಚ್ಚಿದನು. ಕರ್ಣನು ಭೀಷ್ಮರ ಮೇಲೆ ಕ್ರೋಧಾವೇಶ ಉಳ್ಳವನಾಗಿ ''ನಾನು ಭೀಷ್ಮ ಬದುಕಿರುವವರೆಗೂ ಯಾರೊಂದಿಗೂ ಯುದ್ಧಮಾಡುವುದಿಲ್ಲವೆಂಬ ಪ್ರತಿಜ್ಞೆ ಮಾಡುವಂತೆ ಕರ್ಣನಿಗೆ ಪ್ರೇರೆಪಿಸಿದನು.

ಭೀಷ್ಮನಲ್ಲಿ ಹೊಕ್ಕ ಕೃಷ್ಣ ''ದುರ್ಯೋಧನಾ! ನನ್ನನ್ನು ತೆಗಳಬೇಡ ಪ್ರತಿನಿತ್ಯ ಹತ್ತುಸಾವಿರ ರಥಿಕರಿಗೆ ಕಡಿಮೆಯಿಲ್ಲದಂತೆ ಕೊಲ್ಲುತ್ತೇನೆ'' ಎಂದು ಪ್ರತಿಜ್ಞೆಮಾಡಿಸಿದನು.

ಭೀಷ್ಮನು ರಣಚಂಡಿಯಂತೆ ವೀರಾವೇಶದಿಂದ ತೀವ್ರ ಯುದ್ಧ ನಡೆಸುತ್ತಿದ್ದನು ಅರ್ಜುನನು ಭೀಷ್ಮರನ್ನು ತಡೆಯದಂತೆ ಅವನಲ್ಲಿ ಪ್ರೇರಣೆ ಮಾಡಿದವನೂ ಕೃಷ್ಣನೇ ಆದರೂ ಅರ್ಜುನಾ: ನೀನು ಭೀಷ್ಮನೊಡನೆ ಸರಿಯಾದ ಸಮರವನ್ನು ನಡೆಸದಲೇ ವಂಚಿಸುತ್ತಿರುವಿ. ನಾನೇ ಭೀಷ್ಮನನ್ನು ಕೊಲ್ಲುತ್ತೇನೆ'' ಎಂದು ಹೇಳುತ್ತ ಚಾವಟಿಯನ್ನು ರಥದಲ್ಲಿ ಎಸೆದು ಚಕ್ರವನ್ನು ಕೈಲಿಹಿಡಿದು ರಣರಂಗದಲ್ಲಿ ಭೀಷ್ಮನ ಬಳಿಗೆ ಓಡಿಬರುತ್ತಿರುವ ಕೃಷ್ಣನನ್ನು ಅಸಂಖ್ಯ ಕಣ್ಣುಗಳು ಕೃಷ್ಣನ ಕಡೆಗೆ ನೋಡುತ್ತ ಬೆರಗಾದರು. ಭೀಷ್ಮಾಚಾರ್ಯರು

ಶ್ರೀಕೃಷ್ಣ ತನ್ನೆಡೆಗೆ ಬರುವ ಸೊಗಸನ್ನು ಆನಂದದಿಂದ ಅನುಭವಿಸುತ್ತ ''ಕೃಷ್ಣಾ! ನೀನು ಸತ್ಯ ಸಂಕಲ್ಪ ನಿನ್ನ ಮಾತು ಎಂದಿಗೂ ಸುಳ್ಳಾಗಲು ಸಾಧ್ಯವಿಲ್ಲ. ನಾನು ಚಕ್ರಾಯುಧನಾಗಿ ಯುದ್ಧ ಮಾಡುವುದಿಲ್ಲ ವೆಂಬ ಸಂಕಲ್ಪ ನಿನ್ನದು. ಚಕ್ರ ಹಿಡಿಯುವುದಿಲ್ಲ ಎಂಬ ಸಂಕಲ್ಪ ನಿನ್ನದಲ್ಲ. ಅಜ್ಞಾನಿಗಳು ಕೃಷ್ಣನ ಸತ್ಯಸಂಕಲ್ಪವನ್ನು ಭಕ್ತನು ಸಡಿಲಗೊಳಿಸಿದನೆಂದು ನಿನ್ನ ಹಿರಿಮೆಯನ್ನು ದೂಶಿಸಿ ಪಾಪಾಧಿಕ್ಯರಾಗಲೆಂದು ಲೀಲೆ ತೋರಿಸುತ್ತಿರುವಿ. ನಿನ್ನ ಸ್ವತಂತ್ರ! ಎಂದಿಗೂ ಪರತಂತ್ರ ಆಗುವುದಿಲ್ಲ. ನನ್ನ ಅಭಿಲಾಷೆಯಂತೆ ಚಕ್ರಧಾರಿಯಾಗಿ ವೀರ ನಾರಾಯಣ ವೀರಮಣಿಯಾಗಿ ಬರುತ್ತಿರುವ ನಿನ್ನ ದರ್ಶನದಿಂದ ಧನ್ಯನಾದೆನು ದೇವಾ! ನೀನು ಹೊದ್ದ ಪೀತಾಂಬರ ಜಾರಿಬೀಳುವಾಗ ಅದನ್ನು ನಿನ್ನ ಮಂಗಳ ಹಸ್ತಗಳಿಂದ ಸರಿಪಡಿಸಿಕೊಳ್ಳುವುದನ್ನು ನೋಡಿದಾಗ ನನ್ನ ಅಂತರಂಗದಲ್ಲಿ ಉಕ್ಕಿಬಂದ ಸುಂದರ ಕಲ್ಪನೆ ನನ್ನ ಭಕ್ತಿಯ ಉದ್ರೇಕವನ್ನು ವೃದ್ಧಿಪಡಿಸುತ್ತದೆ. ಅಸ್ತವ್ಯಸ್ತವಾದ ಮನಸ್ಸು ನಿನ್ನ ಕರುಣವೆಂಬ ಅಭಯಹಸ್ತದಿಂದ ಅಚಲವಾಗಿ ನಿನ್ನ ಪಾದಾಶ್ರಯ ಪಡೆಯುತ್ತದೆಂಬ ಸಂಕೇತ ನೀನು ತೋರಿಸುತ್ತಿರುವಿ ಎಂದು ಭಾವಿಸುತ್ತೇನೆ. ನಿನ್ನ ಸುಂದರ ಮುಂಗುರುಳನ್ನು ಮುಚ್ಚಿರುವ ಕೆಂಧುಳಿನ ಕಣಗಳು ''ಭಿಷ್ಮಾ ನಿನ್ನ ಮನಸ್ಸು ಕಲಿಮಲ ದೋಶವೆಂಬ ಧೂಳಿನಿಂದ ಮುಚ್ಚಿಕೊಂಡಿದೆ ಅದನ್ನು ಸ್ವಚ್ಛಪಡಿಸಲು ಬರುತ್ತಿದ್ದೇನೆ ಎಂದು ವಾತ್ಸಲ್ಯದಿಂದ ಬರುತಿದ್ದೀ ಎಂದು ಹೇಳುತ್ತಿದೆ ಎಂದು ಹೇಳಿ ಕಣ್ಣೆಂಬ ಬೆಳ್ಳಿಯಗಿಂಡಿಯೊಳಗೆ ಆನಂದ ರಸವನ್ನು ತುಂಬಿಕೊಂಡು ಶ್ರೀಕೃಷ್ಣನ ಸಿರಿಪಾದಗಳಿಗೆ ಅಭಿಷೇಕ ಮಾಡಿ ಶಿರಸ್ಸೆಂಬ ಶ್ರೇಷ್ಟಪುಷ್ಪವನ್ನೇರಿಸಿದನು.

ಅರ್ಜುನ ರಥದಲ್ಲಿ ಕುಳಿತು ಕೃಷ್ಣನು ರಥದ ಮೂಕಿಯಿಂದ ಹಾರಿದ್ದು ತನ್ನ ಪ್ರಾಣವೇ ಹಾರಿತೋ ಎನ್ನುವಂತೆ ಗಾಬರಿಯಾಗಿ ತಾನು ಹಾರಿಬಂದು ಕೃಷ್ಣನ ಪಾದಕ್ಕೆರಗಿ ''ಸ್ವಾಮಿ! ನನ್ನಿಂದ ತಪ್ಪು ನಡೆದಿದ್ದರೆ ಶಿಕ್ಷಿಸು ಆದರೆ ಹೀಗೆ ನನ್ನಿಂದ ದೂರ ಮಾತ್ರ ಸರಿದುಹೋಗಬೇಡ ನಿನ್ನನ್ನಗಲಿ ನಾನು ಅರೆ ನಿಮಿಷವೂ ಬದುಕಿರಲಾರೆ''ಎಂದು ಪ್ರಾರ್ಥಿಸಿಕೊಂಡನು.

ಆಗ ಕೃಷ್ಣ ಅರ್ಜುನನನ್ನು ಸಮಾಧಾನಪಡಿಸಿ ದೈತ್ಯರ ಬುಬತ್ತಿಸುವಂಥ ಪಂಚ ಜನ್ಯವನ್ನು ಒಮ್ಮೆ ಮೊಳಗಿಸಿ ರಥದ ಬಳಿಗೆ ಬಂದನು. ಆಗ ಅರ್ಜುನನು ಸಂತೋಷದಿಂದ ರಣೋತ್ಸಾಹ ತುಂಬುವಂಥ ದೇವದತ್ತವನ್ನು ಊದಿ ರಥದಲ್ಲಿ ಶ್ರೀಕೃಷ್ಣ ಸನ್ನಿಧಿಯನ್ನು ಹೊಂದಿದನು.

ಭೀಮನು ಶ್ರೀಕೃಷ್ಣಾರ್ಜುನರ ಶಂಖನಾದವನ್ನು ಕೇಳಿ ಶ್ರೀಕೃಷ್ಣನು ಜಯಲಕ್ಷ್ಮಿಗೆ ಆಮಂತ್ರಣವನ್ನು ಕಳುಹಿಸಿದನೆಂದು ಆನಂದ ಹೊಂದಿದನು..

ಆಗ ಅರ್ಜುನನು ಪರಾಕ್ರಮದಲ್ಲಿ ಮನಸ್ಸನ್ನು ಏಕೀಕರಿಸಿಕೊಂಡು ಭೀಷ್ಮರಿಗೆ ವೀರ ಪುಷ್ಪಾರ್ಚನೆ ಸಲ್ಲಿಸುತ್ತಿದ್ದರೆ ಭೀಷ್ಮರು ಇದು ಅರ್ಜುನನ ಬಾಣ ಆದುದರಿಂದಲೇ ನನ್ನ ಅಂತಃಕರುಣವನ್ನು ಹೊಕ್ಕು ಅತ್ಯಧಿಕ ವೇದನೆ ಉಂಟುಮಾಡುತ್ತಿದೆ'' ಎಂದು ಹೇಳುತ್ತಿದ್ದರು.

ಭೀಷ್ಮಾರ್ಜುನರು ಸರಿಸಮಾನವಾಗಿ ಹೋರಾಟ ನಡೆಸುತ್ತಿದಾಗ ಭೀಮನು ಭೀಷ್ಮದ್ರೋಣದಿಗಳ ರಥ ಮುರಿದು ಸಾರಥಿಗಳನ್ನು ಕೊಂದು ಕುದುರೆಗಳನ್ನು ಓಡಿಸಿದನು. ಆಗ ಗರುಡ ವ್ಯೂಹನ್ನು ರಚಿಸಿ ಕೌರವವೀರರು ಯುದ್ಧಕ್ಕೆ ಸಿದ್ಧರಾದಾಗ ಭೀಮಸೇನನು ಕುರಿಗಳ ಹಿಂಡಿನಲ್ಲಿ ಸಿಂಹವು ಹೇಗೆ ಲೀಲಾಜಾಲವಾಗಿ ನುಗ್ಗುತ್ತದೋ ಹಾಗೆ ನುಗ್ಗಿ ಭೀಷ್ಮ, ದ್ರೋಣ, ಅಶ್ವತ್ಥಾಮ, ಕೃಪಾಚಾರ್ಯದಿ, ಮಹಾಥಿಕರನ್ನು ಚೆದರಿಸಿ ಅನೇಕ ಸೈನಿಕರನ್ನು ಕೊಂದುಹಾಕಿದನು. ಹೀಗೆ ಎರಡು ದಿನಗಳು ಅಸಂಖ್ಯಾತ ಸೈನಿಕರು ರಥಗಳು, ಸಾರಥಿಗಳೆಲ್ಲವು ರಣರಂಗದಲ್ಲಿ ಶಿಖರದಂತೆ ರಾಶಿ ಬಿದ್ದಿರುವುದನ್ನು ನೋಡಿದ ಕುರುವೀರರು ಪ್ರಾಣಭಯದಿಂದ ಓಡತೊಡಗಿದರು. ದುರ್ಯೋಧನನು ರಥವನ್ನು ಕಳೆದುಕೊಂಡು ಕಂಗಾಲಾಗಿರಲು ಭೀಷ್ಮರು ರಾಜನ ರಕ್ಷಣೆಗಾಗಿ ಯುದ್ಧವನ್ನು ನಿಲ್ಲಿಸಿ ಶಿಬಿರದ ಕಡೆಗೆ ಸೋಲಿನ ಸಪ್ಪೆ ಮುಖದಿಂದ ಹೊರಟರು. ದುರ್ಯೋಧನನ ಸಹೋದರರನೇಕರು ಸತ್ತುಬಿದ್ದರು. ಅಸಮವೀರರೆನಿಸಿದವರು ಸೋಲಿನಿಂದ ಸೈನಿಕರನೇಕರನ್ನು ಶತೃಗಳಿಗೆ ಬಲಿಕೊಡುತ್ತಿರುವುದು ನೋಡಿದರೆ ಭೀಷ್ಮಾದಿಗಳು ಪಾಂಡವ ಪಕ್ಷಕ್ಕೆ ಒಳಗೊಳಗೆ ಬೆಂಬಲ ಕೊಡುತ್ತಿದ್ದಾರೆಂಬ ಸಂದೇಹದಿಂದ ಭೀಷ್ಮರ ಬಳಿಗೆ ಬಂದು ''ಪಿತಾಮಹಾ! ನಿಮ್ಮ ಪ್ರತಾಪವಾಣಿಯ ಪ್ರತಿಜ್ಞೆ ಸುಳ್ಳಾಯಿತು. ಸೋಲೆ ನಮಗೆ ಗತಿಯಾಯಿತು. ನಿಮ್ಮ ಪ್ರತಿಜ್ಞೆ ನಿಮ್ಮಪ್ರಖ್ಯಾತ ಪರಾಕ್ರಮಗಳನ್ನು ನಂಬಿ ಯುದ್ಧಹೂಡಿದೆನು. ಅದಕ್ಕೆ ತಕ್ಕ ಶಿಕ್ಷೆ ನಿಮ್ಮಿಂದ ಸಿಕ್ಕಿತು. ಹೊರಗಿನ ಶತ್ರುಗಳಿಗಿಂತಲು ಒಳಗಿನ ಶತ್ರುಗಳು ಮಹಾ ಅಪಾಯಕಾರರು''ಎಂದು ಕೆರಳಿಸುತ್ತಾ ಮೂದಲಿಸಿ ಮಾತನಾಡುತ್ತಿದ್ದರೆ ಭೀಷ್ಮರು ''ದುರ್ಯೋಧನ! ನೀನು ಅಜ್ಞಾನದಿಂದ ಕೃಷ್ಣನನ್ನು ನಂಬದೆ ಅವನ ಮಾತನ್ನು ತಿರಸ್ಕಾರ ಮಾಡಿದೆ ಅವನು ಸ್ವತಂತ್ರ ಸೋಲು ಗೆಲುವುಗಳ ಸೂತ್ರವನ್ನು ಅವನೇ ಹಿಡಿದು ಹೀಗೆ ಆಡಿಸುತ್ತಿದ್ದಾನೆ. ನಾವು ಅಸ್ವತಂತ್ರರು ನಮ್ಮನ್ನು ನಂಬಿದರೆ ನಾವು ನಿನ್ನ ಭವಿಷ್ಯವನ್ನು ತಿದ್ದಲಾರೆವು. ನಮ್ಮ ಅತ್ಯದಿಕ ಬಲವನ್ನು ಅವನೇ ಬಿತ್ತಿಸಿ ಈ ರೀತಿ ನಿನಗೆ ನಷ್ಟಪಡಿಸುತ್ತಿದ್ದಾನೆ ಧರ್ಮ ಎಲ್ಲಿದೆಯೋ ಅಲ್ಲಿ ಕೃಷ್ಣ ಜಯವನ್ನುಂಟುಮಾಡುತ್ತಾನೆ. ಪಾಂಡವರು ಧರ್ಮವಂತರು ದೈವಾಂಶಸಂಭೂತರು ಆದ್ದರಿಂದಲೇ ಅವರ ಪಕ್ಷದಲ್ಲಿ ಕೃಷ್ಣನಿಂತು ಜಯಲಭಿಸುವಂತೆ ಅವರಿಗೆ ಅನುಗ್ರಹಮಾಡುತ್ತಾನೆ.

ಶ್ರೀಕೃಷ್ಣ ಸಕಲ ಬ್ರಹ್ಮಾಂಡಗಳಿಗೂ ಸಕಲಲೋಕಗಳಿಗೂ ಪ್ರಭು ಆಗಿದ್ದಾನೆ ಎಂಬುದನ್ನು ನೀನು ತಿಳಿಯದೆ ಕೃಷ್ಣನನ್ನು ನಿರಾಕರಿಸಿ ಹತ್ತು ಲಕ್ಷ ಸೇನಾದಳ ಕೇಳಿದೆ. ಅರ್ಜುನ ಸರ್ವವ್ಯಾಪ್ತನಾದ ಕೃಷ್ಣ ಒಬ್ಬನಿದ್ದರೆ ಸಾಕು'' ಎಂದು ಅಪೇಕ್ಷಿಸಿದ ಅವನಿಗೆ ಬಲ, ಪರಾಕ್ರಮ, ಜಯಾಶಸ್ತ್ರಾಸ್ತ್ರಗಳ ಒಲವು ಎಲ್ಲವೂ ಲಭಿಸಿತು. ನೀನು ಮೂರ್ಖತನದಿಂದ ಕಾಮಧೇನು ನಿನ್ನ ಬಳಿಗೆ ಬಂದರೂ ನಿರಾಕರಣೆ ಮಾಡಿ ಹುಳಿ ಮಜ್ಜಿಗೆ ಯೊಚನೆ ಮಾಡಿದಂತೆ ಶಾಶ್ವತ ಸಂಪತ್ತನ್ನು ಬಿಟ್ಟು ಅನಿಶ್ಚಿತರನ್ನು ನಂಬಿದ್ದಕ್ಕೆ ನಮ್ಮಲ್ಲಿ ತುಂಬಿದ್ದ ಪರಾಕ್ರಮರಸ ಕ್ಷಣಕ್ಷಣಕ್ಕು ಬತ್ತಿಹೋಗುತ್ತಿದೆ. ಇದು ನಮ್ಮ ತಪ್ಪಲ್ಲ.

ಮೂಲ ನಾರಾಯಣನೇ ಕೃಷ್ಣನಾಗಿ ಅವತರಿಸಿ ಬಂದು ಭೂದೇವಿಯ ಪ್ರಾರ್ಥನಯಂತೆ ಶ್ರೀಕೃಷ್ಣನು ಭೂಭಾರ ಹರಣಕಾರ್ಯಕ್ಕಾಗಿ ವಸುದೇವ ದೇವಕಿಯರಲ್ಲಿ ಕೃಷ್ಣನೆಂಬ ಹೆಸರಿನಿಂದ ಅವತರಿಸಿದ್ದಾನೆ. ಮುಖ್ಯ ಪ್ರಾಣನೇ ಭೀಮನಾಗಿ ಹುಟ್ಟಿದ್ದಾನೆ ಯಮನು ಧರ್ಮರಾಜನಾಗಿದ್ದಾನೆ. ದೇವೇಂದ್ರನು ಅರ್ಜುನ ನಾಗಿದ್ದನೆ. ನಕುಲಸಹದೇವರು ಅಶ್ವಿನೀದೇವತೆಗಳಾಗಿದ್ದರೆ. ಇವರೆಲ್ಲರೂ ಭಗವಂತನಾದ ಶ್ರೀಕೃಷ್ಣನ ಪ್ರೀಯ ದೇವತೆಗಳಾದ್ದರಿಂದ ಅವರನ್ನು ದ್ವೇಶಮಾಡಿದರೆ ಕೃಷ್ಣ ನಿನ್ನನ್ನು ಉಳಿಸುವುದಿಲ್ಲ ಭಗವದ್ವೇಶಿಯಾದ ನಿನ್ನ ಸಂಪರ್ಕದಿಂದ ನಮಗು ಸೋಲು ಸಂಭವಿಸುತ್ತದೆ ಎಂದು; ಎಷ್ಟು ವಿಧದಲ್ಲಿ ಹೇಳಿದರು ದುರ್ಯೋಧನನಿಗೆ ಹರಿಭಕ್ತಿ ಉಂಟಾಗಲಿಲ್ಲ ಕೃಷ್ಣನನ್ನು ಹೊಗಳುತ್ತಿದ್ದ ಭೀಷ್ಮನನ್ನು ಕುರಿತು ಶತ್ರುಪಕ್ಷವನ್ನು ಹೊಗಳುವುದು ನಿಮ್ಮ ಸ್ವಭಾವ ನಮ್ಮ ಆಶ್ರಯ ಪಡೆದು ನಮಗೆ ಕೆಡುಕನ್ನೇ ಹರಿಸುತ್ತಿರಿ'' ಎಂದು ನಿಷ್ಠುರ ಮಾತುಗಳನ್ನಾಡಿದನು. ದುರ್ಯೋದನನು ಆವೇಶದಿಂದ ಅಳುತ್ತ ರಕ್ತ ಸುರಿಯುವ ಶರೀರದಿಂದ ವೇದನೆ ಪಡೆತ್ತಿರುವುದನ್ನು ಕಂಡ ಭೀಷ್ಮರು ಮಂತ್ರಪೂತಜಲದಿಂದ ಆವನ ದೇಹದ ಘಾಯವನ್ನು ತೊಳೆದು ಸಮಾಧಾನಪಡಿಸಿ ಶಿಬಿರಕ್ಕೆ ಕಳುಹಿಸಿದರು. ದುರ್ಯೋದನನಿಗೆ ಕೃಷ್ಣ ದೇವರೆಂದು ತಿಳಿದಿತ್ತು ಆದರೂ ದ್ವೇಶಾಸೂಯೆಗಳನ್ನು ಬಿಡಲಿಲ್ಲ ಮರುದಿನದ ಯುದ್ದದಲ್ಲಿ ಮತ್ತೆ ಹೊಸ ಹುರುಪನ್ನು ತುಂಬಿಕೊಂಡು ವೀರಭಟರೊಡನೆ ಯುದ್ದಕ್ಕೆ ಬಂದು ಪಾಂಡವರ ಪಕ್ಷದ ಸೈನಿಕರನ್ನು ಹೊಡದ್ಹೊಡೆದು ಕೆಡುವುತ್ತಿದ್ದನು. ಆಗ ಭೀಮನು ಮುಂದೆ ಬಂದು ಕೌರವಸೇನೆಯನ್ನು ಬಡಿದೋಡಿಸುತ್ತದ್ದನು ಆದರು ಕೌರವ ದಳ ಮೇಲೆ ಮೇಲೆ ಅಲೆಗಳಂತೆ ಬಂದು ವೀರರನ್ನು ಕೊಲ್ಲುತ್ತಿರುವಾಗ ಭೀವನು ಅನೇಕವೀರರನ್ನು ಕೊಲ್ಲುತ್ತಿದನು ಆಗ ಧೃಷ್ಟದ್ಯುಮ್ನನು ಕೌರವರ ದಳದ ಮೇಲೆ ಸಮ್ಮೋಹನಾಸ್ತ್ರವನ್ನು ಪ್ರಯೋಗಮಾಡಲು ವಿಕರ್ಣಾದಿ ವೀರರು ಮುರ್ಛೆಬಿದ್ದರು ಆಗ ದ್ರೋಣರು ವಿಜ್ಞಾನಾಸ್ತ್ರದಿಂದ ಎಲ್ಲರನ್ನು ಎಚ್ಚರಗೊಳಿಸಿದರು ನಂತರ ಧುಷ್ಟದ್ಯುಮ್ನನನ್ನು ಕೊಲ್ಲುವುದಕ್ಕೆ ಬರುವುದನ್ನು ಕಂಡ ಭೀಮನು ತಕ್ಷಣ ಅವರ ಸಾರಥಿಯನ್ನು ಕೊಂದನು ಕೃತವರ್ಮನಿಗೂ ಧೃಷ್ಟದ್ಯುಮ್ನನಿಗೂ ಯುದ್ದ ಪ್ರಾರಂಭವಾಗಿ ಕೃತವರ್ಮನು ಸೋತನು. ದುರ್ಯೋಧನನು ಭೀಮನೊಡನೆ ಯುದ್ದಕ್ಕೆ ಬಂದಾಗ ಭೀಮನು ದುರ್ಯೋಧನನನ್ನು ಹೊಡೆದು ಕೆಡವಿದನು ಮೂರ್ಛೆ ಬಿದ್ದಿರುವ ಕೌರವರಾಜನನ್ನು ಕೃಪಾಚಾರ್ಯನು ನೋಡಿ ರಾಜ, ಶತೃವೀರರ ಕೈಗೆ ಸೆರೆ ಸಿಕ್ಕಾನೆಂಬ ಭಯದಿಂದ ಓಡಿಬಂದು ತನ್ನ ರಥದಲ್ಲಿ ಹಾಕಿಕೊಂಡು ಹೊರಟುಹೊದಾಗ ಭೀಮನು ಕೌರವ ಸೈನಿಕರನ್ನು ಒಬ್ಬರನ್ನು ಕೊಲ್ಲದೆ ಹೊಡೆದೊಡಿಸಿದನು. ಅರ್ಜುನನು ಶ್ರೀಕೃಷ್ಣನ ಸಾರಥ್ಯದ ಪ್ರಭಾವದಿಂದ ಇಪ್ಪತ್ತೈದು ಸಾವಿರ ರಥಿಕರನ್ನು ಕೊಂದನು ಸಾತ್ಯಕಿಯು ಅರ್ಜುನನ ಹಿಂದೆ ಓಡಿಬರುತ್ತಿರುವ ಕೌರವ ಸೈನ್ಯಕರನ್ನು ಹೊಡೆದೊಡಿಸುತ್ತಿರಲು ಭೂರಿಶ್ರವನು ಸಾತ್ಯಕಿಯೊಡನೆ ಘೋರ ಯುದ್ದ ನಡೆಸಿ ಮೂರ್ಛೆ ಕೆಡವಿದಾಗ. ಭೀಮನು ಸಾತ್ಯಕಿ

ಯನ್ನು ತನ್ನ ರಥದಲ್ಲಿ ಹಾಕಿಕೊಂಡು ಭೂರಿಶ್ರವನೊಡನೆಯುದ್ದಕ್ಕೆ ನಿಂತನು. ಆಗ ದುರ್ಯೋಧನನು ಭೂರಿಶ್ರವನು ಭೀಮನ ಕೈಲಿ ಸತ್ತುಹೋಗುತ್ತಾನೆಂಬ ಭಯದಿಂದ ಅವನನ್ನು ತನ್ನರಥದಲ್ಲಿ ಕೂಡಿಸಿಕೊಂಡು ಹೊರಟುಹೊದನು.

ಹೀಗೆ ಭೀಮಾರ್ಜುನರು ಕುರುಸೇನೆಯಲ್ಲಿ ರಣಸಿಂಹಗಳಂತೆ ಲಗ್ಗೆ ಎಬ್ಬಿಸಿರಲು ಅನೇಕ ವೀರಭಟರುಗಳು ಸತ್ತರು. ಆಗ ಭೀಷ್ಮನು ಉಳಿದ ಸೇನ ದಳದೊಂದಿಗೆ ಯುದ್ಧವನ್ನು ನಿಲ್ಲಿಸಿ ಶಿಬಿರದ ಕಡೆಗೆ ಹೊರಟು ಹೊದರು. ಹೀಗೆ ಮೂರು ದಿನಗಳ ಯುದ್ದವೂ ಸೋಲಿನಲ್ಲೆ ಸಮಾಪ್ತಿಯಾಯಿತು.

ನಾಲ್ಕನೆಯ ದಿನ ದುರ್ಯೋಧನ ಭೀಷ್ಮರನ್ನು ಮುಂದಿಟ್ಟುಕೊಂಡು ರಣರಂಗಕ್ಕೆ ಬಂದನು.

ಪಾಂಡವರು ಭೀಮನನ್ನು ಮುಂದಿಟ್ಟುಕೊಂಡು ಬಂದರು. ಐದನೆಯ ದಿನದ ಯುದ್ದದಲ್ಲಿ ಭೀಮನು ತೋರಿಸಿದ ರಣರಭಸದ ಅಬ್ಬರಕ್ಕೆ ಭೀಷ್ಮ, ದ್ರೋಣದಿಗಳು ಹೆದರಿಓಡಿದರು ಮುಖ್ಯರಾದ ವೀರರೇ ಓಡಿಹೋದರೆಂಬ ಭಯದಿಂದ ಎಲ್ಲಾ ಸೈನಿಕರು ಎಲ್ಲಿದ್ದವರು ಅಲ್ಲೆ ಮರೆಯಾಗಿ ಅವಿತುಕೊಂಡರು ಕುರುಪಕ್ಷ ಹಾಳುಬಿತ್ತು. ಆಗ ಕುಬೇರನ ಅವತಾರ ಉಳ್ಳ ಭಗದತ್ತನು ಸುಪ್ರತೀಕವೆಂಬ ಆನೆಯನ್ನೆರಿ ವರಾಹದೇವರಿಂದ ಅಸ್ತ್ರದಾರಿಯಾಗಿ ಭೀಮಸೇನನ ಮೇಲೆ ಬಾಣದ ಮಳೆ ಕರೆದನು. ಆಗ ವಿಷ್ಣುಭಕ್ತನಾದ ಭೀಮಸೇನನು ವರಹಾದೇವರಿಗೆ ಪುಜ್ಯತೆ ಅರ್ಪಣ ಮಾಡಬೇಕೆಂದು ಯುದ್ದಮಾಡದೆ ಭಕ್ತಿಯನ್ನು ಅರ್ಪಿಸಿದನು.

ಭಗದತ್ತನು ವರಹಾಸ್ತ್ರವನ್ನು ಪ್ರಯೋಗಮಾಡಿದರೆ ಸ್ವಾಮಿ ನನ್ನನ್ನು ಕೊಲ್ಲದೆ ರಕ್ಷಣೆಮಾಡುತ್ತಾನೆ. ಆಗ ವೈಷ್ಣವಾಸ್ತ್ರ ಸುಳ್ಳಾಗುತ್ತದೆ. ನನ್ನ ನಿಮಿತ್ತದಿಂದ ಮಾಹಪ್ರಭುವಿಗೆ ನಿಂದನೆ ಬಂದರೆ ನನಗೆ ದೋಶ ಬರುತ್ತದೆ. ಆದ್ದರಿಂದ ಭಗದತ್ತನು ವೈಷ್ಣವಾಸ್ತ್ರವನ್ನು ಪ್ರಯೋಗಮಾಡದೆ ಮರೆತ ಸಂದರ್ಭದಲ್ಲಿ ಆವನನ್ನು ಹೊಡೆದು ಕೊಲ್ಲಬೇಕೆಂದು ಕೊಂಡು ಘಟೋತ್ಗಚನನ್ನು ಅವನ ಮುಂದಕ್ಕೆ ನಿಲ್ಲಿಸಿದನು.

ಘಟೋತ್ಗಚನು ನಾಲ್ಕು ರೂಪಗಳಿಂದ ಸುಪ್ರತೀಕವನ್ನು ಹಿಂಸೆ ಮಾಡತೊಡಗಿದನು ಆನೆಯ ಅಸ್ತ್ರಪೆಟ್ಟಿನಿಂದ ಬಹಳನೊಂದು ಮರಣಸಂಕಟದಿಂದ ಅಪಸ್ವರಮಾಡಿ ಕೂಗುತ್ತಿರಲು ಕೌರವ ಪಕ್ಷದ ಪ್ರಮುಖವೀರರೆಲ್ಲರೂ ಆಗ ಆನೆ ಭೀಮನ ಕೈಲಿ ಸತ್ತು ಹೋಗುತ್ತದೆಂಬ ಭಯದಿಂದ ಓಡಿಬಂದರು.

ಅಷ್ಟುಹೊತ್ತಿಗೆ ಅಸ್ತಮಾನ ಒದಗಿತು ಆಗ ಯುದ್ದ ನಿಲ್ಲಿಸಿ ಎಲ್ಲರು ಶಿಬಿರಕ್ಕೆ ಹೊರಟುಹೋದರು.

ಮರುದಿನದ ಯುದ್ಧದಲ್ಲಿ ಅರ್ಜುನನಿಂದ ನಾಗಕನ್ನಿಕೆಯಾದ ಉಲೂಪಿಯಲ್ಲಿ ಹುಟ್ಟಿದ ಇರಾವಂತ ಎಂಬುವನು ಘೋರ ಯುದ್ಧವನ್ನು ನಡೆಸಿ ಶಕುನಿಯ ಆರುಜನ ಮಕ್ಕಳನ್ನು ಕೊಂದುಹಾಕಿದನು. ಕುನಾಯಕನಿಗೆ ಒಂದುದಿನಕ್ಕಿಂತಲು ಒಂದು ದಿನ ಅಧಿಕನಷ್ಟಸಂಭವಿಸಿದ ಕಾರಣ ಭಯದಿಂದ ಆಲಂಬಸನೆಂಬ ಮಾಯಾವಿದ್ಯೆದಲ್ಲಿ ಚತುರನಾದ ರಾಕ್ಷಸನನ್ನು ಇರಾವಂತನೊಡನೆ ಯುದ್ಧ ಮಾಡಲು ಕಳುಹಿಸಿದನು. ಇರಾವಂತನು ಮಾಯಾವಿದ್ಯದಲ್ಲಿ ಕುಶಲನಾಗಿದ್ದನು. ಸಮಜೋಡಿಗಳಿಬ್ಬರಿಗೂ ಘೋರ ಯುದ್ಧ ನಡೆಯಿತು.

ಘಟೋತ್ಗಚನು ಆಗ ತಮ್ಮ ಸತ್ತನೆಂಬ ಆಕ್ರೋಶದಿಂದ ಸಿಂಹನಾದ ಮಾಡುತ್ತಾ ಓಡಿಬಂದ ರಭಸಕ್ಕೆ ಭೂಮಿ ನಡುಗಿತು ಗಿರಿಶಿಖರಗಳೆಲ್ಲವೂ ಅಲ್ಲಾಡಿದವು ಘಟೋತ್ಗಚನು ಆಕ್ರೋಶದಿಂದ ದುರ್ಯೋಧನನ ಮೇಲೆ ಬೀಳಲು ರಣದಬ್ಬರದಿಂದ ಓಡಿಬಂದರೆ ಘಟೋತ್ಗಚನು ತಕ್ಷಣ ಮೇಲೆ ಹಾರಿ ಗಗನಮಂಡಲದಲ್ಲಿ ನಿಂತು ತೀಕ್ಷ್ಣಬಾಣಗಳಿಂದ ತಡೆಯಿಲ್ಲದೆ ಹೊಡೆಯುತ್ತಿದ್ದರೆ ದ್ರೋಣಾಚಾರ್ಯರು ರಥದಲ್ಲಿ ಮೂರ್ಛೆ ಬಿದ್ದರು. ಎಲ್ಲಾ ರಥಿಕರು ರಥಸಾರಥಿಗಳನ್ನು ಕಳೆದುಕೊಂಡು ಬಾಣಗಳ ಹೊಡೆತವನ್ನು ಸಹಿಸಲಾರದವರಾಗಿ ಶಿಬಿರದ ಕಡೆಗೆ ಓಡತೊಡಗಿದರು. ಭೀಷ್ಮಾದಿಗಳು ಹಗಲೇ ಯುದ್ಧವನ್ನು ನಿಲ್ಲಿಸುವ ದುಃಸ್ಥಿತಿ ಬಂದಿತೆಲ್ಲಾ ಎಂಬ ಆತಂಕದಿಂದ ಭಗದತ್ತನನ್ನು ಘಟೋತ್ಗಚನ ಸಂಗಡ ಯುದ್ಧಮಾಡಲು ಕಳುಹಿಸಿದರು. ಭಗದತ್ತನು ಬಹಳ ಪರಾಕ್ರಮದಿಂದ ಹೋರಾಡಿದರು ಘಟೋತ್ಗಚನನ್ನು ಸೋಲಿಸಲು ಆಗಲಿಲ್ಲ. ಆಗ ಶೂಲಾಯುಧವನ್ನು ಪ್ರಯೋಗಮಾಡಲು ಘಟೋತ್ಗಚನಿಗೆ ಆ ಆಯುಧ ಕಬ್ಬಿನ ಜಲ್ಲೆಗೆ ಸಮಾನವಾಯಿತು ಒಂದೇ ಏಟಿಗೆ ತುಂಡು ಮಾಡಿದನು. ಆಗ ಕೌರವ ವೀರರೆಲ್ಲರು ಘಟೋದ್ಗಚನನ್ನು ಮುತ್ತಿಕೊಂಡು ಘೋರಕಾಳಗ ನಡೆಸಿದರು. ಆಗ ಭೀಮನು ಎಲ್ಲರನ್ನು ಬಡಿದೋಡಿಸಿ ಭಗದತ್ತನ ಆನೆಯನ್ನು ಕೊಂದನು. ಆನೆ ಸತ್ತರೋಷದಿಂದ ಭಗದತ್ತನು ವರಾಹಾಸ್ತ್ರವನ್ನು ಪ್ರಯೋಗಮಾಡಬಹುದೆಂದು ಅವನೊಡನೆ ಯುದ್ಧಮಾಡದೆ ಇರಲು ಕೃಷ್ಣಾರ್ಜುನರು ಆಗ ಭೀಮನ ಬೆಂಬಲಕ್ಕಾಗಿ ಓಡಿಬಂದರು ಭಗದತ್ತನಿಗೆ ಆಗ ಪ್ರಾಣಭಯ ಒದಗಿಯುದ್ಧವನ್ನು ನಿಲ್ಲಿಸಿದನು.

ಪ್ರತಿದಿನವೂ ಕೌರವ ಪಕ್ಷ ಸೋಲಿನಲ್ಲಿ ಶಿಬಿರಕ್ಕೆ ಬರುತ್ತಿರುವುದನ್ನು ನೋಡಿ ದುರ್ಯೋಧನನಿಗೆ ಭೀಷ್ಮಾದಿಗಳು ಒಳಗೊಳಗೆ ಸನ್ನಾಹಮಾಡಿ ಪಾಂಡವರಿಗೆ ಗೆಲುವನ್ನುಂಟುಮಾಡುತ್ತಿದ್ದಾರೆಂಬ ಸಂದೇಹದಿಂದ ಭೀಷ್ಮನ ಬಳಿಗೆ ರಾತ್ರಿ ಬಂದನು. ''ಭೀಷ್ಮ! ನೀನು ನಮಗೆ ಮಾತಿನಲ್ಲಿ ಪ್ರತಿಜ್ಞೆಯಲ್ಲಿ ಆಸೆ ತೋರಿಸಿ ಕಾರ್ಯತಃ ಪಾಂಡವರಿಗೆ ಸಹಾಯ ಮಾಡುವಂತೆ ಕಾಣುತ್ತಿದೆ. ನಿನಗೆ ಪಾಂಡವರೆಂದರೆ ಬಹಳ ಅಭಿಮಾನವೆಂಬುದನ್ನ ನೀನು ಸದಾ ಅವರನ್ನು ಹೊಗಳಿ ಹೊಗಳಿ ಶಿಖರಕ್ಕೇರಿಸುವುದರಿಂದಲೇ ತಿಳಿಯುತ್ತದೆ. ನಮ್ಮ ಪಕ್ಷದ ವೀರರೇನು ಸಾಮಾನ್ಯರಲ್ಲ. ಆದರು ಅವರು ತಮ್ಮ ಪರಾಕ್ರಮದಿಂದ

ಶತೃಪಕ್ಷವನ್ನು ಗೆಲ್ಲಲಾಗುತ್ತಿಲ್ಲವೆಂದರೆ ಆಶ್ಚರ್ಯವಾಗುತ್ತದೆ ಅನೇಕ ಪ್ರಬಲರಾದ ವೀರ ಮಣಿಗಳ ಸತ್ತಿರುವುದು ಏನೋ ಕುತಂತ್ರದಿಂದಲೇ ಎಂದು ಭಾವಿಸುತ್ತೇನೆ. ಹೀಗೆ ಸುಮ್ಮನೆ ನಮಗೆ ಮೋಸಮಾಡಬೇಡ ನಿನ್ನ ಮನಸ್ಸಿನಲ್ಲಿರುವುದನ್ನು ತಿಳಿಸು'' ಎಂದು ಕ್ರೋಧದಿಂದ ಇರಿಯುತ್ತಿದ್ದರೆ ಭೀಷ್ಮರು ''ದುರ್ಯೋಧನ! ನೀನು ನಾವು ಹೇಗೆ ಯುದ್ಧವನ್ನು ಮಾಡುತ್ತಿದ್ದೇವೆಂದು ನೋಡಿದಾಗ್ಯೂ ಹೀಗೆ ಮಾತನಾಡಿದರೆ ನಾವೇನು ಮಾಡಬಲ್ಲೆವು? ಜೀವದ ಹಂಗನ್ನೇ ತೊರೆದು ಹೋರಾಡಿದರೂ ನಿನಗೆ ಜಯಸಿಗದಿರುವುದು ನಮ್ಮ ತಪ್ಪಲ್ಲ ನೀನು ಹೀಗೆ ನಮ್ಮ ಸಾಹಸದಲ್ಲಿ ಸಂದೇಹಪಡುವುದನ್ನು ನೋಡಿದರೆ ಕೋಪವು ಬರುತ್ತದೆ ದುಃಖವೂ ಆಗುತ್ತದೆ. ನಾಳಿನ ಯುದ್ಧದಲ್ಲಿ ನಾವು ನಮ್ಮ ಶಕ್ತಿ ಮೀರಿ ರಣರಂಗದಲ್ಲಿ ನಮ್ಮ ಸಮರ ಸಾಹಸವನ್ನು ತೋರಿಸುತ್ತೇವೆ ಉತ್ಸಾಹದಿಂದ ನೋಡು ಫಲಾಫಲಗಳು ನಮ್ಮ ಅಧೀನವಲ್ಲ ಪ್ರಯತ್ನ ನಮ್ಮದು'' ಎಂದು ಸಮಾದಾನಮಾಡಿ ಕಳುಹಿಸಿದರು.

ಆರನೆಯ ಯುದ್ಧ ರಭಸದಿಂದ ಆರಂಭವಾಯಿತು ದುರ್ಯೋಧನನ ಚುಚ್ಚುಮಾತಿಗೆ ರಚ್ಚಿಗೆದ್ದ ಭೀಷ್ಮರು ಕೆಚ್ಚೆದೆಯ ಕಲಿಯಂತೆ ಸಿಕ್ಕ ಸಿಕ್ಕ ವೀರರನ್ನು ಕೊಚ್ಚುತ್ತಿದ್ದರು. ಭೀಷ್ಮರ ರೌದ್ರತೆಗೆ ಹೆದರಿದ ಪಾಂಡು ಪಕ್ಷದ ವೀರರು ಓಡತೊಡಗಿದರು. ಆಗ ಅಭಿಮನ್ಯು ಭೀಷ್ಮರೊಡನೆ ಯುದ್ಧಮಾಡಿದನು.ಆಗ ಅಲಂಬುಸನೆಂಬ ರಾಕ್ಷಸ ಯುದ್ಧಕ್ಕೆ ಬಂದನು ಅಭಿಮನ್ಯು ಆ ರಾಕ್ಷಸನನ್ನು ಹೊಡೆದೋಡಿಸಿ ಭೀಷ್ಮನೊಡನೆ ಯುದ್ಧಮಾಡುವಾಗ ದುರ್ಯೋಧನನು ಭೀಷ್ಮನ ಸಹಾಯಕ್ಕೆ ಬಂದನು ಅಭಿಮನ್ಯುವಿನ ರಥಸಾರಥಿ ಎಲ್ಲವನ್ನು ನಾಶಪಡಿಸಿ ಭಯಂಕರ ಯುದ್ಧಮಾಡುತ್ತಿದ್ದಾಗ ಭೀಮನು ದುರ್ಯೋಧನನ ರಥಕ್ಕೆ ಹಾರಿ ಅವನನ್ನು ವಿರಥನನ್ನಾಗಿ ಮಾಡಿದ್ದಾಗ ದುರ್ಯೋಧನನ ರಕ್ಷಣೆಗೆ ಅನೇಕ ಕೌರವ ವೀರರು ಬಂದರು.

ಎಲ್ಲರನ್ನು ಭೀವಸೇನನು ಬಡಿದೋಡಿಸಿದಾಗ ಚಿತ್ರಸೇನನು ಭೀಮಸೇನನ ಗದಾ ಏಟಿನಿಂದ ದುರ್ಯೋಧನನು ಸಾಯದಂತೆ ರಕ್ಷಿಸಿ ತಾನು ತಪ್ಪಿಸಿಕೊಂಡು ಓಡಿದನು.

ಭೀಷ್ಮನು ಹಿಂದಿನದಿನ ದುರ್ಯೋದನನು ತನಗೆ ಹೊರಸಿದ್ದ ಅಪವಾದವನ್ನು ಸುಳ್ಳುಮಾಡಿ ತೋರಿಸಬೇಕೆಂಬ ಹಠದಿಂದ ಅನೇಕ ಪಾಂಡವ ವೀರರನ್ನು ಕೊಂದನು. ಆ ದಿನ ಭೀಷ್ಮನು ಹತ್ತು ಸಾವಿರ ಮಹಾರಥಿಕರನ್ನು ಕೊಂದನು. ಆರನೆಯದಿನದ ಯುದ್ದದಲ್ಲಿ ಜಯಲಕ್ಷ್ಮಿ ದುರ್ಯೋಧನನಿಗೆ ಜಯದ ಬಲವನ್ನು ತೋರಿಸಿ ಸಂತೋಷಪಡಿಸಿದಳು. ಕೌರವರು ಜಯ ಘೋಷಣೆಯಿಂದ ಶಿಭಿರವನ್ನು ಸೇರಿದರು. ಪಾಂಡವಪಕ್ಷ ತಮಗೇ ಜಯ ಶತಸಿದ್ಧವೆಂದು ಪರಾಕ್ರಮದಿಂದ ಮೆರೆದಾಗ ಕೃಷ್ಣನು ಕೌರವಪಕ್ಷದಲ್ಲಿ ಜಯಲಕ್ಷ್ಮಿಯ ಸಂತೋಷದ ಸಮಾರಂಭವನ್ನು ತೋರಿಸುತ್ತಿದ್ದನು ಪಾಂಡವರು ಉದಾಸೀನದಿಂದ ರಣದುತ್ಸಾಹ ಕಳೆದುಕೊಂಡಾಗ ಕೌರವದಳ ಅಳುವಂತೆ ಮಾಡುತ್ತಿದ್ದನು ಹೀಗೆ ಶ್ರೀ ಕೃಷ್ಣನು ಧರ್ಮದ

ಪಕ್ಷವಹಿಸಿದವನಂತೆ ತೋರಿಸುತ್ತಾ ಸರ್ವವ್ಯಾಪ್ತನಾದ ಮಾಹಾಮಹಿಮನು ಜಯಾಪಜಯಗಳನ್ನು ತೂಗೂಯ್ಯಲೆಯಂತೆ ಆಡಿಸಿ ಅನೇಕ ದೈತ್ಯಸಮೂಹವನ್ನು ನಾಶಪಡಿಸಿದನು. ಭೀಮಸೇನನಿಗೆ ಅಜ್ಞಾನವಿರಲ್ಲಿಲ್ಲ ಅವನಿಗೆ ಶ್ರೀ ಹರಿಯ ಮತವೇ ಸತ್ಯವೆಂದು ತಿಳಿದು ಅದರಂತೆ ನಡೆಯುವನಾದ್ದರಿಂದ ಅವನು ಶಂಕಾತಂಕಗಳನ್ನು ತೊರೆದು ಯುದ್ದಮಾಡುತ್ತಿದ್ದನು.

ಭೀಷ್ಮರು ತಮ್ಮ ಪ್ರಚಂಡಶಕ್ತಿಯಿಂದ ಅರಿತಂಡವನ್ನು ತುಂಡು ಮಾಡಿ ರಣಚಂಡಿಗೆ ಬಲಿಕೊಡುತ್ತಿರುವುದನ್ನು ಕಂಡ ಪಾಂಡವ ವೀರರು ಪಾಪ ಅನೇಕ ವೀರರು ಭೀಷ್ಮನ ಕೈಲಿ ಸಾಯುತ್ತಿದ್ದಾರೆ ಪ್ರಾಣಬಲಿಯನ್ನು ತಪ್ಪಿಸಬೇಕೆಂಬ ಯೋಚನೆಯಿಂದ ಧರ್ಮರಾಯನು ತಮ್ಮಂದಿರೊಡಗೂಡಿ ಕೃಷ್ಣನನ್ನು ಮುಂದುಮಾಡಿಕೊಂಡು ಭೀಷ್ಮನ ಬಳಿಗೆ ಬಂದು ''ಪಿತಾಮಹಾ! ನಿನ್ನ ಪರಾಕ್ರಮಕ್ಕೆ ಅನೇಕ ಜೀವಕೊಟಿಗಳು ನಾಶವಾಗುತ್ತಿದೆ ನಿನ್ನ ಬೆಂಬಲ ಪಡೆದ ಪಾಪಿಗಳು ಉಳಿದರೆ ಭೂದೇವಿಯನ್ನು ಸಂತುಷ್ಟಿಪಡಿಸಿದಂತಾಗುವುದಿಲ್ಲ.

ಶ್ರೀ ಕೃಷ್ಣನು ಕ್ಷಣಮಾತ್ರದಲ್ಲಿ ನಿನ್ನ ಪಕ್ಷದ ಸಕಲ ದೈತ್ಯರನ್ನು ಸಂಹಾರಮಡಬಲ್ಲನೆಂದು ನಿನಗೂ ತಿಳಿದಿದೆ ನಿನ್ನ ಪರಾಕ್ರಮ ಪುಷ್ಟದ ಅಂಗೀಕಾರಕ್ಕಾಗಿ ಅವರೆಲ್ಲರನ್ನು ಇನ್ನು ಉಳಿಸಿದ್ದಾನೆ. ನೀನು ಯುದ್ದ ಮಾಡುವವರೆಗೂ ದೈತ್ಯನಿರ್ಮೂಲ ಕಾರ್ಯ ಆಗಬಾರದೆಂಬ ಸಂಕಲ್ಪದಂತೆ ಈಗ ನೀನು ಯುದ್ದನಿಲ್ಲಿಸುವ ಉಪಾಯಹೇಳು'' ಎಂದನು.

ಧರ್ಮರಾಜ: ಈಗ ನಡೆಯುತ್ತಿರುವುದು ಧರ್ಮದ ಹೊರಾಟ ಇಲ್ಲಿ ಶ್ರೀ ಕೃಷ್ಣನೆ ಸಾಕ್ಷಾತ್ತಾಗಿ ಯುದ್ದನಡೆಸುತ್ತಿರುವವನಾದ್ದರಿಂದ ನಾನು ಯುದ್ದ ಧರ್ಮವನ್ನು ತಪ್ಪಬಾರದು. ನನ್ನ ಸರಿಸಮಾನವೀರರು ನನಗೆ ಯುದ್ದ ಕೊಡಲು ಬಂದಾಗ ನಾನು ಶಸ್ತ್ರಸನ್ಯಾಸ ಮಾಡುವಂತಿಲ್ಲ ಕುರುಸೇನಾಧಿಪತಿ ಆದ ನಾನು ಶೋಕ, ಭಯ, ದಯೆ ಮೊದಲಾದ ಕಾರಣದಿಂದ ಯುದ್ದನಿಲ್ಲಿಸಬಾರದು.

ನನ್ನ ಪ್ರತಿಜ್ಞೆಯಂತೆ ನೀವು ಶಿಖಂಡಿನಿಯನ್ನು ನನ್ನ ಮುಂದೆ ಯುದ್ಧಕ್ಕೆ ಕಳುಹಿಸಿದಾಗ ನಾನು ಶಸ್ತ್ರತ್ಯಾಗ ಮಾಡಿ ಯುದ್ಧವನ್ನು ನಿಲ್ಲಿಸುತ್ತೇನೆ. ಆಗ ನೀವು ನನ್ನನ್ನು ಹೊಡೆದು ಕೊಲ್ಲಬಹುದು'' ಎಂದು ತಿಳಿಸಿದನು.

ಪಿತಾಮಹನ ತ್ಯಾಗವನ್ನು ತಿಳಿದ ಪಾಂಡವರು ಸಂತೋಷದಿಂದ ಕೃತಜ್ಞತೆಯನ್ನು ಸಲ್ಲಿಸಿ ಶಿಬಿರಕ್ಕೆ ಬಂದರು.

ಮಾರನೆದಿನ ಸಮರಸಿದ್ದತೆಯ ಕಾರ್ಯಗಳೆಲ್ಲವು ಬಿರುಸಾಗಿ ನಡೆದವು. ಶ್ರೀ ಹರಿ ಪ್ರೇರಣಾನುಸಾರ ತಮ್ಮಿಂದ ಭಗವತ್ಕಾರ್ಯ ಸಾದನೆಯ ಕಾರ್ಯ ನಡೆಯುತ್ತಲಿದೆ ಎಂಬ ಭಾವದಿಂದ ಅರ್ಜುನನು ಪಿತಾಮಹನ ಮಾತಿನಂತೆ ಶಿಖಂಡಿಯನ್ನು ಮುಂದೆ ಮಾಡಿಕೊಂಡು ತಾನು ಹಿಂದಿನಿಂದ ಅವನಿಗೆ ರಕ್ಷಣೆ ಕೊಡುತ್ತಿದ್ದನು. ಅತ್ತ ಕಡೆ ಭೀಷ್ಮನು ಹಿಂದೆ ದುಶ್ಯಾಸನಾದಿ

ಕುರು ವೀರರು ಯುದ್ಧಸನ್ನದ್ಧರಾಗಿ ಬರುತ್ತಿದರು. ಅವರೆಲ್ಲರನ್ನು ಭೀಮನು ಗದಾಯುಧದಿಂದ ಹೊಡೆದೋಡಿಸುತ್ತಿದನು. ಧರ್ಮರಾಜನು ಐದು ಜನ ತನ್ನ ಪುತ್ರರಿಂದಲು ನಕುಲ ಸಹದೇವರಿಂದಲು ಒಡಗೂಡಿ ಬಂದು ಭೀಷ್ಮನೊಡನೆ ಯುದ್ಧಮಾಡಿ ಗಜಸೇನೆಯನ್ನು ಕೊಲ್ಲುತ್ತಿದ್ದನು. ಆಗ ವಿರಾಟನು ಧರ್ಮರಾಜನ ಬಳಿಗೆ ಬಂದು ದೃಪದರಾಜ ಮೊದಲಾದ ವೀರರಾಜರೊಡಗುಡಿ ಭೀಷ್ಮನ ಮೇಲೆ ಬಾಣದ ಮಳೆ ಕರೆಯುತ್ತಿದ್ದನು. ಜಯದ್ರಥನು ಆಗ ಬಂದು ಧುಷ್ಠದ್ಯುಮ್ನನನ್ನು ಎದುರಿಸಲು ಧುಷ್ಠದ್ಯುಮ್ನನು ಜಯದ್ರಥನ ರಥಾಶ್ವಗಳೆಲ್ಲವನ್ನು ನಾಶಪಡಿಸಿ ಓಡಿಸಿದನು.

ಧುಷ್ಠದ್ಯುಮ್ನನು ಪಾಂಚಾಲ, ಶಿಖಂಡಿ ಎಲ್ಲರು ಒಟ್ಟಾಗಿ ಭೀಷ್ಮನಿಗೆ ಘೋರಾಸ್ತ್ರಗಳಿಂದ ಘಾಸಿಪಡಿಸುತ್ತಿದ್ದರು. ಭೀಷ್ಮನು ತನ್ನ ಅಂತ್ಯಪರಾಕ್ರಮವನ್ನು ಪ್ರಳಯಾಗ್ನಿಯಂತೆ ಪ್ರಜ್ವಲಿಸುತ್ತ ಕರಾಳತನದಿಂದ ಯುದ್ಧಮಾಡಿ ಜೀವನದ ಹೋರಾಟ ಅಂತ್ಯಗೊಳಿಸಿದನೋ ಅನ್ನುವಂತೆ ಭೀಕರವಾಗಿ ತೋರಿಸುತ್ತಿರಲು ಶಿಖಂಡಿ ಎದುರಿಗೆ ಬಂದು ಅಸ್ತ್ರವನ್ನು ಬಿಟ್ಟಾಗ ಯುದ್ಧವನ್ನು ನಿಲ್ಲಿಸಿ ದನು. ಏಕೆಂದರೆ ಶ್ರೀಕೃಷ್ಣನ ವಿಚಿತ್ರಲೀಲೆಯಂತೆ ಆವನ ಪ್ರೇರಣಾನುಸಾರ ಭೀಷ್ಮನು ರಣರಂಗದಲ್ಲಿ ಸ್ತ್ರೀಯು ಎದುರಿಗೆ ಬಂದರೆ ಯುದ್ಧಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದ ಕಾರಣ ಶಿಖಂಡಿಯು ಪುರುಷನಾಗಿದ್ದರು ಹಿಂದಿನ ಸ್ತ್ರೀದೇಹದ ಸಂಪರ್ಕ ಅವನಿಗೆ ಹೋಗಿಲ್ಲ ಅವನ ಧ್ವನಿ ಹೆಸರು ನಡೆನುಡಿಗಳೆಲ್ಲವು ಬದಲಾಗಿರಲಿಲ್ಲವಾದ್ದರಿಂದ ಪ್ರತಿಜ್ಞೆಯಂತೆ ಯುದ್ಧ ನಿಲ್ಲಿಸಿದನು.

ಭೀಷ್ಮನಿಗೆ ಶಿಖಂಡಿಯ ಬಾಣ ಸ್ಪರ್ಶವಾಗಲಿಲ್ಲ ಅರ್ಜುನನ ವಜ್ರಸದೃಶ ಬಾಣಗಳು ಅವನ ಅಂತಃಕರುಣವನ್ನು ಹೊಕ್ಕು ಇರಿಯುತ್ತಿದ್ದವು. ಅರ್ಜುನನು ತನ್ನ ಪಿತಾಮಹನು ನಿಷ್ಠಾವಂತಪರಿಮಳಪುಷ್ಪದಂತೆ ಪವಿತ್ರಾತ್ಮನಾಗಿದ್ದಾನೆ. ಅವನು ಪಾಪಿಗಳು ಸಂಪರ್ಕದಲ್ಲಿದ್ದರೂ ತನ್ನ ಮಡಿವಂತಿಕೆಯ ಮನಸ್ಸನ್ನು ಮಲಿನಗೊಳಿಸದೆ ನಿಗ್ರಹಮಾಡಿದ ಮಹಾಧೀರನೆಂದು ಸಕಲ ಲೋಕಗಳು ತಿಳಿಯಬೇಕೆಂದು ಅವನ ದೇಹದ ಹಿಂಭಾಗವೆಲ್ಲವನ್ನು ಬಾಣಗಳಿಂದ ಹೆಣೆದು ಕೊಳ್ಳುವಂತೆ ಬಾಣಗಳ ಮೇಲೆ ಬಾಣಗಳನ್ನು ಹೊಡೆದು ರಥದಿಂದ ಕೆಳಗೆ ಕೆಡವಿದಾಗ ಮಹಾತ್ಮರಾದ ಭೀಷ್ಮರು ಬೆನ್ನಿನ ಮೇಲೆ ನಾಟಿದ್ದ ಬಾಣಗಳ ಸಹಿತ ಬಿದ್ದರೆ ವೀರ ಪಾರ್ಥನ ಬಾಣಗಳೇ ಅವರಿಗೆ ಸುಖತಲ್ಪದಂತೆ ಭಾಸವಾಯಿತೋ ಎನ್ನುವಂತೆ ಮಲಗಿದರು. ಭೀಷ್ಮರು ಕೆಳಗೆ ಬಿದ್ದಾಕ್ಷಣವೇ ಸಕಲ ವೀರರ ಕೈಲಿದ್ದ ಆಯುದಗಳು ಭೀಷ್ಮರಿಗೆ ಮಣಿದವೋ ಎನ್ನುವಂತೆ ಕೆಳಗೆ ಸರಿದವು. ಯುದ್ಧದ ಅಬ್ಬರ ಒಮ್ಮೆಲೇ ನಿಂತು ಮೌನತಾಳಿತು. ಸಮಸ್ತವೀರರು ಭೀಷ್ಮನ ಬಳಿಗೆ ಓಡಿಬಂದು ತಲೆಬಾಗಿ ನಿಂತರು.

ಭೀಷ್ಮರು ಅರ್ಜುನನು ಆದರದಿಂದ ಸಿದ್ಧಪಡಿಸಿಕೊಟ್ಟ ಬಾಣಗಳ ಮಂಚದಮೇಲೆ ಮಲಗಿದ್ದಾಗ ತಲೆ ಕೆಳಗೆ ಜೋಲಾಡುತ್ತಿತ್ತು. ಆಗ ಭೀಷ್ಮನು ''ದೇಹಕ್ಕೆ ಬಾಣದ ಆಸರೆ

ಸಿಕ್ಕಿತು ತಲೆಗೆ ಇಂಬು ಬೇಕು ಎಂದಾಗ ದುರ್ಯೋಧನನು ಮೃದುವಾದ ದಿಂಬನ್ನು ತರಿಸಿ ಮುತ್ತಯ್ಯನ ತಲೆಗೆ ಇಡಲು ಹೊದನು ಭೀಷ್ಮರು ''ದುರ್ಯೋಧನ! ನಿನಗೆ ಅಷ್ಟಮದಗಳು ಆವರಿಸಿರುವುದರಿಂದ ಅಜ್ಞಾನದಿಂದ ಪರರ ಹಿತಾಹಿತಗಳನ್ನು ತಿಳಿಯದ ಮೂರ್ಖನಾಗಿರುವಿ. ಮುಳ್ಳಿನ ಹಾಸಿಗೆಯ ಮೇಲೆ ವೇದನೆ ಪಡುತ್ತ ಮಲಗಿರುವ ನನಗೆ ಮೆತ್ತನೆಯದಿಂಬು ಸುಖಕೊಟ್ಟೀತೇ ಅರ್ಜುನ! ನನ್ನ ತಲೆಗೆ ತಕ್ಕ ಇಂಬು ಕೊಡಪ್ಪ'' ಎಂದರು. ಅರ್ಜುನನು ಭೀಷ್ಮರ ಶಿರಸ್ಸು ನೇರವಾಗಿ ಇಟ್ಟುಕೊಳ್ಳಲು ಅವರಿಗೆ ಹಿತವಾಗುವಂತೆ ತಲೆಯ ಕೆಳಗ ಬಾಣಗಳನ್ನು ಜೋಡಿಸಿ ಇಂಬುಮಾಡಿ ಕೊಟ್ಟನು. ಆಗ ಭೀಷ್ಮನು ಅರ್ಜುನನನ್ನು ಪ್ರಸನ್ನದೃಷ್ಠಯಿಂದ ನೋಡಿ ಬಾಯಿ ಒಣಗಿದೆ ನೀರು ಬೇಕು'' ಎಂದಾಗ, ದುರ್ಯೋಧನನು ತನ್ನ ಕಪಟಪ್ರೀತಿಯನ್ನು ಪ್ರದರ್ಶನ ಮಾಡುತ್ತಾ ಸುಗಂದೋದಕವನ್ನು ಬಂಗಾರದ ಪಾತ್ರೆಯಲ್ಲಿ ಕೊಟ್ಟನು. ಭೀಷ್ಮರು ದುರ್ಯೋಧನನ ಸಿರಿವಂತಿಕೆಯ ಸುಖಕ್ಕಿಂತಲೂ ಈ ರಣರಂಗದ ಮುಳ್ಳಿನ ಇರಿತವೆ ಲೇಸು'' ಎನ್ನುವಂತೆ ಅವನ ಕೈಯಿಂದ ನೀರು ಸ್ವಿಕರಿಸದೇ ಅರ್ಜುನನನ್ನು ನೊಡಿದಾಗ ಅರ್ಜುನನು ಭೀಷ್ಮರ ವೀರಮಾತೆ ಭಾಗೀರಥೀ ದೇವಿಯನ್ನು ಸ್ಮರಿಸಿ ''ತಾಯೇ ನಿನ್ನ ಪುತ್ರ ಭೀಷ್ಮನು ವಾತ್ಸಲ್ಯದ ಪಿಪಾಸೆಯಿಂದ ದಣಿದಿದ್ದಾನೆ ಅವನ ಮನಸ್ಸಿಗೆ ತಂಪ ಕೊಟ್ಟು ಸಮಾದಾನಮಾಡು''ಎಂದು ಪ್ರಾರ್ಥಿಸಿ ತನ್ನ ಪರಾಕ್ರಮಪುಷ್ಪವೆಂಬ ಬಾಣದಿಂದ ಆರ್ಚಿಸಲು ಗಂಗಾ ಮೇಲೆ ಪುಟಿದುಬಂದು ಮಗನ ಮನಸ್ಸಿಗೆ ಆಹ್ಲಾದವನ್ನುಂಟುಮಾಡಿದಳು ಭೀಷ್ಮನು

ಸಂತೃಪ್ತಭಾವದಿಂದ ''ಎಲಾ ಮೂರ್ಖ ದುರ್ಯೋಧನ! ಈಗ ಅರ್ಜುನನ ಅಂತರಂಗದ ಸತ್ವದ ಸತ್ಯತೆಯನ್ನು ಅರಿತೆಯಾ? ಶ್ರೀ ಹರಿಯನ್ನು ಯಾರು ಆಶ್ರಯ ಹೊಂದುತ್ತಾರೋ ಆವರಿಗೆ ಇಂಥ ಸುಜ್ಞಾನ ಸಂಪತ್ತು ಪ್ರಾಪ್ತವಾಗುತ್ತದೆ. ಅದರಿಂದ ಲೋಕದ ಸಕಲ ಜನರಿಗು ಸುಖ ಪ್ರಾಪ್ತಿಯಾಗುತ್ತದೆ. ಅನಿಷ್ಠ ನಿವಾರಣೆ ಆಗುತ್ತದೆಂಬುದನ್ನು ತಿಳಿದುಭೀಮಾರ್ಜುನರನ್ನು ದ್ವೇಶಮಾಡದೆ ಲೋಕಕ್ಕೆ ಕ್ಷೇಮವನ್ನುಂಟುಮಾಡಿ ನೀನು ಬದುಕಿಕೋ'' ಎಂದು ಮರಣವನ್ನು ಮುಷ್ಠಿಯಲ್ಲಿ ಹಿಡಿದು ಮುಳ್ಳಿನ ಮೇಲೆ ಮಲಗಿ ಮೋಹದ ಗೊಂದಲಗಳನ್ನು ಕಳೆದು ಹಾಕಿದ್ದ ಭಿಷ್ಮರು ನೀಡಿದ ತತ್ವಸಾರವನ್ನು ಅಜ್ಞಾನಿಯಾದ ದುರ್ಯೋಧನನು ಅಂಗೀಕಾರಮಾಡದೆ ದುರಭಿಮಾನದಿಂದ ನಡೆದನು. ಕೃಷ್ಣನು ಪಾಂಡವರ ದೂತನಾಗಿ ಬಂದು ಹಸ್ತಿನಾವತಿಯಲ್ಲಿ ಅವನು ತೋರಿಸಿದ ಒಂದೊಂದು ಕಾರ್ಯವು ಅವನನ್ನು ಹೆಜ್ಜೆಹೆಜ್ಜೆಗೂ ಎಚ್ಚರಗೊಳಿಸುತ್ತಿದ್ದರೂ ಕಲಿಪ್ರಭಾವದಿಂದಲು ಶ್ರೀ ಕೃಷ್ಣನ ಪ್ರೇರಣಾಶಕ್ತಿಯಿಂದಲು ಪಾಪಬುದ್ದಿ ಅವನಲ್ಲಿ ಕ್ಷಣ ಕ್ಷಣಕ್ಕೂ ವೃದ್ದಿಯಾಗುತ್ತಿತ್ತು. ಆದ್ದರಿಂದಲೇ ಭೀಷ್ಮರ ಮಾತಿನ ಮಹತ್ವವನ್ನರಿಯದೆ ಶಿಬಿರ ಹೊರಟುಹೊದನು.

ಅತ್ತ ಹಸ್ತಿನಾವತಿಯಲ್ಲಿ ಧೃತರಾಷ್ಟ್ರನಿಗೆ ಸಮರಭೂಮಿಯಲ್ಲಿ ನಡೆಯುವ ಯುದ್ದ

ನಿರೂಪಣೆ ಕೊಡುತ್ತಿದ್ದ ಸಂಜಯನು ಧೃತರಾಷ್ಟ್ರ ಕುರುಕುಲದ ಕಲಶವೇ ಕಳಚಿಬಿದ್ದಂತೆ ದಳಪತಿಯಾದ ಭೀಷ್ಮನು ರಣರಂಗದಲ್ಲಿ ಉಕ್ಕಿನ ಬಾಣಗಳ ತುದಿಗೆ ಬೆನ್ನು ಆಲಿಸಿ ಬಿದ್ದನು ಎಂದು ಹೇಳಿದಾಕ್ಷಣ ಧೃತರಾಷ್ಟ್ರನು ದುಃಖದಿಂದ ಮೂರ್ಛಿತನಾದನು. ಪಾಪಿ ಮಗನೇ! ನಿನ್ನನ್ನು ರಕ್ಷಿಸಬೇಕೆಂದು ತನ್ನ ಪ್ರಾಣವನ್ನೆ ತೆತ್ತರೂ ಇನ್ನು ನಿನಗೆ ಹಿರಿಯರ ಮೇಲೆ ಕರುಣೆಹುಟ್ಟಲಿಲ್ಲವೇ? ಛಲವನ್ನು ಸಾಧಿಸಿ ಇನ್ನೂ ಯಾರ್‍ಯಾರನ್ನು ಕೊಲ್ಲಬೇಕೆಂದು ಹಠತೊಟ್ಟಿರುವೆ? ಕುರುಸೇನಾಸಮುದ್ರಕ್ಕೆ ನೌಕೆಯಂತೆ ಇದ್ದು ಸಂರಕ್ಷಿಸುತ್ತಿದ್ದ ಭೀಷ್ಮನು ಬಿದ್ದನೆಂದರೆ ಈಗ ನಮ್ಮ ಸೇನಾಪಡೆ ನಾವೆಯ ಸಹಿತವಾಗಿ ಮುಣುಗಿತೆಂದು ಬಹಳ ದುಃಖಪಡುತ್ತಿದ್ದನು.

ಪಾಂಡವಾಗ್ನಿ ಕುರುಕುಲವನ್ನೆ ಸುಟ್ಟು ಭಸ್ಮ ಮಾಡುತ್ತದೆಂಬ ಭಯದಿಂದ ತಲ್ಲಣಿಸುತ್ತಿರುವೆನು. ಮುಂದೇನು ಗತಿ? ಎಂದು ಧೃತರಾಷ್ಟ್ರನು ಮಕ್ಕಳ ಮತ್ಸರದಿಂದ ಮಸಿದ ಕತ್ತಿಕೌರವ ವಂಶವೆಂಬ ಸುಂದರ ತೋಟದ ವೃಕ್ಷಗಳೆಲ್ಲವನ್ನು ತರಿದು ಹಾಕುತ್ತಿದೆ. ನಮ್ಮ ಕೈಯೊಳಗಿನ ಕತ್ತಿ ನಮ್ಮ ತಲೆಯುನ್ನೆ ಉರುಳಿಸುತ್ತದೆಂಬ ವಿವೇಕವಿಲ್ಲದ ದುಶ್ಕರ್ಮಿಗಳಿಂದುಂಟಾದ ಈ ದುಃಖವನ್ನು ಹೇಗೆ ಸಹಿಸಲಿ'' ಎಂದು ದುಃಖಿಸಿದನು. ಭೀಷ್ಮರೂ ನಮ್ಮ ಕೈಕಳಚಿಕೊಂಡರು ಮುಂದಿನ ಸೇನಾಧಿಪತ್ಯಕ್ಕೆ ತಕ್ಕವರೆಂದರೆ ದ್ರೋಣರು. ಅವರು ಸಕಲವಿದ್ಯಾಪ್ರವೀಣರು. ಸಕಲರಾಜರಿಗೂ ಗುರುಸ್ಥಾನದಲ್ಲಿದ್ದು ವಿದ್ಯೋಪದೇಶಮಾಡಿದ ಮಹಾತ್ಮರು. ಪರಶುರಾಮರ ಶಿಷ್ಯರು ಎಂದು ದುರ್ಯೋಧನನು ಸಬಾಸಮುಹದ ಮುಂದೆ ತಿಳಿಸಿ ''ದ್ರೋಣಾಚಾರ್ಯರೆ!ನೀವು ಸೇನಾನಾಯಕರಾಗಬೇಕು'' ಎಂದು ಪ್ರಾರ್ಥಿಸಿಕೊಂಡು ಸೇನಾಧಿಪತಿಗಳನ್ನಾಗಿ ಮಾಡಿ ಪಟ್ಟಾಭಿಷೇಕ ಮಾಡಿದನು. ಆಮೇಲೆ ಕರ್ಣನನ್ನು ಕುರಿತು ''ಕರ್ಣಾ!ನೀನು ಭೀಷ್ಮರು ಯುದ್ಧ ನಿಲ್ಲಿಸಿದನಂತರ ನಾನು ಯುದ್ಧಮಾಡುತ್ತೇನೆ'' ಎಂದು ಪ್ರತಿಜ್ಞೆ ಮಾಡಿದ ಪ್ರಕಾರ ಈಗ ನಿನ್ನ ಬಾಹುವಿಕ್ರಮವನ್ನು ಶತ್ರುವೀರರಮುಂದೆ ತೋರಿಸಲು ಸಮರಸನ್ನದ್ಧನ್ನಾಗಿ ಏಳು'' ಎಂದು ಹುರಿದುಂಬಿಸಿ ಯುದ್ಧಕ್ಕೆ ಆಜ್ಞೆಮಾಡಲು ಕರ್ಣನು ಭೀಷ್ಮರ ಬಳಿಗೆ ಬಂದು ''ಆಚಾರ್ಯರೇ! ನನಗೆ ಯುದ್ಧಕ್ಕೆ ಆಜ್ಞೆನೀಡಿರಿ'' ಎಂದು ಕೇಳಿಕೊಳ್ಳಲು ಭೀಷ್ಮರು 'ಕರ್ಣಾ!ನೀನು ಯುದ್ಧದ ಧರ್ಮವನ್ನು ತಿಳಿದು ಹೋರಾಡತಕ್ಕವನು ಶಸ್ತ್ರ ವಿದ್ಯೆಯಲ್ಲಿ ಪ್ರಖ್ಯಾತನಾಗಿರುವಿ. ನಿನ್ನ ಸಾಹಸವನ್ನು ರಣಕ್ಷೇತ್ರದಲ್ಲಿ ಸೂರೆಮಾಡಿ ದುರ್ಯೋಧನನನ್ನು ಸಂತೋಷಪಪಡಿಸು'' ಎಂದು ಹೇಳಿಕಳುಹಿಸಿದರು.

ದ್ರೋಣರೊಡನೆ ಕರ್ಣನು ಯುದ್ದಕ್ಕೆ ಸಿದ್ದನಾಗಿ ಹೊರಟನು.

ದುರ್ಯೋಧನನು ದ್ರೋಣರನ್ನು ಕುರಿತು ''ಆಚಾರ್ಯ! ಈಗಾಗಲೇ ನಮ್ಮ ಪಕ್ಷದಲ್ಲಿ ಅನೇಕ ವೀರರು ರಣದೇವತೆಗೆ ಬಲಿ ಆಗಿದ್ದಾರೆ. ಮುಂದೆ ಯುದ್ದಕ್ಕೆ ಅವಕಾಶವಿಲ್ಲದಂತೆ

ಧರ್ಮರಾಜನನ್ನು ಕೈಸೆರೆ ಹಿಡಿದು ಅನಾಹುತವನ್ನು ತಪ್ಪಿಸಿರಿ'' ಎಂದು ಹೇಳಿದಾಗ ದ್ರೋಣರು ''ಹಾಗೇಯೇ ಆಗಲಿ'' ಎಂದು ಒಪ್ಪಿ ಅಂದಿನ ಯುದ್ಧವನ್ನು ಪ್ರಾರಂಭಮಾಡಿದರು.

ದ್ರೋಣರು ಧನುರ್ಧಾರಿಗಳಾಗಿ ಸೇನಾಧಿಪತ್ಯವನ್ನು ಪ್ರಕಾಶಗೊಳಿಸುತ್ತಾ ಮುಂದೆ ಬಂದು ರಣನಾದವನು ಮೊಳಗಿದಾಗ ಕೃಪಾ,ಶಲ್ಯ,ಅಶ್ವತ್ಥಾಮಾದಿಗಳು ಸೇನಾನಾಯಕನ ಸೂಚನೆಯಂತೆ ಭೀಮನನ್ನು ಧರ್ಮರಾಜನ ಬಳಿಗೆ ಬಿಡದಂತೆ ಅವನೊಡನೆ ಯುದ್ಧಕ್ಕೆ ಬರುತಿದ್ದರು.

ಸರ್ವಜ್ಞನಾದ ಭೀಮನಿಗೆ ಶತೃಗಳು ನನ್ನಭಯದಿಂದ ನನ್ನನ್ನು ಧರ್ಮರಾಜನ ಬಳಿಗೆ ಬಿಡದಂತೆ ತಡೆಗಟ್ಟಿದರೆ ಧರ್ಮರಾಜನನ್ನು ಕೈಸೆರೆ ಹಿಡಿದು ಸಾಗಿಸಬಹುದೆಂಬ ಸಂಚು ಮಡಿದ್ದಾರೆಂದು ತಿಳಿದು ಅಶ್ವತ್ಥಾಮಾದಿಗಳನ್ನು ಹೊಡೆದೊಡಿಸಿ ಧರ್ಮರಾಜನ ಬಳಿಗೆ ಹೊರಟು ದ್ರೋಣನನ್ನು ಎದುರಿಸಿದನು. ಆಗ ಅಭಿಮನ್ಯುವೂ ಕುರುಸೇನೆಯನ್ನು ಹೊಡೆದು ಹಾಕುತ್ತ ಹೊರಟು ಭೀಮನ ಬಳಿಗೆ ಬಂದನು. ಆಗ ಶಲ್ಯನೂ ರಣನಾದದಿಂದ ಅಬ್ಬತಿಸುತ್ತಾ ಬಂದು ಭೀಮನನ್ನು ಎದುರಿಸಲು ಭೀಮ ಶಲ್ಯರಿಬ್ಬರೂ ಗದಾಯುದ್ಧಕ್ಕೆ ಪ್ರಾರಂಭಿಸಿರು. ಭೀಮನು ಸ್ವಲ್ಪ ಹೊತ್ತು ಶಲ್ಯನೊಡನೆ ರಣಕೇಳಿತೋರಿಸಿದನಂತರ ಶಲ್ಯನನ್ನು ಬಲವಾದ ಎಟಿನಿಂದ ಕೆಳಗೆ ಬೀಳಿಸಿದನು.

ಆಗ ಭೀಮನ ಕೈಲಿ ಶಲ್ಯನು ಸತ್ತು ಹೋಗುತ್ತಾನೆಂಬ ಭಯದಿಂದ ಕೃಪಾಚಾರ್ಯನು ಓಡಿಬಂದು ಶಲ್ಯನನ್ನು ತನ್ನ ರಥದೊಳಗೆ ಹಾಕಿಕೊಂಡು ಹೊರಟುಹೊದನು. ಭೀಮನು ಕುರುಸೇವೆಯಲ್ಲಿ ನುಗ್ಗಿ ಗದಾಪ್ರಹಾರದಿಂದ ಸೈನಿಕರನ್ನು ಹೊಡೆದ್ಹೊಡೆದು ಬೀಳಿಸುತ್ತಿರಲು ಅನೇಕ ಸೈನಿಕರು ತಲೆತಪ್ಪಿಸಿಕೊಂಡು ಓಡಿಹೋದರು.

ದ್ರೋಣರು ಬಹಳ ಪ್ರಯತ್ನಪಟ್ಟರು ಭೀಮಾರ್ಜುನರ ರಕ್ಷಣಾಕೋಟೆಯೊಳಗೆ ಭದ್ರವಾಗಿದ್ದ ಧರ್ಮರಾಜನನ್ನು ಸೆರೆಹಿಡಿಯಲು ಸಾಧ್ಯವಾಗಲಿಲ್ಲ. ಸೂರ್ಯ ಅಸ್ತಂಗತನಾದನು ಯುದ್ಧವನ್ನು ನಿಲ್ಲಿಸಿ ಶಿಬಿರಕ್ಕೆ ಹೋದರೆ ದುರ್ಯೋಧನನಿಗೆ ಮುಖ ಹೇಗೆ ತೋರಿಸಲಿ? ಎಂದು ದ್ರೋಣರು ಚಿಂತೆಗೊಳಗಾದರು.

ಪಾಂಡವರು ಜಯಬೇರಿಯೊಂದಿಗೆ ಸಂತೋಷದಿಂದ ಶಿಬಿರವನ್ನು ಸೇರಿದರು.

ದುರ್ಯೋಧನನು ದ್ರೋಣರ ಮೇಲೆ ಸಂದೇಹಪಟ್ಟು ಕಿಡಿಕಿಡಿಯಾಗಿ ಬಂದು ''ನೀವು ನುಡಿದಂತೆ ನಡೆಯತಕ್ಕವರಲ್ಲವೆಂದು ಈಗ ನನಗೆ ಚೆನ್ನಾಗಿ ತಿಳಿಯಿತು. ಬ್ರಾಹ್ಮಣರು ಸ್ವಾರ್ಥಿಗಳು. ನಮ್ಮ ಪಕ್ಷದಲ್ಲಿದ್ದುಕೊಂಡೇ ಪಾಂಡವರಿಗೆ ಒಳಗೊಳಗೇ ಸಹಾಯ ಮಾಡುತ್ತಿದ್ದೀರಿ. ನಮ್ಮ ಕಾರ್ಯವನ್ನು ಕೆಡುಸುತ್ತಿದ್ದಿರಿ'' ಎಂದು ಬಹಳ ದೂಶಿಸುತ್ತಾ ಮಾತಿನ ಖಡ್ಗದಿಂದ ಇರಿಯುತ್ತಿದ್ದನು.

ದ್ರೋಣರು ದುರ್ಯೋಧನನ ಕಟು ವಾಕ್ಯಗಳನ್ನು ಕೇಳಿಸಿಕೊಳ್ಳಲಿಲ್ಲ. ಏಕೆಂದರೆ ಶ್ರೀ ಕೃಷ್ಣ ಕಲಿಪುರುಷನ ಪಾಪವೃದ್ಧಿಯಾಗಲೆಂದು ಗುರುನಿಂದೆ ಹರಿನಿಂದೆಗಳನ್ನು ಮುಖ್ಯಪ್ರಾಣನ ಮೂಲಕ ಅವನಿಂದ ಆಡಿಸುತ್ತಿದ್ದಾನೆ ಎಂದುಕೊಂಡು

'ದುರ್ಯೋಧನಾ! ಬ್ರಾಹ್ಮಣರು ಸ್ವಾರ್ಥಪರರೆಂದು ದೂಶಿಸಬೇಡ ಆವರ ಸಕಲ ಕರ್ಮಗಳೂ ಸರ್ವ ಜನರ ಶುಭಕ್ಕಾಗಿಯೇ ನಡೆಯುತ್ತದೆ. ಆದ್ದರಿಂದಲೇ ನಾನು ದೇವಪಕ್ಷವನ್ನು ವಹಿಸಿ ನನ್ನ ಕ್ಷೇಮವನ್ನು ಮಾತ್ರ ಅಪೇಕ್ಷಿಸಿದೆ ನಿನ್ನ ಪಕ್ಷ ವಹಿಸಿ ಪ್ರಾಣದ ಮೇಲೆ ಅಪೇಕ್ಷೆ ಇಲ್ಲದೆ ನಿಸ್ವಾರ್ಥ ನಿಷ್ಠೆಯಿಂದ ಹೋರಾಡುತ್ತಿದ್ದೇನೆ. ಚಕ್ರಪಾಣಿಯ ರಕ್ಷೆಯಿಂದ ಸುರಕ್ಷಿತರಾಗಿರುವ ಪಾಂಡವರನ್ನು ಪರಾಕ್ರಮದಿಂದ ಗೆಲ್ಲುತ್ತೇನೆಂಬುದು ಮೂರ್ಖತನದ ಮಾತು. ಇಂದಿನ ನನ್ನ ಯುದ್ಧ ನನ್ನ ಶಕ್ತಿಗೆ ಮೀರಿ ನಡೆದಿದ್ದರೂ ಎಷ್ಟು ಚಮತ್ಕಾರದಿಂದ ಸಾಹಸ ಕಾರ್ಯ ನಡೆಸಿದ್ದರು ಧರ್ಮರಾಜನನ್ನು ಸ್ಪರ್ಶಿಸಲೂ ಸಾಧ್ಯವಾಗಲಿಲ್ಲವೆಂದ ಮೇಲೆ ಶ್ರೀ ಕೃಷ್ಣನ ಅಮೋಘ ಶಕ್ತಿಯೇ ಆವರನ್ನು ಹೀಗೆ ಗೆಲುವಿನ ಗದ್ದುಗೆಗೇರಿಸಿ ನಮ್ಮನ್ನು ಕೆಡವುತ್ತಿದೆ ಎಂಬುದನ್ನು ಬೇರೆ ಹೇಳಬೇಕಾಗಿಯೇ ಇಲ್ಲ ಪಾಂಡವರ ಸಾಹಸ ನಮ್ಮನ್ನು ಸೋಲಿಸುತ್ತಿಲ್ಲ ಕೃಷ್ಣನ ಮಹಿಮಾ ಸಾಹಸ ನಮ್ಮನ್ನು ಹೀಗೆ ತಲೆ ಎತ್ತದಂತೆ ತುಳಿದು ಹಾಕುತ್ತಲಿದೆ'' ಎಂದು ಹೇಳಿದರು.

''ದುರ್ಯೋಧನಾ! ನಾನು ನಿನ್ನಿಂದ ಹೊರಬಂದ ವಾಕ್ಯವನ್ನು ಪಾಲಿಸಲೇಬೇಕಾಗಿರುವುದರಿಂದ ಅದನ್ನು ಜಯಿಸುವ ಪ್ರಯತ್ನ ನನ್ನದು. ಅರ್ಜುನ ನಿದ್ದಲ್ಲಿ ಕೃಷ್ಣನಿರುತ್ತಾನೆ. ಕೃಷ್ಣನಿದ್ದಲ್ಲಿ ಅಪಜಯವಿಲ್ಲ ಆದ್ದರಿಂದ ನೀನು ಅರ್ಜುನನು ಸಂಶಪ್ತಕರೋಡನೆ ರಣರಂಗದ ಬಹುದೂರದಲ್ಲಿ ಹೋರಾಡುವಂತೆ ವ್ಯವಸ್ಥೆಮಾಡು. ಧರ್ಮರಾಜನನ್ನು ನಾನು ಸೆರೆ ಹಿಡಿಯುವ ಪ್ರಯತ್ನ ಮಾಡುವೆನು'' ಎಂದು ಹೇಳಿದನು.

ದ್ರೋಣರ ಮಾತಿನಂತೆ ದುರ್ಯೋಧನನು ಸುಶರ್ಮನನ್ನು ಕುರಿತು ನೀನು ಸಂಪ್ತಕರೊಡನೆ ಅರ್ಜುನನನ್ನು ಯುದ್ಧಕ್ಕೆ ಸೆಳೆದುಕೊಂಡು ಬಹಳ ದೂರದಲ್ಲಿ ಯುದ್ಧ ನಡೆಯುವಂತೆ ಚಮತ್ಕಾರ ಮಾಡಿ ಅರ್ಜುನನೊಡನೆ ಯುದ್ಧಮಾಡುತ್ತಾ ಅವನನ್ನು ತಡೆದಿದ್ದರೆ ಧರ್ಮರಾಜ ದ್ರೋಣರ ಕೈಗೆ ಸುಲಭವಾಗಿಸಿಗುತ್ತಾನೆ ಎಂದು ಹೇಳಿದನು.

ಮುಂದಿನ ದಿನದ ಯುದ್ಧ ಪ್ರಾರಂಭವಾಯಿತು. ಸಂಶಪ್ತಕರು ಅರ್ಜುನನನ್ನು ಎದುರಿಸಿ ಯುದ್ಧಕ್ಕೆ ಕರೆದಾಗ ಅರ್ಜುನನು ಇಲ್ಲವೆನ್ನಲಾಗದೆ ಯುದ್ಧ ಅವರೊಡನೆ ನಡೆಸಲೇಬೇಕಾಯುತು. ಸಂಶಪ್ತಕರ ಯುದ್ಧ ಸಿದ್ಧತೆಗಳು ಆಗ್ನೇಯ ದಿಕ್ಕಿನಲ್ಲಿ ನಡೆದಿತ್ತಾದ ಕಾರಣ ಅಲ್ಲೇ ಯುದ್ಧ ಪ್ರಾರಂಭವಾಯಿತು.

ಇತ್ತ ದ್ರೋಣರು ನಿರಾತಂಕದಿಂದ ಧರ್ಮರಾಜನನ್ನು ಕಟ್ಟಬಹುದೆಂಬ ಉತ್ಸಾಹದಿಂದ

ಅಸಂಖ್ಯಾತ ಸೈನಿಕರನ್ನು ಕೊಂದು ಪ್ರತಿಪಕ್ಷವನ್ನು ತಲ್ಲಣಗೊಳಿಸುವುದನ್ನು ಕಂಡ ಭೀಮನು ಗದೆಯನ್ನು ತಿರಿಗಿಸುತ್ತಾ ಒಂದೇ ಏಟಿಗೆ ದ್ರೋಣರ ಬಳಿ ಹಾರುವವನಂತೆ ವೀರಗರ್ಜನೆಯಿಂದ ಗದಾಚಾಲನ ಮಾಡುತ್ತಿರಲು ಕುರು ಸೈನಿಕರು ಭೀಮನ ಅಬ್ಬರಕ್ಕೆ ಅಂಜಿಕೊಂಡು ಓಡತೊಡಗಿದರು. ಆ ಕುರುವೀರರನೇಕರು ಪರ್ವತಾಕಾರದ ಗಜಸೇನೆಯನ್ನು ಭೀಮನ ಮೇಲೆ ನುಗ್ಗಿಸಿದರು. ಭೀಮನು ಬರುತ್ತಿರುವ ಆನೆಯ ಹಿಂಡುಗಳನ್ನು ಗದೆಯಿಂದ ಬಡಿಯುತ್ತ ಓಡಿಸುತ್ತಿದ್ದನು. ಭೀಮನ ರಣದಬ್ಬರಕ್ಕೆ ಹೆದರಿದ ಸೈನಿಕರು ಹೆದರಿ ಓಡುತ್ತಿರುವುದನ್ನು ಕಂಡ ದುರ್ಯೋಧನನು ಭಗದತ್ತನನ್ನು ಕುರಿತು ನಿನ್ನ ಪರಾಕ್ರಮದಿಂದ ಭೀಮನನ್ನು ಸೋಲಿಸಿ ನಮಗೆ ಒದಗಿರುವ ಶತ್ರುಭಯವನ್ನು ನಿವಾರಣೆಮಾಡು'' ಎಂದು ಕೇಳಿಕೊಂಡನು.

ಭಗದತ್ತನು ಭಯಭೀತರಾದ ಸೈನಿಕರೆಲ್ಲರಿಗೂ ಅಭಯವನ್ನು ಕೊಟ್ಟು ತನಗೆ ಯಾರಿಂದಲು ಮರಣವಿಲ್ಲವೆಂಬ ವರಬಲದಿಂದ ಮತ್ತನಾಗಿ ಸುಪ್ರತೀಕವೆಂಬ ಆನೆಯನ್ನೇರಿ ಭೀಮನ ಬಳಿಗೆ ಅಟ್ಟಹಾಸದಿಂದ ಬರುತ್ತಿದ್ದರೆ ಭೀಮನ ರಥಾಶ್ವಗಳು ಸುಪ್ರತೀಕವೆಂಬ ಆನೆಗೆ ಅಂಜಿ ದೂರಕ್ಕೆ ಓಡಿಹೋದವು.

ಆ ಸಮಯದಲ್ಲಿ ದ್ರೌಪದಿಯ ಪಂಚಪುತ್ರರೊಡನೆ ಅಭಿಮನ್ಯು ಮೊದಲಾದ ವೀರರೆಲ್ಲರೂ ಬಂದು ಭಗದತ್ತನನ್ನು ಎದುರಿಸಿದರು.

ಆಗ ಭಗದತ್ತನ ಆನೆ ಎದುರಾಳಿಗಳ ರಥಾಶ್ವಗಳೆಲ್ಲವನ್ನೂ ಸೊಂಡಿಲಿನಿಂದ ಎತ್ತಿ ಆಕಾಶ ದತ್ತ ಎಸೆದುಬಿಟ್ಟತು. ರಥದೊಳಗಿದ್ದ ವೀರರು ರಥ ಮುರಿದು ಬೀಳುವುದರೊಳಗಾಗಿ ಛಂಗನೆ ಹಾರಿದರು.

ಭೀಮನು ಭಗದತ್ತನ ಮೇಲೆ ಗದಾಪ್ರಹಾರ ಮಾಡುತ್ತಿದ್ದಾಗ ಅದನ್ನು ಸಹಿಸಲಾರದ ಭಗದತ್ತನು ವರಾಹಾಸ್ತ್ರವನ್ನು ಪ್ರಯೋಗಿಸಿ ತನ್ನ ಪ್ರಾಣರಕ್ಷಣೆಮಾಡಿಕೊಳ್ಳಬೇಕೆಂದು ಅಸ್ತ್ರವನ್ನು ಹೂಡುವುದರೊಳಗಾಗಿ ಕೃಷ್ಣನು ಅರ್ಜುನಾ! ಸಂಶಪ್ತಕರು ತಮ್ಮತಮ್ಮಲ್ಲೇ ಬಡಿದಾಡಿ ಸಾಯುವಂತೆ ಅವರಿಗೆ ಮೋಹಕಾಸ್ತ್ರ ಪ್ರಯೋಗಮಾಡಿ ಭೀಮನ ಬಳಿಗೆ ಹೋಗಬೇಕು. ಭಗದತ್ತ ವರಾಹಸ್ತ್ರವನ್ನು ಪ್ರಯೋಗಮಾಡುತ್ತಿದ್ದಾನೆ ಎಂದು ಹೇಳಿ ಒಂದುಕ್ಷಣ ಹೊತ್ತಿನಲ್ಲಿ ಭಗದತ್ತನ ಬಳಿಗೆ ಬಂದು ಅವನ ಎದುರಿಗೆ ರಥನಿಲ್ಲಿಸಿದಾಗ ಭಗದತ್ತನು ಅರ್ಜುನನ್ನು ನೋಡಿ ಸುಪ್ರತೀಕವನ್ನು ಆವನ ಮೇಲೆ ನುಗ್ಗಿಸಿದಾಗ ಮೇಲಿಂದ ಮೇಲೆ ಬಾಣಪ್ರಯೋಗ ಮಾಡಿ ಹೆಣೆದುಬಿಟ್ಟನು. ಕೃಷ್ಣ ಬಹಳ ವೇಗದಿಂದ ರಥ ಓಡಿಸುತ್ತಿದ್ದಾಗ ಅರ್ಜುನನೂ ಅಷ್ಟೆ ವೇಗದಿಂದಲೇ ಬಾಣ ಪ್ರಯೋಗ ಮಾಡುತ್ತಿದ್ದನು. ಭಗದತ್ತನ ಶಸ್ತ್ರಾಸ್ತ್ರಗಳೆಲ್ಲವೂ ಬರಿದಾದವು. ಇನ್ನು ವರಾಹಾಸ್ತ್ರ ಒಂದೇ. ಅದನ್ನೇ ಅಭಿಮಂತ್ರಿಸಿ ಪ್ರಯೋಗಮಾಡಿದಾಗ ಆ ಅಸ್ತ್ರವು ತನ್ನ ಮೂಲಸ್ಥಾನವಾದ ನಾರಾಯಣನನ್ನೇ ಸೇರಲು ಅವನ ಬಳಿಗೆ ಬಂದು

ಶ್ರೀಕೃಷ್ಣನ ಸಿರಿಕೊರಳಲ್ಲಿಸೇರಿತು. ಸ್ವಾಮಿಯ ಕೊರಳಲ್ಲಿ ವೈಜಯಂತೀಮಾಲೆಯಂತೆ ಪ್ರಕಾಶಿಸುತ್ತಿದ್ದ ಅಸ್ತ್ರವನ್ನು ಅರ್ಜುನನು ಆಶ್ಚರ್ಯದಿಂದ ನೋಡುತ್ತಿದ್ದರೆ ಶ್ರೀಕೃಷ್ಣನು ಅರ್ಜುನಾ! ನಿನಗೆ ನನ್ನ ವಿಶ್ವರೂಪದರ್ಶನ ತೋರಿಸಿದ್ದರೂ ಇನ್ನೂ ನಿನಗೆ ಸಂದೇಹ ನಿವಾರಣೆ ಆಗಲಿಲ್ಲವೇ? ಸಕಲಜಗತ್ತನ್ನೂ ಧರಿಸಿರುವ ನನಗೆ ಈ ಒಂದು ಅಂಕುಶ ಧರಿಸಿರುವುದೂ ಒಂದು ಆಶ್ಚರ್ಯ ಸಂಗತಿಯೇ?

ಈ ವರಾಹಾಸ್ತ್ರದ ವಿಚಾರ ಏನೆಂದರೆ ಪ್ರಳಯಕಾಲದಲ್ಲಿ ನಾನು ವಾಸುದೇವ ಅನಿರುದ್ಧ ಸಂಕರುಷಣ-ಪ್ರದ್ಯುಮ್ನ ಎಂಬ ನಾಲ್ಕು ಅವತಾರಗಳಿಂದ ಮೋಕ್ಷ-ಲಯ-ರಕ್ಷಣಾ-ಸೃಷ್ಟಿ ಮೊದಲಾದವುಗಳನ್ನೂ ನಡೆಸುತ್ತೇನೆ. ಅನಂತರ ಹತ್ತು ಅವತಾರಗಳನ್ನು ಧರಿಸಿದಾಗ ಭೂದೇವಿಯನ್ನು ರಕ್ಷಿಸಲ್ಲಿಕ್ಕಾಗಿ ವರಾಹಾವತಾರವನ್ನು ತಾಳಿ ಆಕೆಯನ್ನು ಎತ್ತಿ ತಂದೆನು. ಭೂದೇವಿಯ ಪ್ರಾರ್ಥನೆಯಂತೆ ಅವಳಲ್ಲಿ ಲಕ್ಷ್ಮಿ ಆವೇಶವಿಟ್ಟು ಅಪ್ಪಿ ಆನಂದಪಡಿಸಿದಾಗ ನರಕಾಸುರನು ಹುಟ್ಟಿದನು. ಭೂದೇವಿ ಆಗ ''ದೇವಾ! ನನ್ನಮಗನಿಗೆ ಮರಣ ಉಂಟಾಗದಂತೆ ವರವನ್ನು ನೀಡು '' ಎಂದು ಹೇಳಿಕೊಂಡಾಗ ನರಕಾಸುರನಿಗೆ ವರಾಹಾಸ್ತ್ರವನ್ನು ನೀಡಿದೆನು.

ನರಕಾಸುರನು ವರಾಹಸ್ತ್ರದ ಪ್ರತಿಭೆಯಿಂದ ಸಕಲದೇವತೆಗಳನ್ನೂ ಬಹುವಾಗಿ ಪೀಡಿಸಿ ಸ್ವರ್ಗವನ್ನೂ ಲೂಟಿಮಾಡುತ್ತಿದ್ದನು. ನನ್ನ ಭಕ್ತರನ್ನು ಹಿಂಸಿಸಿದಪಾಪಿಗಳನ್ನು ನಾಶಪಡಿಸಿ ಭಕ್ತರ ರಕ್ಷಣೆಯೆ ನನ್ನ ದೀಕ್ಷೆ ಆದ್ದರಿಂದ ಅವನ ಪಾಪವೇ ಅವನನ್ನು ಕೊಂದಿತು. ನಂತರ ಆ ಅಸ್ತ್ರ ಭಗದತ್ತನಿಗೆ ಸೇರಿತುವರಾಹಾಸ್ತ್ರದ ಮಹಿಮೆಯಿಂದ ಮರಣಭಯವಿಲ್ಲದೆ ಸಕಲ ಸಜ್ಜನರನ್ನೂ ಪೀಡಿಸುತ್ತಿದ್ದನು. ಈಗ ಆ ದೇವತಾಸ್ತ್ರವು ನನ್ನ ಬಳಿ ಬಂದು ಸೇರಿರುವುದರಿಂದ ಅವನು ನಿರ್ಬಲನಾಗಿದ್ದಾನೆ.

ಅವನಿಗೆ ನಾನು ಕೊಟ್ಟ ವರಾಹಾಸ್ತ್ರವು ಯಾರ ಮೇಲೆ ಪ್ರಯೋಗಿಸಲ್ಪಟ್ಟರೂ ಅವರು ಉಳಿಯುವುದಿಲ್ಲ. ಆದ್ದರಿಂದಲೇ ಭೀಮನ ಮೇಲೆ ಪ್ರಯೋಗಿಸಲ್ಪಡುವ ವರಾಹಾಸ್ತ್ರವು ಭೀಮನನ್ನು ರಕ್ಷಿಸಬೇಕೆಂದು ನನ್ನನ್ನೇ ಶರಣುಬಂದು ಸೇರಿತು ಎಂದು ಹೇಳಿ ಅರ್ಜುನಾ! ಈಗ ಅವನನ್ನು ಕೊಲ್ಲಲು ಏನು ಕಷ್ಟವಿಲ್ಲ ಹೊಡೆದು ಕೊಲ್ಲು ಎಂದು ಆಜ್ಞೆಮಾಡಲು ಅರ್ಜುನನು ಸ್ವಾಮಿಯ ಅನುಗ್ರಹ ವಾಕ್ಯವನ್ನು ಶಿರಸಾಹವಹಿಸಿ ತನ್ನ ತೀವ್ರಬಾಣಗಳಿಂದ ಭಗದತ್ತನನ್ನು ಸುಪ್ರತೀಕವೆಂಬ ಆನೆಯನ್ನೂ ಹೊಡೆಯಲು ಭಗದತ್ತನು ಆನೆಯ ಸಹಿತವಾಗಿ ಬಿದ್ದು ಪ್ರಾಣನೀಗಿದನು. ದುರ್ಯೋಧನ ಭಗದತ್ತನ ಮರಣದಿಂದ ಬಹಳ ಖೇದಗೊಂಡು ''ಧರ್ಮರಾಜ ಸೆರೆಸಿಕ್ಕಿದ್ದರೆ ಯಾವವೀರರ ಮರಣಕ್ಕೂ ನಾನು ಮರುಗುತ್ತಿರಲಿಲ್ಲ ಎಂದು ಚಿಂತಿಸಿದ ದುರ್ಯೋಧನನು ರಾತ್ರಿ ದ್ರೋಣರ ಶಿಬಿರಕ್ಕೆ ಬಂದು ದ್ರೋಣರನ್ನು ಮಾತಿನ ಖಡ್ಗದಿಂದ ಕೆರಳಿಸುತ್ತಿರಲು ದ್ರೋಣರು ' ' ದುರ್ಯೋಧನಾ! ಚಿಂತಿಸಬೇಡ ನಾಳೆಯಿಂದ ನನ್ನ ಸಮರಸಾಹಸ ನೋಡಿ ಸಂತೋಷಪಡು. ಧರ್ಮರಾಜನನ್ನು ನಾಳೆ ಕೈ ಸೆರೆ ಹಿಡಿದು

ನಿನಗೆ ಒಪ್ಪಿಸುತ್ತೇನೆ. ಇಲ್ಲದಿದ್ದರೆ ಪಾಂಡವರ ಸಮಾನ ವೀರರಲ್ಲಿ ಯಾರನ್ನಾದರೂ ಕೊಲ್ಲುತ್ತೇನೆ'' ಎಂದು ಪ್ರತಿಜ್ಞೆಮಾಡಿ ದುರ್ಯೋಧನನನ್ನು ಸಮಾಧಾನಪಡಿಸಿ ಕಳುಹಿಸದರು.

ದ್ರೋಣರು ಮರುದಿನದ ಯುದ್ಧವನ್ನು ಬಹಳ ಚಾತುರ್ಯದಿಂದ ನಡೆಸಬೇಕೆಂಬ ಉತ್ಸಾಹದಿಂದ ಹೊರಟು ವಿಚಿತ್ರ ರೀತಿಯಲ್ಲಿ ಪದ್ಮವ್ಯೂಹವನ್ನು ರಚಿಸಿದರು. ಪದ್ಮವ್ಯೂಹವನ್ನು ಅಭಿಮನ್ಯು ಪ್ರವೇಶಮಾಡಬಲ್ಲವನಾದ್ದರಿಂದ ಅವನನ್ನು ಕುರಿತು ಭೀಮನು ನೀನು ನಿನ್ನ ತಂದೆಯಿಂದ ಪದ್ಮವ್ಯೂಹವನ್ನು ಖಂಡಿಸತಕ್ಕ ಮಂತ್ರೋಪದೇಶ ಪಡೆದಿರುವುದರಿಂದ ನೀನು ನಿನ್ನ ವಿದ್ಯಾಬಲದಿಂದ ವ್ಯೂಹವನ್ನು ಖಂಡಿಸುತ್ತಹೋಗು. ನಿನ್ನ ಹಿಂಬಾಲಿಸಿ ನಾವು ಬರುತ್ತೇವೆ'' ಎಂದು ಭೀಮನು ಹೇಳಿದನು. ಅದರಂತೆ ವ್ಯೂಹವನ್ನೂ ಹೊಕ್ಕು ಹೋಗುತ್ತಿರುವಾಗ ಮದ್ಯದಲ್ಲಿ ಜಯದ್ರಥನು ಅಭಿಮನ್ಯುವನ್ನು ಮಾತ್ರ ಒಳ ಕಳುಹಿಸಿ ಎಲ್ಲರನ್ನೂ ತಡೆದು ಯುದ್ಧಮಾಡತೊಡಗಿದನು. ಭೀಮನು ಜಯದ್ರಥನನ್ನು ಕೊಂದು ಒಳನುಗ್ಗಬಹುದಾಗಿತ್ತು. ಭೀಮನಿಗೆ ಹರಿಯ ಮತ ತಿಳಿದಿತ್ತು. ರುದ್ರದೇವರ ವಚನವನ್ನು ಸತ್ಯಮಾಡಲಿಕ್ಕಾಗಿ ಜಯದ್ರಥನನ್ನು ಕೊಲ್ಲಲಿಲ್ಲ. ಅಭಿಮನ್ಯು ಒಬ್ಬನೇ ವ್ಯೂಹದೊಳಗೆ ನುಗ್ಗಿ ಒಬ್ಬನೇ ಅನೇಕ ಕುರುವೀರರನ್ನು ಅಮಿತ ಸಾಹಸದ್ಥಿಂದ ಕೊಲ್ಲುತ್ತಿದ್ದನು. ಒಬ್ಬ ಬಾಲಕನ ಮೇಲೆ ಅಶ್ವತ್ಥಾಮ ಕರ್ಣ-ದುರ್ಯೋಧನ- ದ್ರೋಣ-ಕೃಪಾದಿಗಳೆಲ್ಲರೂ ಬಂದು ಸುತ್ತಮುತ್ತಲೂ ಬಾಣದ ಮಳೆಕರೆಯುತ್ತಲಿದ್ದರೂ ಅಭಿಮನ್ಯು ಅಂಜದೆ ಅಳುಕದೆ ಅಮಿತ ಪರಾಕ್ರಮದಿಂದ ಹೋರಾಡುತ್ತ ದುರ್ಯೋಧನನ ಮಗನಾದ ಲಕ್ಷಣನ ಶಿರಾಚ್ಛೇದನ ಮಾಡಿದನು. ದುರ್ಯೋಧನನನ್ನು ತೀಕ್ಷ್ಣಬಾಣಗಳಿಂದ ಹೊಡೆಯುತಿದ್ದಾಗ ಹತ್ತುಮಂದಿ ಮಹಾರಥಿಕರು ನುಗ್ಗಿಬಂದು ಬಾಲಕನೊಬ್ಬನನ್ನು ಮುತ್ತಿದ್ದರು. ಅಕ್ಷೋಹಿಣೀಸೇನಾಸಮೇತರಾದ ಮಹಾರಥಿಕರು ಅಭಿಮನ್ಯುವಿನೊಡನೆ ಯುದ್ಧಮಾಡುತ್ತಿದ್ದಾಗ ದ್ರೋಣಾದಿಗಳು ನಾವಿಷ್ಟುಮಂದಿ ಸೇರಿ ಕೃಷ್ಣನ ತಂಗಿ ಮಗನನ್ನು ಕೊಂದು ಹಾಕಿದ್ದೇವೆಂದು ಪಾಂಡವರು ತಿಳಿದರೆ ನಮಗೆ ಅಪಮಾನ ಅಷ್ಟೇ ಅಲ್ಲದೆ ಕೃಷ್ಣನ ಕೈಯಿಂದ ನಾವು ಸಾಯುತ್ತೇವೆ ಎಂದು ಯೋಚಿಸಿ ದ್ರೋಣರು ಕರ್ಣನನ್ನು ಕುರಿತು ''ಕರ್ಣ'' ನೀನು ಅರ್ಜುನನ ಪರಮವೈರಿ ನೀವಿಬ್ಬರೂ ಸಮರದ ಸರಿ ಜೋಡಿಗಳು ಆಗಿದ್ದೀರಿ ಅದೂ ಅಲ್ಲದೆ ಅಭಿಮನ್ಯು ಅರ್ಜುನನಿಗೆ ಸಮಾನವೀರನೂ ಅವನ ಮಗನೂ ಆದ್ದರಿಂದ ಅರ್ಜುನನನ್ನೂ ಕೊಂದಷ್ಟೇ ಸಾಹಸ ನಿನ್ನದೆಂದು ಕೀರ್ತಿಬರುತ್ತದೆ. ಆದ್ದರಿಂದನೀನು ಅಭಿಮನ್ಯುವನ್ನು ಹೇಗಾದರೂ ಸರಿ ಸೋಲಿಸು'' ಎಂದು ಪ್ರಚೋದನೆಮಾಡಿದರು. ದ್ರೋಣರಿಗೆ ಶ್ರೀಕೃಷ್ಣನ ಪ್ರೇರಣೆ ಆದ್ದರಿಂದಲೇ ಅವರು ಕಲಿ ಆವೇಶ ಉಳ್ಳವರಾಗಿ ಇಂಥ ಕಾರ್ಯಕ್ಕೆ ಮನಗೊಟ್ಟರು. ಕರ್ಣನು ಹಿಂದಿನಿಂದ ಅಭಿಮನ್ಯುವಿನ ಬಿಲ್ಲನ್ನು ಕತ್ತರಿಸಿದನು. ಕೃಪಾಚಾರ್ಯರು ಸಾರಥಿಯನ್ನು ಕೊಂದರು. ದ್ರೋಣರು ರಥದ ಕುದುರೆಗಳನ್ನು ಕೊಂದರು. ಹೀಗೆ ಪ್ರಖ್ಯಾತವೀರರೆನಿಸಿದವರೆಲ್ಲರೂ ಸಂಚು ಮಾಡಿ ಅಭಿಮನ್ಯುವನ್ನು ತಮ್ಮ ಪರಾಕ್ರಮಕೋಟೆಯೊಳಗೆ ಬಂದಿಸಿದರು. ಆಗ ದುಶ್ಯಾಸನನ

ಮಗನೊಡನೆ ಗದಾಯುದ್ಧ ಪ್ರಾರಂಭವಾಗಲು ಅಭಿಮನ್ಯುವಿನಿಂದ ಅವನೂ ಹತನಾಗಲು ಕರ್ಣನ ಅಸ್ತ್ರ ಅಭಿಮನ್ಯುವಿಗೆ ಅರಿವಾಗದಂತೆ ಅವನ ತಲೆ ಉರುಳಿಸಿತು.

ಆಗ ಅತ್ಯದಿಕ ಪರಾಕ್ರಮವೀರ ಅಭಿಮನ್ಯು ಸತ್ತನೆಂಬ ಸಂತೋಷದಿಂದ ಕೌರವಪಕ್ಷ ಜಯಭೇರಿ ಮೊಳಗಿಸಿದರು.

ಧರ್ಮರಾಜನು ಅಭಿಮನ್ಯುವಿನ ಮರಣವಾರ್ತೆಯನ್ನು ತಿಳಿದು ಅತೀವ ದು:ಖದಿಂದ ಯುದ್ಧವನ್ನು ಮುಂದುವರಿಸದೆ ನಿಲ್ಲಿಸಿದನು. ಶಿಬಿರದಲ್ಲಿ ಅಭಿಮನ್ಯುವನ್ನು ನೆನೆನೆನೆದು ಬಹಳ ದು:ಖಪಡುತ್ತಿರುವಾಗ ಸತ್ಯವತೀ ಕುಮಾರರಾದ ವೇದವ್ಯಾಸರು ಧರ್ಮರಾಜನಿಗೆ ಕಾಣಿಸಿಕೊಂಡು ಅನೇಕ ಹಿತನುಡಿಗಳಿಂದ ಸಮಾಧಾನಪಡಿಸಿದರು. ಅತ್ತ ಅರ್ಜುನನಿಗೆ ಮಗನ ಮರಣವಾರ್ತೆ ತಿಳಿದಾಗ ಅತೀವ ಶೋಕದಿಂದ ಪರಿತಪಸುತ್ತಿದ್ದಾಗ ಶ್ರೀಕೃಷ್ಣನು ಅನೇಕ ಸಾರಭೂತವಾದ ವಾಕ್ಯಗಳಿಂದ ಅವನನ್ನು ಸಮಾಧಾನಗೊಳಿಸುತ್ತಿದ್ದನು. ಅರ್ಜುನನು ಜಯದ್ರಥನ ಕುತಂತ್ರದಿಂದ ಅಬಿಮನ್ಯು ಸತ್ತಿದ್ದಾನೆಂದು ತಿಳಿದು ''ನಾಳೆ ಅಸ್ತಮಾನ ಆಗುವುದರೊಳಗೆ ಜಯದ್ರಥನನ್ನು ಕೊಲ್ಲುತ್ತೇನೆ. ಕೊಲ್ಲಲಾಗದಿದ್ದರೆ ಅಗ್ನಿ ಪ್ರವೇಶ ಮಾಡುತ್ತೇನೆ'' ಎಂದು ಸರ್ವಸ್ವತಂತ್ರನಾದ ಶ್ರೀಹರಿಯ ಮುಂದೆ ಶಪಥ ಮಾಡಿದನು. ದೈತ್ಯಸಂಹಾರ ಕಾರ್ಯಕ್ಕಾಗಿಯೇ ಸ್ವಾಮಿ ಅವನಿಂದ ಶಪಥ ಮಾಡಿಸಿದನು. ಗುರುದ್ವಾರದಿಂದ ನಿನ್ನ ಶಪಥವನ್ನು ಈಡೇರಿಸಿ ಕೊಡುತ್ತೇನೆಂಬ ಜ್ಞಾನವನ್ನುಂಟುಮಾಡಲಿಕ್ಕಾಗಿ ರಾತ್ರಿ ನಿದ್ರಾವಶನಾದ ಸಮಯದಲ್ಲಿ ಅರ್ಜುನನನ್ನು ಕೈಲಾಸಕ್ಕೆ ಕರೆದುಕೊಂಡು ಹೋಗಿ ಅರ್ಜುನನ ಅಸ್ತ್ರಗಳಿಗೆ ಶಕ್ತಿ ಉಂಟಾಗುತ್ತದೆಂದು ಶಿವನಿಂದ ಅನುಗ್ರಹ ಉಂಟಾಗದಂತೆ ಅರ್ಜುನನಿಗೆ ತೋರಿಸಿದನು. ಕವಚ ಅಸ್ತ್ರಗಳೆಲ್ಲವೂ ರುದ್ರದೇವನ ಮಹದನುಗ್ರಹದಿಂದ ಮಹತ್ತರವಾದ ವೀರ್ಯವತ್ತಾಗಿ ಶತ್ರುನಿಗ್ರಹದ ಶಕ್ತಿ ಉಂಟಾಗದಂತೆ ಸ್ವಾಮಿ ತೋರಿಸಿದನು.

ಸುಭದ್ರಾದೇವಿ ನಿದ್ರಾವಶಳಾದಾಗ ಅವಳ ಕನಸಿನಲ್ಲಿ ಕಾಣಿಸಿಕೊಂಡು 'ತಂಗೀ! ಸುಭದ್ರಾ! ನಿನ್ನ ಪ್ರೀತಿಯ ಕುವರ ಅಭಿಮನ್ಯು ವೀರಯೋಧನಾಗಿ ಹೋರಾಡಿ ವೀರಸ್ವರ್ಗವನ್ನು ಸೇರಿದ್ದಾನೆ. ಇದರಿಂದ ನೀನು ದು:ಖಪಡದೆ ಸಂತೋಷಪಡಬೇಕು' ಎಂದು ಅವಳಿಗೆ ಜ್ಞಾನವನ್ನು ಕೊಟ್ಟು ಪುತ್ರಶೋಕವನ್ನು ಸಹಿಸಲು ಶಕ್ತಿಯನ್ನು ಕೊಟ್ಟು ಕರುಣಾಳುವಾದ ಶ್ರೀಕೃಷ್ಣನು ತನ್ನ ಭಕ್ತರನ್ನು ಹೆಜ್ಜೆಹೆಜ್ಜೆಗೂ ಕಾಪಾಡುತ್ತಾ ಕ್ರೀಡಾದಿ ವಿಶಿಷ್ಟನಾಗಿ ವಿಚಿತ್ರ ಲೀಲೆಗಳನ್ನು ತೋರಿಸುತ್ತ ಪಾಪಿಗಳಿಗೆ ಮಿಥ್ಯಾಜ್ಞಾನಕೊಡಲಿಕ್ಕಾಗಿ ಸುಹೃದಯರಿಗೆ ಸುಜ್ಞಾನ ಸಂಪತ್ತನ್ನು ಕೊಟ್ಟು ಉದ್ಧಾರಮಾಡಲಿಕ್ಕಾಗಿಯೂ ನಡೆದು ತೋರಿಸಿದ ಅವನ ಸತ್ಕಥನದ ಸ್ವಾರಸ್ಯ ಏನೆಂದು ಹೇಳಲಿ.

ಸುರ್ಯೋದಯವಾಯಿತು ಸ್ವಾಮಿ ದೂತನಪಾತ್ರಧಾರಿಯಾಗಿ ರಥವನ್ನು ಸಜ್ಜುಗೊಳಿಸಿ ಕುದುರೆಗಳ ಮೈಯುಜ್ಜಿ ಯುದ್ಧಕ್ಕೆ ಸಕಲ ಸಿದ್ಧತೆಗಳನ್ನೂ ಮಾಡಿ ಅರ್ಜುನನನ್ನು ಎಬ್ಬಿಸಲು

ಬಂದ ಗೋವಿಂದನು ಮುಂದೆ ನಡೆಸಿದ ಸುಂದರ ಕಾರ್ಯ ಕಲಾಪಗಳನ್ನೂ ಕೇಳಿ ಧನ್ಯನಾಗು'' ಎಂದು ಆನಂದದಿಂದ ಆಚಾರ್ಯರು ಮುಂದುವರಿಸಿದರು.

## ವೀರ ಪ್ರತಿಜ್ಞೆ ಮುರಿಯಬೇಕು

ಕುರುರಾಜನಿಗೆ ಅರ್ಜುನನ ಪ್ರತಿಜ್ಞೆ ತಿಳಿಯಿತು. ಜಯದ್ರಥನನ್ನು ಅರ್ಜುನನು ಅಸ್ತಮಾನದೊಳಗೆ ಕೊಲ್ಲುತ್ತಾನಂತೆ. ಅವನ ಸಂಕಲ್ಪ ಸುಳ್ಳಾಗಬೇಕಾದರೆ ಈ ದ್ರೋಣರು ಹುರಿದುಂಬಿಸಿ ಕೆರಳಿಸಿ ಯುದ್ಧಭೂಮಿಯಲ್ಲಿ ರಣಚಂಡಿಯಂತೆ ಉದ್ದಂಡ ಪರಾಕ್ರಮದಿಂದ ನಿಲ್ಲುವಂತಾಗಬೇಕೆಂದು ಯೋಚಿಸಿ ದ್ರೋಣರ ಬಳಿಗೆ ಬಂದು ಗುರುಗಳೇ ಇಂದಿನ ಸಮರ ಸಂತೋಷದಾಯಕವಾಗಿ ಸಮಾಪ್ತವಾಯಿತು. ನಾಳೆಯದಿನದ ದು:ಖವನ್ನು ನೀವು ನಿವಾರಣ ಮಾಡಿ ಜಯಭೇರಿಯೊಂದಿಗೆ ಶಿಬಿರಕ್ಕೆ ಬರುವಂತೆ ಮಾಡಬೇಕೆಂದು ಕೇಳಲು ಬಂದಿದ್ದೇನೆ.

ಅರ್ಜುನನು ಮಗನ ಮರಣದ ನಿಮಿತ್ತ ಸೇಡಿನ ಸರ್ಪದಂತಾಗಿ ನಾಳೆ ಅಸ್ತಮಾನದೊಳಗೆ ಜಯದ್ರಥನ ತಲೆ ಕತ್ತರಿಸುತ್ತೇನೆಂದು ಘೋರ ಪ್ರತಿಜ್ಞೆ ಮಾಡಿದ್ದಾನೆ. ಜಯದ್ರಥನನ್ನು ಕೊಲ್ಲಲಾಗದಿದ್ದರೆ ಅಗ್ನಿ ಪ್ರವೇಶ ಮಾಡುತ್ತೇನೆಂದೂ ಅವನ ಸಂಕಲ್ಪವಾಗಿದೆ. ಅದ್ದರಿಂದ ನೀವು ಜಯದ್ರಥನನ್ನು ಅರ್ಜುನನ ಎದುರಿಗೆ ಕಾಣಿಸದಂತೆ ಭದ್ರಪಡಿಸಿ ಅರ್ಜುನನೊಡನೆ ಅಸ್ತಮಾನದವರೆಗೂ ಹೋರಾಡಿದರೆ ಜಯದ್ರಥನೂ ಉಳಿಯುತ್ತಾನೆ. ಅರ್ಜುನನೂ ಸಾಯುತ್ತಾನೆ'' ಎಂದು ಹೇಳಿದನು.

ದ್ರೋಣರು ದುರ್ಯೋಧನನ ಮಾತುಕೇಳಿ ಮನದಲ್ಲೇ ಚಿಂತಿಸಿದರು. ಶ್ರೀಕೃಷ್ಣನಿಗೆ ಕಣ್ತಪ್ಪಿಸಿ ಜಯದ್ರಥನನ್ನು ಕಾಪಾಡುತ್ತೇನೆಂದರೆ ಮೂರ್ಖತನದ ಮಾತು. ಆದರೂ ನಾನು ರಣಕಳವನ್ನು ಪ್ರವೇಶಮಾಡಿ ಪಾಪಿಗಳ ಪಕ್ಷವಹಿಸಿದ ಮೇಲೆ ಖಳನಾಯಕನ ಮಾತಿನಂತೆ ನಡೆಯಲೇಬೇಕೆಂದು ಭಾವಿಸಿ ''ದುರ್ಯೋಧನಾ! ಜಯದ್ರಥನು ಸಾಯದಂತೆ ನನ್ನ ಕೈಲಾದಷ್ಟು ಪ್ರಯತ್ನ ಪಡುತ್ತೇನೆ. ಅವನ ರಕ್ಷಣೆಗಾಗಿ ನನ್ನ ಸಾಹಸವನ್ನು ಸಂಪೂರ್ಣವಾಗಿ ವೆಚ್ಚಮಾಡುತ್ತೇನೆ'' ಎಂದು ಧೈರ್ಯ ಹೇಳಿ ಕಳುಹಿಸಿದರು.

ದ್ರೋಣರು ತಮ್ಮ ನಾಲ್ಕನೆಯ ದಿನದ ಯುದ್ಧದಲ್ಲಿ ಅರ್ಜುನನಿಂದ ಜಯದ್ರಥನಿಗೆ ಉಂಟಾಗುವ ಸಾವನ್ನು ತಪ್ಪಿಸಲು ಸನ್ನಾಹನಡೆಸಿದರು. ಯಾರಿಂದಲೂ ಭೇದಿಸಲು ಸಾಧ್ಯವಲ್ಲದಂತಹ ಶಕಟ ವ್ಯೂಹವನ್ನು ರಚಿಸಿ ತಾವು ಮುಂದಾಳಾಗಿ ನಿಂತು ಅಶ್ವತ್ಥಾಮ ,ಕೃಪ-ಕರ್ಣ-ಶಲ್ಯಾ ಮೊದಲಾದ ವೀರರನ್ನು ಜಯದ್ರಥನ ಸುತ್ತಲೂ ಚತುರಂಗ ಸೇನಾ ಸಮೇತರಾಗಿ ಕಾವಲಿರುವಂತೆ ನಿಯಮಿಸಿದರು.

ಅರ್ಜುನ ಆ ದಿನದ ತನ್ನ ಪ್ರತಿಜ್ಞೆ ಈಡೇರಿಸಿಕೊಳ್ಳುವ ಸಲುವಾಗಿ ಸಂಶಪ್ತಕರೊಡನೆ ಯುದ್ಧಕ್ಕೆ ಹೋಗದೆ ಕೌರವ ದಳದೊಳಗೆ ನುಗ್ಗಿಬಂದನು. ಚಕ್ರಪಾಣಿಯ ರಕ್ಷಣೆಯಿಂದ ನಿರ್ಭಯನಾಗಿ ಸೇಡಿನಿಂದ ಸಿಡಿಮಿಡಿಗೊಂಡು ಸಿಡಿಲಿನಂತೆ ಆರ್ಭಟಿಸುತ್ತ ಬರುತ್ತಿರುವ ಅರ್ಜುನನನ್ನು ನೋಡಿದ ದುರ್ಯೋಧನನ ತಮ್ಮ ದುರ್ಮರ್ಶಣನೆಂಬುವನು ತಡೆದು ಇದಿರಿಸಿದನು. ಅರ್ಜುನನು ಅವನೊಡನೆ ಯುದ್ಧಮಾಡಲಿಲ್ಲ. ತನ್ನ ಪ್ರತಿಜ್ಞೆ ಮುಖ್ಯವೆಂದರಿತು ಗುರುಗಳ ಕರುಣೆಗೆ ಮಣಿದು ಶಕಟವ್ಯೂಹಕ್ಕೆ ಹೊರಟು ದ್ರೋಣರ ದರ್ಶನ ಪಡೆದು ಪರಾಕ್ರಮಪುಷ್ಪದ ಕಾಣಿಕೆ ಸಲ್ಲಿಸಿದನು. ದ್ರೋಣರು ಶ್ರೀ ಕೃಷ್ಣನಿಗೆ ಮನಸಾವಂದಿಸಿ ಒಳಗೆ ಹೋಗಲು ದಾರಿಬಿಟ್ಟರು. ಶ್ರೀಶನು ಸರ್ವಸ್ವತಂತ್ರನೆಂಬುದನ್ನು ತಮ್ಮ ಕಾರ್ಯದಿಂದ ತೋರಿಸಿದರು. ಮಧ್ಯದಲ್ಲಿ ಕೃತವರ್ಮನು ತಡೆದು ಹೋರಾಡಿದಾಗ ಅವನನ್ನು ಸೋಲಿಸಿ ಕೌರವದಳವನನು ಬಡಿದೋಡಿಸುತ್ತ ವಿಚಿತ್ರ ವೇಗದಿಂದ ನುಗ್ಗಿ ಕೌರವ ಸೇನಾಸಾಗರವನ್ನು ಶ್ರೀಕೃಷ್ಣಮಹಿಮಾಕಿರಣ ಬತ್ತಿಸುತ್ತ ಬರುತ್ತಿದ್ದರೆ ವರುಣನ ಮಗನು ಅಡ್ಡಗಟ್ಟಿ ಯುದ್ಧಕ್ಕೆ ಬಂದನು. ತಂದೆಯಿಂದ ಶೃತಾಯುದನು ಒಂದು ಗದೆ ಪಡೆದಿದ್ದನು. ಅದು ಶತೃಗಳು ತನಗೆ ಪ್ರಯೋಗ ಮಾಡಿದರೆ ತಲೆ ಸಹಸ್ರ ಹೋಳಾಗುತ್ತೆದಂದು ತಂದೆ ಹೇಳಿದ್ದನು. ಆ ಗದೆಯನ್ನು ತೆಗೆದುಕೊಂಡು ಯುದ್ಧ ಮಾಡುವಾಗ ಶ್ರೀಕೃಷ್ಣನು ಅವನ ರಥವನ್ನು ಮುರಿದುಹಾಕಿದಾಗ ಶೃತಾಯುಧನು ಆ ಗದೆಯನ್ನು ಶ್ರೀಕೃಷ್ಣನ ಮೇಲೆ ಎಸೆದಾಗ ಅದೇ ಹಿಂದಿರುಗಿ ಬಂದು ಶೃತಾಯುಧನ ತಲೆಯನ್ನು ಸಹಸ್ರ ಚೂರು ಮಾಡಿ ಎಸೆದನು. ಹೀಗೆ ಶ್ರೀಕೃಷ್ಣನ ವಿಚಿತ್ರ ಮಹಿಮಾಲೀಲೆಯಿಂದ ಅನೇಕ ಶತೃಗಳು ನಾಶಹೊಂದಿದರು. ಅರ್ಜುನನ ಶರವೇಗಕ್ಕೆ ಅಂಜಿದ ಶತ್ರುಗಳು ಓಡತೊಡಗಿದರು. ಆಗ ದುರ್ಯೋಧನನು ಶಕಟವ್ಯೂಹದೊಳಗೆ ನುಗ್ಗಿ ಬಂದ ಶ್ರೀಕೃಷ್ಣಾರ್ಜುನರ ಲಗ್ಗೆಯನ್ನು ನೋಡಿ ಕಡುಕೋಪದಿಂದ ನುಗ್ಗಿ ಬರುತ್ತಿದ್ದಾಗ ಅವನ ದೇಹವನ್ನು ಅರ್ಜುನನು ಬಾಣದೇಟಿನಿಂದ ಛಿದ್ರಪಡಿಸಿದನು. ಸುರಿವ ರಕ್ತದಿಂದ ದ್ರೋಣನ ಬಳಿಗೆ ಬಂದು ''ಎಲಾ! ದ್ರೋಣಾ! ನೀನು ಪಾಂಡವರ ಪಕ್ಷಪಾತಿ. ಒಳಗೊಳಗೇ ಅವರಿಗೆ ಬೆಂಬಲ ನೀಡಿ ನಮ್ಮನ್ನು ವಂಚಿಸುತ್ತಿರುವಿ'' ಎಂದು ದೂಷಿಸುತ್ತಿದ್ದಾಗ ದ್ರೋಣರು ಅವನನ್ನು ಸಮಾಧಾನಪಡಿಸಿ ತಮ್ಮ ಮಂತ್ರಸಾಮರ್ಥ್ಯದಿಂದ ಅವನ ವೇದನೆಯನ್ನು ಪರಿಹಾರ ಮಾಡಿ ಒಂದು ದಿವ್ಯ ಶಕ್ತಿಯುತವಾದ ಕವಚವನ್ನು ತೊಡಿಸಿ ''ದುರ್ಯೋಧನಾ! ನಿನಗೀಗ ಶತೃ ಭಯವಿಲ್ಲ. ಅರ್ಜುನನೊಡನೆ ಪರಾಕ್ರಮದಿಂದ ಹೋರಾಡಿ ಜಯಶೀಲನಾಗು'' ಎಂದು ಹೇಳಿ ಕಳುಹಿಸಿದರು.

ದುರ್ಯೋಧನನು ದ್ರೋಣರ ಮಂತ್ರಸಾಮರ್ಥ್ಯದಿಂದ ಧೈರ್ಯಸಾಹಸಗಳನ್ನು ಮೈಗೂಡಿಸಿಕೊಂಡು ಅರ್ಜುನನನ್ನು ಎಡಬಿಡದೆ ಪೀಡಿಸಹತ್ತಿದನು. ಶ್ರೀಕೃಷ್ಣನೆಂಬ ಮಹಾಶಕ್ತಿಯನ್ನು ಸರ್ವಶಕ್ತಿಗಳು ಏನು ತಾನೇ ಮಾಡಿಯಾವು? ಅರ್ಜುನನು ದುರ್ಯೋಧನನ ಸಮರಸಾಹಸವನ್ನು ನೋಡಿ ಅದನ್ನು ಕ್ಷಣಮಾತ್ರದಲ್ಲಿ ನಾಶಮಾಡುತ್ತೇನೆಂದು ತನ್ನ

ಮಂತ್ರಾಸ್ತ್ರಗಳಿಂದ ಹೊಡೆಯುತ್ತಿದ್ದಾಗ ದುರ್ಯೋಧನ ನಡುಗಿದನು. ಆಗ ಅಶ್ವತ್ಥಾಮನು ಎದುರಿಗೆ ಬಂದು ಬಹಳ ಪರಾಕ್ರಮದಿಂದ ಯುದ್ಧಮಾಡುತ್ತಿರಲು ಅರ್ಜುನನು ಶ್ರೀಕೃಷ್ಣನ ಪರಮಾನುಗ್ರಹದಿಂದ ದುರ್ಯೋಧನನ ರಥಾಶ್ವಗಳನ್ನು ಕೊಂದನು. ಆಗ ಕುರುವೀರರು ಒಟ್ಟಾಗಿ ಬಂದು ಅರ್ಜುನನೊಡನೆ ಯುದ್ಧಮಾಡಿದರು. ಭಯಂಕರ ಹೋರಾಟ ನಡೆದು ಎರಡು ಕಡೆಗೂ ಅಸಂಖ್ಯಾತ ಸೈನಿಕರು ಸತ್ತರು. ಅರ್ಜುನನಿಗೆ ಸಮರ ಸಂತೋಷ ತುಂಬಲಿಕ್ಕಾಗಿ ಶ್ರೀಕೃಷ್ಣನು ಪಾಂಚಜನ್ಯವನ್ನು ಮೊಳಗಿದನು ಆ ಶುಭನಾದ ದೇವಲೋಕಕ್ಕೂ ಮುಟ್ಟಿ ಸಂತೋಷದಿಂದ ಕುಣಿದಾಡಿದರು. ದೈತ್ಯರು ಪ್ರಾಣಭಯದಿಂದ ನಡುಗಿದರು.

ಅರ್ಜುನನ ದೇವದತ್ತ ಶಂಖನಾದ, ಶ್ರೀಕೃಷ್ಣನ ಪಾಂಚಜನ್ಯ ಶಂಖದ ಶಬ್ದದಿಂದ ಕೇಳುತ್ತಿರಲಿಲ್ಲ. ಆದ್ದರಿಂದ ಧರ್ಮರಾಜನು ಅಂಜಿದನು. ಶ್ರೀಕೃಷ್ಣನ ಭಕ್ತರಕ್ಷಣೆಯ ಮಂಗಳ ಘೋಷಣೆ ತುಂಬಿ ಹರಿಯುತ್ತಿದ್ದರೂ ಧರ್ಮರಾಜನು ಅರ್ಜುನನ ಬಗ್ಗೆ ಚಿಂತೆ ಮಾಡುವುದನ್ನು ಕಂಡ ಭೀಮನು ಖೇದದಿಂದ ''ಧರ್ಮರಾಜ! ಶ್ರೀಕೃಷ್ಣನ ಆಶ್ರಯದಲ್ಲಿ ಅರ್ಜುನ ಸಂತೋಷದಿಂದಿದ್ದಾನೆ. ಅವನಿಗೆ ವಿಪತ್ತಿನ ಭಯವಿಲ್ಲ ಎಂದು ಹೇಳಿದರೂ ಧರ್ಮರಾಜನು ಸಂದೇಹದಿಂದ ''ಸಾತ್ಯಕೀ! ನನಗೆ ಅರ್ಜುನನ ಶಂಖನಾದ ಕೇಳದೆ ಬಹಳ ಭಯವಾಗಿದೆ ಅರ್ಜುನ ಸತ್ತಿದ್ದಾನೋ ಬದುಕಿದ್ದಾನೋ ತಿಳಿಯದೆ ಕಳವಳಪಡುತ್ತಿದ್ದೇನೆ ನೀನು ಹೋಗಿ ಅವನ ಯೋಗ ಕ್ಷೇಮ ತಿಳಿದು ಬಾ. ಅವನು ಬದುಕಿದ್ದರೆ ಅವನಿಗೆ ಸಹಾಯಮಾಡು'' ಎಂದು ಹೇಳಿ ಕಳುಹಿಸಿದನು.

ಸಾತ್ಯಕಿಯು ಧರ್ಮರಾಜನ ಆಪ್ಪಣೆಯಂತೆ ವ್ಯೂಹವನ್ನು ಹೊಕ್ಕು ನರನಾರಾಯಣರ ಸಮೀಪಕ್ಕೆ ಹೋಗಲು ತನಗೆ ದಾರಿಮಾಡಿಕೊಡೆಂದು ಶ್ರೀಕೃಷ್ಣನನ್ನು ಪಾರ್ಥಿಸಿಕೊಂಡು ಹೊರಟನು. ಸಾತ್ಯಕಿಯು ವ್ಯೂಹವನ್ನು ಭೇದಿಸಿ ಹೋಗುತ್ತಿರುವುದನ್ನು ಕಂಡ ದ್ರೋಣರು ಶ್ರೀಕೃಷ್ಣನ ಪ್ರೇರಣೆಯಿಂದ ಅವನು ಸುರಕ್ಷಿತವಾಗಿ ಒಳ ಹೋಗುವಂತೆ ದಾರಿ ಮಾಡಿಕೊಟ್ಟರು. ಏಕೆಂದರೆ ಅರ್ಜುನನು ಗುರುವಿನ ಪ್ರಿಯಶಿಷ್ಯ. ಅವನಿಗೆ ಪ್ರಿಯ ಶಿಷ್ಯ ಸಾತ್ಯಕಿ ಆಗಿದ್ದಾನೆ. ಗುರುವಿನ ಸಹಾಯಕ್ಕಾಗಿ ಹೊರಟಿರುವವನನ್ನು ತಡೆಯಬಾರದೆಂದು ಭಾವಿಸಿ ಒಳಗೆ ಬಿಟ್ಟರು.

ಸಾತ್ಯಕಿಯು ನರನಾರಾಯಣರನ್ನು ಹುಡುಕುತ್ತ ಬರುವಾಗ ಅಡ್ಡವಾಗಿ ಬಂದ ಕೃತವರ್ಮಾದಿ ಶೂರರೆಲ್ಲರನ್ನು ಗೆದ್ದು ಅನೇಕ ವೀರರನ್ನು ಕೊಂದುಹಾಕುತ್ತ ಬರುತ್ತಿರುವಾಗ ಭೂರಿಶ್ರವನು ಸಾತ್ಯಕಿಯೊಡನೆ ಯುದ್ಧಕ್ಕೆ ಬಂದನು. ಸೋಮದತ್ತನ ಪುತ್ರನಾದ ಭೂರಿಶ್ರವನು ಪರಾಕ್ರಮದಿಂದ ಸಾತ್ಯಕಿಯನ್ನು ಕೆಳಗೆ ಬೀಳಿಸಿ ಅವನನ್ನು ಕಾಲಲ್ಲಿ ಶಿರಚ್ಛೇದನ ಮಾಡುವುದರಲ್ಲಿರುವಾಗ ಕೃಷ್ಣನು ಅರ್ಜುನಾ! ನಿನ್ನ ಶಿಷ್ಯ ಸಾತ್ಯಕಿಯನ್ನು ಭೂರಿಶ್ರವನಿಂದ ಉಳಿಸು'' ಎಂದು ಹೇಳುತ್ತಿದ್ದಂತೆಯೇ ಅರ್ಜುನನು ಭೂರಿಶ್ರವನು ಸಾತ್ಯಕಿಯ ತಲೆ ಕಡಿಯಲು ಎತ್ತಿದ ಕೈಯನ್ನು ಕತ್ತರಿಸಿಬಿಟ್ಟನು.

ಆಗ ಭೂರಿಶ್ರವನು ಅರ್ಜುನಾ ನೀನು ಧರ್ಮ ಯುದ್ಧಮಾಡತಕ್ಕವನಾದರೂ ಈಗ ನೀನು ನೀತಿ ತಪ್ಪಿ ನಡೆದಿರುವಿ. ನಾನು ಬೇರೆಯವರೊಡನೆ ಯುದ್ಧಮಾಡುವಾಗ ನೀನು ಮದ್ಯದಲ್ಲಿ ಮೋಸದಿಂದ ನನ್ನ ಕೈ ಕತ್ತರಿಸಿರುವಿ'' ಎಂದು ಹೇಳುತ್ತ ಶಸ್ತ್ರಸನ್ಯಾಸ ಹೊಂದಿ ಶಸ್ತ್ರಾಸ್ತ್ರಗಳನ್ನು ಕೆಳಗಿರಿಸಿ ಯೋಗಾಸಕ್ತನಾದನು. ಆಗ ಸಾತ್ಯಕಿಯು ಭೂರಿಶ್ರವನನ್ನು ಕೊಲ್ಲಲು ಹೋದಾಗ ಕೃಷ್ಣನು ಸಾತ್ಯಕಿಯುನ್ನು ತಡೆದುನಿಲ್ಲಿಸಿ ಈತನು ಈಗ ಯೋಗಾಸಕ್ತನಾಗಿದ್ದಾನೆ ಕೊಲ್ಲಬಾರದು. ಅವನು ಪ್ರಾಣವಾಯುವನ್ನು ಬಂದಿಸಿ ತಾನೇ ಸಾಯುತ್ತಾನೆ'' ಎಂದು ಹೇಳಿದನು. ನಂತರ ಕೃಷ್ಣನು ಅರ್ಜುನಾ ಕುದುರೆಗಳು ಬಳಲಿ ಬಾಯಾರಿಕೆಯಿಂದ ಬಸವಳಿದಿರುವುದರಿಂದ ಇವಕ್ಕೆ ನೀರುಬೇಕು'' ಎಂದಾಗ ಅರ್ಜುನನು ವರುಣಾಸ್ತ್ರದಿಂದ ನೀರನ್ನು ನಿರ್ಮಿಸಿದಾಗ ರಮಾಬ್ರಹ್ಮಾದಿಗಳಿಂದ ಸೇವೆಗೊಳ್ಳುವ ಸಿರಿಕಾಂತನು ಆಗ ಕುದುರೆಗಳ ದೇಹದಲ್ಲಿ ನಾಟಿದ್ದ ಬಾಣಗಳನ್ನು ಕಿತ್ತು ತನ್ನ ಅಮೃತಹಸ್ತದಿಂದ ಮೈಯುಜ್ಜಿ ನೀರು ಕುಡಿಸುತ್ತಿದ್ದರೆ ಶತ್ರು ಪಕ್ಷದವರೂ ನಿಬ್ಬೆರಗಾಗಿ ಯುದ್ಧವನ್ನೇ ಮರೆತು ಅವನನ್ನೇ ನೋಡುತ್ತಾ ಆನಂದಪಡುತ್ತಿದ್ದರು. ಕೃಷ್ಣನು ಕುದುರೆಗಳನ್ನು ರಥಕ್ಕೆ ಕಟ್ಟಿ ಸಾರಥಿ ಕಾರ್ಯವನ್ನು ವಹಿಸಿ ಹೊರಟನು.

ಇತ್ತಕಡೆ ಧರ್ಮರಾಯನು ಇನ್ನೂ ಸಾತ್ಯಕಿ ಬರಲಿಲ್ಲ. ಅರ್ಜುನ ಬದುಕಿಲ್ಲವೆಂದು ದು:ಖದಿಂದ ಬೀಮನನ್ನು ಕುರಿತು ''ಭೀಮಾ! ಅರ್ಜುನನನ್ನು ನೋಡಲು ಹೋದ ಸಾತ್ಯಕಿ ಇನ್ನೂ ಬರಲಿಲ್ಲ. ನನಗೆ ಅರ್ಜುನನ ಗಾಂಡೀವ ಶಬ್ದ ಕೇಳಿಸುತ್ತಲೇ ಇಲ್ಲ. ಅರ್ಜುನಾ ಬದುಕಿಲ್ಲವೆಂದೇ ಭಾವಿಸುತ್ತೇನೆ. ಕೃಷ್ಣನೊಬ್ಬನೆ ಯುದ್ಧಮಾಡುತ್ತಿದ್ದಾನೆ. ನೀನು ಹೋಗಿ ಅರ್ಜುನ ಬದುಕಿದ್ದರೆ ಸಿಂಹನಾದ ಮಾಡು ಆದರಿಂದ ಅರ್ಜುನನು ಕ್ಷೇಮದಿಂದಿದ್ದಾನೆಂಬ ಭರವಸೆಯಿಂದ ಸಂತೋಷಪಡುತ್ತೇನೆ. ಇಲ್ಲದಿದ್ದರೆ ನಾನು ಸಾಯುತ್ತೇನೆ'' ಎಂದು ದು:ಖದಿಂದ ಹೇಳಿದನು.

ಭೀಮಸೇನ ದೇವರು ಧರ್ಮರಾಜನ ಭ್ರಮೆಯನ್ನು ನಿವಾರಣೆ ಮಾಡಲು ಏನೇ ಹೇಳಿದರು ಒಪ್ಪದಿರಲು ''ಧರ್ಮರಾಜಾ! ಶ್ರೀಕೃಷ್ಣನಿರುವಲ್ಲಿ ಅಪಜಯವಿಲ್ಲವೆಂದು ನನಗೆ ತಿಳಿದಿದ್ದರೂ ನಿನ್ನ ಆಜ್ಞೆಯಂತೆ ಹೊರಡುತ್ತೇನೆ. ಆದರೆ ನಾನೀಗ ನಿನ್ನನ್ನು ಬಿಟ್ಟು ಹೋದರೆ ನಿನ್ನನ್ನು ಸೆರೆಹಿಡಿಯಲು ಕಾದಿರುವ ದ್ರೋಣರು ನಿನ್ನನ್ನು ಬಿಡದೆ ಬಂದಿಸುತ್ತಾರೆ '' ಎಂದನು.

ಧರ್ಮರಾಜನು ''ಭೀಮಾ! ನನ್ನ ಚಿಂತೆ ನಿನಗೆ ಬೇಡ. ನನ್ನ ಬಳಿ ಧೃಷ್ಟದ್ಯುಮ್ನ-ಘಟೋತ್ಕಚರಿಬ್ಬರೂ ಇರುವುದರಿಂದ ನೀನು ಧೈರ್ಯದಿಂದ ಹೋಗಿ ಅರ್ಜುನನ ಸಮಾಚಾರ ತಿಳಿಸು'' ಎಂದು ಕಾತುರನಾಗಿ ಕೇಳಿಕೊಂಡನು.

ಭೀಮಸೇನನು ರಣರಭಸದಿಂದ ಬಂದು ವ್ಯೂಹದೊಳಗೆ ನುಗ್ಗಿಬರುತ್ತಿದ್ದರೆ ದ್ರೋಣರು

ತಡೆದು ನಿಲ್ಲಿಸಿದರು. ''ಭೀಮಾ! ಮೊದಲು ಅರ್ಜುನನನ್ನು ನನ್ನ ಶಿಷ್ಯನೆಂಬ ಅಭಿಮಾನದಿಂದ ಬಿಟ್ಟೆನು. ಮತ್ತೆ ಅರ್ಜುನನ ಶಿಷ್ಯ ಸಾತ್ಯಕಿ ಬಂದಾಗ ಅರ್ಜುನನ ರಕ್ಷಣೆಗಾಗಿ ಅವನನ್ನು ಒಳಗೆ ಬಿಟ್ಟೆನು. ಈಗ ನೀನು ಬಂದಿರುವೆ. ನಿನ್ನನ್ನು ಒಳಗೆ ಬಿಡಲು ಆಗುವುದಿಲ್ಲ. ದುರ್ಯೋಧನ ನನ್ನ ಕೈಲಿ ಪ್ರತಿಜ್ಞೆ ಮಾಡಿಸಿದ್ದಾನಾದ್ದರಿಂದ ಯಾರನ್ನೂ ಒಳಬಿಡುವಂತಿಲ್ಲ'' ಎಂದರು. ಯುದ್ಧಕ್ಕೆ ಸಿದ್ಧವಾಗಿರುವ ದ್ರೋಣರನ್ನೂ ಕುರಿತು ಇಷ್ಟು ದಿನಾಲು ನಿಮ್ಮನ್ನು ಗುರುಭಾವದಿಂದ ಗೌರವಿಸಿದ್ದೆನು. ಇಂದು ನಿಮ್ಮ ಸಮ್ಮತಿಯಿಂದಲೇ ಯುದ್ಧಮಾಡುತ್ತೇನೆ'' ಎಂದು ಹೇಳಿ ದ್ರೋಣರ ರಥ ಸಾರಥಿ ಎಲ್ಲವನ್ನೂ ನಾಶಪಡಿಸಿದಾಗ ದುರ್ಯೋಧನನು ತಕ್ಷಣವೆ ರಥ ಸಾರಥಿ ಎಲ್ಲ ಸಿದ್ಧಪಡಿಸಿ ತಂದುಕೊಡಲು ದ್ರೋಣರು ಅಸಂಖ್ಯಾತ ಮಂತ್ರಾಸ್ತ್ರಗಳನ್ನು ಭೀಮನ ಮೇಲೆ ಸುರಿಮಳೆಯಂತೆ ಸುರಿಸುತ್ತಿರುವಾಗ ಭೀಮನು ಬಾಣಗಳನ್ನು ಎದಿರುಸುತ್ತ ದ್ರೋಣರ ರಥವನ್ನು ಗಗನದತ್ತ ಹಾರಿಸಿದನು. ದ್ರೋಣರು ರಥದಿಂದ ಕೆಳಗೆ ಹಾರಿದಾಗ ಭೀಮನು ''ಆಚಾರ್ಯರೇ ನೀವು ನಮಗೆ ಗುರುಗಳಾದ ಕಾರಣ ಗುರುಹತ್ಯಾ ಮಾಡಬಾರದೆಂದು ಉಳಿಸಿದ್ದೇನೆ'' ಎಂದನು.

ದ್ರೋಣರು ಮತ್ತೆ ಭೀಮನೊಡನೆ ಸೆಣಸಾಟಕ್ಕೆನಿಲ್ಲದೆ ಧರ್ಮರಾಜನನ್ನು ಸೆರೆಹಿಡಿಯಲು ರಥವೇರಿ ಅವನ ಬಳಿಗೆ ಉಗ್ರವಾಗಿ ಹೊರಟರು. ದ್ರೋಣರು ಸಿಕ್ಕಿಸಿಕ್ಕವರನ್ನು ಕೊಚ್ಚಿಹಾಕುತ್ತ ಪಾಂಡವ ಸೇನೆಯಲ್ಲಿ ನುಗ್ಗಿ ಬರುತ್ತಿರಲು ಸೈನಿಕರು ಪ್ರಾಣಭಯದಿಂದ ಓಡಹತ್ತಿದರು. ಆಗ ಧೃಷ್ಟದ್ಯುಮ್ನನು ಬಂದು ದ್ರೋಣರೊಡನೆ ಯುದ್ಧಮಾಡಿದಾಗ ಘೋರ ಯುದ್ಧ ಭಯಂಕರವಾಗಿತ್ತು.

ಅತ್ತಕಡೆಗೆ ಭೀಮನು ಕೌರವ ಸೇನೆಯನ್ನೂ ಬಡಿದು ಬೀಳಿಸುತ್ತ ಬೊಬ್ಬಿಡುತ್ತ ಬರುತ್ತಿರಲು ದುರ್ಯೋಧನನ ಹನ್ನೆರಡು ಮಂದಿ ತಮ್ಮಂದಿರು ಭೀಮನ ಮೇಲೆ ಯುದ್ಧಕ್ಕೆ ಬಂದು ಹೋರಾಡುವಾಗ ಅವರೆಲ್ಲರನ್ನೂ ಕೊಂದುಹಾಕಿದನು. ಹೀಗೆ ಕೌರವ ದಳವನ್ನೂ ನಾಶಪಡಿಸುತ್ತಲೇ ಕೃಷ್ಣಾರ್ಜುನರ ಸಮೀಪಕ್ಕೆ ಬಂದು ಅಲ್ಲಿ ಶ್ರೀ ಕೃಷ್ಣನ ಸನ್ನಿಧಾನದಲ್ಲಿ ಅರ್ಜುನ ಸಾತ್ಯಕಿ ಇಬ್ಬರೂ ಸುರಕ್ಷಿತವಾಗಿ ಯುದ್ಧೋತ್ಸಾಹದಿಂದ ಸಂತೋಷದಿಂದಿರುವುದನ್ನೂ ಕಂಡು ಧರ್ಮರಾಜನಿಗೆ ಸಂತೋಷದ ಸುದ್ದಿ ಮುಟ್ಟಿಸಬೇಕೆಂಬ ಭಾವದಿಂದ ಒಮ್ಮೆ ಸಿಂಹನಾದ ಮಾಡಿದನು.

ಧರ್ಮರಾಜನು ಭೀಮಸೇನನ ಮಂಗಳ ವಾರ್ತೆಗಾಗಿಯೇ ಕಾಯುತ್ತಿದ್ದಾಗ ಅವನ ಶುಭನಾದ ಕೇಳಿದಾಕ್ಷಣವೇ ಆನಂದದಿಂದ ಹಿಗ್ಗಿ ಅರ್ಜುನನು ಬದುಕಿದ್ದಾನೆಂಬ ಹರ್ಷದಿಂದ ಕುಣಿದಾಡಿದರು. ಭೀಮಗರ್ಜನೆ ಕೇಳಿದ ಅನೇಕ ಅಸುರರು ಭಯದಿಂದ ಅಸುನೀಗಿದರು.

ಭೀಮನು ಕುರುದಳವನ್ನು ಧೂಳೀಪಟದಂತೆ ಮಾಡಿ ಧಾಳಿ ನಡೆಸುತ್ತಿದ್ದಾಗ ಕರ್ಣನು ಕುರುರಾಜನ ಅನೇಕ ಮಂದಿ ಸಹೋದರರೊಡನೆ ಭೀಮನ ಸಂಗಡ ಯುದ್ಧಮಾಡಲು

ಬಂದನು.

ಬಂದ ವೀರರೆಲ್ಲರೂ ಭೀಮನ ಗದೆಗೆ ಬಲಿಯಾಗಿ ಬಿದ್ದಿರುವುದು ನೋಡಿ ಕರ್ಣನು ಭೀಮನೊಡನೆ ಯುದ್ಧಮಾಡದೆ ಹೊರಟು ಹೋದನು. ವಿಕರ್ಣ-ಚಿತ್ರಸೇನಾದಿ ವೀರರೆಲ್ಲರೂ ಮಡಿದರು. ಕರ್ಣನು ಭೀಮಸೇನನ ಕೈಲಿ ಇಪ್ಪತ್ತೊಂದು ಬಾರಿ ಸೋತನು. ಮೈಮೇಲೆ ಬಾಣದ ಏಟಿನಿಂದ ಗಾಯ ತುಂಬಿಹೋಗಿತ್ತು. ನೆತ್ತರು ಸುರಿಯುತ್ತಿತ್ತು. ಮಂತ್ರೌಷದಗಳಿಂದ ಗುಣಪಡಿಸಿಕೊಂಡು ಇಪ್ಪತ್ತೆರಡನೆಯ ಬಾರಿ ಮತ್ತೆ ಯುದ್ಧಕ್ಕೆ ಸಿದ್ಧವಾಗಿ ಹೊರಟನು. ಕರ್ಣನು ಪರಶುರಾಮನಿಂದ ಲಭ್ಯವಾದ ಅಭೇದ್ಯ ರಥ. ಅಕ್ಷಯ ಬತ್ತಳಿಕೆಯೊಂದಿಗೆ ಹೊರಟು ಭೀಮನೊಡನೆ ಯುದ್ಧಮಾಡುತ್ತಿದ್ದನು. ಭೀಮನು ಕರ್ಣನ ಅಸ್ತ್ರಪ್ರಯೋಗಕ್ಕೆ ಅಂಜಲಿಲ್ಲ. ಆಗಲೇ ಕರ್ಣನನ್ನು ಗದಾಪ್ರಹಾರದಿಂದ ಮುಗಿಸಿಬಿಡಬಹುದಾಗಿತ್ತು. ಆದರೆ ಪರಶುರಾಮರ ವಾಕ್ಯ ಪಾಲಿಸಬೇಕೆಂದು ಅವನನ್ನು ಉಳಸಿದ್ದನು. ಕರ್ಣನು ಭೀಮನು ಏತಕ್ಕಾಗಿ ತನ್ನನ್ನು ಉಳಸಿದ್ದಾನೆಂಬುದನ್ನರಿಯದೆ ತಾನೇ ಶೂರನೆಂಬ ಜಂಭದಿಂದ ಭೀಮನ ರಥವನ್ನು ಮುರಿದನು. ಆಗ ಭೀಮನು ಕರ್ಣನ ಸೊಕ್ಕನ್ನು ಮುರಿದು ಓಡಿಸಬೇಕೆಂದು ಅವನ ರಥಕ್ಕೆ ಹಾರಿದಾಗ ರಥ ಚೂರುಚೂರಾಯಿತು. ಕರ್ಣನು ಆಗ ಹೆದರಿ ಒಂದು ಮಾಲೆಯಲ್ಲಿ ಅಡಗಿದ್ದಾಗ ಎಲಾ ಸೂತಾ! ನಿನ್ನನ್ನು ಕೊಲ್ಲುವುದಾದರೆ ಆಗಲೇ ಕೊಲ್ಲುತ್ತಿದ್ದನು. ಯಾವುದೋ ಆಜ್ಞಾಪಾಲನೆಗಾಗಿ ನಿನ್ನನ್ನು ಉಳಿಸಿದ್ದೇನೆ ಎಂದು ಹೇಳಿ. ಗದೆಯಿಂದ ತಲೆಗೆ ಕುಟ್ಟಿದ್ದಾಗ ಕರ್ಣನು ಗಡಗಡನೆ ನಡಗುತ್ತಾ ಭೀಮನ ಕಡೆಗೂ ನೋಡದೆ ಹೊರಟುಹೋದನು.

ಕರ್ಣನು ತಾನು ಅನಿಲಜನಿಗೆ ಅಂಜಿ ಬಂದಿದ್ದೇನೆಂದು ತನ್ನ ಮಿತ್ರ ದುರ್ಯೋಧನನೆದುರಿಗೆ ತೋರ್ಪಡಿಸದೆ ಭೀಮನ ಸಂಗಡ ಯುದ್ಧಮಾಡಿ ಸಾಹಸವನ್ನು ಸೂರೆಮಾಡಿದನೆಂದು ಹೇಳಿಕೊಳ್ಳುತ್ತ ಭೀಮನು ತೊಣಪ-ತೂಬರ-ಮೊದಲಾದ ಮೂದಲಿಕೆಯ ನುಡಿಗಳಿಂದ ಛೇಡಿಸುತ್ತಾ ಧನುಸ್ಸನ್ನು ಎತ್ತಿ ಹೋಗುತ್ತಿದ್ದರೆ ಅರ್ಜುನನು ಕರ್ಣನಿಗೆ ಬಾಣ ಪ್ರಯೋಗ ಮಾಡಿದಾಗ ಕರ್ಣನ ಮರ್ಮಸ್ಥಾನವನ್ನು ಹೊಕ್ಕ ಬಾಣಗಳ ವೇದನೆಯನ್ನು ಸಹಿಸಲಾರದ ಕರ್ಣನು ಓಡಿದನು.

ಭೀಮನು ಕರ್ಣನು ವೇಗದಿಂದ ಹೋಗುವುದನ್ನುನೋಡಿ ಅವನ ರಥಕ್ಕೆ ಹಾರಿ ಕೊಂದುಬಿಡುವಂತೆ ಅಬ್ಬರಿಸುತ್ತಿದ್ದಾಗ ಕರ್ಣನು ಅಂಜಿದನು. ಶಕ್ತ್ಯಾಯುಧವನ್ನು ಪ್ರಯೋಗಿಸಿ ಕೊಂದುಬಿಡಬೇಕೆಂದು ಯೋಚಿಸಿದಾಗ ತಾಯಿಗೆ ಕೊಟ್ಟ ಮಾತು ಅಡ್ಡಬಂದಿತು. ಒಂದು ವೇಳೆ ಕರ್ಣ ಭೀಮನ ಮೇಲೆ ಶಕ್ತ್ಯಾಯುಧವನ್ನೇ ಪ್ರಯೋಗಿಸಿದ್ದರೂ ಭೀಮನು ಸಾಯುತ್ತಿರಲಿಲ್ಲ. ಕರ್ಣಾರ್ಜುನರಿಬ್ಬರಿಗೂ ಘೋರ ಕಾಳಗ ನಡೆಯುತ್ತಿದ್ದಾಗ ಶ್ರೀ ಕೃಷ್ಣನು ತನ್ನಭಕ್ತನ ಪ್ರತಿಜ್ಞಾಪಾಲನೆ ಮಾಡಿ ಅವನ ರಕ್ಷಣೆಗಾಗಿ ಸೂರ್ಯನ ಪ್ರಕಾಶವನ್ನು ಅಚ್ಛಾದನೆ ಮಾಡಿದನು ಕತ್ತಲು ಕವಿದಿತು. ಸ್ವಾಮಿ ಸರ್ವಸ್ವತಂತ್ರನಾದ್ದರಿಂದ ಸಕಲ ದೇವತೆಗಳು

ಅವನ ಆಧೀನರಾಗಿದ್ದಾರೆ. ದೇವೋತ್ತಮನು ತನ್ನ ಮಹಿಮ ಪ್ರಕಾಶದಿಂದ ಎಲ್ಲರಲ್ಲೂ ಅಂತರ್ಗತನಾಗಿ ಹೋಗಬೇಕು ಹಾಗೆ ಲೀಲಾನಾಟಕವನ್ನು ತೋರಿಸುತ್ತಾನೆ. ಆದರಂತೆ ಸೂರ್ಯಪ್ರಕಾಶ ಯಾರ ಕಣ್ಣಿಗೂ ಕಾಣದಂತೆ ತಾನು ರಣರಂಗದಲ್ಲಿ ಹರಡಿದನು. ಆಗ ಶತ್ರು ಸೈನಿಕರು ಸಂತೋಷದಿಂದ ಅರ್ಜುನನ ಪ್ರತಿಜ್ಞಾ ಭಂಗವಾಯಿತು. ಜಯದ್ರಥ ಸಾಯಲಿಲ್ಲ. ಈಗ ಅರ್ಜುನ ಅಗ್ನಿ ಪ್ರವೇಶಮಾಡುತ್ತಾನೆ ಎಂದು ಹೇಳುತ್ತಾ ಸಂತೋಷದಿಂದ ಎಲ್ಲರೂ ಜಯದ್ರಥನೊಡನೆ ಹರ್ಷೋತ್ಸಾಹದಿಂದ ಬಂದು ನೆರೆದರು. ಅಗ್ನಿ ಕುಂಡ ಸಿದ್ದವಾಯಿತು. ಇನ್ನೇನು ಅರ್ಜುನ ಬೆಂಕಿಗೆ ಹಾರಿ ಸಾಯುತ್ತಾನೆಂಬ ಸಂತೋಷದಿಂದ ನೋಡುತ್ತಿದ್ದಾಗ ಅರ್ಜುನನು ಶ್ರೀಹರಿ ಆಜ್ಞೆಯಂತೆ ಅಸ್ತ್ರವನ್ನು ಕ್ಷಣಾರ್ಧದಲ್ಲಿ ಹೂಡಿ ಜಯಕಾರದಿಂದ ತನ್ನ ಸಾವನ್ನು ಸಂತೋಷದಿಂದ ನೋಡಬಂದಿದ್ದ ಜಯದ್ರಥನ ಶಿರಸ್ಸನ್ನು ಕತ್ತರಿಸಿ ಅಂತರಿಕ್ಷಕ್ಕೆ ಹಾರಿಸಿದನು. ಅದು ಕೆಳಗೆ ಬೀಳುವಷ್ಟರಲ್ಲಿ ಕೃಷ್ಣನು ''ಪಾರ್ಥಾ'' ಕಡಿದ ತಲೆ ಕೆಳಗೆ ಬೀಳಬಾರದು ಅವನ ತಂದೆಯು ಅರ್ಘ್ಯ ನೀಡಲು ಒಡ್ಡಿರುವ ಬೊಗಸೆಯಲ್ಲಿ ಬೀಳಲಿ'' ಎಂದನು. ಏಕೆಂದರೆ ಜಯದ್ರಥನ ತಂದೆ ಮಗನನ್ನು ಕುರಿತು ''ಪುತ್ರಾ! ನಿನ್ನ ತಲೆ ಯಾರ ಕೈಯಿಂದ ಭೂಸ್ಪರ್ಶವಾಗುತ್ತದೋ ಅವರ ತಲೆ ಸಹಸ್ರ ಚೂರುರಾಗುತ್ತದೆ'' ಎಂದು ವರಕೊಟ್ಟಿದ್ದನು. ಅದರಂತೆ ಈಗ ಜಯದ್ರಥನ ತಲೆ ಅರ್ಜುನನ ಅಸ್ತ್ರದಿಂದ ಸಿಡಿದು ಬಂದು ಅವನ ತಂದೆಯ ಭೋಗಸಯೊಳಗೆ ಬಿದ್ದಾಗ ಗಾಬರಿಗೊಂಡು ಕೆಳಗೆ ಚೆಲ್ಲಿದನು. ಆಗ ಅವನ ವರದಂತೆಯೇ ತಲೆ ಸಹಸ್ರ ಹೋಳಾಯಿತು. ಹೀಗೆ ವಿಶ್ವತೋಮುಖನಾದ ಸ್ವಾಮಿಯ ಒಂದೇ ಬಾರಿಗೆ ಅನೇಕ ಜೀವಿಗಳನ್ನು ಕೊಲ್ಲಬಲ್ಲನು. ಕಾಪಾಡಬಲ್ಲನು. ಎಂಬ ತತ್ತ್ವವನ್ನು ಜಗತ್ತಿಗೆ ತೋರಿಸುತ್ತಾ ಭುಭಾರಹರಣ ಕಾರ್ಯವನ್ನು ವಿಚಿತ್ರ ರೀತಿಯಲ್ಲಿ ನಡೆಸುತ್ತಿದ್ದನು. ಜಯದ್ರಥನ ತಲೆಚ್ಛೇದನವಾಗುವ ಕ್ಷಣದಲ್ಲೇ ಸೂರ್ಯಪ್ರಕಾಶ ಎಲ್ಲೆಲ್ಲೂ ಹರಡಿದ್ದು ನೋಡಿದ ವೈರಿಗಳು ಆಶ್ಚರ್ಯದಿಂದ ಕೃಷ್ಣನು ಮೋಸದಿಂದ ಜಯದ್ರಥನನ್ನು ಕೊಲ್ಲಿಸಿದ್ದಾನೆ. ಹಗಲಲ್ಲೇ ಸೂರ್ಯಾಸ್ತವನ್ನೂ ತೋರಿಸಿ ಸುಳ್ಳು ಮಾಡಿದ್ದಾನೆ'' ಎಂದು ಸೋಲುಮುಖದಿಂದ ಸಪ್ಪಗಾದರು. ಆನಂದಪೂರ್ಣನೂ ಆನಂದ ಸ್ವರೂಪನೂ ಆದ ಶ್ರೀಕೃಷ್ಣನಿಗೆ ಹೊಸದಾದ ಆನಂದಾನುಭವ ಇಲ್ಲದಿದ್ದರೂ ಆನಂದಪಟ್ಟವನಂತೆ ಹರ್ಷ ತೋರ್ಪಡಿಸುತ್ತ ಪಾಂಚಜನ್ಯ ಶಂಖವನ್ನು ಮೊಳಗಿಸಿದನು. ಆಗ ಅರ್ಜುನನು ತನ್ನ ಸೇವೆಯಿಂದ ಶ್ರೀಕೃಷ್ಣನು ಸುಪ್ರೀತನಾಗಿದ್ದಾನೆಂಬ ಸಂತೋಷದಿಂದ ದೇವದತ್ತ ಶಂಖವನ್ನು ಊದಿದನು. ಧರ್ಮರಾಜನಿಗೆ ಕೃಷ್ಣಾರ್ಜುನರಿಬ್ಬರ ಶಂಖನಾದವೂ ಕೇಳಿ ಪರಮಾನಂದ ಉಂಟಾಗಿ ಕೃಷ್ಣಾರ್ಜುನರು ಜಯಶೀಲರಾದರೆಂದು ಧೈರ್ಯಹೊಂದಿದನು.

ಕೌರವ ಪಕ್ಷದಲ್ಲಿ ಸೋಲಿನ ಸಂಕಟ ಉಂಟಾಯಿತು. ಸಮರ ವೀರನಾದ ಜಯದ್ರಥನೂ ಸತ್ತನೆಂದು ನಿರುತ್ಸಾಹದಿಂದ ಕುಗ್ಗಬಾರದೆಂದು ದುರ್ಯೋಧನ ಅಶ್ವತ್ಥಾಮನನ್ನು ಕುರಿತು ಆಕ್ರೋಶ ಆವೇಶಗೊಳ್ಳುವಂತೆ ಪ್ರಚೋದನೆ ಮಾಡಿದನು. ಅಶ್ವತ್ಥಾಮನು ಕೌರವರಾಜನ

ಪ್ರಶಂಸೆಗೆ ಹಿಗ್ಗಿ ತನ್ನ ಪರಾಕ್ರಮದಿಂದ ಪಾಂಡವರನ್ನು ಸೋಲಿಸಿ ಮಿತ್ರನ ಮನ್ನಣೆ ಪಡೆಯಬೇಕೆಂಬ ಕುತೂಹಲದಿಂದ ರೌದ್ರಾವೇಶದಿಂದ ಲಗ್ಗೆ ಹಾಕುತ್ತಾ ನುಗ್ಗಿಬರುವುದನ್ನು ಕರ್ಣನು ಕಂಡು ತಾನು ವೀರಾವೇಶದಿಂದ ಪಾಂಡವ ದಳದೊಳಗೆ ನುಗ್ಗಿ ಅನೇಕ ವೀರರನ್ನು ಕೊಂದನು. ಕರ್ಣಾಶ್ವತ್ಥಾಮರಿಬ್ಬರೂ ಪಾಂಡವ ಸೈನ್ಯವನ್ನು ಭಂಗಪಡಿಸುವುದನ್ನು ನೋಡಿದ ದುಷ್ಟದ್ಯುಮ್ನನು ತನ್ನ ಪರಾಕ್ರಮದಿಂದ ಸೇನಾದಳವನ್ನು ಬೆದರಿಸಿ ಓಡಿಸಿದಾಗ ಭೀಮನು ಗದಾಧಾರಿಯಾಗಿ ಬರುವುದನ್ನು ನೋಡಿದ ಕರ್ಣಶ್ವತ್ಥಾಮರು ಯುದ್ಧವನ್ನು ನಿಲ್ಲಿಸಿ ದುರ್ಯೋಧನನ ಬಳಿಗೆ ಬರಲು ''ದುರ್ಯೋಧನನು ಭೀಮನ ಭಯದಿಂದ ''ಕರ್ಣಾ! ನಾನು ಭೀಮನನ್ನು ಕೊಲ್ಲುತ್ತೇನೆಂದು ಪ್ರತಿಜ್ಞೆಮಾಡಿದ್ದೇನೆ. ನನ್ನ ಪರಮಾಪ್ತನಾದ ನೀನು ನನ್ನ ಪ್ರತಿಜ್ಞೆಯನ್ನು ನೆರವೇರಿಸಿಕೊಡು'' ಎಂದು ಹೇಳಿದನು. ಕರ್ಣನು ಭೀಮನ ಕೈಲಿ ಸಾಯದೆ ಬದುಕಿರುವುದೇ ಹೆಚ್ಚು ಅವನನ್ನು ಸೋಲಿಸುವ ಸಾಹಸಮಾಡಬಾರದೆಂದು ತಿಳಿದಿದ್ದರೂ ದುರ್ಯೋಧನನಿಗೆ ನಿರಾಸೆ ಪಡಿಸಬಾರದೆಂದು ''ದುರ್ಯೋಧನಾ! ನಿನಗಾಗಿ ನಾನು ನನ್ನ ಪ್ರಾಣದ ಹಂಗನ್ನೇ ತೊರೆದು ಹೋರಾಡಿ ನಿನಗೆ ಸಂತೋಷ ವನ್ನುಂಟು ಮಾಡುತ್ತೇನೆ'' ಎಂದನು.

ನಂತರ ದ್ರೋಣನ ಬಳಿಗೆ ಬಂದು 'ನೀನು ಪ್ರತಿಜ್ಞೆ ಮಾಡಿ ವ್ಯೂಹವನ್ನು ರಚಿಸಿ ಪಾಂಡವಪಕ್ಷದವರನ್ನು ಒಳಗೊಳಗೆ ಸನ್ನಾಹದಿಂದ ಪ್ರವೇಶಕ್ಕೆ ಅವಕಾಶಮಾಡಿಕೊಟ್ಟು ಜಯದ್ರಥನನ್ನು ಕೊಲ್ಲಿಸಿದೆ. ಹಿತ ಶತ್ರುವಾದ ನಿನ್ನನ್ನು ನಂಬಿ ನಾನು ಕೆಟ್ಟೆನು'' ಎಂದು ಇರಿಯುತ್ತಿದ್ದನು.

ದ್ರೋಣರು ಪಾಪದನ್ನದ ಪ್ರಭಾವದಿಂದ ಪಾಪ ಕಾರ್ಯಕ್ಕೆ ಹಿಂಜರಿಯದೆ ಮುನ್ನುಗ್ಗಿ ಹೋರಾಡುವ ವೀರಸಂಕಲ್ಪದಿಂದ ''ದುರ್ಯೋಧನಾ! ನನ್ನ ಪರಾಕ್ರಮ ನಿನಗಾಗಿಯೇ ಮೀಸಲಾಗಿರಿಸಿ ಶ್ರೀಕೃಷ್ಣನನ್ನೇ ವಿರೋದಿಸಿ ಹೋರಾಡಿದರೂ ನಿನಗೆ ಜಯವಿಲ್ಲದಿದ್ದರೆ ನನ್ನ ತಪ್ಪೇನಿದೆ? ಈ ದಿನದ ನನ್ನ ಸಾಹಸ ಅಧಿಕ ರೀತಿಯಲ್ಲಿ ವೆಚ್ಚಮಾಡಿ ದಿನಪೂರ್ತಿ ಹೋರಾಡುತ್ತೇನೆ'' ಎಂದು ಮಾತು ಕೊಟ್ಟಂತೆ. ಅಂದು ರಾತ್ರಿ ನಡೆದ ಯುದ್ದದಲ್ಲಿ ಏಳು-ಲಕ್ಷೋಹಿಣಿ ಸೈನ್ಯ ನಾಶಹೊಂದಿತು. ಕರ್ಣನಿಗೆ, ತಾಯಿಗೆ ಕೊಟ್ಟ ವಾಗ್ದಾನದ ತಡೆ. ಭೀಮನಿಗೆ ಶ್ರೀಹರಿಯ ಸಂಕಲ್ಪದ ತಡೆ. ಹೀಗಾಗಿಪೂರ್ಣ ಸಾಹಸ ತೋರಿಸಲು ಎರಡು ಪಕ್ಷದ ಮುಖ್ಯ ವೀರರಿಗೂ ಅಡ್ಡಿಯಾಗಿದ್ದ ಕಾರಣದಿಂದ ಧರ್ಮದ ಹೋರಾಟ ಘೋರತರವಾಗಿ ನಡೆಯುತ್ತಿತ್ತು. ಅಶ್ವತ್ಥಾಮನು ರುದ್ರಾಂಶ ಸಂಭೂತನಾದ್ದರಿಂದ ಅವನ ರೌದ್ರತೆ. ಯುದ್ಧ ಚಾತುರ್ಯದಿಂದ ಶತೃ ಪಕ್ಷದವರನ್ನು ಧ್ವಂಸಗೊಳಿಸುತ್ತಿದ್ದನು. ಪಾಂಡವಪಕ್ಷದ ಸೈನಿಕರು ಅಶ್ವತ್ಥಾಮನ ಪರಾಕ್ರಮಕ್ಕಂಜಿ ಎಲ್ಲಿದ್ದವರು ಅಲ್ಲೇ ಮರೆಯಾಗುತ್ತಿದ್ದರು. ಯಾರೂ ಧೈರ್ಯದಿಂದ ಅಶ್ವತ್ಥಾಮನನ್ನು ಎದುರಿಸಲಾರದವರಾಗಲು ಘಟೋತ್ಕಜನು ನುಗ್ಗಿ ಬಂದು

''ಎಲಾ ಅಶ್ವತ್ಥಾಮಾ! ಪಾಪ ಸೈನಿಕರನ್ನೇಕೆ ವೃಥಾ ಕೊಲ್ಲುತ್ತಿರುವೆ? ಸಾಮರ್ಥ್ಯವಿದ್ದರೆ ನನ್ನೊಡನೆ ಹೋರಾಡು ಬಾ'' ಎಂದನು. ಇಬ್ಬರಿಗೂ ಘೋರವಾದ ಯುದ್ಧವಾಗಿ ಅಶ್ವತ್ಥಾಮನು ಒಂದು ಲಕ್ಷಮಂದಿ ರಾಕ್ಷಸರನ್ನು ಕೊಂದನು. ಘಟೋತ್ಕಚನ ಮಗ ಅಂಜನವರ್ಮನೆಂಬುವನೂ ಅಶ್ವತ್ಥಾಮನ ಕೈಲಿ ಸತ್ತನು. ಘಟೋತ್ಕಚನು ಮಗನು ಸತ್ತನೆಂಬ ಆಕ್ರೋಶದಿಂದ ಕುರು ಪಕ್ಷದ ಅನೇಕ ವೀರರನ್ನೂ ಕೊಂದನು.

ಹೀಗೆ ಅಶ್ವತ್ಥಾಮ ಘಟೋತ್ಕಚರಿಗೆ ಯುದ್ಧನಡೆಯುತ್ತಿದ್ದಾಗ ಕರ್ಣನು ಅರ್ಜುನನೊಡನೆ ಯುದ್ಧಮಾಡಲು ಬಂದಾಗ ಕರ್ಣನು ಅರ್ಜುನನಿಗಾಗಿ ಮೀಸಲಾಗಿರಿಸಿರುವ ಶಕ್ತ್ಯಾಯುದ್ಧವನ್ನು ಈಗ ಘಟೋತ್ಕಚನಿಗಾಗಿ ಅವನು ಪ್ರಯೋಗ ಮಾಡಿದರೆ ಅರ್ಜುನನ ವಿಪತ್ತು ನಿವಾರಣೆ ಆಗುತ್ತದೆ. ಅದಲ್ಲದೆ ಈಗ ಘಟೋತ್ಕಚನ ಅವತಾರವೂ ಅಂತ್ಯವಾಗಬೇಕು ಎಂಬ ಸಂಕಲ್ಪದಂತೆ ಶ್ರೀಕೃಷ್ಣನು ಘಟೋತ್ಕಚನನ್ನು ಕುರಿತು ಘಟೋತ್ಕಚ! ನಿನಗೆ ಸರಿ ಜೋಡಿ ಅಶ್ವತ್ಥಾಮನಲ್ಲ ಕರ್ಣನಾಗಿರುವುದರಿಂದ ಅವನೊಡನೆ ಸಮರ ನಡೆಸಿ ಕೀರ್ತಿಪಡೆ'' ಎಂದನು.

ಆಗ ಘಟೋತ್ಕಚನಿಗೂ ಕರ್ಣನಿಗೂ ಯುದ್ಧನಡೆಯಿತು. ಅಶ್ವತ್ಥಾಮನಿಗೂ ಭೀಮನಿಗೂ ಯುದ್ಧವಾಯಿತು. ಶ್ವೈತವರ್ಮನಿಗೂ ಅರ್ಜುನನಿಗೂ ಯುದ್ಧ ಆರಂಭವಾಗಿ ಎರಡು ಕಡೆಗೂ ಲೆಕ್ಕವಿಲ್ಲದಷ್ಟು ವೀರರು ಸಾಯುತ್ತಿದ್ದರು. ಘಟೋತ್ಕಚನ ರಣದಬ್ಬರವನ್ನು ನೋಡಿದ ದುರ್ಯೋಧನನು ಕರ್ಣನಿಗೆ ವಿಪತ್ಸಂಭವವಿದೆ ಎಂಬ ಭಯದಿಂದ ಆಲಂಬನೆಂಬ ಒಬ್ಬ ದೊಡ್ಡ ರಾಕ್ಷಸನನ್ನು ಕರ್ಣನ ಸಹಾಯಕ್ಕಾಗಿ ಕಳುಹಿಸಿದನು. ಘಟೋತ್ಕಚನು ಆ ರಾಕ್ಷಸನನ್ನೂ ಬಂದಿಸಿ ತಲೆ ಕತ್ತರಿಸಿ ದುರ್ಯೋಧನನ ಮೇಲೆ ಹೋಗಿ ಬೀಳುವಂತೆ ಎಸೆದನು. ಜಟಾಸುರನ ಪುತ್ರನಾದ ಆಲಂಬ ರಾಕ್ಷಸನ ಪರಾಕ್ರಮ ಅಸಮಾನವಾದದ್ದು ಅಂತಹವನೇ ಸತ್ತನೆಂಬ ಭಯದಿಂದ ಕುರುವೀರರು ಭಯದಿಂದ ಹಿಂದೆಸರಿದರು. ಆಗ ಅಲಂಬನು ಸತ್ತನಂತರ ಅವನಿಗಿಂತಲೂ ಅಧಿಕ ಬಲಶಾಲಿ ಎನಿಸಿದ ಅಲಾಯುಧ ಎಂಬುವನು ಯುದ್ಧಕ್ಕೆ ಬಂದನು. ಘಟೋತ್ಕಚನ ಯುದ್ಧದ ರಭಸವನ್ನು ಯಾವ ವೀರರೂ ಸಹಿಸಲಾರದಾದರು. ಆಗ ಕರ್ಣಾ ಇನ್ನು ಸ್ವಲ್ಪ ಸಮಯ ಹೀಗೆ ಘಟೋತ್ಕಚ ಯುದ್ಧಮಾಡಿದರೆ ಒಬ್ಬರೂ ಉಳಿದಂತಾಗುತ್ತದೆ. ಆದ್ದರಿಂದ ಬೇಗ ನಿನ್ನ ಶಕ್ತ್ಯಾಯುಧವನ್ನು ಅವನ ಮೇಲೆ ಪ್ರಯೋಗಿಸಿ ಕೊಲ್ಲು. ಅರ್ಜುನನಿಗಾಗಿ ನೀನು ಮುಚ್ಚಿಟ್ಟಿರುವ ಶಕ್ತ್ಯಾಯುದವನ್ನು ಬೇಗ ಹೊರ ತೆಗೆ ಈಗ ನಾವು ಬದುಕಿದ್ದರಲ್ಲವೆ ಮುಂದೆ ಅರ್ಜುನನಿಂದ ಬರುವ ವಿಪತ್ತನ್ನು ಪರಿಹಾರಮಾಡುವದು? ಘಟೋತ್ಕಚನನಂತಹ ವೀರ ಸತ್ತರೆ ಅರ್ಜುನನನ್ನು ಕೊಲ್ಲುವುದು ಕಷ್ಟವಿಲ್ಲ. ಬೇಗನೆ ಘಟೋತ್ಕಚನನ್ನು ಕೊಲ್ಲು ಎಂದು ಎಲ್ಲರೂ ಹೇಳುತ್ತಿದ್ದಾಗ ಕರ್ಣನು ನಿರ್ಬಂಧದಿಂದ ಶಕ್ತ್ಯಾಯುದವನ್ನು ಘಟೋತ್ಕಚನಿಗೆ ಪ್ರಯೋಗ ಮಾಡಲೇಬೇಕಾಗಿ ಮಾಡಿದನು. ಆ ಆಯುಧವನ್ನು ಪ್ರಯೋಗಮಾಡಿದಾಗ ಸಕಲ ದಿಕ್ಕುಗಳಲ್ಲಿ ಜ್ವಾಜ್ವಲ್ಯಮಾನವಾಗಿ

ಜಲಿಸುತ್ತಾ ಉರಿನಾಲಿಗೆಯನ್ನು ಚಾಚಿಕೊಂಡು ನುಂಗಲು ಬರುತ್ತಿದ್ದೋ ಎನ್ನುವಂತೆ ಘಟೋತ್ಕಚನ ಬಳಿಗೆ ಬಂದು ಬಡಿಯಿತು. ಮುಗಿಲೆತ್ತರಕ್ಕೆ ಬೆಳೆದು ನಿಂತಿದ್ದ ಘಟೋತ್ಕಚನು ಸೇನಾನಿಕರದ ಮೇಲೆ ಉರುಳಿ ಬಿದ್ದಾಗ ಅವನ ಕೆಳಗೆ ಸಿಕ್ಕಿಬಿದ್ದ ಅನೇಕ ಸಹಸ್ರಾಕಾಲಾಳುಗು ಅಶ್ವಸೇನಿಗಳು ಗಜ ಸೇನೆಗಳೆಲ್ಲವೂ ಸತ್ತು ಹೋದವು. ಒಂದು ಅಕ್ಷೋಹಿಣಿ ಸೇನಾ ನಷ್ಟವಾದರೂ ಚಿಂತಿಯಿಲ್ಲ ಘಟೋತ್ಕಚನೆಂಬ ರಣಮಾರಿ ಸತ್ತಿದ್ದು ದೊಡ್ಡ ವಿಪತ್ತು ಪರಿಹಾರವಾದಂತಾಯಿತು ಎಂದು ಕುರುಪಕ್ಷ ನೆಮ್ಮದಿ ಹೊಂದಿದರು. ಆಗ ಕೇಶವನು ರಥವನ್ನು ನಿಲ್ಲಿಸಿ ಸಂತೋಷದಿಂದ ಪಾಂಚಜನ್ಯವನ್ನು ಊದಿ ಅರ್ಜುನನನ್ನು ಆಲಂಗಿಸಿಕೊಂಡನು. ಬಾರಿಬಾರಿಗೂ ಅರ್ಜುನನನ್ನು ಆಲಂಗಿಸಿಕೊಳ್ಳುತ್ತಾ ಆನಂದಪೂರ್ಣನಾದ ಹರಿ ಹೊಸ ಆನಂದ ಪ್ರಕಟಮಾಡುವುದನ್ನು ಕಂಡ ಅರ್ಜುನನು ಆಶ್ಚರ್ಯದಿಂದ ''ಕೃಷ್ಣಾ! ಘಟೋತ್ಕಚನ ಮರಣದಿಂದ ಮರುರಕ ಪಡದೆ ಸಂತೋಷಪಡುತಿರುವಿ ಏನಿದು ನಿನ್ನ ವಿಚಿತ್ರ ವ್ಯಾಪಾರ?'' ಎಂದನು.

ಆಗ ಕೃಷ್ಣನು ''ಅರ್ಜುನಾ! ಜೀವಿಯು ಸಾಯದೆ ಬದುಕಿದ್ದರೆ ಏನು ಬೇಕಾದರೂ ಸಾಧನೆ ಮಾಡಬಹುದು ಸತ್ತರೇನಿದೆ? ಘಟೋತ್ಕಜನಂತಹ ಶ್ರೇಷ್ಠ ಬಲಶಾಲಿಯನ್ನು ಕಳೆದುಕೊಂಡಿದ್ದು ನಷ್ಟವಲ್ಲವೇ? ಎಂದಾಗ ಕೃಷ್ಣನು ''ಅರ್ಜುನಾ! ಕರ್ಣನ ಶಕ್ತ್ಯಾಯುಧ ನಿನಗೆ ಮೃತ್ಯುವಾಗಿ ಕಾಯುತ್ತಿತ್ತು. ಅದು ತಪ್ಪಿತು. ನೀನು ಉಳಿದೆ. ಅದೇ ಅಪಾರ ಲಾಭ'' ಎಂದ ಕರುಣಾಳುವಿನ ಕೃಪೆಗೆ ಅರ್ಜುನ ಸಹಸ್ರ ಸಹಸ್ರ ವಂದನೆಗಳನ್ನರ್ಪಿಸಿ ಆನಂದಪಟ್ಟನು.

ಧರ್ಮರಾಜನು ಅಪಾರ ದು:ಖದಿಂದ ಘಟೋತ್ಕಚನನ್ನು ನೆನೆನೆನೆದು ಅಳುತ್ತಿದ್ದಾಗ ವೇದವ್ಯಾಸರು ಬಂದು ''ಧರ್ಮಜಾ! ದು:ಖಪಡಬೇಡ ತಮ್ಮ ಉಳಿದರೆ ಇನ್ನೊಬ್ಬ ಮಗನನ್ನು ಪಡೆಯುತ್ತಾನೆ ನೋಡುತ್ತಿ. ತಮ್ಮನೇ ಸತ್ತರೆ ಪೂರ್ಣನಷ್ಟವಲ್ಲವೇ? ಶಕ್ತ್ಯಾಯುಧದಿಂದ ಘಟೋತ್ಕಚ ಸಾಯದಿದ್ದರೆ ಅರ್ಜುನಾ ಸಾಯುತ್ತಿದ್ದ. ಅವನ ವಿಪತ್ತು ಪರಿಹಾರವಾಯಿತೆಂದೂ ಸಂತೋಷಪಡು'' ಎಂದು ಸಮಾಧಾನಪಡಿಸಿದರು.

ಹೀಗೆ ಶ್ರೀಕೃಷ್ಣನು ಪಾಂಡವರನ್ನು ಅನೇಕ ಬಗೆಯಲ್ಲಿ ಕಾಪಾಡುತ್ತಾ ದುಷ್ಟಸಂಹಾರ ಕಾರ್ಯವನ್ನು ನಡೆಸುತ್ತಿದ್ದ ಅವನ ಮಹಿಮಾ ಕಥೆ ಪೂರ್ಣವಾಗಿ ತಿಳಿಸಲು ಆಗದಿದ್ದರೂ ಶಕ್ತ್ಯಾನುಸಾರ ಸ್ವಾಮಿಯ ಅನುಗ್ರಹದಿಂದಲೇ ಹೊರಹೊಮ್ಮಿ ಬರುವ ಕಥಾವ್ರತಪಾನದಿಂದ ಆನಂದಪಡು'' ಎಂದು ಸಂತೋಷದಿಂದ ಮುಂದುವರಿಸಿದರು.

ಯುದ್ಧದ ಆಯಾಸದಿಂದ ಬಳಲಿ ಹೋಗಿದ್ದ ಸೈನಿಕರನ್ನು ನೋಡಿದ ಅರ್ಜುನ ''ಎಲ್ಲರೂ ಚಂದ್ರೋದಯದವರೆಗೂ ವಿಶ್ರಮಿಸಿಕೊಳ್ಳಿರಿ '' ಎಂದು ಹೇಳಲು ಎಲ್ಲಿದ್ದವರಲ್ಲೇ ವಿಶ್ರಾಂತಿ ತೆಗೆದುಕೊಂಡು ಆಯಾಸಪರಿಹಾರ ಮಾಡಿಕೊಂಡ ನಂತರ ಯುದ್ಧ

ಪ್ರಾರಂಭವಾಯಿತು.

ಸಾತ್ಯಕಿಯು ಭೂರಿ ಮತ್ತು ಸೋಮದತ್ತರೆಂಬ ವೀರರನ್ನು ಕೊಂದನೆಂಬ ಆಕ್ರೋಶದಿಂದ ಕೌರವಪಕ್ಷದ ಬಾಹ್ಲೀಕನು ಸಾತ್ಯಕಿಯನ್ನು ಎದುರಿಸಿ ಅವನ ರಥವನ್ನು ಮುರಿದು ಸಾರಥಿಯನ್ನು ಕೊಂದನು. ಬಾಹ್ಲೀಕನ ಮೇಲೆ ಭೀಮನು ನುಗ್ಗಿ ಬಂದು ಬಾಹ್ಲೀಕನನ್ನು ಗದೆಯಿಂದ ಹೊಡೆದಾಗ ಬಾಹ್ಲೀಕನು ಶತಘ್ನೀ ಎಂಬ ಶಸ್ತ್ರದಿಂದ ಭೀಮನ ಮೇಲೆ ಪ್ರಯೋಗ ಮಾಡಲು ಭೀಮನು ಮೂರ್ಛೆ ಬಿದ್ದನು. ಭೀಮನು ವಜ್ರಾಕಾಯನಾದ್ದರಿಂದ ಅವನಿಗೆ ಶಸ್ತ್ರಾಸ್ತ್ರಗಳು ಸ್ಪರ್ಶಮಾಡದಿದ್ದರೂ ಏಕೆ ಮೂರ್ಛೆ ಬಿದ್ದನೆಂದರೆ ಬಾಹ್ಲೀಕನು ಹಿಂದೊಮ್ಮೆ ಭೀಮನನ್ನು ಕುರಿತು ಭೀಮಸೇನಾ! ನಾನು ನಿಮ್ಮ ಕುಲದ ಮೂಲಪುರುಷನಾಗಿದ್ದೇನೆ. ನನಗೆ ವೈಷ್ಣವೋತ್ತಮನಾದ ನಿನ್ನಿಂದ ಮರಣ ಸಂಭವವಾಗುವಂತೆ ಅನುಗ್ರಹಮಾಡು'' ಎಂದು ಕೇಳಿಕೊಂಡನು. ಆ ಮಾತಿಗೆ ಭೀಮನು ಬಾಹ್ಲೀಕಾ! ನಾನು ಕಾರಣವಿಲ್ಲದೆ ಯಾರನ್ನೂ ಕೊಲ್ಲತಕ್ಕವನಲ್ಲ. ನಿನ್ನಿಂದ ನನಗೆ ಏನಾದರೂ ತೊಂದರೆ ಆದರೆ ಕೊಲ್ಲಬಹುದು ಎಂದನು. ಅದರಂತೆ ಬಾಹ್ಲೀಕನು ಭೀಮನ ಶತ್ರುಪಕ್ಷದಲ್ಲಿ ನಿಂತು ಭೀಮನಿಗೆ ಶತಘ್ನಿ ಎಂಬ ಶಸ್ತ್ರದಿಂದ ಹೊಡೆದಾಗ ಭೀಮನು ಕೊಟ್ಟಮಾತಿನಂತೆ ಮೂರ್ಛೆಬಿದ್ದ ಕ್ಷಣಹೊತ್ತಿನಲ್ಲಿ ಎದ್ದು ಬಾಹ್ಲೀಕನನ್ನು ಕೊಂದು ಅವನ ಇಷ್ಟವನ್ನು ಈಡೇರಿಸಿದನು.

ದ್ರೋಣರು ತರುಣ ವೀರನಂತೆ ಸೇನಾಸಾಗರದಲ್ಲಿನುಗ್ಗಿ ಅನೇಕ ವೀರರನ್ನು ಅನಾಯಾಸವಾಗಿ ಕೊಲ್ಲುತ್ತಿದ್ದರು. ದೃಷ್ಟದ್ಯುಮ್ನನನ್ನು ಕೊಲ್ಲುವ ಸನ್ನಾಹದಿಂದಿರುವುದನ್ನು ತಿಳಿದು ಭೀಮಸೇನನು ಅವನ ರಕ್ಷಣಾಭಾರವನ್ನು ವಹಿಸಿ ಎಚ್ಚರದಿಂದ ಕಾಯುತ್ತಿದ್ದನು.

ದ್ರೋಣರು ಅಶ್ವತ್ಥಾಮನೊಡಗೂಡಿ ಘೋರಕಾಳಗ ನಡೆಸುತ್ತಾ ಪಾಂಚಾಲರನ್ನು-ಪುರಜಿತರಾಜನನ್ನು -ಕುಂತೀಬೋಜಾದಿ ಪ್ರಸಿದ್ಧ ವೀರರನ್ನು ಕೊಂದನು.

ಭೀಮನು ವೀರರಾಜನಾದ ಮಾಳವ ದೇಶದರಸನ ಅಶ್ವತ್ಥಾಮ ಎಂಬ ಆನೆಯನ್ನುಕೊಂದನು. ಅನೇಕ ಸಂಖ್ಯೆಯ ಪರ್ವತಾಕಾರದ ಆನೆಗಳ ಸಮೂಹವನ್ನು ಭೀಮನು ಕೊಂದು ರಾಶಿ ಒಟ್ಟಿದ್ದನು. ದ್ರೋಣರು ಕುಪಿತರಾಗಿ ಕ್ರೂರತನದಿಂದ ಅನೇಕ ವೀರ ಪಡೆಯನ್ನು ನಾಶಪಡಿಸುವುದನ್ನು ಕಂಡು ಕೃಷ್ಣನು ಧರ್ಮರಾಜನನ್ನು ಕುರಿತು ಧರ್ಮರಾಜಾ! ದ್ರೋಣರು ಈಗಾಗಲೇ ಅನೇಕರನ್ನು ಕೊಂದು ಸೈನ್ಯವನ್ನು ಬತ್ತಿಸಿದ್ದಾರೆ. ಇನ್ನೂ ಆವರ ಪರಾಕ್ರಮ ಉಕ್ಕುತ್ತಲೇ ಇರುವುದರಿಂದ ಅಪಾಯ ಸಂಭವವಿದೆ. ಆದ್ದರಿಂದ ಅವರ ಪ್ರತಿಜ್ಞೆಯಂತೆ ಈಗ ಶಸ್ತ್ರಸನ್ಯಾಸ ತೆಗೆದುಕೊಂಡು ಯೋಗಾಸಕ್ತರಾಗುವಂತೆ ಮಾಡಬೇಕು. ಹೇಗೆಂದರೆ ಅವರು ಅಶ್ವತ್ಥಾಮ ಸತ್ತನೆಂಬ ವಾರ್ತೆ ತಿಳಿದಾಕ್ಷಣದಲ್ಲೇ ಯುದ್ಧ ನಿಲ್ಲಿಸುತ್ತೇನೆಂದು ಪ್ರತಿಜ್ಞೆ ಮಾಡಿರುವುದರಿಂದ ನೀನೀಗ ಅಶ್ವತ್ಥಾಮ ಸತ್ತನೆಂದು ಹೇಳಬೇಕು ಎಂದನು. ಧರ್ಮರಾಜನು ಸಾಕ್ಷಾತ್ತಾಗಿ ಶ್ರೀ ಕೃಷ್ಣನೇ ಹೇಳುತ್ತಿದ್ದರೂ ಸುಳ್ಳು ಹೇಳುವುದಕ್ಕೆ ಒಪ್ಪದೆ

ಅನುಮಾನಿಸಿದಾಗ ''ಧರ್ಮರಾಯ! ಅಶ್ವತ್ಥಾಮನೆಂಬ ಆನೆ ಸತ್ತಿದೆ ಎಂದು ಹೇಳು, ಅದು ಸುಳ್ಳಲ್ಲವಷ್ಟೇ?'' ಎಂದನು.

ಧರ್ಮರಾಜನು ಅಶ್ವತ್ಥಾಮಾ ಹತಃ ಎಂದು ಹೇಳಿದಾಗ ಆನೆ ಎಂಬ ಮಾತು ಕೇಳದಂತೆ ಗಟ್ಟಿಯಾಗಿ ಶಂಖನಾದ ಮಾಡಿದನು. ಆಗ ದ್ರೋಣರು ಯುದ್ಧವನ್ನು ನಿಲ್ಲಿಸಿದಾಗ ದ್ರೋಣರಿಗೆ ಭೀಮನು ' ದ್ರೋಣರೇ! ನೀವು ಶಾಸ್ತ್ರಜ್ಞರಾದ ನಿಷ್ಠಾವಂತ ಬ್ರಾಹ್ಮಣರಾದಾಗ್ಯೂ ಕ್ಷತ್ರಿಯಧರ್ಮವನ್ನುವಲಂಬಿಸಿ ಅನೇಕರನ್ನು ಕೊಂದಿದ್ದೀರಿ ಆದ್ದರಿಂದಲೇ ನಿಮಗೆ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ. ಸ್ವಾಮಿ ಕೊಟ್ಟಿದ್ದಾನೆ' ಎಂದನು. ದೇವತೆಗಳೆಲ್ಲರೂ ಆಗ ''ದ್ರೋಣರೇ ನಿಮ್ಮ ಅವತಾರದ ಕಾರ್ಯಸಾಧನೆ ಮುಗಿಯಿತು. ಇನ್ನು ಶ್ರೀಕೃಷ್ಣನಾಜ್ಞೆಯಂತೆ ನಿಮ್ಮ ಮೂಲಸ್ಥಾನವನ್ನು ಸೇರಿರಿ'' ಎಂದೂ ಹೇಳಲು ದ್ರೋಣರು ವಿಮಾನದಲ್ಲಿ ಕುಳಿತು ಹೊರಟಾಗ ಶ್ರೀಕೃಷ್ಣನು ಪಾಂಡವರಿಗೆ ಅಲ್ಲಿ ನೋಡಿರಿ ದ್ರೋಣರು ತಮ್ಮ ಭೌತಿಕ ದೇಹವನ್ನು ಬಿಟ್ಟು ಮೂಲರೂಪ ಸೇರಲು ಹೊರಟಿದ್ದಾರೆ ಎಂದು ತೋರಿಸುತ್ತಿದ್ದರೆ ಧೃಷ್ಟದ್ಯುಮ್ನನು ದ್ರೋಣನು ನನ್ನ ತಂದೆಯನ್ನು ಕೊಂದಿದ್ದಾನೆ ಎಂಬ ಆಕ್ರೋಶದಿಂದ ಅವರ ದೇಹ ಬಿದ್ದಲ್ಲಿಗೆ ಓಡಿ ಬಂದು ಶಿರಚ್ಛೇದನ ಮಾಡಿದನು.

ಆಗ ಅರ್ಜುನನು ದೃಷ್ಟದ್ಯುಮ್ನನನ್ನು ದೂಶಿಸಿ ''ಎಲಾ! ಹೆಣವನ್ನು ಹೊಡೆದವನು ಹೇಡಿ ಎನಿಸಿಕೊಳ್ಳುವವನು ಎಂದನು. ಧೃಷ್ಟದ್ಯುಮ್ನನು ''ನೀನು ಭೂರಿಶ್ರವನನ್ನೂ ಕೊಂದಿದ್ದು ಧರ್ಮವಾ!'' ಎಂದು ವಾದಿಸಿದಾಗ ಅರ್ಜುನನು ಸ್ವಾಮಿಯ ಆಜ್ಞೆಗೆ ಕುಂದು ಬಗೆದ ಈ ಪಾಪಿಯನ್ನು ಉಳಿಸಬಾರದೆಂದು ಖಡ್ಗವನ್ನು ಎತ್ತಿದಾಗ ಮಧ್ಯದಲ್ಲಿ ಕೃಷ್ಣನು ಬಂದು ಆವರಿಬ್ಬರ ಜಗಳವನ್ನೂ ನಿವಾರಿಸಿದನು.

ದ್ರೋಣರು ಮರಣ ಹೊಂದಿದಾಗ ಅಶ್ವತ್ಥಾಮನು ಬಹುದೂರ ಯುದ್ಧಮಾಡುತ್ತಿದ್ದ ಕಾರಣ ತಂದೆಯ ಮರಣ ವಾರ್ತೆ ತಿಳಿದಿರಲಿಲ್ಲ. ಪಾಂಡವರು ಗುರುಗಳನ್ನೂ ಬಿಡದೆ ಕೊಂದು ಶತ್ರುತ್ವವನ್ನು ಸಾದಿಸಿದ್ದಾರೆ ಎಂಬ ಕೋಪದಿಂದ ನಾರಾಯಣಾಸ್ತ್ರವನ್ನು ಆಭಿಮಂತ್ರಿಸಿ ಪಾಂಡವರ ಸೈನ್ಯದ ಮೇಲೆ ಪ್ರಯೋಗಿಸಿದನು. ಸೈನಿಕರು ಪ್ರಾಣಭಯದಿಂದ ಓಡುತ್ತಿದ್ದರೆ ಕೃಷ್ಣನು ಯಾರೂ ಓಡಬೇಡಿರಿ ನಿಮಗೆ ಬದುಕಬೇಕೆಂಬ ಆಸೆ ಇದ್ದರೆ ಆಯುಧಗಳನ್ನು ಕೆಳಗಿರಿಸಿ ಅಸ್ತ್ರಕ್ಕೆ ನಮಸ್ಕಾರಮಾಡಿರಿ ಎಂದು ಹೇಳಿದನು. ಆಗ ಅದೇ ರೀತಿ ಎಲ್ಲರೂ ಆಯುಧಗಳನ್ನು ಕೆಳಗಿರಿಸಿ ತಲೆಯೂರಿ ನಮಸ್ಕಾರಮಾಡಿದಾಗ ಯಾರಿಗೂ ಏನೂ ಅಪಾಯ ಸಂಭವಿಸದೆ ಸಂತೋಷದಿಂದಿದ್ದರು.

ಭೀಮಸೇನನು ಅಸ್ತ್ರಕ್ಕೆ ನಮಸ್ಕಾರಮಾಡಲಿಲ್ಲ. ಶ್ರೀಕೃಷ್ಣನ ಆಜ್ಞೆ ಮೀರಿದಂತಾಗುವುದಿಲ್ಲ ಕಾಮ್ಯಕರ್ಮಮಾಡಬಾರದೆಂದು ಅವನೇ ಉಪದೇಶ ಮಾಡಿದ್ದಾನೆ. ನಾರಾಯಣಾಸ್ತ್ರ ನಮಸ್ಕಾರಕ್ಕೆ ಅರ್ಹವಾದರೂ ಅದನ್ನು ವೈರಿ ಪ್ರಯೋಗಮಾಡಿರುವುದರಿಂದ ಬದುಕಬೇಕೆಂಬ

ಅಪೇಕ್ಷೆಯಿಂದ ನಮಸ್ಕಾರ ಮಾಡಿದಂತಾಗುತ್ತದೆ. ಅಸ್ತ್ರಾಭಿಮಾನಿದೇವತೆ-ವಾಯುದೇವರಿದ್ದಾರೆ ಅವರು ಅಸ್ತ್ರದಲ್ಲಿ ನಾರಾಯಣ ಸ್ವರೂಪದಲ್ಲಿರುವುದರಿಂದ ನಾರಾಯಣನಿಗೆ ಅನುಸಂಧಾನಪೂರ್ವಕ ನಮಸ್ಕಾರಮಾಡಿರಿ ಸರ್ವೋತ್ತಮನ ರಕ್ಷಣೆ ಸಿಗುತ್ತದೆ ಎಂದು ಹೇಳುತ್ತಿದ್ದನು.

ಭೀಮನು ನಾರಾಯಣಾಸ್ತ್ರದಿಂದ ಉರಿಯುತ್ತಿದ್ದರೂ ಕಾಮ್ಯಕರ್ಮ ನಿಶಿದ್ದವೆಂದು ನಮಸ್ಕಾರಮಾಡದಿರಲು ಅರ್ಜುನನು ಅದನ್ನು ವಾರುಣಾಸ್ತ್ರದಿಂದ ಆರಿಸಲು ಪ್ರಯತ್ನಪಟ್ಟರೂ ಆರಲಿಲ್ಲ. ಅರ್ಜುನನಿಗೆ ನಾರಾಯಣಾಸ್ತ್ರ ಶಾಂತವಾಗಿತ್ತು. ಏಕೆಂದರೆ ಅವನು ಶ್ರೀಕೃಷ್ಣನ ಸಾನಿಧ್ಯದಲ್ಲಿದ್ದನಾದ್ದರಿಂದ ಅಸ್ತ್ರದಂಜಿಕೆ ಒದಗಲಿಲ್ಲ. ಅರ್ಜುನನು ''ಕೃಷ್ಣಾ! ಭೀಮನು ಅಸ್ತ್ರದಿಂದ ಸುಡುತ್ತಾನೆ ಅವನನ್ನು ರಕ್ಷಿಸು ಎಂದು ಕೇಳಿಕೊಂಡನು. ಆಗ ಕೃಷ್ಣನು ''ಅರ್ಜುನಾ ಈಗ ನಾರಾಯಣಾಸ್ತ್ರವೂ ವ್ಯರ್ಥವಾಗಬಾರದು. ಭೀಮನೂ ಸಾಯಬಾರದು ಎಂದು ಹೇಳಿ ಅರ್ಜುನನೊಡನೆ ಉರಿಯುತ್ತಿದ್ದ ಭೀಮಸೇನನ ರಥದೊಳಗೆ ಕೃಷ್ಣ ಹಾರಿದನು. ನಂತರ ಭೀಮಸೇನನನ್ನು ರಟ್ಟೆಹಿಡಿದು ಕೆಳಗಿಳಿಸಿ ಆಯುಧಗಳನ್ನು ಕಸಿದುಕೊಂಡನು. ಭೀಮನು ನಿರಸ್ತ್ರನಾದ ನಂತರ ನಾರಾಯಣಾಸ್ತ್ರ ಶಾಂತವಾಯಿತು. ಹೀಗೆ ಶ್ರೀಕೃಷ್ಣನು ಪಾಂಡವರ ಸಕಲಸಂಕಟಗಳನ್ನೂ ನಿವಾರಣೆ ಮಾಡುತ್ತಾ ರಕ್ಷಿಸುತ್ತಿರಲು , ದುರ್ಯೋಧನನು ''ಅಶ್ವತ್ಥಾಮಾ! ನಾರಾಯಣಾಸ್ತ್ರವನ್ನು ಇನ್ನೊಮ್ಮೆ ಬಿಟ್ಟು ಭೀಮಾರ್ಜುನರನ್ನು ಕೊಲ್ಲು ಎಂದು ಹೇಳಿಕೊಂಡನು. ಅಶ್ವತ್ಥಾಮನು ''ದುರ್ಯೋಧನಾ! ನಾರಾಯಣಾಸ್ತ್ರದ ಅಭಿಮಾನ ದೇವತೆಗಳಾದ ವಾಯುದೇವರು ಮತ್ತು ನಾರಾಯಣ ಇಬ್ಬರೂ ಅಸ್ತ್ರದಿಂದ ಹೊರಬಂದು ತಮ್ಮ ಮೂಲಸ್ಥಾನ ಸೇರಿದರು. ಈಗ ನಾರಾಯಣಾಸ್ತ್ರದಲ್ಲಿ ವೀರ್ಯವಿಲ್ಲ, ನಿಸ್ಸತ್ವದ ಜಡ ವಸ್ತುವಾಯಿತು.'' ಎಂದು ತಿಳಿಸಿದನು. ಅಶ್ವತ್ಥಾಮನು ತನ್ನ ತಂದೆಯನ್ನು ಕೊಂದ ವೈರಿಗಳಾದ ಭೀಮಾರ್ಜುನರನ್ನು ಕೊಂದು ಸೇಡು ತೀರಿಸಿಕೊಳ್ಳಬೇಕೆಂದು ಎಷ್ಟು ಪ್ರಯತ್ನ ಪಟ್ಟರೂ ಆಗದಿರಲು ಬಹಳ ದುಃಖಗೊಂಡು ಶಸ್ತ್ರತ್ಯಾಗಮಾಡಿ ಕೃಷ್ಣಾರ್ಜುನರಮುಂದೆ ಮುಖ ತೋರಿಸಲಾರದೆ ಓಡಿಹೋಗುವಾಗ ವೇದವ್ಯಾಸರು ಆಚಾರ್ಯರ ಕಣ್ಮುಂದೆ ನಿಂತು ''ಅಶ್ವತ್ಥಾಮಾ! ನೀನು ಸಾಕ್ಷಾತ್ತಾಗಿ ರುದ್ರದೇವನ ಅವತಾರ ಭೂತನಾಗಿ ಬಂದು ದೇವತಾಕಾರ್ಯವನ್ನು ಪೂರ್ಣಗೊಳಿಸದಲೇ ಹೊರಟುಹೋದರೆ ಏನು ಪ್ರಯೋಜನಾ'' ಎಂದರು. ಅಶ್ವತ್ಥಾಮನು ವೇದವ್ಯಾಸರಿಗೆ ನಮಸ್ಕಾರಮಾಡಿ ''ಸ್ವಾಮೀ! ನಿನ್ನ ಮಾಯೆ ನನ್ನನ್ನು ಬಂಧನಗೊಳಿಸಿದೆ ತಂದೆಸತ್ತನೆಂಬ ದುಃಖ ಆವರಿಸಿ ಮನಸ್ಸು ದುರ್ಬಲವಾಗಿದೆ ಇಂದು ಯುದ್ದವನ್ನು ಮಾಡುವುದಿಲ್ಲ'' ಎಂದು ಹೇಳಿ ಶ್ರೀವೇದವ್ಯಾಸರ ಅಪ್ಪಣೆಪಡೆದು ಶಿಬಿರಕ್ಕೆ ಹೊರಟುಹೋದರು.

ದ್ರೋಣರ ಅವಸಾನದಿಂದ ಅಂದಿನಯುದ್ದ ಅಲ್ಲಿಗೆ ಸಮಾಪ್ತವಾಗಿ ಎಲ್ಲರೂ ಶಿಬಿರಕ್ಕೆ ಹೊರಟುಹೋದರು. ಪಾಂಡವರು ಶ್ರೀಕೃಷ್ಣನ ಕೃಪಾಬಲದಿಂದ ತಾವು ಜಯಶೀಲರಾದವೆಂಬ

ಸಂತೋಷದಿಂದ ಶಿಬಿರಕ್ಕೆ ತೆರಳಿದರು. ಜನಮೇಜಯಾ ಶ್ರೀಕೃಷ್ಣನು ಲೋಕ ಕಲ್ಯಾಣಕ್ಕಾಗಿ ನಡೆಸಿದ ಕುರುಕ್ಷೇತ್ರದ ಕದನದ ಕಥಾಶ್ರವಣದಿಂದ ಇಷ್ಟಪ್ರಾಪ್ತಿಯಾಗಿ ಅನಿಷ್ಟನಿವಾರಣೆ ಆಗುತ್ತದೆ '' ಎಂದು ಸಂತೋಷದಿಂದ ತಿಳಿಸುತ್ತ ಮುಂದಿನ ದಿನದ ಯುದ್ಧದ ವೃತ್ತಾಂತ ತಿಳಿಸಿದರು.

## ಕರ್ಣ ದಳನಾಯಕನಾದನು

ದ್ರೋಣರೂ ಕಣ್ಮರೆಯಾದರು ಮುಂದಿನ ಸರದಿ ಯಾರದು? ಎಂಬ ಚಿಂತೆಯಿಂದ ದುರ್ಯೋಧನನು ಸಭೆಸೇರಿಸಿ ಆಲೋಚನೆಮಾಡಿದಾಗ ಅಶ್ವತ್ಥಾಮಾದಿ ಮಹಾರಥಿಕರ ಸಲಹೆಯಂತೆ ಕರ್ಣನಿಗೆ ಸೇನಾದಿಪತಿ ಪಟ್ಟಗಟ್ಟಿದರು. ಕರ್ಣನು ಪರಶುರಾಮರಿಂದ ಲಭ್ಯವಾದ ದಿವ್ಯರಥವೇರಿ ಸೂರ್ಯನಂತೆ ಪರಾಕ್ರಮ ಪ್ರಕಾಶವನ್ನು ಬೆಳಗುತ್ತ ರಣದುತ್ಸಾಹದಿಂದ ಹೊರಟನು. ರಣಕ್ಷೇತ್ರದಲ್ಲಿ ಭೀಮನು ಕುರುಪಕ್ಷದ ಅನೇಕ ಪ್ರಮುಖ ವೀರರನ್ನು ಭೀಮಸೇನನು ಕೊಲ್ಲುತ್ತಲಿದ್ದಾಗ ಅಶ್ವತ್ಥಾಮನು ಆವೇಶದಿಂದ ಬಂದು ಭೀಮಸೇನನೊಡನೆ ಯುದ್ದಕ್ಕೆ ತೊಡಗಿದನು. ಅಶ್ವತ್ಥಾಮ ಅನಿಲಜರಿಬ್ಬರ ಘೋರ ಯುದ್ಧವನ್ನು ನೋಡಿದ ದೇವತೆಗಳು ನಡುಗಿದರು.

ಎರಡುಕಡೆಯ ಸಕಲವೀರರೂ ಹೆದರಿ ದೂರಸರಿದು ಬೆರಗಾಗಿ ನೋಡುತ್ತಿದ್ದರು. ಯಾರೂ ಅವರಿಬ್ಬರ ಮಧ್ಯ ಪ್ರವೇಶ ಮಾಡಲಿಲ್ಲ. ಸ್ವಲ್ಪ ಹೊತ್ತು ಭೀಮನು ಅಶ್ವತ್ಥಾಮನೊಡನೆ ಹೋರಾಡಿ ನಂತರ ಅಶ್ವತ್ಥಾಮನ ಬಲವನ್ನು ಬತ್ತಿಸಿ ಹೊಡೆದೋಡಿಸಿದನು. ಅಶ್ವತ್ಥಾಮನು ಭೀಮನ ಏಟಿಗಂಜಿ ಬೆನ್ನುಕೊಟ್ಟು ಓಡುವಾಗ ಭೀಮನು ಮಾಡಿದ ಸಿಂಹನಾದಕ್ಕೆ ಆನೆಗಳ ಕುಂಭಸ್ಥಳ ಸೀಳಿದವು. ದಿಕ್ಕುಗಳು ಪ್ರತಿಧ್ವನಿ ಕೊಡುತ್ತಿದ್ದವು. ಕೌರವಸೇನೆ ಆಗ ನುಗ್ಗಿಬಂದು ಭೀಮನ ಮೇಲೆ ಘೋರಾಯಿಸುವಾಗ ಸಾತ್ಯಕಿ , ನಕುಲ-ಧರ್ಮರಾಯಾದಿಗಳು ಅನೇಕ ಶತೃಸಮೂಹವನ್ನು ಕೊಲ್ಲುತ್ತಿದ್ದರು.

ಕರ್ಣಾರ್ಜುನರಿಗೆ ನಂತರ ಘೋರ ಯುದ್ದ ಸಂಭವಿಸಿತು. ಆಗ ಕರ್ಣನಿಂದ ಪಾಂಡವ ಪಕ್ಷದ ಅಸಂಖ್ಯಾತ ಸೈನ್ಯ ನಾಶ ಹೊಂದಿತು. ಅರ್ಜುನನು ಕರ್ಣನ ಬಾಹುವಿಕ್ರಮವನ್ನು ತಿಳಿದು ಕರ್ಣನ ಮೇಲೆ ತೀಕ್ಷ್ಣಬಾಣಗಳನ್ನು ಪ್ರಯೋಗಿಸಿ ಅವನ ರಥವನ್ನು ಮುರಿದು ಹಾಕಿದನು. ಕರ್ಣನ ಪಕ್ಷದ ವೀರಸೈನಿಕರನೇಕರು ಮಡಿದು ಮರೆಯಾಗಲು ಕರ್ಣನು ಯುದ್ಧವನ್ನು ನಿಲ್ಲಿಸಿ ಶಿಬಿರದ ಕಡೆ ಹೊರಟುಹೋದನು.

ಸೇನಾದಳವನ್ನು ಕಳೆದುಕೊಂಡು ರಥವೂ ಇಲ್ಲದೆ ದೇಹವೆಲ್ಲಾ ಛಿದ್ರವಾಗಿರುವ ದುರವಸ್ಥೆಯಲ್ಲಿ ಕರ್ಣನು ಶಿಬಿರಕ್ಕೆ ಬಂದಿರುವುದನ್ನು ನೋಡಿದ ದುರ್ಯೋಧನನು ಕರ್ಣನನ್ನು ತಿರಸ್ಕಾರದಿಂದ ನೋಡುತ್ತ ಕರ್ಣ ನೀನು ಮಹಾಶೂರನೆಂದು ಸೇನಾಧಿಪತ್ಯದ ಪದವಿ

ಕೊಟ್ಟಿದ್ದಕ್ಕೆ ಅರ್ಜುನನ ಕೈಲಿ ನಮ್ಮ ಪಕ್ಷದ ವೀರರೆಲ್ಲರನ್ನು ಕೊಲ್ಲಿಸಿ ಸೋಲು ಮುಖದಿಂದ ಬಂದು ನನ್ನ ಉತ್ಸಾಹವನ್ನು ಕುಗ್ಗಿಸಿರುವಿ ''ಎಂದು ಮಾತನಾಡಿದಾಗ ಕರ್ಣನು ಬಹಳ ವ್ಯಥೆಪಟ್ಟನು. ಕರ್ಣನಿಗೆ ದುರ್ಯೋಧನನ ತಿರಸ್ಕಾರದ ಮಾತಿನಿಂದ ವ್ಯಥೆ ಆಗಲಿಲ್ಲ ತನ್ನ ಮಿತ್ರನಿಗೆ ಸಂತೋಷಪಡಿಸುವ ಭಾಗ್ಯ ಇಲ್ಲವಾಯಿತಲ್ಲಾ ಎಂದು ದುಃಖದಿಂದ ದುರ್ಯೋಧನಾ! ನೀನು ಸದಾ ಉತ್ಸಾಹದಿಂದ ಸಂತೋಷವಾಗಿರಬೇಕೆಂಬುದೇ ನನ್ನ ಆಸೆ ಅದಕ್ಕಾಗಿ ನಾನು ಎಲ್ಲವನ್ನು ತ್ಯಾಗಮಾಡಲು ಸಿದ್ಧನಿದ್ದೇನೆ ನನ್ನ ಪರಾಕ್ರಮ ನಿನಗೆ ಸಂತೋಷವುಂಟು ಮಾಡಲಿಕ್ಕಾಗಿಯೇ ಮೀಸಲಾಗಿದೆ. ಪರಶುರಾಮರ ದಿವ್ಯ ಆಯುಧಗಳು ನನ್ನ ಬಳಿ ಇರುವಾಗ ನಿರುತ್ಸಾಹವೇಕೆ? ಅರ್ಜುನನು ನನಗಿಂತಲೂ ಶೂರನಲ್ಲ. ಅವನ ಸಾರಥಿಯಿಂದ ಅವನಿಗೆ ಸಮರ ರಸ ಅಧಿಕ ರೀತಿಯಲ್ಲಿ ಮೈಗೂಡಿ ಬಂದು ಅವನನ್ನು ಮೆರೆಸುತ್ತಲಿದೆ. ನನಗೆ ಪರಶುರಾಮರಿಂದ ಲಭ್ಯವಾದ ರಥ, ಧನಸ್ಸು ಅವರಿಂದ ಪಡೆದುಕೊಂಡ ಬಿಲ್ಲು ವಿದ್ಯಾಸಂಪತ್ತು ಎಲ್ಲವೂ ನನ್ನಲ್ಲಿ ತುಂಬಿದ್ದರೂ ಸರಿಯಾದ ಸಾರಥಿ ಇಲ್ಲದಿರುವುದರಿಂದ ಅರ್ಜುನನು ಪೌರುಷದಿಂದ ಮೆರೆಯುತ್ತಿದ್ದಾನೆ ನನಗೆ ಸಮಾನನಾದ ಒಬ್ಬ ಸಾರಥಿಯನ್ನು ಕೊಟ್ಟು ಆಗ ನನ್ನ ಕೆಚ್ಚೆದೆಯ ಕಲಿ ಸಾಹಸವನ್ನು ನೋಡಿ ಸಂತೋಷಪಡು'' ಎಂದನು. ''ನಿನಗೆ ಮೆಚ್ಚಿಗೆಯಾದ ಸಾರಥಿ ಯಾರು? ಎಂದು ದುರ್ಯೋಧನನು ಕೇಳಿದಾಗ ಶಲ್ಯನು ಸಾರಥಿ ಆದರೆ ಅರ್ಜುನನ ಸೊಕ್ಕು ಅರೆ ಕ್ಷಣದಲ್ಲಿ ಮುರಿಯುತ್ತೇನೆ'' ಎಂದನು.

ದುರ್ಯೋಧನನು ಜಯದಭಿಲಾಷೆಯಿಂದ ಶಲ್ಯನನ್ನು ಸಮೀಪಿಸಿ ಸವಿಮಾತಿನಿಂದ ಮೊದಲು ಅವನನ್ನು ಸಂತೋಷಪಡಿಸಿದ ನಂತರ ನೀನು ಬಹಳ ಸಮರ್ಥನೆಂದೂ, ಪೂಜ್ಯನೆಂದೂ ತಿಳಿದೇ ನಾನು ನಿನಗೆ ಯೋಗ್ಯ ಸತ್ಕಾರ ಸಂಭ್ರಮಗಳನ್ನು ಮಾಡಿ ನಿನ್ನ ದಯೆ ನನಗೆ ಲಭಿಸುವಂತೆ ಮಾಡಿಕೊಂಡೆನು. ಈಗ ನಿನ್ನಿಂದ ನನಗೊಂದು ದೊಡ್ಡ ಉಪಕಾರವಾಗಬೇಕಾಗಿದೆ ಅದನ್ನು ನೆರವೇರಿಸಿಕೊಟ್ಟು ಕಾಪಾಡಬೇಕೆಂದು ಪ್ರಾರ್ಥಿಸಲು ಬಂದಿದ್ದೇನೆ ಎಂದು ಹೇಳಿ ಅವನಿಂದ ಮಾತು ತೆಗೆದುಕೊಂಡ ನಂತರ ''ಶಲ್ಯಾ! ನೀನು ಯುದ್ಧದಲ್ಲಿ ಎಷ್ಟು ಪರಾಕ್ರಮಶಾಲಿ ಯಾಗಿರುವೆಯೋ ಅಷ್ಟೆ ಸಾರಥಿತಾನದಲ್ಲೂ ಆಗಿರುವುದರಿಂದ ಈಗ ನಮಗೆ ದಳಪತಿಯಾಗಿರುವ ಕರ್ಣ ನಿನ್ನ ಸಾರಥಿತನವನ್ನು ಅಪೇಕ್ಷೆ ಪಡುತ್ತಿದ್ದಾನೆ. ಹಿರಿಯನೂ, ಶ್ರೇಷ್ಠನೂ ಆದ ನೀನು ಅವನ ರಥದಮುಂದೆ ಕುಳಿತು ಮಾರ್ಗದರ್ಶನ ನೀಡಿದರೆ ಜಯ ನನ್ನನ್ನು ಹಿಂಬಾಲಿಸಿ ಬರುತ್ತದೆಂದು ಹೇಳುತ್ತಲಿದ್ದಾನೆ ಅದಕ್ಕಾಗಿ ಬಂದಿದ್ದೇನೆ ಸಹಾಯ ಮಾಡು'' ಎಂದು ನಮ್ರನಾಗಿ ಕೇಳಿಕೊಂಡನು.

ಶಲ್ಯನು ಕೋಪವಶನಾಗಿ ''ಎಲಾ ಕೌರವ! ಅಂದು ಮೋಸದಿಂದ ಮರೆಯಲ್ಲಿ ನಿನ್ನ ಚಾತುರ್ಯದಿಂದ ನನ್ನನ್ನು ನಿನ್ನ ಕಡೆಗೆ ಸೆಳೆದುಕೊಂಡೆ. ಈಗ ಹೀನನಾದ ಸೂತಪುತ್ರನಿಗೆ ಸಾರಥಿ ಆಗು ಎಂದು ಹೇಳುತ್ತಿರುವಿ. ನಿನಗೆ ಪ್ರಾಣದ ಮೇಲೆ ಆಸೆ ಇದ್ದರೆ ಇಲ್ಲಿ

ನಿಲ್ಲದೆ ಹೊರಟುಹೋಗು'' ಎಂದು ಗುಡುಗಿದಾಗಲೂ ದುರ್ಯೋಧನನು ತಾಳ್ಮೆತಪ್ಪದೆ ಅವನಿಗೆ ನಮಸ್ಕಾರಮಾಡಿ ಶಲ್ಯಾ ನಿನ್ನನ್ನು ಹೀನಾಯಪಡಿಸಲು ನಾನು ಬಂದಿಲ್ಲ ನನ್ನ ಭಾಗದ ದೇವರೆಂಬ ಭಾವನೆಯಿಂದ ಸಹಾಯಕೇಳಲು ಬಂದಿದ್ದೇನೆ. ಸಾರಥಿತನವೆಂದರೆ ದೊಡ್ಡ ಜವಾಬ್ದಾರಿಯ ಕಾರ್ಯ ಪಾಂಡವರನ್ನು ಗೆಲ್ಲಬೇಕಾದರೆ ನನ್ನ ಹನ್ನೊಂದು ಅಕ್ಷೋಹಿಣೀ ಸೈನ್ಯಕ್ಕಿಂತಲೂ ನಿನ್ನ ಸಾರಥ್ಯವೇ ಅಧಿಕವೆಂಬ ಭಾವನಿಯಿಂದ ಬಂದಿದ್ದೇನೆ.

ಕೃಷ್ಣ ಸಾರಥಿ ಆಗಿರುವುದರಿಂದಲೇ ಅರ್ಜುನನ ಸಾಹಸ ಉಕ್ಕೇರುತ್ತದೆ. ರುದ್ರದೇವನನ್ನು ಸಂತೋಷಪಡಿಸಲು ಅವನಿಗಿಂತಲೂ ಶ್ರೇಷ್ಟನಾದ ಬ್ರಹ್ಮನೇ ಸಾರಥಿ ಕಾರ್ಯಮಾಡಲಿಲ್ಲವೆ? ರಥಿಕನಿಗಿಂತಲೂ ಸಾರಥಿಯೇ ಶ್ರೇಷ್ಟನೆಂದು ತಿಳಿದು ನಿನ್ನಲ್ಲಿಗೆ ಬಂದಿದ್ದೇನೆ ನಿನ್ನಲ್ಲಿ ಧೈರ್ಯ, ಸಾಹಸ, ಚಾತುರ್ಯ, ಜ್ಞಾನ, ಧರ್ಮ ಎಲ್ಲವೂ ಇರುವುದರಿಂದ ನಿನ್ನ ಆಶ್ರಯ ಕೋರಿ ಬಂದಿದ್ದೇನೆ'' ಎಂದು ಹೊಗಳಿ ಒಪ್ಪಿಸಿದನು. ಶಲ್ಯನು ದುರ್ಯೋಧನನ ಬಲಾತ್ಕಾರಕ್ಕೆ ಸಿಕ್ಕುಬಿದ್ದು ಒಪ್ಪಿಕೊಂಡು ಕರ್ಣನಿಗೆ ಸಾರಥಿಯಾದನು.

ಈಗ ಕರ್ಣನು ತನಗೆ ತಕ್ಕ ಸಾರಥಿ ಸಿಕ್ಕನೆಂಬ ಸಂತೋಷದಿಂದ ''ಶಲ್ಯಾ! ಬೇಗ ನನ್ನನ್ನು ಅರ್ಜುನನ ಬಳಿಗೆ ಕರೆದುಕೊಂಡು ಹೋಗು ನಿನಗೆ ಏನುಬೇಕಾದರೂ ಕೊಡುತ್ತೇನೆ'' ಎಂದು ಉತ್ಸಾಹದಿಂದ ಹೇಳಿದನು. ಶಲ್ಯನಿಗೆ ಪಾಂಡವರು ತನ್ನಲ್ಲಿ ಹೇಳಿದ್ದ ಮಾತನ್ನು ಈಗ ಪ್ರಯೋಗ ಮಾಡಲು ತಕ್ಕಸಮಯವೆಂದು ಭಾವಿಸಿ ''ರಾಧೇಯಾ! ನಿನಗೆ ಅರ್ಜುನನ ಪರಾಕ್ರಮ ಸರಿಯಾಗಿ ತಿಳಿದಿಲ್ಲ ಆದ್ದರಿಂದಲೇ ಇಷ್ಟು ಉತ್ಸಾಹದಿಂದ ಅವನ ಬಳಿಗೆ ಹೋಗಲು ಆತುರ ಪಡುತ್ತಿರುವಿ. ಅವನ ಪರಾಕ್ರಮ ವಿಚಾರ ತಕ್ಕ ಮಟ್ಟಿಗೆ ತಿಳಿಸಿ ನಿನಗೆ ಮುನ್ನೆಚ್ಚರಿಕೆ ಕೊಡುತ್ತೇನೆ.

ದೇವೇಂದ್ರನಿಂದಲೂ ಸಾಧ್ಯವಾಗದಂಥ ನಿವಾತ ಕವಚರನ್ನು ಪುಲೋಮ ಕಾಲಕೇಯರನ್ನು ಹನನ ಮಾಡಿದವನವನು.

ದೇವೇಂದ್ರನ ಖಾಂಡವ ವನವನ್ನು ಅಗ್ನಿಗೆ ಆಹುತಿಕೊಟ್ಟು ಸಕಲ ದೇವತೆಗಳನ್ನು ಗೆದ್ದ ಧೀರನವನು.

ಉತ್ತರ ಗೋಗ್ರಹಣದಲ್ಲಿ ಷಡ್ರಥಿಕರನ್ನು ಅರ್ಜುನನೊಬ್ಬನೇ ಗೆದ್ದು ಉತ್ತರಕುಮಾರನ ಕೈಲಿ ಅವರ ಉಡಿಗೆ ತೊಡಿಗೆಗಳನ್ನೆಲ್ಲಾ ಸೆಳೆತರಿಸಿ ನಿರ್ವಾಣರನ್ನಾಗಿ ನಿಲ್ಲಿಸಿದ ವೀರನವನು.

ಅಂಥ ಹಂಸ ಪಕ್ಷಿಯಂತಿರುವ ಅರ್ಜುನನು ಕಾಗೆಯಂತಿರುವ ನಿನಗೆ ಸಮಜೋಡಿ ಆಗಲು ಸಾಧ್ಯವೇ? ನಿನಗೆ ಕೌರವನ ಸಹವಾಸ ಬೇಸರವಾಗಿ ಸಾಯಲು ಅಪೇಕ್ಷಿಸಿ ಅವನ ಮುಂದೆ ಹೋಗಲು ಇಷ್ಟಪಡುತ್ತಿದ್ದರೆ ನಿನ್ನ ಅಭಿಲಾಷೆಯನ್ನು ವೀರಪಾರ್ಥನು ಕ್ಷಣಾರ್ಧದಲ್ಲಿ ಈಡೇರಿಸುತ್ತಾನೆ ನಡೇ ಅವನ ಮುಂದುಗಡೆಗೆ ನಿನ್ನನ್ನು ನಿಮಿಷಾರ್ಧದಲ್ಲಿ ಬಿಡುತೇನೆ''

ಎಂದು ಕರೆದುಕೊಂಡು ಹೋದನು. ಅರ್ಜುನನ ರಥದ ಸುತ್ತಲೂ ಸಾತ್ಯಕಿ ಧೃಷ್ಟದ್ಯುಮ್ನ ಭೀಮಾದಿಗಳೆಲ್ಲರೂ ವೀರಪಡೆಯೊಂದಿಗೆ ಶತೃಪಕ್ಷದವರೊಡನೆ ಯುದ್ಧ ಮಾಡುತ್ತಿದ್ದರಿಂದ ಕರ್ಣನಿಗೆ ಅರ್ಜುನನೊಡನೆ ಸಮರಕ್ಕೆ ಅವಕಾಶ ಸಿಗದಂತಾಗಲು. ಪಾಂಡವರ ಸೇನೆಯಲ್ಲಿ ನುಗ್ಗಿ ಧರ್ಮರಾಯನ ಬಳಿಗೆ ಹೋಗಿ ಅವನೊಡನೆ ಘೋರವಾದ ಹೋರಾಟನಡೆಸಿ ಅವನ ರಥಾಶ್ವಗಳನ್ನು ನಾಶಪಡಿಸಿದನು. ಧರ್ಮರಾಜನು ಅಸಂಖ್ಯ ಅಸ್ತ್ರದಿಂದ ಹೊಡೆದು

ಛಿದ್ರಗೊಳಿಸುತ್ತಿರುವಾಗ ಅತ್ತ ಭಿಮನು ದುರ್ಯೋಧನನನ್ನು ಎದುರಿಸಿ ಅವನಿಗೆ ಭಯಪಡಿಸುತ್ತಿರುವುದನ್ನು ನೋಡಿದ ಶಲ್ಯನು ಕರ್ಣನನ್ನು ಕುರಿತು ಕರ್ಣಾ! ನಿನ್ನ ರಾಜನು ಭೀಮನ ಕೈಗೆ ಸಿಕ್ಕು ಸಾಯುತ್ತಿದ್ದಾನೆ. ರಾಜನೇ ಸತ್ತನಂತರ ಯುದ್ಧವೇಕೆ ಬೇಕು? ಮೊದಲು ಹೋಗಿ ಅವನನ್ನು ಭೀಮನಿಂದ ಬಿಡಿಸಿಕೊಂಡು ರಕ್ಷಿಸು'' ಎಂದು ಭೀಮನ ಪರಾಕ್ರಮ ಎತ್ತಿ ತೋರಿಸುತ್ತ ದುರ್ಯೋಧನನನ್ನು ಹಳಿದು ಮಾತನಾಡುತ್ತಿದ್ದರೆ ಕರ್ಣನು ಭೀಮನ ಎದುರಿಗೆ ಪರಾಕ್ರಮವನ್ನು ದರ್ಪದಿಂದ ತೋರಿಸುತ್ತ ಬಂದನು.

ಆಗ ಭೀಮಸೇನನು ಕೋಪಾವಿಷ್ಟನಾಗಿ ಪ್ರಳಯಕಾಲದ ರುದ್ರನನ್ನು ಹರಿ ಉಗ್ರನಾಗಿ ನುಂಗಲು ಬರುವ ಉಗ್ರನರಸಿಂಹನಂತೆ ಭೀಮನು ಕರ್ಣನನ್ನು ಕೊಲ್ಲಲು ಘುಡುಘುಡಿಸಿ ಬರುತ್ತಿದ್ದಾಗ ಅವನ ಉಗ್ರತೆಗೆ ಕುರು ಪಾಂಡವ ಪಕ್ಷಗಳೆರಡೂ ಅಂಜಿ ಓಡ ಹತ್ತಿದರು. ಕರ್ಣನ ವೀರಬಾಣಗಳು ಭೀಮನ ಒಂದು ರೋಮವನ್ನು ಕೊಂಕಿಸಲಿಲ್ಲ. ಕರ್ಣನ ರಥಕ್ಕೆ ಹಾರಿದನು.

ಎಲಾ ಕರ್ಣಾ ನಾನು ಹರಿನಿಂದಕರ ಮುಖವನ್ನು ನೋಡುವುದಿಲ್ಲ. ಈಗಲೇ ನಿನ್ನ ನಾಲಿಗೆಯನ್ನು ಹಿರಿದು ಎಸೆಯುತ್ತೇನೆ ಎಂದು ಅವನನ್ನು ಮುಷ್ಟಿಯಲ್ಲಿ ಹಿಡಿದುಕೊಂಡಾಗ ''ಭೀಮಾ! ನಾನು ನಿನ್ನ ಸಾಹಸ ಎಂತಹದೆಂದು ಕರ್ಣನಮುಂದೆ ಹೇಳಲಿಲ್ಲ ಅರ್ಜುನನ ಸಾಹಸದ ವಿಷಯವನ್ನು ಅಲ್ಪಸ್ವಲ್ಪ ತಿಳಿಸಿದ್ದೆನು ಈಗ ನಿನ್ನ ಬಾಹುಬಲದ ಋಚಿಯನ್ನು ಕರ್ಣನು ಸ್ವಲ್ಪ ತಿಳಿದಂತಾಯಿತು. ನೀನು ಹರಿನಿಂದಕರನ್ನು ಉಳಿಸದೆ ಕೊಲ್ಲುತ್ತೇನೆಂದು ಶಪಥಮಾಡಿದಂತೆ ಅರ್ಜುನನೂ ಪ್ರತಿಜ್ಞೆಮಾಡಿರುವುದರಿಂದ ಅವನ ಪ್ರತಿಜ್ಞೆ ಉಳಿಸಲಿಕ್ಕಾಗಿ ಇವನನ್ನು ಬಿಟ್ಟುಬಿಡು'' ಎಂದನು. ಕರ್ಣನು ಭೀಮನ ವಜ್ರಮುಷ್ಟಿಗೆ ಸಿಕ್ಕು ಮೂರ್ಛೆಬಿದ್ದನು. ಆಗ ಶಲ್ಯನು ಅವನನ್ನು ರಥದಲ್ಲಿ ಹಾಕಿಕೊಂಡು ಭೀಮನಿಗೆ ಬೆನ್ನುಮಾಡಿ ಹೊರಟುಹೋದನು.

ಆಗ ಅಶ್ವತ್ಥಾಮನು ಕೆರಳಿದ ಸಿಂಹದಂತೆ ಬರುತ್ತಿರಲು ಅವನ ರುದ್ರತೆ ತಡೆಗಟ್ಟದಿದ್ದರೆ ಅನೇಕ ವೀರರ ಹನನವಾಗುತ್ತದೆಂದು ಕೃಷ್ಣನು ''ಅರ್ಜುನಾ! ಈಗ ಸಂಶಪ್ತಕರೊಡನೆ ಯುದ್ಧಬೇಡ ಅಶ್ವತ್ಥಾಮನನ್ನು ಎದುರಿಸು'' ಎಂದು ರಥವನ್ನು ಅವನ ಬಳಿಗೆ ಓಡಿಸಿದನು. ಅರ್ಜುನ ಅಶ್ವತ್ಥಾಮರಿಬ್ಬರೂ ಅಸ್ತ್ರವಿದ್ಯಾಶೂರರು ಅವರಿಬ್ಬರ ಯುದ್ಧದ ಚತುರತೆ, ಚಮತ್ಕಾರ, ಅಸ್ತ್ರಪ್ರಯೋಗದ ಪ್ರತಿಭೆಗಳನ್ನು ನೋಡಲು ದೇವತೆಗಳೆಲ್ಲರೂ ಸಾಲುಗಟ್ಟಿ

ನೋಡುತ್ತಿದ್ದರು. ವೀರರಿಬ್ಬರು ಬಿಟ್ಟಬಾಣಗಳು ಆಕಾಶಾಂಗಣದಲ್ಲಿ ಹರಡಿ ಸೂರ್ಯ ರಶ್ಮಿ ಕಾಣದಂತಾಯಿತು. ಅಶ್ವತ್ಥಾಮನ ಬಾಣಗಳು ಅರ್ಜುನನ ಕುದುರೆಗಳ ದೇಹಕ್ಕೆ ಹೆಣೆದಂತೆ ರೋಮರೋಮಕ್ಕೂ ನಾಟಿತ್ತು. ಅಶ್ವತ್ಥಾಮನು ಅರ್ಜುನನ ದೇಹದ ತುಂಬಾ ಬಾಣಗಳನ್ನು ತುಂಬಿಬಿಟ್ಟನು ರಥ ಧ್ವಜಎಲ್ಲವೂ ಬಾಣಮಯವಾಗಿರಲು ಅರ್ಜುನನು ಬಾಣದ ವೇಗಕ್ಕೆ ಮೂರ್ಛೆಬಿದ್ದನು. ಆಗ ಕೃಷ್ಣನು ತನ್ನ ಅಮೃತ ಹಸ್ತದಿಂದ ಅರ್ಜುನನನ್ನು ಸವರಿದಾಗ ಅರ್ಜುನನು ಮುನ್ನಿನಂತೆಯೇ ಉತ್ಸಾಹದಿಂದ ಕೆರಳಿ ಕದನದ ಕಲಿಯಾಗಲು ಅಶ್ವತ್ಥಾಮನು ಆಗ ತನಗೆ ಎಷ್ಟೇ ಸಾಮರ್ಥ್ಯವಿದ್ದರೂ ಶ್ರೀಕೃಷ್ಣನ ರಕ್ಷಣಾಕೋಟೆಯೊಳಗಿರುವ ಅರ್ಜುನನನ್ನು ನಾನು ಗೆಲ್ಲಲಾರೆ ಎಂದು ನಿರಾಸೆಗೊಂಡನು. ಅವನ ಅಭೇದ್ಯರಥ, ಗಾಂಡೀವ ಧನಸ್ಸು, ಧ್ವಜಸ್ಥಂಭದ ಹನುಮ, ಸಾರಥಿ ಕೃಷ್ಣ, ಇಷ್ಟು ದೈವಶಕ್ತಿಗಳೂ ಅವನನ್ನು ಕಾಯುತ್ತಲಿವೆ ಎಲ್ಲವಕ್ಕು ಆಧಿದೇವತೆಯಾದ ಕೃಷ್ಣನೇ ಮುಖ್ಯವಾಗಿ ಅವನಿಗೆ ಬೆಂಬಲವಾಗಿರುವಾಗ ನಮ್ಮ ಹುಸಿಬಾಣಗಳಿಂದ ಅವನನ್ನು ಗೆಲ್ಲಲಾದೀತೇ? ಎಂಬ ಭಾವದಿಂದ ಅಶ್ವತ್ಥಾಮನು ಹೊರಟುಹೋದನು.

ಪಂಚಾಲರು ಭಿಮನಬಲದಿಂದ ಕೌರವರ ಮಹಾಸೇನೆಯನ್ನು ಬಂದುಕಡೆಯಿಂದ ನಾಶಪಡಿಸುತ್ತಲಿರಲು ಕರ್ಣನು ಆಗ ಆಕ್ರೋಶದಿಂದ ಭೀಮನ ಮೇಲೆ ಭಾರ್ಗವಾಸ್ತ್ರವನ್ನು ಪ್ರಯೋಗಮಾಡಿದನು. ಆಗ ದ್ರೌಪದಿಯ ಪಂಚಪುತ್ರರು, ಸಾತ್ಯಕಿ, ಧೃಷ್ಟದ್ಯುಮ್ನ ಇವರು ಓಡಿಹೋಗಿ ಬದುಕಿದರು ಆಗ ಕೃಷ್ಣನು ರಥವನ್ನು ಕರ್ಣನ ಬಳಿಗೆ ಬಿಡಲಿಲ್ಲ ಏಕೆಂದರೆ ಭಾರ್ಗಸ್ತ್ರವನ್ನು ಉಪಸಂಹಾರಮಾಡಲು ಅಥವಾ ಅದಕ್ಕೆ ಪ್ರತ್ಯಸ್ತ್ರಬಿಡಲು ಅರ್ಜುನ ಶಕ್ತನಲ್ಲವೆಂದು ಧರ್ಮರಾಜನ ಬಳಿಗೆ ರಥ ಓಡಿಸಿದನು. ಅಲ್ಲಿ ಧರ್ಮರಾಜನು ಇರಲಿಲ್ಲ ಶಿಬಿರಕ್ಕೆ ಹೋಗಿರುವುದರಿಂದ ಗಾಬರಿಗೊಂಡ ಅರ್ಜುನನು ಭೀಮನನ್ನು ಕುರಿತು ''ಭೀಮಾ! ಧರ್ಮರಾಜನು ಯುದ್ಧವನ್ನು ನಿಲ್ಲಿಸಿ ಶಿಬಿರಕ್ಕೆ ಹೋಗಿರುವುದನ್ನು ನೋಡಿದರೆ ಅವನಿಗೆ ಏನೋ ಅಪಾಯ ಸಂಭವಿಸಿರಬಹುದೆಂದು ಭಾವಿಸುತ್ತೇನೆ. ನಾನು ಇಲ್ಲಿ ಯುದ್ಧವನ್ನು ಮುಂದುವರಿಸುತ್ತೇನೆ ನೀನು ಧರ್ಮರಾಜನನ್ನು ನೋಡಿಕೊ'' ಎಂದಾಗ ಬಲಾಭೀಮಾನಿದೇವತೆ ಭೀಮನಿಗೆ ಅರ್ಜುನನ ಮಾತು ಸಹಿಸಲಿಲ್ಲ ''ಅರ್ಜುನಾ! ನೀನೇ ಶಿಬಿರಕ್ಕೆ ಹೋಗಿ ಧರ್ಮರಾಜನ ಉಪಚಾರ ನೋಡಿಕೋ ನಾನು ಇಲ್ಲಿ ಶತೃಗಳ ಧ್ವಂಸ ಕಾರ್ಯವನ್ನು ವಹಿಸಿಕೊಳ್ಳುತ್ತೇನೆ'' ಎಂದನು. ಕೃಷ್ಣನಿಗೆ ಭೀಮಸೇನನ ಪ್ರತಾಪವಾಣಿ ಕೇಳಿ ಸಂತೋಷಪಟ್ಟವನಂತೆ ಭೀಮನನ್ನು ಹೊಗಳಿ ಆನಂದಪಡಿಸಿದನು.

ರಣರಂಗದಿಂದ ಕೃಷ್ಣಾರ್ಜುನರು ಧರ್ಮರಾಜನ ಬಳಿಗೆ ಬಂದರು. ಶಿಬಿರದಲ್ಲಿ ಧರ್ಮರಾಜನು ಕರ್ಣನಿಂದ ಏಟುತಿಂದು ಗಾಯವನ್ನು ಮಂತ್ರಜಲದಿಂದ ತೊಳೆಸಿಕೊಂಡು ಕಟ್ಟಿಸಿಕೊಳುತ್ತಿದ್ದನು. ಕೃಷ್ಣಾರ್ಜುನರನ್ನು ನೋಡಿ ಕೃಷ್ಣನಿಗೆ ನಮಸ್ಕಾರಮಾಡಿ ''ಅರ್ಜುನಾ!

ಕರ್ಣನನ್ನು ಕೊಂದು ಬಂದೆಯಾ?'' ಎಂದನು. ಅರ್ಜುನನು ''ಅಣ್ಣಾ! ಕೃಷ್ಣನ ಕೃಪೆ ನಿನ್ನ ಆಶೀರ್ವಾದ ಬಲದಿಂದ ಖಂಡಿತ ಕರ್ಣನನ್ನು ಕೊಲ್ಲುತ್ತೇನೆ'' ಎಂದನು.

ಹಾಗಾದರೆ ಇನ್ನೂ ಕರ್ಣನನ್ನು ಉಳಿಸಿರುವೆಯಾ? ಮತ್ತೇಕೆ ನಿನ್ನ ಹೇಡಿ ಮುಖ ತೋರಿಸಲು ಬಂದಿರುವೆ? ನಿನ್ನ ಗಾಂಡೀವಸುಡು ನೀನು ಕುಂತೀ ಮಗನಾಗಲು ಯೋಗ್ಯನಲ್ಲ ಗಾಂಡೀವವನ್ನು ಧರಿಸಲೂ ನೀನು ಯೋಗ್ಯನಲ್ಲ ಕೆಳಗಿಟ್ಟು ಹೊರಟುಹೋಗು ಎಂದನು. ಅರ್ಜುನನು ''ಗಾಂಡೀವವನ್ನು ಯಾರಾದರೂ ಹಳಿದರೆ ಆಗಲೇ ಅವರ ತಲೆ ಕಡಿದು ಹಾಕುತ್ತೇನೆ'' ಎಂದು ಪ್ರತಜ್ಞೆ ಮಾಡಿದ್ದನು. ಆದ್ದರಿಂದ ಈಗ ಧರ್ಮರಾಜನ ತಲೆ ಕಡಿಯಲು ಖಡ್ಗವನ್ನು ಹಿಡಿದು ಹೊರಟಾಗ ಕೃಷ್ಣನು ಅರ್ಜುನಾ ಏನಿದು? ಏತಕ್ಕಾಗಿ ಹೋಗುತ್ತಿರುವಿ? ಎಂದನು. ಅರ್ಜುನನು ಕೃಷ್ಣಾ! ನನ್ನ ಗಾಂಡೀವವನ್ನು ದೂಶಿಸಿದವರ ತಲೆ ಕಡಿಯುತ್ತೇನೆ ಎಂದು ಪ್ರತಿಜ್ಞೆ ಮಾಡಿದ್ದೇನೆ, ಆದ್ದರಿಂದ ಈಗ ನನ್ನ ಪ್ರತಿಜ್ಞಾಪಾಲನೆಗಾಗಿ ಹೋಗುತ್ತಿದ್ದೇನೆ ಎಂದನು. ಕೃಷ್ಣನು ''ಅರ್ಜುನಾ! ಸಜ್ಜನರಿಗೆ ಹಿಂಸೆಯಾಗುವಂತಹ ಕಾರ್ಯ ಧರ್ಮಕಾರ್ಯ ಆಗುವುದಿಲ್ಲ ಅದು ಪಾಪಕರ್ಮವಾಗುತ್ತದೆ. ಸಜ್ಜನರಿಗೆ ಹಿಂಸೆಯಾಗುವಂಥ ಧರ್ಮವೂ ಅಧರ್ಮವಾಗುತ್ತದೆ. ಒಬ್ಬ ಧರ್ಮನಿಷ್ಠನಿಗೆ ಬರುವ ವಿಪತ್ತನ್ನು ತಪ್ಪಿಸಲು ಸುಳ್ಳುಹೇಳಿದರು ಅದು ನಿಷಿದ್ಧವಾಗುವುದಿಲ್ಲ. ನಿಜ ಹೇಳಿದರೆ ಬೇರೊಬ್ಬನಿಗೆ ಸಾವು ಸಂಭವಿಸುತ್ತದೆಂದು ತಿಳಿದರೆ ಆ ಧರ್ಮವನ್ನು ಎಡವಿದರೂ ದೋಶ ಬರುವುದಿಲ್ಲವೆಂದು ಧರ್ಮಶಾಸ್ತ್ರ ಹೇಳಿರುವುದರಿಂದ ನೀನೀಗ ಪ್ರತಿಜ್ಞಾಪಾಲನೆಗಾಗಿ ತಂದೆಗೆ ಸಮಾನನಾದ ಅಣ್ಣನ ತಲೆ ಕಡಿದರೆ ಪಾಪಿಯಾಗುತ್ತಿ ಈಗ ನಿನಗೆ ಪ್ರತಿಜ್ಞೆ ಸತ್ಯವಾಗುಳಿಯುವಂತೆಯೂ ಅಗ್ರಜನನ್ನು ಕೊಂದು ಪಾಪಬರದಂತೆಯೂ ಒಂದು ಧರ್ಮರಹಸ್ಯ ಹೇಳುತ್ತೇನೆ, ಏನೆಂದರೆ ಹಿರಿಯರನ್ನೂ, ಗುರುಗಳನ್ನೂ ನಿಂದೆ ಮಾಡಿದರೆ ಅವರನ್ನು ಕೊಂದಷ್ಟೇ ಪಾಪ ಬರುತ್ತದೆ.

ಪರನಿಂದೆಯಿಂದ ನೊಂದ ಸಜ್ಜನರು ತೇಜೋಹೀನರಾಗಿ ಇದ್ದರೂ ಸತ್ತಂತೆ ಆಗುತ್ತಾರೆ. ಆದ್ದರಿಂದ ಈಗ ಧರ್ಮರಾಜನನ್ನು ನಿಂದೆ ಮಾಡಿದರೆ ಅವನನ್ನೂ ಕೊಂದಂತೆಯೆ ಆಗುತ್ತದೆ. ಆದ್ದರಿಂದ ನಿನ್ನಾಪ್ರತಿಜ್ಞೆ ಉಳಿದಂತಾಯಿತು. ಆದ್ದರಿಂದ ನಿನಗೆ ಪಿತ್ರದ್ರೋಹದ ಪಾಪ ಬರುವುದಿಲ್ಲವೇ? ಎಂದು ನೀನು ಅನುಮಾನಿಸಬೇಡ ಅದಕ್ಕೂ ಒಂದು ಪರಿಹಾರವಿದೆ. ಏನೆಂದರೆ ಪಿತೃದ್ರೋಹದ ಪಾಪಕ್ಕೆ ಆತ್ಮಘಾತವೇ ಪ್ರಾಯಶ್ಚಿತವಾದ್ದರಿಂದ ಆತ್ಮಪ್ರಶಂಸೆನೆಯೇ ಆತ್ಮಹತ್ಯವೆಂದು ತಿಳಿದು ನಿನ್ನನ್ನು ನೀನೇ ಶ್ರೀಕೃಷ್ಣನೆದುರಿಗೆ ಪ್ರಶಂಸೆಮಾಡಿಕೊ ಎಂದು ಹೇಳಿದನು. ಆಗ ಅರ್ಜುನನು ಶ್ರೀಕೃಷ್ಣನ ಉಪದೇಶದಂತೆ ಧರ್ಮರಾಜನನ್ನು ಕುರಿತು ''ಧರ್ಮರಾಜ! ನೀನು ಕ್ಷತ್ರಿಯರಾಜನಾಗಿ ಶತ್ರುಗಳ ಕೈಲಿ ಏಟುತಿಂದು ತಲೆತಪ್ಪಿಸಿಕೊಂಡು ಓಡಿ ಬಂದ ಹೇಡಿ. ಹಿರಿಯಣ್ಣನೆಂದು ಗೌರವಕೊಟ್ಟದ್ದಕ್ಕೆ ಜೂಜಾಡಿ ಹೆಂಡತಿ ಮಕ್ಕಳು ಅಣ್ಣತಮ್ಮಂದಿರು ಎಲ್ಲರನ್ನೂ ಕಾಡುಪಾಲು ಮಾಡಿದಿ. ಇಷ್ಟು ಲಕ್ಷ ಸಂಖ್ಯೆಯ ಹೆಣ್ಣುಮಕ್ಕಳ

ಸೌಮಂಗಲ್ಯವನ್ನು ಕಿತ್ತು ಕೊಳ್ಳಲಿಕ್ಕೆ ಕಾರಣವಾದ ಘೋರ ಕದನ ನಡೆಯಲು ನೀನೆ ಮೂಲಕಾರಣನಾಗಿರುವಿ. ನಮ್ಮೆಲ್ಲರನ್ನೂ ರಕ್ಷಿಸಿ ಸಹಾಯ ಮಾಡುತ್ತಿರುವವನು ಭೀಮನಾಗಿದ್ದಾನೆ. ನನ್ನನ್ನು ನಿಂದಿಸಲಿಕ್ಕೆ ನೀನಾರು? ನಿನ್ನಿಂದ ನಮಗೇನು ಪ್ರಯೋಜನ?'' ಎಂದು ಕಠೋರ ಮಾತಿನಿಂದ ಇರಿದುಕೊಂದನು.

ನಂತರ ಆ ಪಾಪದ ಪ್ರಾಯಶ್ಚಿತಕ್ಕೆ ಆತ್ಮಪ್ರಶಂಸೆನೆ ಮಾಡಿಕೊಂಡನು. ದೃಪದರಾಜನ ಸಭೆಯಲ್ಲಿ ಮತ್ಸ್ಯಯಂತ್ರ ಭೇದಿಸಿದ ವೀರನು ನಾನು. ಖಾಂಡವದಹನ ಕಾರ್ಯದ ಸಾಹಸ ತೋರಿಸಿ ಸಕಲ ಮಂತ್ರಾಸ್ತ್ರಗಳನ್ನೂ ದೇವತೆಗಳಿಂದ ಬಹುಮಾನ ಪಡೆದ ಪರಾಕ್ರಮಿ ನಾನು. ಶಿವನನ್ನೇ ಸೋಲಿಸಿ ಪಾಶುಪತಾಸ್ತ್ರ ಪಡೆದವನು ನಾನು. ನನ್ನಂಥ ಪರಾಕ್ರಮಶೂರನು ನಿನ್ನನ್ನು ಅಣ್ಣನೆಂದು ಹೇಳಲು ಲಜ್ಜೆಯಾಗುತ್ತದೆ ಎಂದು ಬಹಳ ಗರ್ವಭರಿತನಾಗಿ ಅಸ್ವತಂತ್ರನಾದ ಅರ್ಜುನ ಸ್ವತಂತ್ರನಂತೆ ಪೌರುಷವಾಣಿ ಆಡಿ ಆದರಿಂದ ಆತ್ಮಹತ್ಯೆದೋಶವನ್ನು ಹೊಂದಿ ಶ್ರೀಕೃಷ್ಣನ ಕೃಪಾಕಟಾಕ್ಷದಿಂದ ದೋಶಮುಕ್ತನೂ ಆದನು. ಅರ್ಜುನನು ಪರಮಜ್ಞಾನಿಯಾದ್ದರಿಂದ ಅವನಿಗೆ ದುಶ್ಕರ್ಮ ಲೇಪವಾಗಲಿಲ್ಲ. ನಿರ್ಲಿಪ್ತಭಾವದಿಂದ ಸ್ವಾಮಿಯ ಸತ್ಯವಾಕ್ಯವನ್ನೂ ಸಂದೇಹ ಪಡೆದೆ ಪಾಲಿಸಿದ ಕಾರಣ ಅವನಿಗೆ ಅದರಿಂದ ಅಪಾರಪುಣ್ಯ ಪ್ರಾಪ್ತಿ ಆಯಿತು. ಧರ್ಮರಾಜನು ಅರ್ಜುನನ ಕಟುಮಾತಿಗೆ ವಿಷಾದಗೊಂಡು ಅರ್ಜುನಾ! ನಾನು ಈ ಎಲ್ಲಾ ಅನರ್ಥಗಳಿಗೂ ಕಾರಣನಾಗಿ ಬಹಳ ಪಾಪಕ್ಕೊಳಗಾದವನು ನಿಮ್ಮೆಲ್ಲರಿಗೂ ನನ್ನಿಂದ ಹಿಂಸೆಯೇ ವಿನಃ ಲೇಶಮಾತ್ರವೂ ಸುಖವಿಲ್ಲ ಬಲವಂತನೂ-ಜ್ಞಾನಿಯೂ ಆದ ಭೀಮನು ರಾಜನಾಗಲಿ. ನೀನು ಮಂತ್ರಿಯಾಗಿ ವಂಶದ ಗೌರವವನ್ನೂ ರಕ್ಷಿಸಿರಿ. ನಾನು ತಪಸ್ಸಿಗಾಗಿ ಕಾಡಿಗೆ ಹೊರಟುಹೋಗುತ್ತೇನೆ'' ಎಂದು ಹೇಳಿ ಹೊರಟೇಬಿಟ್ಟನು.

ಆಗ ಅರ್ಜುನನು ಅವನಿಗೆ ನಮಸ್ಕಾರಮಾಡಿ ಕೈ ಹಿಡಿದು ಕರೆ ತಂದು ಮಲಗಿಸಿ ಅಣ್ಣಾ! ನಾವು ಸ್ವತಂತ್ರರಲ್ಲ ಬಂಧಕ ಶಕ್ತಿಗೆ ಸಿಕ್ಕವರು. ಅಸುರಾವೇಶದಿಂದ ನಾನು ಹೆಚ್ಚು ತಾನು ಹೆಚ್ಚೆಂದು ಮೂರ್ಖರಾಗಿ ನಡೆದಾಗ ಸರ್ವಶಕ್ತನೂ ಸರ್ವತಂತ್ರ ಸ್ವತಂತ್ರನೂ ಆದ ಶ್ರೀಕೃಷ್ಣನು ನಮ್ಮನ್ನು ಪಾಪದ ಸಂಕೋಲೆಯಿಂದ ನಮ್ಮ ಬಲಾಬಲಗಳ ಬಡಿದಾಟಕ್ಕೆ ಅವಕಾಶವೇನಿದೆ?'' ಎಂದು ಸಮಾಧಾನಮಾಡಿದನು.

ಆಗ ಧರ್ಮರಾಜನು ವಿವೇಕದಿಂದ ಲಜ್ಜಿತನಾಗಿ ಶ್ರೀಕೃಷ್ಣನಿಗೆ ನಮಸ್ಕಾರಮಾಡಿ ಕೃಷ್ಣಾ! ಸರ್ವರಲ್ಲೂ ಅಂತರ್ಯಾಮಿಯಾಗಿ ನೀನು ಎಲ್ಲವನ್ನೂ ನಡೆಸುತ್ತಿರುವಾಗ ನಮಗೇಕೆ ಜಯಾಪಜಯದ ಚಿಂತೆ? ಸುಖದುಃಖಗಳ ಕಾಳಜಿ ಏಕೆ? ನಿನ್ನ ಪಾದಾಶ್ರಯ ಒಂದಿದ್ದರೆ ದುಃಖವೆಲ್ಲಿಯದು? ಎಂದು ಹೇಳಿದನು.

ಅರ್ಜುನನು ತನಗೆ ಕರ್ಣನನ್ನು ಕೊಂದು ಧರ್ಮರಾಯನ [illegible] [illegible]ರಿಸಲು ಸಾಮರ್ಥ್ಯ ಬರದೆಯಾ?'' ಎಂದು ಚಿಂತಿಸುತ್ತಿರುವಾಗ ''ಅರ್ಜುನಾ! ನಿನಗೆ ನರಾವೇಶವಿದೆ.

ಅದಲ್ಲದೆ ರುದ್ರದೇವರು ನಿನಗೆ ಸ್ವಪ್ನದಲ್ಲಿ ಪಾಶುಪತಾಸ್ತ್ರಕ್ಕೆ ವೀರ್ಯವನ್ನು ತುಂಬಿ ನಿನಗೆ ಅನುಗ್ರಹಿಸಿದ್ದಾನೆ. ನಿನಗೆ ಕರ್ಣನನ್ನೂ ಕೊಲ್ಲಲು ಶಕ್ತಿಯಿದೆ ಭಯಪಡಬೇಡ. ಎಂದು ಹೇಳಿ ಸರ್ವಶಕ್ತನಾದ ಸ್ವಾಮೀ ಭಕ್ತನಲ್ಲಿ ಶತ್ರುನಿಗ್ರಹದ ಧೈರ್ಯಮೂಡಿ ಬಂದು ಅಸುರ ಸಂಹಾರದ ಕಾರ್ಯ ನಡೆಯಲೆಂದು ವಿಚಿತ್ರಲೀಲೆ ತೋರಿಸುತ್ತಿದ್ದನು.

ಕೃಷ್ಣಾರ್ಜುನರು ಧರ್ಮರಾಯನಿಗೆ ಧೈರ್ಯಹೇಳಿ ರಣರಂಗಕ್ಕೆ ಬಂದರು. ಅಲ್ಲಿ ಭೀಮಸೇನನು ಗದಾಧಾರಿಯಾಗಿ ಯುದ್ಧಕ್ಕೆ ಸಿದ್ಧವಾಗಿದ್ದರೆ ಸೈನಿಕರೆಲ್ಲರೂ ಹೆದರಿ ಮರೆಯಾಗಿದ್ದರು. ಯುದ್ಧಭೂಮಿಯಲ್ಲಿ ಭೀಮನ ಬಳಿ ಒಬ್ಬರೂ ಇರಲಿಲ್ಲ. ಆಗ ಭೀಮನು ಯುದ್ಧದ ಆತಂಕ ತೊರೆದು ಸಾರಥಿಯೊಂದಿಗೆ ಕುಳಿತು ಗಾನಪಾಡುತ್ತ ವಿಶ್ರಾಂತಿಯಿಂದ ಇದ್ದನು. ಆ ಸಮಯದಲ್ಲಿ ಕೃಷ್ಣಾರ್ಜುನರ ರಥ ಬರಲು ಅವರನ್ನು ಎದುರಿಸಲು ಶಕುನಿ-ದುರ್ಯೋಧನ ಅವನ ತಮ್ಮಂದಿರೆಲ್ಲರೂ ಸೇನಾ ಸಮೂಹದೊಡನೆ ಬರಲು ಭೀಮನು ಮೊದಲು ಶಕುನಿಯ ರಥವನ್ನು ಮುರಿದು ನೆಲಕ್ಕುರಿಳಿಸಿದನು. ಶಕುನಿಯನ್ನು ಸಹದೇವ ಕೊಲ್ಲುತ್ತೇನೆಂದು ಪ್ರತಿಜ್ಞೆಮಾಡಿದ್ದರಿಂದ ಅವನನ್ನೂ ಕೊಲ್ಲದೆ ಬಿಟ್ಟುಬಿಟ್ಟನು.

ಶಕುನಿಯು ಭೀಮನ ಗದಾಪ್ರಹಾರದಿಂದ ಅರೆ ಜೀವದಿಂದ ಬಿದ್ದಿರಲು ದುರ್ಯೋಧನನಾದಿಗಳು ಅವನನ್ನು ಕರೆದುಕೊಂಡು ಹೊರಟುಹೋದರು.

## ಭೀಮಸೇನನ ಭಯಂಕರ ಕೃತ್ಯ

ಭೀಮನು ಶತ್ರುತಂಡವನ್ನು ಬಡಿದೋಡಿಸಿ ಒಂದೆಡೆ ಕುಳಿತ್ತಿದ್ದಾಗ ಕೃಷ್ಣಾರ್ಜುನರನ್ನು ನೋಡಿ ಧರ್ಮರಾಜನ ವೃತ್ತಾಂತವನ್ನು ತಿಳಿದು ಬರುತ್ತಿದ್ದಾಗ ದುಶ್ಯಾಸನನನ್ನು ಎದರಿಸಿ ಸಿಂಹನಾದ ಮಾಡುತ್ತ ನರಿಸಿಂಹವನ್ನು ಎದುರಿಸಲು ಬರುವಂತೆ ಭೀಮನನ್ನು ಎದುರಿಸಲು ಬಂದನು. ಪಾಪಿ ಜೀವಿಯು ಮರಣ ಕಾಲದಲ್ಲಿ ಭಗವಂತನ ಸ್ಮರಣೆ ಮರೆತು ಲೌಕಿಕದ ಹುಚ್ಚುಹರಟೆ ಒದರುವಂತೆ ದುಶ್ಯಾಸನನು ಭೀಮನನ್ನು ಕುರಿತು ಬಡಬಡಿಸುತ್ತಿದ್ದನು. ಅಗ ಭೀಮನು ಸಿಂಹನಾದದಿಂದ ದುಶ್ಯಾಸನನ ಮೇಲೆ ಹಾರಿ ಕೆಳಗುರುಳಿಸಿ ಅವನ ಕೊರಳಿನ ಮೇಲೆ ಕಾಲೂರಿ "ಎಲಾ ಪಾಪಿ! ನಮ್ಮನ್ನು ಷಂಡರೆಂದು ಅಪಹಾಸ್ಯ ಮಾಡುತ್ತ ಮಾನಹರಣಮಾಡಲು ದ್ರೌಪದಿಯನ್ನು ಸಭಾಂಗಣಕ್ಕೆ ಎಳೆದು ತಂದಿದ್ದಿ ಅಲ್ಲವೇ? ಇಂದು ನಿನ್ನನ್ನು ರಣರಂಗದಲ್ಲಿ ಸಕಲವೀರಾದಿ ವೀರರ ಮುಂದೆ ಪ್ರಾಣಹರಣಮಾಡಲು ನಾನು ಎಳೆತಂದಿದ್ದೇನೆ. ನನ್ನ ಸಾಹಸ ಹೆಚ್ಚೋ? ನಿನ್ನ ಸಾಹಸ ಹೆಚ್ಚೊ? ಎಂಬುದನ್ನು ಈಗ ಲೋಕವೇ ನಿರ್ಧಾರಮಾಡಲಿ? ಎಂದು ಭೀಮಸೇನನು ಮಾತನಾಡುತ್ತಿದ್ದರೆ ಅವನ ಮುಖದಲ್ಲಿ ಹಿರಣ್ಯಕಶ್ಯಪುವಿನ ಸಂಹಾರ ಕಾಲದಲ್ಲಿ ನಾರಾಯಣನ ನರಸಿಂಹಾವತಾರದ ಉಗ್ರತೆಯು ಬಂದು ನೆಲಸಿತೋ ಏನ್ನುವಂತೆ ಕಾಣುತ್ತಿತ್ತು. ಭೀಮಸೇನನು ಅಗ್ನಿಸದೃಷ

ಖಡ್ಗದಿಂದ ದುಶ್ಯಾಸನನ ಎದೆ ಸೀಳಿದಾಗ ರಕ್ತ ಬೊಗ್ಗೆಯಂತೆ ಉಕ್ಕಿ ಬಂದು ಮಡುವಿನಂತೆ ನಿಂತಿತು. ರಕ್ತದ ಮಡುವಿನಲ್ಲಿ ಮುಳುಗಿದ ಭೀಮನು ಪಾಪಿಯ ರಕ್ತವನ್ನು ಬೊಗಸೆಯಲ್ಲಿ ಮೊಗೆಮೊಗೆದು ರಣರಂಗದಲ್ಲಿ ಭೂತಗಣಗಳ ಮೇಲೆ ಎರಜಾಡುತ್ತಿದ್ದನು. ಆಗ ಶ್ರೀ ನರಸಿಂಹರೂಪವನ್ನು ಮನದಲ್ಲಿ ಸ್ಮರಿಸಿ ಅಗ್ನಿ ಕುಂಡವೆಂಬ ರಣರಂಗದಲ್ಲಿ ದುಶ್ಯಾಸನನೆಂಬ ಪಶುವನ್ನು ಗುದ್ದಿನ ಶಬ್ದವೆಂಬ ಸಾಮಗಾನದಿಂದ ರಕ್ತವೆಂಬ ಸೋಮರಸಪಾನವೆಂಬ ಅನುಸಂಧಾನದಿಂದ ದುಷ್ಟಹನನವೆಂಬ ಸೇವಾಕಾರ್ಯವನ್ನು ಶ್ರೀನರಸಿಂಹ ದೇವನಿಗೆ ಅರ್ಪಣೆ ಮಾಡಿದನು.

ದುಶ್ಯಾಸನ ಅರೆಗಣ್ಣು ಬಿಟ್ಟು ಅರೆಜೀವದಿಂದ ಬಿದ್ದಿರುವಾಗ ಎಲಾ ದುರುಳಾ! ನೋಡಿದೆಯಾ?! ನಮ್ಮ ಸ್ವಾಮಿಯ ಲೀಲಾನಾಟಕದ ಸ್ವಾರಸ್ಯ? ಈಗ ಒಂದು ಕ್ಷಣದ ಮುಂಚೆ ಸುಮಂಗಲಿಯರಾಗಿ ರಾಜವೈಭದಿಂದ ಮೆರೆಯುತ್ತಿದ್ದ ನಿನ್ನಾ ಸತಿಯರು ಈಗ ವಿಧವೆಯರಾಗಿ ದೌರ್ಭಾಗ್ಯದಿಂದ ದುಃಖಪಡುತ್ತಿರುವಂತೆ ಆಯಿತು. ನಿನ್ನ ಸಾಹಸ ನಿನ್ನ ಸಂಪತ್ತು ಈಗ ಎಲ್ಲಿ ಮಾಯವಾಯಿತು? ಹದ್ದುಕಾಗೆಗಳು ನಿನ್ನ ದೇಹವನ್ನು ಕುಕ್ಕಿ ಮಾಂಸವನ್ನು ಹಿರಿದು ತಿನ್ನಲು ಕಾದಿದೆ. ಅಷ್ಟರೊಳಗಾಗಿ ನನ್ನ ರಾಣಿಯ ಆಸೆ ಈಡೇರಿಸಲಿಕ್ಕಾಗಿ ನಿನ್ನ ರಕ್ತವನ್ನು ಕೂದಲಿಗೆ ಸವರಿ ಕರಳು ದಂಡೆ ಮುಡಿಸಿ ಆಮೇಲೆ ನರಿನಾಯಿಗಳಿಗೆ ಎಸೆಯುತ್ತೇನೆ'' ಎಂದು ಹೇಳುತ್ತಿದ್ದನು.

## ಪಾಂಚಾಲಿಯ ಪ್ರತಿಜ್ಞಾಪಾಲನೆ

ಭಾರತೀದೇವಿಯರು ರಣಚಂಡಿಯ ಅವತಾರದಿಂದ ಬಂದು ದುಶ್ಯಾಸನನ ಬಳಿಯಲ್ಲಿ ನಿಂತಾಗ ಭೀಮಸೇನನು ಪ್ರಿಯಪತ್ನಿಯನ್ನೂ ತೊಡೆಯ ಮೇಲೇರಿಸಿಕೊಂಡು ದುಶ್ಯಾಸನನ ರಕ್ತವನ್ನು ತಲೆಗೆ ಸವರಿ ಹಲ್ಲುಗಳನ್ನು ಕಿತ್ತು ಬಾಜಿ ಕರುಳುದಂಡೆಯನ್ನು ಮುಡಿಸಿ ರಕ್ತದ ರಕ್ಷೆಯನ್ನು ಹಣೆಯಲ್ಲಿಟ್ಟನು. ರಣಭೂಮಿಯಲ್ಲಿ ಆಗ ದ್ರೌಪದಿದೇವಿ ರಣದೇವತೆಯಾಗಿ ಸಂತುಷ್ಟಭಾವದಿಂದ ತನ್ನ ಪತ್ಯಂತರ್ಗತ ಸ್ವಾಮಿಗೆ ನಮಸ್ಕಾರಮಾಡಿ ಹೊರಟುಹೋದಳು.

ಕರ್ಣಾದಿಗಳೆಲ್ಲರೂ ಭೀಮನ ಅದ್ಭುತ ಕಾರ್ಯಗಳನ್ನೂ ದೂರದಲ್ಲೇ ನೋಡುತ್ತ ನಿಂತಿದ್ದರು. ಹತ್ತಿರಕ್ಕೆ ಬರಲು ಒಬ್ಬರಿಗೂ ಧೈರ್ಯವಾಗಲಿಲ್ಲ. ಭೀಮನು ದುಶ್ಯಾಸನನನ್ನು ಕೊಂದು ಮಾಂಸದ ಮುದ್ದೆಯಂತೆ ಮಾಡಿ ದುರ್ಯೋಧನನ ಬಳಿಗೆ ಬರುತ್ತಿದ್ದರೆ ದುರ್ಯೋಧನನು ಹೆದರಿ ಓಡ ಹತ್ತಿದ್ದನು. ಅರಸನೇ ಓಡುತ್ತಿದ್ದಾನೆಂದು ಸೈನಿಕರೂ ಅವನನ್ನೂ ಹಿಂಬಾಲಿಸಿ ಓಡತೊಡಗಿದರು.

ಆಗ ಭೀಮನು ರಣರಂಗದಲ್ಲಿ ಶತ್ರುತಂಡವನ್ನೂ ಆಹ್ವಾನಿಸುತ್ತ ಅತ್ತಲಿಂದಿತ್ತ ಓಡಾಡುತ್ತಿದ್ದರೆ ಹಿಮಾಚಲ ನೀಲಾಚಲಗಳು ಅದರುತ್ತಿದ್ದವು. ಆಗ ಕೃಷ್ಣನು ಭೀಮನ

ಸಾಹಸಕ್ಕೆ ಸಂತುಷ್ಟನಾಗಿ ಹೊಗಳಿದನು. ಭೀಮನು ಆಗಲೂ ನಿರ್ಲಿಪ್ತಮನಸ್ಕನಾಗಿ 'ಸ್ವಾಮೀ' ನನ್ನೊಳಗೆ ನೀನು ನಿನ್ನ ಕೃಪಾಶಕ್ತಿಯನ್ನು ತುಂಬಿ ದುಷ್ಟವಧ ಮಾಡಿಸಿರುವಿ. ನಿನ್ನಿಂದಲೇ ಎಲ್ಲವೂ ನಡೆದಿದ್ದರೂ ನನಗೆ ಸತ್ಕೀರ್ತಿಯನ್ನು ಕೊಡಿಸಿ ಉತ್ಸವಮೂರ್ತಿಯಂತೆ ಮೆರಿಸುತ್ತಿರುವೆ. ಯಾವ ಕಾಲಕ್ಕು ನನಗೆ ಅಜ್ಞಾನ ಕೊಡದೆ ನಿನ್ನಪಾದಮೂಲದಲ್ಲಿ ಮನೋಪುಷ್ಪ ಸದಾ ನೆಲಸಿರುವಂತೆ ನೀನು ಅನುಗ್ರಹಮಾಡು ದೇವಾ! ಎಂದು ಪ್ರಾರ್ಥಿಸಿಕೊಂಡನು.

ಭೀಮಸೇನನು ಉಗ್ರನಾಗಿ ವೈರಿಗಳನ್ನು ಛೇದಿಸಿ ಕರೆಯುತ್ತಿದ್ದಾಗ ದುರ್ಯೋಧನಾದಿ ವೀರರೆಲ್ಲರೂ ಕೆರಳಿ ನಿಂತು ಅವನ ಮೇಲೆ ಬಾಣದ ಮಳೆ ಸುರಿಸತೊಡಗಿದರು.

ಭೀಮಸೇನನು ಆಗ ದುರ್ಯೋಧನನ ಇಪ್ಪತ್ತುಮಂದಿ ತಮ್ಮಂದಿರನ್ನು ಕೊಂದನು. ಉಳಿದವರೆಲ್ಲರೂ ತಲೆತಪ್ಪಿಸಿಕೊಂಡು ಓಡಿಹೋದರು. ಕರ್ಣನ ಮಗ ವೃಷಸೇನನೆಂಬ ವೀರ ಕುಮಾರನು ಭೀಮಾರ್ಜುನರೊಡನೆ ಯುದ್ಧಕ್ಕೆ ಬಂದು ತನ್ನ ಅಮಿತ ಸಮರ ಸಾಹಸ ತೋರಿಸಿದನು. ಅರ್ಜುನನಿಗೆ ಆಗ ಅಭಿಮನ್ಯುವಿನ ಹತ್ಯ ಸ್ಮರಣೆಗೆ ಬಂದು ಕ್ರೋಧವಶನಾಗಿ ವೃಷಸೇನನನ್ನು ತೀಕ್ಷ್ಣಬಾಣಗಳಿಂದ ಹೊಡೆದುಕೊಂದನು.

ಕರ್ಣನು ಕ್ರೋಧದಿಂದ ಯುದ್ಧಕ್ಕೆ ಬರಲು ಕರ್ಣಾರ್ಜುನರಿಬ್ಬರಿಗೂ ಘೋರ ಯುದ್ಧ ಪ್ರಾರಂಭವಾಯಿತು.

ಕರ್ಣಾರ್ಜುನರ ಯುದ್ಧವನ್ನು ನೋಡುತ್ತಿದ್ದ ದೇವದಾನವರ ಎರದು ಪಕ್ಷದವರೂ ತಮ್ಮತಮ್ಮಲ್ಲೇ ವಾದವಿವಾದಗಳಿಂದ ಮಾತಿನ ಯುದ್ಧ ನಡೆಸುತ್ತಿದ್ದರು. ದೇವತಾಪ ಅರ್ಜುನನಿಗೆ ಜಯಘೋಷಮೊಳಗುತ್ತಿದ್ದರೆ ದೈತ್ಯಪಕ್ಷದವರು ಕರ್ಣನಿಗೆ ಜಯಘೋಷ ವೊಳಗಿಸುತ್ತಿದ್ದರು. ಹೀಗೆ ಉಭಯಪಕ್ಷದವರೂ ದ್ವೇಶವನ್ನು ಮಸೆಯುತ ಬಡಿದಾಡುತ್ತಲಿರುವಾಗ ರುದ್ರದೇವರು ಅವರ ಅಬ್ಬರವನ್ನು ನೋಡಿ ಬ್ರಹ್ಮದೇವರನ ಕುರಿತು ''ಸುರಾಸುರರಿಬ್ಬರೂ ಬಲಾಬಲಗಳ ಚರ್ಚೆಯಿಂದ ಈಗಲೇ ಹೊಡೆದಾ ಸಾಯುತ್ತಿರುವುದರಿಂದ ಯಾವ ಪಕ್ಷ ಸೋತರೂ ಜಗತ್ತೇ ವಿನಾಶಹೊಂದುತ್ತದೆ. ಆದ್ದರಿಂ ಇಬ್ಬರಿಗೂ ಸಮಾನಯುದ್ಧ ನಡೆವಂತೆ ಮಾಡಿ ಮುಂದೆಬರುವ ವಿಪತ್ತನ್ನು ಪರಿಹರಿಸ ಎಂದು ಹೇಳಿದಾಗ ಬ್ರಹ್ಮದೇವರು ಶಿವನನ್ನು ಕುರಿತು ಯೋಗೀಶ್ವರನಾದ ಶ್ರೀಕೃಷ್ಣ ಎತ್ತಕ ಇದ್ದಾನೋ ಅತ್ತಕಡೆಗೆ ಜಯವೆಂಬುದು ನಿನಗೂ ತಿಳಿದ ವಿಷಯವೇ ಆಗಿದ್ದರೂ ದೈತ್ಯ ಅಬ್ಬರಕ್ಕೆ ಅಂಜಿಕೆ ಏಕೆ? ಶ್ರೀ ಕೃಷ್ಣ ಅರ್ಜುನನ ಪಕ್ಷದಲ್ಲಿರುವುದರಿಂದ ಪಾಂಡವ ಪ ಧರ್ಮ ಪಕ್ಷವೆಂದು ತಿಳಿಯಬೇಕು. ಕರ್ಣನ ಪಕ್ಷದಲ್ಲಿ ಕಲಿದುರ್ಯೋಧನ ಇರುವುದರಿಂ

ಅದು ಅಧರ್ಮಪಕ್ಷ. ಕಲಿಯನ್ನು ಕಾಲಿಲ್ಲಿಮೆಟ್ಟಿ ಆಳುವ ಭೀಮಸೇನ, ಇಂತಹಪಕ್ಷದ ಶ್ರೀ ಕೃಷ್ಣನ ಸೇವಾರ್ಥವಾಗಿ ಅವತರಿಸಿರುವುದರಿಂದ ಪಾಪಪಕ್ಷ ನಿರ್ಮೂಲವಾಗಲೇಬೇಕು

ಎಂದನು.

ದೇವೇಂದ್ರನು ಬ್ರಹ್ಮದೇವರ ಮಾತಿನಿಂದ ತನ್ನ ಮಗನಿಗೆ ಉಂಟಾಗುವ ಜಯವನ್ನು ತಿಳಿದು ಸಂತೋಷದಿಂದ ಹಿಗ್ಗಿ ನಮಸ್ಕಾರ ಮಾಡಿದನು. ನಂತರ ಬ್ರಹ್ಮದೇವರು ಅಲ್ಲಿ ನೆರೆದಿದ್ದ ಅಸಂಖ್ಯಾತ ದೇವ ದಾನವರೆಲ್ಲರನ್ನೂ ಕುರಿತು ನೀವೆಲ್ಲರು ಕರ್ಣಾರ್ಜುನರ ಸಮರಸಾಹಸವನ್ನು ನೋಡಿ ಸಂತೋಷಪಡಲು ಬಂದವರಾದ ಕಾರಣದಿಂದ ಅವರ ಸಮರ ಸಾಹಸವನ್ನು ನಿರ್ಮಾತ್ಸರ್ಯದಿಂದ ನೋಡಿ ಸಂತೋಷಪಡಬೇಕು ಅಸೂಯೆಯಿಂದ ಕ್ರೋಧಾವೇಶ ಉಳ್ಳವರಾಗಬಾರದು ಜಯಪಜಯಗಳು ಪರಮಾತ್ಮನ ಇಚ್ಛೆಯಂತೆ ನಡೆಯುತ್ತದೆ ಅಸೂಯೆ ಏಕೆ? ಎಂದು ಘರ್ಷಣೆ ನಿಲ್ಲುವಂತೆ ಮಾಡಿದನು.

ಅರ್ಜುನನಿಗೆ ಶ್ರೀ ಹರಿ ಆಜ್ಞೆಯಂತೆ ಭೀಮನು ಬೆಂಬಲ ನೀಡುತ್ತಿದ್ದನು.

ಕರ್ಣನಿಗೆ ದುರ್ಯೋಧನ, ಅಶ್ವಥಾಮ ಸಹಾಯಕರಾಗಿದ್ದರು. ಕರ್ಣನು ತೀಕ್ಷ್ಣ ಬಾಣಗಳಿಂದ ಅರ್ಜುನನನ್ನು ಹೊಡೆದು ಘಾಸಿಪಡಿಸುತ್ತಿದ್ದನು. ಅರ್ಜುನನು ಕರ್ಣನನ್ನು ಗೆಲ್ಲಲಿಕ್ಕಾಗಿ ಅವನಿಗೆ ಆಗಾಗ ಯುದ್ಧೋತ್ಸಾಹ ತುಂಬುತ್ತಿದ್ದ ಕೃಷ್ಣನು ''ಅರ್ಜುನ! ಪ್ರತಿಜ್ಞೆ ಮಾಡಿದ ಮೇಲೆ ಅದನ್ನು ಪಾಲಿಸುವ ಸಾಹಸಮಾಡಬೇಡವೆ? ಹೀಗೇಕೆ ಕರ್ಣನನ್ನು ಕರುಣಾದೃಷ್ಟಿಯಿಂದ ನೋಡುತ್ತಾ ಅಸ್ತ್ರದಪೆಟ್ಟನ್ನು ತಾಳುತ್ತಿರುವಿ? ನಿನಗೆ ಆಗದಿದ್ದರೆ ಹೇಳು ನಾನೇ ಕರ್ಣನನ್ನು ಕೊಲ್ಲುತೇನೆ'' ಎಂದನು. ಅರ್ಜುನನು ಕೃಷ್ಣ! ಕರ್ಣನ ಸುತ್ತಲೂ ಅನೇಕ ವೀರರು ಅವನಿಗೆ ರಕ್ಷಣೆಗೆ ನಿಂತಿದ್ದಾರೆ. ನನಗೆ ನಿನ್ನ ರಕ್ಷಾ ಕವಚ ಇರುವಾಗ ಏನು ಭಯ? ಈಗ ಮೊದಲು ರಕ್ಷಕರನ್ನು ದೂರ ಓಡಿಸಿ ನಂತರ ನಿನ್ನ ಆಜ್ಞೆಯಂತೆ ಕರ್ಣನನ್ನು ವಿಚಾರಿಸುತ್ತೇನೆ'' ಎಂದು ಹೇಳಿ ಅಶ್ವತ್ಥಾಮಾದಿ ವೀರರೆಲ್ಲರನ್ನು ಭೀಮಾರ್ಜುನರು ಹೊಡೆದೋಡಿಸಿದರು. ಈಗ ಕರ್ಣ ಒಬ್ಬನೇ ಆದ ದುರ್ಯೋಧನಾದಿಗಳು ಕರ್ಣನ ಬಳಿಗೆ ಬಂದು ಭೀಮಾರ್ಜುನರನ್ನು ಎದುರಿಸಲು ಭಯಪಟ್ಟು ದೂರದಲ್ಲಿ ನಿಂತು ಭಯದಿಂದ ಕಂಪಿಸುತ್ತಿದ್ದರು.

ಅಶ್ವತ್ಥಾಮನಿಗೆ ಜಯದ ಆಸೆ ತಪ್ಪಿಹೋಯಿತು ''ದುರ್ಯೋಧನ ಭೀಮಾರ್ಜುನರ ಸಾಹಸದ ಮುಂದೆ ನಮ್ಮ ಹಠಸಾಧನೆ ನಡೆಯುವುದಿಲ್ಲ ವೆಂದು ಈಗ ನಿನಗೂ ಚೆನ್ನಾಗಿ ತಿಳಿಯಿತು. ಹಿರಿಯರು,ಗುರುಗಳೂ, ಬಂಧು-ಬಾಂಧವರೆಲ್ಲರನ್ನು ಕಳೆದುಕೊಂಡಿದ್ದಾಯಿತು ಈಗಲಾದರು ನಿನ್ನ ಜೀವ ಉಳಿಸಿಕೊಳ್ಳುವ ಯೋಚನೆ ಮಾಡಿ ಅವರಿಗೆ ಅರ್ಧ ರಾಜ್ಯವನ್ನು ಕೊಟ್ಟು ಯುದ್ಧವನ್ನು ನಿಲ್ಲಿಸು ನನಗೆ ಕೃಪಾಚಾರ್ಯನಿಗೆ ಜೀವದ ಭಯವಿಲ್ಲ ನಾವು ಯಾರ ಕೈಲೂ ಸಾಯುವುದಿಲ್ಲವೆಂಬ ವರವಿದೆ ಬ್ರಹ್ಮಣರು ಸ್ವಾರ್ಥಿಗಳೆಂದು ಉದಾಸೀನ ಮಾಡದೆ ನಿನ್ನ ಹಿತಕ್ಕಾಗಿ ಹೇಳುತ್ತಿದ್ದೇನೆಂದು ತಿಳಿದು ಬ್ರಾಹ್ಮಣರು ಲೋಕ ಹಿತಚಿಂತನೆ ಮಾಡುತ್ತಾರೆಂಬ ಭಾವ[illegible]ದ [illegible]ನ್ನ ಮಿತ್ರನಾ[illegible] ನೀನು ಒಪ್ಪುವುದರೆ ಈಗಲೇ ಯುದ್ಧ ನಿಲ್ಲಿಸುತ್ತೇನೆ''

ಎಂದನು. ''ಅಶ್ವತ್ಥಾಮ! ಭೀಮನು ನನ್ನ ತಮ್ಮ ದುಶ್ಯಾಸನನನ್ನು ರಣರಂಗದಲ್ಲಿ ಯಾವ ರೀತಿ ವಧಿಸಿ ಅವನನ್ನು ಎಷ್ಟುಪರಿಯಲ್ಲಿ ಭಂಗಪಡಿಸಿ ನಮ್ಮೆಲ್ಲರಿಗೂ ಅವಮಾನ ಮಾಡಿದ್ದಾನೆಂದು ನೀನು ಕಣ್ಣಾರೆ ನೋಡಿದ್ದರು ಅವರ ಪಕ್ಷ ವಹಿಸಿ ಮಾತನಾಡುತ್ತರುವಿ'' ಅವನ ಧೂರ್ತತನವನ್ನು ನಾನು ಎಂದೆಂದಿಗೂ ಮರೆಯಲಾರೆ ಭೀಮನಲ್ಲಿ ನನಗೆ ಕ್ಷಣಕ್ಷಣಕ್ಕೆ ಕ್ರೋಧ ವೃದ್ದಿಯಾಗುತ್ತಲಿದೆ ಪಾಂಡವರ ಕೂಡ ಸಂಧಿ ಮಾಡಿಕೋ ಎಂಬ ಮಾತು ನಿನ್ನಿಂದ ಹೇಗೆ ಹೊರಟಿತು? ಬ್ರಾಹ್ಮಣರು ನೀವೆಲ್ಲರು ನನಗೆ ಹಿತ ಶತೃಗಳೇ ಆಗಿದ್ದೀರಿ'' ಎಂದು ಕಲಿದುರ್ಯೋಧನನು ಅಶ್ವತ್ಥಾಮನನ್ನು ಬೈದು ಕಳುಹಿಸಿದನು.

ಅತ್ತ ಕರ್ಣನ ಗತಿಯಾದರೋ ಪರಿತಾಪಕರವಾಗಿತ್ತು. ಕರ್ಣನ ಸಾಹಸವೆಂದರೇನು ಸಾಮಾನ್ಯವಾಗಿರಲಿಲ್ಲ. ಅರ್ಜುನನಿಗೆ ಸರಿಸಮಾನನಾಗಿ ಸಾಹಸವನ್ನು ಸೂರೆ ಮಾಡುತ್ತಾ ಮಂತ್ರಾಸ್ತ್ರಗಳ ಪ್ರಯೋಗದಿಂದ ಗಗನಮಂಡಲವನ್ನು ಮುಚ್ಚಿದನು. ಆದರೂ ಅರ್ಜುನನ ಕೈ ಮೇಲಾಗಿ ಅವನ ಪ್ರತಿಭೆ ಅಧಿಕವಾಗಲು ಕರ್ಣನ ಬಲ ಕುಗ್ಗಿತು. ಆಗ ಬಹಳ ದಿನದಿಂದಲೂ ತನ್ನ ಬಾಣದಲ್ಲಿ ಸೇರಿ ಅರ್ಜುನನನ ಮೇಲೆ ಸೇಡುತೀರಿಸಿಕೊಳ್ಳಲು ಕಾದಿದ್ದ ನಾಗಸ್ತ್ರವನ್ನು ಪ್ರಯೋಗಮಾಡಿದನು.

ಸಕಲದಿಕ್ಕುಗಳಲ್ಲು ವಿಷದಘಾಟು ತುಂಬಿತು. ವಿಷದ ಕಿಡಿಗಳು ಕಾರುತ್ತ ಬೆಂಕಿಯ ರಾಶಿಯಂತೆ ಪ್ರಜ್ವಲ್ಯಮಾನವಾಗಿ ಬರುತ್ತಿರುವ ಸರ್ಪಾಸ್ತ್ರವನ್ನು ನೋಡಿದ ಸರ್ವರು

ಅಯ್ಯೋ ನಾಗಾಸ್ತ್ರ ಎಷ್ಟು ಭಯಂಕರವಾಗಿ ಹೋಗುತ್ತಿದೆ ಅರ್ಜುನನ ತಲೆ ಕೆಳಗುರುಳುತ್ತದೆ ಅರ್ಜುನ ಸತ್ತ ಎಂದು ಬೊಬ್ಬೆಡುತ್ತಿದ್ದಾಗ ಕೃಷ್ಣನು ತಕ್ಷಣ ರಥವನ್ನು ಐದು ಅಂಗುಲ ಕೆಳಗೆ ಕುಸಿಯುವಂತೆ ಭೂಮಿಯೊಳಗೆ ಇಳಿಸಿದನು.

ಆಗ ನಾಗಾಸ್ತ್ರಕ್ಕೆ ಅರ್ಜುನನ ಶಿರಸ್ಸಿನ ಮೇಲಿದ್ದ ಕಿರೀಟ ಮಾತ್ರ ಸಿಕ್ಕಿತು. ಶಿರಸ್ಸು ಸುರಕ್ಷಿತವಾಗಿತ್ತು. ನಾಗಬಾಣ ಕಿರೀಟವನ್ನು ಕಚ್ಚಿಕೊಂಡು ಗಗನಕ್ಕೆ ಹಾರಿದಾಗ ಅದು ಸುಟ್ಟುಹೋಯಿತು ನಾಗ ಹಾರುತ್ತಿರುವಾಗ ಕೃಷ್ಣನು ನಗುತ್ತ ''ಅರ್ಜುನ! ಮೇಲೆ ನೋಡು ತಕ್ಷಕನ ಮಗನು ಖಾಂಡವದಹನ ಕಾಲದಲ್ಲಿ ಅವನ ತಾಯಿಯನ್ನು ನೀನು ಕೊಂದಕಾರಣದಿಂದ ನಿನ್ನ ಮೇಲಿನ ದ್ವೇಶದಿಂದ ಕರ್ಣನ ಅಸ್ತ್ರದಲ್ಲಿ ಸೇರಿ ನಿನ್ನನು ಕೊಲ್ಲಲು ಕಾಯುತ್ತಿದ್ದನು. ಈಗ ಕರ್ಣನು ಆ ಅಸ್ತ್ರವನ್ನು ಪ್ರಯೋಗಿಸಿದಾಗ ಅವನಿಗೆ ಸಿಕ್ಕಿದ್ದು ನಿನ್ನ ತಲೆ ಅಲ್ಲ ಕಿರೀಟ ಸಿಕ್ಕಿತು. ಈಗ ನೀನು ಅವನನ್ನು ಅಂತ್ಯಗೊಳಿಸು'' ಎಂದನು. ಅರ್ಜುನನು ಕೃಷ್ಣನ ಅಪ್ಪಣೆಯಂತೆ ಅಶ್ವಸೇನನೆಂಬ ಸರ್ಪರಾಜನನ್ನು ಕೊಂದು ಭೂತಳದಲ್ಲಿ ಬಿಸಾಡಿದನು.

ಕರ್ಣನ ಸರ್ವಪ್ರಯತ್ನಗಳು ನಿಷ್ಫಲವಾದವು. ಪರಶುರಾಮರ ವರದಿಂದ ಬ್ರಹ್ಮಾಸ್ತ್ರವನ್ನು ಇಷ್ಟಬಂದಾಗ ಪ್ರಯೋಗಮಾಡಬಹುದಾಗಿತ್ತು. ಪರಶುರಾಮ ಬೇರೆಯಲ್ಲ, ಕೃಷ್ಣ ಬೇರೆ

ಅಲ್ಲ ಬ್ರಹ್ಮಾಸ್ತ್ರ ನಾರಾಯಣನ ಬಳಿಗೆ ಹೋಗದೆ ಹಿಂದಿರಗುತ್ತಿತ್ತು.

ಕರ್ಣಾಜುನರ ಯುದ್ದ ರಾಮರಾವಣರ ಯುದ್ದವನ್ನೆ ಸ್ಮರಣೆಗೆ ತರುತ್ತಿತ್ತು.

ಅರ್ಜುನನಿಗೆ ಶ್ರೀ ಕೃಷ್ಣನು ಪೂರ್ಣಾನುಗ್ರಹಮಾಡಿ ಗೆಲುವನ್ನುಂಟು ಮಾಡುತ್ತಿದ್ದ. ಕರ್ಣನಿಗೆ ಕಲಿದುರ್ಯೋಧನನ ರೂಪದಲ್ಲಿ ನಿಂತು ಎಷ್ಟು ಕ್ಷುದ್ರಶಕ್ತಿಯನ್ನು ಅವನಲ್ಲಿ ತುಂಬಿದರೂ ದುಷ್ಟಶಕ್ತಿ ದೈವೀಶಕ್ತಿಯನ್ನು ಎಷ್ಟು ಪ್ರಯತ್ನ ಪಟ್ಟರೂ ಗೆಲ್ಲಲಾಗಲಿಲ್ಲ.

ಕರ್ಣನು ತನ್ನ ಯೋಗ್ಯತೆಗೆ ಮೀರಿ ಪರಾಕ್ರಮವನ್ನು ಸೂರೆಮಾಡಿ ಸಮರಸಾಹಸ ತೋರುತ್ತಿದ್ದನು. ಸಮರಭುಮಿ ಮಜ್ಜಮಾಂಸಗಳಿಂದ ತುಂಬಿ ಹೋಗಿತ್ತು. ಆಗ ಭೂದೇವಿ ಕರ್ಣನ ರಥ ಚಕ್ರವನ್ನು ತನ್ನೊಳಗೆ ಸೆಳೆದುಕೊಂಡಳೋ ಎನ್ನುವಂತೆ ರಕ್ತಮಾಂಸದ ಕೆಸರಿನಲ್ಲಿ ರಥ ಚಕ್ರ ಹೂತುಹೋಯಿತು.

ಕರ್ಣ ಎಷ್ಟು ಬಲವಾಗಿ ಎಳೆದರು ಗಾಲಿಗಳು ಅಲ್ಲಾಡದೆ ಅಚಲವಾಗಿನಿಂತವು,

ಸ್ವಾಮಿಯ ಸತ್ಯ ಸಂಕಲ್ಪದಿಂದ ಕರ್ಣನ ವೀರಸಂಕಲ್ಪ ಸುಳ್ಳಾಯಿತು. ರಥ ಮುಂದೆ ಚಲಿಸದಿದ್ದರು ಬೇಡ ಇದ್ದಲ್ಲಿಂದಲೇ ತಿಕ್ಷ್ಣ ಬಾಣಗಳ ಪ್ರಯೋಗದಿಂದ ಅರ್ಜುನನನ್ನು ಗೆಲ್ಲಬಹುದೆಂದು ಉತ್ಸಾಹದಿಂದ ಬಾಣ ಹೂಡಲು ಹೋದರೆ ಮಂತ್ರಾಸ್ತ್ರಗಳ ಮರವೆ ಮುಚ್ಚಿತು ಅಸ್ತ್ರಗಳೇ ಯಾವು ಯಾವುದೆಂದು ಗೊತ್ತಾಗದಂತಾಯಿತು.

ಅರ್ಜುನನ ಬಾಣ ಮೇಲಿಂದ ಮೇಲೆ ಒಂದಾದ ಮೇಲೊಂದು ಬಂದು ಬಾರಿಸುತಿತ್ತು. ಆಗ ಕರ್ಣನು ''ಪಾರ್ಥ? ರಥ ಚಕ್ರ ಹೂತು ಹೋಗಿದೆ ನಾನು ರಥಹೀನನಾದಾಗ ನೀನು ರಥದಲ್ಲಿ ಕುಳಿತು ಯುದ್ದಮಾಡುವುದು ಧರ್ಮವಲ್ಲ ರಥಚಕ್ರ ತಿರಗುವಂತಾದ ಮೇಲೆ ನಿನ್ನ ಅಸ್ತ್ರಕ್ಕೆ ಪ್ರತ್ಯುತ್ತರ ಕಳಿಸಿ ಪರಾಕ್ರಮದ ರುಚಿ ತೋರಿಸುತ್ತೇನೆ ಸ್ವಲ್ಪ ನಿಧಾನಿಸು'' ಎಂದು ಪೌರುಷದಿಂದಲೇ ಮಾತನಾಡುತ್ತಿದ್ದನು. ಅರ್ಜುನನು ಕರ್ಣನ ಅಪದೆಶೆ ನೋಡಿ ಮರುಗಿದನು. ಶಲ್ಯನೂ ಕೈ ಬಿಟ್ಟು ಹೊರಟುಹೋದ ರಥ ಏನು ಮಾಡಿದರು ಒಂದು ಹೆಜ್ಜೆ ಮುಂದೆ ಬರುತ್ತಿಲ್ಲ ಇದೆಂಥ ಶೋದನೆ? ಎಂದು ಅವನನ್ನೆ ಆಶ್ಚರ್ಯದಿಂದ ನೋಡುತ್ತಿದ್ದರೆ ಕೃಷ್ಣ ಅರ್ಜುನನನ್ನು ಚಾವಟಿಯಿಂದ ತಿವಿದು ಅರ್ಜುನ! ನಿನ್ನ ಮಗನನ್ನು ಕೊಂದ ವೈರಿಗೆ ಕರುಣೆ ತೋರಿಸದೆ ಬೇಗ ಹೊಡೆದು ಸೇಡುತೀರಿಸಿಕೋ'' ಎಂದನು. ಆಗ ಅರ್ಜುನನು ಅಂಜಲಿಕಾಸ್ತ್ರವನ್ನು ಹೂಡಿ ''ಕೃಷ್ಣ! ನಿನ್ನ ಕೃಪಾಬಲ ನನಗಿದ್ದರೆ ಈ ಅಸ್ತ್ರ ಕರ್ಣನನ್ನು ಕೊಲ್ಲಲಿ'' ಎಂದು ಹೇಳಿ ಅಸ್ತ್ರ ಪ್ರಯೋಗಮಾಡಿದಾಗ ಅದು ಕರ್ಣನ ಮೃತ್ಯುವಾಯಿತು.

ಅಪರಾಹ್ನ ಕಾಲದಲ್ಲಿ ಅರ್ಜುನನಿಂದ ಅಂಜಲಿಕಾಸ್ತ್ರದಿಂದ ಅಸುನೀಗಿ ಬಿದ್ದದ್ದ ಕರ್ಣನನ್ನು ಕಂಡ ದುರ್ಯೋಧನನು ದುಃಖದಿಂದ ಕುಗ್ಗಿ ಹೋದ ಕುರುಸೇನೆಯ ಪ್ರಸಿದ್ಧ

ವೀರರೆಲ್ಲರೂ ರಣಮಾರಿಗೆ ಬಲಿಯಾದರೆಂದು ನಿಟ್ಟುಸಿರು ಬಿಟ್ಟು ಕಪ್ಪಿಟ್ಟ ಮುಖದಿಂದ ಹೊರಟುಹೋದ.

ಪಾಂಡವ ವೀರರೆಲ್ಲರೂ ಕರ್ಣನ ಮರಣದಿಂದ ಮಹದಾನಂದ ಹೊಂದಿ ಅರ್ಜುನನ ಪರಾಕ್ರಮವನ್ನು ಪ್ರಶಂಸೆ ಮಾಡುತ್ತಿದ್ದರು. ಧರ್ಮರಾಜನು ತನ್ನ ಕಡುವೈರಿ ಕರ್ಣ ಸತ್ತ ಸಂತೋಷದಿಂದ ಭೀಮಾರ್ಜುನರನ್ನು ಹೊಗಳಿ ಭೀಮಾರ್ಜುನರು ಪಾಂಡವ ಪಕ್ಷಕ್ಕೆ ಜಯತಂದರೆಂದು ಹೊಗಳುತ್ತಿರುವಾಗ ತನ್ನ ಭಕ್ತರಿಗೆ ಅಹಂಬಾವದಿಂದ ಅಜ್ಞಾನ ಬರಬಾರದೆಂಬ ಕರುಣೆಯಿಂದಲೂ ತನ್ನ ವಿಸ್ಮರಣೆಯ ಪಾಪ ಲೇಪವಾಗಬಾರದೆಂಬ ಕರುಣೆಯಿಂದಲು ಅರ್ಜುನನನ್ನು ಕುರಿತು ''ಅರ್ಜುನ! ಕರ್ಣನು ಸಾಮಾನ್ಯ ವೀರನಲ್ಲ ಅವನು ಸೂರ್ಯ ಪುತ್ರ ಅವನಲ್ಲಿ ಕಲಿ ಅವೇಶವಿದ್ದುದರಿಂದ ದೋಷಿಯಾದ ಸ್ವರೂಪತಃ ಅವನು ಪುಣ್ಯ ಜೀವಿ ಅವನು ಪ್ರಯೊಗಿಸಿದ ಆರು ಬಲವಾದ ಕಾರಣಗಳಲ್ಲಿ ನೀನು ಏತರಿಂದಲಾದರು ಸಾಯಬಹುದಾಗಿತ್ತು ಅದನ್ನು ನಾನು ತಪ್ಪಿಸಿ ನಿನಗೆ ಜಯ ತಂದಿದ್ದೇನೆ'' ಎಂದು ಹೇಳಿದನು. ಅವನಿಂದ ಬಂದ ನಾಗಬಾಣದಿಂದಲೇ ನಿನ್ನ ತಲೆ ಎಗರಬೇಕಾಗಿತ್ತು. ಅದರಿಂದ ಉಳಿಸಿದೆನು. ಕುಂತೀದೇವಿಯು ನನ್ನ ಮಾತಿನಂತೆ ಕರ್ಣನಲ್ಲಿ ತೊಟ್ಟ ಬಾಣ ಮತ್ತೆ ತೊಡಬಾರದೆಂದು ಮಾತು ತೆಗೆದುಕೊಂಡ ಕಾರಣದಿಂದ ನಾಗಾಸ್ತ್ರ ಮತ್ತೆ ಹೂಡಲು ಪ್ರತಿಜ್ಞೆ ಅಡ್ಡಬಂತು. ಕರ್ಣನಿಗೆ ದೈವದತ್ತ ಕವಚಕುಂಡಲಗಳಿದ್ದಿದ್ದರೆ ನಿನ್ನ ಶಸ್ತ್ರಾಸ್ತ್ರಗಳು ಅವನ ಒಂದು ರೋಮವನ್ನು ಕೊಂಕಿಸಲಾಗುತ್ತಿರಲಿಲ್ಲ. ದೇವೇಂದ್ರನಿಗೆ ಪ್ರೇರಣೆಮಾಡಿ ಬ್ರಹ್ಮಣರೂಪದಲ್ಲಿ ಯಾಚನೆಗೆ ಹೋಗಿ ಅವನಿಂದ ಕವಚ ಕುಂಡಲಗಳನ್ನು ಕಸಿಯುವಂತೆ ಮಾಡಿದೆನು.

ಅವನಿಗೆ ಅಸ್ತ್ರವಿದ್ಯೆಯ ಬಲ ಹೇರಳವಾಗಿ ಪರಶುರಾಮರಿಂದಲೇ ಲಭ್ಯವಾಗಿತ್ತು. ಅದು ನಿನ್ನ ವಿಪತ್ಕಾಲದಲ್ಲಿ ಮರೆತುಹೋಗಲಿ ಎಂದು ಪರಶುರಾಮ ರೋಷದಿಂದ ಶಾಪವಿತ್ತು ಅದರಿಂದಲು ನಿನಗೆ ಸೋಲು ಸಂಭವಿಸದಂತೆ ಮಾಡಿದೆನು. ಈ ಬಲವಾದ ಕಾರಣಗಳಿಂದ ನೀನು ಕರ್ಣನನ್ನು ಕೊಲ್ಲಲು ನಿಮಿತ್ತ ಮಾತ್ರದವನಾದಿ ನಿನ್ನಸ್ವಶಕ್ತಿಯಿಂದ ಕರ್ಣನನ್ನು ಗೆಲ್ಲಲಿಲ್ಲ'' ಎಂದು ಹೇಳಿ ಎಲ್ಲರ ಮುಂದೆ ಪಾಂಡವರಿಗೆ ಜ್ಞಾನ ಉದಯವಾಗುವಂತೆ ಮಾಡಿದನು.

ಸ್ವಾಮಿಗೆ ಕರ್ಣನನ್ನು ಕೊಲ್ಲಲಿಕ್ಕೆ ಇಷ್ಟೊಂದು ಕಾರಣಗಳು ಏಕೆಬೇಕು?

ಆದರೂ ಅಸುರ ಜನರಿಗೆ ಮೋಹ ಉಂಟುಮಾಡಲಿಕ್ಕಾಗಿಯು ಸಜ್ಜನರಿಗೆ ಸುಜ್ಞಾನ ಕೊಡಲಿಕ್ಕಾಗಿಯೂ ಅನೇಕ ಲೀಲೆಗಳಿಂದ ದುಷ್ಟವಧೆ ನಡೆಸುತ್ತಿದ್ದನು.

ಪಾಂಡವರು ಶ್ರೀ ಕೃಷ್ಣನನ್ನು ಆಶ್ರಯಿಸಿ ಅವನು ತೋರಿಸಿದ ದಾರಿಯಲ್ಲೆ ದೃಡ

ನಂಬಿಕೆಯಿಂದ ನಡೆದು ಸುಖದ ಮುಹೂರ್ತ ಕಂಡರು.

ಕೌರವರು ದೈತ್ಯ ಭಾವದಿಂದ ಕೃಷ್ಣನನ್ನು ದ್ವೇಶಿಸಿ ಕ್ಷಣಕ್ಷಣಕ್ಕು ಕಂಟಕ ಪರಂಪರೆಗಳನ್ನು ಅನುಭವಿಸುತ್ತ ಸರ್ವಸ್ವವನ್ನು ಕಳೆದುಕೊಂಡು ದುಃಖದ ದುರ್ಮುಹೂರ್ತವನ್ನು ಸ್ವಾಗತಿಸುತ್ತಲೇ ಇದ್ದಾರೋ ಎನ್ನುವಂತೆ ದ್ವೇಶಾಸುಯೆಗಳನ್ನು ಭದ್ರ ಮುಷ್ಟಿಯಿಂದ ಸಡಿಲಿಸದೆ ಕ್ರೋಧಾವೇಶಯುಕ್ತರಾಗಿ ಯುದ್ದವನ್ನು ನಿಲ್ಲಿಸಿ ಮುಂದಿನ ಸರದಿ ಯಾರಿಗೆ ಒಪ್ಪಿಸಬೇಕೆಂಬ ಆಲೋಚನೆಯಿಂದಲೇ ಶಿಬಿರಕ್ಕೆ ಹೊರಟುಹೊದರು.

ಆಪ್ತಮಿತ್ರ ಕರ್ಣನು ದುರ್ಯೋಧನನಿಗೆ ಸಕಲವಿಧದಲ್ಲೂ ಹಿತಚಿಂತಕನಾಗಿ ನಡೆಯುತ್ತಿದ್ದ. ಅಂಥ ನಿಷ್ಠಾವಂತನನ್ನು ಕಳೆದುಕೊಂಡಿರುವುದು ನನ್ನ ದೌರ್ಭಾಗ್ಯ ಎಂದು ದುರ್ಯೋಧನನು ಅತೀವ ದುಃಖದಿಂದ ಚಿಂತಿಸುತ್ತಿರುವಾಗ ಅಶ್ವತ್ಥಾಮನು ಅವನನ್ನು ಸಮಾಧಾನ ಮಾಡುತ್ತಿದ್ದನು. ಆಗ ದುರ್ಯೋಧನನು ಆಚಾರ್ಯನ ಸಲಹೆಯಂತೆ ಶಲ್ಯನನ್ನು ಕುರಿತು ''ಶಲ್ಯಾ! ಕರ್ಣನಿಗೆ ನಿನ್ನ ಪರಾಕ್ರಮ ಮತ್ತು ಸಮರ ರಹಸ್ಯದ ನಿಪುಣತೆಯಲ್ಲಿ ಬಹಳ ನಂಬಿಕೆ ಇತ್ತು ಅವನ ಇಷ್ಟದಂತೆ ನೀನು ಬಹಳ ಉತ್ಸಾಹದಿಂದ

ಸಾರಥ್ಯವನ್ನು ಮಾಡಿ ಉಪಕಾರಮಾಡಿದರೂ ಕರ್ಣನ ಯುದ್ಧಸಾಹಸ ನಿಶ್ಕಳಂಕದಿಂದ ನಡೆದರೂ ನಾವು ಪರಾಜಿತರಾಗಿರುವುದು ಆಶ್ಚರ್ಯ. ಈಗ ನಮ್ಮ ಪಕ್ಷದಲ್ಲಿ ವೀರನಾಯಕನೆಂದರೆ ನೀನು ಆದ್ದರಿಂದ ನಮಗೆ ದಳಪತಿಯಾಗಿ ಜಯಲಕ್ಷ್ಮಿಯ ಸೆರಗನ್ನು ಹಿಡಿದೆಳೆತರಬೇಕೆಂದು ಅತೀವದುಃಖದಲ್ಲಿ ಮುಳುಗಿರುವ ನಾನು ನಿನ್ನನ್ನು ಸಹಾಯಕ್ಕೆ ಅಪೇಕ್ಷೆಪಡುತ್ತಿದ್ದೇನೆ. ಅನೇಕ ವೀರರು ಶತೃಗಳ ಖಡ್ಗಕ್ಕೆ ಬಲಿಯಾದರೆಂಬ ಆಕ್ರೋಶದಿಂದಲೂ ದುಃಖದಿಂದಲೂ ಮುಳುಗಿರುವ ನನ್ನನ್ನು ನಿನ್ನ ಸಾಹಸದ ದೋಣಿಯಿಂದ ಜಯದ ದಡಕ್ಕೆ ಸೇರಿಸಿ ನಿನ್ನ ಕೀರ್ತಿ ಅಮರವಾಗುವಂತೆ ಪರಾಕ್ರಮವನ್ನು ಪ್ರಕಾಶಗೊಳಿಸು'' ಎಂದು ಹುರಿದುಂಬಿಸಿದನು.

## ಶಲ್ಯನ ಸೇನಾಧಿಪತ್ಯ

ಈಗ ಶಲ್ಯನಿಗೆ ಸೇನಾದಳದ ನಾಯಕತ್ವವಾಯಿತು. ಕೌರವಪಕ್ಷಕ್ಕೆ ಆಕಸ್ಮಾತ್ ಸಿಕ್ಕು ಈಗ ಪಾಂಡವರನ್ನೇ ದ್ವೇಶದ ಕತ್ತಿಯಲ್ಲಿ ಇರಿಯುವ ಸಂಭವವಾಯಿತು. ರಣ ಕ್ಷೇತ್ರದಲ್ಲಿ ನಿಂತ ಮೇಲೆ ಯುದ್ಧ ಆಗಲೇ ಬೇಕು ಯುದ್ಧ ಎಷ್ಟುಮುಖ್ಯವೋ ಗೆಲುವೂ ಅಷ್ಟೆಮುಖ್ಯವೆಂಬ ಧ್ಯೇಯದಿಂದ ಪಾಂಡವರನ್ನು ರಣಪರಾಕ್ರಮದಿಂದ ಎದುರಿಸಲು ಹುರುಪಿನಿಂದ ಬಂದನು.

ಪಾಂಡವರು ಈಗ ಕೌರವನಾಯಕರಲ್ಲಿ ಶಲ್ಯದಳನಾಯಕನಾಗಿ ಚುನಾಯಿಸಲ್ಪಟ್ಟಿದ್ದಾನೆಂದು ತಿಳಿದು ಹರ್ಷೋತ್ಸಾದಿಂದ ರಣಘೋಷಣೆಗಳೊಡನೆ ಬಂದರು.

ಒಂದು ಕಡೆ ಅಶ್ವತ್ಥಾಮನಿಗೂ ಭೀಮನಿಗೂ ಕರಾಳ ಕದನ ಕೆರಳಿ ಭೀಮನಿಂದ ಅಶ್ವತ್ಥಾಮನ ರಥಮುರಿದುಬಿತ್ತು.

ಶಲ್ಯನಿಗೂ ಧರ್ಮರಾಯನಿಗೂ ಯುದ್ಧ ನಡೆದು ಧರ್ಮರಾಜನ ರಥ ಶಲ್ಯನಿಂದ ಮುರಿಯಿತು ಆಗ ಅಶ್ವತ್ಥಾಮನು ಕ್ಷಣಾರ್ಧದಲ್ಲಿ ದಿವ್ಯರಥವ್ನೇರಿಬಂದು ಎದುರಿಸಿದಾಗ ದೇವದಾನವರ ಯುದ್ಧದಂತೆ ಭಯಂಕರ ಯುದ್ಧನಡೆಯಿತು. ಶಲ್ಯನು ಅರ್ಜುನನ ಧನಸ್ಸನ್ನು ಛೇದಿಸಲು ಪ್ರಯೋಗ ಮಾಡುತ್ತಿದ್ದಾಗ ಅರ್ಜುನನು ಅಕ್ಷಯಬತ್ತಳಿಕೆಗಳಿಂದ ಶಲ್ಯನ ಆಸ್ತ್ರಗಳನ್ನು ಬರಿಧುಮಾಡಿದನು. ಆಗ ಗದೆಯನ್ನು ಎತ್ತಿ ಅರ್ಜುನನ ಮೇಲೆ ಎಸೆದನು. ಅರ್ಜುನನು ಗದಾಘಾತದಿಂದ ಮೂರ್ಛೆ ಬಿದ್ದನು.

ಆಗ ಕೌರವ ಪಕ್ಷಪಾತ ಹರ್ಷೋತ್ಸಾಹದಿಂದ ಕುಣಿದರು ಶಲ್ಯ! ಭಲಾ: ಅರ್ಜುನನನ್ನು ನಿನ್ನ ಪರಕ್ರಮದಿಂದ ಎರಡುಸಲ ಮೂರ್ಛೆ ಗೆಡೆವಿದೆ'' ಎಂದು ಹೊಗಳಿ ಹುರಿದುಂಬಿಸುತ್ತಿದ್ದರು. ಶ್ರೀ ಕೃಷ್ಣನ ಶುಭ ಹಸ್ತ ಸ್ಪರ್ಶವಾದೊಡನೆ ಅರ್ಜುನನು ಮೂರ್ಛೆಯಿಂದೆದ್ದು ಯುಧ್ಧೋತ್ಸಾಹ ಹೊಂದಿದನು. ತನ್ನ ಅಸ್ತ್ರಾವಳಿಗಳಿಂದ ಶಲ್ಯನ ದೇಹವನ್ನು ಛಿದ್ರ ಛಿದ್ರಗೊಳಿಸಿದನು. ಧ್ವಜಸ್ತಂಭವನ್ನು ಕೆಡೆವಿದನು. ಸಾರಥಿಯನ್ನು ಕೊಂದನು. ಶಲ್ಯನ ಛತ್ರ ಚಾಮರ ಧ್ವಜ ಪತಾಕೆಗಳೆಲ್ಲವೂ ಮುರಿದುಬಿದ್ದವು.

ಶ್ರೀ ಕೃಷ್ಣನು ಅಸುರರಿಗೆ ಪಾಪಶಕ್ತಿ ವೃದ್ಧಿಗೊಂಡು ಬೇಗನಾಶ ಹೊಂದಬೇಕೆಂದು, ಆಗಾಗೆ ಅವರಿಗೆ ಉನ್ನತಿಯನ್ನು ತೋರಿಸಿ ಉನ್ಮತ್ತರಾಗುವಂತೆ ಮಾಡುತ್ತಾನೆ ಆದ್ದರಂದ ಶಲ್ಯನು ಹೊಸ ರಥ ಸಾರಥಿಗಳಿಂದೊಡಗೂಡಿಬಂದು ಪಾಂಡವರನ್ನು ಸೋಲಿಸುವಂತೆ ಅವನಿಗೆ ಬಲಪೌರಷಗಳನ್ನಿತ್ತು ಪಾಂಡವರು ಶಲ್ಯ ನಿಂದ ಸೋಲುವಂತೆಯು ಕೌರವರಿಗೆ ಮತ್ತೆ ಜಯದ ಆಸೆ ಮೂಡಿಬಂದು ಉನ್ಮತ್ತ ರಾಗುವಂತೆಯೂ ಸ್ವಾಮಿ ನಡೆಸಿದನು.

ಆಗ ಶಲ್ಯನು ಅನೇಕ ಪಾಂಡವ ಸೈನಿಕರನ್ನು ಕೊಂದು ರಣನಾದದಿಂದ ಅಬ್ಬರಿಸುತ್ತಿರಲು ಭೀಮನು ಶಲ್ಯನನ್ನು ಅನೇಕ ಬಗೆಯಲ್ಲಿ ಪೀಡಿಸಿ ಅವನ ಬಲೋತ್ಸಾಹಗಳನ್ನು ಬತ್ತಿಸಿದನು.

ಶಲ್ಯನು ಭೀಮನೊಡನೆ ಯುದ್ಧವನ್ನು ನಿಲ್ಲಿಸಿ ಧರ್ಮರಾಯನನ್ನು ಎದುರಿಸಿದನು ಆಗ ಧರ್ಮರಾಯನು ಶಕ್ತಿ ಎಂಬ ಆಯುಧವನ್ನು ಮಂತ್ರಿಸಿ ತನ್ನ ಧರ್ಮಗಳೆಲ್ಲವೂ ಸ್ವಾಮಿಗೆ ಅರ್ಪಿತವಾಗಿದ್ದರೆ ಅವನ ಕರುಣೆ ನನಗೆ ಜಯ ಉಂಟುಮಾಡಲಿ'' ಎಂದು ಸಂಕಲ್ಪಮಾಡಿ ಶಲ್ಯನಿಗೆ ಪ್ರಯೋಗಮಾಡಿದಾಗ ಅವನ ಎದೆ ಸೀಳಿತು. ಧರ್ಮರಾಯನ ಶಕ್ತ್ಯಾಯುಧದಿಂದ ಶಲ್ಯನು ಧರ್ಮರಾಯನಿಗೆ ಅಭಿಮುಖವಾಗಿ ರಣರಂಗದಲ್ಲಿ ಬಿದ್ದನು. ಶಲ್ಯ ಅಸುರರ ಪಕ್ಷದಲ್ಲಿ ದುರ್ಯೋಧನನ ಅಸುರಸುಖದ ಆಕರ್ಶಣೆಗೊಳಗಾಗಿ ಸಿಕ್ಕಿಬಿದ್ದನು. ದುರ್ಯೋಧನನು ಅವನನ್ನು ನಂಬಿ ಸೇನಾಧಿಪತಿ ಪಟ್ಟ ಗಟ್ಟಿದನಾದ್ದರಿಂದ ನಂಬಿದವರಿಗೆ

ಮೋಸಮಾಡಬಾರದೆಂಬ ನಿಷ್ಠೆಯಿಟ್ಟು ಧರ್ಮದಿಂದ ವೈಯಕ್ತಿಕವಾಗಿ ಹೋರಾಡಿದನೇ ಹೊರತು ಹರಿದ್ವೇಶದಿಂದಾಗಲಿ, ಪಾಂಡವರ ಮೇಲೆ ದ್ವೇಶದಿಂದಾಗಲಿ ಯುದ್ಧಮಾಡಲಿಲ್ಲ. ಭುಭಾರ ಹರಣ ಕಾರ್ಯ ಸಾದನೆ ಶ್ರೀಕೃಷ್ಣನಿಗರ್ಪಿತವಾಗಲೆಂದು ಮಾಡಿದ್ದರಿಂದ ದೇವೇಂದ್ರನು ಶಲ್ಯನನ್ನು ಆದರದಿಂದ ತನ್ನ ರಥದಲ್ಲಿ ಕೂಡಿಸಿಕೊಂಡು ಸ್ವರ್ಗಕ್ಕೆ ಕರೆದುಕೊಂಡು ಹೋಗಿ ಸತ್ಕಾರ ನೀಡಿದನು.

## ಸಂಜಯನಿಗೆ ವೇದವ್ಯಾಸರ ಅನುಗ್ರಹ

ಶಲ್ಯನು ಸತ್ತನಂತರ ಸಂಶಪ್ತಕರೆಲ್ಲರೂ ನಾಶ ಹೊಂದಿದರು. ದುರ್ಯೋಧನನ ತಮ್ಮಂದಿರೆಲ್ಲರೂ ಭೀಮನೆದುರಿಗೆ ಬಂದು ಅವನ ಗದೆಗೆ ಬಲಿಯಾಗಿ ಸತ್ತು ಬಿದ್ದರು. ಶಕುನಿಯ ಮಗ ಊಲ್ಲುಕನೆಂಬುವನು ಸಹದೇವನಿಂದ ಅವನ ಪ್ರತಿಜ್ಞೆಯಂತೆ ಸತ್ತನು. ಕೃತವರ್ಮ, ಕೃಪಾಚಾರ್ಯ, ಅಶ್ವತ್ಥಾಮ ಇವರು ಮೂರುಮಂದಿಯು ಭೀಮಗದೆಗೆ ಸಿಕ್ಕದೆ ಓಡಿಹೋಗಿ ಬದುಕಿದರು. ಇವರಿಂದ ಮುಂದೆ ಇನ್ನು ಸ್ವಲ್ಪ ಕಾರ್ಯಸಾಧನೆ ಮಾಡಿಸಬೇಕಾದ್ದರಿಂದ ಹರಿಪ್ರೇರಣಾನುಸಾರ ಅವರನ್ನು ಕೊಲ್ಲದೆ ಬಿಟ್ಟನು. ಈಗ ದುರ್ಯೋಧನ ಒಬ್ಬನೇ ಉಳಿದಿದ್ದನು. ಅವನೂ ತಲೆತಪ್ಪಿಸಿಕೊಂಡು ಓಡಿದನು. ಯುದ್ಧ ಮುಂದುವರಿಯದೆ ನಿಂತಿತು.

ಸಂಜಯನು ಗತಲೋಚನರಾಜನಿಗೆ ರಣರಂಗದಲ್ಲಿ ನಡೆಯುವ ಯುದ್ಧವಾರ್ತೆಯನ್ನು ನಿರೂಪಣೆ ಕೊಡುತ್ತಿರುವಾಗ ಶಲ್ಯನ ಮರಣಾ ನಂತರ ಏನಾಯಿತೆಂಬುದೇ ತಿಳಿಯದಂತಾಗಲು, ಧೃತರಾಷ್ಟ್ರ! ಶಲ್ಯನು ಹೋದ ನಂತರ ರಣಾಂಗಣದಲ್ಲಿ ಭೂತಪ್ರೇತ ಪಿಶಾಚಿಗಳು ಸಂಚಾರ ಕಾಣುತ್ತಿದೆ ಅಲ್ಲಿ ನಮ್ಮ ಒಬ್ಬ ವೀರರೂ ಕಾಣುತ್ತಿಲ್ಲ ಎಂದು ಹೇಳಿದನು ಆಗ ಕುರುಡ ರಾಜನು ''ಸಂಜಯ! ನನಗೇಕೋ ಬಹಳ ಭಯವಾಗುತ್ತಲಿದೆ ನೀನೇ ಯುದ್ಧ ಭೂಮಿಗೆ ಹೋಗಿ ನನ್ನ ಮಕ್ಕಳೇನಾದರೆಂದು ತಿಳಿದು ಬಾ'' ಎಂದು ಹೇಳಿಕಳುಹಿಸಿದನು.

ಸಂಜಯನು ರಣರಂಗಕ್ಕೆ ಹೊರಟುಬಂದನು ಅಲ್ಲಿ ತಲೆ ತಪ್ಪಿಸಿಕೊಂಡ ಶತೃಶೇಷ ಉಳಿಸಬಾರದೆಂದು ಹುಡುಕುತ್ತ ಬರುತ್ತಿದ್ದ ಸಾತ್ಯಕಿ ಕಾಣಿಸಿದನು. ಸಾತ್ಯಕಿಯು ಸಂಜಯನನ್ನು ಶತೃಪಕ್ಷದವನೆಂದು ಎಳೆದು ಕೊಂಡು ಹೋಗುತ್ತಿರುವಾಗ ಎದುರಿಗೆ ವೇದ ವ್ಯಾಸರು ಬಂದು ಸಾತ್ಯಕಿ! ಈತನು ಯುದ್ಧವನ್ನು ಮಾಡತಕ್ಕವನಲ್ಲ ನನ್ನ ಶಿಷ್ಯನಾಗಿದ್ದಾನೆ. ಧೃತರಾಷ್ಟ್ರನು ಯುದ್ಧದಲ್ಲಿ ತನ್ನ ಮಕ್ಕಳು ಏನಾದರೋ ಎಂಬ ಆತಂಕದಿಂದ ಚಿಂತಿಸುತ್ತಿದ್ದ ಕಾರಣ ಅವನಿಗೆ ಯುದ್ದದ ಸಕಲ ವಾರ್ತೆಯನ್ನು ತಿಳಿಸುವಂತೆ ನಾನು ಸಂಜಯನಿಗೆ ಅವನಿದ್ದಲ್ಲೇ ಯುದ್ಧರಂಗದಲ್ಲಿ ನಡೆಯುವ ದೃಶ್ಯ ಕಣ್ಮುಂದೆ ಕಾಣುವಂತೆ ದಿವ್ಯದೃಷ್ಠಿ ಕೊಟ್ಟಿದ್ದ ಕಾರಣ ಎಲ್ಲವನ್ನು ತಿಳಿಸುತ್ತಿದ್ದನು. ಈಗ ಯುದ್ಧ ನಿಂತಿರುವುದರಿಂದ ಧೃತರಾಷ್ಟ್ರ ಚಿಂತೆಯಿಂದ

ಅವನನ್ನು ''ನೋಡಿ ಬಾ'' ಎಂದು ಹೇಳಿಕಳುಹಿಸಿದ್ದಾನೆ. ಅದಕ್ಕಾಗಿ ಬಂದಿದ್ದಾನೆ ಅವನು ನಿಷ್ಪಕ್ಷಪಾತಿ ಯಾರಪಕ್ಷಕ್ಕೂ ಸೇರಿಲ್ಲ'' ಬಿಟ್ಟು ಬಿಟು'' ಎಂದರು. ಆಗ ಸಾತ್ಯಕಿಯು ಸಂಜಯನ್ನು ಬಿಟ್ಟುಬಿಟ್ಟರು.

## ದುರ್ಯೋಧನನ ದುಷ್ಟ ಶಕ್ತಿಯ ಪ್ರಯೋಗ

ಶಲ್ಯನು ಸತ್ತನಂತರ ದುರ್ಯೋಧನನು ಆಕ್ರೋಶ ಆವೇಶಗಳಿಂದ ಆಪತ್ಕಾಲಕ್ಕಾಗಿ ಇಟ್ಟು ಕೊಂಡಿದ್ದ ನೂರು ಆನೆಗಳನ್ನು ತೆಗೆದುಕೊಂಡು ಬಂದು ಅರ್ಜುನನನ್ನು ಹೊಡೆದನು. ಧರ್ಮರಾಜನನ್ನು ಬೀಳಿಸಿದನು. ಧುಷ್ಟದ್ಯುಮ್ನ, ಸಾತ್ಯಕಿ, ಧರ್ಮರಾಯ ಇವರೆಲ್ಲರ ರಥವನ್ನು ಛೇದಿಸಿದನು. ನಂತರ ಧರ್ಮರಾಯನ ಸಮೀಪಕ್ಕೆ ರಣದಬ್ಬರದಿಂದ ಬರುತ್ತಿರುವಾಗ ಭೀಮನು ಅವನನ್ನು ತಡೆದು ಆನೆಗಳನ್ನು ಆಯುಧಗಳನ್ನು ಒಂದನ್ನು ಬಿಡದೆ ನಾಶಪಡಿಸಿದನು. ದುರ್ಯೋಧನನ ಗದಾಯುದ ಒಂದನ್ನು ಮಾತ್ರ ಉಳಿಸಿದನು. ದುರ್ಯೋಧನನಿಗೆ ಉಳಿದಿದ್ದು ಅದೊಂದೆ ಒಂದು ಜೀವನಿದಿ ಕೌರವನು ಅದನ್ನು ಜೀವಜತನವಾಗಿರಿಸಿಕೊಂಡು ದೂರ್ವಸರಿಂದ ಉಪದೇಶಗೊಂಡ ಮೂರು ಸಾವಿರ ಸಿದ್ದಮಂತ್ರಗಳನ್ನು ಜಪಿಸಿ ಒಲಿಸಿಕೊಂಡು ರಣರಂಗದಲ್ಲಿ ಸತ್ತಿರುವ ಹನ್ನೊಂದು ಅಕ್ಷೋಹಿಣಿ ಸೈನ್ಯವನ್ನು ಬದುಕಿಸಿ ಈಗದೆಯಿಂದಲೇ ಪಾಂಡವರನ್ನು ಹೊಡೆದು ಕೊಲ್ಲುತ್ತೇನೆ'' ಎಂದು ಶಪಥಮಾಡಿ ದ್ವೈಪಾಯನ ಸರೋವರದಲ್ಲಿ ಕುಳಿತು ತಪೋನಿರತನಾದನು.

ಪಾಂಡವರು ದುರ್ಯೋಧನನು ತಪ್ಪಿಸಿಕೊಂಡು ಬದುಕಿದನೆಂದು ಯೋಚಾನಕ್ರಾಂತ ರಾದರು ಯಾವ ಪಾಪಿಯನ್ನು ಕೊಲ್ಲಲಿಕ್ಕಾಗಿ ಇಷ್ಟು ಘೋರ ಸಮರ ನಡಯಿತೋ ಅವನು ಬದುಕಿದನು ಅವನ ನಿಮಿತ್ತದಿಂದ ಅನೇಕ ಜೀವಕೋಟಿಗಳು ಹತ್ಯವಾದವು ಎಂದು ಮಾತನಾಡಿಕೊಂಡು ಹುಡುಕುತ್ತಿದ್ದರು ಸರ್ವಜ್ಞನಾದ ಭೀಮಸೇನನಿಗೆ ಕಲಿ ಎಲ್ಲಡಗಿದ್ದಾನೆಂಬ ರಹಸ್ಯ ತಿಳಿದಿತ್ತು. ಬಾದರಾಯಣ ಕೊಳದಲ್ಲಿ ಸಂಜೀವಿನಿ ಮಂತ್ರ ಪುನಶ್ಚರಣೆಯ ಬಲದಿಂದ ಹನ್ನೊಂದು ದಿನಗಳು ಜಲಸ್ತಂಭದಲ್ಲಿ. ತಪೋನಿರತನಾಗಿ ಎದ್ದುಬಂದು ಮೃತರಾದ ದೈತ್ಯರೆಲ್ಲರನ್ನು ಬದುಕಿಸುವ ಸಂಕಲ್ಪ ಅವನದೆಂದು ತಿಳಿದು ಶ್ರೀ ಕೃಷ್ಣನನ್ನು ಮುಂದೆ ಮಾಡಿಕೊಂಡು ಕಾಡಿನಲ್ಲಿ ಬರುತ್ತಿದ್ದಾಗ ಎದುರಿಗೆ ಬೇಡರ ಗುಂಪು ಕಾಣಿಸಿತು. ಅವರು ಪಾಂಡವರು ದುರ್ಯೋಧನನನ್ನು ಹುಡುಕುತ್ತಿದ್ದಾರೆಂಬುದನ್ನು ತಿಳಿದಿದ್ದ ಕಾರಣ ತಾವು ಕಂಡ ಆಶ್ಚರ್ಯದ ವಿಷಯವನ್ನು ಸಂತೋಷದಿಂದಲೂ ಭಯದಿಂದಲೂ ನಿರೂಪಿಸಿಕೊಳ್ಳಲು ಅವರ ಮುಂದೆ ಬಂದು ''ನಾವು ಇಲ್ಲಿ ಕಾಣುವ ಕೊಳದೊಳಗಿಂದ ಒಬ್ಬನು ಮಾತನಾಡುವುದನ್ನು ಕೇಳಿದೇವು ದಡದ ಮೇಲೆ ಮೂರು ಜನ ಬ್ರಹ್ಮಣರು ಏನೇನೋ ಯುದ್ಧ ಸಂಗತಿಯನ್ನು ಮಾತನಾಡುವುದನ್ನು ಕೇಳಿದೇವು'' ಎಂದು ಹೇಳಿದರು. ಪಾಂಡವರು ದೂರದಲ್ಲೇ ರಥವನ್ನು

ನಿಲ್ಲಿಸಿ ಸದ್ದಿಲ್ಲದೆ ಸರೋವರದ ಬಳಿ ಮರೆಯಾಗಿ ನಿಂತು ನೋಡಿದರೆ ಕೃಪ, ಕೃತವರ್ಮ, ಅಶ್ವತ್ಥಾಮ ಮೂರು ಜನರು ಮಾತನಾಡುತ್ತಿದ್ದರೆ ನೀರೊಳಗಿಂದ ದುರ್ಯೋಧನನ ಮಾತು ಕೇಳಿಸಿತು ಪಾಂಡವರು ಸರೋವರದ ಬಳಿಗೆ ಬರುತ್ತಿರುವುದನ್ನು ನೋಡಿದ ಮೂರು ಜನರು ಓಡಿಹೋದರು. ದುರ್ಯೋಧನ ನಿರಿನಲ್ಲಿ ಹುದುಗಿದನು. ಆಗ ಕೃಷ್ಣನು ''ಧರ್ಮರಾಜ! ನೀನು ದುರ್ಯೋಧನನನ್ನು ಕೆರಳಿಸಿ ಕಟು ಮಾತುಗಳಿಂದ ಯುದ್ಧಕ್ಕೆ ಕರೆ'' ಎಂದು ಆಜ್ಞೆಮಾಡಿದನು. ಆಗ ಧರ್ಮರಾಯನು ಎಲೋ ''ದುರ್ಯೋಧನ! ಮಣ್ಣಿನ ಮೋಹದಿಂದ ಎಂಥ ಶ್ರೇಷ್ಠ ವೀರರಾದಂಥ ನಿಷ್ಠಾವಂತರನೇಕರನ್ನು ರಣರಂಗಕ್ಕೆಳೆದುಕೊಂಡು ಅಧರ್ಮದ ಮಾರಿದೇವತೆಗೆ ಬಲಿಕೊಟ್ಟೆ ಹನ್ನೊಂದು ಅಕ್ಷೋಹಿಣಿ ವೀರರು ನಿನ್ನ ಪಾಪದನ್ನಕ್ಕೆ ಕೈನೀಡಿ ಕದನದ ಕಲಿಗಳಾಗಿ ನಿಂತು ಸಾವಿನ ಸೆರಗನ್ನು ಹಿಡಿದು ಹೋಗುವಂತೆ ಮಾಡಿದೆ'' ದೇಶ ದೇಶದ ವೀರರಾಜರೆಲ್ಲರನ್ನು ಸಂಪತ್ತಿನ ಸೆಳೆತದಿಂದ ಸೆಳೆದುಕೊಂಡು ಸಾವಿನದವಡೆಯಲ್ಲಿ ಸಿಕ್ಕು ನಾಶಹೊಂದುವಂತೆಮಾಡಿದೆ ಸರ್ವಸ್ವವು ನಾಶಹೊಂದಿದರು ನಿನಗೆ ವೈರಾಗ್ಯ ಬರಲಿಲ್ಲ, ಅಜ್ಞಾನ ಹೋಗಲಿಲ್ಲ ನಾನೊಬ್ಬನು ಬದುಕಿದ್ದರೆ ಸಾಕೆಂಬ ಸ್ವಾರ್ಥದಿಂದ ಈಗ ನೀರಿನಲ್ಲಿ ಅಡಗಿಕೊಡಿರುವಿ. ಈಗ ನೀನು ಜಲಗರ್ಭದೊಳಗಿದ್ದರೂ ನಾವು ಬಿಡುವುದಿಲ್ಲ, ಭೂಗರ್ಭದೊಳಗೇ ಹುದುಗಿದರೂ ನಾವು ಬಿಡುವಿದಿಲ್ಲ. ಏಕೆಂದರೆ ನಿನ್ನೊಬ್ಬನ ದೆಶೆಯಿಂದ ನಾವು ಲಕ್ಷಲಕ್ಷ ಜೀವಿಗಳನ್ನು ಕೊಂದಿದ್ದೇವೆ ಈಗ ನಿನ್ನನ್ನು ಉಳಿಸಿದರೆ ಎಲ್ಲವೂ ವ್ಯರ್ಥ ನಿನಗಾಗಿ ಎಷ್ಟು ವೀರರು ನಿಸ್ವಾರ್ಥದಿಂದ ಹೋರಾಡಿ ಪ್ರಾಣಾರ್ಪಣೆಮಾಡಿ ವೀರಸ್ವರ್ಗವನ್ನು ಸೇರಿದ್ದಾರೆ.

ಅವರೆಲ್ಲರನ್ನೂ ಕಳುಹಿಸಿ ನೀನು ಮಾತ್ರ ಹೀಗೆ ಸ್ವಾರ್ಥಪರನಾಗಿ ಹೇಡಿಯಂತೆ ಅಡಗಿದರೆ ನಗುತ್ತಾರೆಂಬ ಲಜ್ಜೆಯಿಲ್ಲದೆ ನಾಯಿಗಿಂತಲೂ ಕಡೆಯಾಗಿ ಬದುಕಿದ್ದರೇನು ಫಲ? ಬಾ ಈಚೆಗೆ'' ಇಲ್ಲದಿದ್ದರೆ ಈಗಲೇ ನಿನ್ನನ್ನು ಹೊರಗೆಳೆದು ತಂದು ಕೊಲ್ಲುತ್ತೇವೆ'' ಎಂದು ಹೇಳುತ್ತಿದ್ದಾಗ ಹುತ್ತದಲ್ಲಡಗಿದ್ದ ಸರ್ಪವನ್ನು ಬರ್ಜಿಯಿಂದ ತಿವಿದಂತೆ ದುರ್ಯೋಧನನಿಗೆ ಕೋಪವೆಂಬ ವಿಷಕಿಡಿಗಳು ಉತ್ಪತ್ತಿಯಾದವು.

ಆಗ ಬುಸುಗುಟ್ಟುತ್ತಾ ನೀರಿನಿಂದ ಹೊರಬಂದು ಶ್ವಾಸೋಚ್ಛಾಸವನ್ನು ಸಿಡಿಮದ್ದಿನಂತೆ ಬಿಡುತ್ತ ಗದೆಯನ್ನು ಗಿರಗಿರನೆ ತಿರುಗಿಸುತ್ತ ಧರ್ಮರಾಯನನ್ನು ಕೆಂಗಣ್ಣಿನಿಂದ ನೋಡುತ್ತ''ಎಲಾ ಧರ್ಮಜಾ ನಿನಗೆ ಬೇಕಾಗಿರುವುದು ರಾಜ್ಯವಲ್ಲವೇ? ನಾನು ಅಖಂಡ ಭೂಮಂಡಲದ ಸಾರ್ವಭೌಮ ನಾಗಿರಬೇಕೆಂದು ಪ್ರತಿಜ್ಞೆ ಮಾಡಿರುವುದರಿಂದ ಹರಿದು ಹಂಚಿದ ರಾಜ್ಯವನ್ನು ನಾನು ಪ್ರವೇಶ ಮಾಡುವುದಿಲ್ಲ ಆದ್ದರಿಂದಲೇ ಜಲವಾಸದಲ್ಲಿ ತಪೋವಿಹಾರದಲ್ಲಿದ್ದೇನೇ ವಿನಃ ಅಂಜಿಕೆಯಿಂದಲ್ಲ. ಈಗ ನಿನಗೇ ಅಖಂಡ ರಾಜ್ಯವನ್ನು ಬಿಟ್ಟು ನಾನು ಅರಣ್ಯಕ್ಕೆ ಹೋಗುತ್ತೇನೆ ನೀವೆ ಆಳಿರಿ. ನೀವು ಹಸ್ತಿನಾವತಿಯ ರಾಜನಾಗಿದ್ದರೆ

ನಾನು ಕಾಡಿಗೆ ಹೋಗಿತ್ತೆನೆ ನಾನು ರಾಜನಾದರೆ ನೀವು ಕಾಡಿಗೆ ಹೋಗಬೇಕು ಇಬ್ಬರೂ ಬಂದು ರಾಜ್ಯದಲ್ಲಿ ಇರಲು ಮಾತ್ತ ಸಾಧ್ಯವಿಲ್ಲ'' ಎಂದನು.

ಎಲಾ ದುರ್ಯೋಧನ! ನೀನು ಅಷ್ಟು ವೀರಪ್ರತಿಜ್ಞೆ ಮಾಡಿದ್ದರೆ ಎದುರಿಗೆ ನಿಂತು ಹೋರಾಡಿ ನಮ್ಮನ್ನು ಕಾಡಗಟ್ಟಿ ನೀನೇ ಅಖಂಡ ರಾಜ್ಯಭಾರ ಮಾಡು ಯಾರು ಬೇಡವೆಂದರು? ನೀನು ಬದುಕಿದ್ದಂತೆಯೇ ನಾವು ಹಸ್ತಿನಾವತಿಯನ್ನು ಆಳುವುದಿಲ್ಲವೆಂದು ನಾವೂ ಪ್ರತಿಜ್ಞೆ ಮಾಡಿದ್ದೇವೆ. ಆದ್ದರಿಂದ ಯುದ್ಧಮಾಡಿ ನಾವು ಸತ್ತರೆ ರಾಜ್ಯಭಾರ ನಿನ್ನದಾಗಲಿ ನೀನು ಸತ್ತರೆ ನಮ್ಮದಾಗಲಿ ನಿನ್ನ ತಪಸ್ಸು ಎಂಥ ತಪಸ್ಸೆಂದು ನಮಗೆ ತಿಳಿದಿದೆ ಆದ್ದರಂದ ಅದಕ್ಕೆ ನಾವು ಅವಕಾಶ ಕೊಡತಕ್ಕವರಲ್ಲ.

ಸಾಕ್ಷತ್ತಾಗಿ ಶ್ರೀ ಕೃಷ್ಣನೇ ನಿನ್ನನ್ನು ನಮ್ರನಾಗಿ ಕೇಳಿಕೊಂಡರೂ ಒಂದು ಮುಳ್ಳು ಮೊನೆಯಷ್ಟು ಭುಮಿ ಪಾಂಡವರಿಗೆ ಕೊಡುವುದಿಲ್ಲ ಯುದ್ಧವನ್ನೇ ಮಾಡಿ ತೆಗೆದುಕೊಳ್ಳಲಿ'' ಎಂದು ಹೇಳಿದ ನೀನು ಈಗ ಅಖಂಡ ರಾಜ್ಯ ನಮಗೆ ಕೊಡುತ್ತೆನೆಂದು ಕಪಟನಾಟಕದ ಮಾತಿನಿಂದ ಮಾತನಾಡಿದರೆ ಮರುಳಾಗುವುವರು ನಾವಲ್ಲ ನಿನಗಾಗಿ ನಮ್ಮ ಆಪ್ತೇಷ್ಟರನ್ನೆಲ್ಲಾ ಕೊಂದು ಈಗ ನಿನ್ನನ್ನುಳಿಸಿ ನಾವು ರಾಜ್ಯಭಾರಮಾಡಬೇಕೆ? ಮಣ್ಣಿಗಾಗಿ ಹೋರಾಡಿದವರು ನಾವಲ್ಲ ಧರ್ಮಕ್ಕಾಗಿ ಹೋರಾಟ ನಡೆಯಿತು. ಅಧರ್ಮನಾಶವಾಯಿತು ಈಗ ನೀನು ಜೀವಭಯದಿಂದ ವೈರಾಗ್ಯವನ್ನವಲಂಬಿಸಿ ತಪಸ್ಸಿನ ನಿಮಿತ್ತದಿಂದ ತಲೆತಪ್ಪಿಸಿಕೊಳ್ಳಲಾಗುವುದಿಲ್ಲ ನಿಂತು ಯುದ್ಧಮಾಡು ನಿನ್ನನ್ನು ಮುಗಿಸಿ ನಂತರ ಭಗವದಾಜ್ಞೆಯಾದರೆ ಅಖಂಡ ರಾಜ್ಯ ಆಳುತ್ತೇವೆ ಎಂದಾಗ ದುರ್ಯೋಧನನು ''ಎಲಾ ಧರ್ಮರಾಯ! ನಿಮ್ಮ ಅಂಜಿಕೆಯಿಂದ ವೈರಾಗ್ಯವನ್ನು ಅವಲಂಬಿಸಿ ತಪಸ್ಸಿನ ನಿಮಿತ್ತವಿಟ್ಟು ಬದುಕಲು ಬಿಡುವುದಿಲ್ಲವೆಂದು ಮಹಾಶೂರನಂತೆ ಮಾತನಾಡುತ್ತಿ. ನಾನೊಬ್ಬನೇ ನಿಮ್ಮೆಲ್ಲರನ್ನು ಸೋಲಿಸಲು ಸಮರ್ಥನಾಗಿದ್ದನೆ ನಾನು ಯುದ್ಧಕ್ಕೆ ಅಂಜತಕ್ಕವನಲ್ಲ.

ನನ್ನ ಬಾಹುಬಲದ ಪ್ರತಿಭೆಯನ್ನು ತಿಳಿದ ನೀವು ಈಗ ನಾನು ಎಲ್ಲರನ್ನು ಕಳೆದುಕೊಂಡು ನಿಸ್ಸಾಹಾಯಕನಾಗಿ ಒಬ್ಬನೇ ಇರುವುದರಿಂದಲೂ ಸಕಲ ಯುದ್ಧ ಸಾಮಗ್ರಿಗಳನ್ನು ಕಳೆದುಕೊಂಡು ಬರಿಗೈಯಿಂದ ಇರುವುದರಿಂದಲೂ ನೀವೆಲ್ಲರೂ ಒಟ್ಟು ಸೇರಿ ನನ್ನನ್ನು ಸುಲಭವಾಗಿ ಸೋಲಿಸಬಹುದೆಂಬ ಕುಯುಕ್ತಿಯಿಂದ ಬಂದು ಹೀಗೆ ಜಂಭದ ಮಾತುಗಳನ್ನಾಡಿ ನನ್ನನ್ನು ಸಮರಕ್ಕೆ ಸೆಳಯುತ್ತಿದ್ದೀರಿ. ನನ್ನ ಬಾಹುಬಲವೇ ನನಗೆ ಸಾಕು ನೀವೆಲ್ಲರು ಒಟ್ಟಾಗಿ ಬಂದು ನನ್ನೊಬ್ಬನನ್ನು ಯುದ್ಧಕ್ಕೆ ಕರೆಯುತ್ತಿದ್ದೀರೆಂದು ಹೆದುರುವುದಿಲ್ಲ. ನೀವ್ಯಾರು ನನ್ನ ಒಂದು ರೋಮವನ್ನು ಕೊಂಕಿಸಲಾರಿರಿ ಸೇಡಿನ ಸರ್ಪವಾಗಿರುವವನು ನಾನು ಸೆಣಸಾಡಿ ನಿಮ್ಮ ಸೊಕ್ಕನ್ನಡಗಿಸುವೆನು'' ಎಂದನು ಆಗ ಧರ್ಮರಾಯನು ''ದುರ್ಯೋಧನ! ನಾವು ಎಂದಿಗೂ ಅಧರ್ಮದ ಯುದ್ಧಮಾಡುವವರಲ್ಲ ನೀನು ಯಾವ ಆಯುದ ಬೇಕೋ

ಆದೇ ಆಯುದವನ್ನು ಆರಿಸಿಕೊಂಡು ಯುದ್ದಕ್ಕೆಬಾ ನಿನಗೆ ಸರಿ ಬಂದವರನ್ನೆ ಆರಿಸಿಕೊಂಡು ಯುಧ್ದಕ್ಕೆ ಕರೆ'' ಎಂದನು.

ಆಗ ಕೃಷ್ಣನು ಪಾಂಡವರಿಗೆ ವಿಪತ್ಸಂಭವಿಸದಂತೆ ಸುಖವಾಗಬೇಕೆಂಬ ಸಂಕಲ್ಪದಂತೆ ದುರ್‍ಯೋಧನನಿಂದ ನುಡಿಸಿದನು ''ಧರ್ಮರಾಜ! ನಿನ್ನ ಮಾತಿನಂತೆ ಈಗ ನಾನು ನಕುಲಸಹದೇವಾದಿಗಳನ್ನು ಯುಧ್ದಕ್ಕೆ ಕರೆದು ಅರೆಕ್ಷಣದಲ್ಲಿ ಸೋಲಿಸಿ ನಿನ್ನ ಮಾತಿನಂತೆ ಅಖಂಡ ರಾಜ್ಯ ಆಳಬಹುದು. ಆದರೆ ನಾನು ಅಷ್ಟು ಹೇಡಿಯಲ್ಲ ನಿರ್ಬಲರ ಸಂಗಡ ಸಮರ ಸರಿಯಲ್ಲ ನನಗೆ ಸಮಾನವೀರನಾದ ಭೀಮನೇ ಯುಧ್ದಕ್ಕೆ ಬರಲಿ'' ಎಂದನು.

ಆಗ ಕೃಷ್ಣನು ಧರ್ಮರಾಜನನ್ನು ಕುರಿತು ರಹಸ್ಯದಲ್ಲಿ ಧರ್ಮಜ ದುರ್‍ಯೋಧನ ವಿಷದ ಕಿಡಿ ಎಂದು ತಿಳಿದಿದ್ದರೂ ಅವನೊಡನೆ ಮಾತನಾಡುವಾಗ ನೀನು ಅಷ್ಟುಸರಳವಾಗಿ ಮಾತನಾಡುವುದೇ? ಅವನೇನಾದರೂ ಭೀಮನನ್ನು ಬಿಟ್ಟು ನಿಮ್ಮೆಲ್ಲರನ್ನು ಯುಧ್ದಕ್ಕೆಕರೆದಿದ್ದರೂ ನಿಮಗೆ ಅವನನ್ನು ಸೋಲಿಸಲು ಸಾಧ್ಯ ವಾಗುತ್ತಿರಲಿಲ್ಲ ಭೀಮನು ದುರ್‍ಯೋಧನನನ್ನು ಕೊಲ್ಲಬಲ್ಲನು. ದುರ್‍ಯೋಧನ ನನ್ನು ಈಗ ಗೆಲ್ಲಲು ದೇವಾಸುರರಿಗೂ ಸಾಧ್ಯವಾಗುವುದಿಲ್ಲ ಕಲಿಮರ್ಧನ ಶಕ್ತಿಹೊಂದಿದ ಭೀಮನೊಬ್ಬನೇ ದುರ್‍ಯೋಧನನನ್ನು ಪ್ರಯಾಸವಿಲ್ಲದೆ ಕೊಲ್ಲಬಲ್ಲನು''ಎಂದು ಎಲ್ಲರ ಮುಂದು ಭೀಮಸೇನನ ಪ್ರತಿಭೆಯನ್ನು ಹೊಗಳಿದನು.

ಜೂಜಿನ ಪ್ರಸಂಗದಲ್ಲಿ ದುರ್‍ಯೋಧನನು ದ್ರೌಪದಿಯನ್ನು ತನ್ನ ಹಾಸಿದ ತೊಡೆಯನ್ನು ತೊರಿಸಿ ಬಾ'' ಎಂದು ಕರೆದಾಗ ''ಆ ಪಾಪಿಯ ತೊಡೆಮುರಿದು ಹಾಕುತ್ತೇನೇ ಎಂದು ಭೀಮನು ಪ್ರತಿಜ್ಞೆ ಮಾಡಿದ್ದಾನೆ ಅವನ ಮಾತು ಈಗ ನಿಜವಾಗುತ್ತದೆ''ಎಂದಾಗ ಭೀಮಸೇನನು ಶ್ರೀಕೃಷ್ಣನ ಅಮೃತವಚನವನ್ನು ಕೇಳಿ ಬಹಳ ಸಂಭ್ರಮದಿಂದ ಈಗಲೆ ವಿಷ್ಣು ವೈಷ್ಣವ ದ್ವೇಶಿಯಾದ ದುರ್‍ಯೋಧನನನ್ನು ಮುರಿದೆಸೆಯುತ್ತೆನೆಂದು ವೀರವಾಣಿಯಿಂದ ಘೋಷಣೆ ಮಾಡುತ್ತಾ ಸಿಂಹನಾದಮಾಡಿದಾಗ ಆಕಾಶಾಂಗಣದಲ್ಲಿ ಸಕಲದೇವತೆಗಳು ಭೀಮಸೇನನ ದುಷ್ಟಸಂಹಾರ ಕಾರ್ಯವನ್ನು ನೋಡಲು ಕುತೂಹಲದಿಂದ ಬಂದರು.

ಭೀಮಸೇನನು ಅನೇಕ ಪಟ್ಟುಗಳಿಂದ ಅನೇಕ ಭಂಗಿಗಳಲ್ಲಿ ಗದೆಯನ್ನು ತಿರುಗಿಸುತ್ತ ಯುಧ್ದಮಾಡುತ್ತಿದ್ದನು. ಹೀಗೆ ಸ್ವಲ್ಪ ಹೊತ್ತು ಸಮರ ಸಂತೋಷವನ್ನು ಎಲ್ಲರಿಗೂ ಉಂಟುಮಾಡಿದನಂತರ ಲೋಕ ಸಮ್ಮತವಾದ ಕಾರ್ಯವನ್ನೇ ಮಾಡಬೇಕು ಎಂದು ಕೊಂಡು ''ದುರ್‍ಯೋಧನ! ಹೊಕ್ಕಳು ಕೆಳಗೆ ಹೊಡಯಬಾರದು ಎಂಬ ಧರ್ಮವಿದ್ದರೂ ಈಗ ನಾನು ವಿರೋಧ ಕಾರ್ಯವನ್ನುಮಾಡುತ್ತೆನೆ. ಏಕೆಂದರೆ ನಿನ್ನಂಥ ಪಾಪಿಗಳನ್ನು ಉಳಿಸದೆ ಯಾವರೀತಿಯಿಂದಲಾದರು ಸರಿಯೇ ಕೊಂದರೆ ಪುಣ್ಯವೇ ಬರುತ್ತದೆಂದು ಧರ್ಮಶಾಸ್ತ್ರಪ್ರೋಕ್ತವಾದರಿಂದ ಕಪಟಿಯಾದ ನಿನಗೆ ಕಪಟದಿಂದಲೇ ಶಿಕ್ಷೆ ವಿಧಿಸೆಂದು ನಾರಾಯಣನ ಪ್ರೇರಣೆ ಆಗಿದೆ'' ಎಂದು ಹೇಳುತ್ತಾ ಸ್ವಲ್ಪವು ಕ್ರೋಧಾ ಆವೇಶಗಳನ್ನು

ಪಡದೆ ತಟಸ್ಥನಾಗಿಯೇ ಯುದ್ಧಮಾಡುತ್ತಿದ್ದನು. ಏಕೆಂದರೆ ಭೀಮಸೇನನು ದುರ್ಯೋಧನನ ಮೇಲೆ ದ್ವೇಶದಿಂದ ಯುದ್ಧಮಾಡಲಿಲ್ಲ ಅವನ ಪಾಪಕ್ಕೆ ತಕ್ಕ ಶಿಕ್ಷೆ ಭಗವಂತನೇ ನನ್ನಿಂದ ಕೊಡಿಸುತ್ತಿದ್ದಾನೆಂಬ ಅನುಸಂಧಾನ ಅವನಲ್ಲಿತ್ತು ಅದನ್ನು ಲೋಕ ತಿಳಿದು ನೀತಿ ಪಾಠ ಆಗಬೇಕೆಂದು ವಾಯುಪುತ್ರನ ಧ್ಯೇಯವಾಗಿತ್ತು. ದ್ವೇಶ,ಅಸೂಯೆ,ಮಾತ್ಸರ್ಯ ಮೊದಲಾದ ಅವಗುಣಗಳು ಭೀಮನ ಸ್ಮರಣಮಾತ್ರದಿಂದಲೇ ದೂರವಾಗುತ್ತದೆ. ಸಕಲ ದೈತ್ಯಧ್ವಂಸಕನಾದ ಭೀಮನು ದುರ್ಯೋಧನನೊಡನೆ ಗದಾಯುದ್ಧ ಪ್ರಾರಂಭಿಸಿದಾಗ ತೀರ್ಥಯಾತ್ರೆಗೆ ಹೋಗಿದ್ದ ಬಲರಾಮ ಬಂದನು. ಪಾಂಡವರು ಬಲರಾಮನಿಗೆ ಪಾದ ಪ್ರಕ್ಷಾಳನೇ ನೀಡಿ ಸತ್ಕಾರ ಮಾಡಿದರು ಬಲರಾಮನು ಬರುವ ವೇಳೆಗಾಗಲೇ ಹದಿನೆಂಟನೆಯ ಯುದ್ಧ ಪ್ರಾರಂಭವಾಗಿತ್ತು. ಎಲ್ಲರು ನಾಶಹೊಂದಿ ದುರ್ಯೋಧನ ಒಬ್ಬನು ಉಳಿದಿದ್ದನು. ಭೀಮ ದುರ್ಯೋಧನರ ಗದಾಯುದ್ಧ ಪ್ರಾರಂಭವಾಗಿತ್ತು, ಬಲರಾಮನಿಗೆ ತನ್ನ ಶಿಷ್ಯನಾದ ದುರ್ಯೋಧಸನ ದುರ್ಗತಿಕಂಡು ಮರುಕ ಹುಟ್ಟಿತು.

''ದುರ್ಯೋಧನಾ! ನಿನ್ನ ನಿಮಿತ್ತದಿಂದ ಹನ್ನೊಂದು ಅಕ್ಷೋಹಿಣಿ ಸೈನಿಕರು ನಾಶಹೊಂದಿದ್ದರು. ಬಂಧು ಮಿತ್ರರು, ಮಕ್ಕಳು, ಸಹೋದರರು ಎಲ್ಲರು ಸತ್ತರು. ಆದರೂ ನೀನಿನ್ನು ಛಲ ಸಾಧಿಸುತ್ತಿರುವುದು ಏತಕ್ಕಾಗಿ? ಯಾರಿಗಾಗಿ? ಇನ್ನು ಯುದ್ಧವನ್ನು ಸಾಕು ಮಾಡು'' ಎಂದು ಹೇಳಿದನು.

ದುರ್ಯೋಧನನು ಬಲರಾಮನ ಮಾತಿಗೆ ಭಯಂಕರವಾಗಿ ನಕ್ಕು ''ಬಲರಾಮ! ಎಲ್ಲರನ್ನು ಕಳೆದುಕೊಂಡಿದ್ದಾಯಿತೆಂದು ಈಗ ಶಾಂತನಾಗಿ ಸ್ನೇಹ ಬೇಳಸಿ ರಾಜ್ಯವಾಳಬೇಕಾ!? ನೀನು ನನಗೆ ಹೇಳುತ್ತಿರುವುದು ಹಿತೋಕ್ತಿಯಲ್ಲ ಶೂಲದ ಇರಿತ'' ಎಂದು ಭಾವಿಸುತ್ತೇನೆ. ಬಲರಾಮ: ಹನ್ನೊಂದು ಅಕ್ಷೋಹಿಣಿ ಸೇನ ಸಮೂಹದ ಬಲವೆಲ್ಲವೂ ಈಗ ನನ್ನೊಬ್ಬನಲ್ಲಿ ಮೈಗೂಡಿ ಬಂದಿದೆ. ಈಗ ನನ್ನ ಕಠೋರ ಕಾಳಗ ನೋಡು'' ಎಂದು ಹೇಳುತ್ತಾ ರಣರುದ್ರನಾಗಿ ಗದಾಚಾಲನೆ ತೊರಿಸುತ್ತಿದ್ದನು.

ಗದೆಗಳೆರಡೂ ತಿರಗುತ್ತಿದ್ದರೆ ಅದು ಯಾರ ಕಣ್ಣಿಗೂ ಕಾಣಿಸುತ್ತಲೇ ಇರಲಿಲ್ಲ. ಅಷ್ಟು ವೇಗವಾಗಿ ತಿರಗುತ್ತಿದ್ದವು ಲಟಪಟವೆಂಬ ಶಬ್ದ ಎಲ್ಲೆಡೆಯಲ್ಲೂ ವ್ಯಾಪಿಸಿತು.

ದುರ್ಯೋಧನನು ಘಟಸರ್ಪಗಳೆರಡು ಸೆಣಸಾಡುವಂತೆ ಮಂಡಲಕಾರವಾಗಿ ಸುತ್ತಿವುದು ಸೆಟೆದು ನಿಲ್ಲುವುದು ಗಗನಕ್ಕೆ ಹಾರುವುದು ಕುಸಿದು ಮಲಗುವುದು ಹೀಗೆ ನಾನಾ ಭಂಗಿಗಳಲ್ಲಿ ಗದಾಯುದ್ಧಮಾಡುತ್ತ ಭೀಮನನ್ನು ಹೊಡೆಯಲು ಪ್ರಯತ್ನ ಪಡುತ್ತಿರುವಾಗ ಒಮ್ಮೆ ಅದನ್ನು ತಲೆಕೆಳಗೆ ಮಾಡಿ ಕಾಲು ಮೇಲೆ ಮಾಡಿ ಭೀಮಸೇನನಿಗೆ ಹೊಡೆಯಲು ಹೋದಾಗ ಭೀಮಸೇನನು ಕೃಷ್ಣನ ಸೂಚನೆಯಂತೆ ದುರ್ಯೋಧನನ ಎರಡು ತೊಡೆಗಳನ್ನು ಗದೆಯಿಂದ ಕುಟ್ಟಿ ಮುರಿದು ಬೀಳಿಸಿದನು. ಮೊದಲು ಬಾರಿಗೆ ತನ್ನ ಕಾಲುಗಳನ್ನ ಎತ್ತಿದುರ್ಯೋಧನನ

ಮುಖಕ್ಕೆ ಒದ್ದನು.ಏಕೆಂದರೆ ಜೂಜಿನ ಪ್ರಸಂಗದಲ್ಲಿ ದುರ್ಯೋಧನನು ''ಧರ್ಮರಾಜ! ನಿನ್ನಲ್ಲಿ ಈಗ ಪಣವಸ್ತುಗಳಿಲ್ಲವೇ! ಹಾಗದರೆ ಕೃಷ್ಣನನ್ನು ಪಣಕಿಟ್ಟು ಆಡು'' ಎಂದಿದ್ದನು. ''ಎಲಾ! ದುರ್ಯೋಧನ! ಇಂಥಾ ದುರ್ವಾಕ್ಯವನ್ನಾಡಿದ ನಿನ್ನ ಬಾಯನ್ನು ನನ್ನ ಕಾಲಿಂದ ಒದ್ದು ಮತ್ತೆ ನೀನು ಮಾತನ್ನೆ ಆಡದಂತೆ ಮಾಡುತ್ತೆನೆ''ಎಂದು ಪ್ರತಿಜ್ಞೆ ಮಾಡಿದ್ದ ಕಾರಣದಿಂದ ದುರ್ಯೋಧನನಿಗೆ ಮೊದಲು ಭೀಮನಿಂದ ಸಿಕ್ಕ ಶಿಕ್ಷೆ ತೊಡೆಮುರಿಸಿಕೊಂಡು ಬಿದ್ದಾಗ ಒದೆತ ದುರ್ಯೋಧನನ ಒಂದೊಂದು ಅಪರಾಧವನ್ನು ಸಾರಿಸಾರಿ ಹೇಳುತ್ತ ಬಂದು ''ದುರ್ಯೋಧನಾ! ಸಂಧಾನಕ್ಕೆ ಒಪ್ಪಿಕೋ ಎಂದು ಶ್ರೀಕೃಷ್ಣ ಹಿತನುಡಿ ನುಡಿದರೆ ಅವನನ್ನು ಕಟ್ಟಬೇಕೆಂದು ಮಾಡಿದ ನಿನ್ನ ಕುಕಾರ್ಯಕ್ಕೆ ಈ ಒದೆತ'' ಎಂದು ಒದ್ದನು. ನಾವು ನಮ್ಮಣ್ಣನ ಮಾತಿಗೆ ಎದುರಾಡದೆ ಆಜ್ಞಾವಹಿಸಿ ಕಾಡಿಗೆ ಹೊರಟಾಗ ನೀನು ಅಪಹಾಸ್ಯದಿಂದ ನಕ್ಕ ನಿನ್ನ ಪಾಪಮುಖಕ್ಕೆ ನನ್ನ ಒದೆತ ಎಂದು ಹೇಳುತ್ತ ಅರೆಜೀವದಿಂದ ಬಿದ್ದಿದ್ದ ಕೌರವರಾಜನನ್ನು ಭೀಮ ಒದೆಯುತ್ತಿರುವುದನ್ನು ನೋಡಿದ ಬಲರಾಮನಿಗೆ ಸಹಿಸಲಾಗಲಿಲ್ಲ. ಇಲ್ಲಿರುವವರೆಲ್ಲರೂ ಪಾಂಡವ ಪಕ್ಷಪಾತಿಗಳು ಇವರ ಮುಂದೆ ಏನು ಹೇಳಿದರು ಪ್ರಯೋಜನವಿಲ್ಲ ಎಂದು ಕೊಂಡು''ದೇವತೆಗಳಿರಾ! ಭೀಮನು ದುರ್ಯೋದನನಿಗೆ ಮಾಡುತ್ತಿರುವ ಅನ್ಯಾಯವನ್ನು ನೋಡಿದಿರಾ? ಸತ್ತು ಮಲಗಿರುವನ ಮೇಲೆ ಸೇಡುತೀರಿಸಿಕೊಳ್ಳಲು ಒದೆಯುವುದು ಧರ್ಮವೇ? ಎಂದು ಬಲರಾಮನು ಹೇಳುತ್ತಿದ್ದರೂ ಭೀಮನು ಬಿಡದೆ ಕಾಲುಕಾಲಲ್ಲಿ ಒದ್ದು ಭಂಗಪಡಿಸುತ್ತಲೆ ಇದ್ದನು. ಆಗ ಬಲರಾಮನು ಮುಸಾಲಾಯುಧವನ್ನು ತೆಗೆದುಕೊಂಡು ಭೀಮನನ್ನು ಹೊಡೆದು ಕೊಂದುಬಿಡುವಂತೆ ಬರುತ್ತಿದ್ದರೂ ಭೀಮನು ಲೆಕ್ಕಿಸದೆ ಒದೆಯುತ್ತಲೆ ಇದ್ದನು. ಆಗ ಕೃಷ್ಣನು ಬಲರಾಮನ ಕೈ ಹಿಡಿದು ಮುಂದೆ ನುಗ್ಗದಂತೆ ತಡೆದು ನಿಲ್ಲಿಸಿದನು. ಆಗ ಬಲರಾಮನು ''ಕೃಷ್ಣಾ! ಭೀಮನು ಮಾಡುತ್ತಿರುವ ಅನ್ಯಾಯ ಅಕೃತ್ಯಗಳು ನಿನಗೆ ಸಮ್ಮತವಾ?''ಎಂದನು.

ಆಗ ಕೃಷ್ಣನು ''ಬಲರಾಮ!ಮೇಲುನೋಟಕ್ಕೆ ಅವನು ಮಾಡುವ ಕಾರ್ಯ ಅಕಾರ್ಯವೆಂದು ಕಾಣಬಹುದು. ಆದರೆಭೀಮನಿಗೆ ಯವ ಕಾಲಕ್ಕು ಅಜ್ಞಾನ

ಆಕ್ರೋಶಾದಿ ದೋಶಗಳಿಲ್ಲ. ಅವನು ದುಷ್ಟ ಸಂಹರ್ಧನಕ್ಕಾಗಿಯೇ ಅವತರಿಸಿದ್ದಾನೆ'' ಎಂದರೆ ಕೃಷ್ಣಾ: ಹೊಕ್ಕಳ ಕೆಳಗೆ ಹೊಡೆಯುವುದು ಧರ್ಮವಾ?'' ಎಂದನು. ದುರ್ಯೋಧನನು ಕಪಟತನದ ಜೂಜಿನಿಂದ ಪಾಂಡವರನ್ನು ಕಾಡಿಗೆ ನೂಕಿದ್ದು ಅಧರ್ಮ. ಏಕೆಂದರೆ ನಿರಪರಾಧಿಗಳನ್ನು ಕಪಟತನದಿಂದ ಹಿಂಸಿಸಿದರೆ ಅದು ಅಧರ್ಮವಾಗುತ್ತದೆ. ದುರ್ಯೋಧನನು ಹಿಂಸಾಜೀವಿ ಸಜ್ಜನರು, ಸಾಧುಗಳನ್ನು ಅಪಮಾನಪಡಿಸುವ ದೈವದ್ರೋಹಿ ಆದ್ದರಿಂದ ಅವನನ್ನು ಕಪಟತನದಿಂದ ಕೊಂದರು ಅದು ಅಧರ್ಮವಲ್ಲ. ಧರ್ಮ ಸಾಧನೆಯೆಂದೇ ತಿಳಿಯಬೇಕು.

ಲೋಕ ಕಲ್ಯಾಣಾರ್ಥವಾಗಿ ಯಾಗವನ್ನು ಮಾಡಿದಾಗ ಪಶುವನ್ನು ಬಲಿಕೊಟ್ಟು

ದೇವತೆಗಳನ್ನು ಸುಪ್ರೀತಿಗೊಳಿಸುವಂತೆ ಈಗ ನಡೆದ ಸಮರಯಜ್ಞದಲ್ಲಿ ಇಡೀ ಪ್ರಪಂಚವೇ ನಾಶ ಹೋಂದುವ ಸಂಭವ ಒದಗಿದಾಗ ದುರ್ಯೋಧನನೆಂಬ ಪಶುಬಲಿಯನ್ನು ಕೊಟ್ಟು ಲೋಕಕ್ಕೆ ಶುಭವನ್ನುಂಟುಮಾಡಿದಂತಾಯಿತೆಂದು ತಿಳಿಯಬೇಕು.

ಭೀಷ್ಮ,ದ್ರೋಣ,ಕರ್ಣಾದಿಗಳೆಲ್ಲರೂ ಪ್ರಚಂಡ ಪರಾಕ್ರಮಿಗಳು. ಅವರೆಲ್ಲರು ದೈತ್ಯರ ಸಂಹರ್ಧನಕ್ಕಾಗಿಯೇ ಅವತರಿಸಿ ಬಂದವರು. ಆದರೂ ಅವರಲ್ಲಿ ಕಲಿ ಆವೇಶವಾಗಿ ಸಜ್ಜನರಿಗೆ ಸಾವಿನ ಸಂಭವವಾದಾಗ ಅವರೆಲ್ಲರನ್ನು ಕಪಟತನದಿಂದಲೇ ಕೊಲ್ಲಿಸಿದರು. ಅದು ಧರ್ಮವೆಂದು ತಿಳಿಯಬೇಕು. ಭೀಷ್ಮನಿಂದ ಪ್ರತಿದಿನವೂ ಹತ್ತುಸಾವಿರ ಜೀವ ಹರಣ ಆಗುತ್ತಿದ್ದಾಗ ಅವನ ಮುಂದೆ ಶಿಖಂಡಿಯನ್ನು ನಿಲ್ಲಿಸಿ ಯುದ್ಧ ಆಗದಂತೆ ಮಾಡಿದ್ದಾಯಿತು. ದ್ರೋಣನ ಅಮಿತ ಪರಾಕ್ರಮವನ್ನು ತಡೆಯಲಾಗದೆ ಅಪಾರ ಜೀವನಷ್ಟ ಉಂಟಾದಾಗ ಅಶ್ವತ್ಥಾಮನೆಂಬ ಆನೆಸತ್ತಾಗ ಅಶ್ವತ್ಥಾಮನೇ ಸತ್ತನೆಂದು ಧರ್ಮರಾಜನ ಬಾಯಲ್ಲಿ ನುಡಿಸಿ ಅವನಿಂದ ಯುದ್ಧ ನಿಲ್ಲಿಸಿದ್ದಾಯಿತು. ಕರ್ಣನ ಸಾಹಸ ಶಕ್ತಿ ಸಹಿಸಲಾರದಷ್ಟಾದಾಗ ಅವನ ಬಲ ಕುಂದಿಸಲಿಕ್ಕಾಗಿ ರಥ ಚಕ್ರಗಳನ್ನೂ ಭೂ ದೇವಿ ನುಂಗುವಂತೆ ಮಾಡಿ ರಥ ಅಲಗಾಡದಂತೆ ಮಾಡಿ ಮಂತ್ರಾಸ್ತ್ರಗಳ ವಿಸ್ಮರಣೆ ಉಂಟಾಗುವಂತೆ ಮಾಡಿದ್ದಾಯಿತು. ವಿಪತ್ಸಂಭವಿಸಿದಾಗ ಅನೇಕ ಸಜ್ಜನ ಹಾಗೂ ಸಧರ್ಮ ರಕ್ಷಣೆಗಾಗಿ ಒಬ್ಬರನ್ನು ಕೊಂದರೆ ಪಾಪವಲ್ಲ ಧರ್ಮಕಾರ್ಯವೆಂದು ತಿಳಿದು ಸಂತೋಷಪಡಬೇಕು. ಸಕಲ ದೈತ್ಯ ಸಮೂಹವೂ ನಾಶಹೊಂದಿ ಭೂಭಾರಹರಣ ಕಾರ್ಯದ ಈ ಹೋರಾಟದಲ್ಲಿ ನಡೆದ ಶ್ರೇಷ್ಠ ಸಾಹಸ ಕಾರ್ಯಗಳೆಲ್ಲವೂ ಮುಖ್ಯ ಪ್ರಾಣನಿಂದೊಡಗೂಡಿ ನನ್ನಿಂದಲ್ಲೇ ನಡೆದಿದೆ. ಆದ್ದರಿಂದ ಭೀಮಸೇನನು ಮಾಡಿದ್ದು ಧರ್ಮಯುದ್ಧವೆಂದು ತಿಳಿದವರಿಗೆ ಪುಣ್ಯಪ್ರಾಪ್ತಿ ದುಷ್ಟಸಂಹಾರ ಧರ್ಮಸಾಧನವೆಂದು ತಿಳಿದುವರಿಗೆ ಅರಿಷ್ಟ ನಿವಾರಣೆ ಆಗುತ್ತದೆ. ಎಂದು ಶ್ರೀಕೃಷ್ಣನು ಸಕಲರೂ ಕೇಳುವಂತೆ ಹೇಳುತ್ತಿರುವಾಗ ರಣರಂಗದಲ್ಲಿ ಮುರಿದ ದೇಹದಿಂದ ಅರೆಜೀವವಾಗಿ ಬಿದ್ದಿದ್ದ ದುರ್ಯೋಧನನು ಕ್ರೋಧದಿಂದ ಬುಸುಗುಟ್ಟುತ್ತ "ಕೃಷ್ಣಾ! ಸಾಕುಮಾಡು ಪಾಂಡವರ ಪ್ರಶಂಸೆಯನ್ನು ಪರರನ್ನು ರೀತಿನೀತಿಗಳಿಲ್ಲದೆ ಕೊಂದದ್ದೇ ಒಂದು ಮಹಾದೊಡ್ಡ ಧರ್ಮವೆಂದು ಹೇಳುತ್ತಿದ್ದಿ.

ನಾನು ಲೋಕಪ್ರಖ್ಯಾತನಾದ ವೀರನಾಗಿದ್ದರೂ ಜೀವಹರಣದ ಕಾರ್ಯಮಾಡಿ ನನ್ನ ಬಲವನ್ನು ಪ್ರದರ್ಶನ ಮಾಡಲಿಲ್ಲ. ವೀರನಾಗಿ ರಾಜ್ಯ ಪರಿಪಾಲನೆ ಮಾಡಿ ಪ್ರಜಾಕೋಟಿಗಳನ್ನೂ ಸುರಕ್ಷಿತವಾಗಿ ಕಾಪಾಡಿದೆನು. ಅನೇಕ ಕೆರೆ-ಕಟ್ಟೆ ಭಾವಿಗಳನ್ನು ನಿರ್ಮಾಣಮಾಡುವುದರಲ್ಲೂ -ರಾಜ್ಯಗಳನ್ನೂ ನಿರ್ಮಾಣ ಮಾಡುವುದರಲ್ಲಿ ನನ್ನ ಧನವನ್ನೂ ವ್ಯಯಮಾಡಿದೆನು. ರಾಜಭೋಗವನ್ನು ಆನಂದದಿಂದ ಅನುಭವಿಸಿ ಸಾಮ್ರಾಜ್ಯ ಲಕ್ಷ್ಮಿಯನ್ನು ಸಂತುಷ್ಟ ಮನದಿಂದ ಆಳಿದೆನು. ಕುಂದುಕೊರತೆಗಳಿಗೆಡೆಯಿಲ್ಲದ ಹಸ್ತಿನಾವತಿ ಮಹದೈಶ್ವರ್ಯದ ಮೇರುಶಿಖರದಂತೆ

ಮೆರೆಯುತ್ತಿದೆ. ಕೊನೆಯ ಉಸರಿನ ತನಕ ವೀರಯೋಧನಾಗಿ ಹೋರಾಡಿ ನನ್ನ ರಾಜ್ಯ ಛಿದ್ರವಾಗಲು ಬಿಡದೆ ಅಖಂಡ ಭೂ ಮಂಡಲಾದಿಪತಿಯಾಗಿಯೇ ವೀರಸ್ವರ್ಗವನ್ನೂ ಸೇರುತ್ತಲಿದ್ದೇನೆ.

ನತದೃಷ್ಟರಾದ ಪಾಂಡವರು ನಿಜವಾದ ಪರಾಕ್ರಮ ಧರ್ಮದಿಂದ ನನ್ನನ್ನುಗೆಲ್ಲಲಾರದೆ ನನ್ನನ್ನು ಕೊಂದು ಏನುಸಾದಿಸಿದಂತಾಯಿತು? ಭಾರತದ ವೀರರತ್ನಗಳು ಕಣ್ಮರೆ ಆಗಿ ಹೋದಮೇಲೆ ವೀರರಕ್ತದ ಸಂತತಿಗಳೇ ಸಾಲುಗಟ್ಟಿ ಸ್ವರ್ಗಲೋಕಕ್ಕೆ ತೆರಳಿರುವಾಗ ಈ ಸತ್ವಹೀನ ಭೂಮಿಯಲ್ಲಿದ್ದು ಫಲವೇನು? ಛಲದಂಕಮಲ್ಲನಾಗಿ ವೀರ ಮಣಿಗಳು ಹೋದದಾರಿಯನ್ನೇ ಅನುಸರಿಸಿ ಹೋಗುತ್ತೇನೆ ಎಂದು ಹೇಳುತ್ತಿದ್ದಾಗ ಅಸುರರಿಗೆ ಅಜ್ಞಾನ ಮತ್ತಷ್ಟು ಅಧಿಕವಾಗಿ ಅಧಂತಮನಸ್ಸಿಗೆ ಬೀಳಬೇಕೆಂಬ ಸಂಕಲ್ಪದಿಂದ ದೇವತೆಗಳು ಹೂಮಳೆ ಕರೆದರು.

ದುರ್ಯೋಧನನು ಆಗ ತನ್ನ ಪಾಪಕರ್ಮಗಳೆಲ್ಲವೂ ಸಾಹಸಕಾರ್ಯಗಳೇ ಆಗಿರುವುದರಿಂದ ದೇವತೆಗಳೂ ತನ್ನ ಪೌರುಷಕ್ಕೆ ಮೆಚ್ಚಿದ್ದಾರೆಂದು ಪಾಪಕರ್ಮಕ್ಕೆ ಪ್ರಶ್ಚಾತ್ತಾಪ ಪಡೆದೆ ಸಂತೋಷದಿಂದ ರಕ್ತದ ಹೊಂಡದಲ್ಲಿ ಮುಳುಗಿದ್ದರೂ ಮರುಕವಿಲ್ಲದೆ ವೇದನೆಯನ್ನು ಅನುಭವಿಸುತ್ತಿದ್ದನು. ಆಗ ಶ್ರೀ ಕೃಷ್ಣನು ಪಾಂಡವರನ್ನು ಕುರಿತು ''ದುರ್ಯೋಧನನು ತನ್ನ ಸರ್ವಸ್ವವನ್ನೂ ಕಳೆದುಕೊಂಡು ಅನಾಥನಂತೆ ರಣಭೂಮಿಯಲ್ಲಿ ಛೀದ್ರದೇಹದಿಂದ ಬಿದ್ದಿದ್ದರೂ ತನ್ನ ಪಾಪಕ್ಕೆ ಪಶ್ಚಾತ್ತಾಪಹೊಂದದೆ ತನ್ನ ದುರ್ಗತಿಗೆ ದು:ಖಪಡದೆ ಇಂಥ ಘೋರಸಂಕಟಕ್ಕೆ ಸಿಕ್ಕಿದ್ದರೂ ದುರುಭಿಮಾನವನ್ನು ಬಿಡದೆ ನನ್ನ ಸಮಾನಪುಣ್ಯವಂತರೇ ಇಲ್ಲ. ನನ್ನಷ್ಟು ಸುಖಿಗಳೇ ಇಲ್ಲವೆಂದು ಮದೋನ್ಮತನಾಗಿ ಹೇಳುತ್ತಿದ್ದಾನೆ. ಆತ್ಮಸ್ತುತಿ ಹರಿದ್ವೇಶ ವೈಷ್ಣವದ್ವೇಶವನ್ನು ಪ್ರತಿ ಉಸುರಿನಲ್ಲೂ ಮಾಡಿ ಪಾಪವನ್ನು ಹೆಚ್ಚಿಸಿ ಕೊಳ್ಳುತ್ತಿದ್ದಾನೆ ಅಂಧಂತಮಸ್ಸಿಗೆ ಹೋಗಲಿಕ್ಕೆ ಸಾಧನ ನಡೆಸುತ್ತಿದ್ದಾನೆ. ನಿಮ್ಮ ವೈರಿಮುರಿದುಬಿದ್ದನು. ನಿಮಗಿನ್ನು ರಣರಂಗದಲ್ಲಿ ಕೆಲ್ಸವಿಲ್ಲ ಹೊರಡಿರಿ'' ಎಂದು ಹರಿಯು ಮಂಗಳದ ಮಾತನ್ನಾಡಿದಾಗ ಪಾಂಡವರು ಹರ್ಷೋತ್ಸಾಹದಿಂದ ಜಯಘೋಷವನ್ನು ಮೊಳಗಿಸುತ್ತ ಚತುರಂಗಸೇನಾಯುಕ್ತರಾಗಿ ಶ್ರೀಕೃಷ್ಣನನ್ನು ಹಿಂಬಾಲಿಸಿ ಹೋಗುತ್ತಿದ್ದರೆ ಬ್ರಹ್ಮಾದಿದೇವತೆಗಳೆಲ್ಲರೂ ಸ್ವಾಮಿಗೆ ಜಯಘೋಷದೊಂದಿಗೆ ಮಂದಾರ ಪಾರಿಜಾತದ ಮಳೆ ಕರೆದರು. ಶ್ರೀಕೃಷ್ಣನು ಭೂಭಾರಹರಣ ಕಾರ್ಯವನ್ನು ಮಾಡಿಸಿದ ನಂತರ ಸಮಸ್ತ ರಾಜರೊಂದಿಗೆ ಪಾಂಡವರ ಶಿಬಿರಕ್ಕೆ ಹೊರಟರು.

ತರುವಾಯ ಧೃತರಾಷ್ಟ್ರನಿಗೆ ವೈಶ್ಯಪತ್ನಿಯಲ್ಲಿ ಜನಿಸಿದ ಯುಯುತ್ಸು ಎಂಬುವನು ಶ್ರೀಕೃಷ್ಣನನ್ನು ಕುರಿತು ''ಸ್ವಾಮೀ! ನನ್ನ ತಂದೆ ಧೃತರಾಷ್ಟ್ರನು ಶತಪುತ್ರರನ್ನು ಕಳೆದುಕೊಂಡು ದುಃಖಿತಪ್ತನಾಗಿದ್ದಾನೆ. ನಾನು ಅವನ ಸಮೀಪಕ್ಕೆ ಹೋಗಿ ಅವನನ್ನು ಸಮಾಧಾನಮಾಡುತ್ತೇನೆ

ಆಜ್ಞೆ ನೀಡು'' ಎಂದು ಕೇಳಿದಾಗ ಕರುಣಾಳು ಕೃಷ್ಣ ಹಾಗೆಯೇ ಮಾಡು ನಿನ್ನ ಇಷ್ಟದಂತೆ ನೀನು ಧೃತರಾಷ್ಟ್ರನ ಬಳಿಗೆ ಹೋಗಿ ಅವನನ್ನು ಸಮಾಧಾನಪಡಿಸು ನಾನು ಇಷ್ಟರಲ್ಲೇ ಬರುತ್ತೇನೆ '' ಎಂದು ಹೇಳಿ ಕಳುಹಿಸಿದನು.

ನಂತರ ಸ್ವಾಮಿಯ ಮುಂದಿನ ಕಾರ್ಯನಡೆಸಲಿಕ್ಕಾಗಿ ಪಾಂಡವರನ್ನು ಕೌರವರ ಶಿಬಿರದ ಕಡೆಗೆ ವಿಶ್ರಾಂತಿಗಾಗಿ ಕರೆಕುಕೊಂಡು ಹೋಗಿ ರಥದಲ್ಲಿ ದೇವದೇವೋತ್ತಮನಾದ ಸ್ವಾಮಿಯನ್ನೇ ಆಶ್ರಯಿಸಿ ನೆಲಸಿದ್ದ ಮಂತ್ರಾಭಿಮಾನಿ ದೇವತೆಗಳನ್ನೆಲ್ಲಾ ಕಳುಹಿಸಲಿಕ್ಕಾಗಿ ತನ್ನ ರಥದಿಂದ ಮೊದಲು ಅರ್ಜುನನನ್ನು ಇಳಿ ಎಂದು ಹೇಳಿ ಅವನನ್ನು ಕೆಳಗಿಳಿಸಿ ಸ್ವಾಮಿ ನಂತರ ಇಳಿದಾಗ ರಥ ದಗ್ಗನೆ ಹತ್ತಿ ಉರಿಯಿತು. ಏಕೆಂದರೆ ಭೀಷ್ಮದ್ರೋಣಾದಿಗಳಂಥ ಶ್ರೇಷ್ಠ ಮಣಿಗಳು ಪ್ರಯೋಗಿಸಿದ ಅಸ್ತ್ರಾಭಿಮಾನಿ ದೇವತೆಗಳು ಶ್ರೀಕೃಷ್ಣನ ಆಶ್ರಯದಲ್ಲಿದ್ದವು. ಶ್ರೀಕೃಷ್ಣ ರಥದಿಂದ ಇಳಿದೊಡನೆ ತಮ್ಮ ಸ್ವಾಮಿಕಾರ್ಯವನ್ನು ಮುಗಿಸಿ ಅದೃಶ್ಯವಾದವು. ಅದು ಜ್ವಾಜ್ವಲಮಾನವಾಗಿ ಆ ತೇಜಸ್ವಿನಲ್ಲೇ ರಥವೂ ಐಕ್ಯಹೊಂದಿತು.

ಯಾದವಶಿರೋಮಣಿಯು ಪಾಂಡವರ ಶಿಬಿರದಲ್ಲಿ ಅಶ್ವತ್ಥಾಮನಿಗೆ ಅವಕಾಶ ಕೊಡಲಿಕ್ಕಾಗಿಯೇ ದುರ್ಯೋಧನಾದಿಗಳ ಶಿಬಿರದಲ್ಲಿ ಪಾಂಡವರನ್ನು ಬಿಟ್ಟು ತಾನು ಪಾಂಡವರನ್ನು ಕುರಿತು ''ನಾನು ಧೃತರಾಷ್ಟ್ರನಿಗೆ ಸಮಾಧಾನದ ಮಾತುಗಳಿಂದ ದುಃಖ ನಿವಾರಣೆ ಮಾಡಿ ಬರುತ್ತೇನೆ'' ಎಂದು ಹೇಳಿ ಹೊರಟುಹೋದನು. ಹಸ್ತಿನಾವತಿಯಲ್ಲಿ ಧೃತರಾಷ್ಟ್ರನು ನೂರುಮಂದಿ ಮಕ್ಕಳಲ್ಲಿ ಒಬ್ಬರೂ ಉಳಿಯದಂತೆ ಸತ್ತರೆಂಬ ಶೋಕದಿಂದ ಪರಿತಾಪಪಡುತ್ತರೋದಿಸುತ್ತಿದ್ದನು.

ಶ್ರೀಕೃಷ್ಣನು ಗತಲೋಜನನ ಸಮೀಪದಲ್ಲಿ ಕುಳಿತು ''ಧೃತರಾಷ್ಟ್ರಾ! ಯಾರಿಗಾಗಿ ಇಷ್ಟೊಂದು ದುಃಖಪಡುತ್ತಿರುವಿ? ದೇಹಸಂಬಂಧದಿಂದ ನಿನಗೆ ಮಕ್ಕಳಾಗಿ ಹುಟ್ಟಿದ್ದರು. ಅವರ ಸರದಿ ಮುಗಿಸಿ ಹೊರಟರು.

ಪಾಪಕರ್ಮದಿಂದ ಅಪವಿತ್ರರಾದ ದೇಹಿಯು ಸತ್ತರೆ ಜ್ಞಾನಿಗಳು ದುಃಖಪಡಬಾರದು. ಅದೃಷ್ಟನಾಮಕ ಪರಮಾತ್ಮನ ಇಚ್ಛೆಯಂತೆ ಪಾಪಿಯು ತನ್ನ ಆಯಸ್ಸನ್ನು ತನ್ನ ದೋಶದಿಂದಲೇ ಕ್ಷೀಣಗೊಳಿಸಿಕೊಂಡು ಸಾಯುತ್ತಾನೆ.

ದುರ್ಯೋಧನ ದುರ್ಮಾರ್ಗ ಹಿಡಿದು ಸಾಯಬಾರದೆಂಬ ಬಾವನೆಯಿಂದ ಅವನಿಗೆ ಎಷ್ಟು ಬಗೆಯಲ್ಲಿ ಹೇಳಿದ್ದರೂ ಕೇಳದೆ ವಿಷ್ಣುವನ್ನು ವೈಷ್ಣವರನ್ನು ದ್ವೇಶಮಾಡಿ ದೈತ್ಯರಿಂದೊಡಗೂಡಿ ಅನೇಕ ಪಾಪಕರ್ಮಗಳನ್ನು ಮಾಡಿ ಅ ಪಾಪದ ಫಲವೇ ಅವರನ್ನು ಕೊಂದಿತು. ನಿನ್ನ ಮಕ್ಕಳನ್ನು ಪಡೆದ ಕಾರಣದಿಂದ ನಿನ್ನ ಮನಸ್ಸೂ ದುರ್ಮೋಹಕ್ಕೆವಶವಾಗಿ ಈಗ ದುಃಖದ ಕೊರಕಲಲ್ಲಿ ಕೆಡವಿತು. ಇನ್ನು ದುಃಖವನ್ನು ಮರೆತು ಪರಲೋಕಕ್ಕೆ ಸಾಧನ

ಪಾದಮೂಲದಲ್ಲಿ ಮನಸ್ಸಿಟ್ಟು ಮುಂದಿನ ಮಾರ್ಗವನ್ನು ಚಿಂತಿಸು'' ಎಂದು ಸಮಾಧಾನಮಾತುಗಳಿಂದ ಗತಲೋಚನನಿಗೆ ಸಂತೋಷ ಉಂಟುಮಾಡಿ ಸಾತ್ಯಕಿಯನ್ನು ಕುರಿತು ''ಸಾತ್ಯಕಿ! ಕೌರವರ ಶಿಬಿರದೊಳಗಿರುವ ರತ್ನಾಭರಣಗಳನ್ನೂ ವಸ್ತ್ರಾದಿ ವಸ್ತುಗಳನ್ನು ತೆಗೆದುಕೊಂಡು ಬರಬೇಕಾಗಿರುವುದರಿಂದ ಈಗ ನಾವು ಕೌರವರ ಶೂನ್ಯ ಶಿಬಿರಕ್ಕೆ ಹೊರಡೋಣ'' ಎಂದು ಹೇಳಿ ಹೊರಟನು.

ಶ್ರೀಕೃಷ್ಣನು ಮುಂದೆ ನಡೆಸಬೇಕಾದ ಭೂಭಾರಹರಣದ ಕಾರ್ಯವನ್ನು ತನ್ನ ಸಂಕಲ್ಪದಂತೆ ನಡೆಸಲು ತಕ್ಕ ಸಿದ್ಧತೆಗಳನ್ನು ಸಿದ್ಧಮಾಡಲಿಕ್ಕಾಗಿ ದುರ್ಯೋಧನನ ಶೂನ್ಯ ಶಿಬಿರಕ್ಕೆ ಪಾಂಡವರನ್ನು ಕಳುಹಿಸಿ ತಾನು ಅಲ್ಲಿಗೆ ಹೋದನು.

ಭೀಮನಗದೆಗೆ ಭಯಪಟ್ಟು ಓಡಿಹೋದ ಅಶ್ವತ್ಥಾಮ-ಕೃಪ-ಕೃತವರ್ಮ ಇವರು ಮೂರುಮಂದಿಯೂ ದುರ್ಯೋಧನನು ತೊಡೆಮುರಿಸಿಕೊಂಡು ರಣಭೂಮಿಯಲ್ಲಿ ಬಿದ್ದನೆಂದು ತಿಳಿದು ಅವನನ್ನೇ ಹುಡುಕುತ್ತ ಬಂದರು.

ಮುಂದೆ ಬಂದು ನೋಡಿದರೆ ದುರ್ಯೋಧನ ರಕ್ತದ ಹೊಂಡದಲ್ಲಿ ಛಿದ್ರಗೊಂಡ ದೇಹದಿಂದ ಒಂದು ಕಡೆ ಬಿದ್ದಿದ್ದನು. ಹದ್ದು ಕಾಗೆಗಳು ದುರ್ಯೋಧನನ ಮೇಲೆ ಕುಳಿತು ಮಾಂಸವನ್ನು ಹಿರಿದು ತಿನ್ನುತ್ತಿದ್ದವು.

ದುರ್ಯೋದನನು ವೇದನೆಯನ್ನು ತಾಳಲಾರದೆ ಅರೆಗಣ್ಣಿನಿಂದ ಅಪಸ್ವರದ ಕೂಗು ಕೂಗುತ್ತ ನರಳಾಡುತ್ತಿದ್ದನು.

ಹಸ್ತಿನಾವತಿಯ ಸಾರ್ವಭೌಮ ಕೌರವರಾಜನೆಂದರೇನು ಸಾಮಾನ್ಯ ರಾಜನೇ? ಸಿರಿಸಂಪತ್ತಿನ ಶಿಖರಕ್ಕೇರಿ ರಾಜ್ಯಮದದಿಂದ ಮುದವಾಂತುಮೆರಿಯುತ್ತಿದ್ದ ಮಹಾರಾಜ ಈಗ ಕೊಳೆತ ಹೆಣಗಳ ರಾಶಿಯ ಮೇಲೆ ತಾನು ಹೆಣದಂತೆ ಅನಾಥನಂತೆ ನರಿನಾಯಿಗಳ ಬಾಯಿತುತ್ತಾಗಿ ಬಿದ್ದಿರುವುದನ್ನು ಕಂಡು ಗಟ್ಟಿಯಾಗಿ ರೋದಿಸತೊಡಗಿದರು. ಅಶ್ವತ್ಥಾಮನು ದುರ್ಯೋದನನ ಸಮೀಪದಕಲ್ಲಿ ಕುಳಿತು ದುರ್ಯೋಧನಾ! ಯಾರು ಎಷ್ಟು ಹೇಳಿದರೂ ಕೇಳದೆ ಪಾಂಡವರ ಮೇಲೆ ದ್ವೇಶ ಸಾದಿಸಿ ಈಗ ಎಂಥ ವಿಪತ್ತಿಗೆ ಸಿಕ್ಕುಬಿದ್ದಿರುವಿ? ಇದನ್ನು ನೋಡಿ ನಾನು ಹೇಗೆ ಸಹಿಸಿಕೊಳ್ಳಲಿ? ದುರ್ಯೋಧನಾ! ಈಗ ನೀನು ಮರಣದ ಮಂಚದ ಮೇಲೆ ಮಲಗಿರುವಿ? ನನಗೂ ಬದುಕಬೇಕೆಂಬ ಆಸೆಯಿಲ್ಲ. ನಿನ್ನ ಕೊನೆಯ ಅಬಿಲಾಷೆಯನ್ನು ತಿಳಿಸಿ ನನಗೆ ಆಜ್ಞೆಮಾಡು ನಿನಗಾಗಿ ನನ್ನ ಜೀವದಾಸೆ ಬಿಟ್ಟು ನಡೆಸಿಕೊಡುತ್ತೇನೆ. ಅಂತ್ಯದಲ್ಲಾದರೂ ನಿನ್ನನ್ನು ಆನಂದಪಡಿಸುವ ಭಾಗ್ಯ ನನ್ನದಾಗಲಿ'' ಎಂದು ಕೇಳಿ ಕೊಂಡನು.

ಆಗ ದುರ್ಯೋಧನನು ದೇಹದ ವೇದನೆಯನ್ನು ಲಕ್ಷಿಸದೆ ಮನೋವೇದನೆಯನ್ನು

ಸಹಿಸಲಾರದವನಾಗಿ ''ಗುರುಪುತ್ರಾ! ಪಾಂಡವರು ನಮ್ಮ ವಂಶವನ್ನೇ ನಿರ್ಮೂಲಮಾಡಿದರು. ನನ್ನ ದುಃಖ ಶಮನವಾಗಬೇಕಾದರೆ ಅವರ ವಂಶವೂ ಅದೇ ರೀತಿ ನಿರ್ಮೂಲವಾಗಬೇಕು.

ಮತ್ತೊಂದು ನನ್ನ ಮನದಭಿಲಾಷೆ ಏನೆಂದರೆ ನಮ್ಮ ವಂಶ ಇಲ್ಲಿಗೆ ಅಂತ್ಯಗೊಳ್ಳದೆ ಬೆಳೆದುವುದ್ಧಿಯಾಗಿ ಕೌರವ ವಂಶದ ಕೀರ್ತಿ ಕಲಶ ಶಾಶ್ವತವಾಗಿ ಬೆಳಗುವಂತಾಗಬೇಕು.

ನೀನು ನನ್ನ ಪತ್ನಿಯಾದ ಭಾನುಮತಿಯಲ್ಲಿ ವಂಶದ ಕುಡಿ ಉತ್ಪತ್ತಿ ಆಗುವಂತೆ ಮಾಡು ನಿನ್ನಿಂದ ಭಾನುಮತಿಯಲ್ಲಿ ಜನಸಿದ ಪುತ್ರನು ದೊಡ್ಡವನಾಗುವರೆಗೂ ನೀನಾ ರಾಜ್ಯಭಾರ ಮಾಡುತ್ತಲಿದ್ದು ನಂತರ ಭಾನುಮತಿಯಲ್ಲಿ ಜನಿಸಿದ ನಿನ್ನ ಮಗನಿಗೇ ಪಟ್ಟಾಭಿಷೇಕಮಾಡಿ ಕೌರವವಂಶವನ್ನು ವೃದ್ಧಿಗೊಳಿಸು. ಅಶ್ವತ್ಥಾಮಾ! ಇಗೊ ಈ ರಣರಂಗವೇ ನಿನಗೆ ಸಿಂಹಾಸನ ವೀರರಾಜರು ರಣದೇವತೆಗೆ ಅರ್ಪಿಸಿರುವ ಕ್ಷಾತ್ರರಕ್ತದಿಂದ ರಂಜಿತವಾದ ಕುರುಭೂಮಿಯ ಮಣ್ಣೇ ಸರ್ವಪುಣ್ಯತೀರ್ಥವೆಂದು ಭಾವಿಸಿ ಅದರಿಂದಲೇ ಅಭಿಷೇಕ ಮಾಡುತ್ತೇನೆ '' ಎಂದು ಹೇಳಿ ಮಲಗಿದ್ದ ಜಾಗದಲ್ಲಿ ರಕ್ತದ ಕೆಸರಿನಂತಿದ್ದ ಮಣ್ಣಿನಿಂದ ಅಭಿಷೇಕಮಾಡಿದನು. ಆಮೇಲೆ ಮೂಲಕಲಿಯಾದ ದುರ್ಯೋಧನನು ಮತ್ತೊಂದು ಮಾತನ್ನು ಹೇಳಿದ. ''ಗುರುಪುತ್ರಾ! ನನ್ನ ಪಟ್ಟದರಸಿ ಭಾನುಮತಿ ನಿನ್ನ ಮಾತಿಗೆ ಒಡಂಬಡದಿದ್ದರೆ ನನ್ನ ಅನೇಕ ಮಂದಿ ಭಾರ್ಯೆಯರಲ್ಲಿ ಯಾರನ್ನು ಬೇಕಾದರೂ ಒಡಂಬಡಿಸಿ ಪುತ್ರಸಂತಾನವನ್ನು ಉತ್ಪತ್ತಿಮಾಡಿ ವಂಶದ ಕುಡಿ ಚಿಗುರಿ ವಿಶಾಲ ವೃಕ್ಷವಾಗಿ ಫಲನೀಡುವಂತೆ ಮಾಡು'' ಎಂದು ಹೇಳಿದನು.

ಅಶ್ವತ್ಥಾಮನು ದುರ್ಯೋಧನನ ಮನದಭಿಲಾಷೆ ನೆರವೇರಿಸಬೇಕೆಂಬ ಸಂಕಲ್ಪದಿಂದ ಸಾವಿನ ದವಡೆಯಲ್ಲಿ ಸಿಕ್ಕು ಸಂಕಟಪಡುತ್ತಿದ್ದ ದುರ್ಯೋಧನನಿಗೆ ಪ್ರತಿಮಾತನ್ನು ಹೇಳಲಾರದೆ ಒಪ್ಪಿಕೊಂಡಾಗ ದುರ್ಯೋಧನನ ಮುಖದಲ್ಲಿ ನಗುವಿನ ಮಿಂಚು ಕಾಣಿಸಿತು.

ಅಶ್ವತ್ಥಾಮನ ಸಂಕಲ್ಪದಿಂದ ಅವನ ಬ್ರಹ್ಮಚರ್ಯ ಆಗಲೇ ಶಿಥಿಲಗೊಂಡಿತು ದೇಹದಿಂದ ವ್ಯಭಿಚಾರ ನಡಿಯದಿದ್ದರೂ ಮನಸ್ಸು ಮಾತುಗಳಿಂದ ಶೀಲಭ್ರಷ್ಟನಾದನು. ಅಶ್ವತ್ಥಾಮನ ಮನಸ್ಸು ಕಳವಳಗೊಂಡಿತು. ನಾನು ಬ್ರಹ್ಮಣನಾಗಿದ್ದರೂ ನನ್ನ ಸತ್ವಸಾಮರ್ಥ್ಯವನ್ನು ದುರ್ಯೋಧನನ ಸಂಪರ್ಕದಿಂದ ಕಳೆದುಕೊಂಡಿದ್ದೇನೆ. ಪಾಂಡವರು ಕ್ಷತ್ರಿಯರಾದರು ಅವರು ದೇವರನ್ನೂ -ಧರ್ಮವನ್ನೂ ಆಶ್ರಯಿಸಿ ಸರ್ವಸಾಮರ್ಥ್ಯವನ್ನೂ ಪಡೆದಿದ್ದಾರೆ ಅಂಥ ಪಾಂಡವರ ವಂಶ ನಾಶ ಮಾಡಲಿಕ್ಕೆ ನಾನು ಸಮರ್ಥನೆ!? ಎಂದು ಚಿಂತಿಸುತ್ತ ಮಲಗಿದರು. ಕೃಪ-ಕೃತವರ್ಮ ಇಬ್ಬರು ನಿದ್ರಿಸುತ್ತಿದ್ದರು. ಅಶ್ವತ್ಥಾಮನಿಗೆ ನಿದ್ರೆಬರಲಿಲ್ಲ. ತಂದೆಯ ಮರಣವನ್ನು ಮನಸ್ಸಿಗೆ ತಂದುಕೊಂಡು ಮರಗುತ್ತಿದ್ದಾಗ ಒಂದು ಗೂಬೆ ಹಾರಿ ಬಂದು ಆಚಾರ್ಯನು ಮಲಗಿದ್ದ ಮರದ ಮೇಲೆ ಕುಳಿತು ಅಲ್ಲಿದ್ದ ಸಹಸ್ರ ಸಂಖ್ಯೆಯ ಕಾಗೆಗಳನ್ನು ಬಡಿದು ತಿಂದು ಹಾಕುತ್ತಿತ್ತು. ಅದನ್ನು ಕಂಡ ಅಶ್ವತ್ಥಾಮನು ನಾನು ಈಗ ಈ ಇರುಳು

ಪಕ್ಷಿಯ ಪ್ರಯೋಗವನ್ನೇ ಮಾಡಬೇಕು ಈ ರಾತ್ರಿ ರಾಕ್ಷಸವೃತ್ತಿಯನ್ನುವಲಂಬಿಸಿ ದುರ್ಯೋದನನ ಕಾರ್ಯ ಸಾಧಿಸಬೇಕೆಂಬ ಭಾವದಿಂದ ನಿದ್ರಿಸುತ್ತಿದ್ದ ಕೃಪ ಕೃತವರ್ಮರನ್ನು ಎಬ್ಬಿಸಿ ಗೂಬೆಯ ಅತ್ಯಾಚಾರವನ್ನು ತೋರಿಸಿ ನಾನು ಈಗ ಇದೇ ಕಾರ್ಯಮಾಡಲು ಶಿಬಿರಕ್ಕೆ ನುಗ್ಗುತ್ತೇನೆ.

ನೀವಿಬ್ಬರೂ ನನ್ನನ್ನು ಹಿಂಬಾಲಿಸಿ ಬನ್ನಿರಿ ಎಂದನು. ಅವರಿಬ್ಬರೂ ಬೇಡವೆಂದು ತಡೆದರೂ ನಿಲ್ಲದೆ ಹೊರಡಲು ಅವರು ಅಶ್ವತ್ಥಾಮನ ಹಿಂದೆ ಹೊರಟರು. ಶಿಬಿರದಲ್ಲಿ ಮೂಲರುದ್ರನು ಶ್ರೀಹರಿ ಆಜ್ಞೆಯಂತೆ ಅಲ್ಲಿ ಕಾವಲಿದ್ದನು. ಅಶ್ವತ್ಥಾಮನು ಅಂಜಿದನು. ಅಸುರರಿಗೆ ಅಜ್ಞಾನವನ್ನುಂಟುಮಾಡಲಿಕ್ಕಾಗಿಯೂ ಸಜ್ಜನರಿಗೆ ಶ್ರೀಹರಿಯ ಸರ್ವೋತ್ತಮತ್ತ್ವತ್ವಕ್ಕೆ ಜ್ಞಾನ ಸ್ಥಿರವಾಗಲಿಕ್ಕಾಗಿಯೂ ಹರಿ ಹರರು ಹೀಗೆ ವಿಚಿತ್ರ ಕಾರ್ಯಗಳನ್ನು ನಡೆಸುತ್ತಿದ್ದರೆಂದೇ ತಿಳಿಯಬೇಕು.

ಮೂಲರುದ್ರನಿಗೂ ರುದ್ರಾಂಶನಾದ ಅಶ್ವತ್ಥಾಮನಿಗೂ ಯುದ್ಧನಡೆಯಿತು. ಅಶ್ವತ್ಥಾಮನು ಪ್ರಯೋಗಿಸಿದ ಶಸ್ತ್ರಾಸ್ತ್ರಗಳೆಲ್ಲವನ್ನು ಮೂಲರುದ್ರನು ನುಂಗಿಬಿಡುತ್ತಿದ್ದನು. ಅಂದರೆ ರುದ್ರನಿಂದ ಹೊರಟುಬಂದ ಆಯುಧಗಳು ಅವನನ್ನೇ ಮತ್ತೆ ಸೇರಿದವು.

ಆಗ ಅಶ್ವತ್ಥಾಮನು ಮೂಲರುದ್ರಾಂತರ್ಗತನಾದ ಶ್ರೀನಾರಾಯಣನ ಪ್ರೀತ್ಯರ್ಥವಾಗಿ ಯಾಗಮಾಡಿದನು. ತನ್ನ ನರಮಾಂಸ ಮಜ್ಜಾದಿಗಳನ್ನೂ ಅರ್ಪಿಸಿ ಯಾಗಮಾಡಿದಾಗ ಪರಮ ವೈಷ್ಣವನಾದ ರುದ್ರದೇವನಿಗೆ ಒಲಿದ ಹರಿ ಆಯುಧಗಳನ್ನು ಮೂಲರುದ್ರನ ಬಾಯಿಂದ ಹೊರಬರುವಂತೆ ತೋರಿಸಿದನು.

ನಂತರ ಮೂಲರುದ್ರನು ಅಶ್ವತ್ಥಾಮ ನಿನ್ನ ಯಾಗಕ್ಕೆ ಸಂತುಷ್ಟನಾದೆನು ಒಳಗೆ ಹೋಗಿ ನಿನ್ನ ಕಾರ್ಯಸಾಧನೆ ಮಾಡಿಕೊ'' ಎಂದು ಮಾರ್ಗಮಾಡಿಕೊಟ್ಟನು. ಶ್ರೀಹರಿಯು ರುದ್ರಾವೇಶದಿಂದ ಆಜ್ಞೆ ಕೊಡಿಸಿದ ನಂತರ ಆಚಾರ್ಯನು ಕೃತವರ್ಮ-ಕೃಪಾಚಾರ್ಯರನ್ನು ಹೊರಬಾಗಿಲಲ್ಲಿ ನಿಲ್ಲಿಸಿ ತಾನು ಒಳಗೆ ಪ್ರವೇಶ ಮಾಡಿದನು.

ಅಲ್ಲಿ ಧೃಷ್ಟದ್ಯುಮ್ನನು ಯುದ್ಧದ ಆಯಾಸದಿಂದ ಬಳಲಿ ನಿದ್ರಾವಶನಾಗಿ ಮಲಗಿದ್ದನು. ಅಶ್ವತ್ಥಾಮನು ಅವನು ಎಚ್ಚರಗೊಳ್ಳುವಂತೆ ಕಾಲಲ್ಲಿ ಒದ್ದನು. ದೃಪದಪುತ್ರನು ಭಯದಿಂದ ಕಣ್ತೆರೆದು ನೋಡಿದರೆ ಅಶ್ವತ್ಥಾಮನು ರೌದ್ರನಾಗಿ ನಿಂತಿದ್ದನು.

ಆಗ ದ್ರುಷ್ಟದ್ಯುಮ್ನನು ಅಶ್ವತ್ಥಾಮ! ನೀನು ನನ್ನನ್ನು ಕೊಲ್ಲಲು ಬಂದಿರುವಿ ಎಂದು ತಿಳಿಯಿತು. ನಾನು ಸಾವಿಗೆ ಅಂಜುವವನಲ್ಲ. ಆಯುಧ ಹಿಡಿದು ಯುದ್ಧಮಾಡಿ ಕೊಲ್ಲು. ದುರ್ಮರಣಕ್ಕೀಡುಮಾಡಬೇಡ'' ಎಂದನು.ಆಗ ಅಶ್ವತ್ಥಾಮನು ಎಲಾ ಪಾಪಿ! ನೀನು ನನ್ನ ತಂದೆ ಮರಣಶಯ್ಯೆಯಲ್ಲಿದ್ದರೂ ಬಿಡದೆ ಶಿರಚ್ಛೇದನ ಮಾಡಿ ಅವಮಾನಗೊಳಿಸಿದವನು. ಅಂಥವನನ್ನು ಹೇಗೆ ಕೊಲ್ಲಬೇಕೊ ಹಾಗೆಯೇ ಕೊಲ್ಲಬೇಕು ಎಂದು ಜೀವಂತನಾಗಿರುವಾಗಲೇ

ಅವನಿಗೆ ಬಿಲ್ಲಿನ ಹಗ್ಗವನ್ನು ಕೊರಳಿಗೆ ಸುತ್ತಿ ಹಿಂಸೆ ಪಡಿಸಿ ಕೊಂದು ಹಾಕಿದನು. ನಂತರ ಅಶ್ವತ್ಥಾಮನು ದ್ರುಪದರಾಜನ ನಾಲ್ಕು ಜನ ಮಕ್ಕಳನ್ನು ಕೊಂದನು. ಭೀಮಸೇನನ ಪತ್ನಿ ಭಾರತಿದೇವಿಯ ಅಂಶಾವತಾರ ಸಂದರ್ಭದಲ್ಲಿ ಕಾಳೀದೇವಿಯಲ್ಲಿ ಹುಟ್ಟಿದ ಶರ್ವತ್ರಾತನೆಂಬ ಕುಮಾರನನ್ನು ಕಾಶೀರಾಜನು ಪುತ್ರಿಕಾ ಪುತ್ರನ್ಯಾಯದಿಂದ ತಾನು ಮಗನನ್ನಾಗಿ ಪಡೆಯಬೇಕೆಂದೂ ಅವನು ಅವಧ್ಯನಾಗಬೇಕೆಂದೂ ರುದ್ರದೇವರನ್ನು ಕುರಿತು ತಪಸ್ಸು ಮಾಡಿದ್ದರಿಂದ ಆಗ ರುದ್ರನು ಅಪ್ರತ್ಯಕ್ಷನಾಗಿ ಬಂದು ಶರ್ವತ್ರಾತನನ್ನು ಎತ್ತಿಕೊಂಡು ಕೈಲಾಸಕ್ಕೆ ಹೊರಟುಹೋದನು. ಅವನು ರುದ್ರದೇವರ ಬಲದಿಂದ ಹತನಾಗದೆ ಶ್ರೀಹರಿಪ್ರೇರಣಾನುಸಾರ ಬದುಕಿದನು.

ಅಶ್ವತ್ಥಾಮನು ದ್ರೌಪದೀದೇವಿಯ ಪಂಚಪುತ್ರರ ಶಿರಸ್ಸನ್ನು ಕಡಿದು ನಂತರ ಸಕಲರಾಜರೂ ವಿಶ್ರಾಂತಿಗಾಗಿ ಮಲಗಿದ್ದ ಶಿಬಿರಕ್ಕೆ ಬೆಂಕಿ ಹಚ್ಚಿದಾಗ ಸಕಲ ರಾಜರೂ ಹೆಂಗಸರು ಮಕ್ಕಳು ಎಲ್ಲರೂ ಗಾಬರಿಯಾಗಿ ಓಡಿಹೋಗುತ್ತಿದ್ದರೆ ಹೆಬ್ಬಾಗಿಲಲ್ಲಿ ನಿಂತಿದ್ದ ಕೃಪ ಕೃತವರ್ಮರು ಅವರ ತಲೆ ಕತ್ತರಿಸಿ ಕೊಲ್ಲುತ್ತಿದ್ದರು.

ದೃಷ್ಟದ್ಯುಮ್ನನ ಸಾರಥಿ ಒಬ್ಬನು ಅಶ್ವತ್ಥಾಮನು ನಡೆಸುತ್ತಿದ್ದ ಕೊಲೆಯನ್ನು ಕಂಡು ತಾನೂ ಸತ್ತವನಂತೆ ಹೆಣದ ರಾಶಿಯೊಳಗೆ ಮಲಗಿ ಯಾರಿಗೂ ಕಾಣದಂತೆ ಓಡಿಹೋಗಿ ದ್ರೌಪದಿಗೆ ''ತಾಯೇ ಶಿಬಿರದಲ್ಲಿ ಅಶ್ವತ್ಥಾಮ-ಕೃಪ-ಕೃತವರ್ಮ ಇವರು ಮೂರು ಜನರೂ ಎಲ್ಲರನ್ನೂ ಕೊಂದಿದ್ದಾರೆ ನಿಮ್ಮ ಐದುಮಕ್ಕಳು ಅಶ್ವತ್ಥಾಮನ ಕೈಲಿ ಸತ್ತಿದ್ದಾರೆ'' ಎಂದು ತಿಳಿಸಿದನು.

ದ್ರೌಪದೀದೇವಿ ಪುತ್ರಶೋಕ ತಪ್ತಳಾಗಿ ಭೀಮನಿಗೆ ತಿಳಿಸಲು ಹೊರಟಳು.

ಇತ್ತ ಅಶ್ವತ್ಥಾಮನು ದುರ್ಯೋಧನನ ಆಸೆಯಂತೆ ಪಾಂಡವರ ಐದು ಮಂದಿ ಪುತ್ರರ ತಲೆ ಕತ್ತರಿಸಿ ತಂದು ದುರ್ಯೋಧನನಿಗೆ ತೋರಿಸಿದನು. ದುರ್ಯೋಧನನು ಅಂತ್ಯದುಸಿರನ್ನು ಎಳೆಯುತ್ತ ಅಶ್ವತ್ಥಾಮನನ್ನು ಸಂತುಷ್ಟಭಾವದಿಂದ ನೋಡುತ್ತಲೇ ಮರಣವನ್ನಪ್ಪಿದನು.

ದುರ್ಯೋಧನ ಸತ್ತ ಅವನಿಗಾಗಿ ಪಾಂಡವ ಪುತ್ರರನ್ನು ಕೊಲೆಮಾಡಿದ್ದೇವೆ ಇನ್ನು ನಮ್ಮನ್ನು ಭೀಮಗದೆ ಬೆನ್ನಟ್ಟಿ ಬರದೆ ಬಿಡುವುದಿಲ್ಲವೆಂಬ ಭಯದಿಂದ ಅಶ್ವತ್ಥಾಮನು ಕೃಪ-ಕೃತವರ್ಮರೊಡನೆ ಓಡಹತ್ತಿದನು. ಭೀಮನು ದ್ರೌಪದಿಯಿಂದ ಮಕ್ಕಳ ಮರಣವಾರ್ತೆಯುನ್ನು ಕೇಳಿ ಅಶ್ವತ್ಥಾಮನನ್ನು ಹುಡುಕಿಕೊಂಡು ರಭಸದಿಂದ ಬರುತ್ತಿದ್ದರೆ ಅಶ್ವತ್ಥಾಮನು ಭೀಮನ ಭಯದಿಂದ ಬ್ರಹ್ಮಾಸ್ತ್ರವನ್ನು ಪ್ರಯೋಗ ಮಾಡಿದನು. ಮಾತು ಮತ್ತು ಮನಸ್ಸಿನ ಮಾಲಿನ್ಯದಿಂದ ಮಹತ್ವ ಕಳಚಿತು. ಧರ್ಮರಾಜನು ದ್ರೌಪದಿಯನ್ನು ಕುರಿತು ಗುರುಪುತ್ರನನ್ನು ಕೊಲ್ಲಬೇಡಿರಿ'' ಎಂದು ಹೇಳುತ್ತಿದ್ದನು. ದ್ರೌಪದಿಯೂ ಭೀಮನನ್ನು

ಕುರಿತು ''ಕೃಪೀದೇವಿ ಪತಿಯನ್ನು ಕಳೆದುಕೊಂಡು ಈಗಲೇ ವೈದವ್ಯಪ್ರಾಪ್ತಿಗಾಗಿ ಅಪಾರ ದುಃಖದಲ್ಲಿ ಮುಳುಗಿದ್ದಾಳೆ. ಆಕೆಗೆ ಪುತ್ರಶೋಕದ ಸಂಕಟವೂ ಪ್ರಾಪ್ತವಾಗುವಂತೆ ಮಾಡಬೇಡಿ. ಅಶ್ವತ್ಥಾಮನನ್ನೂ ಕೊಲ್ಲದೆ ಬಿಟ್ಟುಬಿಡಿರಿ'' ಎಂದಳು. ಆಗ ಕೃಷ್ಣನು ರುದ್ರನು ಅಸ್ವತಂತ್ರನೂ ತನ್ನ ಪ್ರೇರಣೆಯಂತೆ ಅವನು ನಡೆಯತಕ್ಕವನೆಂಬುದನ್ನು ತಿಳಿಸುಲಿಕ್ಕಾಗಿ ಪಾಂಡವರನ್ನು ಕುರಿತು '' ನೀವು ಅಶ್ವತ್ಥಾಮನನ್ನು ಗುರುಪುತ್ರನೂ-ಬ್ರಹ್ಮಣನೂ ಆಗಿದ್ದಾನೆಂದು ಗೌರವಿಸಬೇಡಿರಿ ಇವನು ಕಪಟ ಬ್ರಹ್ಮಣ ಕಪಟಿಗಳ ಪಕ್ಷಪಾತಿ ಆಗಿದ್ದಾನೆ. ಹಿಂದೆ ಒಂದು ಬಾರಿ ಈತನು ನನ್ನ ಆನ್ಹಿಕ ಸಮಯದಲ್ಲಿ ಯಾಚನೆಗೆ ಬಂದನು ಬೇಡಲು ಬಂದ ಬ್ರಹ್ಮಣನನ್ನು ಸತ್ಕರಿಸಿ ಏನು ಬೇಕು? ಎಂದರೆ ನಿನ್ನ ಆಯುಧಗಳು ಬೇಕು ಎಂದನು. ನಾನು ನಂದಕ ಕಾಮೋದಕಿ-ಸುದರ್ಶನ ಚಕ್ರ ಎಲ್ಲವನ್ನು ಮುಂದಿಟ್ಟು ತೆಗೆದುಕೊಂಡು ಹೋಗು ಎಂದನು. ಅಶ್ವತ್ಥಾಮನು ಅದನ್ನು ಎತ್ತಲುಹೋದರೆ ಆಗಲಿಲ್ಲ ಯಾವ ಆಯುಧವನ್ನೂ ಅಲ್ಲಾಡಿಸೂ ಆಗದಿದ್ದಾಗ ನಾಚಿಕೆಯಿಂದ ತಲೆ ತಗ್ಗಿಸಿದನು.

ಆಗ ನಾನು ''ಆಚಾರ್ಯ! ನೀನು ಆಯುದವನ್ನು ಏತಕ್ಕಾಗಿ ಕೇಳಿದಿ?'' ಎಂದೆನು. ಆಗ ''ಕೃಷ್ಣಾ! ನೀನು ಪಾಂಡವರಿಗೆ ಮೂಲಬಲ ಆಗಿರುವುದರಿಂದ ನಿನ್ನ ರಕ್ಷಣೆಯಲ್ಲಿರುವ ಪಾಂಡವರನ್ನು ಕೊಲ್ಲಲಾಗುವುದಿಲ್ಲ ಆದ್ದರಿಂದ ನಿನ್ನನ್ನು ಕೊಲ್ಲಬೇಕು. ನೀನು ಪರವಸ್ತುವಿನಿಂದ ಸಾಯತಕ್ಕವನಲ್ಲ . ಆದ್ದರಿಂದ ಸಕಲವಸ್ತುವಿನಲ್ಲೂ ಅಂತರ್ಗತನಾದ ನಿನ್ನನ್ನು ನಿನ್ನಿಂದಲೇ ಕೊಲ್ಲಬೇಕೆಂದು ನಿನ್ನ ಆಯುದವನ್ನು ಬೇಡಿದೆನು. ಏಕೆಂದರೆ ಆಯುಧಗಳು ಕೊಲ್ಲಬಹುದೆಂದು ಕೇಳಿದೆನು.

ಈಗ ನನಗೆ ಬ್ರಹ್ಮಾರುದ್ರಾದಿಗಳು ನಿನ್ನನ್ನು ಕೊಲ್ಲಲಾಗುವುದಿಲ್ಲ ಸರ್ವ ಸ್ವತಂತ್ರನೂ ಸರ್ವೇಶ್ವರನೂ ನೀನೇ ಎಂದು ತಿಳಿದೆನು. ನಿನ್ನ ಸಂಕಲ್ಪ ಸತ್ಯವಾದ್ದದ್ದು . ನಮ್ಮ ಸಂಕಲ್ಪವೆಲ್ಲವೂ ಸುಳ್ಳು'' ಎಂದನು. ಆಗ ನಾನು ಅಶ್ವತ್ಥಾಮ! ಬ್ರಹ್ಮಣರಿಗೆ ದ್ವೇಶ-ಮತ್ಸರ ಇರಬಾರ್ದು. ಅವರ ಹೃದಯ ಕಠೋರವಾಗಿರಬಾರದು. ಲೋಕಹಿತಚಿಂತಕರಾಗಿರಬೇಕು. ನೀನು ಬ್ರಹ್ಮತೇಜಸ್ಸನ್ನು ಕಳೆದುಕೊಂಡು ಸತ್ವಹೀನನಾಗುವಿ'' ಎಂದು ಹೇಳಿದಂತೆ ಈಗ ಅವನು ವಾಙ್ಮನಸ್ಸಿನಿಂದ ಅಶುದ್ದನಾಗಿದ್ದಾನೆ. ಆದಾಗ್ಯೂ ಬ್ರಹ್ಮಾಸ್ತ್ರ ಬಿಟ್ಟಿದ್ದಾನೆ. ಏಕೆಂದರೆ ''ದುರ್ಯೋಧನನಿಗೆ'' ಪಾಂಡವರ ವಂಶ ನಿರ್ವಂಶ ಮಾಡುತ್ತೇನೆ '' ಎಂದು ವಾಗ್ದಾನಮಾಡಿದ್ದಾನಾದ್ದರಿಂದ ಬ್ರಹ್ಮಾಸ್ತ್ರ ಬಿಟ್ಟಿದ್ದಾನೆ. ಅದನ್ನು ಉಪಸಂಹಾರ ಮಾಡಲು ಸಾಮರ್ಥ್ಯ ಕಳೆದ್ಧುಕೊಂಡಿದ್ದಾನೆ. ನೀನು ಉಪಸಂಹಾರಮಾಡು'' ಎಂದು ಅರ್ಜುನನಿಗೆ ಹೇಳಿದನು.

ಆಗ ಅರ್ಜುನನು ಹರಿ ಆಜ್ಞೆ ಆದೊಡನೆಯೇ ಅಶ್ವತ್ಥಾಮ ಬಿಟ್ಟ ಅಸ್ತ್ರಕ್ಕೆ ಪ್ರತೀಕಾರ ಮಾಡಲಿಕ್ಕಾಗಿ ಪ್ರತಿಬ್ರಹ್ಮಾಸ್ತ್ರ ಬಿಟ್ಟನು. ಎರಡು ಬ್ರಹ್ಮಾಸ್ತ್ರಗಳು ಲೋಕವನ್ನೇ ದಹಿಸುವಂತೆ

ತಿಕ್ಕಾಡುವಾಗ ವೇದವ್ಯಾಸರು ಮಧ್ಯದಲ್ಲಿ ಬಂದು ನೀವಿಬ್ಬರೂ ಅಧಿಕ ಪರಾಕ್ರಮಿಗಳಾಗಿ ಲೋಕಕ್ಕೆ ಶುಭವನ್ನುಂಟುಮಾಡುವ ದೀಕ್ಷೆಯುಳ್ಳವರಾಗಿದ್ದರೂ ಈಗೇಕೆ ಲೋಕಕ್ಕೆ ವಿಪತ್ತುಂಟಾಗುವ ಕಾರ್ಯಮಾಡಿದ್ದೀರಿ! ಎಂದರು. ಆಗ ಅರ್ಜುನನು ವೇದವ್ಯಾಸರಿಗೆ ನಮಸ್ಕಾರಮಾಡಿ ''ನಾನು ಲೋಕನಾಶಕ್ಕಾಗಿ ಬ್ರಹ್ಮಾಸ್ತ್ರ ಬಿಡಲಿಲ್ಲ ನನ್ನ ಪ್ರಾಣರಕ್ಷಣೆಗಾಗಿ ಬಿಟ್ಟೆನು'' ಎಂದನು. ಅಶ್ವತ್ಥಾಮನೂ ಆಗ ನಾನೂ ನನ್ನ ಪ್ರಾಣರಕ್ಷಣೆಗಾಗಿ ಪ್ರಯೋಗಮಾಡಿದೆನು'' ಎಂದನು.

ಆಗ ಅರ್ಜುನನು ಸ್ವಾಮೀ ಆಜ್ಞಾಪ್ರಕಾರ ಬ್ರಹ್ಮಾಸ್ತ್ರ ಉಪಸಂಹಾರ ಮಾಡಿದನು. ಅಶ್ವತ್ಥಾಮನು ಉಪಸಂಹಾರ ಮಾಡಲಾಗದಿರಲು ಕೃಷ್ಣನು ಅಶ್ವತ್ಥಾಮನು ದುರ್ಯೋಧನನ ಪ್ರೀತಿಗಾಗಿ ವಾಗ್ಮನಸ್ಸುಗಳನ್ನು ಅಶುದ್ಧಗೊಳಿಸಿಕೊಂಡು ಬ್ರಹ್ಮಚರ್ಯವನ್ನು ಭಂಗಗೊಳಿಸಿರುವ ಕಾರಣದಿಂದ ಈಗ ಸತ್ವಹೀನನಾಗಿದ್ದಾನೆ'' ಎನ್ನಲು ವೇದವ್ಯಾಸರು ''ಅಶ್ವತ್ಥಾಮಾ! ನಿನ್ನ ಪಾಪಕ್ಕೆ ದೇಹಾಂತಶಿಕ್ಷೆ ಆಗಬೇಕು ಇದಕ್ಕೆ ಒಂದು ಸುಲಭ ಉಪಾಯ ಏನೆಂದರೆ ನಿನ್ನ ತಲೆಯಲ್ಲಿರುವ ರತ್ನವನ್ನು ತೆಗೆದು ಭೀಮನಿಗೆ ಕೊಟ್ಟು ಬಿಡು. ಆ ರತ್ನದ ಪ್ರಭಾವ ಎಂತಹುದೆಂದರೆ ಜರಾಮರಣದೋಷವಿಲ್ಲದ ಹಸಿವು ಬಾಯಾರಿಕೆಗಳ ಭಾದೆ ಇಲ್ಲದ ಕಾರ್ಗತ್ತಲೆಯನ್ನು ಕಳೆಯುವಂಥ ಪ್ರಕಾಶಮಾನವಾದ ದುರ್ಗಂಧವನ್ನು ನಿವಾರಿಸುವಂಥ ಪರಿಶುದ್ಧತೆ. ಇಂಥಶ್ರೇಷ್ಟ ರತ್ನವನ್ನು ಈಗ ನೀನು ಧರಿಸುವ ಅರ್ಹತೆ ಕಳೆದುಕೊಂಡಿರುತ್ತಿ. ಅದನ್ನು ಜೀವೋತ್ತಮನಾದ ಭೀಮಸೇನನಿಗೆ ಅರ್ಪಿಸಿದರೆ ನಿನ್ನ ಪಾಪಪರಿಹಾರವಾಗುತ್ತದೆ'' ಎಂದು ಹೇಳಿದರು. ವೇದವ್ಯಾಸರ ಆಜ್ಞೆಯಂತೆ ಅಶ್ವತ್ಥಾಮನು ಶಿರೋರತ್ನವನ್ನು ಎತ್ತಿ ಭೀಮಸೇನನಿಗೆ ಅರ್ಪಿಸಿದನು. ಆಮೇಲೆ ವೇದವ್ಯಾಸರು ಅಶ್ವತ್ಥಾಮಾ! ನೀನು ಹೂಡಿದ ಬ್ರಹ್ಮಾಸ್ತ್ರ ಪಾಂಡವರಿಗೆ ಬಾಧೆಯಾಗದಿರಲಿ ಎಂದು ಹೇಳು ಅಂದರು.

ಅಶ್ವತ್ಥಾಮನು ಅದೇ ರೀತಿ ಸಂಕಲ್ಪ ಮಾಡಿದನು. ಕೃಷ್ಣನು ಅಶ್ವತ್ಥಾಮಾ! ನೀನು ವೇದವ್ಯಾಸನ ಮಾತಿನಂತೆ ನಡೆದು ಮನ್ನಣೆ ಕೊಟ್ಟಂತೆ ಈಗ ನನ್ನದೂ ಒಂದು ಮಾತನ್ನು ನಡೆಸಬೇಕು. ಏನೆಂದರೆ ಪಾಂಡವರ ಸಂತಾನಕ್ಕೂ ಬ್ರಹ್ಮಾಸ್ತ್ರದಿಂದ ಬಾಧೆ ಉಂಟಾಗಬಾರದೆಂದು ಸಂಕಲ್ಪ ಮಾಡು'' ಎಂದನು.

ವೇದವ್ಯಾಸರು ಬೇರೆ ಅಲ್ಲ, ಕೃಷ್ಣಬೇರೆ ಅಲ್ಲ. ಆದರೂ ಅಸುರ ಜನರಿಗೆ ಅಜ್ಞಾನ ಉಂಟುಮಾಡಲಿಕ್ಕಾಗಿ ಬೇದಭಾವತೋರಿಸುತ್ತಿದ್ದನು.

ಅಶ್ವತ್ಥಾಮನು ಆಗ ''ಕೃಷ್ಣಾ! ವೇದವ್ಯಾಸ ಮುನಿಗಳಿಗೆ ಪಕ್ಷಪಾತವಿಲ್ಲ ಅಮರು ನಿಶ್ಪಕ್ಷಪಾತಿಗಳಾದ್ದರಿಂದ ಅವರ ಮಾತು ಎಲ್ಲರಿಗೂ ಸಮಂಜಸವಾಗಿ ಸಂತೋಷವನ್ನುಂಟುಮಾಡುತ್ತದೆ. ನೀನು ಪಕ್ಷಪಾತ ಬುದ್ದಿವುಳ್ಳವನು. ಪಾಂಡವರು ನಿನಗೆ ಬಂಧುಗಳು. ಆಪ್ತರು ಎಂಬ ಭಾವದಿಂದ ಪ್ರೀತಿಸುತ್ತಿ ನಿನ್ನ ಸೋದರಳಿಯನ ಸಂತಾನ

ಸುರಕ್ಷಿತವಾಗಿ ಅಬಿವೃದ್ಧಿಗೊಳ್ಳಬೇಕೆಂದು ಹೇಳುತ್ತಿರುವಿ. ಆದ್ದರಿಂದ ನಾನು ಒಪ್ಪುವುದಿಲ್ಲ. ಉತ್ತರಾದೇವಿಯ ಸಂತಾನವನ್ನು ವಿನಾಶಗೊಳಿಸಲಿಕ್ಕಾಗಿಯೇ ಈಗ ನಾನು ಬ್ರಹ್ಮಾಸ್ತ್ರ ಹೂಡಿದ್ದೇನೆ'' ಎಂದನು.

ಬ್ರಹ್ಮಾದಿಗಳಿಗೂ ಪ್ರಭು ಆದ ಶ್ರೀಕೃಷ್ಣನು ಶ್ರೀಹರಿಯೇ ಸರ್ವೋತ್ತಮನೆಂಬುದನ್ನು ಸಾಧುಸಜ್ಜನರಿಗೆ ಸಂದೇಹಬರದಂತೆ ದೃಢಪಡಿಸಲಿಕ್ಕಾಗಿಯೂ ದೈತ್ಯ ಜನರಿಗೆ ತನ್ನಲ್ಲಿ ದ್ವೇಶಾಸೂಯೆಗಳು ಅದಿಕವಾಗಲಿಕ್ಕಾಗಿಯೂ ಆಗ ಅಶ್ವತ್ಥಾಮನನ್ನು ಕುರಿತು ''ಗುರುಪುತ್ರಾ! ನೀನು ನಿನ್ನ ರಾಜನ ವಂಶವನ್ನು ಬೆಳಗಿಸಬೇಕೆಂಬ ಸಂಕಲ್ಪದಿಂದಲೂ ಪಾಂಡವರ ವಂಶವನ್ನು ನಿರ್ಮೂಲಮಾಡಬೇಕೆಂಬ ಸಂಕಲ್ಪದಿಂದಲೂ ಮಾಡುತ್ತಿರುವ ನಿನ್ನ ಅಮೋಘ ಪ್ರಯತ್ನವನ್ನು ನಾನು ಕೆಡಿಸುತ್ತೇನೆ. ಕಲಿಯುಗದಲ್ಲಿ ಒಂದು ಸಹಸ್ರ ವರ್ಷಗಳ ಪರ್ಯಂತವೂ ಪಾಂಡವ ಸಂತಾನ ಬೆಳೆದು ಬೆಳಗುವಂತೆ ನಾನು ಮಾಡುತ್ತೇನೆ. ನೀನು ದುರ್ಯೋಧನನಿಗೆ ಕೊಟ್ಟ ಮಾತು ವ್ಯರ್ಥ. ನನ್ನ ಸಂಕಲ್ಪ ಸತ್ಯವಾದುದ್ದು.

ಧರ್ಮಕರ್ಮ ನಿರತವಾದ ಭಗವದ್ಭಕ್ತರನ್ನು ನಿರ್ನಾಮಮಾಡಿ ಪಾಪ ವೃದ್ಧಿಯಾಗ ಬೇಕೆಂಬ ನಿನ್ನ ಪಾಪಕರ ಪ್ರತಿಜ್ಞೆಗೆ ತಕ್ಕ ಶಿಕ್ಷೆ ಏನೆಂದರೆ ನೀರು ನೆರಳು ಇಲ್ಲದ ನಿರ್ಜನ ಪ್ರದೇಶದಲ್ಲಿ ನೀನು ವಿಷಕ್ರಿಮಿಗಳಂತೆ ಪಾಪಬುದ್ಧಿ ತುಂಬಿದ ದೇಹದಿಂದ ಅಲೆದಾಡುತ್ತಿರು.

ಪಾಂಡವರ ಸಂತಾನ ಲೋಕದಲ್ಲಿರುವವರೆಗೂ ನಿನಗೆ ಈ ದುಃಖವಿರಲಿ ಎಂದು ಶಾಪ ಕೊಟ್ಟನು. ಶ್ರೀಕೃಷ್ಣನ ಶಾಪಕ್ಕೊಳಗಾದ ಅಶ್ವತ್ಥಾಮನು ದುಃಖದಿಂದ ವೇದವ್ಯಾಸರ ಕಾಲಿಗೆ ಬಿದ್ದು ಮುನಿದೇವಾ! ನನಗೆ ಸಂಭವಿಸಿರುವ ಇಂಥ ದುರ್ಗತಿಯಲ್ಲಿ ನಿನ್ನ ದರ್ಶನ ಭಾಗ್ಯ ನಿರಂತರ ತಪ್ಪದಂತೆ ಅನುಗ್ರಹಿಸಿ ನನ್ನ ಪಾಪ ಸಂಗ್ರಹ ಕಳೆಕುಕೊಳ್ಳುವ ಸುಯೋಗವನ್ನು ಕೊಟ್ಟು ಉದ್ಧಾರಮಾಡು'' ಎಂದು ಬೇಡಿದನು.

ಅಶ್ವತ್ಥಾಮನಿಗೆ ವೇದವ್ಯಾಸರು ಅಬಯವಿತ್ತು ಬದರಿಕಾಶ್ರಮಕ್ಕೆ ಹೊರಟು ಹೋಗುವಂತೆ ವಿಡಂಬನೆ ತೋರಿಸಿದರು.

ಅಶ್ವತ್ಥಾಮನು ಭಗವಂತನ ಕರುಣೆಗೆ ಅಪಾತ್ರನೆಂಬ ದುಃಖದಿಂದ ವೈರಾಗ್ಯ ಭಾವದಿಂದ ಬದರಿಕಾಶ್ರಮದ ಕಡೆಗೆ ಹೊರಟುಹೋದನು. ಹೀಗೆ ದೇವದೇವೋತ್ತಮನಾದ ಮಹಾವಿಷ್ಣುವು ವಿಷ್ಣುವಿನ ಪರಮ ಭಕ್ತನಾದ ವೈಷ್ಣವ ಶಿಖಾಮಣಿಯಾದ ರುದ್ರದೇವನೂ ಲೋಕ ವಿಡಂಬನಾರ್ಥನಾಗಿ ಲೀಲೆ ತೋರಿಸಿದರು.

ಶ್ರೀಕೃಷ್ಣನು ಉತ್ತಾರದೇವಿಯ ಗರ್ಭದೊಳಗಿರುವ ವಂಶದ ಕುಡಿಗೆ ತನ್ನ ಶ್ರೀರಕ್ಷೆಯ ಅನುಗ್ರಹ ಮಾಡಿ ದ್ವಾರಾವತಿಗೆ ಹೋದನು. ಕೃತವರ್ಮನೂ ಕೃಪಾಚಾರ್ಯನೂ ಶ್ರೀಕೃಷ್ಣನಿಗೆ ಶರಣಾಗತರಾಗಿ ಪರಮಾತ್ಮನ ಪಾದಾಶ್ರಯವನ್ನು ಪಡೆದು ದುಃಖವನ್ನೂ ಕಳೆದುಕೊಂಡರು.

ದ್ರೌಪದಿದೇವಿಯು ಪುತ್ರ ಶೋಕದ ತಾಪದಿಂದ ಮರುಗುವುದನ್ನು ಕಂಡ ಭೀಮಸೇನನು ಅಶ್ವತ್ಥಾಮನ ಶಿರೋರತ್ನವನ್ನು ಕೊಟ್ಟನು. ಆಗ ದ್ರೌಪದಿಯ ಮನಸ್ಸು ಶಾಂತಗೊಂಡು ತಾಪ ನಿವಾರಣೆ ಆಯಿತು. ಅಂದರೆ ರುದ್ರದೇವರು ಮನಸ್ಸಿಗೆ ಅಬಿಮಾನಿದೇವತೆ ಆದ್ದರಿಂದ ದ್ರೌಪದಿಯ ಮನಸ್ಸಿಗೆ ತಾಪ ನಿವಾರಣೆ ಆಯಿತೆಂದು ತಿಳಿಯಲಿಕ್ಕಾಗಿ ವಾಯುದೇವರು ಶ್ರೀಹರಿ ಪ್ರೇರಣಾನುಸಾರ ತೋರಿಸಿದರು. ಭಾರತೀದೇವಿಯರು ಅದನ್ನು ಧರ್ಮರಾಜನಿಗೆ ಕೊಡಲು ಧರ್ಮರಾಜನು ಶ್ರೀಹರಿಯ ಅನುಗ್ರಹ ಪಾತ್ರವಾದ ಆ ರತ್ನದಿಂದ ಒಳಹೊರಗಿನ ಶತ್ರುಗಳೆಲ್ಲರನ್ನು ಗೆದ್ದು ರಾಜ್ಯಭಾರಮಾಡಲು ಶ್ರೀಕೃಷ್ಣನಾಜ್ಞೆಯಂತೆ ಸಂಕಲ್ಪ ಮಾಡಿದನು. ತಂದೆಗೆ ಸಮಾನನಾದ ದೃತರಾಷ್ಟ್ರನ ಅಪ್ಪಣೆಪಡೆದು ಸಿಂಹಾಸನ ಹತ್ತಬೇಕೆಂದು ಶ್ರೀಕೃಷ್ಣನನ್ನು ಕರೆದುಕೊಂಡು ಹಸ್ತಿನಾವತೆಗೆ ಬಂದನು.

## ಒಳಗಿದ್ದ ದ್ವೇಶದ ಕಿಚ್ಚುಕೊಚ್ಚಿ ಹೋಯಿತು

ಧರ್ಮರಾಜನು ಹಸ್ತಿನಾವತಿಯಲ್ಲಿದ್ದ ಧೃತರಾಷ್ಟ್ರನ ಬಳಿಗೆ ಬಂದು ಅವನನ್ನೂ ಕುರಿತು ''ದೊಡ್ಡಪ್ಪಾ! ನಿನ್ನ ಮಗ ಧರ್ಮರಾಯ ಬಂದಿದ್ದೇನೆ ನಿನಗೆ ನಮಸ್ಕಾರ ಮಾಡುತ್ತೇನೆ'' ಎಂದನು. ಧೃತರಾಷ್ಟ್ರನಿಗೆ ಧರ್ಮರಾಜನ ಮೇಲೆ ಕೋಪವಿರಲಿಲ್ಲ. ಭೀಮನಿಂದಲೇ ತನ್ನ ಮಕ್ಕಳು ಸತ್ತಿದ್ದಾರೆಂಬ ದ್ವೇಶ ಅವನ ಮನಸ್ಸಿನಲ್ಲಿ ಮಸೆದುನಿಂತಿತ್ತು. ಆದ್ದರಿಂದ ಅವನ ಮೇಲೆ ಕ್ರೋಧ ದ ಉರಿ ಜ್ವಲಿಸಲಿಲ್ಲ.

ನಂತರ ಭೀಮನು ಧೃತರಾಷ್ಟ್ರನಿಗೆ ನಮಸ್ಕಾರಮಾಡಲಿಕ್ಕಾಗಿ ಬರಲು ಕೃಷ್ಣನು ಭೀಮನನ್ನು ಹಿಂದಕ್ಕೆ ತಳ್ಳಿ ಗದಾಯುದ್ದದ ಅಭ್ಯಾಸಕ್ಕಾಗಿ ಧೃತರಾಷ್ಟ್ರನು ನಿರ್ಮಿಸಿಕೊಂಡಿದ್ದ ಉಕ್ಕಿನಿಂದ ಪ್ರತಿ ಭೀಮನಂತೆಯೇ ಮಾಡಿದ್ದ ಬೊಂಬೆಯನ್ನು ಧೃತರಾಷ್ಟ್ರನ ಮುಂದೆ ಜರಗಿಸಿದನು.

ವಜ್ರಕಾಯನನ್ನು ತನ್ನ ಆಕ್ರೋಶದಿಂದ ಅಪ್ಪಿ ಅರೆದುಹಾಕಿ ಪುತ್ರ ನಾಶದ ಶೋಕವನ್ನು ಶಮನಮಾಡಿಕೊಳ್ಳಬೇಕೆಂಬ ಆವೇಶದಿಂದ ಧೃತರಾಷ್ಟ್ರನು ತವಕಪಡುವುದನ್ನು ಸರ್ವಾಂತರ್ಗತನಾದ ಶ್ರೀಕೃಷ್ಣನಿಗೆ ತಿಳಿಯದೇ? ಭೀಮನು ದೃತರಾಷ್ಟ್ರನ ಬಾಹು ಸಿಕ್ಕಿದರೂ ಅವನು ಶ್ರೀಕೃಷ್ಣ ರಕ್ಷಾ ಕವಚವನ್ನು ಧರಿಸಿದ ಮಹಾತ್ಮನಾದ್ದರಿಂದ ಅವನ ಒಂದು ಚಿಕ್ಕ ರೋಮವೂ ಕದಲುತ್ತಿರಲಿಲ್ಲ. ಆದರೂ ಶ್ರೀಕೃಷ್ಣನು ದೃತರಾಷ್ಟ್ರನಿಗೆ ಜ್ಞಾನೋದಯವಾಗಬೇಕೆಂಬ ಕರುಣದಿಂದ ಕಬ್ಬಿಣದ ಭೀಮನನ್ನು ಧೃತರಾಷ್ಟ್ರನ ಅಪ್ಪುಗೆಗೆ ಕೊಟ್ಟನು.

ಆಗ ದೃತರಾಷ್ಟ್ರನು ''ಭೀಮಾ! ನನ್ನ ಮಕ್ಕಳೆಲ್ಲರನ್ನೂ ಕೊಂದ ಆನಂದದ ಅಮಲಿನಲ್ಲಿ ಬಂದಿರುವೆಯಾ? ಎಂದು ಆಲಂಗಿಸಿಕೊಂಡಾಗ. ಉಕ್ಕಿನ ಬೊಂಬೆ ಅಂಧರಾಜನ ಸಿಟ್ಟಿಗೆ ಸಿಕ್ಕು ಛಿದ್ರವಾಗಿ ಚೆಲ್ಲಿತು.

ಆಗ ಧೃತರಾಷ್ಟ್ರನು ಪಶ್ಚಾತ್ತಾಪದಿಂದ ನೊಂದು ಬಿದ್ದನು.

ಕೃಷ್ಣನು ಅವನನ್ನು ಮೇಲೆಬ್ಬಿಸಿ ''ದೃತರಾಷ್ಟ್ರಾ! ಭೀಮ ನಿನ್ನ ಕ್ರೋಧದ ಕಿಡಿಗೆ ಸಿಕ್ಕತಕ್ಕವನಲ್ಲ. ಅವನು ಕ್ಷೇಮದಿಂದಿದ್ದಾನೆ. ಕೃತಕ ಗೊಂಬೆ ನಿನ್ನ ಮತ್ಸರದ ಪಾಶಕ್ಕೆ ಸಿಕ್ಕು ಮುರಿದುಬಿದ್ದಿತು. ನಿನ್ನ ಹೃದಯದಲ್ಲಿ ಮಕ್ಕಳ ಮೋಹದ ಹುಚ್ಚು ವ್ಯಾಮೋಹ ಎಷ್ಟು ಬಲಿಷ್ಟವಾಗಿ ಬೇರೂರಿದೆ ಎಂಬುದನ್ನು ಈಗ ಲೋಕವೇ ತಿಳಿದಂತಾಯಿತು. ವಿಷವೃಕ್ಷವನ್ನು ನಿನ್ನ ವ್ಯಾಮೋಹವೆಂಬ ನೀರೆರೆದು ಬೆಳಸಿ ವೃದ್ಧಿಪಡಿಸಿದ್ದಕ್ಕೆ ಈಗ ಅದು ಕೊಡತಕ್ಕ ವಿಷಪಾತಕವಾದ ದುಃಖವನ್ನು ಅನುಭವಿಸಲೇಬೇಕು.

ದೌರಾತ್ಮರಾಗಿ ಸುಖ ಅನುಭವಿಸಬೇಕೆಂದರೆ ಸುಖ ಅಂಜಿ ದೂರದೂರ ಓಡುತ್ತದೆ. ಆಗ ದುಃಖವೆಂಬ ರಾಕ್ಷಸ ಅವನನ್ನು ಅವಲಂಬಿಸಿ ಕೊಲ್ಲುತ್ತದೆ. ಇದಕ್ಕೆ ಯಾರೂ ಕಾರಣಕರ್ತರಲ್ಲ . ಅವರ ಉಳಿವು ಅಳಿವು ಅವರವರ ಕೈಲೇ ಇರುತ್ತದೆ. ಭೀಮಸೇನನ ರಕ್ಷಣೆ ಪಡೆದವರಿಗೆ ಗದಾಧಾರಿಯಾದ ಭೀಮ ಅವರನ್ನು ಪ್ರತಿಕ್ಷಣದಲ್ಲಿ ರಕ್ಷಿಸುತ್ತಾನೆ. ಅವನನ್ನು ದ್ವೇಶಿಸಿದ ಪಾಪಿಗಳಿಗೆ ಅವನ ಗದೆ ಬೆನ್ನಟ್ಟಿಬಂದು ಬಡಿದು ಬೀಳಿಸುತ್ತದೆ. ಆದ್ದರಿಂದ ಪಾಂಡವರಿಗೆ ಮಕ್ಕಳು ಮೃತರಾದರೆಂಬ ಮರುಳತನವನ್ನು ಮರೆತು ದುಃಖವನ್ನು ಮರೆ'' ಎಂದು ಹೇಳಿದಾಗ ಧೃತರಾಷ್ಟ್ರನಿಗೆ ಮನಸ್ಸಿನಲ್ಲಿ ಹೊಕ್ಕಿರಿಯುತ್ತಿದ್ದ ಮೋಹ ನಾಶವಾಯಿತು. ವೈರಾಗ್ಯ ಮಾಡಿ ಬಂದಿತು''. ಸ್ವಚ್ಚಮನಸ್ಸಿನಿಂದ ಶುದ್ಧನಾದನು.

ಧೃತರಾಷ್ಟ್ರನ ಪತ್ನಿ ಗಾಂದಾರೀದೇವಿ ಪತಿವ್ರತೆ ಪತ್ಯಂತರ್ಗತನಾದ ಶ್ರೀಕೃಷ್ಣನನ್ನು ಸ್ವಚ್ಛಭಕ್ತಿಯಿಂದ ಆರಾಧಿಸುವ ಭಕ್ತಳು ಪತಿಗೆ ಇಲ್ಲದ ಕಣ್ಣು ನನಗೂ ಬೇಡವೆಂಬ ತ್ಯಾಗಬುದ್ದಿಯಿಂದ ಕಣ್ಣಿಗೆ ಬಟ್ಟೆ ಕಟ್ಟಿಕೊಂಡು ಅಂಧತನದ ದುಃಖವನ್ನು ತಾನು ಅನುಭವಿಸುತ್ತಿದಳು. ಆಕೆಯ ತಾಯ್ಲರಳಿನ ಸಂಕಟ ಅಪಾರ ವಾದದರಿಂದ ಅವಳ ಕೋಪಜ್ವಾಲೆ ಪಾಂಡವರನ್ನು ಸುಟ್ಟೀತೆಂದು ಶ್ರೀಕೃಷ್ಣನು ಮಾಡಿ ತೊರಿಸಿದ ಅವನ ಲೀಲಾನಾಟಕದ ಸ್ವಾರಸ್ಯ ರಸಮಯಾವಾದದ್ದು ಧರ್ಮರಾಜ ಗಾಂಧರಿಯ ಕಾಲುಮುಟ್ಟಿ ನಮಸ್ಕಾರ ಮಾಡಿದನು. ಗಾಂಧಾರಿ ಧರ್ಮರಾಜನನ್ನು ಎಬ್ಬಿಸಿ ಶೋಕತಪ್ತವಾದ ಹೃದಯದಿಂದ ಧರ್ಮರಾಜನನ್ನು ನೊಡಲು ಸ್ವಲ್ಪ ಬಟ್ಟೆಯನ್ನು ಓರೆ ಮಾಡಿದಾಗ ಅವಳ ದೃಷ್ಠಿ ಧರ್ಮರಾಜನ ಉಗುರಿನ ಮೇಲೆ ಬೀಳುವಂತೆ ಮಾಡಿದನು. ಆಗ ಧರ್ಮರಾಜನ ಉಗುರು ಸುಟ್ಟು ಕರುಕಾಲಾಯಿತು. ಗಾಂಧಾರಿಯ ಅಜ್ಞಾನವೇ ಆಗ ಸೀಡು ಹೋಯಿತೋ? ಎನ್ನುವಂತೆ ಲಜ್ಜೆಪಟ್ಟು ಧರ್ಮರಾಯನನ್ನು ಆದರಸಿದಳು.

ಭೀಮನು ಬಂದು ನಮಸ್ಕಾರ ಮಾಡಿದಾಗ ಗಾಂಧರಿ ಭೀಮನನ್ನು ಕುರಿತು ''ಭೀಮ! ನೀನು ಬಹಳ ಧರ್ಮವಂತನೆಂದು ತಿಳಿದ್ದಿದ್ದೆನು. ಅದು ಸುಳ್ಳಾಯಿತು. ನನ್ನ ಮಕ್ಕಳನ್ನು ಅಧರ್ಮದಿಂದ ಕೊಂದಿರುವೆ'' ಎಂದು ಜರಿದಳು. ಭೀಮನು''ತಾಯಿ! ನಿನ್ನ

ಮಕ್ಕಳ ಪಕ್ಷ ಮಾತ್ರವಹಿಸಿ ನೀನು ನೊಡಿದರೆ ನನ್ನ ಕಾರ್ಯ ಅಧರ್ಮವಾಗಿ ಕಾಣುತ್ತದೆ ನಿನ್ನ ಮಕ್ಕಳು ಮಾಡಿದ ಅಧರ್ಮಕಾರ್ಯ ಅವರಿಗೆ ಮೃತ್ಯುವಾಯಿತು'' ಎಂದನು. ಎಲೋಭೀಮ!ಗದಾ ಯುದ್ದದಲ್ಲಿ ನನ್ನ ಮಗನ ತೊಡೆಗೆ ಹೊಡೆದಿದ್ದು ಅಧರ್ಮವಲ್ಲವೇ? ಎಂದಳು.

''ದುರ್ಯೋಧನನು ಭಂಡತನದಿಂದ ದ್ರೌಪತಿಗೆ ತನ್ನ ತೊಡೆ ಹಾಸಿ ಕುಳಿತು ಕೋಬಾ'' ಎಂದು ಕರೆದನು ಧರ್ಮರಕ್ಷಣೆಗಾಗಿಯೇ ಸಿದ್ದವಾಗಿರುವ ನನ್ನಗದೆ ಆತೊಡೆಗೆ ತಕ್ಕ ಶಿಕ್ಷೆ ಕೊಟ್ಟಿತು. ನಿನ್ನ ಮಕ್ಕಳು ಹರಿದ್ವೇಶಿಗಳು. ಹರಿನಿಂದಕರು. ಆದ್ದರಿಂದ ಅವರನ್ನು ಹೇಗೆಕೊಂದರು ದ್ವೇಶವಿಲ್ಲವೆಂದು ಧರ್ಮಶಾಸ್ತ್ರ ಹೇಳಿರುವುದರಿಂದ ನಿನ್ನ ಮಕ್ಕಳನ್ನು ಕೊಂದಿದ್ದರಿಂದ ಪುಣ್ಯವೇ ಉಂಟಾಯಿತು'' ಎಂದನು. ಮತ್ತೆ ಗಾಂಧರಿ''ಎಲೋ ಭೀಮ! ನನ್ನ ಮಕ್ಕಳನ್ನು ಹೊಡೆದುಬೀಳಿಸದ್ದಲ್ಲದೆ ಅವರ ರಕ್ತವನ್ನು ಭೊಗಸೆಯಲ್ಲಿ ಮೊಗೆದು ಕುಡಿದಿದ್ದು ಪಿಶಾಚಿಗಳ ಕೃತ್ಯವಲ್ಲವೇ? ಧರ್ಮರಕ್ಷಕನೆಂದು ಹೇಳುತ್ತಿರುವೆ'' ಎಂದರೆ ನಿನ್ನ ಮಗನ ಕೆಟ್ಟ ರಕ್ತವನ್ನು ಕುಡಿಯುವ ಷ್ವುಶ್ವಪಚ ನಾನಲ್ಲ ಆಹರಿನಿಂದಕರ ಕಣಕಣಗಳಲ್ಲೂ ಪಾಪತುಂಬಿತುಳುಕಾಡುತ್ತಿರುವಾಗ ಅವನ ರಕ್ತ ನಾನೇಕೆ ಕುಡಿಯಲಿ? ರಣರಂಗದಲ್ಲಿ ಅವನನ್ನು ಸುತ್ತುವರಿದಿದ್ದ ಅನೇಕ ರಾಕ್ಷಸಗಣಗಳಿಗೆ ಹರಿದ್ವೇಶಿಗಳಿಗೆ ನನ್ನಿಂದ ಎಂಥ ಶಿಕ್ಷೆ ಉಂಟಾಯಿತೆಂದು ಭಯ ಉಂಟಾಗಲೆಂದು ರಕ್ತವನ್ನು ಭೊಗಸೆ ಬೋಗಸೆಗಳಲ್ಲಿ ತುಂಬಿ ಮುಖಕ್ಕೆ ತೋರಿಸಿ ಎರಚಾಡುತ್ತಿದ್ದನು'' ಎಂದನು. ಗಾಂಧಾರಿ''ಭೀಮಾ! ನೂರುಮಂದಿ ಮಕ್ಕಳಲ್ಲಿ ಒಬ್ಬನಾದರೂ ವೃದ್ದ ತಂದೆ ತಾಯಿಗಳಿಗೆ ಕೈಗೋಲಿನಂತೆ ಇರಲಿ ಎಂಬ ಕರುಣೆ ತೋರಿಸದೆ ಎಲ್ಲರನ್ನು ಕೊಂದು ನಮ್ಮನ್ನು ಅನಾಥಾನಾಗಿ ಮಾಡಿರುವುದ ಧರ್ಮವೇ?''ಎಂದಳು. ಹರಿನಿಂದಕರ ಮುಖದರ್ಶನ ಅವರ ಸಹವಾಸ ಬಹಳ ನಿಷೇದವೆಂದು ಧರ್ಮಶಾಸ್ತ್ರ ಹೇಳೂವುದರಿಂದ ನಿಮಗೆ ಆಸಂಪರ್ಕ ತಪ್ಪಲೆಂಬ ಕರುಣದಿಂದಲೇ ಒಬ್ಬರನ್ನು ಉಳಿಸದೆ ಕೊಂದೆನು. ನೂರು ಜನರಲ್ಲಿ ಒಬ್ಬರೂ ಸ್ವಾಮಿಯ ಮಹಿಮೆಯನ್ನೆರಿತವರಲ್ಲ ಎಲ್ಲರು ದೈವದ್ರೋಹಿಗಳೇ ಆಗಿದ್ದರು. ಸಕಲ ದೇವತೆಗಳಿಗೂ ಸ್ವಾಮಿಯಾದ ಶ್ರೀಕೃಷ್ಣ ಸಂಧಾನಕ್ಕೆಂದು ಹಸ್ತಿನಾಪುರಕ್ಕೆ ಬಂದು ನಿನ್ನ ಮಕ್ಕಳಿಗೆ ಹಿತನುಡಿಗಳನ್ನು ಹೇಳಿದಾಗ ತಿರಸ್ಕಾರಮಾಡಿದ್ದಷ್ಟೇ ಅಲ್ಲದೆ ಅವನ್ನನ್ನೆ ಕಟ್ಟಿ ಕಾರಾಗೃಹದಲ್ಲಿಟ್ಟು ಕೊಲ್ಲಬೇಕೆಂದು ನಿನ್ನ ಮಕ್ಕಳೆಲ್ಲರೂ ಯೋಚಿಸಿದರು.

ನೂರು ಜನರಲ್ಲಿ ಒಬ್ಬನಾದರೂ ಕೃಷ್ಣ ಯಾರಬಂದನಕ್ಕೆ ಸಿಕ್ಕತಕ್ಕವನಲ್ಲಅವನನ್ನು ನಂಬಿದವರ ಬಂದನವನ್ನು ಬಿಡಿಸಿ ಕಾಪಾಡುವ ಪ್ರಭು ಅವನು ಎಂಬ ಜ್ಞಾನವನ್ನು ಹೊಂದಿದ್ದರೆ ಅವನ್ನೊಬ್ಬನಾದರೂ ಉಳಿದು ನಿಮಗೆ ಉರುಗೋಲಾಗುತ್ತಿದ್ದ ಅದಕ್ಕಾಗಿ ನೀವು ಮರುಗಿದರೆ ನೀವೂ ಸ್ವಾಮಿಯ ವಿರೋದಿಗಳ ದಾರಿ ಹಿಡಿದಂತಾಗುವುದಿಲ್ಲವೇ''

ಎಂದನು. ಗಾಂಧಾರಿ ಮುಂದೆ ಮಾತನಾಡಲಾಗದೆ ರೋಧಿಸಿತ್ತಿದ್ದಳು. ಆಗ ವೇದವ್ಯಾಸರು ಗಾಂಧಾರಿಯ ಬಳಿ ನಿಂತು ''ಗಾಂಧಾರಿ! ನಿನ್ನ ಮಕ್ಕಳ ಮರಣಕ್ಕಾಗಿ ನೀನು ಮರುಗಬಾರದು. ಭಗವಂತನ ಇಚ್ಛೆ ಎಂಬ ನಿರ್ಲಿಪ್ತಾಭಾವದಿಂದ ಮನಸ್ಸನ್ನು ಸ್ವಚ್ಛಗೊಳಿಸಿಕೊಂಡು ಮನೋವೇದನೆಯನ್ನು ಕಳೆದುಕೋ'' ಎಂದು ಹೇಳಿ ಸಮಾಧಾನಮಾಡಿದನು.

ದ್ರೌಪದಿಯು ದುಶ್ಯಾಸನನಿಂದ ಮುಂದಲೆ ಹಿಡಿಳೆಳಸಿಕೊಂಡು ಸಿರಿಮುಡಿ ಹರಡಿಕೊಂಡಾಗ ಕೃಷ್ಣ ದ್ರೌಪದಿ!ಮಹಾ ಸಾಧ್ವೀಮಣಿಯಾದ ಸಕಲಶುಭದಾಯಕಳಾದ ಪ್ರಾತಃಸ್ಮರಣೀಯಳಾದ ನಿನ್ನ ಮುಡಿ ಹೇಗೆ ಚೆಲ್ಲಾಪಿಲ್ಲಿಯಾಗಿ ಹರಡಿ ನಿನ್ನ ಪತಿಗಳ ಮನಸ್ಸನ್ನು ಕದಡುವಂತೆ ಕಾಣುತ್ತಿದ್ದರೂ ಅದೇ ರೀತಿ ಕೌರವ ಸ್ತ್ರಿಯರೆಲ್ಲರೂ ರಣರಂಗದಲ್ಲಿ ಸಿರಿಮುಡಿಗಳನ್ನು ಬಿಚ್ಚಿಕೊಂಡು ಸತ್ತಪತಿಗಳ ಮೇಲೇ ಬಿದ್ದು ರೋದಿಸುವುದನ್ನು ನೀನು ಇಷ್ಟರಲ್ಲೇ ಕಾಣುತ್ತಿ ಎಂದು ಹೇಳಿದ್ದ ಪ್ರಕಾರ ಈಗ ರಣರಂಗಕ್ಕೆ ಪಾಂಡವರು ಮಾತ್ತು ದ್ರೌಪದಿಯೊಡನೆ ಹೊರಟನು.

ಆಗ ಧೃತರಾಷ್ಟ್ರ ಗಾಂಧಾರಿಯಾರು ಪತಿಗಳನ್ನು ಕಳೆದುಕೊಂಡ ಅಂತಃಪುರದರಸಿಯರ ತಂಡವೂ ಸಾಲುಸಾಲಾಗಿ ಹೊರಟು ರಥಗಳಲ್ಲಿ ಕುಳಿತು ರಣರಂಗಕ್ಕೆ ಹೊರಟರು.

ಆಗ ಕೃಷ್ಣನು ಗಾಂಧಾರಿಯ ಯೋಗ್ಯತೆಮೀರಿದ ತಪಸ್ಸು ಭಂಗಗೊಳ್ಳಬೇಕೆಂಬ ಸಂಕಲ್ಪದಿಂದ ಅವರಿಬ್ಬರಿಗೂ ಅನೇಕ ಹಿಂಸೆಗಳಿಂದ ರಣಭೂಮಿಯಲ್ಲಿ ರಕ್ತಮಾಂಸಳ ಮಡುವಿನಲ್ಲಿ ವಿಕಾರವಿಕಾರವಾಗಿ ಬಿದ್ದಿರುವ ಮಕ್ಕಳನ್ನು ಕಣ್ಣಲ್ಲಿ ನೋಡಿ ಕ್ರೋಧವಶರಾಗಿ ಭಗವಂತನನ್ನು ದೂಶಣೆಮಾಡಿದ ಪಾಪ ತಟ್ಟಬೇಕೆಂದು ನೋಡುವ ಕಣ್ಣುಗಳನ್ನು ಕೊಟ್ಟನು. ಅಂದರೆ ಅವರು ಕಣ್ಮರೆಯಗಿದ್ದರೂ ಸಕಲವೂ ದೃಷ್ಟಿ ಗೋಚರವಾಗುವಂತೆ ಸ್ವಾಮಿ ಮಾಡಿದನು. ಹರಿವಾಯುಗಳ ದ್ವೇಶಿಗಳಿಗೆ ಒದಗುವ ದುಃಖವನ್ನು ತೋರಿಸಿದನು. ಗಾಂಧಾರಿಯು ಮಕ್ಕಳೂ ಯುದ್ಧಭುಮಿಯಲ್ಲಿ ಮುರಿದ ದೇಹದಿಂದಲೂ ಹದ್ದು ಕಾಗೆಗಳ ಎಳೆದಾಟದಿಂದಲೂ ನರಿನಾಯಿಗಳ ಕುಣಿದಾಟಗಳಿಂದಲೂ ಒಡಗೂಡಿ ಬಿದ್ದಿರುವುದನ್ನು ನೋಡಿ ಕರಳು ಕಿತ್ತಿಬಂದಿತು. ಒಡಲ ಉರಿ ಸಹಿಸಲಾರದಾದಳು. ಅಂದು ಹೊಟ್ಟೇಕಿಚ್ಚಿನಿಂದ ನನ್ನ ಬಸುರಿನಿಂದ ಬಂದ ಈ ಮಕ್ಕಳು ಇಂದು ನನ್ನ ಹೊಟ್ಟೆಯನ್ನು ಉರಿಸುವಂತೆ ಸತ್ತು ಸಾಲುಸಾಲಾಗಿ ಬಿದ್ದಿದ್ದಾರೆ. ಈ ವಿಚಿತ್ರವ್ಯಾಪರವೆಲ್ಲವೂ ಶ್ರೀ ಕೃಷ್ಣನೊಬ್ಬ ನಿಂದಲೇ ನಡೆದಿದೆ. ಸರ್ವಶಕ್ತನಾದ ಸರ್ವೇಶ್ವರನಾದ ದೇವನಲ್ಲದೆ ಮತ್ತಾರೂ ಇಂಥ ಕಾರ್ಯವನ್ನು ಮಡಲಾರರು''ಎಂದು ಶ್ರೀ ಕೃಷ್ಣನ ಸರ್ವೋತ್ತಮತ್ವವನ್ನು ಚಿಂತಿಸಿ ಅವನಪ್ರೇರಣೆಯಂತೆ ಪುತ್ರಶೋಕಭರಿತಳಾದ ಆಕೆ ಶ್ರೀಕೃಷ್ಣನನ್ನು ನೋಡುತ್ತ ಅಪ್ಪಾ!ಕೃಷ್ಣಾ! ಮುಗಿಯಿತಾ ನಿನ್ನ ಕಾರ್ಯ? ಇಷ್ಟು ಜನ ಮಕ್ಕಳನ್ನು ಕಳೆದುಕೊಂಡು ನಾನು ಹೇಗೆ ಬದುಕಿರಲಿ ಸ್ವಾಮಿ! ನನ್ನ ವಂಶವನ್ನೆ ನಿರ್ನಾಮ ಮಾಡಿದ ನಿನ್ನ ಅಂದರೆ ಯಾದವ ವಂಶವೂ ಇದೇ ರೀತಿ

ನಿರ್ನಾಮವಾಗುತ್ತದೆ''ಎಂದಳು.

ಕೃಷ್ಣನು ತಾನೇನಿಂತು ಗಾಂಧಾರಿಯಲ್ಲಿ ನುಡಿಸಿ ಅವಳ ಪುಣ್ಯವನ್ನು ಕ್ಷಯಗೊಳಿಸಿ''ಗಾಂಧಾರೀ! ನೀನು ಮಹಾತ್ಮಳು ನಿನ್ನ ಮಾತು ಎಂದಿಗೂ ಸುಳ್ಳಾಗುವುದಿಲ್ಲ ನಿನ್ನ ಶಾಪವನ್ನು ಅಂಗೀಕಾರಮಾಡಿದ್ದೇನೆ ಅದರಂತೆಯೇ ಮುಂದೆ ನನ್ನ ವಂಶವೂ ನಾಶಹೊಂದುತ್ತದೆ'' ಎಂದು ಹೇಳಿ ಗಾಂಧಾರಿಯನ್ನು ಸಾಂತ್ವನವಚನಗಳಿಂದ ಸಮಾಧಾನಪಡಿಸಿ ದ್ರೌಪದಿಯ ಬಳಿಗೆ ಹೋಗಿ ದ್ರೌಪದೀ! ನೋಡು ಆದಿನ ನಿನ್ನ ಸಿರಿಮುಡಿಯನ್ನು ಎಳೆದು ತೊತ್ತಿನವಳೆಂದು ಅಲ್ಲಗಳೆದು ಅಪಮಾನಗೊಳಿಸಿದ ಪಾಪಿಗಳ ಪತ್ನಿಯರು ನಿನ್ನನ್ನು ಸಭಾಮಧ್ಯದಲ್ಲಿ ಮಾನಭಂಗ ಮಾಡಬೇಕೆಂದು ಯೋಚಿಸಿದ ಪಾಪಿಗಳ ಪತ್ನಿಯರೆಲ್ಲರೂ ನಿನ್ನ ಪರಿತಾಪವನ್ನು ಆದಿನ ನೋಡಿದಾಗ ಪರಿಹಾಸ್ಯ ಮಾಡಿ ನಕ್ಕ ಫಲವನ್ನು ಈಗ ಅನುಭವಿಸುತ್ತಿದ್ದಾರೆ. ಮಹಾಪತಿವ್ರತೆಯಾದ ನಿನ್ನನ್ನು ಅಜ್ಞಾನದಿಂದ ದೂಶಿಸಿದವರೆಲ್ಲರೂ ಅಂಧಂತಮಸ್ಸಿಗೆ ಹೋದರು. ದ್ರೌಪದಿ! ನಿನ್ನ ದಿವ್ಯತೇಜಸ್ಸನ್ನು ನೋಡಿ . ನಮಸ್ಕಾರ ಮಾಡದೆ ಭೋಗಿಸಬೇಕೆಂಬ ದುರ್ಮತಿಯಿಂದ ನಿನ್ನನ್ನುಪೀಡಿಸಿದ ಪಾಪಿಗಳೇಗೆ ತಕ್ಕ ಶಿಕ್ಷೆ ಸಿಕ್ಕುಹೇಗೆ ಬಿದ್ದಿದ್ದಾರೆ ನೋಡು''ಎಂದು ಎಲ್ಲರನ್ನೂ ಮಹಾಮಹಿಮನಾದ ಶ್ರೀ ಕೃಷ್ಣನು ಸ್ಮರಣೆಮಾತ್ರದಿಂದಲೇ ಪಾಪಪರಿಹಾರಕಳಾದ ದ್ರೌಪದಿದೇವಿಗೆ ತೋರಿಸುತ್ತಾ ರಣಕ್ಷೇತ್ರದಲ್ಲಿ ಹೋಗುತ್ತಿದ್ದನು. ಆದ್ದರಂದಲೇ ಅದು ಧರ್ಮಕ್ಷೇತ್ರವಾಗಿ ಶೋಭಿಸಿತು. ದ್ರೌಪದಿಯು ಶ್ರೀ ಕೃಷ್ಣನ ಕರುಣದ ಕಡಲಿನಲ್ಲಿ ನಲಿದಾಡುತ್ತ ಭಾಷ್ಪಗದ್ಗದ ಕಂಠ ಉಳ್ಳವಾನಾಗಿ ''ದೇವಾ! ಸ್ವಾಮೀ! ನಿನ್ನ ಸಂಕಲ್ಪವನ್ನು ಸುಳ್ಳುಮಾಡಲಾದೀತೇ? ನೀನು ಆನಂದಪೂರ್ಣನಾಗಿರುವಿ ನಿನಗೆ ನಮ್ಮ ಭಕ್ತಿ ಸುತ್ತಿ ಸ್ತೋತ್ರಾದಿಗಳಿಂದ ಏನಾಗಬೇಕು ರಮಾದೇವಿಯರೆ ನಿಂತು ನಿನಗೆ ಸದಾಸೇವೆಸಲ್ಲಿಸಿ ಅದರಿಂದ ತಮಗುಂಟಗುವ ಆನಂದವನ್ನು ಅನುಬವಿಸುತ್ತಾರೆ ಅದರಿಂದ ನಿನು ಆನಂದ ಪಡೆಯಬೇಕಾಗಿಲ್ಲವೆಂದ ಮೇಲೆ ಇನ್ನು ನಮ್ಮ ಮಾತೇನು? ಸ್ವಾಮಿ! ಸಕಲ ಜೀವ ಕೋಟಿಗಳಿಗೂ ನಿಶ್ಪಕ್ಷಪಾತದಿಂದ ರಕ್ಷೆ ಶಿಕ್ಷೆಗಳನ್ನು ಕೊಡುತ್ತಾ ನೀನು ನಡೆಸುವ ಮಹಾ ಮಹಿಮೆಗಳನ್ನು ತಿಳಿಯುವಂಥ ಸುಜ್ಞಾನ ಸಂಪತ್ತನ್ನು ನನಗೆ ಕ್ಷಣಕ್ಷಣಕ್ಕೂ ಅಧಿಕವಾಗುವಂತೆ ನೀಡಿ ನನ್ನ ಮನಸ್ಸನ್ನು ನಿನ್ನ ಪಾದಮೂಲದಲ್ಲೇ ನೆಲಸಿರುವಂತೆ ಅನುಗ್ರಹಮಾಡು ಸ್ವಾಮೀ''ಎಂದು ಶ್ರೀ ಕೃಷ್ಣನ ಚರಣಕಮಲಗಳ ಮೇಲೆ ತಲೆಯೂರಿ ಪ್ರಾರ್ಥಿಸಿಕೊಂಡಳು.

ಹರಿದ್ವೇಶಿಗಳೆಲ್ಲರೂ ಒಂದುಕಡೆ ಮೃತ್ಯುವಶರಾಗಿ ಬಿದ್ದಿದ್ದರು ಮತ್ತೋಂದು ಕಡೆ ಶ್ರೀ ಹರಿಭಕ್ತರು ವೀರ ತೇಜಸ್ಸಿನಿಂದ ಜಯದ ಮಂಗಳ ಘೋಷದೊಡನೆ ಸಾಕ್ಷಾತ್ತಾಗಿ ಶ್ರೀಕೃಷ್ಣ ನನ್ನೆ ಅನುಸರಿಸುವ ಪುಣ್ಯದಿಂದ ಸ್ವಾಮಿಯನ್ನೆ ಹಿಂಬಾಲಿಸುತ್ತ ಸುಖದ ಸಾರವನ್ನು ಪಾನಮಾಡುತ್ತ ನಡೆದು ಹೋಗುತ್ತಿದ್ದರು.

ಕಲಿಯ ಪಕ್ಷ ಹಿಡಿದವರು ನರಿನಾಯಿಗಳ ಕಾಲ್ತುಳಿಕ್ಕೆ ಸಿಕ್ಕು ದುರ್ಗಂಧದಿಂದ ಬಿದ್ದಿದ್ದರು. ರಣರಂಗದಲ್ಲಿ ರಾಶಿರಾಶಿ ಶವಗಳು ಪರ್ವತಾಕಾರವಾಗಿ ಬಿದ್ದವೆ ಯಾರಿಗೆ ಸಂಸ್ಕಾರ ಮಾಡಬೇಕು? ಯಾರಿಗೆಬೇಡ? ಎಂಬ ಸಮಸ್ಯೆಗೆ ಶ್ರೀಕೃಷ್ಣನೇ ಪರಿಹಾರ ಹೇಳಬೇಕು ಎಂದರು. ಗುರುಗಳೂ ಹಿರಿಯರು ಪರಾಕ್ರಮವನ್ನು ದುಷ್ಟರ ನಾಶಕ್ಕಾಗಿ ಪ್ರಯೋಗಮಾಡಿ ತಮ್ಮ ಪ್ರಾಣಾರ್ಪಣೆಯಿಂದ ಭಗವಂತನು ಸುಪ್ರೀತನಾಗುವಂತೆ ನಿಸ್ವಾರ್ಥಹೋರಾಟನಡೆಸಿ ಅಂತ್ಯಗೊಂಡಿದ್ದಾರೆ ಅವರೆಲ್ಲರಿಗೂ ಆತ್ಮಶಾಂತಿ ಒದಗುವಂತೆ ಅಂತ್ಯಕರ್ಮಗಳನ್ನು ನಿಷ್ಠೆಯಿಂದ ನಡೆಸಿ ಭಗವದರ್ಪಣ ಮಾಡಬೇಕು ಎಂದು ನಿರ್ಧರಿಸಿ ನಡೆಸಿದರು. ಸಕಲಜೀವಿಗಳು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಹೋರಾಟನಡೆಸಿ ಪ್ರಾಣಾರ್ಪಣಮಾಡಿದ್ದರು. ಅವರೆಲ್ಲರನ್ನು ಸರಸ್ವತೀ ನದಿಯಲ್ಲಿ ಹಾಕಿ ಕೃಷ್ಣಾರ್ಪಣೆವೆಂದರು. ಇನ್ನೂ ಹರಿನಿಂದಕರು ಕ್ರೂರಕರ್ಮಿಗಳು ಆದ ದೈತ್ಯರೆಲ್ಲರಿಗೂ ಸಂಸ್ಕಾರ ಕೂಡದೆಂದು ಭೀಮಸೇನನ ಮತವಾದರು ಅದನ್ನು ಪುತ್ರಶೋಕದಿಂದ ಕ್ಷೋಭಗೊಂಡಿದ್ದ ಧೃತರಾಷ್ಟ್ರನಿಗೆ ತಿಳಿಸದೆ ಮುಂದಿನ ಕಾರ್ಯವನ್ನು ಮಾಡಲು ಭಾಗೀರಥೀ ನದೀತೀರಕ್ಕೆ ಹೊರಟರು ಅಲ್ಲಿ ಅಧಿಕಾರ ಯೋಗ್ಯರಾದ ಸಜ್ಜನರೆಲ್ಲರಿಗೂ ಪಿಂಡಪ್ರದಾನ ಮಾಡುವಾಗ ಕುಂತೀದೇವಿಯು ''ಧರ್ಮರಾಜಾ! ಕರ್ಣನಿಗೂ ಪಿಂಡಪ್ರದಾನಮಾಡು'' ಎಂದಳು. ಆಗ ಭೀಮನು ಕರ್ಣನಾರೆಂದುತಿಳಿದಿದ್ದರೂ ಆಶ್ಚರ್ಯದಿಂದ ಕರ್ಣ ನಮಗೆ ಕಡುವೈರಿ ಆಗಿದ್ದಾನೆ ಅವನಿಗೆ ಉತ್ತರ ಕ್ರಿಯೆ ಮಾಡು ಎಂದು ಹೇಳುತ್ತಿರುವಿ ಕಾರಣವೇನು?''ಎಂದನು.

ಆಗ ಕುಂತಿಯು ನಡೆದ ರಹಸ್ಯವನ್ನು ಹೇಳಿದಳು ನಾನು ದೂರ್ವಾಸರಿಂದ ವರವಾಗಿ ಐದು ಮಂತ್ರಗಳನ್ನೂ ಪಡೆದಿದ್ದೆನು. ಹುಡುಗ ಬುದ್ಧಿಯಿಂದಲೋ ಅಥವಾ ದೈವೇಚ್ಛೆಯಿಂದಲೋ ಕನ್ಯಾವಸ್ಥೆಯಲ್ಲೆ ಒಂದು ಮಂತ್ರದಿಂದ ಸೂರ್ಯನನ್ನು ಕರೆದು ಅವನ ಅನುಗ್ರಹದಿಂದ ಕರ್ಣನನ್ನು ಪಡೆದೆನು ದೈವಾನುಗ್ರಹದಿಂದ ಜನಿಸಿದ ಆಸುಂದರ ಶಿಶುವನ್ನು ನೋಡಿ ಆನಂದವಾದರೂ ಅವಿವಾಹಿತಳಾಗಿದ್ದ ನನಗೆ ಜನಾಪವಾದದ ಭಯ ಉಂಟಾಯಿತು. ಆಗ ಶಿಶುವನ್ನು ರತ್ನಾಭರಣಗಳಿಂದ ಅಲಂಕಾರಮಾಡಿ ಹೊನ್ನನ್ನು ಹಾಸಿ ಅದರ ಮೇಲೆ ಮಲಗಿಸಿದ ಒಂದು ಪೆಟ್ಟಿಗೆಯನ್ನು ಗಂಗಾದೇವಿಯನ್ನು ಪ್ರಾರ್ಥಿಸಿಕೊಂಡು ನೀರೊಳಗೆ ಹಾಕಿದೆನು ಅದು ಸೂತನ ಕೈಗೆ ಸಿಕ್ಕು ಅವರ ಮನೆಯಲ್ಲಿ ವಸುಷೇಣನೆಂಬ ಹೆಸರಿನಿಂದ ಬೆಳೆದು ಕರ್ಣನೆಂಬ ಹೆಸರಿನಿಂದ ಪ್ರಖ್ಯಾತನಾದನು'' ಎಂದು ತಿಳಿಸಿದಳು.

ಧರ್ಮರಾಜನು ಮೊದಲೇ ಯುದ್ಧದಲ್ಲಿ ಸತ್ತ ಬಂದುಗಳಿಗಾಗಿ ಮನಮರುಗುತ್ತ ಖೇದಗೊಂಡಿದ್ದನು ಈಗ ಕರ್ಣನು ತನಗೆ ಸ್ವಂತ ಅಣ್ಣನೇ ಎಂದು ತಿಳಿದ ನಂತರ ಪರಿತಪಿಸ ಹತ್ತಿದನು. ಅಯ್ಯೋ! ಒಡಹುಟ್ಟಿದ ಅಣ್ಣನನ್ನೂ ಬಿಡದೆ ಕೊಂದು ನಾನು ರಾಜನಾಗಿ ಮೆರೆಯಬೇಕಾಯಿತಲ್ಲಾ! ಇದಕ್ಕಿಂತಲೂ ಪಾಪಕರ್ಮ ಮತ್ತೇನಿದೆ? ಎಂದು ಅಳುತ್ತಾ ತಾಯೇ

ಎಂಥಾ ವಿಷಯವನ್ನು ನೀನು ನಿನ್ನ ಹೃದಯದಲ್ಲಿಅಡಗಿಸಿಕೊಂಡು ಗೋಪ್ಯದಿಂದಿರುವಿ? ತಾಯಿಯಾದ ನಿನಗೂ ಈಕಠೋರಕರುಳಿದೆಯಾ? ಎಂದು ಹೇಳುತ್ತ ಸ್ತ್ರಿಯರಲ್ಲಿ ರಹಸ್ಯ ಉಳಿದರೆ ತಾನೇ ಇಂಥ ಆಗ ಬಾರದ ಅನಾಹುತಗಳು ನಡೆಯುತ್ತದೆ ಇನ್ನು ಮುಂದೆ ಯಾವ ಸ್ತ್ರಿಯರಲ್ಲೂ ರಹಸ್ಯ ಉಳಿಯದೆ ಅದು ಬಹಿರಂಗವಾಗಲಿ''ಎಂದುಶಪಿಸಿದನು. ಧರ್ಮರಾಜನು ಕರ್ಣನನ್ನು ನೆನೆದು ರೋಧಿಸಹತ್ತಿದನು. ಆಗ ಕೃಷ್ಣನು ''ಧರ್ಮಜಾ! ನೀನೇಕೆ ಅವನಿಗಾಗಿ ಇಷ್ಟು ಶೋಕಪಡುತ್ತಿರುವಿ? ಅವನನ್ನು ನಾನು ದೂತನಾಗಿ ಹಸ್ತಿನಾವತಿಗೆ ಹೋದಾಗ ''ಕರ್ಣ ದುರ್ಯೋಧನನ ಎಂಜಲಿಗೆ ಕೈ ಒಡ್ಡಿ ನೀನು ಇರುವುದ ಸರಿಯಲ್ಲ ಪಾಂಡುರಾಜನ ಹಿರಿಯಮಗನಾದ ನೀನು ಪಾಂಡವರೆಲ್ಲರಿಗೂ ಹಿರಿಯ ಅಣ್ಣನಾಗಿರುವಾಗ ನಿನಗೇನು ಕಡಿಮೆ!? ಈಗಲೇ ಹೊರಟು ಬಾ! ಎಂದು ನನ್ನ ತೊಡೆಯ ಮೇಲೆ ಕೂಡಿಸಿಕೊಂಡು ಎಷ್ಟು ವಿಧಧಲ್ಲಿಹೇಳಿದರು ಕೇಳದೆ ದುರ್ಯೋಧನನೇ ನನಗೆ ಸರ್ವಸ್ವ ಅವನನ್ನು ನಾನು ಬಿಟ್ಟು ಬರುವುದಿಲ್ಲ ಎಂದು ಹೇಳಿ ಹೊರಟು ಹೋದನು. ದುರ್ಯೋಧನನ ಪಕ್ಷವಹಿಸಿ ನಿಮ್ಮನ್ನು ಅನೇಕವಿಧದಲ್ಲಿ ಪೀಡಿಸಿದನು. ಅವನಿಗಾಗಿ ದುಃಖಪಟ್ಟರೆ ದೋಶ ಉಂಟಾಗುತ್ತದೆ''ಎಂದು ಹೇಳಿ ಸಮಾಧಾನಪಡಿಸಿದನು.

ಧರ್ಮರಾಜನು ಶ್ರೀಕೃಷ್ಣನ ಆಜ್ಞೆಯಂತೆ ಸತ್ತ ಸಜ್ಜನರೆಲ್ಲರಿಗೂ ಊರ್ಧ್ವಗತಿ ಕಾಣಿಸಿದನಂತರ ಭಾಗೀರಥೀ ತೀರದಿಂದ ಹಸ್ತಿನಾವತಿಗೆ ಬಂದು ರಾಜ್ಯಪದವಿ ಸ್ವೀಕಾರಮಾಡಿದನು. ಭೀಮಸೇನನ ಧರ್ಮಶಾಸನದಂತೆ ಪ್ರಜೆಗಳು ಆನಂದದಿಂದ ನಡೆದು ನಿಜವಾದ ಸುಖದ ಸಾರವನ್ನು ಅನುಭವಿಸುತ್ತಿದ್ದರು.

ಇಂಥ ರಸಭರಿತವಾದ ಸತ್ಕಥನವನ್ನು ಆಚಾರ್ಯರು ಆನಂದ ತುಂಬಿದ ಮನಸ್ಸಿನಿಂದ ತಿಳಿಸುತ್ತಿದ್ದರು ಶ್ರವಣಸುಖದಿಂದ ಸಜ್ಜನರು ಧನ್ಯರಾಗಿ ಕುತೂಹಲದಿಂದ ಕೇಳುತ್ತಿದ್ದರು. ಸತ್ತ ಶೂರರೆಲ್ಲರಗೂ ಉತ್ತರ ಕ್ರಿಯೆಗಳೆಲ್ಲವನ್ನೂ ಮಾಡಿ ಮುಗಿಸಿದನಂತರ ಧರ್ಮರಾಯನು ಹಸ್ರಿನಾವತಿಯಲ್ಲಿ ಶ್ರೀವೇದವ್ಯಾಸರು ಮತ್ತು ಕೃಷ್ಣ ಎರಡು ರೂಪದಿಂದ ಸ್ವಾಮಿಯು ಧರ್ಮರಾಜನಿಗೆ ಪಟ್ಟಾಭಿಷೇಕ ಮಹೋತ್ಸವವನ್ನು ನಡೆಸಿದನು. ಭೀಮಸೇನನೇ ಯುವರಾಜನಾಗಿ ರಾಜ್ಯದಲ್ಲಿ ಧರ್ಮಶಾಸನವನ್ನು ಸ್ವಚ್ಛವಾಗಿ ನೆಲೆಗೊಳಿಸಿ ಸ್ವಚ್ಛಶಾಸ್ತ್ರ ಸುಗಂಧದ ಪರಿಮಳವನ್ನು ಎಲ್ಲೆಡೆಗಳಲ್ಲೂ ಹರಡಿದನು. ಎಲ್ಲರು ಪರಮ ವೈಷ್ಣವ ದೀಕ್ಷೆಯಿಂದ ಬ್ರಹ್ಮತೇಜಸ್ಸನ್ನು ಹೊಂದಿ ಆನಂದವನ್ನುರಾಜ್ಯದಲ್ಲಿ ತುಂಬಿದರು.

ಶ್ರೀ ಹರಿಸರ್ವೋತ್ತಮತ್ವದ ಜ್ಞಾನ ಮೂಲೆಮೂಲೆಗಳಲ್ಲೂ ತುಂಬಿದ್ದರಿಂದ ದೈತ್ಯರೆಗೆ ರಾಜ್ಯದಲ್ಲಿ ಅವಕಾಶಸಿಗದಂತಗಾಲು ಮೂಲಕಲಿ ದುರ್ಯೋಧನನ ಆಪ್ತನೊಬ್ಬನು ತ್ರಿದಂಡಸನ್ಯಾಸಿ ವೇಷದಿಂದ ಹಸ್ತಿನಾವತಿಗೆ ಬಂದು ರಾಜನಿಂದ ಸತ್ಕಾರವನ್ನು ಸ್ವೀಕಾರ ಮಾಡದೆ ಧರ್ಮರಾಜನನ್ನು ಕ್ರೋಧ ದೃಷ್ಠಿಯಿಂದ ನೋಡುತ್ತ ನೀನು ಮಹಾ ಪಾಪಿ ಜನದೊಶಣೆಗೆ

ಒಳಗಾದವನು ನಿನ್ನಿಂದ ಜಲಪಾನಮಾಡಬಾರದು'' ಎಂದು ಶಾಪಕೊಡುವವನಂತೆ ಕಮಂಡಲೋದಕವನ್ನುಕೈಗೆ ಸುರಿದುಕೊಂಡಾಗ ಧರ್ಮರಾಜನು ಸ್ವಾಮಿ! ಬ್ರಹ್ಮಣರ ಶಾಪಕ್ಕೀಡಾದವರನ್ನು ಭಗವಂತನು ಕೈಬಿಡುತ್ತಾನೆ. ನನ್ನ ಅಪರಾದ ಏನೆಂದು ತಿಳಿಸಿ ತಕ್ಕ ಪ್ರಾಯಶ್ಚಿತ್ಯದಿಂದ ಪಾಪ ಕಳೆದುಕೊಳ್ಳುತ್ತೇನೆ'' ಎಂದನು.

ಪಾಂಡವರು ಮೋಸದಿಂದ ದುರ್ಯೋಧನನನ್ನು ಕೊಂದರೆಂದೂ ದುಶ್ಯಾಸನನನ್ನು ರೀತಿನೀತಿಗಳಿಲ್ಲದೆ ಕೊಂದು ಅವನ ಶವವನ್ನು ಕಾಲಕಾಲಲ್ಲಿ ಒದ್ದು ರಕ್ತಪಾನ ಮಾಡಿದ ಮಹಾ ನೀಚರೆಂದು ಮಾತನಾಡಿಕೊಳುತ್ತ ಮನಮರುಕದಿಂದ ನಿಮ್ಮನ್ನುನಿಂದಿಸುತ್ತಿದ್ದಾರೆ. ಮಹಾಕ್ರೂರ ಕೃತ್ಯದಿಂದ ಹಸ್ತಿನಾವತಿಯ ಶೂರರಾಜನನ್ನು ಪರಿವಾರಸಹಿತವಾಗಿ ನಾಶಪಡಿಸಿ ಕರುಡರಾಜನನ್ನು ಅನಾಥನನ್ನಾಗಿ ಮಾಡಿ ಸಾಮ್ರಾಜ್ಯವನ್ನು ವಶಪಡಿಸಿಕೊಂಡಿರುವ ನಿಮ್ಮಂಥ ಪಾಪಿಗಳ ಮುಖದ ದರ್ಶನವೆ ಮಹಾಪಾಪ'' ಎಂದು ಹೇಳುತ್ತ ಕಿಡಿಗಳೋಪಾದಿಯಲ್ಲಿ ಕ್ರೋಧದ ಹನಿಗಳನ್ನು ಆರಾಕ್ಷನನು ಸುರಿಸಿ ತೋರಿಸುತ್ತಿದ್ದನು. ಆಗ ಧರ್ಮರಾಜನು ಆಕಪಟ ಬ್ರಹ್ಮಣನ ಕಾಲುಕಟ್ಟಿಕೊಂಡು ವಿಧ ವಿಧದಲ್ಲಿ ಬೇಡಿಕೊಳ್ಳುತ್ತಿರಲು ಅಜ್ಞಾನಲೇಶಲೇಪವಿಲ್ಲದ ಸ್ವಚ್ಛಜ್ಞಾನದ ಭೀಮನಿಗೆ ಆಗ ಬಂದ ಬ್ರಹ್ಮಣನ ಕಪಟತನದ ಕುಚೋದ್ಯ ತಿಳಿಯಿತು. ಆಗ ಧರ್ಮರಾಜನ ಮನಸ್ಸು ಈಗ ಈ ಚಂಡಾಲ ಬ್ರಹ್ಮಣನಿಂದ ಕಳವಳ ಗೊಳುತ್ತಿರುವಾಗ ನಾನೊಬ್ಬನೇ ಅವನ ಬಳಿಗೆ ಹೋಗದೆ ಸಕಲ ಋಷಿಮುನಿಗಳ ಸಮೇತ ಹೋಗಿ ಅವನ ಮನಮಾಲಿನ್ಯವನ್ನುತೊಳೆಯಬೇಕೆಂಬ ಧೈಯದಿಂದ ಅನೇಕ ಬ್ರಹ್ಮಣ ಸಮೂಹ ದೊಡನೆ ಧರ್ಮರಾಜನ ಬಳಿಗೆ ಬಂದು ''ಧರ್ಮರಾಜನನ್ನುಕುರಿತು ಸಮಸ್ತ ಋಷಿಗಳು ವಿಪ್ರವರರೂ ''ಧರ್ಮರಾಜಾ! ನಿನಗಿಂತಲೂ ಅಧಿಕ ಪುಣ್ಯಶಾಲಿಗಳಾರಿದ್ದಾರೆ. ನೀನು ಮಹಾ ಧರ್ಮಾತ್ಮನಾದ್ದರಿಂದಲೇ ಸ್ವಾಮಿಯು ನಿನ್ನ ಬಳಿ ತ್ರಿರೂಪಗಳಿಂದಲೂ ಸದಾ ನೆಲೆಸಿದ್ದು ನಿನ್ನನ್ನು ಎಡೆಬಿಡದೆ ಆನಂದ ಪಡಿಸುತ್ತಿದ್ದಾನೆ. ನೀನು ಅಧರ್ಮದಿಂದ ರಾಜ್ಯವನ್ನು ವಶಪಡಿಸಿಕೊಂಡಿದ್ದರೆ ಸಾಕ್ಷಾತ್ತಾಗಿ ಶ್ರೀಕೃಷ್ಣ ವೇದವ್ಯಾಸರು ನಿನ್ನಯ ಧರ್ಮಪೀಠದ ಮೇಲೆ ಕೂಡಿಸಿ ಪಟ್ಟಾಭಿಷೇಕ ಮಾಡುತ್ತಿದ್ದಾರಾ! ನೀನು ಯೊಚಿಸಬೇಡವೆ? ಸಕಲ ಧರ್ಮಗಳಿಗೂ ಅಶ್ರಯದಾತನಾದ ಶ್ರೀ ಹರಿ ಅಧರ್ಮಕ್ಕೆ ಆಶ್ರಯನೀಡುತ್ತಾನ? ನಿನಗೆ ಸ್ವಾಮಿಯಲ್ಲಿ ಪೂರ್ಣ ನಂಬಿಕೆ ಇದ್ದರೆ ಈ ಅಧಮನ ಅಮಂಗಳವಾದ ಮಾತನ್ನು ಕಿವಿಯಲ್ಲೂ ಕೇಳದಂತೆ ಓಡಿಸಬೇಕು. ಇಂಥ ಪಾಪಿಗಳು ನಿನ್ನ ಧರ್ಮಸದನವನ್ನು ಸ್ಪರ್ಶಿಸಲೂ ಯೋಗ್ಯರಲ್ಲ ಎಂದು ಹೇಳುತ್ತಾ ಆ ಕಪಟ ಸನ್ಯಾಸಿಯನ್ನು ಒಮ್ಮೆ ತಮ್ಮ ತಪೋತೇಜಸ್ಸಿನಿಂದ ನೊಡಿದಾಕ್ಷಣವೇ ಅವನು ಸುಟ್ಟು ಬೂದಿಯರಾಶಿಯಾಗಿ ಬಿದ್ದನು.

ಧರ್ಮರಾಜನು ಸಕಲ ಸದ್ಭಕ್ತರನ್ನು ಕುರಿತು ಕೈ ಮುಗಿದು ವಿಪ್ರಶ್ರೇಷ್ಠರೇ ಈತನು ಯಾರೇ ಆಗಿದ್ದರು ಬ್ರಹ್ಮಣ ವೇಷ ಧರಿಸಿ ಬಂದವಾನಾದ್ದರಿಂದ ಬ್ರಹ್ಮಹತ್ಯಾದೋಶ

ಉಂಟಾಗುವುದಿಲ್ಲವೇ? ಎಂದು ದುಃಖದಿಂದ ಕೇಳಿದನು.

ಆಗ ಭೀಮನು ಧರ್ಮರಾಜ ಇವನು ನಿನ್ನ ಧರ್ಮವನ್ನು ಕೆಡಿಸಲು ಬಂದವನಾದ್ದರಿಂದ ಇವನ ಮೋಸ ಕೃತ್ಯಕ್ಕೆ ತಕ್ಕ ಶಿಕ್ಷೆಯನ್ನು ಸ್ವಾಮಿಯೇ ವಿಧಿಸಿದ್ದಾನೆ. ಇವನು ರಾಕ್ಷಸಾಧಮ ದುರ್ಯೋಧನನ ಆಪ್ತಮಿತ್ರನಾದ್ದರಿಂದ ದ್ವೇಶ ಸಾಧಿಸಲು ಬಂದ ಮಹಾಪಾಪಿ ಇಂಥವರು ಬ್ರಹ್ಮಣರ ರೂಪದರಿಸಿದ ಮಾತ್ರಕ್ಕೆ ಪೂಜ್ಯರಾಗುತ್ತಾರೆಯೇ? ಅವನ ಪಾಪವೇ ಅವನನ್ನು ಸುಟ್ಟುಹಾಕಿತು. ದೈತ್ಯ ಸಂಹಾರವಾಯಿತೆಂಬ ಆನಂದದಿಂದ ಭಗವದರ್ಪಣ ಮಾಡದೆ ದುಃಖಪಟ್ಟರೆ ಸ್ವಾಮಿ ಮೆಚ್ಚುವುದಿಲ್ಲ ಎಂದು ಸಮಾಧಾನಪಡಿಸಿದರು. ಧರ್ಮರಾಜನ ಮನಸ್ಸು ! ಶ್ರೀಕೃಷ್ಣನ ಸುವಾಕ್ಯ - ಬ್ರಹ್ಮಣರ ಜ್ಞಾನರಸ ಭೀಮಸೇನನ ತತ್ವೋಪದೇಶಗಳಿಂದ ಹಿಗ್ಗಿ ಹರ್ಷಗೊಂಡಿತು. ಬಂದ ಬ್ರಹ್ಮಣರೆಲ್ಲರಿಗೂ ಯಥೇಚ್ಚವಾದ ಉಡುಗೊರೆ ಉತ್ಸವಾದಿಗಳನ್ನು ಕೊಟ್ಟು ಉಪಚರಿಸಿ ಕಳುಹಿಸಿದನು.

ದುರ್ಯೋಧನನ ರಾಜ್ಯದಲ್ಲಿ ಅವನಿಂದ ಆಶ್ರಯದಲ್ಲಿದ್ದ ಅನೇಕ ಪ್ರಜಾಕೋಟಿಗಳು ಅನೇಕರು ತಾವು ಪಾಂಡವರ ದ್ವೇಶಿಗಳ ಪೊಷಣೆಯಲ್ಲಿದ್ದು ಪಾಂಡವರಿಗೆ ದ್ರೋಹ ಮಾಡಿದವರಾದ್ದರಿಂದ ಭೀಮಸೇನನು ತಮ್ಮನ್ನ ಗದೆಯಿಂದ ಬಡಿದು ಕೊಲ್ಲುತ್ತಾನೆಂಬ ಅಜ್ಞಾನದಿಂದ ಊರುಬಿಟ್ಟು ದೂರದೇಶಗಳಲ್ಲಿ ಪರದಾಡುವುದನ್ನು ತಿಳಿದ ಭೀಮಸೇನನು ತನ್ನ ಕರುಣದ ಕರೆಯಿಂದ ಅವರೆಲ್ಲರನ್ನು ಕರೆದು ಎಲ್ಲರಿಗೂ ರಾಜಾಶ್ರಯ ಸಿಗುವಂತೆ ವ್ಯವಸ್ಥೆಮಾಡಿ ತಂದೆ ತಾಯಿಗಳು ಮಕ್ಕಳನ್ನು ರಕ್ಷಿಸುವಂತೆ ರಕ್ಷಣೆ ನಿಡಿದನು.

ಹೀಗೆ ಧರ್ಮರಾಜನ ರಾಜ್ಯದಲ್ಲಿ ಲೇಶಮಾತ್ರವೂ ಅನ್ಯಾಯ ಅತ್ಯಾಚಾರಗಳ ಅಂಥತೆ ಇಲ್ಲದೆ ಸ್ವಚ್ಛ ಪ್ರಕಾಶದಿಂದ ಬೆಳಗುತ್ತಿದ್ದರು. ಧರ್ಮರಾಜನ ಮನೋಕೊಳದಲ್ಲಿ ಮಾತ್ರ ಅನೇಕ ಕೋಟಿ ಜೀವ ಹರಣ ತನ್ನ ದೆಶೆಯಿಂದ ನಡೆದು ಅನೇಕ ಸೌಮಂಗಲ್ಯವತಿಯರ ಕಣ್ಣೀರಿಗೆ ಕಾರಣನಾದನೆಲ್ಲಾ ಎಂಬ ಒಂದು ವಿಷಬಿಂದು ಅವನನ್ನು ಕಾಡಿಸುತ್ತಲೇ ಇತ್ತು. ಆ ದುರ್ಘಟನೆಯನ್ನುಮಾತ್ರ ಆವನು ಮರೆಯಲಾರದೆ ಮರುಕಳಿಸುತ್ತಲೇ ಇತ್ತು. ಕಣ್ಮುಂದೆ ಭೀಷ್ಮರ ವಾತ್ಸಲ್ಯ ತುಂಬಿದ ಹೃದಯಾಕಾಶದ ವಿಶಾಲ ಮಮತಾಮೂರ್ತಿ. ದ್ರೋಣರ ನಿಶ್ಕಳಂಕ ವಿದ್ಯಾದಾನ, ಕರ್ಣನ ಕಠೋರ ಜೀವನ, ಇವೇ ಮೊದಲಾದವುಗಳ ಚಿತ್ರ ಒಂದಾಂದ ಮೇಲೊಂದು ತೆರೆತೆರೆಯಾಗಿ ಬಂದುವೆಂದರೆ ಆಗ ಭೀಮಸೇನ! ನನಗೆ ಈ ರಾಜ್ಯ ಖಂಡಿತ ಬೇಡಪ್ಪ! ನಾನು ಈ ರಾಜ್ಯದಲ್ಲಿ ಖಂಡಿತ ಇರಲಾರೆ ನನ್ನನ್ನು ಬಿಟ್ಟು ಬಿಡು'' ಎಂದು ಮುಂತಾಗಿ ಹಲುಬಿ ಹಾತೊರೆಯುತ್ತಿದ್ದನು, ಬಿಕ್ಕಿ ಬಿಕ್ಕಿ ಅಳುತ್ತಿದ್ದನು.

ಕೃಷ್ಣ ಏನೇ ಹೇಳಿದರೂ ಧರ್ಮರಾಜನ ಮನಸ್ಸಿನ ಮೇಲೆ ಪರಿಣಾಮಕಾರಿ ಆಗಲಿಲ್ಲ. ನೀವೆಲ್ಲರೂ ನನ್ನ ಮೇಲಿನ ಅಭಿಮಾನದಿಂದ ನನ್ನ ಅಪರಾಧವನ್ನು ಪುಣ್ಯಕಾರ್ಯವೆಂದು ಹೇಳುತ್ತಾ ಹೀಗೆ ನನ್ನನ್ನು ಹನ್ನೊಂದು ಅಕ್ಷೋಹಿಣಿ ಸೈನ್ಯವನ್ನು ನಾಶಪಡಿಸಿದ ಕೊಲೆಪಾತಕನನ್ನು

ಸಿಂಹಾಸನದ ಮೇಲೆ ಕುಡಿಸಿ ಹೊಗಳುವುದು ನನಗೆ ಬಹಳ ದುಃಖ ಆಗುತ್ತದೆ ಅದ್ದರಿಂದ ನನಗೆ ಕಿಂಚಿತ್ತೂ ಸಂತೋಷವಾಗುತ್ತಿಲ್ಲ. ಎಂದು ದುಃಖದಿಂದ ಆರ್ತನಾಗಿ ಅಳುವ ಅರಸನನ್ನು ಕುರಿತು ಕೃಷ್ಣನು''ಧರ್ಮರಾಜ! ನಾವೆಲ್ಲರೂ ನಿನ್ನ ಮೇಲಿನ ಅಭಿಮಾನದಿಂದ ನಿನ್ನನ್ನು ನಿರಪರಾಧಿಯೆಂದು ಗೌರವಿಸುತ್ತೇವೆ ಎಂಬ ಸಂಶಯ ನಿನಗಿದ್ದರೆ ಈಗ ಭೀಷ್ಮನು ಲೌಕಿಕವಾರ್ತೆಯ ಸಕಲ ಮೋಹಗಳನ್ನು ತೊರೆದು ಪರಲೋಕಕ್ಕೆ ಹೊರಡಲು ಸಿದ್ದನಾಗಿ ಉತ್ತರಾಯಣ ಪುಣ್ಯಕಾಲಕ್ಕಾಗಿ ಕಾಯುತ್ತಿದ್ದಾನೆ.

ಮನಸ್ಸಿನ ಸಕಲ ವ್ಯಾಮೊಹಗಳು ಒಟ್ಟಿಗಿರಬೇಕೆಂಬ ಭಾವದಿಂದ ಮುಳ್ಳಿನ ತುದಿಗೆ ಬೆನ್ನು ಕೊಟ್ಟು ಮನಸ್ಸನ್ನು ಮತ್ತೆಲ್ಲೂ ಹೋಗಗೂಡದಂತೆ ನಿಗ್ರಹಿಸಿ ಮಲಗಿದ್ದಾನೆ. ಅವನಿಗೀಗ ಮೋಹದ ಗೊಂದಲವಿಲ್ಲ. ಪಕ್ಷಪಾತದ ಪರದಾಟವಿಲ್ಲ.

ಭೀಷ್ಮನ ಅಂತ್ಯದುಸುರಿನಲ್ಲಿ ಹೊರಡುವ ಧರ್ಮಸಾರವನ್ನು ತಿಳಿದು ಆದರಿಂದಲಾದರೂ ನಿನ್ನ ಮನಸ್ಸಿನಲ್ಲಿ ತುಂಬಿರುವ ಪರಹಿಂಸೆಯ ಪರಿತಾಪವನ್ನು ಪರಿಹಾರಮಾಡಿಕೊಂಡು ಪವಿತ್ರಭಾವದಿಂದ ರಾಜ್ಯವಾಳು'' ಎಂದು ಹೇಳಿದನು.

ಶ್ರೀಕೃಷ್ಣನಿಗೆ ಧರ್ಮರಾಜನ ಮನಸ್ಸನ್ನುಸ್ಥಿರಗೊಳಿಸುವುದು ದೊಡ್ಡ ಮಾತಾಗಿರಲಿಲ್ಲ. ಆದರೆ ಮಾಹಾಜ್ಞಾನ ನಿಧಿಯಾದ ಭೀಷ್ಮನು ಮರಣದ ತೆಕ್ಕೆಯಲ್ಲಿ ಸಿಕ್ಕುಬಿದ್ದಾಗ ಅವನ ಹೃದಯ ಕಲಶದಿಂದ ಹೊರಹೊಮ್ಮಿ ಬರುವ ಸುಜ್ಞಾನ ಸುಗಂಧ ಸರ್ವರೂ ಅನುಭವಿಸಿ ಆದರ್ಶಧರ್ಮ ಲೋಕದಲ್ಲಿ ನೆಲೆ ನಿಲ್ಲ ಬೆಕೆಂದು ಸಕಲ ಋಷಿಮುನಿಗಳು ಸಮಸ್ತ ರಾಜರುಗಳು ಅಸಂಖ್ಯಾತ ತತ್ವ್ತಶೀಲ

ರೊಡಗುಡಿ ಪಾಂಡವರನ್ನು ಕರೆದು ಕೊಂಡು ಭೀಷ್ಮನ ಬಳಿಗೆ ಹೊರಟನು.

## ಶ್ರೀಕೃಷ್ಣ ಭೀಷ್ಮನಿಂದ ಹೇಳಿಸಿದ ಧರ್ಮನಿರ್ಣಯ

ಶ್ರೀಕೃಷ್ಣನು ಸಮಸ್ತ ಸಜ್ಜನರೊಂದಿಗೆ ಭೀಷ್ಮನ ಬಳಿಗೆ ಬಂದನು. ಭೀಷ್ಮನು ಭಕ್ತ ಸಮೂಹದೊಡನೆ ಬಂದ ಶ್ರೀಕೃಷ್ಣನ ದರ್ಶನಾನಂದದಿಂದ ಹಿಗ್ಗಿದ್ದನು. ಏಳಲು ಆಗದಿದ್ದರೂ ಮಲಗಿ ಪರಮಾದರದಲ್ಲಿ ಅನುಸಂಧಾನ ಪೂರ್ವಕಾವಾಗಿ ಮಾನಸಪೂಜೆಯಿಂದ ಸ್ತುತಿಗೈದು ಸಂತೋಷಪಟ್ಟನು. ಧರ್ಮರಾಯನಿಗೆ ಮನಸ್ಸಿನಲ್ಲಿ ಅಳುಕು ಆತಂಕ ತುಂಬಿಹೋಗಿತ್ತು. ಪಿತಾಮಹನು ನಮ್ಮನ್ನು ಎತ್ತಿ ಆಡಿಸಿ ಸಾಕಿ ಸಲಹಿದ್ದಕ್ಕೆ ತಮ್ಮಿಂದ ಎಂಥ ಉಡುಗೊರೆ ಅವನಿಗೆ ದೊರಕಿತ್ತಲ್ಲ: ಎಂದು ಸಹಿಸಲಾರದ ದುಃಖದಿಂದ ಹಿಂದೆ ಹಿಂದೆ ಹೋಗಿ ಮುಖ ಮರೆಸಿಕೊಳ್ಳುತ್ತಿದ್ದನು. ಕೃತಘ್ನರಾದ ಪಾಪಿಗಳ ಮುಖ ಪುಣ್ಯಶೀಲನಾದ ಭೀಷ್ಮ ನೋಡಬಾರದೆಂದು ವಿಲಾಪ ಮಾಡುತ್ತಾ ರೋಧಿಸುಹತ್ತಿದನು.ಆಗ ಕೃಷ್ಣನು ಭೀಷ್ಮನ

ಬಳಿ ಬಂದು ಭೀಷ್ಮಾ! ಧರ್ಮರಾಜನು ನಿನ್ನ ಬಳಿಗೆ ಬಂದು ನಿನ್ನ ದರ್ಶನ ಹಿತೋಪದೇಶಗಳಿಂದ ಮನೋವ್ಯಥೆ ಕಳೆದುಕೊಳ್ಳಬೇಕೆಂದು ಬಂದನು. ಈಗ ನಿನ್ನನ್ನು ನೋಡಲಾರದವನಾಗಿ ಅತೀವ ದುಃಖದಿಂದ ಬಳಿಗೆ ಬಾರದೆ ದೂರಸರಿದು ಸಂಕಟಪಡುತ್ತಿದ್ದಾನೆ. ಅವನ ದುಃಖವನ್ನುನೀನೇ ಪರಿಹಾರಮಾಡಬೇಕು''ಎಂದು ಹೇಳಿದನು.

ಭೀಷ್ಮನಿಗೆ ಧರ್ಮರಾಯನ ಹೃದಯದಲ್ಲಿ ನಡೆಯುತ್ತಿರುವ ಘರ್ಷಣೆ ತಿಳಿಯಿತು. ಇದನ್ನು ಶ್ರೀಕೃಷ್ಣನೇ ಅವನಲ್ಲಿ ನಿಂತು ನಡೆಸುತ್ತಿದ್ದಾನೆ. ನನಗೆ ಸ್ವಾಮಿಯೇ ಕರುಣಿಸಿರುವ ಜ್ಞಾನಪ್ರಕಾಶವನ್ನು ಜಗತ್ತಿನಲ್ಲಿ ಬೆಳಗಿಸುವ ಅನುಗ್ರಹ ದಿಂದ ಅಂತ್ಯಕಾಲದಲ್ಲಿ ಆದರದಿಂದ ಬಂದು ಲೋಕಕ್ಕೂ ನನಗೂ ಶುಭೋದಯವನ್ನುಂಟು ಮಾಡುತ್ತಾನೆಂಬುದನ್ನು ದಿವ್ಯದೃಷ್ಟಿಯಿಂದ ಭೀಷ್ಮನು ತಿಳಿದು ಧರ್ಮರಾಜ! ನನ್ನನ್ನು ಕೊಲ್ಲಲು ನೀನಾರು? ನಿನ್ನನ್ನು ದೂಶಿಸಲು ನಾನಾರು? ಶ್ರೀಕೃಷ್ಣನಿಗಿಂತಲು ನೀನೇ ದೊಡ್ಡವನೆಂಬ ಅಹಂಭಾವ ನಿನಗೂ ಒದಗಿರುವುದು ದುಃಖದ ಸಂಗತಿ. ನಾವೆಲ್ಲರೂ ಸ್ವಾಮಿಯ ಆಧೀನರು ಕಾಯುವುದು, ಕೊಲ್ಲುವುದು. ಸ್ವಾಮಿ ನಿನಗೆ ನನ್ನನ್ನು ಕೊಲ್ಲುವಷ್ಟು ಸ್ವತಂತ್ರ್ಯವಿದೆ ಎಂಬ ಅಜ್ಞಾನ ನಿನಗೆ ಶ್ರೀಕೃಷ್ಣ ವೇದವ್ಯಾಸ, ಪರಶುರಾಮ ಮೂರು ರೂಪಗಳಿಂದ ನಿನ್ನ ಸಮೀಪದಲ್ಲಿರುವಾಗಲೂ ಲೇಪವಾಗಿರುವುದು ನಿನ್ನ ಶಂಕಾಭೂತದ ಪೀಡೆಯಿಂದ ಎಂದು ಹೇಳಿ ಶ್ರೀ ಕೃಷ್ಣನ ಮುಖಚಂದ್ರಿಕೆಯ ಸವಿದರ್ಶನ ಆನಂದವನ್ನು ಅನುಭವಿಸುತ್ತಿದ್ದಾಗ ಕೃಷ್ಣನು ''ಭೀಷ್ಮ! ಧರ್ಮರಾಯನು ಯುದ್ಧ ನಡೆದಿದ್ದು ತನ್ನ ದಶೆಯಿಂದ ಯುದ್ಧ ನಡೆಯಲಿಕ್ಕೆ ಕಾರಣವನ್ನು ಹೂದಿದವನೇ ನಾನು. ನನ್ನಿಂದಲೇ ಇಷ್ಟು ಜನರ ಮರಣವೂ ಉಂಟಾಯಿತೆಂದು ಸದಾ ಸಂಕಟದಿಂದ ತೊಳಲಾಡುತ್ತಲಿದ್ದಾನೆ. ನಾವು ಎಷ್ಟು ಹೇಳಿದರೂ ಅವನ ಮೇಲಿನ ಅಭಿಮಾನದಿಂದ ಸಮಾಧಾನಪಡಿಸುತ್ತಿದ್ದೀರೆಂದು ಅನುಮಾನ ಪಡುತ್ತಿದ್ದಾನೆ. ಆದ್ದರಿಂದ ನೀನು ಇಹಲೋಕದ ಸಕಲ ವ್ಯಾಮೋಹ ವ್ಯಾಕುಲಾದಿಗಳನ್ನು ತ್ಯಜಿಸಿ ನಿರ್ಲಿಪ್ತನಾಗಿ ಪರಗತಿಗೆ ಹೊರಟವನಾದ್ದರಿಂದ ನೀನೇ ಅವನಿಗೆ ಸ್ವಚ್ಛ ಜ್ಞಾನದ ಮಾತುಗಳನ್ನು ಹೇಳಿ ಅವನನ್ನು ಪೀಡಿಸುತ್ತಿರುವ ಸಂದೇಹ ಸಂಶಯಾದಿಗಳೆಲ್ಲವನ್ನು ಹೋಗಲಾಡಿಸು''ಎಂದು ಹೇಳಿದನು. ಆಗ ಭೀಷ್ಮನು ''ಸ್ವಾಮಿ! ನೀನು ಸರ್ವೋತ್ತಮ. ಸರ್ವಜ್ಞ, ಸರ್ವಶಕ್ತ, ಸರ್ವಾಂತರ್ಯಾಮಿ ನೀನು ಮಾಡಲಾಗದ ಸಾದನೆಯನ್ನು ಈ ಅಲ್ಪ ಮಾಡಲಾದೀತೇ? ನನ್ನನ್ನು ಶೋಧನೆ ಮಾಡಬೇಡ ಸ್ವಾಮೀ'' ಎಂದನು.

ಭೀಷ್ಮಾ! ನಿನ್ನಿಂದ ಪರಿಶುದ್ಧವಾದ ಧರ್ಮ ನಿರ್ಣಯ ಹೊರಹೊಮ್ಮಿ ಬಂದು ಸಕಲ ದೇವತೆಗಳು ಋಷಿಮುನಿಗಳು, ರಾಜರುಗಳು, ರಾಜರ್ಷಿಗಳು ಶ್ರಮಾಣಮಾಡಿ ಆನಂದಪಡುವಂತೆ ನಾನು ನಿನಗೆ ದಿವ್ಯಜ್ಞಾನವನ್ನು ಕೊಟ್ಟು ನುಡಿಸುತ್ತೇನೆ ಅನೇಕ ನಿಗೂಡವಾದ ಧರ್ಮಸಾಕ್ಷ್ಮಗಳು ಮತ್ತು ನಿನ್ನಲ್ಲಿ ತುಂಬಿರುವ ಅಮೋಘ ಶಾಸ್ತ್ರಜ್ಞಾನವೆಲ್ಲವನ್ನೂ ಸಚ್ಛಾಸ್ತ್ರ

ಸಂಪನ್ನರನೇಕರ ಸಮ್ಮುಖದಲ್ಲಿ ಅರ್ಪಣೆಮಾಡಿ ಸಾರ್ಥಕಹೊಂದು ನಿನ್ನ ಕೀರ್ತಿ ಅಮರವಾಗಬೇಕೆಂಬ ಅಂತಃಕರುಣದಿಂದ ನಿನ್ನಂದ ನಾನೇ ನುಡಿಸುತ್ತೇನೆ''ಎಂದು ಭಾಗೀರಥೀಪುತ್ರನಿಗೆ ಹೇಳಿ ಅವನ ದೇಹಾದ್ಯಂತವನ್ನು ತನ್ನ ಅಮೃತಹಸ್ತದಿಂದ ಸವರಿ ಭೀಷ್ಮನಿಗೆ ದಿವ್ಯಶಕ್ತಿಯನ್ನು ಕೊಟ್ಟ ಸ್ವಾಮಿ ಸಮಸ್ತ ಸಜ್ಜನ ವೃಂದದ ಮಧ್ಯದಲ್ಲಿ ತಾನು ಶ್ರವಣ ಮಾಡುವನಂತೆ ಕುಳಿತನು.

ಆಗ ಭೀಷ್ಮನು ಶ್ರೀಕೃಷ್ಣನಿಗೆ ಮಾನಸ ಪೂಜೆಯನ್ನು ಸಲ್ಲಿಸಿ ಸಕಲ ಮುನಿವೃಂದಕ್ಕು ಅನುಸಂಧಾನಪೂರ್ವಕ ವಂದಿಸಿ ನಂತರ ಧರ್ಮರಾಜನನ್ನು ಕುರಿತು''ಧರ್ಮಸೂನೂ! ಅನಾದಿಯೂ ಅಪೌರುಷೇಯವೂ ಆದ ವೇದಾರ್ಥಗಳ ಸಾರವನ್ನು ಆವರವರ ಮತಾನುಸಾರವಾಗಿ ಅಪಾರ್ಥ ಮಾಡಿ ಅಪಪ್ರಚಾರದಿಂದ ಧರ್ಮವನ್ನು ಮನಬಂದಂತೆ ಅವಲಂಬಿಸದವರು ಸ್ವಾಮಿಯ ವಿರೋಧಿಗಳಾಗಿ ಅಂಧಂತಮಸ್ಸಿಗೆ ಸೇರುತ್ತಾರೆ. ಅಂಥ ಧರ್ಮವಿರೋಧಿಗಳನ್ನು ಉಳಿಸದೆ ಕೊಂದವರು ಧರ್ಮರಕ್ಷಕರೆನಿಸಿ ಭಗವತ್ಕಾರ್ಯ ಸಾಧಕರಾಗಿ ಉತ್ತಮಗತಿ ಹೊಂದುತ್ತಾರೆ ಇಹಲೋಕದಲ್ಲಿ ಅವರು ಸತ್ಕೀರ್ತಿಹೊಂದುತ್ತಾರೆ.

ಭಗವದ್ಧರ್ಮಗಳನ್ನು ಸರಿಯಾದ ರೀತಿಯಲ್ಲಿ ಆರಿತು ದೇಶದ ಎಲ್ಲೆಡೆಗಳಲ್ಲೂ ಯರೊಬ್ಬರೂ ಅನ್ಯಥಾ ಜ್ಞಾನದಿಂದ ಅನ್ಯದೇವತೆಗಳನ್ನು ನಾರಾಯಣನಿಗೆ ಸಮಾನತ್ವವನ್ನು ಕಲ್ಪಿಸಿ ಶ್ರೀ ಹರಿ ಸರ್ವೋತ್ತಮತ್ವ ಜ್ಞಾನವನ್ನು ಶಿಥಿಲಗೊಳಿಸಿ ಅನ್ಯದೇವರಿಗೆ ಪ್ರಧಾನತ್ವವನ್ನು ಕೊಡದಂತೆ ನಿಶ್ಪಕ್ಷಪಾತದಿಂದ ಎಲ್ಲರಿಗೂ ಸ್ವಚ್ಛ ವಾದ ಶುದ್ಧವಾದ ಜ್ಞಾನೋಪದೇಶವನ್ನು ಕೊಟ್ಟು ಅವರನ್ನು ಉನ್ನತರನ್ನಾಗಿ ಮಾಡಬೇಕು.

ವಿಪರೀತ ಜ್ಞಾನದಿಂದ ಶ್ರೀ ಹರಿಯ ಚರಿತ್ರೆಗಳಲ್ಲಿ ಅವನ ಲೀಲೆಗಳಲ್ಲಿ ಸಂದೇಹ ಸಂಶಯಾದಿಗಳನ್ನು ಹೊಂದಿ ಅನಾದರಣೆ ತೋರಿಸುವ ಮಿಥ್ಯಾವಾದಿಗಳ ಮುಖದರ್ಶನವೂ ಮಹಾಪಾಪಕರವೆಂದು ತಿಳಿಯಬೇಕು. ವೈಷ್ಣವ ಧರ್ಮವನ್ನು ಯಾರೂ ಸ್ವಪ್ರತಿಷ್ಠೆಯಿಂದ ಸ್ಥಾಪನೆ ಮಾಡಲಿಲ್ಲ. ಆ ಧರ್ಮ ಪುರಾಣಪುರುಷನ ಮುಖ ಪದ್ಮದಿಂದಲೇ ಹೊರಹೊಮ್ಮಿ ಬಂದ ತತ್ತ್ವಸಾರದ ಸುಖ ನಿದಿ ಎಂದು ತಿಳಿದು ಶ್ರದ್ಧೆ ಯಿಂದ ಆವಲಂಬಿಸಬೇಕು.

ಧರ್ಮರಾಜಾ! ಮೂಲರೂಪಕ್ಕೆ ಅವತಾರರೂಪಕ್ಕೂ, ಅಬೇಧವನ್ನು ಕಲ್ಪಿಸಿ ಸ್ವಾಮಿಯ ಮಹಾನ್ಮಹಿಮೆಗಳನ್ನು ಅವನಿಂದ ಮೂಡಿಬರುವ ವಾಕ್ಸಾರವನ್ನು ಸ್ವಚ್ಛಮನಸ್ಸಿನಿಂದ ಅರಿತವರು ಸಂಸಾರ ಬಂಧನದಿಂದ ಮುಕ್ತವಾಗಿ ಶಾಶ್ವತ ಸುಖ ಹೊಂದುವರು. ಧರ್ಮರಾಜಾ! ನಿನಗೆ ಮೂಲನಾರಾಯಣ ಮೂರುರೂಪಗಳಿಂದ ಸದಾ ನಿನ್ನ ಬಳಿ ಇದ್ದು ನಿನಗೆ ತತ್ತ್ವಾಮೃತವನ್ನು ಪಾನಮಾಡಿಸುತ್ತಿದ್ದಾಗ್ಯೂ ನಿನ್ನ ಸಂದೇಹ ಶೋಕಾದಿಗಳು ಪರಿಹಾರವಾಗಲಿಲ್ಲವೆಂದ ಮೇಲೆ ಸಾಮಾನ್ಯರ ಮಾತಿನಲ್ಲಿ ನಿನಗೆ ಮಹತ್ವ ಮನಗಾಣುವುದಿಲ್ಲವೆಂದು ಬೇರೆ ಹೇಳಬೇಕಾಗಿಯೇ ಇಲ್ಲ. ಆದರೂ ಸಾಕ್ಷಾತಾಗಿ ಶ್ರೀಕೃಷ್ಣನೇ ಪ್ರತ್ಯಕ್ಷವಾಗಿ ನಿನಗೆ ಅನುಗ್ರಹ ಮಾಡುವ

ಕರುಣದಿಂದ ನನ್ನಿಂದ ನುಡಿಸುತ್ತಿರುವುದರಿಂದ ನಿನಗೂ ಲೋಕಕ್ಕೂ ನನ್ನಿಂದ ಮೂಡಿಬರುತ್ತಿರುವ ಧರ್ಮರಹಸ್ಯಗಳು ಮನಸ್ಸಿನ ಮಮಕಾರವನ್ನು ಕಳೆದು ಕಲ್ಯಾಣ ಉಂಟುಮಾಡುತ್ತದೆಂದು ತಿಳಿದು ಸ್ವಾಮಿಯ ಇಚ್ಛಾನುಸಾರ ಹೇಳುತ್ತಿದ್ದೇನೆ.

ದೇಹಿಯು ಯಾವ ಕಾರ್ಯಮಾಡಿದರೂ ಅದು ಭಗವಂತನು ಸಂತೋಷದಿಂದ ಸ್ವೀಕಾರಮಾಡಲಿ ಎಂಬ ಭಾವದಿಂದ ಮಾಡಿ ಅದನ್ನು ಮುಖ್ಯಪ್ರಾಣನ ಅಂತರ್ಗತನಾದ ಸ್ವಾಮಿಗೆ ಅರ್ಪಣ ಮಾಡಿದಾಗ ಅವನ ಪ್ರತಿಹೆಜ್ಜೆಯಲ್ಲಿ ಪ್ರತಿ ಉಸುರಿನಲ್ಲೂ ಸುಜ್ಞಾನದ ಸುಗಂಧ ತುಂಬಿ ಆಯಸ್ಸು ಆದರ್ಶಮಯವಾಗಿ ಸಾರ್ಥಕ ಹೊಂದುತ್ತದೆ.

ರಾಜಾ! ಅವರವರ ಧರ್ಮವೇ ಅವರಿಗೆ ತಪಸ್ಸೆಂದು ತಿಳಿಯಬೇಕು . ರಾಜರಲ್ಲಿ ವಿಷ್ಣು ವಿಶೇಷ ರೀತಿಯಿಂದ ಆವೇಶವಾಗಿರುವುದರಿಂದ ರಾಜಧರ್ಮಗಳಿಗೆ ಕಿಂಚಿತ್ತು ಕುಂದುಬರದಂತೆ ಎಚ್ಚರದಿಂದಿರಬೇಕು ಅಧರ್ಮನಾಶ-ಧರ್ಮಸಂರಕ್ಷಣೆಗಾಗಿ ದುಷ್ಟಶಿಕ್ಷಣದ ಕಾರ್ಯ ಮಾಡಿ ಭಗವಂತನಸೇವಾ ಮನೋಭಾವದಿಂದ ಅರ್ಪಣ ಮಾಡಿದವನೇ ಮಹಾತಪಸ್ವಿ ಅವನೇ ರಾಜರ್ಷಿ ಎನಿಸುತ್ತಾನೆ. ಸಿಂಹಾಸನ ಧರ್ಮದ ವೇದಿಕೆ ಎಂದು ತಿಳಿದು ಧರಣೀ ದೇವಿಯನ್ನು ಕಾಪಾಡದೆ ಮುನಿವೃತ್ತಿ ಅವಲಂಬಿಸುತ್ತೇನೆ. ಕಾಡಿಗೆ ಹೋಗುತ್ತೇನೆ ಎಂದರೆ ಅದಕ್ಕಿಂತಲೂ ದೊಡ್ಡ ಪಾಪಕರ್ಮ ಇಲ್ಲವೇ ಇಲ್ಲ. ಅದು ಕಪಟ ವೃತ್ತಿ ಎನಿಸುತ್ತದೆ.

ದೇಹ ಪುಷ್ಪ-ವಾಕ್ಪುಷ್ಪ-ಮನೋಪುಷ್ಪಗಳು ವೈಷ್ಣವ ಜ್ಞಾನವೆಂಬ ಸುಗಂಧಯುಕ್ತವಾಗಿ ಭಗವಂತನ ಪಾದಕಮಲಗಳಿಗೆ ಅರ್ಪಣ ಮಾಡುವಂಥ ಪಾವಿತ್ರ್ಯತೆಯನ್ನು ಹೊಂದಿರಬೇಕು.

ತಂತಮ್ಮ ಧರ್ಮಗಳ ರಹಸ್ಯವನ್ನು ಶ್ರೇಷ್ಠರಾದ ಗುರುಗಳ ಮುಖೇನ ಅರಿತು ಅನುಸಾಂಧನವಿಟ್ಟು ಕರ್ಮಮಾಡಿದರೆ ಅದರಲ್ಲಿ ಸಂದೇಹಕ್ಕೆ ಆಸ್ಪದವಿಲ್ಲದೆ ನಿಶ್ಕಾಮಕರ್ಮವಾಗಿ ಸ್ವಾಮಿ ಸ್ವೀಕಾರಮಾಡುತ್ತಾನೆ.

ಭಗವದ್ವಾಕ್ಯದಲ್ಲಿ ಸಂದೇಹ ಅಪನಂಬಿಕೆ ಉಳ್ಳವರಿಗೆ ನರಕಾದಿ ಲೋಕಗಳು ಪ್ರಾಪ್ತವಾಗಿ ಇಹಪರಗಳೆರಡರಲ್ಲೂ ದುಃಖ ಭಾಗಿಗಳಾಗುತ್ತಾರೆ. ಧರ್ಮಸಿದ್ಧಾಂತದ ರಹಸ್ಯವನ್ನು ಅರಿಯದೆ ಯಾವಕಾರ್ಯವನ್ನೂ ಮಾಡಬಾರದು ಅನುಸಂಧಾನದಿಂದ ಅದರ ಪೂರ್ವಕ ಕರ್ಮಮಾಡಿ ಅದರ ಫಲಾಫಲಗಳ ಅಪೇಕ್ಷೆ ಇಲ್ಲದೆ ಕರ್ಮ ಮಾಡಿದರೆ ಸಮಸ್ತ ಕರ್ಮಗಳು ದೇವರಪೂಜೆಯಾಗಿ ಮನಸ್ಸಿನ ಶಂಕಾತಂಕಗಳ ಬಾಧೆ ತಪ್ಪುತ್ತದೆ. ಸ್ವಾಮಿಯ ಸ್ವಾತಂತ್ರತೆ ಸರ್ವಪ್ರಾಧಾನ್ಯತೆ ಸರ್ವವ್ಯಾಪ್ತತೆಗಳನ್ನೆಲ್ಲಾ ಜ್ಞಾನಪೂರ್ವಕವಾಗಿ ಉಪದೇಶಗೊಂಡಾಗ ನಡೆದಿದ್ದು. ನಡೆಯಬೇಕಾದ್ದು ನಡೆಯುತ್ತಿರುವುದೆಲ್ಲವು ಶ್ರೀಹರಿಯ ಇಚ್ಚೆಯಿಂದಲೇ ಅವನೊಬ್ಬನೇ ಸರ್ವಸ್ವತಂತ್ರ ರಮಾಬ್ರಹ್ಮಾದಿದೇವತೆಗಳೂ ಅವನ ಆಧೀನರಾಗಿದ್ದಾರೆ ಎಂಬ ಶುದ್ಧವಾದ ಜ್ಞಾನ ಲಬಿಸಿ ಮನದಲ್ಲಿ ತುಂಬಿರುವ ಶೋಕ ಸಂಶಯದಿಗಳೆಲ್ಲವು

ನಾಶಹೊಂದುತ್ತವೆ.

ಮಹಾವಿಷ್ಣು ಒಬ್ಬನೇ ಪ್ರಧಾನಪೂಜೆಗೆ ಅರ್ಹನಾಗಿದ್ದಾನೆ. ಸಕಲದೇವತೆಗಳನ್ನು ಅವನ ಪರಿವಾರವೆಂದು ತಾರತಮ್ಯಜ್ಞಾನವನ್ನು ಪಡೆದು ಪೂಜಿಸಿದಾಗ ಎಲ್ಲಾ ದೇವತೆಗಳು ಸಂತೋಷದಿಂದ ಸ್ವೀಕಾರಮಾಡಿ ದಿವ್ಯ ಜ್ಞಾನವನ್ನು ಕೊಟ್ಟು ಕಾಪಾಡುತ್ತಾರೆ.

ಗ್ರಹಸ್ಥಾಶ್ರಮದಲ್ಲಿದ್ದರೂ ಸನ್ಯಾಸಾಶ್ರಮದ ಅನುಸಂಧಾನದಿಂದ ನಡೆದರೆ ಅವನೂ ದೊಡ್ಡ ತಪಸ್ವಿ ಎಂದೇ ಭಾವಿಸಬೇಕು. ಮಡದಿ-ಮನೆ-ಮಕ್ಕಳು ಮೊದಲಾದ ಸಕಲಸಂಪತ್ತುಗಳು ಶ್ರೀಹರಿಕೊಟ್ಟ ಪ್ರಸಾದವೆಂಬ ಭಾವದಿಂದ ಸ್ವಾಮಿಗೆ ಕೃತಜ್ಞರಾಗಿ ನಡೆಯಬೇಕು. ಯಾವಸುಖವನ್ನು ಅನುಭವಿಸುವಾಗಲೂ ಪರಮಾತ್ಮನ ಪಾದಮೂಲದಲ್ಲಿ ಮನೋಪುಷ್ಪವನ್ನಿಟ್ಟು ನಿರ್ಲಿಪ್ತಭಾವನೆಯಿಂದ ಇರಬೇಕು. ಅವನ ಇಚ್ಛೆಯಂತೆ ಸುಖ ದುಃಖಗಳು ನಮ್ಮ ಬಳಿ ಬರುತ್ತವೆ. ಹೋಗುತ್ತವೆ . ಇವೆಲ್ಲವೂ ಅಶಾಶ್ವತ ಇವೆಲ್ಲಕ್ಕೂ ಪ್ರಭುವಾದ ನಾರಾಯಣನೊಬ್ಬನೇ ಶಾಶ್ವತ ಎಂಬ ದೃಢ ಮನಸ್ಸಿನಿಂದ ಚಿತ್ತವನ್ನು ಎತ್ತಲೂ ಬಿಡದಂತೆ ಬಂದಿಸಿದವನೇ ಸಾಧನಾ ಶೂರನಾಗಿ ಮಮತೆ-ಮೋಹಾದಿಗಳೆಂಬ ಶತ್ರುಗಳನ್ನೂ ನಿಗ್ರಹಮಾಡಬಲ್ಲವನಾಗುತ್ತಾನೆ.

ಶ್ರೀಹರಿಯ ನಿಶ್ಚಯ ಜ್ಞಾನವನ್ನು ಬಲ್ಲಮಹಾತ್ಮರನ್ನೂ ಯಾವಕಾರಣದಿಂದಲೂ ದ್ವೇಶಮಾಡಬಾರದು. ಸಕಲಪ್ರಯತ್ನಗಳಿಂದಲೂ ಅವರ ವಿಶ್ವಾಸವನ್ನು ಸಂಪಾದನೆಮಾಡಿ ಶ್ರೀಹರಿಯ ತತ್ತ್ವಜ್ಞಾನದ ಸಕಲ ಸಂದೇಹಾದಿಗಳನ್ನು ನಿವಾರಿಸಿಕೊಳ್ಳಲಿಕ್ಕಾಗಿ ಅವರ ಸಂಗಡ ಧರ್ಮಜಿಜ್ಞಾಸೆಗಳನ್ನೂ ಮಾಡಿ ಶುದ್ದವಾದ ಜ್ಞಾನಮೃತವನ್ನು ಹೊಂದಿ ಜನ್ಮವನ್ನು ಪುನೀತಗಳಿಸಿಕೊಳ್ಳಬೇಕು. ಧರ್ಮಹೀನ ಸಂಗ ಆದಷ್ಟು ಬಿಡಿಸಿಕೊಂಡು ದೂರವಾಗಿರಬೇಕು. ತಾನು ಆಚರಿಸುವ ಧರ್ಮ ಜ್ಞಾನಿಗಳಿಗೆ ಅಪ್ರಿಯವಾದ ಪಕ್ಷದಲ್ಲಿ ಅದನ್ನು ತ್ಯಜಿಸಿಬಿಡಬೇಕು. ಅಂದರೆ ಸಚಾಸ್ತ್ರ ಸಂಪನ್ನರಾದವರ ಉಪದೇಶದಂತೆ ನಡೆಯಬೇಕು. ತಾವು ಪಡೆದ ಭಗವಂತನ ತತ್ತ್ವಜ್ಞಾನವನ್ನು ಸಜ್ಜನರಿಗೆ ಅರ್ಪಣಮಾಡಿದರೆ ಅವರಂತರ್ಗತನಾದ ಶ್ರೀಶನು ಸ್ವೀಕಾರಮಾಡುತ್ತಾನೆ. ಭಗವದ್ಭಕ್ತರೊಡಗೂಡಿ ತೀರ್ಥಯಾತ್ರೆಯ ಸಾಧನೆ ಮಾಡಬೇಕು. ಮತ್ತೊಬ್ಬರಿಗೆ ಹಿಂಸೆ-ನೋವು ಉಂಟಾಗದಂತೆ ನಡೆಯುವುದೇ ಸಾತ್ವಿಕಕರ್ಮ. ಪತ್ನೀಪುತ್ರರನ್ನು ಗೃಹಸ್ಥನು ಧರ್ಮ-ಮಾರ್ಗದಲ್ಲಿ ನಡೆಯುವಂತೆ ಮಾರ್ಗದರ್ಶನ ನೀಡಿ ಪಿತೃದೇವತೆಗಳ ಅನುಗ್ರಹ ಪಡೆಯಬೇಕು.

ರಾಜರಾದವರು ದೇವಬ್ರಹ್ಮಣರನ್ನು ಮೋಸಮಾಡಿ ಅದರಿಂದ ಹಣ ಸಂಪಾದನೆಮಾಡಿದರೆ ದಾರಿದ್ರ್ಯ ದುಃಖ ಅವನನ್ನೂ ಎಡಬಿಡದೆ ಕಾಡಿಸುತ್ತದೆ. ಬ್ರಹ್ಮಣರಿಂದ ಕಪ್ಪವನ್ನು ವಸೂಲುಮಾಡಿ ಅವರ ಧರ್ಮಕಾರ್ಯಕ್ಕೆ ವಿಘ್ನಮಾಡಬಾರದು.

ವರ್ಣಹೀನರು ಸ್ವರೂಪಜ್ಞಾನದಿಂದ ತತ್ವಶಾಲಿ ಆಗಿದ್ದರೂ ಅವನಿಗೆ ನಮಸ್ಕಾರ ಮಾಡುವುದು. ಉಪದೇಶಗೊಳ್ಳುವುದು ಮೊದಲಾದವುಗಳು ನಿಷಿದ್ಧವಾಗಿದೆ. ಅವಮಾನಪಡಿಸದೆ ಊಟ ಉಪಚಾರಗಳಿಂದ ಗೌರವಿಸಬಹುದು.

ಬ್ರಹ್ಮಣ-ಕ್ಷತ್ರಿಯ-ವೈಶ್ಯ ಈ ಮೂರು ವರ್ಣದವರಿಗೂ ವೇದಾಧ್ಯಯನದ ಅದಿಕಾರವಿದೆ. ದೇವತಾಸ್ತ್ರೀಯರೂ-ಋಷಿರಮಣಿಯರೂ ವೇದದ ರಹಸ್ಯವನ್ನು ತಿಳಿದ ಜ್ಞಾನಿಗಳಾದ್ದರಿಂದ ಅವರು ವೇದಾಧ್ಯಯನ ಮಾಡಬಹುದು.

ಪತಿವೃತಾಸ್ತ್ರೀಯರು ತಮ್ಮ ಪತಿಗಳ ಅಪ್ಪಣೆ ಇಲ್ಲದೆ ಯಾವ ಧರ್ಮಕಾರ್ಯವನ್ನೂ ಮಾಡಬಾರದು. ಪತ್ಯಂತರ್ಗತ ಶ್ರೀಲಕ್ಷ್ಮಿ ನಾರಾಯಣರ ಪ್ರೀತ್ಯರ್ಥವಾಗಿಯೆ ಸಕಲಧರ್ಮಗಳನ್ನೂ ಅರ್ಪಣಮಾಡಿ ಅವರ ಧರ್ಮಕಾರ್ಯಕ್ಕೆ ಅನುಕೂಲರಾಗಿರಬೇಕು

ಯಾರು ನಾರಾಯಣಸ್ಮರಣಾಸಕ್ತರಾಗದೆ ಲೌಕಿಕ ಸುಖಗಳಲ್ಲೇ ಮಗ್ನರಾಗಿರುತ್ತಾರೊ ನಾರಾಯುಣನಿಗೆ ಸಮಾನ ದೇವತೆ ಇದ್ದಾರೆಂದು ತಿಳಿಯುತ್ತಾರೊ ಅವರು ತಮೋಯೋಗ್ಯರೆಂದು ತಿಳಿದು ನಿಷೇದಿಸಬೇಕು. ನಾರಾಯಣ ನಿರ್ಗುಣ-ನಿರಾಕಾರ ಅವನಿಗು ಸುಖದುಃಖಾದಿಗಳ ಲೇಪವಿದೆ ಎಂದು ಉಪದೇಶಮಾಡುತ್ತ. ಅವನ ಮೂಲರೂಪಃ ಅವತಾರರೂಪಕ್ಕೆ ಭೇಧವನ್ನು ಹೇಳುತ್ತ ಅಜ್ಞಾನವನ್ನು ಹೊಂದಿದ ಪಾಪಿಗಳ ಮುಖದರ್ಶನಷ ದೋಷವೆಂದು ತಿಳಿಯಬೇಕು. ಶುದ್ಧವಾದ ಜ್ಞಾನವನ್ನು ಹೊಂದಿ ನಿಸ್ವಾರ್ತ ನಿಶ್ಪಕ್ಷಪಾತದಿಂ ತತ್ತ್ವೋಪದೇಶ ಮಾಡುವವರ ಸಹವಾಸದಿಂದ ಸಕಲಪಾಪಗಳು ನಾಶಹೊಂದುತ್ತವೆ.

ಧರ್ಮರಾಯಾ ನೀನು ಅನೇಕ ಗುರುಹಿರಿಯರು ಬಂಧುಜನರನ್ನು ಕೊಂದಿದ್ದೇನೆಂದ ಈ ಯುದ್ಧಕ್ಕೆ ನಾನೇ ಕಾರಣನಾದೆನೆಂದೂ ಬಹಳ ವ್ಯಥೆ ಪಡುತ್ತಿರುವಿಯಲ್ಲವೇ? ಸರ್ವಸ್ವತಂ ಹರಿ ಒಬ್ಬನೇ ಎಂಬ ಜ್ಞಾನ ನಿನ್ನಲ್ಲಿ ದೃಢವಾಗಿ ನಿಲ್ಲುವವರೆಗೂ ವ್ಯಥೆ ತೊಲಗುವುದಿಲ್ಲ ಪರಮಾತ್ಮನೊಬ್ಬನೇ ಸರ್ವಕರ್ತ ಎಲ್ಲವೂ ಅವನ ಸಂಕಲ್ಪದಂತೆ ನಡೆದಿದೆ ಪಾಂಡವರಿಂ ಇಂಥ ಸಾಹಸ ಕಾರ್ಯವನ್ನು ಶ್ರೀಕೃಷ್ಣನೇ ಮಾಡಿಸಿ ಸಕಲ ಪಾಪಿಗಳ ವಿಧ್ವಂಸನ ಮಾಡಿದ್ದಾ ಎಂಬ ನಂಬಿಕೆಯಿಂದ ಮನಸ್ಸಿನ ಬ್ರಾಂತಿಯನ್ನು ಕಳೆ. ಶ್ರೀಹರಿ ವಾಕ್ಯವನ್ನು ಉಲ್ಲಂಘಿ ನಂಬದಿದ್ದರೆ ಮಹಾದೋಷ ಬರುತ್ತದೆ. ಭೀಮಸೇನ-ದ್ರೌಪದಿ ಇವರೆಲ್ಲರ ಮಾತನ ವೇದವಾಕ್ಯವೆಂದು ನಂಬಿ ಮನಸ್ಸಿನ ಮಾಲಿನ್ಯವನ್ನು ಕಿತ್ತೊಗೆ'' ಎಂದು ಧರ್ಮರಾಜ ಮನಸ್ಸಿಗೆ ನಾಟುವಂತೆ

ಬೀಷ್ಮನು ಶ್ರೀಕೃಷ್ಣನ ಪ್ರೇರಣಾನುಗ್ರಹದಿಂದ ಬಹಳ ರಸವತ್ತಾಗಿ ತಿಳಿಸಿದನು

ಧರ್ಮರಾಜನು ಪಿತಾಮಹನ ನಿಶ್ಕಲ್ಮಶ ವಾತ್ಸಲ್ಯದಿಂದ ತುಂಬಿದ ಧರ್ಮೋಪದೇಶದಿಂ ಶ್ರೀಕೃಷ್ಣನಿಗೆ ತಾನು ದ್ರೋಹಮಾಡಿಲ್ಲವೆಂದು ನಂಬಿದನು.

ಭೀಷ್ಮನು ಸ್ವಾಮಿ! ಆಜ್ಞಾನುಸಾರ ಧರ್ಮರಾಜನಿಗೆ ಧರ್ಮೋಪದೇಶ ಮಾಡಿ ಶ್ರೀಕೃಷ್ಣಾರ್ಪಣವೆಂದು ಶ್ರೀಕೃಷ್ಣನ ಸಂಕಲ್ಪದಂತೆ ವಸು ಲೋಕವನ್ನು ಸೇರಿದನು. ಶ್ರೀಕೃಷ್ಣನ ಸಂಕಲ್ಪವನ್ನು ಮೀರಿ ಮೋಕ್ಷಹೊಂದಲು ಭೀಷ್ಮರಂಥ ಮಹಾತ್ಮರಿಗೂ ಸಾಧ್ಯವಿಲ್ಲವಾಯಿತು'' ಎಂದು ತಿಳಿಸಿದರು.

## ಧರ್ಮಸಾಮ್ರಾಜ್ಯ

ಧರ್ಮರಾಜನು ಬೀಷ್ಮನಿಂದ ಧರ್ಮಶಾಸ್ತ್ರ ನಿರ್ಣಯದ ಸಾರವನ್ನು ಪಡೆದು ಮನೋದ್ದೌರ್ಬಲ್ಯವನ್ನು ನಿವಾರಿಸಿಕೊಂಡು ಶ್ರೀಕೃಷ್ಣನನ್ನು ಅನುಸರಿಸಿ ಹಸ್ತಿನಾವತಿಗೆ ಬಂದನು. ಧರ್ಮರಾಜನು ರಾಜಭೋಗದ ಸುಖಲೋಲುಪನಾಗದೆ ವೈರಾಗ್ಯಭಾವದಿಂದ ಹಸುತಿಂದು ವಿಸರ್ಜಿಸಿದ ಧಾನ್ಯವನ್ನು ಗೋಮೂತ್ರದಲ್ಲಿ ಪಕ್ವಮಾಡಿ ದೇಹಧಾರಣೆಗೆ ಎಷ್ಟುಬೇಕೋ ಅಷ್ಟನ್ನು ಮಾತ್ರ ಸೇವಿಸುತ್ತಿದ್ದನು.

ಧರ್ಮಕಾರ್ಯಕ್ಕಾಗಿಯೂ ಪ್ರಜಾಸಂರಕ್ಷಣೆಗಾಗಿಯೂ ಅಪಾರದ್ರವ್ಯವನ್ನು ನ್ಯಾಯ ರೀತಿಯಲ್ಲಿ ಸಂಗ್ರಹಿಸುತ್ತಿದ್ದನು.

ಈಗ ಧರ್ಮರಾಜನು ಸ್ವಾಮೀ ಆಜ್ಞೆಯಂತೆ ನಡೆದ ನನಗೆ ಪಾಪಲೇಪವಿಲ್ಲವೆಂದು ಶುದ್ಧ ಮನಸ್ಕನಾಗಿ ರಾಜ್ಯಭಾರಮಾಡುತ್ತಿದ್ದನು.

ದ್ರೌಪದೀದೇವಿಯನ್ನು ಧರ್ಮರಾಯನು ನಾದಿನಿಯ ಭಾವದಿಂದ ಬಹುಮಾನಿಸುತ್ತಿದ್ದನು. ನಕುಲಸಹದೇವರೂ ಅರ್ಜುನನೂ ದ್ರೌಪದಿಯನ್ನು ಅತ್ತಿಗೆ ಎಂಬ ಗೌರವದಿಂದ ಕಾಣುತ್ತಿದ್ದರು. ನಾರಾಯಣನು ದೈತ್ಯಸಂಹಾರ ಕಾರ್ಯಮುಗಿಸಿ ಕ್ಷೀರ ಸಾಗರದಲ್ಲಿ ಶ್ರೀಲಕ್ಷ್ಮೀ ದೇವಿಯರೊಂದಿಗೆ ವಿಹರಿಸುವಂತೆ ಭೀಮಸೇನನೂ ದ್ವಿರೂಪದಿಂದ ಶೋಭಿಸುವ ಭಾರತೀದೇವಿಯನ್ನು ಆನಂದ ಪಡಿಸುತ್ತದ್ದನು.

ಭೀಮಸೇನನು ವಸುದೇವನಿಂದ ಜನಿಸಿದ ರೋಹಿಣೀ ಪುತ್ರಿ ದೇವಿ ಎಂಬುವಳನ್ನು ಮತ್ತು ಇಪ್ಪತ್ತುಮಂದಿ ಶ್ರೇಷ್ಠರಾದ ರಾಜಪುತ್ರಿಯರನ್ನು ವಿವಾಹವಾಗಿದ್ದನು. ದಿಗಾಭಿಮಾನಿ ದೇವತಾಸ್ತ್ರೀಯರು. ಜಲಾಭಿಮಾನಿ ದೇವತಾ ಸ್ತ್ರೀಯರೊಂದಿಗೆ ಭೀಮಸೇನನು ಉತ್ತಮವಾದ ಭೋಗ ಸುಖವನ್ನು ಅನುಭವಿಸುತ್ತಿದ್ದನು. ದೇವತಗೆಗಳಿಗೂ ಅಲಭ್ಯವಾದ ಪುಣ್ಯ ಭೀಮಸೇನನು ಪಡೆದಿದ್ದನು.

ಭೀಮಸೇನನ ಧರ್ಮಪ್ರಚಾರದ ವ್ಯವಸ್ಥೆ ಬಹಳ ಶ್ರೇಷ್ಠ ರೀತಿಯಲ್ಲಿತ್ತು. ರಾಜ್ಯದ ಸುತ್ತಮುತ್ತಲಿನ ಗ್ರಾಮಗಳಲ್ಲೆಲ್ಲಾ ಐದ್ಯೆದು ಮಂದಿ ಸಚ್ಛಾಸ್ತ್ರ ಕೋವಿದರಾದ ಪಂಡಿತರನ್ನು ನೇಮಕಮಾಡಿ ಅವರಿಂದ ಸದ್ಧರ್ಮ ಸಿದ್ಧಾಂತದ ಪಾಠಪ್ರವಚನಾದಿಗಳು ನಡೆಯುವಂತೆ

ಏರ್ಪಡಿಸಿದ್ದನು. ನಿಶ್ಕಳಂಕವಾದ ಮಧ್ವಸಿಂದ್ಧಾಂತ ಸ್ಥಾಪನಾಚಾರ್ಯರುಗಳು ತಮ್ಮ ಆಮೋಘ ತಪಸ್ಸಿನಿಂದ ಲಭ್ಯವಾದ ಶಾಸ್ತ್ರಪಾಠಗಳನ್ನು ಯಾರಿಗೂ ಸಂದೇಹಬರದಂತೆ ತಿಳಿಸಿ ಅನ್ಯದೇವತಾರಾಧನೆಯಿಂದ ಮೂಢ ಬುದ್ಧಿಯುಳ್ಳವರಾಗಿ ಆದಿಮೂಲನ ಅನಂತ ಮಹಿಮೆಗಳರಿಯದವರಿಗೆ ಸುಜ್ಞಾನ ಮಾರ್ಗ ತೋರಿಸುತ್ತಿದ್ದನು. ರಾಜ್ಯದಲ್ಲಿ ಮಹಾವಿಷ್ಣುವಿನ ಸರ್ವೋತ್ತಮತ್ವದಲ್ಲಿ ಅಪನಂಬಿಕೆಯುಳ್ಳ ಜನರು ಅನ್ಯದೇವತಾ ಉಪಾಸನೆಮಾಡಿ ಶುದ್ಧಧರ್ಮವನ್ನು ಕೆಡಿಸುತ್ತಿದ್ದಾರಾ? ಎಂಬುದನ್ನು ತಿಳಿಯಲಿಕ್ಕಾಗಿ ಗೂಢಚಾರರನ್ನು ನಿಯಮಿಸಿದ್ದನು. ಸಕಲ ಪ್ರಜೆಗಳಿಗೂ ಮಹಾವಿಷ್ಣುವಿಗೆ ಪ್ರಧಾನಪೂಜೆಮಾಡುತ್ತ ಎಲ್ಲಾ ದೇವತೆಗಳ ಕೃಪೆಗೂ ಪಾತ್ರರಾಗಿದ್ದಾರೆಂದು ತಿಳಿದು ಹರ್ಷದಿಂದ ಪ್ರಜಾಕೋಟಿಗಳನ್ನು ಸಂರಕ್ಷಣೆಮಾಡುತ್ತಿದ್ದನು.

ಎಲ್ಲರೂ ಸತ್ಯವಾದ ಜ್ಞಾನ ಉಳ್ಳವರಾಗಿ ಜಾತಿಮತಗಳ ವೈಶಮ್ಯವಿಲ್ಲದೆ ಅವರವರ ಧರ್ಮದಲ್ಲಿ ನಿಷ್ಠಾವಂತರಾಗಿರುತ್ತಿದ್ದರು. ಆದ್ದರಿಂದಲೇ ಕಲಿಯುಗವೂ ಶ್ರೀರಾಮಚಂದ್ರನ ಯುಗದಂತೆ ಆನಂದದ ಬೀಡಾಗಿತ್ತು. ರಾಷ್ಟ್ರದ ನಾಡುನಾಡುಗಳಲ್ಲೂ ವೈರಾಗ್ಯಶೀಲರಾದ ವಿಷ್ಣು ತತ್ತ್ವನಿರ್ಣಯದ ಶಾಸ್ತ್ರ ಸಿದ್ಧಾಂತಗಳು ಸ್ಥಿರಗೊಂಡು ಧರ್ಮದ ಸುಗಂಧ ತುಂಬಿತ್ತು. ಭೀಮಸೇನನ ಮಹಾಧರ್ಮತೇಜಸ್ಸಿನಿಂದ ಅನ್ಯಥಾಜ್ಞಾನದ ಅಸುರರೆಲ್ಲರೂ ಅಂಜಿ ಅದೃಶ್ಯರಾದರು. ರಾಜ್ಯದಲ್ಲಿ ಶಬ್ದ-ರೂಪ-ಗಂಧ-ಸ್ಪರ್ಶಗಳೆಲ್ಲವೂ ಮಹಾವಿಷ್ಣುಮಯವಾಗಿಯೇ ಇದ್ದು ಸ್ವಾಮಿಯ ಗುಣಕಥನವನ್ನು ವರ್ಣಿಸುವಂಥ ಚತುರ್ವಿಧಪುರಷಾರ್ಥಕ್ಕೂ ಕಾರಣವಾಗಿದ್ದವು. ತ್ರಿವಿಧತಾಪಗಳು ಮುಖ್ಯ ಪ್ರಾಣನ ರಾಜ್ಯದಲ್ಲಿ ಥರಥರನೆ ನಡುಗುತ್ತಾ ದೂರಸರಿದಿತ್ತು. ತಾರತಮ್ಯಾನುಸಾರವಾಗಿ ಸಮಸ್ತ ದೇವತಾವರ್ಗಕ್ಕೂ ರಾಜ್ಯದಲ್ಲಿ ಪೂಜಾದಿಗಳು ವೈಭವದಿಂದ ನಡೆಯುತ್ತಿದ್ದೆ ಕಾರಣ ಆಯಾಯಾ ಅಬಿಮಾನಿದೇವತೆಗಳೆಲ್ಲರೂ ಸಕಲ ವಸ್ತುಗಳನ್ನು ನೀಡಿ ರಾಜ್ಯವನ್ನು ಸುಖದ ನಿಧಿಯಂತೆ ಮಾಡಿ ಆನಂದ ಪಡಿಸುತ್ತಿದ್ದರು.

ಹೀಗಿರುವಾಗ ಒಂದುದಿನ ಪಾಂಡವರು ಧರ್ಮ ಜಿಜ್ಞಾಸಿ ಮಾಡುವಾಗ ಒಂದು ತರ್ಕನಡೆಯಿತು.

## ತ್ರಿವಿಧ ಪುರುಷಾರ್ಥಗಳಲ್ಲಿ ಯಾವುದು ಶ್ರೇಷ್ಠ?

ಧರ್ಮರಾಜನು ಒಂದು ದಿನ ವಿದುರನೊಂದಿಗೆ ಸಹೋದರರೆಲ್ಲರೂ ಧರ್ಮ ಸೂಕ್ಷ್ಮಗಳ ಬಗ್ಗೆ ತರ್ಕ ಮಾಡುತ್ತಲಿದ್ದಾಗ ನೀವು ಧರ್ಮ-ಅರ್ಥ-ಕಾಮ ಈ ತ್ರಿವಿಧಸುಖಗಳಲ್ಲಿ ಯಾವುದಕ್ಕೆ ಪ್ರಾಧಾನ್ಯಸ್ಥಾನ ಕೊಡುತ್ತೀರಿ? ಎಂದು ಪ್ರಶ್ನೆ ಮಾಡಿದನು. ಆಗ ವಿದುರನು ಧರ್ಮರಾಜಾ! ಸಧರ್ಮಾಚರಣೆಯೇ ಅರ್ಥಕಾಮಕ್ಕಿಂತಲೂ ಶ್ರೇಷ್ಠವಾದದ್ದು. ಅರ್ಥ ಮಧ್ಯಮವಾದದ್ದು. ಕಾಮ ನೀಚವಾದದ್ದು. ನಿಷ್ಕಾಮಧರ್ಮ ಮೋಕ್ಷದ ಸಾಧನ'' ಎಂದು

ನಾನು ತಿಳಿದಿರುತ್ತೇನೆ ಎಂದನು.

ನಂತರ ಅರ್ಜುನನು ''ಅರಸಾ! ವಿದುರನು ಹೇಳಿದಂತೆ ಸಧರ್ಮಾಚರಣೆ ಮೋಕ್ಷ ಸಾಧನ ಆಗಿದ್ದರೂ ಯಾವ ಧರ್ಮಮಾಡಿದರೂ ಜ್ಞಾನ ಪೂರ್ವಕ ಅನುಸಂಧಾನವಿಟ್ಟು ಮಾಡಿದಾಗ ಮಾತ್ರ ಆ ಧರ್ಮ ಉತ್ತಮವಾಗುತ್ತದೆ. ಜ್ಞಾನ ಸಂಪಾದನೆ ಮಾಡಬೇಕಾದರೆ ಹೇರಳವಾದ ವಿದ್ಯವನ್ನು ವಿದ್ವಾಂಸರಿಂದ ಅಭ್ಯಾಸಮಾಡಬೇಕು ಗುರುಗಳನ್ನು ದೇವತೆಗಳನ್ನು ಬ್ರಹ್ಮಣರನ್ನೂ ಸಂತುಷ್ಟಿ ಪಡಿಸಬೇಕಾದರೆ. ಅಂದರೆ ಅವರ ಆರಾಧನೆ ಮಾಡಬೇಕಾದರೆ ದ್ರವ್ಯ ಮುಖ್ಯವಾಗಿ ಬೇಕಾಗುತ್ತದೆ. ಸುಜ್ಞಾನ ಸಾಧನೆ ಮಾಡಿದಾಗ ದೇವ ಬ್ರಹ್ಮಣ ಪಿತೃ ಋಣಗಳಿಂದ ಮುಕ್ತರಾಗಬೇಕೆಂಬ ಜ್ಞಾನೋದಯವಾಗುತ್ತದೆ. ಆದ್ದರಿಂದ ವಿದ್ಯಾರ್ಜನೆ ಮುಖ್ಯವಾದ್ದರಿಂದ ಅದರ ಸಾಧನೆಗೂ ದ್ರವ್ಯ ಮುಖ್ಯವಾಗಿ ಬೇಕಾಗುತ್ತದೆ.

ಆದ್ದರಿಂದ ನಾನು ದ್ರವ್ಯಕ್ಕೆ ಪ್ರಾಧಾನ್ಯತೆ ಕೊಡುತ್ತೇನೆ. ರಾಜ್ಯನು ಸುಭಿಕ್ಷ್ಯವಾಗಿರಬೇಕಾದರೆ ದ್ರವ್ಯ ಸಂಪತ್ತು ಹೇರಳವಾಗಿದ್ದಾಗ ಮಾತ್ರ ಪ್ರಜಾರಕ್ಷಣೆ ಮಾಡಬಹುದು. ಆದ್ದರಿಂದ ಅರ್ಥವೇ ಅತಿಶ್ರೇಷ್ಠವೆನ್ನುತ್ತೇನೆ'' ಎಂದನು. ನಕುಲ ಸಹದೇವರೂ ಅರ್ಥವೇ ದೊಡ್ಡದೆಂದು ಹೇಳಿದರು.

ನಂತರ ಭೀಮಸೇನನು ಎಲ್ಲದರಕ್ಕಿಂತಲೂ ಶ್ರೇಷ್ಠವಾದದ್ದು ಕಾಮ. ನಾನು ಕಾಮವೇ ದೊಡ್ಡದೆಂದು ಬಾವಿಸುತ್ತೇನೆ . ಹೇಗೆಂದರೆ ಧರ್ಮ-ಅರ್ಥಾದಿಗಳು ದೇಹಿಯ ಕಾಮನೆಯಿಂದಲೇ ಲಭ್ಯವಾಗುತ್ತದೆ. ಸಕಲ ಸತ್ಕಾರ್ಯಗಳೂ ಮೋಕ್ಷಾಪೇಕ್ಷೆಯಿಂದಲೆ ನಡೆಯುತ್ತದೆ. ಆದ್ದರಿಂದ ಮೋಕ್ಷ ಪಡೆಯಬೇಕೆಂಬುದು ಕಾಮವೇ? ನಾರಯಣ ಸ್ಮರಣೆ ನಿರಂತರವೂ ಸ್ಥಿರವಾಗಿ ಮನಗೂಡಿರಬೇಕೆಂಬುದೂ ಕಾಮವೇ? ಲಿಂಗದೇಹ ಭಂಗಗೊಳ್ಳಬೇಕೆಂಬ ಶ್ರೇಷ್ಠ ಕಾಮನೆಗಳಿದ್ದವರೇ ಉತ್ತಮರು. ಭಗವಂತನ ಭಾಗ್ಯವನ್ನು ಕಾಮಿಸುವವರೆಲ್ಲರೂ ಉತ್ತಮಾಧಿಕಾರಿಗಳಾದ್ದರಿಂದ ಪ್ರತಿಯೊಬ್ಬರಿಗೂ ಎಲ್ಲಾ ಸತ್ಸಾಧನೆಗಳಿಗೂ ಕಾಮವೇ ಕಾರಣವಾದ್ದರಿಂದ ಅದೇ ದೊಡ್ಡದೆಂದು ತಿಳಿಯಬೇಕು. ನಿಷ್ಕಾಮಕರ್ಮಮಾಡಲಿಕ್ಕೆ ಬುದ್ಧಿಕೊಡು ಎಂದು ಕೇಳುವುದು ಕಾಮವೇ. ಆದ್ದರಿಂದ ಪ್ರತಿ ಉಸುರಿನಲ್ಲೂ ಸತ್ಕಾಮನೆಯ ಸಾಧನೆ ನಡೆದೇ ನಡೆಯುವುದರಿಂದ ಸುಳ್ಳು ಕಾಮನೆಗಳು ಅಂದರೆ ಅಸುರಾ ಭಾವದ ದುರಾಸೆಗಳನ್ನು ವರ್ಜಿಸಿ ಸತ್ಕಾಮನೆಗಳನ್ನು ಅವಲಂಬಿಸಿದವರೇ ನಿಜಗುಣ ಸಾಧಕರೆಂದು ಹೇಳಿದನು.

## ಕಲಿಮರ್ಧನ ಮಾಡಿದ ಭೀಮ

ಧರ್ಮರಾಜನ ರಾಜ್ಯದಲ್ಲಿ ಧರ್ಮದೇವತೆಯೂ ಶುದ್ಧಜ್ಞಾನವುಳ್ಳ ಸತ್ಪ್ರಜೆಗಳಿಂದ ಶೋಭಿಸುತ್ತಲಿದ್ದಳಾದ್ದರಿಂದ ತಾಮ್ರಪರ್ಣಿ ಮೊದಲಾದ ತೀರ್ಥಾಬಿಮಾನಿ ದೇವತೆಗಳು

ಧರ್ಮದೇವತೆಗೆ ಕಾಣಿಕೆ ಒಪ್ಪಿಸಲಿಕ್ಕಾಗಿ ಅನೇಕ ಬಗೆಯ ರತ್ನಗಳನ್ನು ಯುಥೇಚ್ಚವಾಗಿ ತುಂಬಿ ರಾಜರುಗಳಿಂದ ಧರ್ಮರಾಜನಿಗೆ ಕಾಣಿಕೆ ಕಳುಹಿಸುತ್ತಿದ್ದಳು. ವೇದಮಂತ್ರಗಳ ಘೋಷಣೆ ರಾಜ್ಯದಲ್ಲಿ ಸದಾ ಮೊಳಗುತ್ತಾ ಹೋಮಾಧೂಮದ ಪರಿಮಳದಿಂದ ಪುಷ್ಠಿಹೊಂದಿದ ಸ್ಥಾವರ ಜಂಗಮ ವಸ್ತುಗಳೆಲ್ಲವೂ ಫಲವನ್ನು ಹೊತ್ತು ಧರ್ಮದೇವತೆಗೆ ಪಾದಾರ್ಪಣ ಸಲ್ಲಿಸುತ್ತಿದ್ದರು. ದ್ರೌಪದೀ ಸದೃಶ್ಯಳಾದ ಭಾರತೀದೇವಿಯಿಂದ ಕೀರ್ತಿ ಪಡೆದು ಪ್ರಜಾಕೋಟಿಗಳನ್ನೂ ಪವಿತ್ರರನ್ನಾಗಿ ಮಾಡಿದರು.

ದ್ವಾಪರಯುಗ ಅಂತ್ಯವಾಗಲಿಕ್ಕೆ ಕಲಿಯ ಆಡಳಿತ ಪ್ರಾರಂಭವಾಯಿತು. ಭೀಮಸೇನನ ಭಯದಿಂದ ಕಲಿಗೆ ಅವಕಾಶ ಸಿಗಲಿಲ್ಲ. ಕಲಿಯನ್ನು ಮೆಟ್ಟಿ ಭೀಮಸೇನನು ಗದಾಧಾರಿಯಾಗಿ ಪುರವನ್ನು ಕಾಯುತ್ತಿದ್ದನು.

ಆಗ ಕಲಿಯು ಬಲಿ ಎಂಬ ಒಬ್ಬದೈತ್ಯನ ಬೆಂಬಲದಿಂದ ಹಸ್ತಿನಾವತಿಯ ಸುತ್ತಮುತ್ತಲಿನ ದೂರಪ್ರದೇಶಗಳಲ್ಲಿ ತನ್ನ ಆಡಳಿತ ನಡೆಸತೊಡಗಿದರು. ರಾಜ್ಯದಲ್ಲಿ ಕೆಲವು ಅನಾಚಾರಗಳು ತಲೆ ದೋರಿದ್ದನ್ನು ಧರ್ಮರಾಜನು ಗೂಢಚಾರರಿಂದ ತಿಳಿದು ಕಲಿ ಪ್ರವೇಶ ಆಗಿದೆ ಎಂದು ತಿಳಿದನು.

''ಕೃಷ್ಣಾ! ರಾಜ್ಯದ ಹೊರವಲಯದಲ್ಲಿ ಕಲಿಮಲದೋಶಕ್ಕೊಳಗಾದ ಪ್ರಜೆಗಳಿಂದ ದುರತಿಕ್ರಮಗಳು ಕಂಡುಬರುತ್ತಿವೆ . ಇದನ್ನು ನಾನು ಗೂಢಚಾರರಿಂದ ತಿಳಿದೆನು. ಸ್ವಾಮೀ ನೀನೇ ಧರ್ಮರಕ್ಷಕನಾದ್ದರಿಂದ ಕಲಿದೋಷವನ್ನು ಕಳೆದು ಕಾಪಾಡು'' ಎಂದು ಪ್ರಾರ್ಥಿಸಿದನು. ಕೃಷ್ಣನು ''ಧರ್ಮಜಾ! ಭೀಮಗರ್ಜನೆಗೆ ಕಲಿ ಎಲ್ಲಿದ್ದರೂ ಓಡಿ ಹೋಗುತ್ತಾನೆ. ಭಯವೇಕೆ?'' ಎಂದು ಧೈರ್ಯಹೇಳಿ ಭೀಮನನ್ನು ಕುರಿತು ಭೀಮಾ! ನೀನು ಕಲಿ ಎಲ್ಲಡಗಿದ್ದರೂ ಎಳೆದು ತರಬೇಕು. ಎಂದು ಆಜ್ಞೆಮಾಡಿದನು. ಭೀಮನು ಕಲಿಯನ್ನು ಹುಡುಕಲು ಹೊರಟು ಹಿಡಿದು ನಿಗ್ರಹಮಾಡಿ ಕೃಷ್ಣನಿಗೆ ತಂದೊಪ್ಪಿಸಿದನು. ಕಲಿ ಭೀಮನ ಭಯದಿಂದ ತಪ್ಪಿಸಿಕೊಂಡು ಓಡಿಹೋಗಲು ಆಗಲಿಲ್ಲ.

ಕೃಷ್ಣನು ಎಲಾ ಕಲಿ! ನಿನಗೆ ಇಂಥ ಧರ್ಮರಾಜನ ರಾಜ್ಯದಲ್ಲಿ ಹೇಗೆ ಅವಕಾಶಸಿಕ್ಕಿತು? ಎಂದು ಕೇಳಿದನು.

ಆಗ ಕಲಿಯು ಸ್ವಾಮೀ! ನಿನ್ನ ಸಂಕಲ್ಪದಿಂದ ಹಸ್ತಿನಾವತಿ ಆಳುವುದಕ್ಕೆ ಮೂಲಕಲಿ ದುರ್ಯೋಧನ ಹುಟ್ಟಿದ್ದನು. ಅವನು ಸತ್ತ ನಂತರ ಕಲಿಯೇ ರಾಜನಾಗಿ ಆಡಳಿತ ನಡೆಸಬೇಕೆಂದು ನಿನ್ನ ಅಪ್ಪಣೆಯಂತೆ ನಾನು ನಡೆದಿದ್ದೇನೆ ನನ್ನದೇನೂ ತಪ್ಪಿಲ್ಲವೆಂದು'' ಹೇಳಿದನು.

ಆಗ ಧರ್ಮರಾಜನು ರಾಜ್ಯ ನಮ್ಮ ವಂಶ ಪರಂಪರೆಯಿಂದ ಬಂದಿದೆ. ಇದು ಧರ್ಮಸಾಮ್ರಾಜ್ಯ ಆದ್ದರಿಂದ ನಿನಗೆ ಏನು ಮಾಡಿದರು ಅವಕಾಶ ಸಿಗುವುದಿಲ್ಲ'' ಎಂದನು.

ಆಗ ಕಲಿಯು ಧರ್ಮರಾಜಾ! ಸ್ವಾಮೀ ಸಂಕಲ್ಪಕ್ಕೆ ಎದುರುಂಟೇ? ನನ್ನ ಆಡಳಿತದಲ್ಲಿ ಧರ್ಮವನ್ನು ಕದಿಯುವುದೇ ಮೊದಲನೆಯ ಯೋಜನೆ. ನಿನ್ನಂಥ ಧರ್ಮವಂತರಾಜರಲ್ಲಿ ಪ್ರವೇಶಮಾಡಲು ಅವಕಾಶಸಿಗದಿದ್ದರೂ ಧರ್ಮ ಆಚಾರ-ಸತ್ಯಸಂಧತೆಗಳ ಅಭಿಮಾನ ದೇವತೆಗಳನ್ನೂ ಶ್ರೀಕೃಷ್ಣನ ಸಂಕಲ್ಪಾನುಸಾರ ಉಚ್ಚಾಟನೆ ಮಾಡಿಸಿದಾಗ ಅಲ್ಲಿ ಅಧರ್ಮ ಅನಾಚಾರ-ಸುಳ್ಳು-ಕಪಟಾದಿಗಳೆಂಬ ಅಸುರರು ಬಂದು ನೆಲಸುತ್ತಾರೆ. ಬ್ರಹ್ಮಣರು ಬ್ರಹ್ಮವಿದ್ಯೆಯನ್ನು ಮಾರಿಕೊಂಡು ಜೀವನನಡೆಸುತ್ತಾರೆ. ಅನ್ನಮಾರುತ್ತಾರೆ. ಇಂಥ ದುರ್ವ್ಯಾಪಾರದಿಂದ ಅವರ ಬ್ರಹ್ಮತೇಜಸ್ಸು ತಪಸ್ಸು ನಷ್ಟಹೊಂದಿ ಪೂಜ್ಯತ್ವವನ್ನು ಕಳೆದುಕೊಂಡು ಶಾಪಾನುಗ್ರಹ ಶಕ್ತಿಯನ್ನು ಹೊಂದದವರಾಗಿ ಶ್ರೀಹರಿಯ ಸರ್ವೋತ್ತಮ ಜ್ಞಾನವಿಲ್ಲದೆ ಕ್ಷುದ್ರದೇವತೆಗಳಿಂದ ನರಳಾಡುತ್ತಿರುತ್ತಾರೆ. ನಿಜವಾದ ಸುಖವನ್ನೇ ಕಳೆದುಕೊಂಡು ದುಃಖದ ಕೊರಕಲಲ್ಲಿ ಬಿದಿದ್ದರೂ ಆತ್ಮಪ್ರಶಂಸನೆ ಪರದೂಶಣೆಗಳಿಂದ ಆನಂದಪಡುತ್ತ ಅದೇ ಸುಖವೆಂಬ ಬ್ರಾಂತಿಯಿಂದ ಬದುಕುತ್ತಿರುತ್ತಾರೆ.

ಧರ್ಮರಾಜಾ! ನಿನ್ನಲ್ಲಿ ನಾನು ಆವೇಶವಾಗಲು ಅವಕಾಶವಿಲ್ಲ . ಏಕೆಂದರೆ ಭೀಮಸೇನನು ಸದಾ ದೈತ್ಯ ಸಂಹಾರಕ್ಕಾಗಿ ಗದಾಧಾರಿಯಾಗಿ ನಿನ್ನ ರಾಜ್ಯದ ಸಂರಕ್ಷಣೆಯನ್ನು ಶ್ರೀಕೃಷ್ಣನ ಪರಮಾನುಗ್ರಹ ಬಲದಿಂದ ಮಾಡುತ್ತಿರುವುದರಿಂದ ನಿಮ್ಮ ಮೇಲೆ ಕಲಿ ಪ್ರಭಾವ ಬೀರಲು ಸಾದ್ಯವಾಗದೆ ಗೋಪ್ಯವಾಗಿ ಅಲ್ಲಲ್ಲಿ ನಡೆಸುತ್ತಾ ಸಂಚಾರ ಮಾಡುತ್ತಲಿದ್ದೇನೆ.

ಕಲಿಯ ಮಾತು ಧರ್ಮರಾಜನಿಗೆ ಆಶ್ಚರ್ಯತಂದಿತು. ''ಕಲೀ! ನೀನು ಅಧರ್ಮನಾಯಕನಾಗಿದ್ದರೂ ನೀನು ಆಡುವ ಮಾತು ಪುಸಿ ಅಲ್ಲ. ನೀನು ನನ್ನೆದುರಿಗೆ ನಿಶ್ಕಳಂಕವಾಗಿ ಎಲ್ಲವನ್ನು ವರದಿ ಒಪ್ಪಿಸಿ ನಿಜವಾದ ಸಂಗತಿ ತಿಳಿಸಿ ರುವಿ-ನಿರಪರಾಧಿಯಾದ ನಿನ್ನನ್ನು ಸೆರೆಯಿಂದ ಬಿಡುಗಡೆ ಮಾಡುವೆನು. ಒಂದು ಮಾತು ನೀನು ಕೇಳಿ ಅದರಂತೆ ನಡೆ. ನಮ್ಮ ರಾಜ್ಯ ಕ್ಷೇಮಕ ರಾಜನ ಪರಿಯಂತರವೂ ಧರ್ಮದಿಂದ ಪಾಲಿತವಾಗುತ್ತದೆ. ಅವನ ಆಡಳಿತ ಮುಗಿಯುವರೆಗೂ ನೀನು ನಿನ್ನ ಪ್ರಭಾವವನ್ನು ಪ್ರಕಟಮಾಡಬಾರದು. ನೀನು ಅತಿಕ್ರಮ ನಡೆಸುವುದಿಲ್ಲವೆಂಬ ನಿನ್ನ ವಾಗ್ದಾನವೇ ನನಗೆ ನೀನು ಸಲ್ಲಿಸುವ ಕಪ್ಪವೆಂದು ತಿಳಿಯುತ್ತೇನೆ'' ಎಂದನು.

ಕೃಷ್ಣನು ನಂತರ ಮತ್ತೆ ಕಲಿಯನ್ನು ಕುರಿತು ''ನೀನು ಧರ್ಮರಾಜನ ಆಜ್ಞೆಯಂತೆ ಪಾಂಡವರ ಸಂತಾನ ಭೂಮಂಡಲದಲ್ಲಿರುವವರೆಗೂ ನಿನ್ನ ಪ್ರಭುತ್ವ ಮೆರಸಬಾರದು. ಕ್ಷೇಮಕ ರಾಜನು ಭೂಮಂಡಲವನ್ನು ಬಿಟ್ಟು ಹೋದನಂತರ ನಿನ್ನ ಅತಿಕ್ರಮಣ ಅಧಿಕವಾಗಿ ನಡೆಯಲಿ ಅದುವರೆಗೂ ನೀನು ಭೂಭಾಗವನ್ನು ಬಿಟ್ಟು ಎಲ್ಲಾದರೂ ದೂರ ಪ್ರದೇಶಕ್ಕೆ ಹೊರಟು ಹೋಗು'' ಎಂದು ಶ್ರೀಕೃಷ್ಣ ಆಜ್ಞೆಮಾಡಲು ಕಲಿಯು ಸ್ವಾಮಿಗೆ ತಲೆ ಬಾಗಿ ನಮಸ್ಕಾರ ಮಾಡಿ ದೇವರ ದೇವನ ಅಪ್ಪಣೆಯಂತೆ ಸ್ವಾದೋದಕ ಸಮುದ್ರದ ಆಚೆ

ಹೊರಟುಹೋಗಿ ಅಲ್ಲಿ ನೆಲಸಿದ್ದನು. ಹೀಗೆ ಪಾಂಡವರ ರಾಜ್ಯ ಶ್ರೀಕೃಷ್ಣನ ಕೃಪೆಯಿಂದ ಕಲಿದೋಷಕ್ಕೆ ಸಿಕ್ಕದೆ ಕೃತಯುಗದ ವೈಭವವನ್ನು ಹೊಂದಿ ಶೋಭಿಸುತ್ತಿತ್ತು. ಹೀಗೆ ಶ್ರೀಕೃಷ್ಣನು ಪಾಂಡವರನ್ನು ಸಂತೋಷಪಡಿಸುತ್ತ ಅವರ ಸಮೀಪದಲ್ಲೇ ಕೆಲವು ದಿನಗಳಿದ್ದು ಅರ್ಜುನನ ಪುತ್ರಶೋಕ ಆಗಾಗ ಮರುಕಳಿಸುತ್ತಲಿರುವುದನ್ನು ಸ್ವಾಮಿ ಪರಿಹರಿಸಲಿಚ್ಚಿಸಿ ಅಣುಗೀತೆಯನ್ನು ಉಪದೇಶಮಾಡಿದ ಭಗವದ್ವಾಕ್ಯಗಳು ಪುಣ್ಯಾತ್ಮನಾದ ಪಾರ್ಥನ ನಿಮಿತ್ತದಿಂದ ಲೋಕದ ಸಜ್ಜನರಿಗೂ ಲಭ್ಯವಾಯಿತು.

ಅರ್ಜುನನು ತನ್ನ ವೀರ ಕುಮಾರನ ಮರಣವನ್ನು ಶ್ರೀಕೃಷ್ಣನ ಸನ್ನೀಧಾನ ಭಾಗ್ಯದಿಂದ ಮರೆತು ಶ್ರೀಕೃಷ್ಣನ ಸಾಮೀಪ್ಯ ಸುಖದ ಆನಂದದಲ್ಲಿದ್ದರೂ ಶ್ರೀಕೃಷ್ಣ ತನ್ನನ್ನಗಲಿ ದ್ವಾರಕೆಗೆ ಹೊರಡುತ್ತಾನೆಂದು ತಿಳಿದಾಗ ಅವನ ದುಃಖ ಮರುಕಳಿಸಿ ಅಳುತ್ತಿದ್ದನು. ಅಗ ಕೃಷ್ಣನು ''ಅರ್ಜುನಾ! ನೀನು ಸಾರವತ್ತಾದ ತತ್ತ್ವವನ್ನು ನನ್ನಿಂದ ಉಪದೇಶಪಡೆದಿದ್ದರೂ ಇನ್ನು ನಿನಗೆ ಮೋಹ ಅಂಟಿದೆ. ಈ ಜಗತ್ತು ನಾರಾಯಣ ಅವನಿಗಿಂತಲೂ ಕೆಳಗೆ ರಮಾದೇವಿ ಅವಳಿಗಿಂತಲೂ ಕೆಳಗೆ ಮುಖ್ಯಪ್ರಾಣ ಈ ಮೂರು ದೇವತಾಮೂರ್ತಿಗಳಿಂದಲೂ ಆಶ್ರಯ ಪಡೆದಿದೆ.

ಸಕಲ ಪ್ರಾಣಿಗಳೂ ಮುಖ್ಯ ಪ್ರಾಣನ ಅಂತರ್ಗತನಾದ ನನ್ನ ಅಶ್ರಯ ಪಡೆದಿದ್ದಾರೆ. ನಾರಾಯಣ ಸಮಾನರಾಗಲಿ ಅವನಿಗಿಂತಲೂ ಅಧಿಕರಾಗಲಿ ಇಲ್ಲವೆಂಬ ಜ್ಞಾನಮುಖ್ಯವಾಗಿ ಶುದ್ಧವಾದ ಶಾಸ್ತ್ರದಿಂದ ತಿಳಿದಾಗಲೇ ನಾರಾಯಣನಲ್ಲಿ ಸ್ವಚ್ಛಭಕ್ತಿ ನಾರಾಯಣನ ಉಪಾಸಕರಲ್ಲಿ ದೃಢಭಕ್ತಿ ಉಂಟಾಗುತ್ತದೆ. ಶ್ರೀಹರಿಯ ಸತ್ಯವಾದ ಗುಣಗಳನ್ನು ಅರಿಯದೆ ಸ್ವಾಮಿಯ ಭಕ್ತರನ್ನು ದ್ವೇಶಮಾಡಿದವರು ಎಷ್ಟು ಧರ್ಮಕಾರ್ಯಗಳನ್ನು ಮಾಡಿದರೂ ಪ್ರಯೋಜನವಿಲ್ಲ. ನಿಶ್ಚಯ ಜ್ಞಾನದಿಂದಲೇ ಮುಕ್ತಿ ಲಭ್ಯವಾಗುತ್ತದೆ. ಪರಮಾತ್ಮನ ಪರಮೋನ್ನತವಾದ ವೇದವಾಕ್ಯಗಳನ್ನು ದಿವ್ಯಜ್ಞಾನದಿಂದ ಮನನಮಾಡಿ ಆದರಿಂದ ಉದಿಸುವ ಸುಜ್ಞಾನ ಪ್ರಕಾಶದಿಂದ ದೇಹಿಯು ತನ್ನ ಅಜ್ಞಾನಮಯವಾದ ಸುಳ್ಳು ಸುಖಗಳ ಚಿಂತೆಗಳನ್ನೂ ಮರೆತು ಬ್ರಹ್ಮಾನಂದವನ್ನು ಅನುಭವಿಸುತ್ತಾನೆ'' ಎಂದು ಅನೇಕ ರಹಸ್ಯ ಧರ್ಮಗಳನ್ನು ಉಪದೇಶಿಸಿ ಅರ್ಜುನನನ್ನು ಸಮಾಧಾನಗೊಳಿಸಿ ತಂಗಿಯಾದ ಸುಭದ್ರಾದೇವಿಯೊಡಗೂಡಿ ದ್ವಾರಕೆಗೆ ಹೊರಟನು.

ಸುಭದ್ರಾದೇವಿ ಮಗನ ಮರಣದಿಂದ ದುಃಖ ತಪ್ತಳಾದ್ದರಿಂದ ಆಕೆಯನ್ನು ಸಮಾಧಾನಪಡಿಸಲು ಸವಿಮಾತುಗಳಿಂದ ಬರುತ್ತಿದ್ದನು. ಮಾರ್ಗದಲ್ಲಿ ಉದಂಕಮುನಿಯ ಆಶ್ರಮದ ಬಳಿಗೆ ಬಂದಾಗ ಮುನಿಯು ಶ್ರೀಕೃಷ್ಣನ ದರ್ಶನದಿಂದ ಹರ್ಷಿತನಾಗಿ ಪಾದ ಪೂಜೆ ಸಲ್ಲಿಸಿದನು. ನಂತರ ಕೃಷ್ಣಾ! ಯಾವ ಭಕ್ತರ ಕರೆಗೆ ಹೊರಟಿದ್ದಿ? ಎಂದು ಕೇಳಿದನು. ಉದಂಕಮುನಿಯು ತನ್ನ ಯೋಗ್ಯತೆ ಮೀರಿ ತಪೋಪುಣ್ಯವನ್ನು ಪಡೆದಿದ್ದನು. ಅವನ

ಪುಣ್ಯವನ್ನು ಕ್ಷಯಗೊಳಿಸಲಿಕಾಗಿಯೇ ಶ್ರೀಕೃಷ್ಣ ಮುನಿಪುಂಗವನ ಬಳಿಗೆ ಬಂದನು. ಶ್ರೀಕೃಷ್ಣ ದರ್ಶನದಿಂದ ಪುಣ್ಯ ಅದಿಕವಾಗುತ್ತದೆ. ಕ್ಷಯಹೊಂದುವುದಿಲ್ಲವಾದರೂ ಮುನಿಯನ್ನು ತನ್ನ ಬಂಧಕಶಕ್ತಿಯಿಂದ ಅಜ್ಞಾನದ ಸೋಂಕನ್ನುಂಟುಮಾಡಲು ಸಂಕಲ್ಪ ಮಾಡಿದ ಕೃಷ್ಣ ''ಉದಂಕಾ! ನಿನಗೆ ಹಸ್ತಿನಾವತಿಯ ಯುದ್ದ ಸಮಾಚಾರ ತಿಳಿದಂತಿಲ್ಲ. ಕೌರವ ಪಾಂಡವರಿಬ್ಬರಿಗೂ ಯುದ್ಧನಡೆದು ಭೀಷ್ಮದ್ರೋಣಾದಿಗಳು ಮತ್ತು ತನ್ನ ಸಕಲ ಸಹೋದರರೊಡಗೂಡಿ ಹನ್ನೊಂದು ಅಕ್ಷೋಹಿಣಿ ಸೈನ್ಯವನ್ನು ಕಳೆದುಕೊಂಡು ತಾನೂ ಹತನಾದನು.

ಪಾಂಡವ ಪಕ್ಷ ಗೆದ್ದರು ಹಸ್ತಿನಾವತಿಯನ್ನು ಈಗ ಅವರೇ ಆನಂದದಿಂದ ರಾಜ್ಯಭಾರ ಮಾಡುತ್ತಿದ್ದಾರೆ'' ಎಂದು ಅಜ್ಞಾನಿ ಜನರಿಗೆ ಮೋಹ ಉಂಟಾಗುವಂತೆ ಹೇಳಿದನು.

ತಪೋಮಹಿಮರಿಗೆ ಕ್ರೋಧಾದಿಗಳ ಲೇಪವಿಲ್ಲದಿದ್ದರೂ ಶ್ರೀಕೃಷ್ಣನ ಪ್ರೇರಕಶಕ್ತಿಯಿಂದ ಸ್ವಾಮಿಯನ್ನು ದೂಶಿಸುವಂಥ ಅಪರಾಧಕ್ಕೊಳಗಾಗಿ ''ಕೃಷ್ಣಾ! ನೀನು ಪಾಂಡವ ಪಕ್ಷಪಾತಿ ಆದ್ದರಿಂದಲೇ

ಅವರ ಕೈಯಿಂದ ನನ್ನ ಶಿಷ್ಯನ ವಂಶವನ್ನೇ ನಾಶ ಮಾಡಿ ರಾಜ್ಯ ಪಾಂಡವರಿಗೆ ದಕ್ಕುವಂತೆ ಮಾಡಿರುವಿ'' ಎಂದು ಕೃಷ್ಣನಿಗೆ ಶಾಪಕೊಡಲು ಕಮಂಡಲೋದಕವನ್ನು ಕೈಗೆ ಹಾಕುವಷ್ಟರಲ್ಲಿ ಕರುಣಾಳು ಆ ಮುನಿಗೆ ವಿಶ್ವರೂಪ ದರ್ಶನ ಕೊಟ್ಟನು. ಮುನಿಯು ತನ್ನ ತಪೋಪುಣ್ಯದಿಂದ ದಿವ್ಯ ದೃಷ್ಟಿಯನ್ನು ಹೊಂದಿ ವಿಶ್ವರೂಪವನ್ನು ನೋಡಿ ಮೈಮರೆತು ಭಕ್ತಿಯ ಉದ್ರೇಕದಿಂದ ಸ್ತುತಿಮಾಡುತ್ತ ದೇವಾ! ನೀನು ಸರ್ವವ್ಯಾಪ್ತನಾದರೂ ನಿರ್ಲಿಪ್ತನಾಗಿರುವಿ ಅವರವರ ಪಾಪಪುಣ್ಯಗಳೇ! ಅವರವರ ರಕ್ಷೆ ಶಿಕ್ಷೆಗಳಿಗೆ ಕಾರಣವಾಗಿರುತ್ತದೆ.

ವಿಶ್ವವನ್ನೇ ನೀನು ನಿನ್ನಲ್ಲಿ ಧರಿಸಿದ್ದರೂ ನೀನು ಎಲ್ಲದರಿಂದಲೂ ನಿರ್ಲೇಪನಾಗಿಯೇ ಇದ್ದು ಎಲ್ಲವನ್ನು ನಡೆಸತಕ್ಕ ಸರ್ವಶಕ್ತನಾಗಿರುವಿದಿ ದ್ವೇಶಾ ಅಸೂಯಾದಿ ಯಾವ ವಿಕಾರವೂ ಇಲ್ಲ. ಎಲ್ಲವೂ ನಿನಗೆ ಆಧೀನವಾಗಿ ನಿನ್ನ ಆಜ್ಞೆಯಂತೆ ದೇಹಿಗಳ ಕರ್ಮಾನುಸಾರ ಫಲಾಫಲಗಳನ್ನು ಕೊಡುತ್ತವೆ. ದೋಷ ರಹಿತನೆಂದು ಸ್ತುತಿಪಾತ್ರನಾದ ನಿನಗೆ ದೋಷಾರೋಪಣೆ ಮಾಡಿ ಶಾಪವನ್ನು ಕೊಡಲು ಭಾವಿಸಿದ ಮೂಢಮತಿಯನ್ನು ಉದ್ದಾರಮಾಡಲಿಕ್ಕಾಗಿಯೇ ನಿನ್ನ ಬೃಹದ್ರೂಪವನ್ನು ತೋರಿಸಿ ನನ್ನನ್ನು ಕಾಪಾಡಿದ ಕರುಣಾಳುವಾದ ನಿನ್ನ ಕರುಣಕ್ಕೆ ನಾನು ಎಷ್ಟು ಜನ್ಮಗಳು ತಪಸ್ಸು ಮಾಡಿದರೆ ತಾನೇ ನನಗೆ ಅಜ್ಞಾನದ ದೋಷ ಪರಿಹಾರವಾದೀತು? ದೇವಾ! ಅನೇಕ ವರ್ಷಗಳಿಂದಲೂ ದೇಹದಂಡನೆಮಾಡಿ ಲೌಕಿಕಸುಖವೆಲ್ಲವನ್ನು ತೃಣೀಕರಿಸಿ ನಿನ್ನಾ ಪಾದಮೂಲದಲ್ಲೇ ಮನೋಪುಷ್ಪವನ್ನರ್ಪಿಸಿದ್ದರೂ ನನಗೆ ಸ್ವಚ್ಛಭಾವ ಸ್ಥಿರವಾಗಿ ನಿಲ್ಲದೆ ಮಾಲಿನ್ಯಗೊಂಡು ರಮಾಬ್ರಹ್ಮಾದಿಗಳಿಂದಲೂ ಸ್ತುತಿಸಿ ಕೊಳ್ಳುವಂಥ ನಿನ್ನನ್ನು ಮಹಾ ಅಲ್ಪನೂ ಪಾಪಿಯೂ, ಆದ ನಾನು ದೂಶಿಸಿದ ಈ

ಘೋರ ಪಾಪವನ್ನು ಹೇಗೆ ಕಳೆದುಕೊಳ್ಳಲಿ ಸ್ವಾಮೀ ನನ್ನ ಈ ಪಾಪದ ಪರಿತಾಪವನ್ನು ಕಳೆದುಕೊಳ್ಳುವುದಕ್ಕೆ ಪ್ರಾಯಶ್ಚಿತ್ತವನ್ನು ತಿಳಿಸು. ಮನೋದೌರ್ಬಲ್ಯ-ದೇಹ-ದೌರ್ಬಲ್ಯಗಳಿಂದ ಅಶಕ್ತವಾದ ಈ ದೇಹದಿಂದ ನನಗೆ ತಪೋಸಾಧನೆಯೂ ನಡೆಯುವಂತಿಲ್ಲ. ಹೇಳು ಸ್ವಾಮೀ! ನೀನು ಯಾವ ಶಿಕ್ಷೆಯನ್ನಾದರೂ ಕೊಡು ನನಗೆ ವಿಸ್ಮರಣೆಯ ಶಿಕ್ಷೆ ಕೊಡಬೇಡ'' ಎಂದು ಪರಿಪರಿಯಿಂದ ಆರ್ತನಾಗಿ ಪ್ರಾರ್ಥಿಸಿಕೊಂಡಾಗ ಸ್ವಾಮಿಯು ಆಗ ''ಉದಂಕಾ! ನಿನಗೆ ಸುರರಾಜನಿಂದ ಅಮೃತ ದೊರಕುವಂತೆ ಅನುಗ್ರಹಿಸುವೆನು. ಆದ್ದರಿಂದ ನಿನ್ನ ಅಜ್ಞಾನ ದುಃಖ ಕ್ಲೇಶಾದಿಗಳೆಲ್ಲವೂ ತೊಲಗಿ ಪಾಪ ಮುಕ್ತನಾಗುವಿ'' ಎಂದನು.

ದೇವೇಂದ್ರನು ತನ್ನ ಸ್ವಾಮಿಯ ಸಂಕಲ್ಪವನ್ನರಿತನು. ಉದಂಕಮುನಿಯ ಅಮೋಘ ತಪಸ್ಸಿನಿಂದ ಪಡೆದ ಪುಣ್ಯದಿಂದ ಭಗವಂತನನ್ನೇ ತನ್ನ ಬಳಿ ಕರಿಸಿಕೊಂಡು ತನ್ನ ಕಣ್ಮುಂದೆ ವಿಶ್ವರೂಪದರ್ಶನವನ್ನು ಪಡೆದ ಭಾಗ್ಯಶಾಲಿ ಈಗ ಸ್ವಾಮಿಯ ಆಜ್ಞೆಯಂತೆ ದೇವೇಂದ್ರನಿಂದ ಅಮೃತ ಪ್ರಾಶನದ ಭಾಗ್ಯಕ್ಕೆ ತಾನು ಅದಕ್ಕೆ ಅನಧಿಕಾರಿ ಎಂಬ ಜ್ಞಾನವಿಲ್ಲದೆ ತಪೋಮದದಿಂದ ಅಮೃತಕ್ಕೆ ಆಸೆಪಟ್ಟು ಕಾಯುತ್ತಿದ್ದಾನೆ. ತಾರತಮ್ಯ ಜ್ಞಾನವಿಲ್ಲದ ಅವನ ಸಾಧನೆ ಸಾರ್ಥಕವಾಗಬಾರದೆಂದು ಒಬ್ಬ ಹೊಲಸು ಚಂದಾಲನವೇಶದಿಂದ ಹೋಗಿ ''ಸ್ವಾಮೀ ನಿನಗೆ ಅಮೃತ ಕಳುಹಿಸಿದ್ದಾನೆ ತೆಗೆದುಕೋ'' ಎಂದನು. ಉದಂಕನು ಆಗಲೂ ಅಜ್ಞಾನದಿಂದ ಭಗವಂತನ ಕರುಣೆಯೇ ಬಳಿಗೆ ಬಂದು ನನ್ನನ್ನು ಹೊಂದು ಎಂದು ಹೇಳುತ್ತಿದ್ದರೂ ನಿರಾಕರಿಸಿದನು. ಆಗ ದೇವತಗೆಗಳೆಲ್ಲರೂ ಭಗವಂತನ ವಿಚಿತ್ರ ಲೀಲೆಗೆ ಆಶ್ಚರ್ಯ ಹೊಂದಿ ಯೋಗ್ಯತೆಗೆ ಮೀರಿದ ಪುಣ್ಯವನ್ನು ಅನುಭವಿಸಲು ಯಾರು ಸಮರ್ಥರಲ್ಲ ಎಂಬುದನ್ನು ಸ್ವಾಮಿ ಉದಂಕಮುನಿಯ ನಿಮಿತ್ತದಿಂದ ಲೋಕಕ್ಕೆ ತೋರಿಸಿದನು. ಮನೆಯಬಾಗಿಲಿಗೆ ಸಾಕ್ಷಾತ್ ದೇವೇಂದ್ರನೇ ಅಮೃತ ಕಲಶ ತಂದು ಕೊಟ್ಟರು ಪಡೆದುಕೊಳ್ಳದ ದೌರ್ಭಾಗ್ಯ ಉದಂಕಮುನಿಗೆ ಉಂಟಾಗಿದ್ದು ಅವನಿಗೆ ಅಲಭ್ಯವಾದ ಪುಣ್ಯಾಪೇಕ್ಷೆಯಿಂದ ಎಂದು ಮಾತನಾಡಿಕೊಂಡರು.

ಶ್ರೀಕೃಷ್ಣ ದ್ವಾರಕೆಗೆ ಹೋದದಿನದಿಂದಲೇ ಮತ್ತೆ ಧರ್ಮರಾಜನಿಗೆ ಬಂಧುನಾಶದ ಕ್ಲೇಶಸುತ್ತು ವರಿದಿತ್ತು. ಅನೇಕ ಜೀವಿಗಳನ್ನು ಹನನಮಾಡಿದ ದೋಷವನ್ನು ಕಳೆದುಕೊಳ್ಳಬೇಕಾದರೆ ಅಶ್ವಮೇಧ ಯಾಗ ಮಾಡಬೇಕು. ಅದನ್ನು ನಡೆಸಬೇಕಾದರೆ ಅಪಾರದ್ರವ್ಯ ಶೇಖರಣೆ ಆಗಬೇಕು. ಸಕಲರಾಜರೂ ಯುದ್ಧದಲ್ಲಿ ಸತ್ತು ಅವರ ಮಕ್ಕಳು ರಾಜ್ಯಭಾರ ಮಾಡುತ್ತಿದ್ದಾರೆ. ಎಲ್ಲರ ಬಳಿಯಲ್ಲೂ ದುರ್ಯೋಧನನು ಹಣವನ್ನು ಸುಲಿದು ಬರಿದು ಮಾಡಿ ಬಿಟ್ಟಿದ್ದಾನೆ. ಪಾಪ ರಾಜಕುಮಾರರು ತಮ್ಮ ರಾಜ್ಯರಕ್ಷಣೆಗೇ ಕಷ್ಟಪಡುತ್ತಿರುವಾಗ ಅವರಿಂದ ನಾವು ಕಪ್ಪ ವಸೂಲು ಮಾಡುವುದು ಧರ್ಮವಲ್ಲ. ದ್ರವ್ಯವೇ ಯಾಗಕ್ಕೆ ಮುಖ್ಯವಾದದ್ದು. ಯಥೇಚ್ಛವಾದ ಅನ್ನದಾನಾದಿಗಳು ಧನಧಾನ್ಯಾದಿಗಳೂ ಸಮೃದ್ಧಿಯಾಗಿ

ದೇವಬ್ರಹ್ಮಣರನ್ನು ತೃಪ್ತಿಪಡಿಸಬೇಕು ಎಂದು ಚಿಂತಿಸುವಾಗ ವೇದವ್ಯಾಸರು ಪ್ರತ್ಯಕ್ಷವಾಗಿ ಧರ್ಮರಾಜಾ! ಯಾಗಮಾಡಲಿಕ್ಕೆ ಆರ್ಥಿಕ ಅಡಚಣೆಗಾಗಿ ನೀನು ಚಿಂತಿಸಬೇಡ ನಿನಗೆ ಬೇಕಾಗುವಷ್ಟು ಹಣ ಹಿಮವತ್ಪರ್ವತದ ಶ್ರೇಣಿಯಲ್ಲಿ ಇರಿಸಿದ್ದೇನೆ. ಹಿಂದೆ ಶ್ರೀ ನಾರಾಯಣಮೂರ್ತಿ ಲೋಕವಿಡಂಬನೆಗಾಗಿ ಯಾಗ ಮಾಡಿದಾಗ ಅಲ್ಲಿ ಹೇರಳವಾದ ದ್ರವ್ಯ ಸಂಪತ್ತು ಉಳಿದಿತ್ತು. ಆದರಿಂದ ರುದ್ರಾದಿಗಳು ಶ್ರೀ ವಿಷ್ಣು ಪ್ರೀತ್ಯರ್ಥವಾಗಿ ಯಾಗಮಾಡಿದರು. ಆದರೂ ಇನ್ನು ದ್ರವ್ಯರಾಶಿ ಬೇಕಾದಷ್ಟು ಮಿಕ್ಕಿರಲು ಅದೇ ಜಾಗದಲ್ಲಿ ಮರುತ್ತರಾಜನೂ ಯಾಗ ಮಾಡಿದನು. ಆದರೂ ಇನ್ನು ಅಪಾರದ್ರವ್ಯರಾಶಿ ಅಲ್ಲಿ ಉಳಿದಿದೆ. ನೀನು ಆ ದ್ರವ್ಯಸಂಪತ್ತಿನಿಂದಯಾಗಮಾಡು'' ಎಂದರು.

''ಸ್ವಾಮಿ! ಆದ್ರವ್ಯ ನಾವು ಸಂಪಾದನೆ ಮಾಡಿದ್ದಲ್ಲ ಪರಸ್ವತ್ತು. ಅದರಿಂದ ಯಾಗ ಮಾಡಿದರೆ ನಮಗೇನು ಫಲ? ಎಂದನು.

ಆಗ ಭೀಮಸೇನನು ಅಣ್ಣಾ! ಯಜ್ಞದಲ್ಲಿ ಉಳಿದ ಉಚ್ಛಿಷ್ಟ ದ್ರವ್ಯ ರುದ್ರನಿಗೆ ಸಲ್ಲತಕ್ಕದ್ದು ನಿಜ. ಆದರೆ ಅದನ್ನು ರುದ್ರಾಂತರ್ಗತನಾದ ಶ್ರೀ ಪರಶುರಾಮನನ್ನು ಆರಾಧಿಸಿ ಅವರ ಅಪ್ಪಣೆಪಡೆದು ತಂದು ಆ ದೇವೋತ್ತಮನ ದುಡ್ಡಿನಿಂದ ಯಾಗಮಾಡಿ ಅವನಿಗೇ ಅರ್ಪಣ ಮಾಡಿದರೆ ದೋಷವಿಲ್ಲ. ಗುರುದ್ರವ್ಯ ಹಿರಿಯರ ದ್ರವ್ಯ ಪರದ್ರವ್ಯವಲ್ಲ. ರುದ್ರನು ಅರ್ಜುನನಿಗೆ ಗುರುವಾಗಿ ಅವನಿಗೆ ಪಾಶುಪತಾಸ್ತ್ರವನ್ನು ಅನುಗ್ರಹಿಸಿದ್ದಾನೆ. ಆದ್ದರಿಂದ ಯಾಗ ಮಾಡಿ ಉಳಿದ ದ್ರವ್ಯ ರುದ್ರ ಭಾಗವಾಗಿದ್ದರೂ ಗುರುವಿನ ದ್ರವ್ಯದಿಂದ ಯಾಗ ಮಾಡಿದರೆ ದೋಷವಿಲ್ಲ. ವೇದವಾಸ್ಯರು ನಮ್ಮ ಪಿತಾಮಹನಾಗಿದ್ದಾನೆ. ನಮ್ಮ ಮುತ್ತಾತನ ಆಸ್ತಿ ಮೊಮ್ಮಕ್ಕಳಾದ ನಮಗೆ ಪರದ್ರವ್ಯ ಆಗುವುದಿಲ್ಲ. ಶ್ರೀಕೃಷ್ಣ-ವೇದವ್ಯಾಸ-ಪರಶುರಾಮ ಹರಿಯ ಈ ತ್ರಿರೂಪಗಳೂ ನಮಗೆ ಮುಖ್ಯವಾದ ಆರಾಧನಾ ಮೂರ್ತಿಗಳಾಗಿದ್ದಾರೆ. ನಮಗೆ ದೇವೋತ್ತಮನಾದ ಸ್ವಾಮಿ ಅನುಗ್ರಹಮಾಡಿ ಸುಪ್ರೀತನಾದ್ದರಿಂದಲೇ ನಮ್ಮಿಂದ ಯಾಗ ಮಾಡಿಸಲು ದ್ರವ್ಯವನ್ನು ನೀಡಿದ್ದಾನೆ. ಅವನ ವಾಕ್ಯದಲ್ಲಿ ಸಂಶಯಪಟ್ಟರೆ ಘೋರಪಾಪಕ್ಕೊಳ್ಳಗಾಗಬೇಕಾಗುತ್ತದೆ.

ನಮಗೆ ಅಖಿಲ ಸಾಮ್ರಾಜ್ಯವನ್ನು ಕೊಟ್ಟು ನಮ್ಮ ಪ್ರತಿಹೆಜ್ಜೆಗೂ ಒದಗತಕ್ಕ ವಿಪತ್ತುಗಳನ್ನು ನಿವಾರಿಸಿ ಸದಾ ನಮ್ಮನ್ನು ಎಡಬಿಡದೆ ತಂದೆಗಿಂತಲೂ ಅದಿಕವಾಗಿ ರಕ್ಷಿಸುವ ಅವನ ಸ್ವತ್ತು ನಮಗೆ ಪರಸ್ವತ್ತಲ್ಲ.

ಸಕಲ ಚರಾಚರ ವಸ್ತುಗಳು ಅವನ ಆಧೀನವಲ್ಲವೇ? ಅವನು ಕರುಣಿಸಿದ ಭಾಗ್ಯದಿಂದ ಅವನನ್ನೇ ಭಜಿಸಿ ಅವನಿಗೆ ಅರ್ಪಣಮಾಡುವುದೇ ನಮ್ಮ ಧರ್ಮ ಎಂದನು.

ಧರ್ಮರಾಜನು ಭೀಮನ ಮಾತನ್ನು ಒಪ್ಪಿ ವೇದವ್ಯಾಸರ ಆಜ್ಞೆಯಂತೆ

ಭೀಮನೊಡಗೂಡಿ ವೇದವ್ಯಾಸರನ್ನು ಮುಂದೆ ಮಾಡಿಕೊಂಡು ಹಿಮವತ್ಪರ್ವತಕ್ಕೆ ಪೂಜೆ ಸಲ್ಲಿಸಲು ರಾಜಪರಿವಾರದೊಂದಿಗೆ ವೈಭವದಿಂದ ಹೊರಟನು.

ಹಿಮವತ್ಪರ್ವತ ಶ್ರೇಣಿಯಲ್ಲಿ ದ್ರವ್ಯರಾಶಿ ನೂರು ಯೋಜನ ಅಗಲ ನೂರು ಯೋಜನ ಉದ್ದದಷ್ಟು ವಿಸ್ತಾರವಾದ ಪ್ರದೇಶದ ತುಂಬ ರಾಶಿ ಬಿದ್ದಿತ್ತು. ಸಕಲ ಯಾಗಸಾಮಗ್ರಿಗಳು ಚಿನ್ನ ಬೆಳ್ಳಿಗಳಿಂದ ರಚಿಸಲ್ಪಟ್ಟು ಪ್ರಕಾಶಮಾನವಾಗಿ ಹೊಳೆಯುತ್ತಿದ್ದವು.

ವೇದವ್ಯಾಸರು ಧರ್ಮರಾಜನಿಗೆ ಎಲ್ಲವನ್ನೂ ತೋರಿಸಿ ರಾಜಾ! ಇವೆಲ್ಲವೂ ನಿನ್ನ ಯಜ್ಞಕಾರ್ಯಕ್ಕೆ ಉಪಯುಕ್ತವಾಗುವಂಥ ಶ್ರೇಷ್ಠ ಸಂಪತ್ತು. ಇವೆಲ್ಲವನ್ನು ನೀನು ತೆಗೆದುಕೊಂಡು ಹೋಗಿ ವೈಭವಯುಕ್ತವಾದ ಯಾಗವನ್ನು ಮಾಡಿ ಆನಂದ ಪಡು ಎಂದನು. ಆಗ ಧರ್ಮರಾಜನು ಧನಕನಕಾದಿ ಸಂಪತ್ತಿನ ರಾಶಿಗೆ ಷೋಡಶೋಪಚಾರಗಳ ಪೂಜೆ ನಡೆಸಿ ಚತುರಂಗ ಸೇನಾಸಮೇತವಾದ ವಾಹನಗಳ ಮೇಲೆ ಹೇರಿ ಅರಮನೆಗೆ ಕಳುಹಿಸುತ್ತಿದ್ದರೆ ಸುವರ್ಣಕಾಂತಿಯುತ-ನವರತ್ನರಚಿತವಾದ ವಸ್ತುಗಳ ಪ್ರಕಾಶ ಸಕಲ ದಿಕ್ಕುಗಳಿಗೂ ಆವರಿಸಿತು. ದೇವತೆಗಳೆಲ್ಲರೂ ಧರ್ಮರಾಜನಿಗೆ ಶ್ರೀಕೃಷ್ಣನ ಸಂಪತ್ತೇ ಪ್ರತ್ಯಕ್ಷವಾಗಿ ಬಳಿಯಲ್ಲಿರುವಾಗ ಏನು ಕಡಿಮೆ? ಎಂದು ಮಾತನಾಡಿಕೊಂಡು ಧರ್ಮರಾಜನ ಪುಣ್ಯವನ್ನು ಹೊಗಳಿ ಕೊಂಡಾಡುತ್ತಿದ್ದರು.

ಶ್ರೀಕೃಷ್ಣನು ಧರ್ಮರಾಜನ ಯಾಗಕ್ಕಾಗಿ ಕಳುಹಿಸಿದ ಸ್ವಾಗತವನ್ನು ಅಂಗೀಕಾರಮಾಡಿ ಆಗಲೇ ದ್ವಾರಕೆಯಿಂದ ಹಸ್ತಿನಾವತಿಗೆ ಹೊರಟನು. ಮಾರ್ಗದಲ್ಲಿ ಉದಂಕಮುನಿ ಶ್ರೀಕೃಷ್ಣನ ದರ್ಶನ ಪಡೆದು ಆನಂದದಿಂದ ಅರ್ಘಪಾದ್ಯಾದಿ ಪೂಜೆಗಳಿಂದ ಆರಾಧನೆಮಾಡಿದನು. ಆಗ ಶ್ರೀಕೃಷ್ಣನು ಉದಂಕಮುಗಳ ಅಭಿಲಾಸೆಯಂತೆ ಉದಂಕನು ಕೇಳಿದಾಗ ಮಳೆ ಸುರಿದು ನೀರುದೊರಕುವಂತೆ ಅವನಿಗೆ ವರವನ್ನು ಕರುಣಿಸಿ ಹಸ್ತಿನಾವತಿಗೆ ಬಂದನು.

ಅರಮನೆಯನ್ನು ಸ್ವಾಗತ ಸಮಾರಂಭದೊಡನೆ ಪ್ರವೇಶಿಸಿದೊಡನೆ ಅಂತಃಪುರದ ಕಡೆಯಿಂದ ಸ್ತ್ರಿಯರ ರೋದನ ಧ್ವನಿ ಕೇಳಿಸಿತು. ''ಸ್ವಾಮಿ!ಕೃಷ್ಣಾ! ನಮ್ಮ ವಂಶದ ಕುಡಿ ಉಳಿಸಿ ವೃದ್ಧಿಗೊಳಿಸು ಸ್ವಾಮಿ''ಎಂದು ಸುಭದ್ರಾದೇವಿ ಉತ್ತಾರದೇವಿಯರೆಲ್ಲರೂ ಕೃಷ್ಣನ ಪಾದಕ್ಕೆರಗಿ ಪ್ರಾರ್ಥಿಸ ತೊಡಗಿದರು. ಅಂದು ಗರ್ಭದಲ್ಲಿ ಬ್ರಹ್ಮಾಸ್ತ್ರಕ್ಕೆ ಸಿಕ್ಕು ಸಾಯಬೇಕಾಗಿದ್ದ ಶಿಶುವನ್ನು ಕೃಷ್ಣಾ ಉಳಿಸಿ ಇಂದುಕೊಲ್ಲುವನೇ: ಮಗು ಬ್ರಹ್ಮಾಸ್ತ್ರದ ಜ್ವಾಲೆಯಿಂದ ಎಚ್ಚರತಪ್ಪಿ ಬಿದ್ದಿತು. ಬ್ರಹ್ಮಾಸ್ತ್ರದ ಪ್ರಭಾವವನ್ನು ಮರೆಸಲಿಕ್ಕಾಗಿಯೇ ಶ್ರೀಕೃಷ್ಣ ಮಗು ಅಚೇತನ ವಾಗುವಂತೆ ಮಾಡಿ ತನ್ನ ಕರುಣಾದೃಷ್ಟಿಯಿಂದ ಅಭಿಮನ್ಯು ಕುಮಾರನನ್ನು ನೋಡಿ ಬ್ರಹ್ಮಾಸ್ತ್ರದ ಜ್ವಾಲೆಯನ್ನು ಶಾಂತಪಡಿಸಿ ಶಿಶುವನ್ನು ಕಾಪಾಡಿದನು.

ಅವೇಳೆಗೆ ಸಂಪತ್ತಿನ ಸಹಿತವಾಗಿ ಅರಮನೆಗೆ ಆಗಮಿಸಿದ ಅರಸು ಪರಿವಾರ

ವೆಲ್ಲವೂ ಅರಮನೆಯಲ್ಲಿ ಪುತ್ರೋತ್ಸವವಾದ ಸಂಗತಿಯನ್ನು ಅದನ್ನು ರಕ್ಷಿಸಿದ ಶ್ರೀ ಕೃಷ್ಣನ ಅನುಗ್ರಹವನ್ನು ತಿಳಿದು ಹರ್ಷೋತ್ಸಾಹದಿಂದ ಹಿಗ್ಗಿ ಶ್ರೀಕೃಷ್ಣನನ್ನು ಶುದ್ಧ ಭಕ್ತಿಯಿಂದ ಸ್ತುತಿಸಿ ದೇವನ ಆಜ್ಞೆಯಂತೆ ಸಮಸ್ತ ಬ್ರಹ್ಮಣರಿಗೂ ಯೋಗ್ಯವಾದ ದಾನಾದಿಗಳಿಂದಲೂ ಸ್ನಾನಾದಿಗಳಿಂದಲೂ ಮಂಗಳ ಕಾರ್ಯಗಳನ್ನು ನಡೆಸಿ ಶ್ರೀ ಕೃಷ್ಣನೆಂಬ ಮಹಾ ಆನಂದದ ರಾಶಿಯ ಮಧ್ಯದಲ್ಲಿ ಎಲ್ಲರೂ ನಲಿದಾಡುತ್ತಿದ್ದರು ಶ್ರೀಕೃಷ್ಣನು ಎಲ್ಲರನ್ನು ಆನಂದಪಡಿಸುತ್ತ ಅಶ್ವಮೇಧಯಾಗಕ್ಕೆ ಅಪ್ಪಣೆ ನೀಡಿ ವೇದವ್ಯಾಸನೊಡನೆ ಸಭಾಪತಿ ಆದನು. ದಿಗ್ವಿಜಯಕ್ಕೆ ಹೊರಡಲು ಧರ್ಮರಾಜನಿಂದ ತಾಂಬೂಲವನ್ನು ಸ್ವೀಕರಿಸಿ ಶ್ರೀಕೃಷ್ಣನ ಆಜ್ಞೆಯಂತೆ ಯಾಗಪಶುವನ್ನು ಬಿಟ್ಟು ಅರ್ಜುನ ಹೊರಟನು.

ಧರ್ಮರಾಜ ಆಗ ಅರ್ಜುನನನ್ನು ಕುರಿತು ಅರ್ಜುನಾ ದಿಗ್ವಿಜಯವನ್ನು ಸುಸೂತ್ರವಾಗಿ ನೆರವೇರಿಸಿಕೊಂಡುಬಾ ಯಾರನ್ನು ಕೊಲ್ಲಬೇಡ ಏಕೆಂದರೆ ಈಗಾಗಲೇ ಹದಿನೆಂಟು ಅಕ್ಷೋಹಿಣಿ ಸೈನ್ಯವನ್ನು ಕೊಂದಿದ್ದೇವೆ ಮೊದಲೇ ಕಷ್ಟನಷ್ಟಗಳಿಗೀಡಾದ ರಾಜರು ಮತ್ತೆ ಸಾವುನೊವುಗಳ ಸಂಕಟಕ್ಕೆ ಈಡಾಗುವುದು ಬೇಡ ವಿರೋಧ ಮಾಡಿ ಪ್ರತಿಭಟಿಸಿದವರನ್ನು ಬೆದರಿಕೆಯಿಂದ ಸೋಲಿಸಿ ಕಪ್ಪವಸೂಲು ಮಾಡಿ ಕೊಂಡು ಬಾ'' ಎಂದು ಹೇಳಿ ಕಳುಹಿಸಿದನು.

## ಮಣಿಪುರದಲ್ಲಿ ಮಗನೊಡನೆ ನಡೆದ ಸಮರ

ದಿಗ್ವಿಜಯಕ್ಕೆಹೊರಟ ಅರ್ಜುನನು ಸಮಸ್ತ ರಾಜರಿಂದಲೂ ಕಪ್ಪಕಾಣಿಕೆಗಳನ್ನು ಪಡೆದು ವಿಜಯಶಾಲಿಯಾಗಿ ಮಣಿಪುರಕ್ಕೆ ಬಂದನು. ಚಿತ್ರಾಂಗದೆಗೆ ತನ್ನ ಪತಿ ಅರ್ಜುನನು ದಿಗ್ವಿಜಯಾರ್ಥವಾಗಿ ಬಂದಿದ್ದಾನೆಂದು ತಿಳಿದು ಮಗನಾದ ಬಬ್ರುವಾಹನನನ್ನು ಕುರಿತು ''ಕುಮಾರ! ಪಾಂಡವರ ವಂಶದ ಹಸ್ತಿನವತಿಯ ಧರ್ಮರಾಜನು ಅಶ್ವಮೇಧಯಾಗ ಮಾಡುತ್ತಾನಂತೆ ಧರ್ಮರಾಜನ ಸಹೋದರ ಅರ್ಜುನ ನಿನಗೆ ತಂದೆ ಆದ್ದರಿಂದ ಅವರನ್ನುಆದರೋಪಚಾರಗಳಿಂದ ಸತ್ಕಾರಮಾಡಿ ಸಂತೋಷಪಡಿಸು''ಎಂದು ಹೇಳಿದ ತಾಯಿಯ ಮಾತಿನಂತೆ ವೀರಕುಮಾರನು ಅನೇಕ ಅಮೂಲ್ಯ ಉಡುಗರೆಯ ವಸ್ತುವಿನೊಂದಿಗೆ ಅರ್ಜುನನನ್ನು ಇದಿರ್ಗೊಂಡು ನಮಸ್ಕಾರ ಮಾಡಿ ತಂದೆಯನ್ನು ಆದರಿಸಲು ಬಂದಾಗ ಅರ್ಜುನನು ''ನೀನಾರು? ಎಂದು ಪ್ರಶ್ನೆ ಮಾಡಿದಾಗ ಬಬ್ರುವಾಹನನು ತನ್ನ ವೃತ್ತಾಂತದೊಡನೆ ನಿಮಗೆ ಪುತ್ರನಾಗಬೇಕು''ಎಂದು ಎಲ್ಲವನ್ನು ತಿಳಿಸಿದಾಗ ''ಎಲೋ ಬಾಲಕಾ!ನೀನು ನನ್ನ ಮಗನೇ ನಿಜವಾಗಿದ್ದಪಕ್ಷದಲ್ಲಿ ಹೀಗೆ ನನ್ನನ್ನು ನೋಡಲು ಬರುತ್ತಿರಲಿಲ್ಲ. ವೀರಯೋಧನಾಗಿಕ್ಷಾತ್ರ ವಿದ್ಯೆಯಿಂದನನ್ನನ್ನು ಸಂತೋಷಪಡಿಸಲು ಶಸ್ತ್ರಾಸ್ತ್ರಗಳಸಹಿತವಾಗಿ ಬಂದು ನಿನ್ನ ಪೌರುಷದ ವೀರವಾಣಿಗಳಿಂದ ನನ್ನನ್ನು ಪೂಜೆಮಾಡುತ್ತಿದ್ದ ನೀನು ವಿಲಾಸಿನೀ ಸ್ತ್ರೀಯರಂತೆ ಫಲಪುಷ್ಪಾದಿಗಳಿಂದೊಡಗೂಡಿ ಒಲುಮೆಯ ಮಾತಿನಿಂದ ಮೋಸ ಮಾಡಲು

ಬಂದಿರುವಿ''ಎಂದು ಅವನಿಗೆ ರಣರಸವನ್ನುಂಟುಮಾಡುವ ಮಾತಿನಿಂದ ಇರಿದನು.

ಬಭ್ರುವಾಹನನಿಗೆ ತಾಯಿ ಚಿತ್ರಾಂಗದೆ ಮಾತಿನಂತೆ ಈತನಿಗೆ ಮನ್ನಣೆಕೊಡಬೇಕೋ? ಅಥವಾ ಇವನ ಇಷ್ಟದಂತೆ ಹೋರಾಟಕ್ಕೆ ನಿಲ್ಲಬೇಕೋ? ಎಂಬ ಚಿಂತೆ ಹತ್ತಿತ್ತು.

ಆಗ ಮಲತಾಯಿಯಾದ ಉಲೂಪಿಯು ''ಪುತ್ರಾ! ನಿನ್ನ ತಂದೆಯ ಅಭಿಲಾಷೆಯಂತೆ ನೀನು ವೀರಕುಮಾರರಿಗೆ ಯೋಗ್ಯವಾದ ಪರಾಕ್ರಮ ಪುಷ್ಪವನ್ನೇ ನಿನ್ನ ತಂದೆಗೆ ಅರ್ಪಣಮಾಡಿ ಅವನ ವಾತ್ಸಲ್ಯಕ್ಕೆ ಪಾತ್ರನಾಗಿ ಪಿತೃವನ್ನು ಆನಂದಪಡಿಸಿ ಅವನ ಮಮತೆಯ ಮಾತುಗಳೆಂಬ ಅಮೃತಪಾನದಿಂದ ಕೀರ್ತಿವಂತನಾಗು''ಎಂದು ಪ್ರಚೋದನೆ ಮಾಡಿ ಯುದ್ಧಕ್ಕೆ ನಿಲ್ಲಿಸಿದಳು. ಬಭ್ರುವಾಹನನು ತೀವ್ರ ಯುದ್ಧ ಮಾಡುತ್ತದ್ದರೂ ಅರ್ಜುನನು ತನ್ನ ಕುಮಾರನ ಪರಾಕ್ರಮವನ್ನು ವೀರರ ಮಧ್ಯದಲ್ಲಿ ಪ್ರಕಾಶಪಡಿಸಬೇಕೆಂಬ ಧ್ಯೇಯದಿಂದ ತಾನು ಮೆಲ್ಲಮೆಲ್ಲನೆ ಯುದ್ಧವನ್ನು ಮಾಡುತ್ತಿದ್ದನು. ಬರಬರುತ್ತಾ ಬಭ್ರುವಾಹನನ ರಣೋತ್ಸಾಹವೃದ್ಧಿಯಾಗಿ ಒಂದು ಬಾಣವನ್ನು ಅಭಿಮಂತ್ರಿಸಿ ತಂದೆಗೆ ಪ್ರಯೋಗ ಮಾಡಿದಾಗ ಅರ್ಜುನ ಕೆಳಗೆ ಬಿದ್ದನು. ಜ್ಞಾನಶೂನ್ಯನಾಗಿ ಭೂಮಿಯ ಮೇಲೆ ಬಿದ್ದ ತಂದೆಯನ್ನು ನೋಡಿ ದುಃಖದಿಂದ ರೋಧಿಸುತ್ತ ತಂದೆಯನ್ನು ಕೊಂದ ಪಾಪಿಯಾದ ನನಗೆ ಪ್ರಾಣಾಂತಕವೇ ಸರಿಯಾದ ಶಿಕ್ಷೆ'' ಎಂದು ಸಂಕಲ್ಪಮಾಡಿ ದರ್ಭೆಯ ಮೇಲೆ ಪ್ರಾಯೋಪವೇಶ ಸಂಕಲ್ಪದಿಂದ ಮಲಗಿದನು. ಚಿತ್ರಾಂಗದೆ ಬಂದು ನೋಡಿದಳು. ಒಂದುಕಡೆ ಮಗ ಪ್ರಾಣವಾಯುವನ್ನು ಬಂಧಿಸಿ ಸಾಯಲು ಮಲಗಿದ್ದಾನೆ ಮತ್ತೊಂದು ಕಡೆ ಗಂಡ ಮಗನಿಂದ ಹೊಡಿಸಿಕೊಂಡು ಸತ್ತುಬಿದ್ದದ್ದಾನೆ ಅದನ್ನು ನೊಡಿದ ರಾಜಪುತ್ರಿ ಸಂಕಟ ಸಹಿಸಲಾರದವಳಾಗಿ ಉಲೂಪಿಯನ್ನು ಕುರಿತು ಎಲೇ ವಿಷಕನ್ಯೆ ನೀವು ವಿಷವನ್ನು ತುಂಬಿಕೊಂಡವರು ಆದ್ದರಿಂದಲೇ ನನ್ನ ಮಗನಿಗೆ ಕೆಟ್ಟ ಪ್ರಚೋದನೆಮಾಡಿ ಅವನ ಕೈಯಿಂದ ತಂದೆಯನ್ನು ಕೊಲ್ಲಿಸಿದೆ ಈಗ ಅವನು ಸಾಯುತ್ತಾನೆ ಇಂಥ ಘೋರ ದುಃಖವನ್ನು ಹೇಗೆ ಸಹಿಸಲಿ? ಅವರ ಜೊತೆಗೆ ನನ್ನನ್ನು ಕೊಂದುಬಿಡು'' ಎಂದು ಆಕ್ರೋಶದಿಂದ ಮಾತನಾಡುತ್ರಿದ್ದರೂ ಉಲೂಪಿ ಮಾತನಾಡದೆ ಕ್ಷಣಮಾತ್ರದಲ್ಲಿ ನಾಗಲೋಕಕ್ಕೆ ಹೋಗಿ ಸಂಜೀವಕರಣಿಯನ್ನು ತಂದು ಗಂಡನಿಗೆ ಸ್ಪರ್ಶಮಾಡಿದಾಗ ಅರ್ಜುನನು ಕಣ್ತೆರೆದೆದ್ದನು.

ಚಿತ್ರಾಂಗದೆಯು ಪತಿಗೆ ನಮಸ್ಕಾರಮಾಡಿ ಮಗನನ್ನು ಅವನಿಗೋಪ್ಪಿಸಿ ತಲೆ ತಗ್ಗಿಸಿ ನಿಂತಿರಲು ಉಲೂಪಿಯು ಆಗ ಚಿತ್ರಾಂಗದೆಯನ್ನು ಕುರಿತು ''ತಂಗೀ! ಬಭ್ರುವಾಹನನನ್ನು ತಂದೆಯೊಡನೆ ಯುದ್ಧಮಾಡಲು ಪ್ರಚೋದನ ಮಾಡಿದ್ದಕ್ಕೆ ಒಂದು ಬಲವಾದ ಕಾರಣವಿದೆ ಏನೆಂದರೆ ನಾನು ಪತಿಯನ್ನು ಕಳೆದುಕೊಂದ ದೌರ್ಭಾಗ್ಯಳಾದರೂ ವೈರಾಗ್ಯವನ್ನವಲಂಬಿಸದೆ ವೀರ ಪಾರ್ಥನನ್ನು ವರಿಸಬೇಕೆಂಬ ಆಕಾಂಕ್ಷೆ ಉಳ್ಳವಳಾಗಿ ಅವನನ್ನು ಕಾಡಿಬೇಡಿ ವರಿಸಿ ಒಬ್ಬ ಪುತ್ರನನ್ನು ಹಡೆದನು. ಇದರಿಂದ ನಮ್ಮ ಲೋಕದವರು ನನ್ನನ್ನು ಬಹಿಷ್ಕರಿಸಿ ಅಶ್ಲೀಲಳೆಂದು ಹೊರಗೆ ಹಾಕಿದರು. ಆಗ ನಾನು ಸ್ವರ್ಗಲೋಕಕ್ಕೆ ಹೋಗಿ ನನ್ನ ಮಾವನಾದ

ದೇವೇಂದ್ರನನ್ನು ಮೊರೆಹೊಕ್ಕು ಅವರ ಆಶ್ರಯದಲ್ಲಿದ್ದೆನು. ಆದಾದ ಕೆಲವು ದಿನಗಳನಂತರ ಕುರುಪಾಂಡವರಿಗೆ ಯುದ್ಧನಡೆಯಿತು ಆಯುದ್ಧದಲ್ಲಿ ನನ್ನ ಮಗ ಇರಾವಂತನೂ ಸತ್ತು ಹೋದನು. ನಾನು ಪುತ್ರಶೋಕ ತಪ್ತಳಾಗಿರುವಾಗ ಒಂದು ದಿನ ದೇವತೆಗಳೆಲ್ಲರೂ ಸಭೆ ಸೇರಿಸಿ ಅರ್ಜುನನನ್ನು ಬಹುವಾಗಿ ನಿಂದಿಸುತ್ತಿದ್ದರು. ಭೀಷ್ಮ,ದ್ರೋಣ ಮೊದಲಾದ ಗುರುಹಿರಿಯರನ್ನು ಮೋಸದಿಂದ ಕೊಂದನು ಕರ್ಣನನ್ನು ಕೊಂದಿದ್ದು ದುರ್ಯೋಧನ ದುಶ್ಯಾಸನಾದಿ ವೀರರನ್ನು ಯುದ್ಧದ ಧರ್ಮವನ್ನು ಬಿಟ್ಟು ಅನೀತಿಯಿಂದ ಕೊಂದ ಅರ್ಜುನನಿಗೆ ಪರರಾಜರ ಕೈಲಿಸೋಲುಂಟಾಗಲಿ''ಎಂದು ಶಾಪ ಕೊಟ್ಟರು.

ದೇವತೆಗಳ ದೂಶಣೆ ಶಾಪ ಎಲ್ಲವನ್ನು ಕೇಳಿದ ನನಗೆ ಬಹಳ ದುಃಖವಾಯಿತು. ದೇವತೆಗಳೆಲ್ಲರನ್ನುಕುರಿತು ನೀವೆಲ್ಲರೂ ಅರ್ಜುನನನ್ನು ವೃಥಾನಿಂದಿಸಿ ಶಾಪಕೊಟ್ಟಿದ್ದೀರಿ. ಅವನಿಗೆ ದೇವೋತ್ತನಾದ ಶ್ರೀಕೃಷ್ಣನೆ ಮಾರ್ಗದರ್ಶಕನಾಗಿ ಎಲ್ಲವನ್ನೂ ಸ್ವಾಮಿಯೇ ಮಾಡಿಸಿರುವಾಗ ಅರ್ಜುನನ್ನೇಕೆ ನಿಂದಿಸಿದ್ದೀರಿ?ಎಂದು ನಾನು ದುಃಖದಿಂದ ಕೇಳಲು ದೇವತೆಗಳು ಆಗ ನನ್ನನ್ನು ಕುರಿತು ''ಉಲೂಪಿ! ಅರ್ಜುನನು ಶ್ರೀ ಕೃಷ್ಣನ ಮಹತ್ಕೃಪೆಯಿಂದ ಮಹಾವೀರರನ್ನು ಗೆದ್ದನು. ಅವನಿಂದ ಶ್ರೀಕೃಷ್ಣನು ತಾನೇ ಎಲ್ಲವನ್ನುಮಾಡಿಸಿದ್ದಾನಾದರು ಅರ್ಜುನನು ಅಜ್ಞಾನದಿಂದ ತಾನೇಶತೃಪಕ್ಷದ ಹನ್ನೊಂದು ಅಕ್ಷೋಹಿಣಿ ಸೇನೆಯನ್ನು ನಾಶಪಡಿಸಿದ ಧೀರನೆಂಬ ಅಹಂಭಾವದಿಂದಿದ್ದಾನೆ. ಅವನಿಂದ ಅಂಥ ಅಜ್ಞಾನವನ್ನು ತೊಲಗಿಸಲಿಕ್ಕಾಗಿ ನಾವು ದೂಶಣೆ ಮಾಡುತ್ತಿದ್ದೇವೆ. ಈ ಮಾತನ್ನು ಸ್ವಾಮಿಯೇ ನಮ್ಮಿಂದ ಆಡಿಸುತ್ತಿದ್ದಾನೆ'' ಎಂದರು.

ಆಗ ನಾನು ವೀರಪಾರ್ಥನು ಮೂರುಲೋಕದ ಗಂಡ ಎಂಬ ಪ್ರಖ್ಯಾತ ಕೀರ್ತಿ ಪಡೆದವನು ಇಂಥ ಪ್ರಸಿದ್ದ ಪರಾಕ್ರಮಿ ಪರರಾಜರ ಕೈಲಿ ಸೋತರೆ ಅವನ ಹೆಸರು ಕೆಡುತ್ತದೆ. ಕೀರ್ತಿಗೆ ಕುಂದು ಬರುತ್ತದೆ. ಎಂಬ ಭಾವದಿಂದ ನಾನು ದೇವತೆಗಳೇ ನಿಮ್ಮ ಶಾಪವೂ ಸತ್ಯವಾಗುವಂತೆ ಅರ್ಜುನನ ಪರಾಕ್ರಮಕ್ಕೆ ಕುಂದು ಬರದಂತೆ ನಾನು ತಂದೆ ಮಗನಿಗೆ ಯುದ್ಧಸಂಭವಿಸುವಂತೆ ಮಾಡುತ್ತೇನೆ. ಅರ್ಜುನನ್ನು ಮಗನಕೈಲಿ ಸೋಲುವಂತೆ ನೀವು ಶ್ರೀಕೃಷ್ಣನಿಂದ ಮಾಡಿಸಿ ಅರ್ಜುನನ ಕೀರ್ತಿ ಅಮರವಾಗುಳಿಯುವಂತೆ ಮಾಡಿ ಕಾಪಾಡಿರಿ ಎಂದು ಕೇಳಿಕೊಂಡು ಕಾರ್ಯಮಾಡಿಸಿದೆನು.

ಈಗ ಮಗನ ಕೈಲಿ ಸೋತ ಅರ್ಜುನನ ಕೀರ್ತಿ ಅಮರವಾಯಿತು''ಎಂದು ಹೇಳಿದಳು. ಆಗ ಅರ್ಜುನನು ''ಉಲೂಪಿ! ನೀನು ನನ್ನ ಕೀರ್ತಿಗೆ ಕುಂದು ಬರಬಾರದೆಂಬ ಧ್ಯೇಯದಿಂದ ಉಪಕಾರ ಮಾಡಿರುವಿ''ಎಂದು ಹೊಗಳಿ ಚಿತ್ರಾಂಗದ ಉಲೂಪಿ ಇಬ್ಬರನ್ನೂ ಯಾಗಕ್ಕೆ ಬರಲು ಕರೆದು ಬಭ್ರುವಾಹನನನ್ನು ಜೊತೆಯಲ್ಲಿ ಕರೆದುಕೊಂಡು ಹಸ್ತಿನಾವತಿಗೆ ಹೊರಟಾಗ ಪಾಂಡ್ಯದೇಶದರಸನಾದ ಶೂರಸೇನ ಮಹಾರಾಜನು ಒಪ್ಪಿಸಿದ ಕಪ್ಪವನ್ನು ಸ್ವೀಕಾರ ಮಾಡಿ

ದ್ವಾರಾವತಿಗೆ ಹೊರಟನು.

ದ್ವಾರಾವತಿಯ ಯಾದವ ವೀರರು ಅರ್ಜುನ ಬಂದಿದ್ದಾನೆ ಎಂದು ತಿಳಿದು ನಮ್ಮ ಸುಭದ್ರಾದೇವಿಯನ್ನು ಅಪಹರಿಸಿಕೊಂಡು ಹೋದ ತ್ರಿದಂಡ ಸನ್ಯಾಸಿ ಈಗ ದಿಗ್ವಿಜಯಕ್ಕೆ ಬಂದಿದ್ದಾನೆ. ನಾವು ಅವನ ಯಾಗಪಶುವನ್ನು ಕಟ್ಟಿಹಾಕಿ ನಮ್ಮ ಸುಭದ್ರಾನ್ನ ತಂದುಕೊಟ್ಟು ಪಶುವನ್ನು ಬಿಡಿಸಿಕೊಂಡು ಹೋಗು'' ಎಂದು ಹೇಳಿ ಅವನ ಮುಖ ಭಂಗಮಾಡಿ ಕಳುಹಿಸೋಣ'' ಎಂದು ಮಾತನಾಡಿಕೊಂಡು ಕುದುರೆ ಕಟ್ಟಿದ್ದರು. ಆಗ ಅರ್ಜುನನು ವಸುದೇವನಲ್ಲಿ ಗುರುಭಾವವಿಟ್ಟು ಅವರ ಸಂಗಡ ಯುದ್ಧ ಮಾಡಲಿಲ್ಲ. ಶ್ರೀಕೃಷ್ಣನ ಬಂಧುಗಳನ್ನು ವಿರೋಧಮಾಡಿದರೆ ಶ್ರೀಕೃಷ್ಣನಿಗೆ ದ್ರೋಹಮಾಡಿದಂತಾಗುತ್ತದೆಂಬ ಭಾವದಿಂದ ಯುದ್ಧಕ್ಕೆ ಮನಗೊಡದೆ ವಸುದೇವನ ಬಳಿಗೆ ಹೋಗಿ ನಿನ್ನ ಮೊಮ್ಮಕ್ಕಳು ನನ್ನನ್ನು ಕಳ್ಳಸನ್ಯಾಸಿ ಎಂದು ಹೀಯಾಳಿಸಿ ನನ್ನ ಕುದುರೆಯನ್ನು ಕಟ್ಟಿಹಾಕಿದ್ದಾರೆ'' ಎಂದು ಹೇಳಿದನು. ವಸುದೇವನು ಎಲ್ಲರನ್ನು ಕರೆಸಿಕೊಂಡು ಈತನು ಶ್ರೀಕೃಷ್ಣ ಪ್ರೀತಿಪಾತ್ರನಾದವನು ಇವನ ಯಾಗಪಶುವನ್ನು ಕಟ್ಟಿ ಯುದ್ಧಕ್ಕೆ ಕರೆದರೆ ಶ್ರೀಕೃಷ್ಣನಿಗೆ ನಿಮ್ಮೆಲ್ಲರನ್ನು ಸುಮ್ಮನೆ ಬಿಡತಕ್ಕವನಲ್ಲ. ಪಾಂಡವರು ನಮಗೆ ಹೊರಗಿನವರಲ್ಲ ಶ್ರೀಕೃಷ್ಣನಿಗೆ ಬೇಕಾದವರೊಡನೆ ನೀವೂ ದ್ವೇಶಮಾಡಬಾರದು ಬಿಟ್ಟುಬಿಡಿರಿ'' ಎಂದು ಹೇಳಿ ಬಿಡಿಸಿದನು. ಅರ್ಜುನನು ಅಲ್ಲಿಂದ ಹೊರಟು ಹಸ್ತಿನಾವತಿಗೆ ಶುಭ ಮೂಹರ್ತದಲ್ಲಿ ಬಂದನು. ಧರ್ಮರಾಜನು ದಿಗ್ವಿಜಯ ಮುಗಿಸಿ ಬಂದ ಅರ್ಜುನನನ್ನು ಆಲಂಗಿಸಿ ಆನಂದ ಪಡಿಸಿದನು.

ಕೃಷ್ಣಾ! ಅರ್ಜುನನಿಗೆ ಪ್ರವಾಸ ಮಾಡಲಿಕ್ಕೆ ಏನಾದರೂ ಒಂದು ಕಾರಣ ಒದಗುತ್ತಲೇ ಇರುತ್ತದೆ. ಕಾರಣವೇನು? ಎಂದು ಕೇಳಿದನು. ಆಗ ಕೃಷ್ಣನು ನಗುತ್ತ ಧರ್ಮರಾಜಾ! ಪಾರ್ಥನ ಹಿಮ್ಮಡಿ ಬಹಳ ದೊಡ್ಡದಾಗಿದೆ ಆದ್ದರಿಂದ ಅವನಿಗೆ ಪ್ರವಾಸ ಸದಾ ಮೇಲಿಂದ ಮೇಲೆ ಒದಗುತ್ತದೆ . ಎಂದು ಹೇಳಿದನು. ಧರ್ಮರಾಜನು ಕೃಷ್ಣನ ಬಳಿ ಇದ್ದರೆ ಒಂದೊಂದು ಕ್ಷಣವನ್ನು ಧರ್ಮ ರಹಸ್ಯದ ಜ್ಞಾನಾನಂದದಲ್ಲೇ ಕಳೆಯಬೇಕೆಂಬ ಆಕಾಂಕ್ಷೆಯವನಾದ್ದರಿಂದ ದ್ರೌಪದಿ ಧರ್ಮರಾಯನು ಶ್ರೀಕೃಷ್ಣನನ್ನು ಪ್ರಶ್ನೆಗಳ ಸುರಿಮಳೆಗೆ ಸೆಳೆಯದಂತೆ ತಪ್ಪಿಸಿ ಮುಂದಿನ ಕಾರ್ಯ ಬಹಳವಿರುವುದರಿಂದ ತಂಡ ತಂಡವಾಗಿ ಬರುತ್ತಿದ್ದ ಋಷಿ ವರ್ಗದವರು ರಾಜರುಗಳು-ರಾಜರ್ಷಿಗಳೆಲ್ಲರ ಸ್ವಾಗತ ಸಂಭ್ರಮ ನಡೆಸಲು ಕೃಷ್ಣನನ್ನು ಮುಂದುಮಾಡಿ ಕಳುಹಿಸಿದಳು. ಯಾಗವು ಆರಂಭವಾಗಿ ತ್ರಿರೂಪ ನಾರಾಯಣನಿಂದ ಯಜ್ಞವು ಬಹಳ ರಮಣೀಯವಾಗಿ ನಡೆಯುತ್ತಿತ್ತು.

ಯಾಗಭವನದಲ್ಲಿ ದೇವತೆಗಳು ಗಂಧರ್ವರು-ಮನುಷ್ಯೋತ್ತಮರೆಲ್ಲರೂ ತಂತಮ್ಮ ಪತ್ನಿಯರ ಸಹಿತವಾಗಿ ಬಂದು ತಾರತಮ್ಯನುಸಾರ ಕುಳಿತಿದ್ದರೆ ಆ ಯಾಗ ಭವನ ಬ್ರಹ್ಮದೇವರ ಸಭೆಯಂತೆ ವಿರಾಜಿಸುತ್ತಿತ್ತು. ಅನೇಕ ವೈಷ್ಣವೋತ್ತಮರು ಅಮೂಲ್ಯವಾದ ತತ್ವಜ್ಞಾನದ

ಧರ್ಮಸೂಕ್ಷ್ಮಗಳನ್ನು ತಿಳಿಯಬೇಕೆಂಬ ಹಂಬಲಿಕೆಯಿಂದ ಅಲ್ಲಿಗೆ ಬಂದಿದ್ದರು. ದೇವತೆಗಳಿಂದ ತುಂಬಿದ ಆ ಪರಮಶ್ರೇಷ್ಟಕರವಾದ ಪುಣ್ಯಧಾಮದಲ್ಲಿ ತ್ರಿರೂಪಿ ನಾರಾಯಣನಿಂದ ಹೊರ ಸೂಸಿಬರುವ ತತ್ವಾಮೃತವನ್ನು ಪಾನಮಾಡಿ ಅಸುರ ಪೀಡೆಯಿಂದ ಬಿಡಿಸಿಕೊಂಡು ಪವಿತ್ರರಾದರು. ಭೀಮಸೇನನು ಅಸಂಖ್ಯಾತ ಜನರಿಗೂ ಅವರವರ ಇಷ್ಟಾನುಸಾರ ಭಕ್ಷಭೋಜ್ಯಾದಿಗಳ ಊಟವನ್ನು ನೀಡಿ ಎಲ್ಲರನ್ನು ಸಂತೃಪ್ತಿಗೊಳಿಸಿದನು. ಬ್ರಾಹ್ಮಣರು, ಸುಮಂಗಳಿಯರಿಗೆ ಅವರವರ ಯೋಗ್ಯತೆಗನುಗಣುವಾದ ಮಂಗಳಕರವಾದ ಉಡುಗೂರೆ ಉತ್ಸವಗಳಿಂದ ಆನಂದಪಡಿಸಿದನು. ಹೋಮಧೂಮದ ಪರಿಮಳ. ಸುಮಂಗಳೆಯರು ಲೇಪನಮಾಡಿಕೊಂಡು ಗಂಧ-ಕಸ್ತೂರಿ ಪುನಗು ಸುಗಂಧ ಪುಷ್ಪಗಳ ಪರಿಮಳಗಳನ್ನು ತುಂಬಿಕೊಂಡು ಬಂದ ವಾಯುದೇವರು ಎಲ್ಲರ ಮನಸ್ಸನ್ನು ಆಹ್ಲಾದಗೊಳಿಸುತ್ತಿದ್ದರು. ಯಾಗದ ವಿರಾಮದ ಕಾಲಗಳಲ್ಲಿ ಪ್ರತಿದಿನವೂ ಬೇರೆಬೇರೆ ರಮ್ಯ ವನಗಳಲ್ಲಿ ಶಾಸ್ತ್ರಾರ್ಥಗಳ ಬಗೆಬಗೆಯ ತರ್ಕವಿತರ್ಕಗಳ ಚರ್ಚೆ. ಭಗವಂತನ ಗುಣಕಥನಗಳು . ಧರ್ಮದ ವಾಕ್ಪ್ರವಾಹಗಳು. ಮನರಂಜನೆಯ ಸುಸಂಕೃತ ಸಂಗೀತ ನರ್ತನಾದಿಗಳು. ಒಂದಾದ ಮೇಲೊಂದು ಕಣ್ಣುಕಿವಿಗಳಿಗೆ ಆಪ್ಯಾಯಮಾನವಾದಂಥ ಕಾರ್ಯಕ್ರಮಗಳನ್ನು ನಡೆಸುತ್ತಿದ್ದರು.

ಧರ್ಮರಾಜನ ಯಜ್ಞವನ್ನು ಶ್ರೀನಾರಾಯಣನೇ ತ್ರಿರೂಪಗಳಿಂದಲೂ ಎಲ್ಲರನ್ನು ಆನಂದಪಡಿಸುತ್ತ ಭೀಮಸೇನನೊಡನೆ ನಡೆಸಿದ್ದ ಕಾರಣ ಹಿಂದೆ ಶ್ರೀರಾಮಚಂದ್ರನು ಮಾಡಿದ ಯಾಗ- ಬ್ರಹ್ಮದೇವರು ಮಾಡಿದ ಯಾಗ ದೇವೇಂದ್ರನು ಮಾಡಿದ ಯಾಗಗಳಿಗೆ ಹೋಲಿಸುತ್ತ ಧರ್ಮರಾಜನನ್ನು ದೇವತೆಗಳು ಹೊಗಳಿದರು.

ಹೀಗೆ ಒಂದು ದಿನಕ್ಕಿಂತಲೂ ಒಂದು ದಿನ ಅಧಿಕ ರೀತಿಯ ವೈಭವದಿಂದ ನಡೆಸುತ್ತಿದ್ದರು. ಯಜ್ಞವು ಸಮಾಪ್ತವಾದ ನಂತರ ಪಾಂಡವರು ತಮ್ಮ ಸಮಸ್ತ ಸಾಮ್ರಾಜ್ಯವನ್ನು ವಿಪ್ರರಿಗೆ ದಾನಮಾಡಿದರು. ದ್ರೌಪದಿಯು ತನ್ನ ಮಾಂಗಲ್ಯ ಸೂತ್ರ ಒಂದನ್ನುಳಿಸಿಕೊಂಡು ಸಕಲ ರತ್ನಾಭರಣಗಳನ್ನು ಮುತ್ತೈದೆಯರಿಗೆ ದಾನಮಾಡಿದರು. ಪಾಂಡವರು ಸ್ವಾಮೀ ಇದೆಲ್ಲವೂ ನೀನೇಕೊಟ್ಟ ಭಾಗ್ಯ ನಿನಗೇ ಅರ್ಪಣ ಮಾಡಿದ್ದೇನೆ'' ಎಂದು ಛತ್ರಚಾಮರಾದಿಗಳನ್ನೂ ದಾನಮಾಡುತ್ತಿರಲು.

ಆಗ ಬ್ರಾಹ್ಮಣರೆಲ್ಲರೂ ಧರ್ಮರಾಜನನ್ನು ಕುರಿತು. ಧರ್ಮರಾಜಾ! ನಮಗೆ ರಾಜಯೋಗವಾದ ವಸ್ತುಗಳಿಂದ ಏನು ಪ್ರಯೋಜನ? ಧರಣೀಪತಿ ನೀನು ಆದ್ದರಿಂದಲೇ ಸ್ವಾಮಿ ನಿನಗೆ ಸಕಲಸಂಪತ್ತನ್ನು ಕೊಟ್ಟು ರಾಜ್ಯಪರಿಪಾಲನೆ ಮಾಡು'' ಎಂದು ಆಜ್ಞೆಮಾಡಿದ್ದಾನೆ. ನಮ್ಮ ತಪೋಸಾಧನೆಗೆ ಆಶ್ರಯದಾತನಾಗಿ ಪ್ರಜಾರಕ್ಷಣೆಯ ಧರ್ಮ ನಿನ್ನ ಕರ್ತವ್ಯ ಆದ್ದರಿಂದ ಇದೆಲ್ಲವನ್ನು ನಾವು ನಿನಗೇ ಶ್ರೀಶನಾಜ್ಞೆಯಂತೆ ಕೊಟ್ಟಿದ್ದೇವೆ'' ಎಂದು ಹೇಳಿದರು. ವೇದವ್ಯಾಸರು ನೀವು ವಿಪ್ರವಾಕ್ಯದಂತೆ ನಡೆದಾಗಲೇ ಸ್ವಾಮಿ ಸುಪ್ರೀತನಾಗುತ್ತಾನೆ. ನೀವು

ರಾಜ್ಯವನ್ನು ಧರ್ಮದಿಂದ ಆಳಿದರೆ ಅದೇ ನೀವು ಪ್ರಜೆಗಳಿಗೆ ಗೋಬ್ರಾಹ್ಮಣರಿಗೆ ನೀಡಿದ ಮಹಾದಾನ ಎಂದು ಹೇಳಿದನು. ವೇದವ್ಯಾಸರು ತಮಗೆ ಅರ್ಪಿತವಾದ ಅಪಾರ ದ್ರವ್ಯವನ್ನು ಕುಂತಿಗೆ ನೀಡಿ ನೀನು ಇದರಿಂದ ಪುಣ್ಯಸಾಧನದ ಸಧರ್ಮಗಳನ್ನಾಚರಿಸಿ ಜನ್ಮಸಾರ್ಥಕಪಡಿಸಿಕೊ'' ಎಂದು ಹೇಳಿದರು.

ನಂತರ ದ್ರೌಪದಿಯೇ ಮೊದಲಾದ ರಾಜವನಿತೆಯರನ್ನು ಕುರಿತು ನೀವು ನಿಮ್ಮ ಶುಭಕರವಾದ ಮಂಗಳಾಂಗಗಳನ್ನು ಆಭರಣಗಳಿಂದ ಅಲಂಕರಿಸಿಕೊಂಡು ಲಕ್ಷ್ಮೀದೇವಿಯರ ಆವೇಶದಿಂದ ಶೋಭಿಸಿರಿ ಎಂದು ಆಶೀರ್ವದಿಸಿ ಎಲ್ಲರಿಗೂ ರತ್ನಾಭರಣಗಳನ್ನು ಕೊಟ್ಟರು. ಹೀಗೆ ಧರ್ಮರಾಜನ ಯಾಗದ ವೈಖರಿ ಆನಂದಮಯವಾಗಿ ನೆರವೇರಿತು.

## ಮುಂಗುಸೀವೇಷದ ದೈತ್ಯ

ದೇವತೆಗಳು ಋಷಿಗಳು ಧರ್ಮರಾಜನ ಯಾಗದ ವೈಭವವನ್ನು ಕೊಂಡಾಡುತ್ತ ವಿಮಾನಗಳಲ್ಲಿ ಕುಳಿತು ಮಹತ್ತಾಗಿ ಮಾತನಾಡಿಕೊಂಡು ಹೋಗುವುದನ್ನು ದುರ್ಯೋಧನನ ಮಿತ್ರ ಕ್ರೋಧ ಎಂಬ ದೈತ್ಯನು ಕೇಳಿ ಅವನನ್ನು ಎಲ್ಲರೂ ದೋಷಿ ಎಂದು ನಿಂದಿಸಿ ತ್ಯಜಿಸುವಂತೆ ಮಾಡಬೇಕೆಂಬ ದುರ್ಬುದ್ಧಿಯಿಂದ ಚಿನ್ನದ ವರ್ಣದ ಚರ್ಮದ ಹೊದಿಕೆಯನ್ನು ಅರ್ಧದೇಹಕ್ಕೆ ಮುಚ್ಚಿಕೊಂಡು ಪ್ರವೇಶಮಾಡಿದನು. ಆ ಮುಂಗುಸಿಯು ಎಲ್ಲರೂ ಕೇಳುವಂತೆ ಯಾಗಮಾಡಿಸಿದವರನ್ನೂ ಯಾಗಮಾಡಿದವರನ್ನು ಹೊಗಳುವ ದೇವತೆಗಳನ್ನು ನಿಂದಿಸುತ್ತ ಸಕ್ತು ಪ್ರಸ್ತನೆಂಬ ಹೆಸರಿನ ಬ್ರಾಹ್ಮಣನನ್ನು ಬಾರಿಬಾರಿಗೂ ಹೊಗಳಿ ಕೊಂಡಾಡುತ್ತಿತ್ತು. ಆಗ ಕೇಳಿದ ದೇವತೆಗಳು ವಿಪ್ರರು ''ಮುಂಗುಸೀ! ನೀನು ಹೊಗಳುತ್ತಿರುವ ಆ ಬ್ರಾಹ್ಮಣ ಯಾರು? ಎಲ್ಲಿದ್ದಾನೆ? '' ಎಂದು ಕೇಳಿದರು.

ಮುಂಗುಸಿ ನಿಮಗೆಲ್ಲರಿಗೂ ಆ ವಿಪ್ರವರನ ಸಮಾಚಾರ ಕೇಳಬೇಕೆಂಬ ಕುತೂಹಲ ಇದ್ದರೆ ಕೇಳಿರಿ ಸಕ್ತುಪ್ರಸ್ಥನೆಂಬ ವಿಪ್ರವರನ್ನು ತನ್ನ ಮಡದಿ ಮಗ ಸೊಸೆಯರೊಂದಿಗೆ ಆಶ್ರಮವಾಸಿಯಾಗಿ ಶಿಲೋಂಚನ ವೃತ್ತಿಯಿಂದ ಜೀವನ ನಡೆಸುತ್ತಿದ್ದನು. ಹೀಗಿರಲು ಒಂದು ದಿನ ಧರ್ಮರಾಯನು ಬ್ರಾಹ್ಮಣ ವೇಷ ಧರಿಸಿ ಅವನ ಬಳಿಗೆ ಬಂದರೆ ಅತಿಥಿಗೆ ತಾನು ಶಿಲೋಂಚನ ವೃತ್ತಿಯಿಂದ ತಂದಿದ್ದ ಗ್ರಾಸವೆಲ್ಲವನ್ನು ಸಂತೋಷದಿಂದ ದಾನಮಾಡಿದನು. ಆ ಬ್ರಾಹ್ಮಣನು ಪುಣ್ಯದಲ್ಲಿ ಹದಿನಾರನೇ ಒಂದು ಭಾಗದ ಪುಣ್ಯವನ್ನು ಧರ್ಮರಾಜ ಈ ಯಾಗದಿಂದ ಪಡೆದಿಲ್ಲ'' ಎಂದನು.

ಆಗ ಎಲಾ ಮುಂಗುಸೀ ನಮ್ಮ ಧರ್ಮರಾಜನ ಯಾಗಕ್ಕಿಂತಲೂ ಆ ಬ್ರಾಹ್ಮಣನ ಅತಿಥಿ ಸತ್ಕಾರವೇ ಶ್ರೇಷ್ಠವೆಂದು ಯಾವ ಪ್ರಮಾಣದಿಂದ ಹೇಳುತ್ತಿ? ಎಂದು ಕೇಳಿದರು. ಮುಂಗುಸಿಯು ಆಗ ಪ್ರಮಾಣ ಪ್ರತ್ಯಕ್ಷವಾಗಿಯೇ ತೋರಿಸುತ್ತೇನೆ ನೋಡಿರಿ ಆ ವಿಪ್ರವರನು

ಬಂದ ಅತಿಥಿಗೆ ಪಾದ ಪ್ರಕ್ಷಾಳನೆ ಮಾಡಿದ್ದಾಗ ಆ ಪಾದೋದಕದಲ್ಲಿ ನಾನು ಹೊರಳಾಡಿದಾಗ ನನ್ನ ಅರ್ದ ದೇಹಕ್ಕೆ ಮಾತ್ರ ಆ ಪುಣ್ಯತೀರ್ಥ ಸೋಂಕಿದ್ದರಿಂದ ಅಷ್ಟು ಮಾತ್ರ ಅಚ್ಚ ಬಂಗಾರದಂತೆ ಪ್ರಕಾಶಮಾನವಾಯಿತು.

ಆದರಂತೆ ನನ್ನ ದೇಹದ ಇನ್ನರ್ಧ ಭಾಗವೂ ಸುವರ್ಣವರ್ಣದಿಂದ ರಂಜಿಸಲೆಂಬ ಭಾವದಿಂದಲೂ ನನ್ನ ಉಳಿದ ಪಾಪದ ಮಾಲಿನ್ಯವು ನಿವಾರಣೆ ಆಗಿ ಪರಿಶುದ್ದವಾಗಲೆಂಬ ಆಸೆಯಿಂದಲೂ ಅನೇಕ ಪುಣ್ಯತೀರ್ಥಗಳಲ್ಲಿ ಮುಳುಗಿದೆನು. ಅನೇಕ ತಪಸ್ವಿಗಳ ಪಾದ ಧೂಳಿಯಲ್ಲಿ ಹೊರಳಾಡಿದೆನು. ಆದರೂ ನನ್ನ ಆಸೆ ಈಡೇರದೆ ನನ್ನ ಅರ್ಧ ದೇಹದ ಪಾಪ ಶೇಷ ಹಾಗೆಯೇ ಉಳಿದಿದೆ. ಈಗ ತ್ರಿರೂಪದಿಂದಲೂ ನಾರಾಯಣನು ಧರ್ಮರಾಯನ ಯಾಗವನ್ನು ಮಾಡಿಸುತ್ತಿರುವುದರಿಂದ ಯಾಗ ಶಾಲೆಯು ಪವಿತ್ರಹೊಂದಿದೆ. ಆ ಪಾದ ಧೂಳಿ ಸೋಂಕಿದರೆ ನನ್ನ ದೇಹ ಬಂಗಾರಮಯ ಆಗಬಹುದೆಂಬ ಕುತೂಹಲದಿಂದ ಬಂದು ಹೊರಳಾಡಿದರೆ ಏನೂ ಆಗಲಿಲ್ಲ ಆದ್ದರಿಂದ ಪಾಂಡವರ ಯಾಗಕ್ಕಿಂತಲೂ ಆ ಬ್ರಾಹ್ಮಣನ ದಾನಯಜ್ಞವೇ ಶ್ರೇಷ್ಟವೆಂದು ಹೇಳುತ್ತಿದ್ದೇನೆ ಎಂದಿತು. ಆಗ ಋಷಿಗಳೆಲ್ಲರೂ ಆ ಮಾಯಾ ರೂಪಿನ ಮುಂಗುಸಿಯನ್ನು ಕುರಿತು ಎಲಾ ದೈತ್ಯಾಧಮಾ! ನಿನ್ನ ಪಾಪ ದೇಹ ಈ ಪುಣ್ಯಕ್ಷೇತ್ರಕ್ಕೆ ಬಂದರೆ ಬಂಗಾರವಾಗವುದಿಲ್ಲ. ಭೀಮಸೇನನ ಧರ್ಮತೇಜಸ್ಸಿನಿಂದ ಸುಟ್ಟು ಕರುಕಲಾಗುತ್ತದೆ ನೀನು ಸಾಕ್ಷಾತ್ತಾಗಿ ನಾರಾಯಣನೇ ನಡೆಸಿರುವ ಯಾಗವನ್ನು ಕನಿಷ್ಟವೆಂದು ತೆಗಳಿ ಹರಿನಿಂದನೆ ಗುರುನಿಂದನೆ ಮಾಡಿದ ಪಾಪದಿಂದ ಅಂಧಂತಮಸ್ಸಿಗೆ ಹೋಗುತ್ತಿ ಎಂದು ಶಾಪ ಕೊಟ್ಟರು. ಆಗ ಆ ದೈತ್ಯನು ಹೆದರಿ ಓಡಿದನು. ಕ್ರೋಧನಾಮ ದೈತ್ಯನು ಮುಂಗುಸೀರೂಪದಿಂದ ಬಂದು ಪಾಂಡವರನ್ನು ದೂಶಿಸಿದ ಕಾರಣವೇನೆಂದರೆ ಈತನು ಪೂರ್ವದಲ್ಲಿ ಜಮದಗ್ನೀ ಋಷಿಗಳು ಪಿತೃಶ್ರಾದ್ಧ ಮಾಡುವಾಗ ಅವರ ಧರ್ಮ ಕಾರ್ಯಕ್ಕೆ ವಿಘ್ನ ಮಾಡಬೇಕೆಂದು ಯೋಚಿಸಿ ಮುಂಗುಸೀರೂಪದಿಂದ ಹೋಗಿ ಹಾಲನ್ನು ಎಂಜುಲುಮಾಡಿದನು. ಅದನ್ನು ಅರಿಯದೆ ಅದೇ ಹಾಲಿನಿಂದ ಪರಮಾನ್ನವನ್ನು ಮಾಡಿ ಪಿತೃಸಮಾರಾಧನೆ ಮಾಡಿದಾಗ ಪಿತೃಗಳು ಉಚ್ಚಿಷ್ಟವನ್ನು ಸ್ವೀಕಾರ ಮಾಡದೆ ಕ್ರೋಧನ ದೃತನಿಗೆ ನೀನು ಮುಂಗುಸೀ ರೂಪದಿಂದಲೇ ಇದ್ದು ಮುಂದೆ ಪಾಂಡವರು ಸಕಲ ದೇವತಾ ಪರಿವಾರದೊಂದಿಗೆ ದೇವೋತ್ತಮನ ಆಶ್ರಯಪಡೆದು ಅಶ್ವಮೇಧಯಾಗವನ್ನು ಮಾಡಿದಾಗ ಅಲ್ಲಿಗೆ ಹೋಗಿ ಅವರನ್ನು ನಿಂದಿಸಿ ಆ ಮಹಾಪಾಪದಿಂದ ಅಂಧಂತಮಸ್ಸಿಗೆ ಹೋಗಿ ಸೇರು'' ಎಂದು ಶಾಪಕೊಟ್ಟಿದ್ದ ಕಾರಣ ಪಾಂಡವರ ನಿಂದನೆಗಿಂತಲೂ ಘೋರವಾದ ಪಾಪವಿಲ್ಲವಾದ ಕಾರಣ ಘೋರ ನರಕವನ್ನುಸೇರಿದನು.

ಆಗ ಧರ್ಮರಾಜನು ಸಕ್ತುಪ್ರಸ್ಥನೆಂಬ ಬ್ರಾಹ್ಮಣನ ಯಜ್ಞ ಅಶ್ವಮೇಧ ಯಾಗಕ್ಕಿಂತಲೂ ಶ್ರೇಷ್ಟವೇ? ಎಂದು ಚರ್ಚೆಮಾಡಿದನು. ಆಗ ಶ್ರೀಕೃಷ್ಣ ವೇದವ್ಯಾಸ ಪರಶುರಾಮ

ರೂಪಗಳಿಂದ ವಿರಾಜಿಸುತ್ತಿದ್ದ ಸ್ವಾಮಿ ''ಧರ್ಮರಾಜಾ! ಸಕ್ತುಪ್ರಸ್ಥನೆಂಬ ಬ್ರಾಹ್ಮಣನು ವೈರಾಗ್ಯದಿಂದ ನಿರ್ಲಿಪ್ತಭಾವವನ್ನು ಹೊಂದಿ ಸರ್ವಸ್ವವನ್ನು ಹರಿ ಸಮರ್ಪಣೆಮಾಡಿದ ತಪಸ್ವಿ ನಿಜವಾದರೂ ನಿನ್ನ ಹೋಲಿಕೆಗಾಗಲಿ ನಿನ್ನ ತೆಗಳಿಕೆಗಾಗಲಿ ಆತ ಅರ್ಹನಲ್ಲ ಪಾಂಡವರು ದೇವತಾಂಶರು. ಧರ್ಮಸಂರಕ್ಷಣೆಗಾಗೆಯೇ ಭಗವತ್ಕಾರ್ಯ ಸಾಧನೆಯ ಸಂಕಲ್ಪದಿಂದ ಅವತರಿಸಿದವರು. ಸಾಕ್ಷಾತ್ತಾಗಿ ನಾರಾಯಣನನ್ನೇ ಮಾರ್ಗದರ್ಶನ ಮಾಡಿಕೊಂಡು ಸತ್ಯದ ಹೆಜ್ಜೆ ಹಾಕತಕ್ಕವರು. ನಿಮಗಿಂತಲೂ ಶ್ರೇಷ್ಠರಿದ್ದಾರೆಂದು ಅಜ್ಞಾನದಿಂದ ತಿಳಿದವರು ಅಂಧಂತಮಸ್ಸಿಗೆ ಸೇರುತ್ತಾರೆ. ಅಶ್ವಮೇಧಯಾಗಕ್ಕಿಂತಲೂ ದೊಡ್ಡಯಾಗವಿಲ್ಲ. ಭೀಮಸೇನಗಿಂತಲೂ ನಾರಾಯಣ ದೊಡ್ಡವನು. ನಾರಾಯಣ ರಮಾದೇವಿಯರಿಗಿಂತಲೂ ದೊಡ್ಡವನು. ರಮಾನಾರಾಯಣರ ಪ್ರಧಾನ ದೂತನಾದವನು ಬೀಮಸೇನನೇ ಆಗಿದ್ದಾನೆ'' ಎಂದು ಹೇಳಿ ಧರ್ಮರಾಯನ ಸಂದೇಹ ನಿವಾರಿಸಿ ಆನಂದಪಡಿಸಿದನು.

ಭೀಮಸೇನನು ಸಕಲ ಸಧರ್ಮ ಕರ್ಮಗಳಿಗೂ ತಾನೇ ಪ್ರತಿನಿಧಿಯಂತೆ ನಿಂತು ಪ್ರತಿ ಹೆಜ್ಜೆ ಪ್ರತಿ ನುಡಿಗಳಲ್ಲೂ ಶ್ರೀಹರಿಯೇ ಸರ್ವಸ್ವತಂತ್ರನೆಂದು ಅವನೇ ಸರ್ವ ಶಕ್ತನೆಂದೂ ಹೇಳುವ ತಾತ್ವಿಕ ವಿಚಾರಗಳನ್ನು ಕಾರ್ಯತಃ ತೋರಿಸುತ್ತ ಧರ್ಮಸೂಕ್ಷ್ಮಗಳ ರಹಸ್ಯವೆಲ್ಲವನ್ನು ಮನಮನಗಳಲ್ಲಿ ಬಿತ್ತರಿಸಿ ಅಧರ್ಮದ ಮಾಲಿನ್ಯವನ್ನು ನಿವಾರಿಸಿದನು.

## ಭೀಮಸೇನನ ತಾತ್ವಿಕ ಭೇರಿ

ಧರ್ಮರಾಜನು ಸಕಲ ಜನರ ಕಷ್ಟಸುಖಗಳನ್ನು ಅಭಿಮಾನದಿಂದಲೂ ಆದರದಿಂದಲೂ ಕೇಳುತ್ತ ಅವರ ಅಭಿಲಾಷೆಯನ್ನು ಈಡೇರಿಸುತ್ತಿದ್ದನು. ಹೀಗಿರುವಲ್ಲಿ ಒಬ್ಬ ಬ್ರಾಹ್ಮಣನು ಅರ್ದ ರಾತ್ರಿ ವೇಳೆಯಲ್ಲಿ ಬಂದು ಪ್ರಭೊ ನಾನು ಯಾಗಮಾಡಬೇಕೆಂಬ ಸಂಕಲ್ಪ ಮಾಡಿದ್ದೇನೆ ನನಗೆ ದ್ರವ್ಯಸಹಾಯ ಮಾಡಬೇಕು ಎಂದು ಪ್ರಾರ್ಥಿಸಿದನು. ಧರ್ಮರಾಜನು ಆತನನ್ನು ಕುರಿತು ಈಗ ದೈತ್ಯ ಸಂಚಾರ ಸಮಯವಾದ್ದರಿಂದ ಈ ಸಮಯ ಅಶುಭವಾದ್ದರಿಂದ ದ್ರವ್ಯಾಗಾರದ ಬೀಗಮುದ್ರೆಯನ್ನು ತೆಗೆಯಬಾರದು. ನಾಳೆಯ ದಿನ ಬೆಳಿಗ್ಗೆ ಬಂದು ನಿನಗೆ ಬೇಕಾಗುವಷ್ಟು ಹಣವನ್ನು ತೆಗೆದುಕೊಂಡು ಹೋಗು'' ಎಂದು ಹೇಳಿದರು.

ಬ್ರಾಹ್ಮಣನು ಅರಸರ ಮುಂದೆ ಅದಿಕ ಪ್ರಸಂಗತನ ಮಾಡಬಾರದೆಂದು ಮಾತನಾಡದೆ ಹೊರಟುಹೋದನು. ನಂತರ ಭೀಮಸೇನನ ಬಳಿಗೆ ಬಂದು ತನ್ನ ಅರಿಕೆಯನ್ನು ಪ್ರಾರ್ಥಿಸಿಕೊಂಡಾಗ ಪ್ರಧಾನಿಯಾದ ಭೀಮನು ಅರಸರ ಬಳಿ ಹೋಗಿ ಕೇಳು'' ಎಂದನು.

ನಾನು ಮೊದಲು ಅವರ ಬಳಿಗೆ ಹೋಗಿ ಕೇಳಿಕೊಂಡೆನು. ರಾಜರು ''ಈಗ ದ್ರವ್ಯಾಗಾರವನ್ನು ತೆಗೆಯಬಾರದು ಇದು ರಾಕ್ಷಸ ಸಂಚಾರದ ಸಮಯ ನಾಳೆ ಬಾ'' ಎಂದು ಹೇಳಿದಾಗ ಭೀಮನು ಆ ತಕ್ಷಣವೇ ತನ್ನ ರತ್ನಕಡಗವನ್ನು ಕಳಚಿ ಬ್ರಾಹ್ಮಣನಿಗೆ

ದಾನಮಾಡಿ ನಿನಗೆ ಇದರಿಂದ ಎಷ್ಟುಬೇಕೋ ಅಷ್ಟು ದ್ರವ್ಯ ಸಿಗುತ್ತದೆ ನಿನ್ನ ಕಾರ್ಯ ಮಾಡಿಕೊ'' ಎಂದು ಹೇಳಿ ನಂತರ ಭೀಮಸೇನನು ದೂತರಿಂದ ಸಂತೋಷದ ಭೇರಿಯನ್ನು ಬಾರಿಸಿದನು. ಆಗ ಧರ್ಮರಾಜನು ಆಶ್ಚರ್ಯದಿಂದ ಇದೇನು ಅರ್ದ ರಾತ್ರಿಯ ಸಮಯದಲ್ಲಿ ಬಾರಿಬಾರಿಗೂ ಸಂತೋಷದ ಭೇರಿಯನಾದ ಕೇಳಿ ಬರುತ್ತಿದೆಯಲ್ಲಾ ಎಂಬ ಸಂದೇಹದಿಂದ ದೂತರನ್ನು ಭೀಮನ ಬಳಿಗೆ ಹೋಗಿ ಕಾರಣ ತಿಳಿದುಬನ್ನಿ ಎಂದು ಹೇಳಿ ಕಳುಹಿಸಿದರು.

ಆಗ ದೂತನು ಬಂದು ಭೀಮಸೇನನ್ನು ವಿಚಾರಿಸಲು ''ನಮ್ಮ ಅಣ್ಣ ಬಂದ ಯಾಚಕ ಬ್ರಾಹ್ಮಣನಿಗೆ ನಾಳೆ ಬಾ ಕೊಡುತ್ತೇನೆ'' ಎಂದು ಹೇಳಿದನೆಂದು ತಿಳಿದು ನನ್ನ ಅಣ್ಣನ ಆಯಸ್ಸು ನಾಳೆಯವರಗೂ ಸ್ಥಿರವೆಂಬ ನಂಬಿಕೆ ನಮ್ಮ ಅಣ್ಣನಿಗಿರುವುದು ನನಗೆ ಸಂತೋಷದಾಯಕ ಸಮಾಚಾರವಾದ್ದರಿಂದ ಸಂತೋಷ ಭೇರಿ ಹೊಡಿಸಿದೆನು'' ಎಂದು ಹೇಳಿದನು. ಧರ್ಮರಾಜನು ಭೀಮಸೇನನ ಧರ್ಮದ ಪ್ರಜ್ಞೆಗೆ ಪ್ರಶಂಸಿಸಿದನು.

ಧರ್ಮರಾಜನು ಭೀಮಸೇನನ ಧರ್ಮದ ದೃಷ್ಟಿಯನ್ನೇ ಅನುಸರಿಸಿ ತನ್ನ ಧ... ಹೆಜ್ಜೆ ಹಾಕುತ್ತ ರಾಜ್ಯಪಾಲನೆ ಮಾಡುತ್ತಿದ್ದನು.

## ಪವಮಾನನಿಂದ ಪರಲೋಕ ಚಿಂತನಕ್ಕೆ ಪರಿವರ್ತನೆ

ಪಾಪ ಧೃತರಾಷ್ಟ್ರನು ಶತಪುತ್ರರನ್ನು ಕಳೆದುಕೊಂಡು ಅತೀವ ದುಃಖದಿಂದ ಪರಿತಪಿಸುತ್ತ ಕಾಲಕಳೆಯುತ್ತಿದ್ದನು. ಧರ್ಮರಾಜನು ಅವನಿಗೆ ಯಾವ ವಿಧದಲ್ಲೂ ವ್ಯಥೆ ಆಗಬಾರದೆಂದು ರಾಜವನಿತೆಯರನ್ನು ದೊಡ್ಡಪ್ಪನಿಗೆ ಸೇವೆಗಾಗಿ ವ್ಯವಸ್ಥೆ ಮಾಡಿದನು.

ಅರಮನೆಯ ಸುಖಮಯವಾದ ರಾಜಭೋಗದ ಸುಖದಿಂದ ಸಕಲ ದುಃಖಗಳನ್ನು ಮರೆತು ನಿಶ್ಚಿಂತೆಯಿಂದಿದ್ದನು. ಹೀಗೆ ಪರಚಿಂತನೆಯನ್ನೇ ಮರೆತು ತಾತ್ವಿಕ ಸುಖದಲ್ಲಿ ಮೈಮರೆತಿರುವುದನ್ನು ನೋಡಿದ ಭೀಮಸೇನನು ಇವನಿಗೆ ಇಹಸುಖದಲ್ಲಿ ಅಭಿರುಚಿ ಇಲ್ಲದಂತೆ ಮಾಡಬೇಕಾದರೆ ತೆಗಳಿಕೆಯ ಮಾತುಗಳನ್ನಾಡಿ ಮನ ಮರುಕದಿಂದ ವೈರಾಗ್ಯಭಾವ ಬರುವಂತೆ ಮಾಡಬೇಕು ಎಂದು ಭಾವಿಸಿ ಅವನಿಗೆ ಕೇಳುವಂತೆ ಕುರುಡುದೊರೆಯ ಮನಸ್ಸೂ ಕುರುಡು ಅವನಿಗೆ ಧರ್ಮಾದರ್ಮಗಳ ಚಿಂತನೆಯೇ ಇಲ್ಲದಿರುವುದು ಬಹಳ ಆಶ್ಚರ್ಯ. ಇಷ್ಟುದಿನವೂ ಮಕ್ಕಳ ಮೇಲಿನ ಮೋಹದಿಂದ ಮತ್ತನಾಗಿ ತನ್ನ ನಿಜಸುಖವನ್ನೇ ಅರಿಯದೆ ಸುಳ್ಳುಸುಖಗಳನ್ನೇ ಶಾಶ್ವತವೆಂಬ ನಂಬಿಕೆಯಿಂದ ಮೋಸ-ವಂಚನೆ ಕಪಟಗಳಲ್ಲಿ ಮನವಿರಿಸಿ ಸುಖಲೋಲುಪನಾಗಿ ಆಯಸ್ಸನ್ನು ವ್ಯರ್ಥಮಾಡಿಕೊಂಡನು. ಈಗಲಾದರೂ ವೈರಾಗ್ಯದಿಂದ ಪಾರಮಾರ್ಥಿಕ ಚಿಂತನ ಮಾಡದೆ ವಿಷಯ ಸುಖದಲ್ಲಿ ಮಗ್ನನಾಗಿ ಮರುಳಾಗಿದ್ದಾನೆ. ಮಹಾಸ್ವಾರ್ತ ಸುಖಿಯಾದ ಈತನು ಹದಿನೆಂಟು ಅಕ್ಷೋಹಿಣಿ ಸೇನಾನಿಕರಕ್ಕೂ ಮೃತ್ಯುದೇವತೆಯಾಗಿ ನಾಶಮಾಡಿದನು. ದುರ್ಮೋಹಕ್ಕೊಳಗಾಗಿ ಮಕ್ಕಳ ಕುಮಾರ್ಗವನ್ನು

ಖಂಡಿಸದೆ ಇಡೀ ರಾಷ್ಟ್ರಕ್ಕೂ ಘಾಸಿ ಉಂಟಾಗುವಂತೆ ಮಾಡಿದನು. ಇಂಥ ದೊಡ್ಡ ಶಿಖರದೋಪಾದಿಯ ಪಾಪಗಳನ್ನು ಕಳೆದುಕೊಳ್ಳಲಿಕ್ಕಾಗಿ ಈತನು ಎಂಥ ಪ್ರಾಯಶ್ಚಿತ್ತವನ್ನು ಅನುಭವಿಸಿದರೂ ಸಾಲದು. ಎಷ್ಟು ಪುಣ್ಯಕಾರ್ಯ ಮಾಡಿದರೂ ಸಾಲದು. ಅಂಥ ಪಾಪದ ರಾಶಿಯನ್ನು ತನ್ನಲ್ಲಿತುಂಬಿಕೊಂಡಿದ್ದರೂ ಚಪಲ ಚಿತ್ತನಾಗಿ ವಿಷಯದಾಸೆಗೊಳಗಾಗಿದ್ದಾನೆ. ಅವನ ಸೇವಾ ಶಿಶ್ರೂಷೆಗಳನ್ನು ಯಾರು ಮಾಡಬಾರದೆಂದು ಎಲ್ಲರಿಗೂ ಹೇಳಿದನು.

ಧೃತರಾಷ್ಟ್ರನಿಗೆ ಯಾರೂ ದ್ರವ್ಯವನ್ನು ಅವನಿಗೆ ಕೊಡದಂತೆ ಮಾಡಿದಾಗ ಧೃತರಾಷ್ಟ್ರನು ಚಿಂತೆಯಿಂದ ಈ ಭೀಮ ನನ್ನ ಮಕ್ಕಳೊಬ್ಬರನ್ನು ಉಳಿಸದೆ ಕೊಂದು ಈಗ ನನ್ನನ್ನು ಜೀವಸಹಿತವಾಗಿ ಕೊಲ್ಲುತ್ತಿದ್ದಾನೆ'' ಎಂದು ದುಃಖಪಡುವುದನ್ನು ಭೀಮ ತಿಳಿದನು.

ಭೀಮನನ್ನು ದ್ವೇಶ ಮಾಡಿದವರನ್ನು ಸ್ವಾಮಿ ಅಂಧಂತಮಸ್ಸಿಗೆ ಹಾಕುತ್ತಾನೆ ಎಂಬುದನ್ನು ಧೃತರಾಷ್ಟ್ರನು ತಿಳಿಯದೆ ನನ್ನನ್ನು ವೃಥಾ ದ್ವೇಶಿಸುತ್ತಾನೆ. ಧೃತರಾಷ್ಟ್ರನು ಶುಭ ಜೀವಿ. ವೇದವ್ಯಾಸರ ಅನುಗ್ರಹದಿಂದ ಜನಿಸಿದವನು. ಅವನಿಗೆ ಅಜ್ಞಾನವಿಲ್ಲ. ತನ್ನ ಮಕ್ಕಳ ಮರಣಕ್ಕೆ ಶ್ರೀಕೃಷ್ಣನೇ ಕಾರಣಕರ್ತ ಎಲ್ಲರೂ ಅಸ್ವತಂತ್ರರು. ಸರ್ವೋತ್ತಮ ಹರಿಸಂಕಲ್ಪದಂತೆ ಎಲ್ಲವೂ ನಡೆಯುತ್ತದೆ'' ಎಂದು ಅವನು ತಿಳಿದಿದ್ದಾನೆ. ಆದರೂ ವ್ಯಾಮೋಹದಿಂದ ನನ್ನನ್ನು ದೂಶಿಸುವ ಇವನನ್ನು ಪರಿವರ್ತಿಸಬೇಕಾದರೆ ನನ್ನ ವಾಗ್ವಜ್ರದಿಂದ ಇವನಲ್ಲಿ ಸೇರಿರುವ ವ್ಯಾಮೋಹ ಕತ್ತರಿಸಿ ತೆಗೆಯಬೇಕೆಂದು ಸಂಕಲ್ಪಿಸಿ ಭೀಮನು ಧರ್ಮತೇಜಸ್ಸಿನಿಂದ ಪ್ರಜ್ವಲಿಸುತ್ತ ಕಲ್ಲು ಸಕ್ಕರೆ ದೃಷ್ಟಿಯಲ್ಲಿ ಗಟ್ಟಿಯಾಗಿದ್ದರೂ ಒಳಗೆ ಸವಿ ತುಂಬಿಕೊಂಡಿರುವಂತೆ ಈ ಕೇಳುವ ಅಜ್ಞಾನಿಗಳಿಗೆ ಸಿಡಿಲಿನಂತೆ ಘೋರವಾಗಿ ಕೇಳಿಸುತ್ತಿತ್ತು.

ನನ್ನ ತಮ್ಮಂದಿರೇ! ಕೇಳಿರಿ ಧೃತರಾಷ್ಟ್ರನನ್ನು ನೀವೆಲ್ಲರೂ ಕರುಣದಿಂದ ನೋಡುತ್ತಿದ್ದೀರಿ ಅಲ್ಲವೇ? ಆದರೆ ನನ್ನ ತೋಳುಗಳು ನನ್ನ ಶತ್ರುಗಳನ್ನು ಹನನ ಮಾಡಲಿಕ್ಕೆ ಧೃತರಾಷ್ಟ್ರನ ಹರಿನಿಂದಕರಾದ ನೂರುಜನ ಮಕ್ಕಳನ್ನೂ ಕೊಲ್ಲುವುದಕ್ಕೆ ನನಗೆ ಸಹಕರಿಸಿ ಉಪಕಾರ ಮಾಡಿದೆವು. ಈ ನನ್ನ ದೈತ್ಯ ಸಂಹಾರ ಕಾರ್ಯ ಸಾಧನೆಯ ತೋಳುಗಳಿಗೆ ಶ್ರೀಕೃಷ್ಣನ ಕೃಪೆ ಮಹತ್ತಾಗಿರುವುದರಿಂದ ಗಂಧ-ಕಸ್ತೂರಿ ಮೊದಲಾದ ಲೇಪನಗಳಿಂದ ಬಹುಮಾನಿಸುತ್ತೇನೆ. ಎಂದು ಅಟ್ಟಹಾಸದಿಂದ ಬಲ ಭುಜಗಳಲ್ಲಿ ಶ್ರೀಕೃಷ್ಣನ ಅನುಸಂಧಾನವಿಟ್ಟು ಪ್ರಶಂಸೆಮಾಡುತ್ತಲಿದ್ದನು.

ಆಗ ಮಾದ್ರೀಪುತ್ರರು ಭೀಮಸೇನನ ಮಾತನ್ನು ಕೇಳಿ ಅಣ್ಣನ ಮಾತಿನಲ್ಲಿ ಅಣುಮಾತ್ರವೂ ಅಸತ್ಯವಿಲ್ಲದ ಧರ್ಮದ ತತ್ತ್ವಸಾರ ತುಂಬಿರುತ್ತದೆ. ಭೀಮಸೇನ ಆದ್ದರಿಂದಲೇ ಗುರು ಎನಿಸಿಕೊಂಡಿದ್ದಾನೆ. ಧೃತರಾಷ್ಟ್ರನ ಮನಸ್ಸನ್ನು ಪಕ್ವ ಮಾಡಲಿಕ್ಕಾಗಿ ತನ್ನ ತೋಳ್ಬಲಕ್ಕೆ ಕಾರಣಕರ್ತನಾದ ಶ್ರೀಕೃಷ್ಣನನ್ನು ಕೊಂಡಾಡುತ್ತಿದ್ದಾನೆ ಎಂದು ಕೊಂಡು ''ಭೀಮಾ ಸತ್ಯವಾದ ಮಾತನ್ನೇ ಹೇಳುತ್ತಿರುವಿ. ನಿನ್ನ ಬಲಿಷ್ಠ ಭುಜಗಳಲ್ಲಿ ಅಸಮಾನವಾದ ಒಂದು ವಿಶೇಷ

ಶಕ್ತಿ ನೆಲಸಿರುವುದರಿಂದಲೇ ಸಕಲ ಪಾಪಿಗಳನ್ನು ಧ್ವಂಸಗೈದು ನಿರ್ನಾಮ ಮಾಡಿ ನಿನ್ನ ಸ್ವಾಮಿಗೆ ಅರ್ಪಣ ಮಾಡಿರುವಿ ಎಂದು ಹೊಗಳಿದರು.

ಭೀಮಸೇನನ ಸಿಡಿಮದ್ದಿನಂತೆ ಕಿರಿನುಡಿಗಳು ಸಕಲ ದಿಕ್ಕುಗಳಲ್ಲೂ ವ್ಯಾಪಿಸಿತು. ಆಗ ಧೃತರಾಷ್ಟ್ರನಿಗೆ ಆ ಮಾತಿನ ಇಂತಹ ವೇದನೆಯನ್ನು ಸಹಿಸಿಕೊಳ್ಳಲಾರದೆ ಸಂಕಟಪಡುತ್ತ ಕುಸಿದನು. ಇನ್ನು ಬದುಕಿದ್ದಷ್ಟೂ ಬೇಗೆ ಅಧಿಕವಾಗುತ್ತದೆಂಬ ವೈರಾಗ್ಯ ತಲೆದೋರಿತು.

ಆಗ ಭೀಮಸೇನನ ಸೂಚನೆಯಂತೆ ವಿದುರನು ಧೃತರಾಷ್ಟ್ರನ ಬಳಿಗೆ ಬಂದು ಅವನನ್ನು ಸಾಂತ್ವನ ವಚನಗಳಿಂದ ಸಂತೈಸಿದಾಗ ಧೃತರಾಷ್ಟ್ರನು ವಿದುರನನ್ನು ಆಲಂಗಿಸಿಕೊಂಡು ದುಃಖದಿಂದ ರೋದಿಸತೊಡಗಿದನು.

## ವಿದುರನ ಸದುಪದೇಶ

ಆಗ ವಿದುರನು ಧೃತರಾಷ್ಟ್ರಾ! ನೀನು ಇಂಥ ದುರ್ಮುಹೂರ್ತದಲ್ಲೂ ದುಶ್ಕಾಮನೆಗಳ ಸೆರಗನ್ನು ಬಿಡದೆ ಭದ್ರವಾಗಿ ಹಿಡಿದು ಲೌಕಿಕ ಸುಖಗಳ ದಾಸನಾಗಿ ಹಂಬಲಿಸಿ ಹಾತೊರಿಯುತ್ತಿರುವಿ. ಕಿವಿಯಲ್ಲಿ ಆಪ್ಯಾಯಮಾನವಾಗುವಂಥ ಆದರ ನುಡಿಗಳನ್ನೇ ಕೇಳುತ್ತಿರಬೇಕು. ಪ್ರತಿಯೊಬ್ಬರೂ ನನ್ನನ್ನು ಹೊಗಳುತ್ತಲಿರಬೇಕು. ಕಾಲಕಾಲಕ್ಕೆ ಸವಿಯೂಟದ ರಸಾನುಭವ ಆಗುತ್ತಿರಬೇಕು. ಇನ್ನು ಬಹಳ ದಿನಗಳು ನಾನು ಬದುಕಿದ್ದು ದೇಹ ಸೌಖ್ಯ ಅನುಭವಿಸಬೇಕೆಂಬ ಆಸೆಗಳು ನಿನ್ನನ್ನು ಅವಲಂಬಿಸಿ ನಿನ್ನನ್ನು ಪರಚಿಂತನದ ಕಡೆಗೆ ಬಿಡದೆ ಬಂದಿಸಿಬಿಟ್ಟಿದೆ. ಆದ್ದರಿಂದಲೇ ನೀನು ಇನ್ನು ಈ ರಾಜನ್ನಕ್ಕೆ ರಾಜವೈಭವಕ್ಕೆ ಸುಖಭೋಗಾದಿಗಳಿಗೆ ಅಸಹ್ಯಪಡೆದೆ ಆನಂದದಿಂದ ಅನುಭವಿಸುತ್ತಿರುವಿ. ನೀನು ಅನುಭವಿಸುತ್ತಿರುವುದು ಆನಂದ ಸುಖವಲ್ಲ ದುಃಖದ ನರಕ ಸಂಕಟವೆಂದು ನೀನು ಅರಿತಿದ್ದರೆ ನಿನಗೆ ಅಂದೇ ವಿರಕ್ತಿ ಬರುತ್ತಿತ್ತು. ಭೀಮಸೇನನು ನಿನ್ನನ್ನು ಮಹಾ ಪಾಪಿ ಎಂಬ ತುಚ್ಛ ಭಾವನೆಯಿಂದ ಕಾಣುತ್ತಿರುವುದರಿಂದ ಅವನ ಕಣ್ತಪ್ಪಿಸಿ ನಿನಗೆ ಅನ್ನಹಾಕುತ್ತಿದ್ದರೆ. ನಾಯಿಗಿಂತಲೂ ಕಡೆಯಾಗಿ ನಿನ್ನನ್ನು ಕಂಡರೂ ಅವರ ಅನ್ನಕ್ಕೆ ಕೈಒಡ್ಡಿ ಅವರ ಅಶ್ರಯದಲ್ಲಿ ಬದುಕಿರುವುದನ್ನು ನೋಡಿದರೆ ನನಗೆ ಬಹಳ ದುಃಖವಾಗುತ್ತದೆ. ಧೃತರಾಷ್ಟ್ರಾ! ನೀನು ಮಾಡಿದ ಘೋರ ಪಾಪಗಳಿಗೆ ಭೀಮಸೇನ ಎರಡು ಕಠೋರ ನುಡಿ ನುಡಿದಿದ್ದೇನು ದೊಡ್ಡದಲ್ಲ ನೀನು ನಡೆಸಿದ ಅಕೃತ್ಯಗಳಿಗೆ ಪ್ರತೀಕಾರ ಮಾಡದೆ ನಿನ್ನನ್ನು ಸಂರಕ್ಷಸುತ್ತಿರುವ ಅವರ ಹಿರಿಮೆಗೆ ಪ್ರಶಂಸೆ ಮಾಡಬೇಕು.

ನಿನ್ನ ಮಕ್ಕಳು ಭೀಮನನ್ನು ವಿಷದ ಮಡುವಿನಲ್ಲಿ ನೂಕಿದರು. ವಿಷ ಸರ್ಪಗಳಿಂದ ಕಚ್ಚಿಸಿದರು. ವಿಷದ ಊಟ ಉಣಿಸಿದನು. ಬೆಂಕಿಯ ಅರಮನೆಯನ್ನು ನಿರ್ಮಿಸಿ ವಾಸಕ್ಕೆ ಕಳುಹಿಸಿದರು.

ಇಷ್ಟೆಲ್ಲಾ ಮಾಡಿದರೂ ಶ್ರೀಹರಿಯ ಕೃಪಾ ಪಂಜರದಲ್ಲಿ ಸುರಕ್ಷಿತರಾಗಿ ಸಂತೋಷದಿಂದ ಇಂದ್ರಪ್ರಸ್ಥದಲ್ಲಿ ದೇವೇಂದ್ರನಂತೆ ಮೆರೆಯುತ್ತಿದ್ದ ಪಾಂಡವರನ್ನು ನೋಡಿ ಸಹಿಸಲಾರದೆ ಕುತಂತ್ರ ಪ್ರಯೋಗಿಸಿ ಕರೆಸಿಕೊಂಡು ಮೋಸದ ಜೂಜಾಟದಿಂದ ವನವಾಸಕ್ಕೆ ಓಡಿಸಿದರು.

ಭೀಮಸೇನನಂಥ ಮಹಾತ್ಮನ ಮುಂದೆ ದ್ರೌಪದಿಯ ಮಾನಭಂಗ ಮಾಡಬೇಕೆಂಬ ದುರಾಲೋಚನೆಮಾಡಿದ ದುರಾತ್ಮರು ಭೀಮಸೇನನಿಂದ ಪ್ರಾಣಹೀನರಾಗಿ ಮುರಿದ ದೇಹದಿಂದ ರಣರಂಗದಲ್ಲಿ ಬಿದ್ದು ನಾಯಿ ನರಿಗಳಿಂದ ಎಳೆದಾಡಿಸಿಕೊಂಡು ಅಂಧಂತಮಸ್ಸಿಗೆ ಹೋದರು.

ಇಂಥ ಮಕ್ಕಳನ್ನು ವಿಷದ ಕಿಡಿಗಳೆಂದು ತಿಳಿದು ನಾಶಪಡಿಸದೆ ಅವರ ದುಷ್ಕಾರ್ಯಗಳನ್ನು ಕಂಡು ಕಾಣದಂತೆ ಇದ್ದು ಅವರ ಮೇಲ್ಮೆಗಾಗಿ ಹಂಬಲಿಸುತ್ತಿದ್ದಿ. ನಿನ್ನ ಮಗ ಕಲಿ ಪರಾಕ್ರಮದಿಂದ ಪ್ರಖ್ಯಾತ ವೀರನಾಗಿದ್ದರೂ ಅವನ ಪಾಪ ಅವನಲ್ಲಿದ್ದ ಎಲ್ಲ ಸತ್ಸಂಪತ್ತುಗಳನ್ನು ನಾಶಪಡಿಸಿ ಅವನನ್ನು ಕಾಡು ಶವ ಮಾಡಿ ಬಿಸಾಡಿತು.

ಪಾಂಡವರು ದೇವೋತ್ತಮನಾದ ಶ್ರೀಕೃಷ್ಣನಾಶ್ರಯದಿಂದ ತಮ್ಮಲ್ಲಿದ್ದ ಸತ್ಸಂಪತ್ತುಗಳನ್ನೂ ಕ್ಷಣಕ್ಷಣಕ್ಕೂ ವೃದ್ಧಿಪಡಿಸಿಕೊಂಡರು. ಇದು ಅವರ ಪುಣ್ಯದ ಫಲ. ಪಾಂಡವರ ಪುಣ್ಯ ಅವರನ್ನು ರತ್ನಸಿಂಹಾಸನದ ಮೇಲೇರಿಸಿ ಧರ್ಮಸಾಮ್ರಾಜ್ಯದಲ್ಲಿ ಮೆರೆಸುತ್ತಿದೆ. ಇದನ್ನು ನೀನು ಪ್ರತ್ಯಕ್ಷವಾಗಿ ಅನುಭವಿಸುತ್ತಿದ್ದರೂ ನಿನಗೆ ಧರ್ಮಜ್ಞಾನ ಬರದೆ ಭೀಮನು ಪುರಸ್ಕಾರಮಾಡದೆ ಅವಮಾನ ಮಾಡಿದನೆಂದು ದು:ಖಪಡುತ್ತಿದ್ದಿ

ಭೀಮನು ನಿನ್ನನ್ನು ದ್ವೇಶ ಮಾಡಿದ್ದರೆ ನಿನಗೆ ಅವರ ಅರಮನೆಯಲ್ಲಿರಲು ಅವಕಾಶವೇ ಸಿಕ್ಕುತ್ತಿರಲಿಲ್ಲ. ಹಿರಿಯನೆಂಬ ಗೌರವದಿಂದ ನಿನ್ನನ್ನು ಗೌರವಿಸಲು ಯಾರಿಗೂ ಅನುಮತಿ ನೀಡುತ್ತಿರಲಿಲ್ಲ. ಭೀಮಸೇನನು ನಿನ್ನ ಹಿತಕ್ಕಾಗಿಯೇ ಹೀಗೆ ಮಾಡುತ್ತಿದ್ದಾನೆಂದು ತಿಳಿ. ಮುಂದಾದರೂ ನೀನು ಮನಸ್ಸಿನ ಮೋಹವನ್ನು ಕಿತ್ತೊಗೆದು ವೈರಾಗ್ಯವನ್ನವಲಂಬಿಸಿ ಭಗವಂತನ ಪಾದಮೂಲದಲ್ಲಿ ಮನವಿರಿಸಿ ಉತ್ತಮಗತಿ ಹೊಂದಲೆಂಬ ಅಂತಃಕರಣದಿಂದ ನಿನಗೆ ಅಹಿತವಾಗುವಂತೆ ನಡೆಯುತ್ತಿದ್ದಾನೆ.

ಭೀಮನನ್ನು ದ್ವೇಶಿಸಿದವರಿಗೆ ಜನ್ಮಜನ್ಮಾಂತರಕ್ಕೂ ಅಧೋಗತಿ ಉಂಟಾಗುತ್ತದೆ. ಭೀಮನ ನುಡಿ ವೇದವಾಕ್ಯವೆಂದು ನಂಬಿ ಅವನನ್ನು ಆಶ್ರಯಮಾಡಿದವರಿಗೆ ಉತ್ತಮ ಲೋಕಸಿಗುತ್ತದೆಂಬುದಕ್ಕೆ ಸಂದೇಹವಿಲ್ಲ. ಆದ್ದರಿಂದ ನೀನು ದ್ವೇಶಾಸೂಯೆಗಳನ್ನು ತ್ಯಜಿಸಿ ವಿಷಯ ಸುಖದ ಆಸೆ ತ್ಯಜಿಸಿ ವಿರಕ್ತಿ ಭಾವದಿಂದ ಶಾಶ್ವತ ಸುಖದ ಸಾಧನೆ ಮಾಡಿಕೋ ಎಂದನು.

## ಧೃತರಾಷ್ಟ್ರನಿಗೆ ದುರ್ಮೋಹ ದೂರವಾಯಿತು.

ವಿದುರನ ಮಾತು ಧೃತರಾಷ್ಟ್ರನಿಗೆ ನಾಟಿತು. ದುರ್ಬಲ ಹೊಂದಿದ್ದ ಜ್ಞಾನ ವಿದುರನ ಉಪದೇಶದಿಂದ ಶಕ್ತಿದಾಯಕವಾಗಿ ಸತ್ಸಾಧನದ ಶೂರನಾದನು. ಊಟ ಉಪಚಾರ, ರಾಜೋಪಚಾರದ ವಿಷಯ ಭೋಗದ ಸುಖಗಳೆಂಬ ಹಿತ ಶತೃಗಳೆಲ್ಲರನ್ನು ಜಿತ ಮನಸ್ಸಿನಿಂದ ಗೆದ್ದನು ತನ್ನಲ್ಲಿ ಮನೆ ಮಾಡಿಕೊಂಡಿದ್ದ ಶತ್ರುಗಳ ಉಚ್ಚಾಟನೆ ಆದ ನಂತರ ಆತ್ಮಚಿಂತನೆಗೆ ಮನಸ್ಸು ಹಿಡಿತಕ್ಕೆ ಸಿಕ್ಕಿತು. ಆ ಕ್ಷಣದಿಂದಲೇ ಅನ್ನೋದಕಗಳನ್ನು ತ್ಯಜಿಸಿ ದೇಹ ದಂಡನೆಗೆ ತೊಡಗಿದನು.

ಅರಮನೆಯಿಂದ ಬಂದ ಶಡ್ರಸೋಪೇತವಾದ ಭೋಜನವನ್ನು ಸ್ವೀಕಾರ ಮಾಡಲಿಲ್ಲ. ನಿರಶನ ವ್ರತದಿಂದ ಹಠೋಪವಾಸದಲ್ಲಿದ್ದನು.

ಧರ್ಮರಾಜನು ಗಾಬರಿಯಿಂದ ಧೃತರಾಷ್ಟ್ರನ ಬಳಿಗೆ ಬಂದು ನೋಡಿದರೆ ಮೂರುದಿನದಿಂದ ಉಪವಾಸ ಮಾಡಿ ಮೂರ್ಛೆ ಹೊಂದಿದ್ದನು.

ಧರ್ಮರಾಜನು ಶೈತ್ಯೋಪಚಾರಗಳಿಂದ ಎಚ್ಚರಗೊಳಿಸಿದ ನಂತರ 'ದೊಡ್ಡಪ್ಪಾ! ನನ್ನ ಯಾವ ಅಪರಾಧಕ್ಕಾಗಿ ನೀವು ಹೀಗೆ ಆಹಾರ ಸ್ವೀಕಾರ ಮಾಡದೆ ಮುಷ್ಕರ ಮಾಡಿದ್ದೀರಿ? ನನಗೆ ತಿಳಿಯದೆ ಏನಾದರೂ ಅಪರಾಧ ಮಾಡಿದ್ದರೆ ಕ್ಷಮಿಸಿ ಕಾಪಾಡಿರಿ' ಎಂದು ಪ್ರಾರ್ಥಿಸಿಕೊಂಡನು.

ಧರ್ಮರಾಜಾ! ನಿನ್ನದೇನೂ ಅಪರಾಧವಿಲ್ಲಪ್ಪಾ! ನನಗೆ ಕಾಡುವಾಸದಲ್ಲಿ ಏಕಾಂತವಾಗಿರಬೇಕೆಂಬ ಅಭಿಲಾಷೆ ಆಗಿದೆ ನೀನು ಅದಕ್ಕೆ ಅನುಮತಿಸಿದರೆ ಊಟಮಾಡುತ್ತೇನೆ. ಇಲ್ಲದಿದ್ದರೆ ಉಪವಾಸದಲ್ಲೇ ಸಾಯುತ್ತೇನೆ ಎಂದನು.

## ವೇದವ್ಯಾಸರ ಆದೇಶ

ಧರ್ಮರಾಜನು ಧೃತರಾಷ್ಟ್ರನು ಇದ್ದಕ್ಕಿದ್ದ ಹಾಗೆ ಈ ರೀತಿ ಕಾಡಿಗೆ ಹೊರಡುತ್ತೇನೆಂದರೆ ಭಯ ಆಶ್ಚರ್ಯ ಎರಡೂ ಉಂಟಾಗಿ ನೀವು ಇದುವರೆಗೂ ಎಂದೂ ಹೀಗೆ ಮಾತನಾಡಿರಲಿಲ್ಲ. ಈಗ ಇದ್ದಕ್ಕಿದ್ದ ಹಾಗೆ ಮನೆ ಬಿಟ್ಟು ವನವಾಸಕ್ಕೆ ಹೊರಡುತ್ತೇನೆಂದರೆ ನನಗೆ ದುಃಖವಾಗುತ್ತದೆ. ನಿನಗೆ ನೀನೇ ರಾಜನಾಗಿರಬೇಕೆಂಬ ಆಸೆ ಇದ್ದರೆ ನಿನ್ನ ವೈಶ್ಯ ಪತ್ನಿಯಲ್ಲಿ ಜನಿಸಿದ ಯುಯುತ್ಸುವಿಗೆ ಪಟ್ಟಾಭಿಷೇಕಮಾಡು ನೀನೇ ರಾಜ್ಯಭಾರ ವಹಿಸಿಕೋ. ನಾವು ನೀನು ಹೇಳಿದಂತೆ ಕೇಳಿಕೊಂಡಿರುತ್ತೇವೆ. ಇಲ್ಲದಿದ್ದರೆ ನಾವೇ ಕಾಡಿಗೆ ಹೋಗುತ್ತೇವೆ. ನಮಗೆ ಕಾಡುವಾಸ ಸಂತೋಷದಾಯಕವೇ ಆಗಿರುವುದರಿಂದ ದುಃಖಲೇಶವಾಗುವುದಿಲ್ಲ ಎಂದನು. ಧೃತರಾಷ್ಟ್ರನು ಧರ್ಮರಾಜನನ್ನು ಸಮಾಧಾನಪಡಿಸಿ 'ಮಗೂ! ನಾನು ರಾಜ್ಯದಾಸೆಯಿಂದ

ವನವಾಸದ ಸೋಗು ಹಾಕಿಲ್ಲವಪ್ಪ ನೀನು ರಾಜನಾಗಿ ಹಸ್ತಿನಾವತಿಯನ್ನು ಆಳುತ್ತಿರುವುದು ನನಗೆ ಆನಂದವೇ ಹೊರತು ದುಃಖವಲ್ಲ. ನಮ್ಮ ಕ್ಷತ್ರಿಯ ಧರ್ಮದಂತೆ ಮಕ್ಕಳಿಗೆ ರಾಜ್ಯ ಒಪ್ಪಿಸಿ ಸಂತೋಷದಿಂದ ಹೋಗುತ್ತಿದ್ದೇನೆ. ಕ್ಷತ್ರಿಯ ಕುಲಾಚಾರದಂತೆ ನನಗೆ ಅಪ್ಪಣೆಕೊಡು ಎಂದನು.

ಧರ್ಮರಾಜನು ವೃದ್ಧನೂ ಅಂಧನೂ ಆದ ದೊಡ್ಡಪ್ಪನನ್ನು ಕಳುಹಿಸಲಾರದೆ ಚಿಂತಿಸುತ್ತಿರಲು ಅನಂತ ವೇದ ಪ್ರತಿಪಾದ್ಯನಾದ ವೇದವ್ಯಾಸ ದೇವರು ಪ್ರತ್ಯಕ್ಷರಾಗಿ ಧರ್ಮರಾಜಾ! ಧೃತರಾಷ್ಟ್ರನ ಬಗ್ಗೆ ಚಿಂತಿಸಬೇಡ ಅವನಿಗೆ ಪ್ರೋತ್ಸಾಹಿಸಿ ಕಾಡಿಗೆ ಕಳುಹಿಸು. ಅವನು ಅನೇಕ ದುಷ್ಕರ್ಮಗಳಿಂದ ಪಾಪವನ್ನು ಸಂಪಾದಿಸಿದ್ದಾನೆ. ಭಗವಧ್ಯಾನದಿಂದ ಪಾಪಮುಕ್ತನಾಗಲೆಂಬ ಹಿತಚಿಂತನೆಯಿಂದ ಕಳುಹಿಸು. ಧರ್ಮಕಾರ್ಯ ಮಾಡಲು ಸಂಕಲ್ಪಮಾಡಿದವರಿಗೆ ವಿಘ್ನ ಮಾಡದೆ ಅವರ ಸಾಧನೆಗೆ ಸಹಾಯ ಮಾಡಿದವರಿಗೆ ಅಧಿಕ ಪುಣ್ಯಲಭಿಸುತ್ತದೆ ಎಂದು ಹೇಳಿದರು.

ಧರ್ಮರಾಜನು ವೇದವ್ಯಾಸರ ಆಜ್ಞೆ ಆದೊಡನೆ ಅನುಮಾನಿಸದೆ ಧೃತರಾಷ್ಟ್ರನಿಗೆ ಸಂತೋಷವಾಗುವಂತೆ ಅವನ ಮಾತಿಗೆ ಒಪ್ಪಿಕೊಂಡು ಧೃತರಾಷ್ಟ್ರನಿಗೆ ತಪಃಸ್ಸಾಧನೆಯ ಹುರುಪುಬರುವಂತೆ ಮಾತನಾಡಿದನು. ಧೃತರಾಷ್ಟ್ರನು ಧರ್ಮರಾಜನಿಗೆ ಅನೇಕ ರಾಜಧರ್ಮಗಳನ್ನು ಉಪದೇಶ ಮಾಡಿದನು. ಧರ್ಮರಾಜನು ತಾನು ಧರ್ಮದ ಪ್ರತೀಕದಂತಿದ್ದರೂ ಧೃತರಾಷ್ಟ್ರನ ಮಾತಿಗೆ ಮನ್ನಣೆಕೊಟ್ಟು ಗೌರವ ಸಲ್ಲಿಸಬೇಕೆಂಬ ಧರ್ಮದಿಂದ ವಿನಯಪರನಾಗಿ ಕೇಳುತ್ತಿದ್ದನು.

ನಾಲ್ಕನೆಯ ದಿನ ಧೃತರಾಷ್ಟ್ರನು ವನವಾಸಕ್ಕೆ ಹೊರಡುವ ಮುಂಚೆ ವಿದುರನನ್ನು ಕುರಿತು 'ವಿದುರಾ! ನಾನು ಕಾಡಿಗೆ ಹೊರಡುವ ಮುಂಚೆ ನನ್ನ ಸತ್ತ ಮಕ್ಕಳಿಗೆ ಶ್ರಾದ್ಧಾದಿ ಕರ್ಮಗಳನ್ನೂ ಮಾಡಿ ಋಣ ತೀರಿಸಿ ಹೋಗುತ್ತೇನೆ. ಅದಕ್ಕಾಗಿ ಧರ್ಮರಾಜನನ್ನು ಕೇಳಿ ಬೇಕಾಗುವಷ್ಟು ಹಣ ತಂದುಕೊಡು ಎಂದನು.

ವಿದುರನು ಧರ್ಮರಾಜನ ಬಳಿ ತಿಳಿಸಿದಾಗ ಧರ್ಮರಾಜ ಭೀಮನನ್ನು ಕುರಿತು ಧೃತರಾಷ್ಟ್ರನು ಸತ್ತ ಮಕ್ಕಳಿಗೆ ಶ್ರಾದ್ಧಕರ್ಮಾದಿಗಳನ್ನು ಮಾಡಿ ಮುಗಿಸಿ ವನವಾಸಕ್ಕೆ ಹೊರಡುತ್ತಾನಂತೆ ಅವನಿಗೆ ಸಾಕಾಗುವಷ್ಟು ದ್ರವ್ಯಕೊಟ್ಟು ಕಳುಹಿಸು ಎಂದನು.

ಆಗ ಭೀಮನು ಧರ್ಮರಾಜನನ್ನು ಕುರಿತು ''ಅಧರ್ಮಕ್ಕಾರ್ಯಕ್ಕೆ ಹಣ ದಾನಮಾಡಬಾರದು. ಧೃತರಾಷ್ಟ್ರನು ಹರಿನಿಂದಕರಾದ ಮಕ್ಕಳು ಉತ್ತಮಗತಿ ಹೊಂದಬೇಕೆಂಬ ಭಾವದಿಂದ ಅವರಿಗೆ ಉತ್ತರಕ್ರಿಯಾದಿಗಳನ್ನು ಮಾಡಲು ಅಪೇಕ್ಷೆ ಪಡುತ್ತಿದ್ದಾನೆ. ದೇವೋತ್ತಮನನ್ನು ದ್ವೇಶ ಮಾಡುವವರಿಗೆ ಹಿತವನ್ನು ಬಯಸಿದವರು ಅಂಧಂತಮಸ್ಸನ್ನು

ಹೊಂದುತ್ತಾರೆ. ಆದ್ದರಿಂದ ಧೃತರಾಷ್ಟ್ರನ ಪಾಪಕರ್ಮಕ್ಕೆ ನಾನು ದ್ರವ್ಯವನ್ನು ಖಂಡಿತ ಕೊಡುವುದಿಲ್ಲ ಎಂದನು.

ಆಗ ಧರ್ಮರಾಜನು ಭೀಮಾ ಹಾಗೆನ್ನಬೇಡ ನಮ್ಮ ಪಿತಾಮಹರು ಪ್ರಪಿತಾಮಹರಿಗಾದರೂ ನಾವು ಶ್ರಾದ್ಧ ಮಾಡಬೇಡವೇ? ಅದಕ್ಕಾದರೂ ಹಣಕೊಡು ಎಂದನು.

ಭೀಮನು ಅದಕ್ಕೂ ಒಪ್ಪಲಿಲ್ಲ. ''ಧರ್ಮರಾಜಾ! ನಮ್ಮ ತಾತ ಮುತ್ತಾತಂದಿರಿಗೆ ನಾವೇ ಶ್ರದ್ಧೆಯಿಂದ ಪಿತೃಯಜ್ಞವನ್ನು ಮಾಡಬೇಕಾದ್ದು ನಮ್ಮ ಧರ್ಮ. ಆದ್ದರಿಂದ ನಾವೇ ಶ್ರೀಕೃಷ್ಣನ ಸನ್ನಿದಾನ ಕ್ಷೇತ್ರದಲ್ಲಿ ನಡೆಸೋಣ ಅವನೇಕೆ ಮಾಡಬೇಕು? ಅವನು ಮಾಡುವುದು ಬೇಡ ನಾನು ಹಣವನ್ನು ಕೊಡುವುದಿಲ್ಲ ಎಂದನು.

''ಕರ್ಣ ನಮ್ಮ ಒಡಹುಟ್ಟಿದ ಅಣ್ಣನಾದ್ದರಿಂದ ಅವನ ಶ್ರಾದ್ಧವನ್ನು ನಾವೇ ಮಾಡಬೇಕು. ಅವನು ಮಾಡುವುದು ಬೇಡ ಎಂದು ಹೇಳು. ಧೃತರಾಷ್ಟ್ರನಿಗೆ ಎಲ್ಲರಿಗಿಂತಲೂ ತನ್ನ ಮಕ್ಕಳ ಮೇಲೆ ಅತ್ಯಧಿಕ ಅಭಿಮಾನ ಅವರು ಘೋರ ನರಕಕ್ಕೆ ಹೋಗದೆ ಉತ್ತಮಲೋಕಸೇರಬೇಕೆಂಬ ಭಾವದಿಂದ ಈಗ ದೇವ ಬ್ರಾಹ್ಮಣರ ಆರಾಧನೆ ನಡೆಸಬೇಕೆಂಬ ಕುತೂಹಲದಿಂದ ಹಣ ಕೇಳುತ್ತಿದ್ದಾನೆ.

ವಿಷ್ಣು ಮತ್ತು ವೈಷ್ಣವರನ್ನು ದ್ವೇಶಮಾಡಿ ದ್ರೋಹ ಬಗೆದವರಿಗೆ ವೈಷ್ಣವರಿಗೆ ಅವರು ಸಾಯುತ್ತಿದ್ದರೂ ದಯತೋರಿಸಿ ಅವರಿಗೆ ಅನ್ನೋದಕಗಳನ್ನು ಕೊಟ್ಟು ರಕ್ಷಿಸಬಾರದು. ಅವೈಷ್ಣವ ಶವ ಅನಾಥವಾಗಿ ಬಿದ್ದು ಕೊಳೆಯುತಿದ್ದರೂ ಅಂಥ ಪಾಪದೇಹಕ್ಕೆ ಅಗ್ನಿ ಸಂಸ್ಕಾರ ಮಾಡಬಾರದು. ಅವರ ಅಪವಿತ್ರ ದೇಹವನ್ನು ನಾಯಿನರಿಗಳು ಹದ್ದು ಕಾಗೆಗಳು ಕಿತ್ತು ತಿನ್ನುವಂತಾಗಬೇಕು. ಅಂಥ ದೈವದ್ರೋಹಿಗಳಿಗೆ ಮರುಕತೋರಿದವರು ಅಂಧಂತಮಸ್ಸಿಗೆ ಸೇರುತ್ತಾರೆ ಎಂದನು. ಧರ್ಮರಾಜನ ಧರ್ಮ ಅಹಿಂಸಾಧರ್ಮ. ಧೃತರಾಷ್ಟ್ರ ದೋಷಿ ಆಗಿದ್ದರೂ ಅವನ ಅಂತರ್ಗತನಾದ ಸ್ವಾಮಿ ಆನಂದಪಡುವಂತೆ ನಾ ನಡೆಯಬೇಕು,. ಪಿತೃಸಮಾನನಾದ ಆತನು ಮನನೊಂದರೆ ನಾವು ಪಿತೃದ್ರೋಹ ಮಾಡಿದ ಪಾಪಕ್ಕೆ ಗುರಿಯಾಗುತ್ತೇವೆ ಎಂದು ಭಾವಿಸಿದನು.

ಈ ರಾಜ್ಯ ಕೋಶ ಧನಕನಕಾದಿ ಸಕಲ ಸಂಪತ್ತು ಧೃತರಾಷ್ಟ್ರನ ಸ್ವತ್ತೇ ಆದ್ದರಿಂದ ಅವನ ಹಣ ಅವನಿಗೆ ಕೊಟ್ಟರೆ ನಮಗೇಕೆ ದೋಷ ಬರುತ್ತದೆ? ಎಂಬ ಭಾವ ಅವನದು. ಪಾಪ ದುಃಖದಲ್ಲಿ ಬೆಂದಿದ್ದಾನೆ. ವೃದ್ಧ ಕಾಡಿಗೆ ಹೊರಟು ನಿಂತಿದ್ದಾನೆ. ಅತ್ಯಲ್ಪವಾದ ಅವನ ಅಂತ್ಯದಾಸೆಯನ್ನು ಮಕ್ಕಳಾದವರು ನಡೆಸಿಕೊಡದೆ ಉದಾಸೀನದಿಂದ ಅಲ್ಲಗಳೆದರೆ ದುಃಖದಿಂದ ಹೊರಟುಹೋಗುತ್ತಾನೆ. ಜನನಿಂದನೆಗೂ ನಾವು ಗುರಿಯಾಗುತ್ತೇವೆ

ಹಸ್ತಿನಾವತಿಯ ಮಹಾರಾಜ ಧೃತರಾಷ್ಟ್ರ ಕಾಡಿಗೆ ಹೊರಟು ನಿಂತಾಗ ಮಕ್ಕಳ ಶ್ರಾದ್ಧಕ್ಕಾಗಿ ಹಣ ಕೇಳಿದರೂ ಕೊಡದೆ ಹೊರ ನೂಕಿದರೆಂದು ದೂರನ್ನು ಹೊರಬೇಕಾಗುತ್ತದೆಂದು ಧರ್ಮರಾಜನು ತನ್ನ ಸ್ವಂತವಾದ ಸತ್ಕಾರ್ಯಗಳಿಗಾಗಿಟ್ಟಿದ್ದ ದ್ರವ್ಯವನ್ನು ಕೊಟ್ಟನು. ಅರ್ಜುನನೂ ಆಗ ತನ್ನದಾದ ಹಣವನ್ನು ತೆಗೆದುಕೊಟ್ಟು ಕಳುಹಿಸಿದನು.

ವಿದುರನು ಮಾರುತಾತ್ಮಜನ ಮಾತನ್ನು ಮನನ ಮಾಡುತ್ತಾ ಮಹದಾನಂದದಿಂದ ಬಂದನು. ಭೀಮಸೇನನ ಮಾತನ್ನು ಈಗ ಧೃತರಾಷ್ಟ್ರನಿಗೆ ತಿಳಿಸಿದರೆ ಅವನ ವಿರಕ್ತಿಭಾವ ಮತ್ತಷ್ಟು ಪುಷ್ಠಿ ಹೊಂದಿ ಪಾಶಾಣದಂತೆ ಗಟ್ಟಿಯಾಗುತ್ತದೆಂಬ ಭಾವದಿಂದ ಬಂದನು.

ಧೃತರಾಷ್ಟ್ರಾ! ನಿನ್ನ ಮಾತಿನಂತೆ ನಾನು ಭೀಮನನ್ನು ಹಣ ಕೇಳಿದೆನು. ಅವನು ಕೊಡಲು ಒಪ್ಪದಿರಲು ಧರ್ಮರಾಜ ಅರ್ಜುನ ಇಬ್ಬರೂ ತಮ್ಮ ಸ್ವಂತ ಹಣವನ್ನು ತೆಗೆದುಕೊಟ್ಟಿದ್ದಾರೆ ಎಂದನು.

ಧೃತರಾಷ್ಟ್ರನು ''ವಿದುರಾ! ಭೀಮನು ನನ್ನ ಮೇಲಿನ ದ್ವೇಶದಿಂದ ಹಣ ಕೊಡಲಿಲ್ಲವೇ? ಎಂದನು.

ಭೀಮನು ಶ್ರೀಹರಿ ಒಬ್ಬನನ್ನು ಬಿಟ್ಟು ಮತ್ತಾರನ್ನು ಅಪೇಕ್ಷೆ ಪಡತಕ್ಕವನಲ್ಲ. ಅಂದರೆ ಯಾರ ಅನುಗ್ರಹವನ್ನು ಅಪೇಕ್ಷೆ ಪಡುವುದಿಲ್ಲ. ಕಾಮ್ಯ ಕರ್ಮವನ್ನು ಅವನು ನಿಷೇದಿಸುತ್ತಾನೆ. ನನ್ನ ಸ್ವಾಮಿಗೆ ಶತೃಗಳಾದವರು ನನಗೂ ಶತ್ರುಗಳಾದ್ದರಿಂದ ಅವರ ಶ್ರಾದ್ಧಕ್ಕಾಗಿ ಬಂಢಾರದಿಂದ ಹಣ ತೆಗೆದುಕೊಡುವುದಿಲ್ಲ ಎಂದನು. ವೈಷ್ಣವೋತ್ತಮನಾದ ಭೀಮಸೇನನ್ನು ನೀನು ದ್ವೇಶಮಾಡಬೇಡ ಅವನನ್ನು ದ್ವೇಶಮಾಡಿದವರಿಗೆ ದುರ್ಗತಿ ಉಂಟಾಗುತ್ತದೆ ಎಂದನು.

ಜೀವೋತ್ತಮನಾದ ಭೀಮನನ್ನು ನಾನು ಖಂಡಿತ ದೂಶಿಸುವುದಿಲ್ಲ ವೈಷ್ಣವ ದೀಕ್ಷೆಯುಳ್ಳ ಭೀಮನನ್ನು ನನ್ನ ಕ್ರೋಧವೆಂಬ ರಾಕ್ಷಸನು ಅಪ್ಪಿ ಅರೆದು ಬಿಡಬೇಕೆಂದಾಗ ಶ್ರೀಕೃಷ್ಣ ಅಂದೇ ಅದನ್ನು ಉಕ್ಕಿನಲ್ಲಿ ಸಿಕ್ಕಿಸಿ ಛಿದ್ರಪಡಿಸಿದನು. ನನಗೆ ಶುದ್ಧ ಜ್ಞಾನವನ್ನು ಕೊಟ್ಟಿರುವ ಕರುಣಾಳು ಅವನು. ಭೀಮನಿಂದ ನನ್ನ ಮೋಹ ಮುರಿದುಬಿದ್ದರೂ ಮತ್ತೇಕೆ ಮಕ್ಕಳಿಗೆ ಶ್ರಾಧ್ಧಮಾಡುತ್ತಿದ್ದಿ? ಎಂದು ಪ್ರಶ್ನೆ ಬಂದರೆ ವಿದುರಾ! ಇಂಥ ದುರಾತ್ಮರಾದ ಮಕ್ಕಳು ಮತ್ತೆ ನನಗೆ ಮಕ್ಕಳಾಗಿ ಹುಟ್ಟಬಾರದೆಂಬ ಭಾವದಿಂದ ಈಗ ಅವರ ಋಣ ತೀರಿಸಿ ಕಳೆದುಕೊಳ್ಳುತ್ತಿದ್ದೇನೆ. ಮೋಹದಿಂದಲ್ಲ ಎಂದನು.

## ಧೃತರಾಷ್ಟ್ರನ ಪಶ್ಚಾತ್ತಾಪದ ಪರಿತಾಪ ನುಡಿ

ಧೃತರಾಷ್ಟ್ರನು ವಾನಪ್ರಸ್ಥಕ್ಕೆ ಹೊರಡಲನುವಾದನು. ಪುಣ್ಯಾತ್ಮರಾದ ಪಾಂಡವರಲ್ಲಿ

ಪ್ರಜಾಕೋಟಿಗಳಿಗೆ ಯಾವ ಬಗೆಯ ಸಂದೇಹಾಸ್ಪದವೂ ಉಂಟಾಗಬಾರದೆಂಬ ಭಾವದಿಂದ ಪುರಜನರೆಲ್ಲರನ್ನೂ ಕರೆಸಿ ಒಂದು ದೊಡ್ಡ ಸಭೆ ಸೇರಿಸಿದನು.

''ಆತ್ಮೀಯ ಬಂಧುಮಿತ್ರರೇ! ನಾವು ಹಿಂದಿನಿಂದ ವಂಶ ಪರಂಪರೆಯಿಂದ ಬಂದ ಸ್ವರಾಜ್ಯದಲ್ಲಿ ಪ್ರಜಾಪಾಲನೆ ಮಾಡಿಕೊಂಡು ಬಂದಿದ್ದೇನೆ. ನಮ್ಮ ಹಿರಿಯರು ರಾಜರ್ಷಿ ಎನಿಸಿಕೊಂಡು ಸ್ವಸುಖವನ್ನು ತ್ಯಜಿಸಿ ಅನ್ಯಾಯ ಪರಪೀಡನೆಗಳನ್ನು ಮಾಡದೆ ನ್ಯಾಯರೀತಿಯಲ್ಲಿ ದ್ರವ್ಯ ಸಂಪಾದನೆ ಮಾಡಿ ಸಂಪತ್ತನ್ನು ವೃದ್ಧಿಗೊಳಿಸಿದರು.

ರಾಜ್ಯಮದದಿಂದ ಉನ್ಮತ್ತರಾಗದೆ ಪ್ರಜಾನುರಾಗಿಗಳಾಗಿದ್ದ ಕಾರಣ ಸಕಲ ಪ್ರಜೆಗಳೂ ಸತ್ಪ್ರಜೆಗಳಾಗಿ ಯಜ್ಞಯಾಗಾದಿ ಸತ್ಕರ್ಮಗಳು ರಾಜ್ಯದಲ್ಲಿ ಹೇರಳವಾಗಿ ನಡೆಯಲವಕಾಶ ದೊರಕಿತು.

ಇಂಥ ಸತ್ಕುಲ ಪ್ರಸೂತರಾದ ರಾಜವಂಶದವನಾದ ನನಗೆ ದೈವದ್ವೇಶದ ದುಷ್ಟ ಮಕ್ಕಳು ಹುಟ್ಟಿ ಕೌರವ ಕುಲವನ್ನೇ ವಿನಾಶಗೊಳಿಸಿದರು.

ಧರ್ಮವಂತರಾದ ಪಾಂಡವರನ್ನು ಭ್ರಾತೃಸ್ನೇಹದಿಂದ ನೋಡಿ ಸೌಜನ್ಯದಿಂದಿರದೆ ಕೊನೆಯವರೆಗೂ ದ್ವೇಶ ಸಾಧಿಸಿ ಸತ್ತರು.

ದುರ್ಯೋಧನನು ಪ್ರಜೆಗಳನ್ನು ತನ್ನ ಸ್ವಾರ್ತಕ್ಕಾಗಿ ಬಹಳ ಆದರದಿಂದ ನೋಡಿಕೊಂಡರೂ ಅವನು ಪ್ರಜಾನುರಾಗಿ ಎಂದು ತಿಳಿಯುವಂತಿಲ್ಲ. ಏಕೆಂದರೆ ಅವನು ನಮ್ಮೆಲ್ಲರಿಗೂ ಸ್ವಾಮಿಯಾಗಿ ಕಾಪಾಡುವಂಥ ಶ್ರೀಕೃಷ್ಣನನ್ನೇ ದ್ವೇಶಮಾಡಿದನಾದ್ದರಿಂದ ಪ್ರಜೆಗಳನ್ನು ಪ್ರೀತಿಸುತ್ತಿದ್ದನು. ಅದು ತನ್ನ ಸ್ವಾರ್ಥಸುಖಕ್ಕಾಗಿಯೇ ಎಂದು ಬೇರೆ ಹೇಳಬೇಕಾಗಿಯೇ ಇಲ್ಲ.

ದುಷ್ಟಮಕ್ಕಳು ಮಾಡಿದ ಪಾಪಕರ್ಮಗಳಿಗೆ ಅವರು ಅನುಭವಿಸಿದ ಮರಣದಂಡನೆಯೇ ಸಾಕ್ಷಿ ಆಗಿದೆ. ರಾಜಭೋಗದ ಸುಖದ ಸುಪತ್ತಿಗೆಯಲ್ಲಿ ಮೆರೆದ ಅವರು ಆಯುಧಗಳ ಬಡಿತದಿಂದ ಛಿದ್ರಗೊಳಿಸಿದ ದೇಹ ಉಳ್ಳವರಾಗಿ ಒಬ್ಬರ ಮೇಲೊಬ್ಬರು ಬಿದ್ದು ಸಹಿಸಲಾರದ ಸಂಕಟಪಡುತ್ತ ಆರೆ ಜೀವದಲ್ಲಿ ರಣ ಹದ್ದುಗಳಿಂದ ಎಳೆದಾಡಿಸಿಕೊಳ್ಳುತ್ತ ಸತ್ತರು. ದುಷ್ಟ ಪುತ್ರರು ನನಗಿನ್ನು ಜನ್ಮ ಜನ್ಮಾಂತರಕ್ಕೂ ಹುಟ್ಟಬಾರದೆಂಬ ಸಂಕಲ್ಪದಿಂದ ಎಲ್ಲರಿಗೂ ಅಂತ್ಯ ಋಣ ತೀರಿಸಿ ಪಿತೃಋಣಭಾರವನ್ನು ಕಳೆದುಕೊಂಡೆನು.

ಈಗ ನಾನು ಮಕ್ಕಳ ಸಂಪರ್ಕದಿಂದ ಉಂಟಾದ ಪಾಪವೆಲ್ಲವನ್ನು ನಿವಾರಿಸಿಕೊಳ್ಳಲು ವನವಾಸಕ್ಕೆ ಹೊರಟ್ಟಿದ್ದೇನೆ. ತಪಸ್ಸಿನಿಂದ ನನ್ನ ಪಾಪತಾಪಗಳೆಲ್ಲವನ್ನೂ ಕಳೆದುಕೊಳ್ಳಲಿಚ್ಛಿಸುತ್ತಿರುವ ನನಗೆ ನೀವೆಲ್ಲರೂ ಒಮ್ಮತದಿಂದ ಒಪ್ಪಿಗೆ ನೀಡಿ ಕಳುಹಿಸಿರಿ.

ನಾನು ಮಹಾದೋಷಿಯಾಗಿದ್ದರೂ ಅದನ್ನು ಪಾಂಡವರು ಕ್ಷಮಿಸಿ ನನ್ನನ್ನು ಬಹಳ ಆದರದಿಂದ ಕಾಪಾಡಿದರು.

ನನಗೆ ಊರ್ಧ್ವಗತಿ ದೊರಕಲಿಕ್ಕೆ ಪುಣ್ಯವಂತರೂ ಸತ್ಪುತ್ರರೂ ಆದ ಪಾಂಡವರ ಧರ್ಮವೇ ಆದ್ದರಿಂದ ಅವರನ್ನು ನೀವೆಲ್ಲರೂ ನನ್ನ ಹಿತಕ್ಕಾಗಿ ಗೌರವಾದರಗಳಿಂದ ದಿನದಿನಕ್ಕೂ ಅವರಲ್ಲಿ ಪ್ರೀತಿವಿಶ್ವಾಸಗಳನ್ನು ವೃದ್ಧಿಪಡಿಸಿಕೊಂಡು ವಂಶದ ಏಳ್ಗೆಯನ್ನು ಕೀರ್ತಿಯನ್ನು ಬೆಳಗಿಸಲಿಕ್ಕೆ ಪ್ರಜೆಗಳೇ ಮೂಲ ಕಾರಣವಾದ್ದರಿಂದ ರಾಜನಿಗೆ ತಕ್ಕಾದ ಪ್ರಜೆಗಳಾಗಿ ನನ್ನ ಆತ್ಮಕ್ಕೆ ಶಾಂತಿ ಸಿಗುವಂತೆ ನಡೆಯಿರಿ ಎಂದು ಪಶ್ಚಾತ್ತಾಪದಿಂದ ಹೊರಟ ಭಾಷ್ಪ ಗದ್ಗದ ಧ್ವನಿಯಿಂದ ತಿಳಿಸಿದನು.

ಧೃತರಾಷ್ಟ್ರನು ಅಂಧರಾಜನಾದರೂ ಮಹಾಪರಾಕ್ರಮ ಶೂರ. ವೈಭವದಿಂದ ಬದುಕಿದವನು. ಅದಲ್ಲದೆ ಸದಾ ತತ್ತ್ವ ಜ್ಞಾನ ತಿಳಿಯಲಿಕ್ಕಾಗಿ ಅನೇಕ ಮಹಾತ್ಮರನ್ನು ತನ್ನ ಬಳಿಗೆ ಕರೆಸಿಕೊಂಡು ಉಪದೇಶಗೊಂಡವನು. ಆದರೂ ಅವನಿಗೆ ದುಃಖವೆಂಬ ಅಗ್ನಿ ಜೀವಸಹಿತ ಸುಟ್ಟುಹಾಕಿತು ಎಂದು ಕಣ್ಣೀರುಸುರಿಸಿ ಧೃತರಾಷ್ಟ್ರನನ್ನು ಸಾಂತ್ವನ ವಚನಗಳಿಂದ ಧರ್ಮರಾಜ ಸಮಾಧಾನಪಡಿಸಿದನು.

ಧೃತರಾಷ್ಟ್ರನು ತಪೋವನಕ್ಕೆ ಹೊರಟರೆ ಧರ್ಮರಾಜನು ಅವನಿಗೆ ಬೇಕಾದ ಸೌಲಭ್ಯ ಸಿದ್ಧಪಡಿಸಿದನು. ಸಂಜಯನು ಸಾರಥಿಯಾಗಿ ಹೊರಟನು. ಗಾಂಧಾರಿ ಪತಿಯನ್ನು ಅನುಸರಿಸಿ ಹೊರಟಾಗ ಗಾಂಧಾರಿಯ ಹಿಂದೆ ಕುಂತೀದೇವಿಯು ಹೊರಟರು. ಆಗ ಮಕ್ಕಳು ಸೊಸೆಯರೆಲ್ಲರೂ ಕುಂತೀದೇವಿಯನ್ನು ಕಳುಹಿಸಲಾರದೆ ದುಃಖದಿಂದ ಬಹು ರೀತಿಯಲ್ಲಿ ಪ್ರಾರ್ಥಿಸಿಕೊಂಡರು.

ದ್ರೌಪದೀದೇವಿ ಅತ್ತೆಯ ಕಾಲಿಗೆ ನಮಸ್ಕಾರಮಾಡಿ ''ಅಮ್ಮ, ನೀವು ಮಕ್ಕಳಿಗಾಗಿ ಮೊದಲಿನಿಂದಲೂ ಬಹಳ ಕಷ್ಟದಲ್ಲಿ ನೊಂದಿದ್ದೀರಿ. ವೀರಮಾತೆ ಎನಿಸಿಕೊಂಡು ಎಲ್ಲರಿಂದಲೂ ಕೀರ್ತಿಪಡೆದಿರಿ. ಆದರೆ ಅವರಿಂದ ನೀವು ಸುಖ ಪಟ್ಟಿದ್ದು ಕಡಿಮೆ. ಮಕ್ಕಳ ವನವಾಸ ಕಾಲದಲ್ಲಿ ನೀವು ಪಟ್ಟ ಸಂಕಟದ ಒಂದು ಕ್ಷಣದ ದುಃಖವನ್ನು ಯಾವತಾಯಿಯು ಸಹಿಸಿ ಬದುಕಲಾರಳು. ನೀವು ಅವರ ಮೇಲ್ಮೆ ನೋಡೇ ನೋಡುತ್ತೇನೆಂಬ ದೃಢ ನಂಬಿಕೆ, ಶ್ರೀಕೃಷ್ಣನ ಅನುಗ್ರಹದಿಂದ ಸಾಯದೆ ಈಗ ಸುಖದ ದಿನವನ್ನು ಕಂಡಿರಿ ಈಗಲಾದರೂ ರಾಜಮಾತೆಯಾಗಿ ಆನಂದದಿಂದ ಸಾಮ್ರಾಜ್ಯ ಸುಖವನ್ನನುಭವಿಸಬಹುದೆಂದರೆ ಕಾಡಿಗೆ ಹೊರಟ್ಟಿದ್ದಿರಿ. ನಮ್ಮೆಲ್ಲರ ಸಂತೋಷಕ್ಕಾಗೆ ನೀವು ಅಗಲಿ ಹೋಗಬೇಡಿರಿ''ಎಂದು ಎಷ್ಟು ಕೇಳಿಕೊಂಡರೂ ಕುಂತಿ ಕೇಳಲಿಲ್ಲ.

''ಮಕ್ಕಳೇ! ಸುಖದ ದಿನಗಳನ್ನು ನಮಗೆ ಕೊಟ್ಟವನು ಸ್ವಾಮಿ, ಅವನ ಚಿಂತನೆಗಾಗಿಯೇ

ನಾನೀಗ ಏಕಾಂತವನ್ನರಿಸಿ ಹೋಗುತ್ತಿದ್ದೇನೆ ನನಗೆ ಅದೇ ಪರಮಸುಖ ಶಾಶ್ವತಸುಖ ಈ ಲೌಕಿಕ ಸುಖ ದುಃಖಗಳೆರಡೂ ಶಾಶ್ವತವಲ್ಲ. ಆಶ್ರಮದಲ್ಲಿ ನನ್ನ ಅಕ್ಕನಿಗೆ ಸಹಾಯ ಮಾಡುತ್ತಾ ಭಗವಚ್ಚಿಂತನೆಯ ಸುಖಕ್ಕಿಂತಲೂ ಅಧಿಕ ಸುಖ ರಾಜಭವನದಲ್ಲಿ ನನಗೆ ದೊರಕುವುದಿಲ್ಲ. ನೀವೆಲ್ಲರೂ ನನಗೆ ಪ್ರೀತಿಯ ಪುತ್ಥಳಿಗಳಾದ್ದರಿಂದ ನನ್ನ ಈ ಅಭಿಲಾಷೆ ನೆರವೇರಿಸಿ ಕೊಡಿರಿ'' ಎಂದಳು.

ಕುರುಡು ದಂಪತಿಗಳ ಸಂಗಡ ಕುಂತಿ ವಿದುರ,ಸಂಜಯ ಇವರು ಮೂರು ಮಂದಿಯೂ ಹೊರಟರು. ಹಸ್ತಿನಾಪುರ ಬಿಟ್ಟು ಹೊರಟವರು ಅನೇಕ ತೀರ್ಥ ಕ್ಷೇತ್ರಗಳ ದರ್ಶನ ಮಾಡಿ ಬದರಿಕಾಶ್ರಮದಲ್ಲಿ ಶ್ರೀವೇದ ವ್ಯಾಸರು ಸಕಲ ದೇವತಗಳಿಂದಲೂ ಪೂಜೆಗೊಳುತ್ತಿರುತ್ತಾರೆ ಅವರ ದರ್ಶನ ಮಾಡಬೇಕೆಂದು ಬಂದರು.

ಬದರೀ ಕ್ಷೇತ್ರದಲ್ಲಿ ಮೊದಲು ನಾರದರ ದರ್ಶನವಾಯಿತು. ನಾರದರಿಗೆ ನಮಸ್ಕಾರ ಮಾಡಿ ಧೃತರಾಷ್ಟ್ರನು ''ನಾರದರೇ! ನನ್ನ ಆಯಸ್ಸು ಇನ್ನು ಎಷ್ಟಿದೆ ಹೇಳಿರಿ ಖಟ್ವಾಂಗದನು ಇನ್ನು ಎರಡು ಘಳಿಗೆ ಆಯಸ್ಸು ಉಳಿದಿದೆ''ಎಂದು ತಿಳಿದಾಕ್ಷಣವೇ ಭಗವಂತನ ಪಾದಮೂಲದಲ್ಲಿ ಮನಸ್ಸನ್ನಿರಿಸಿ ಮುಕ್ತಿಮಾರ್ಗವನ್ನು ಕಂಡಂತೆ ನನಗೂ ಅಂಥ ದಿವ್ಯಜ್ಞಾನವನ್ನು ಕರುಣಿಸಲು ನನ್ನ ಆಯಸ್ಸು ತಿಳಿಸಿರಿ'' ಎಂದು ಪ್ರಾರ್ಥಿಸಿಕೊಂಡನು.

ನಾರದರು ''ನಿನ್ನ ಆಯಸ್ಸು ಇನ್ನು ಮೂರು ವರ್ಷಕ್ಕೆ ಮುಗಿಯುತ್ತದೆ'' ಎಂದರು. ಆಕ್ಷಣದಿಂದಲೇ ಧೃತರಾಷ್ಟ್ರನು ತೀವ್ರ ತಪೋನಿರತನಾಗಿ ವೈರಾಗ್ಯದ ಮನಸ್ಸನ್ನು ಸ್ವಾಮಿಪಾದ ಮೂಲದಲ್ಲಿರಿಸಿದನು. ಬದರಿಕಾಶ್ರಮದಲ್ಲಿ ಗಾಂಧಾರಿ ,ಕುಂತಿ,ವಿದುರ,ಸಂಜಯಾದಿಗಳೂ ತಪೋಮಗ್ನರಾಗಿ ಐದು ಜನರೂ ಅಮೋಘ ತಪಸ್ಸಿಗೆ ತೊಡಗಿದರು.

## ಬದರಿಕಾಶ್ರಮಕ್ಕೆ ಬಂದ ಭಕ್ತರ ಭಾಗ್ಯ

ಹಸ್ತಿನಾವತಿಯಲ್ಲಿ ಧರ್ಮರಾಜನು ಪಾಂಡವರೊಡನೆ ನಮ್ಮ ವೃದ್ಧತಾಯಿ ಧೃತರಾಷ್ಟ್ರ ಬಂಧುಗಳು ತಪಸ್ಸಿಗಾಗಿ ಹೋದವರು ಏನಾದರೋ ಎಂಬ ಚಿಂತೆಯಿಂದ ಅನೇಕ ಗೂಢಚಾರರನ್ನು ಅವರ ಕ್ಷೇಮ ತಿಳಿದುಬರಲು ಹಿಮಾಲಯಕ್ಕೆ ಕಳುಹಿಸಿದನು. ಗೂಢಚಾರರು ಹಿಮತ್ಪರ್ವತಶ್ರೇಣಿಯಲ್ಲಿ ಅನೇಕ ತಪೋವನಗಳಲ್ಲಿ ಹುಡುಕಿದನಂತರ ಬದರಿಕಾಶ್ರಮದಲ್ಲಿ ತಪೋನಿರತರಾಗಿದ್ದ ಧೃತರಾಷ್ಟ್ರಾದಿ ಐದುಮಂದಿಯನ್ನು ನೋಡಿ ಸಂತೋಷದಿಂದ ಧರ್ಮರಾಜನಿಗೆ ತಿಳಿಸಿದರು.

ಆಗ ಪಾಂಡವರು ತಮ್ಮ ವನಿತಾ ವೃಂದ ಮತ್ತು ದುರ್ಯೋಧನಾದಿಗಳ ವನಿತಾಕದಂಬದೊಡನೆ ಚತುರಂಗ ಸೇನಾ ಸಮೇತರಾಗಿ ಬದರಿಕಾಶ್ರಮದ ಕಡೆಗೆ

ಹೊರಟುಬಂದರು. ವಿದುರನಿಗೆ ಧರ್ಮರಾಜಾದಿಗಳು ತಮ್ಮನ್ನರಿಸಿ ಬರುತ್ತಿರುವುದು ತಿಳಿದು ತಾನು ಧರಿಸಿದ್ದ ದೇಹವನ್ನು ಒಂದು ವೃಕ್ಷದಡಿಯಲ್ಲಿಟ್ಟು ಯಮಧರ್ಮರಾಜನಾದ ತನ್ನಂಶವನ್ನು ಧರ್ಮರಾಜನಲ್ಲಿ ಐಕ್ಯ ಗೊಳಿಸಿದನು.

ಪಾಂಡವರು ಧೃತರಾಷ್ಟ್ರನ ಬಳಿಗೆ ಬಂದು ನಮಸ್ಕಾರಮಾಡಿದಾಗ ಧೃತರಾಷ್ಟ್ರನು ಎಲ್ಲರನ್ನು ಕಣ್ತೆರೆದು ನೋಡಿದನು. ಆಗ ಅಲ್ಲಿಗೆ ವೇದವ್ಯಾಸರು ಬಂದರು ಎಲ್ಲರೂ ನಮಸ್ಕಾರಮಾಡಿದಾಗ ವೇದವ್ಯಾಸರು ನಿಮಗೆ ಏನುಬೇಕೋ ಕೇಳಿಕೊಳ್ಳಿರಿ''ಎಂದರು.

ಪಾಂಡವರು ''ಸ್ವಾಮಿ! ನಮಗೆ ಸ್ಥಿರಭಕ್ತಿ ಕರುಣಿಸಿ ಸದಾ ನಿನ್ನ ಸ್ಮರಣೆ ನಿನ್ನ ಕಥಶ್ರವಣಾದಿಗಳಲ್ಲಿ ನಿರತರಾಗಿರುವಂತಹ ಭಾಗ್ಯಕೊಡು''ಎಂದು ಕೇಳಿ ಕೊಂಡರು. ಕುಂತಿದೇವಿ ವೇದವ್ಯಾಸರನ್ನು ಕುರಿತು ಸ್ವಾಮೀ ನಾನು ಕನ್ಯಾವಸ್ಥೆಯಲ್ಲಿ ಬಂದು ಅಪರಾಧಮಾಡಿದೆನು. ಏನೆಂದರೆ ದುರ್ವಾಸರಿಂದ ಉಪದೇಶಗೊಂಡ ಮಂತ್ರದಿಂದ ಸೂರ್ಯನನ್ನು ಕರೆದು ಕರ್ಣನನ್ನು ಪಡೆದನು. ಇದೊಂದು ಹುಡುಗಾಟದಿಂದ ಮಾಡಿ ಅಪರಾಧವಾದರೆ ನಂತರ ಯುದ್ಧಸಂಭವವಾದಾಗ ಕರ್ಣನನ್ನು ಮಗನೆಂದು ಬಹಿರಂಗಪಡಿಸದೆ ಗೋಪ್ಯವಾಗಿರಿಸಿಕೊಂಡು ಅವನನ್ನು ತಮ್ಮಂದಿರಕೈಲಿ ಕೊಲ್ಲಿಸಿದೆನು. ಈ ಎರಡು ಮಹಾಪರಾಧಗಳನ್ನು ಕ್ಷಮಿಸು'' ಎಂದು ಪ್ರಾರ್ಥಿಸಿಕೊಂಡಳು. ವೇದವ್ಯಾಸರು ಕುಂತಿಗೆ ಅವಳ ಇಚ್ಛೆಸಲ್ಲಿಸಿದರು ನಂತರ ಗಾಂಧಾರಿ ಧೃತರಾಷ್ಟ್ರ ಇಬ್ಬರೂ ವೇದವ್ಯಾಸರಿಗೆ ನಮಸ್ಕಾರ ಮಾಡಿ ಸ್ವಾಮಿ! ಯುದ್ಧದಲ್ಲಿ ಹದಿನೆಂಟು ಅಕ್ಷೋಹಿಣಿಸೇನಾ ಸಮೂಹದೊಡನೆ ನನ್ನಶತಪುತ್ರರೂ ಸತ್ತರು. ಅವರೆಲ್ಲರನ್ನು ನೋಡಬೇಕೆಂಬ ಅಭಿಲಾಷೆ ಆಗಿದೆ ಸತ್ತವರೆಲ್ಲರನ್ನು ನಮಗೆ ತೋರಿಸು''ಎಂದು ಪ್ರಾರ್ಥಿಸಿದರು. ರಾಜ ದಂಪತಿಗಳ ಆಕಾಂಕ್ಷೆಯಂತೆ ಶ್ರೀ ವೇದಾವ್ಯಾಸದೇವನು ಯುದ್ಧದಲ್ಲಿ ಸತ್ತ ಪ್ರತಿಯೊಬ್ಬ ವೀರರನ್ನು ಧೃತರಾಷ್ಟ್ರಮ ಮುಂದೆ ಸಂಕಲ್ಪಮಾತ್ರದಿಂದಲೆ ನಿಲ್ಲಿಸಿದರು.

ಅವರನ್ನು ನೋಡುವುದಕ್ಕೆ ಕಣ್ಣನ್ನು ಕೊಟ್ಟು ಧೃತರಾಷ್ಟ್ರ! ನೋಡು'' ಎಂದರು. ಧೃತರಾಷ್ಟ್ರನಿಗೆ ಅಷ್ಟರಿಂದಲೇ ತೃಪ್ತಿ ಆಗದೆ ಸ್ವಾಮೀ ಇವರೆಲ್ಲರು ಇಂದು ತಂತಮ್ಮ, ಪತ್ನಿಯರೊಡಗೂಡಿ ನಮ್ಮ ಬಳಿ ಇದ್ದು ಯುದ್ಧ ಪ್ರಾರಂಭವಾಗುವ ಮುಂಚೆ ವೀರರೆಲ್ಲರೂ ತಮ್ಮ ಪತ್ನಿಯರೊಡಗೂಡಿ ಹೇಗೆ ವಿಹಾರ ಸುಖದಿಂದದ್ದರೋ ಹಾಗೆ ಇರುವುದನ್ನು ನಾನು ನೋಡಬೇಕೆನ್ನಲು ಅಚಿಂತ್ಯಮಹಿಮನು ಅದೇ ರೀತಿ ಸತ್ತವೀರರೆಲ್ಲರೂ ತಮ್ಮ ಪತ್ನಿಯರೊಡಗೂಡಿ ವಿಹರಿಸುವುದನ್ನು ಧೃತರಾಷ್ಟ್ರನು ಕಂಡನು.

ಮಾರನೆ ದಿನ ಸ್ತ್ರಿಯೆಲ್ಲರೂ ತಮ್ಮ ತಮ್ಮ ಪತಿಗಳನ್ನು ಅಗಲಲು ಇಷ್ಟ ವಿಲ್ಲದೆ ಶ್ರೀವೇದವ್ಯಾಸರನ್ನು ಕುರಿತು ಬಹಳ ದುಃಖದಿಂದ ಪ್ರಾರ್ಥಿಸಿಕೊಳ್ಳುತ್ತಿರಲು ಮಹಾ ಕರುಣಾಳುವಿನ ಕೃಪೆಯಿಂದ ಸಕಲ ಸ್ತ್ರೀಯರೂ ಅವರವರ ಪತಿಯರೊಡಗೂಡಿ ಪರಿಲೋಕವನ್ನೈದಿದರು. ಎಂದು ವೈಶಂಪಾಯನರು ಜನವೇಜಯ ರಾಜನಿಗೆ ಹೇಳಿ

ಜನಮೇಜಯಾ ಆಗ ನಿನ್ನ ಅಜ್ಜಿ ಉತ್ತರಾದೇವಿ ಒಬ್ಬಳು ಬಿಟ್ಟು ಎಲ್ಲರೂ ಭುಮಂಡಲವನ್ನು ಬಿಟ್ಟು ಹೊರಟುಹೋದರು. ಎಂದಾಗ ಜನಮೇಜಯನು ಗುರುಗಳೇ! ವೇದವ್ಯಾಸರು ಸತ್ತವರೆಲ್ಲರನ್ನೂ ಕಣ್ಮುಂದೆ ಕರೆದು ತೋರಿಸಿದರೆಂದು ನೀವು ಹೇಳಿದ ಕಥೆ ಕೇಳಿದರೆ ನನಗೂ ನನ್ನ ತಂದೆಯನ್ನು ನೋಡಬೇಕೆಂಬ ಆಸೆ ಬಹಳವಾಗಿದೆ. ನೀವು ಶ್ರೀವೇದವ್ಯಾಸರ ಪರಮಶಿಷ್ಯಾರಾದ್ದರಿಂದ ನನ್ನ ತಂದೆಯ ದರ್ಶನಕ್ಕಾಗಿ ಹಂಬಲಿಸುವ ನನಗೂ ಪಿತೃದರ್ಶನ ಮಾಡಿಸಿರಿ''ಎಂದು ಪ್ರಾರ್ಥಿಸಿಕೊಂಡಾಗ ವೇದವ್ಯಾಸರು ಜನಮೇಜಯನ ಪ್ರಾರ್ಥನೆಯಂತೆ ಪರೀಕ್ಷಿದ್ರಾಜನ ದರ್ಶನ ಮಾಡಿಸಿದರು.

ಆಗ ಜನಮೇಜಯನು ಭಾರತ ಕಥಾಶ್ರವಣ ಮಾಡಿದರೆ ಪ್ರತ್ಯಕ್ಷ ಫಲ ಕ್ಷಿಪ್ರದಲ್ಲಿ ಸಿಗುತ್ತದೆಂದು ಸ್ತುತಿಸಿ ಕೊಂಡಾಡಿದನು.

ವೈಶಂಪಾಯನರು ನಂತರ ನಡೆದ ಸಂಘಟನೆಗಳನ್ನು ತಿಳಿಸುತ್ತೆನೆ ಕೇಳು''ಎಂದು ಮುಂದುವರಿಸಿದರು. ಪಾಂಡವರು ಬದರಿಕಾಶ್ರಮದಲ್ಲಿ ತಪೋ ನಿರತರಾಗಿದ್ದ ಧೃತರಾಷ್ಟ್ರಾದಿಗಳನ್ನು ನೋಡಿಕೋಂಡು ಹಸ್ತಿನಾವತಿಗೆ ಹೊರಟು ಹೋದನಂತರ ಧೃತರಾಷ್ಟ್ರನು ಶ್ರೀವೇದವ್ಯಾಸರ ಸನ್ನಿಧಾನದಲ್ಲಿ ಮೂರುವರ್ಷಗಳವರೆಗೂ ಅಧ್ಭುತ ರೀತಿಯಲ್ಲಿ ತಪಸ್ಸನ್ನಾಚರಿಸಿ ಯೋಗ ಶಕ್ತಿಯಿಂದ ಹೊರಟ ದೇಹಾಗ್ನಿಯಿಂದಲೇ ದೇಹವಿಯೋಗಮಾಡಿಕೊಂಡು ತನ್ನ ಮೂಲಸ್ಥಾನವನ್ನು ಸೇರಿದನು. ಗಾಂಧಾರಿ, ಕುಂತಿ ಇವರಿಬ್ಬರೂ ಯೋಗಸಮಾಧಿಯಲ್ಲಿ ಪ್ರಾಣವಾಯುವನ್ನು ಬಂಧಿಸಿ ದೇಹವನ್ನು ವಿಸರ್ಜಿಸಿ ತಮ್ಮ ಮೂಲರೂಪ ಸೇರಿದರು. ಪಾಂಡವರು ಹಸ್ತಿನಾವತಿಯಲ್ಲಿ ಧರ್ಮದ ಸುಗಂಧದಿಂದ ಆನಂದ ಪಡುತ್ತ ರಾಜ್ಯಭಾರಮಾಡುತ್ತಿದ್ದರು.

ಧೃತರಾಷ್ಟ್ರ, ಗಾಂಧಾರಿ, ಕುಂತಿ ಮೂರುಮಂದಿಯೂ ಯೋಗಸಮಾಧಿಯಲ್ಲಿದ್ದಾಗ ತಪೋತೇಜಸ್ಸಿನಿಂದಲೇ ದಗ್ಧರಾದರೆಂದು ತಿಳಿದು ಧರ್ಮರಾಜನು ಹಿರಿಯರ ವಿಯೋಗದಿಂದ ಅತೀವ ದುಃಖಪಟ್ಟು ಎಲ್ಲರಿಗೂ ಊರ್ಧ್ವಗತಿ ಸಿಗುವಂತೆ ಅಂತ್ಯಕರ್ಮಗಳನ್ನು ವಿಧಿವತ್ತಾಗಿ ಮಾಡಿದರು. ದ್ವಿಜಶ್ರೇಷ್ಠರುಗಳಿಗೆ ಪಾತ್ರಾಪಾತ್ರಕ್ರಮದಲ್ಲಿ ದಾನದಕ್ಷಣೆಗಳನ್ನು ಕೊಟ್ಟರು. ಸುಪುತ್ರರಾದ ಪಾಂಡವರು ಸದ್ವೈಷ್ಣವರಾದ್ದರಿಂದ ಅವರು ಮಾಡಿದ ಉತ್ತರ ಕರ್ಮದಿಂದ ಪಿತೃಗಳು ತಮ್ಮ ದಿವ್ಯಲೊಕಸೇರಿದರು.

ನಂತರ ಶ್ರೀವೇದವ್ಯಾಸರ ಬಳಿ ಸಂಜಯನು ಕೆಲವು ದಿನಗಳು ವೇದವ್ಯಾಸರ ಬಳಿ ಸೇವೆ ಮಾಡಿಕೊಂಡಿದ್ದು ತನ್ನ ಆಯಸ್ಸನ್ನು ಸಾರ್ಥಕಗೊಳಿಸಿಕೊಂಡು ಶ್ರೀವೇದವ್ಯಾಸರ ಸಂಕಲ್ಪದಂತೆ ಗಂಧರ್ವ ಲೋಕಸೇರಿದನು.

ಪಾಂಡವರು ತಮ್ಮ ರಾಜ್ಯದಲ್ಲಿ ಅನೇಕ ಯಜ್ಞಯಾಗಾದಿಗಳನ್ನು ಮಾಡಿ ಮೂವತ್ತಾರು

ವರ್ಷಗಳ ಕಾಲ ರಾಜ್ಯವಾಳಿದರು.

ಶ್ರೀಕೃಷ್ಣ ಒಂದು ನೂರಾಏಳುವರ್ಷಗಳ ಕಾಲ ಪಾಂಡವರಿಂದ ಭುಮಂಡಲ ವನ್ನಾಳಿಸಿ ವೈಕುಂಠದಂತೆ ಮಾಡಿದನು. ದುರ್ಯೋಧನನೆ ಮೂಲಕಲಿ ಆಗಿ ಹುಟ್ಟ ಕಲಿಯುಗ ಆಗಲೇ ಪ್ರಾರಂಭವಾಗಿದ್ದರೂ ಶ್ರೀಕೃಷ್ಣನ ಸನ್ನಿಧಾನ ಭೀಮಸೇನನ ಆಡಳಿತಕ್ಕೆ ಕಲಿ ಹೆದರಿ ಅಡಗಿಕೊಂಡಿದ್ದನು.

ಪಾಂಡವರು ಆಡಳಿತದಲ್ಲಿ ಎಲ್ಲೆಡೆಗಳಲ್ಲು ಹರಿ ಸರ್ವೋತ್ತಮತ್ವ ತುಂಬಿ ಅನ್ಯದೇವತೆಗಳ ಪೂಜೆ ನಿಷೇದವಾಗಿದ್ದವು. ಪರಿಶುದ್ಧಧರ್ಮತಾಂಡವಾಡುತ್ತಿತ್ತು. ಯಾದವರು ಮಹಾಪ್ರಬಲರಾಗಿ ಅವೈಷ್ಣವರನ್ನು ನಿರ್ಧೂಮ ಮಾಡುತ್ತಿದ್ದರು.

ಆಗ ಕೃಷ್ಣನು ಪ್ರಬಲರಾದ ಯಾದವರು ಭೀಮಸೇನನೊಡಗುಡಿ ಕಲಿಗೆ ಅವಕಾಶ ಕೊಡುವುದಿಲ್ಲ ಆದ್ದರಂದ ಮೊದಲು ಯಾದವರನ್ನು ಅವರವರ ಲೋಕಕ್ಕೆ ಕಳುಹಿಸಬೇಕೆಂದು ಸಂಕಲ್ಪಮಾಡಿದನು. ಅವರಿಗೆ ಸ್ವಲ್ಪ ಅಜ್ಞಾನ ಬರುವಂತೆಮಾಡಿ ತನಗೆ ಪ್ರೀಯರಾದ ಬ್ರಹ್ಮಣರಲ್ಲಿ ಅಪ್ರೀಯವಾಗುವಂತೆ ನಡೆಯಲು ಪ್ರೇರೇಪಿಸಿದನು.

ಒಂದು ದಿನ ಶ್ರೀಹರಿ ಪ್ರೇರಣಾನುಸಾರ ಯಾದವ ವೀರರು ಋಷಿಗಳ ಬಗ್ಗೆ ಚರ್ಚೆನಡೆಸುತ್ತ''ಹಾಗದರೆ ಋಷಿಗಳು ತ್ರಿಕಾಲದರ್ಶಿಗಳಾಗಿದ್ದರೆ ನಮ್ಮ ಪರೀಕ್ಷೆಯಲ್ಲಿ ಗೆಲ್ಲಲಿ''ಎಂದು ಮಾತನಾಡಿಕೊಂಡು ಶ್ರೀಕೃಷ್ಣನಿಗೆ ಪುತ್ರನೆನಿಸಿದ ಸಾಂಬನಿಗೆ ಸ್ತ್ರೀವೇಷವನ್ನು ಹಾಕಿ ಆಹೆಣ್ಣುರೂಪ ಗರ್ಭವತಿಯಂತೆ ಉಬ್ಬಿದ ಉದರ ಮತ್ತು ಸ್ತ್ರೀಚಿನ್ಹೆಗಳು ಎತ್ತಿ ಕಾಣುವಂತೆ ಉಳ್ಳವಳಾಗಿರಲು ಋಷಿಗಳು ತಪಶ್ಚರಣೆ ಮುಗಿಸಿ ಕಣ್ತೆರೆದಾಗ ಅವರ ಪಾದದ ಮೇಲೆ ಹೆಣ್ಣು ರೂಪದ ವ್ಯಕ್ತಿಯನ್ನು ಕೆಡವಿ ''ಸ್ವಾಮಿ! ಪೂರ್ಣ ಗರ್ಭಿಣಿಯಾದ ಈಕೆ ಎಂಥ ಮಗುವನ್ನು ಪ್ರಸವಿಸುತ್ತಾಳೆ!ಎಂಬ ನಮ್ಮ ಮನೋ ಆತಂಕವನ್ನು ನಿವಾರಿಸಿರಿ''ಎಂದು ಕೇಳಿದರು.

ಋಷಿಗಳು ತಮ್ಮ ಜ್ಞಾನದೃಷ್ಟಿಯಿಂದ ಈ ಯಾದವ ಶೂರರು ಶ್ರೀಕೃಷ್ಣನ ಸಂಕಲ್ಪದಂತೆ ಸುಳ್ಳುಸ್ತ್ರಿಯನ್ನು ತೋರಿಸಿ ನಮ್ಮನ್ನು ಪರೀಕ್ಷಿಸುತ್ತಿದ್ದಾರೆ. ಅವನ ಇಷ್ಟೆಯಂತೆಯೇ ಈಗ ನಾವು ನಡೆಯಬೇಕು''ಎಂದುಕೊಂಡು ''ವೀರರೆ! ಈ ಹೆಂಗಸು ಸಾಮಾನ್ಯ ಶಿಶುವಿನ ತಾಯಿಯಲ್ಲ ನಿಮ್ಮ ವಂಶವನ್ನೇ ಕುಟ್ಟಿ ಬಡಿದು ಹಾಕುವಂಥ ಘೋರಾಕೃತಿಯ ಮುಸಲಾಯುಧವನ್ನೇ ಹಡೆಯುತ್ತಾಳೆ'' ಎಂದರು.

ವಿಪ್ರವಾಕ್ಯ ಸುಳ್ಳಾದೀತೇ? ಒಂದು ವಿಚಿತ್ರರೀತಿಯ ಒನಕೆಯೂ ಸಾಂಬನಿಂದ ಬಂದಿತು. ಯಾದವವೀರರು ತಮಗೆ ಅನಿಷ್ಟಕರವಾದ ಕ್ರೂರರೂಪದ ಒನಕೆ ಉತ್ಪತ್ತಿ ಆಗಿದ್ದನ್ನು ನೋಡಿ ಹೆದರಿದರು. ಉಗ್ರಸೇನರಾಜನ ಬಳಿಗೆ ಓಡಿಹೋಗಿ ನಡೆದ ಎಲ್ಲಾ

ಸಂಗತಿಗಳನ್ನು ತಿಳಿಸಿ ಯಾದವಕುಲನಾಶಕ್ಕಾಗಿಯೇ ಋಷಿ ಶಾಪದಿಂದ ಉತ್ಪತ್ತಿಯಾದ ಒನಕೆಯನ್ನು ತೋರಿಸಿದರು.

ಆಗ ಉಗ್ರಸೇನನು ಶ್ರೀಹರಿ ಇಚ್ಛೆ ಎಂದಿಗೂ ಅನಿಶ್ಚತವಾಗಲು ಸಾಧ್ಯವಿಲ್ಲ ಅದು ಅಚ್ಯುತನಮಾತು ಚ್ಯುತಿ ಇಲ್ಲದ್ದು ಎಂಬ ಜ್ಞಾನವಿಲ್ಲದೆ ಈ ಒನಕೆ ಏನು ಮಾಡಬಲ್ಲದು? ಅದಕ್ಕೇಕೆ ಅಷ್ಟುಭಯ? ಅದನ್ನೆ ಇಲ್ಲದಂತೆ ಮಾಡಿಬಿಡಿರಿ ಚೆನ್ನಾಗಿ ಅರೆದು ಗಂಧದಂತೆ ಮಾಡಿ ಸಮುದ್ರದಲ್ಲಿ ಕದಡಿಬಿಡಿರಿ''ಎಂದನು ಯಾದವರಿಗೆ ಶ್ರೀಕೃಷ್ಣನ ಭಕ್ತರ ಪ್ರಭಾವ ಗೊತ್ತಿಲ್ಲದೆ ಇರಲಿಲ್ಲ ಆದರೂ ಸ್ವಾಮಿಯ ಚಿತ್ತ ಅವರನ್ನು ಅಜ್ಞಾನಕ್ಕೆ ಎಳೆದಿತು ಉಗ್ರಸೇನನ ಮಾತಿನಾಂತೆ ಒನಕೆಯನ್ನು ಅರದು ಅದರ ಹುಟ್ಟನ್ನೇ ಅಡಗಿಸಿ ಅರೆದ ಗಂಧವನ್ನು ನೀರೋಳಗೆ ಕದಡಿದರು. ಒನಕೆಯ ತುದಿ ಭಾಗಕ್ಕೆ ಬಂದು ಉಕ್ಕಿನ ಬಳೆ ಇತ್ತು. ಅದನ್ನು ನೀರಿನಲ್ಲಿ ಎಸೆದಾಗ ಅದನ್ನು ಒಂದು ದೊಡ್ಡ ಮೀನು ನುಂಗಿತು.

ಆಮೀನು ಜರಾ ಎಂಬ ಹೆಸರಿನ ಒಬ್ಬವ್ಯಾಧನ ಕೈಗೆ ಸಿಕ್ಕಿತು. ಆತನು ಆಮೀನನ್ನು ಕೊಂದು ಅದರಲ್ಲಿದ್ದ ಉಕ್ಕಿನ ಬಳೆಯನ್ನು ತನ್ನ ಧನಸ್ಸಿಗೆ ಹಾಕಿಕೊಂಡನು.

ಒನಕೆಯನ್ನು ತೆಯ್ದಗಂಧ ಸಮುದ್ರದ ದಂಡದಲ್ಲಿ ಉಕ್ಕಿನ ಮುಳ್ಳಿನಂತೆ ಕಾಣುವ ಜೊಂಡು ಹುಲ್ಲಾಗಿ ಹುಟ್ಟಿದ್ದವು. ಸ್ವಾಮಿಯ ಸಂಕಲ್ಪದಂತೆ ಯಾದವ ಕುಲ ನಾಶಕ್ಕೆ ಸಾಮಗ್ರಿಸಿದ್ದವಾಯಿತು. ನಂತರ ಶ್ರೀಕೃಷ್ಣನು ಉದ್ದವನನ್ನು ಕುರಿತು ''ಉದ್ಧಾವಾ! ನೀನು ಇಲ್ಲಿರಬೇಡ ಬದರಿಕಾಶ್ರಮಕ್ಕೆ ಹೋಗಿ ಅಲ್ಲಿ ಕೆಲವುದಿನಗಳಿರು''ಎಂದನು.

ಬ್ರಹ್ಮಾದಿದೇವತೆಗಳೆಲ್ಲರೂ ಶ್ರೀಕೃಷ್ಣದರ್ಶನಕ್ಕಾಗಿ ಬಂದು ''ಸ್ವಾಮಿ! ದ್ವಾಪರಯುಗ ಅಂತ್ಯಗೊಂಡು ಕಲಿಯುಗ ಪ್ರಾರಂಭವಾದರು ಇನ್ನು ನಿನ್ನ ಸನ್ನಿಧಾನದಿಂದ ಪವಿತ್ರವಾದ ಭುಲೋಕದಲ್ಲಿ ಯುಗಧರ್ಮ ಶಿಥಿಲಗೊಳ್ಳದೆ ಸ್ವಚ್ಛಧರ್ಮವೇ ನೆಲಸಿದೆ ಆದ್ದರಿಂದ ನಿನ್ನ ಇಚ್ಛೆಯಂತೆ ಈಗ ಕಲಿಧರ್ಮಕ್ಕೆ ಅವಕಾಶವಾಗಬೇಕಾಗಿರುವುದರಿಂದ ನೀನು ನಿನ್ನ ಅವತಾರವನ್ನು ವಿಸರ್ಜಿಸಿ ಪರಂಧಾಮಕ್ಕೆ ಬರಬೇಕು''ಎಂದರು. ವಿಶ್ವವ್ಯಾಪ್ತ ಸ್ವಾಮಿ ಎಲ್ಲೆಡಿಗಳಲ್ಲೂ ವ್ಯಾಪ್ತನಾಗಿದ್ದರೂ ಅಜ್ಞಾನಿ ಜನರ ಮೋಹನಾರ್ಥವಾಗಿ ಕೃಷ್ಣ ನಮ್ಮ ಲೋಕ ಬಿಟ್ಟುಹೊರಟುಹೋದನೆಂಬ ಮೌಢ್ಯಮತಿ ಮಂದಭಾಗ್ಯರಿಗೆ ಕೊಡಲಿಕ್ಕಾಗಿ ದೇವತೆಗಳು ಕರೆದಾಗ ಶ್ರೀಕೃಷ್ಣನು ಆಗ ಯಾದವರೆನ್ನೆಲ್ಲಾ ಕರೆದು ಸಭೆ ಸೇರಿಸಿ ದ್ವಾರಾವತಿಯಲ್ಲಿ ಅಪಶಕುನಗಳು ಕಂಡು ಬರುತ್ತಿದೆ. ಈಗ ಪರ್ವಕಾಲವೂ ಆಗಿದೆ.

ಆದ್ದರಿಂದ ನೀವೆಲ್ಲರೂ ಪ್ರಭಾಸಕ್ಷೇತ್ರಕ್ಕೆ ಹೊರಡಿರಿ ಅಲ್ಲಿ ವಿಶೇಷ ರೀತಿಯಾದ ದಾನ ಧರ್ಮದ ಸತ್ಕಾರ್ಯಗಳು ನಡೆಯಬೇಕು'' ಎಂದು ಹೇಳಿದನು. ಯಾದವರನ್ನು ಪ್ರಭಾಸಕ್ಷೇತ್ರಕ್ಕೆ ಏತಕ್ಕಾಗಿ ಕಳುಹಿಸದನೆಂದರೆ ಮರಣಸಮಯದಲ್ಲಿ ವಿಶೇಷವಾದ ಸಧರ್ಮನಿರತರಾಗಿರಬೇಕು.

ಪ್ರಾಣಾಂತ್ಯಕಾಲದಲ್ಲಿ ಭಗವದ್ಧರ್ಮಕ್ಕಾಗಿ ಹೆಚ್ಚು ದ್ರವ್ಯವೆಚ್ಚಮಾಡಿದರೆ ಸದ್ಗತಿ ಸಿಗುತ್ತದೆ. ಅದೂ ಅಲ್ಲದೆ ಬೇರೆಕಾರಣ ಮತ್ತೇನೆಂದರೆ ಮರಣ ಸ್ವಗೃಹ ಸ್ವಸ್ಥಳಗಳಲ್ಲಿ ಆಗಬಾರದು.

ದೇಹಿಯು ಪುಣ್ಯಕ್ಷೇತ್ರದಲ್ಲೇ ವಾಸಗಿದ್ದರೂ ಆಕ್ಷೇತ್ರವನ್ನು ಬಿಟ್ಟು ಪರಸ್ಥಳದಲ್ಲಿ ಪ್ರಾಣನೀಗಬೇಕು. ತನ್ನ ಕ್ಷೇತ್ರಕ್ಕಿಂತಲೂ ಕನಿಷ್ಟವಾಗಿದ್ದರೂ ಆದೇ ಅವನಿಗೆ ಸಾಯಲು ಯೋಗ್ಯ ಸ್ಥಳವೆಂದು ಧರ್ಮಶಾಸ್ತ್ರ ಹೇಳುತ್ತದೆ. ಆದ್ದರಿಂದಲೇ ಶ್ರೀಕೃಷ್ಣ ಯದವರನ್ನು ದ್ವಾರವತಿ ಅತ್ಯಂತ ಪುಣ್ಯಕ್ಷೇತ್ರವಾಗಿದ್ದರೂ ಪ್ರಭಾಸಕ್ಷೇತ್ರದಲ್ಲಿ ಅವರು ಅಂತ್ಯಗೊಳ್ಳುವಂತೆ ಮಾಡಿದನು.

ಪ್ರಭಾಸ ಕ್ಷೇತ್ರದಲ್ಲಿ ಪುಣ್ಯಾತ್ಮರಾದ ಯಾದವರಿಂದ ಅನೇಕ ಯಜ್ಞ ಯಾಗಾದಿಗಳನ್ನು ಮಾಡಿಸಿದನು. ಅಪಾರ ಧನಕನಕಾದಿ ವಸ್ತುಗಳನ್ನು ಸತ್ಪಾತ್ರರಿಗೆ ದಾನಕೊಡಿಸಿದನು. ನಂತರ ಯಾದವರು ಶ್ರೀಕೃಷ್ಣನ ಮಾಯಬಂಧಕ ಶಕ್ತಿಯಿಂದ ತಮ್ಮ ತಮ್ಮಲ್ಲೇ ಉನ್ಮತ್ತತೆಯಿಂದ ಮಾತಿಗೆ ಮಾತು ಬೆಳೆಸುತ್ತ ಕೊನೆಗೆ ಹೊಡೆದಾಟಕ್ಕುನಿಂತು ಋಷಿಶಾಪದಿಂದ ಬೆಳೆದುನಿಂತಿದ್ದ ಮೊನಚಾದ ದರ್ಬೆಗಳನ್ನೆ ಕಿತ್ತುಕೊಂಡು ಹೊಡೆದಾಡಿ ಎಲ್ಲರೂ ಮಡಿದು ಮಲಗಿದರು. ಯಾದವರೆಲ್ಲರೂ ಪ್ರಾಣ ನೀಗಿದ್ದನ್ನು ನೋಡಿದ ಬಲರಾಮನು ಇದೆಲ್ಲಾ ಶ್ರೀಹರಿ ಇಚ್ಛೆ ಎಂದು ತಿಳಿದು ತಾನು ಯೋಗಸಿದ್ಧಿಯಿಂದ ಶೇಷರೂಪ ತಾಳಿ ತನ್ನ ಮೂಲರೂಪವನ್ನು ಸೇರಿದನು.

ಆಮೇಲೆ ಶ್ರೀಕೃಷ್ಣನು ''ದಾರುಕಾ!ಪರಂಧಾಮಕ್ಕೆ ನಾನು ಹೋಗುತ್ತೇನೆಂಬ ವಿಚಾರವನ್ನು ಪಾಂಡವರಿಗೆ ತಿಳಿಸು''ಎಂದು ಸಾರಥಿಗೆ ಹೇಳಿದನು.

## ಅವತಾರ ವಿಸರ್ಜನೆ

ಶ್ರೀಕೃಷ್ಣನು ಯಾದವರೆಲ್ಲರನ್ನು ಭುಮಂಡಲದಿಂದ ಅವರ ಮೂಲರೂಪಕ್ಕೆ ಕಳುಹಿಸಿದ ನಂತರ ಸ್ವಾಮಿ ಅಶ್ವತ್ಥವೃಕ್ಷದ ಕೆಳಗೆ ಕುಳಿತು ಎಡಪಾದವನ್ನು ಬಲದೊಡೆಯ ಮೇಲಿಟ್ಟು ಸಿರಿಪಾದದ ಸುಂದರ ಬೆರಳುಗಳನ್ನು ಅಲ್ಲಾಡಿಸುತ್ತಿರುವಾಗ ಆಪಾದಕಮಲ ಬಾಲಸೂರ್ಯನ ಪ್ರಕಾಶಕ್ಕಿಂತಲೂ ತೇಜೋಮಯವಾಗಿ ಪ್ರಕಾಶಿಸುತ್ತಿತ್ತು. ಅದನ್ನು ನೊಡಿದ ಜರ ಎಂಬ ವ್ಯಾದನು ಸ್ವಾಮಿ ಸಂಕಲ್ಪಾನುಸಾರ ಮೃಗವೆಂದು ತಿಳಿದು ಋಷಿ ಶಾಪದಿಂದ ಉತ್ಪತ್ತಿಯಾಗಿದ್ದ ಒನಕೆಯ ಉಕ್ಕಿನ ಚೂರಿನಿಂದ ಮಾಡಿದ್ದ ಬಾಣದಿಂದ ಹೊಡೆದನು.

ಅದು ಜಡವಸ್ತುವಾಗಿದ್ದರೂ ವ್ಯಾಧನ ಒಳಗಿದ್ದ ಬೃಗುಋಷಿಯ ಸಂಕಲ್ಪದಿಂದ ಅದು ಬಂದಿದ್ದ ಕಾರಣ ಮಲ್ಲಿಗೆಯ ಪುಷ್ಪದಂತೆ ಸಿರಿರಮಣನ ಚರಣ ಸ್ಪರ್ಷಮಾಡಿತು.

ವ್ಯಾಧನು ಸಂದೇಹದಿಂದ ಹತ್ತಿರಕ್ಕೆ ಬಂದು ನೋಡಿದನು. ಅದು ಅನಂತ ವೇದಪ್ರತಿ

ಪಾದ್ಯನ ಪಾದಕಮಲವಾಗಿತ್ತು. ಬ್ರಹ್ಮಾದಿ ದೇವತೆಗಳಿಗೆ ಅರಸನಾ ದಂಥ ಅನಂತಮಹಿಮನ ಪಾದನೋಡಿದನು. ಇದು ಲಕ್ಷ್ಮೀಪತಿಯ ಸಿರಿಪಾದ ಪಾವನವಾದಕರುಣನಿಧಿಯ ಕರುಣದ, ಸಕಲದೇವತಾಗಣಗಳಿಗು ಆಶ್ರಯವಾಗಿರುವ ಪಾದಕ್ಕೆ ಬಾಣ ಪ್ರಯೋಗಮಾಡಿದೆನಲ್ಲಾ'' ಎಂದು ದುಃಖತಪ್ತನಾಗಿ ಮೂರ್ಛೆ ಬಿದ್ದನು.

ಎಚ್ಚರ ಹೊಂದಿದನಂತರ ''ಸ್ವಾಮಿ! ನಾನು ನಿನಗೆ ಮಹಾ ಘೋರವಾದ ಅಪಚಾರ ಮಾಡಿದ್ದೇನೆ. ನನಗೆ ತಕ್ಕಶಿಕ್ಷೆವಿಧಿಸಿ ಆಪಾಪವನ್ನು ಕಳೆದು ಕೊಳ್ಳುವಂತೆ ಮಾಡು. ನಿನ್ನನ್ನು ಅರಿಯದಂಥ ಇಂಥ ಅಜ್ಞಾನವನ್ನು ಮಾತ್ರ ನನಗೆ ನೀನು ಯಾವ ಜನ್ಮದಲ್ಲೂ ಕೊಡಬೇಡ ಸ್ವಾಮಿ! ನಿನ್ನ ವಿಸ್ಮರಣೆ ನಿನ್ನ ಮಂಗಳ ಸ್ವರೂಪದಲ್ಲಿ ನನಗೆ ಅಜ್ಞಾನ ಸಂಭವಿಸುವುದು. ಇದಕ್ಕಿಂತಲೂ ಘೋರ ಪಾಪ ಮತ್ತೊಂದಿಲ್ಲ ವಾದ್ದರಿಂದ ಅಂಥ ಶಿಕ್ಷೆಯನ್ನು ಮಾತ್ರ ಕೊಡಬೇಡ ಸ್ವಾಮಿ ಯಾವ ಜನ್ಮ ಕೊಟ್ಟರೂ ನಿನ್ನ ಸ್ಮರಣೆ ನಿನ್ನ ಸುಂದರ ರೂಪ ಚಿಂತನವನ್ನು ನನಗೆ ಕೊಟ್ಟು ಕಾಪಾಡೆಂದು ಭಕ್ತಿಯಿಂದ ಪ್ರಾರ್ಥಿಸಿಕೊಂಡನು.

ಆಗ ಸ್ವಾಮಿಯು ವ್ಯಾಧನನ್ನು ಕುರಿತು ''ಏಳು ದುಃಖಪಡಬೇಡಾ! ವಿಪ್ರಶಾಪಸುಳ್ಳಾಗಬಾರದೆಂದು ನಾನೇ ನಿನ್ನಿಂದ ಬಾಣದಿಂದ ಹೊಡೆಸಿ ಕೊಂದಿದ್ದರು ಅದು ನಿನ್ನಿಂದ ನಡೆದ ಪೂಜೆಯೇ ಆಗಿ ನೀನು ಪುನೀತನಾಗಿರುವಿ. ನಿನಗೆ ಪಾಪ ಲೇಪವಿಲ್ಲ. ನೀನು ಸ್ವಶರೀರದಿಂದಲೇ ಸ್ವರ್ಗಕ್ಕೆ ಹೋಗು ಎಂದು ಹೇಳಿ ಅದೇ ದೇಹದಿಂದಲೇ ವ್ಯಾಧನನ್ನು ಪುಣ್ಯಲೋಕಕ್ಕೆ ವಿಮಾನದಲ್ಲಿ ಕೂಡಿಸಿ ಕಳುಹಿಸಿದನು.

ಸ್ವಾಮಿಗೇ ವ್ಯಾಧ ಬಾಣದಿಂದ ಹೊಡೆದರೂ ಅವನನ್ನು ಪುಣ್ಯಲೋಕಕ್ಕೆ ಸ್ವ ಶರೀದಿಂದಲೇ ಏಕೆ ಕಳುಹಿಸಿದನೆಂದರೆ ಇವನು ಪೂರ್ವ ಜನ್ಮದಲ್ಲಿ ಬೃಗು ಋಷಿ ಆಗಿದ್ದನು. ಶ್ರೀಹರಿಸರ್ವೋತ್ತಮತ್ವವನ್ನು ಜಗತ್ತಿನಲ್ಲಿ ಬಿತ್ತಿ ನೆಲನಿಲ್ಲಿಸಲಿಕ್ಕಾಗಿ ಕರುಣಾಳುವನ್ನು ಕಾಲಲ್ಲಿ ಒದ್ದು ಅವನ ಕರುಣಾಪ್ರಕಾಶವನ್ನು ಜಗದಾದ್ಯಂತದಲ್ಲೂ ಹರಡಿ ಶ್ರೀಹರಿಯೇ ಸರ್ವೋತ್ತಮದೇವನೆಂದು ನಿರ್ಣಯಹಿಸಿದನು.

ಭಗವಂತನು ಸರ್ವೋತ್ತಮತ್ವ ಜ್ಞಾನವನ್ನು ಜಗತ್ತಗೆ ನೀಡಿದ ಮಹಾಕಾರ್ಯಸಾಧನೆ ಮಾಡಿದ್ದರೂ ಸ್ವಾಮಿಯನ್ನು ಒದ್ದ ದೋಶದಿಂದ ವ್ಯಾಧನಾಗಿ ಜನ್ಮತಾಳಿ ಪ್ರಾರಬ್ಧಕರ್ಮವನ್ನು ಅನುಭವಿಸಬೇಕಾಯಿತು. ಅದು ಕಳೆದ ನಂತರ ಹಿಂದಿನ ಜನ್ಮದ ಅಪಾರ ಪುಣ್ಯ ಫಲದಿಂದ ಸಾಧನೆಯ ದೇಹದಿಂದಲೇ ಸ್ವರ್ಗ ಲೋಕಕ್ಕೆ ಸೇರಿದನು.

ಬ್ರಹ್ಮಾದಿ ಸಮಸ್ತ ದೇವತೆಗಳೂ ಶ್ರೀಕೃಷ್ಣನ ಬಳಿಗೆ ಬಂದು ಸ್ವಾಮಿಯನ್ನು ಸ್ತುತಿ ಮಾಡುತ್ತಿರಲೂ ದೇವನು ಎಲ್ಲರ ಪ್ರಾರ್ಥನೆಯಂತೆ ಸ್ವಾಮಿ ಭೂಲೋಕದಲ್ಲಿ ಶ್ರೀಕೃಷ್ಣ ರೂಪವನ್ನಿಟ್ಟನು. ರುದ್ರದೇವರು ''ಸ್ವಾಮಿ ನಿನ್ನನ್ನು ಇದೇ ರೂಪದಿಂದಲೇ ಪೂಜಿಸಬೇಕೆಂಬ

ಅಭಿಲಾಲಷೆ ಆಗಿರುವುದರಿಂದ ಕೈಲಾಸದಲ್ಲಿ ನಿನ್ನ ಇದೇರೂಪವನ್ನಿಟ್ಟು ನನ್ನ ಆಸೆ ಈಡೇರಿಸು'' ಎಂದಾಗ ಅಲ್ಲಿ ಬಂದು ಚಿದಾನಂದರೂಪವಿಟ್ಟನು. ಬ್ರಹ್ಮದೇವರ ಪ್ರಾರ್ಥನೆಯಂತೆ ಸತ್ಯಲೋಕದಲ್ಲಿ ತನ್ನ ಚಿದಾನಂದ ರೂಪವಿಟ್ಟನು. ಸೂರ್ಯಮಂಡಲದಲ್ಲೂ ಚಿದಾ ನಂದರೂಪ ಇಟ್ಟನು ಹೀಗೆ ನಾಲ್ಕು ಕಡೆಗೂ ನಾಲ್ಕು ಚಿದಾನಂದ ರೂಪವಿಟ್ಟು ಐದನೇ ಚಿದಾನಂದ ರೂಪದಿಂದ ವೈಕುಂಠಕ್ಕೆ ಹೋದನು.

ಆಗ ಬ್ರಹ್ಮೇಂದ್ರಾದಿ ದೇವತೆಗಳೆಲ್ಲರೂ ಶ್ರೀಕೃಷ್ಣನ ಆನಂದಮಯ ಸ್ವರೂಪವನ್ನು ನೋಡಿ ಹರ್ಷದಿಂದ ಸ್ತುತಿಸುತ್ತ ಕೊಂಡಾಡುತ್ತದ್ದರು. ದೇವತಗಳೆಲ್ಲರೂ ತಮ್ಮ ಪ್ರಭುವಾದ ಮಹಾವಿಷ್ಣುವಿನ ಆಜ್ಞೆ ಪಡೆದು ತಮ್ಮ ತಮ್ಮ ಸ್ಥಳಕ್ಕೆ ಹೊರಟುಹೊದರು. ಶ್ರೀಕೃಷ್ಣ ಪರಂಧಾಮಕ್ಕೆ ತೆರಳಿದ ನಂತರ ಬ್ರಹ್ಮಾದಿ ದೇವತೆಗಳು ಸ್ವಾಮಿ ಸರ್ವವ್ಯಾಪ್ತನಾಗಿ ಎಲ್ಲೆಡೆಗಳಲ್ಲಿದ್ದರೂ ದೈತ್ಯರಿಗೆ ಅಜ್ಞಾನ ಬರಲಿಕ್ಕಾಗೆ ಸೂರ್ಯಮಂಡಲಕ್ಕೆ ನಿರಂತರ ಹೋಗಿ ಅಲ್ಲಿ ಶ್ರೀಕೃಷ್ಣನ ದರ್ಶನ ಪೂಜಾದಿಗಳನ್ನು ಮಾಡುತ್ತಿದ್ದರು.

ಶ್ರೀಕೃಷ್ಣನಿಗೆ ಪ್ರಾಕೃತ ದೇಹವಿಲ್ಲದಿದ್ದರೂ ಅಸುರಜನಮೋಹನಾರ್ಥವಾಗಿ ತನ್ನ ದೇಹ ತ್ಯಜಿಸಿದವನಂತೆ ತೋರಿಸಲಿಕ್ಕಾಗಿ ಬೇರೊಂದು ದೇಹ ನಿರ್ಮಿಸಿ ವ್ಯಾಧನ ಬಾಣದಿಂದ ಬಿದ್ದುಸತ್ತಂತೆ ತೋರಿಸಿದನು. ಅಪ್ರಾಕೃತದೇಹದಿಂದ ಜರಾಮರಣ ರಹಿತನಾದ ಶ್ರೀಹರಿಗೆ ಸಾವುನೋವುಗಳ ವಿಕಾರವಿದೆ ಎಂದು ತಿಳಿದರೆ ದೋಶಬರುತ್ತದೆ.

ಸಾಕ್ಷಾತ್ ಲಕ್ಷ್ಮೀದೇವಿಯಾದ ಸತ್ಯಭಾಮದೇವಿಯೂ ಅಗ್ನಿ ಪ್ರವೇಶಮಾಡಿ ತೋರಿಸಿದ್ದು ಅಸುರಜನರಿಗೆ ಅಜ್ಞಾನಕೊಟ್ಟು ಅವರನ್ನು ಅಂಧಂತಮಸ್ಸಿಗೆ ಹಾಕಲಿಕ್ಕಾಗಿ ಎಂದು ತಿಳಿಯಬೇಕು ಲಕ್ಷ್ಮೀನಾರಾಯಣರಿಗೆ ದೇಹಾತ್ಯಾಗವಿಲ್ಲ ಅವರು ಅನಿಶ್ಚಿರಲ್ಲ, ಶಾಶ್ವತರೂಪ ಅವರದು ಎಂದು ಭಗವಂತನ ಗೋಪ್ಯ ಧರ್ಮಗಳನ್ನು ತಿಳಿದವರಿಗೆ ಶಾಶ್ವತಸುಖ ಲಭಿಸುತ್ತದೆ.

ಶ್ರೀಕೃಷ್ಣನ ಆಜ್ಞೆಯಂತೆ ದಾರುಕ ಅರ್ಜುನನಗೆ ಶ್ರೀಕೃಷ್ಣನ ನಿರ್ಯಾಣದ ವಾರ್ತೆಯನ್ನು ಹೇಳಿದಾಗ ಅರ್ಜುನನು ಶ್ರೀಕೃಷ್ಣ ಅಗಲಿ ಹೋಗುತ್ತಾನೆಂಬ ದುಃಖದಿಂದ ಕಾತುರನಾಗಿ ಪ್ರಭಾಸ ಕ್ಷೇತ್ರಕ್ಕೆ ಓಡಿಬಂದನು. ಅಲ್ಲಿ ಯಾದವ ಸಮೂಹವೆಲ್ಲವೂ ಸತ್ತಿರುವುದನ್ನು ನೋಡಿ ಸಂಕಟದಿಂದ ಶ್ರೀಕೃಷ್ಣನನ್ನು ಹುಡುಕುತ್ತ ಬಂದನು. ಒಂದು ಅಶ್ವತ್ಥ ವೃಕ್ಷದ ಮೂಲದಲ್ಲಿ ಅಕ್ಷಯಕಾಯದ ಅಪ್ರಾಕೃತನಾದ ಹರಿಯ ದೇಹವನ್ನು ನೋಡಿ ಸಹಿಸಲಾರದ ದುಃಖಪಟ್ಟನು.

ಪ್ರತ್ಯಕ್ಷನಾಗಿ ತನ್ನೊಡನೆ ಹೇಗೆಬೇಕೋ ಹಾಗೆ ನಡೆದು ಆನಂದ ಕೊಡುತ್ತಿದ್ದ ಸ್ವಾಮಿ ಅಪ್ರತ್ಯಕ್ಷನಾದನಲ್ಲೂ ಮುಂದೆ ನಾನು ಒಂಟಿಯಾಗಿ ಹೇಗಿರಲಿ? ಎಂದು ಲೌಕಿಕ ದೇಹಿಗಳು ದೇಗತ್ಯಾಗ ಮಾಡಿದಾಗ ದುಃಖವನ್ನು ಅನುಭವಿಸುವಂತೆ ಅರ್ಜುನನು ಹರಿಯನ್ನು ನೆನೆ ನೆನೆದು ಹಂಬಲಿಸ ಹತ್ತಿದ್ದನು. ದಾರುಕನು ಶ್ರೀಕೃಷ್ಣನಿಗೆ ಸಾರಥಿಯಾಗಿ ಅವನ ಸೇವೆ

ಸಲ್ಲಿಸಲಿಕ್ಕಾಗಿ ಸ್ವಾಮಿ ಅನುಗ್ರಹದಿಂದ ಅದೇ ದೇಹದಿಂದಲೇ ವೈಕುಂಠಕ್ಕೆ ಹೋದನು.

ವಸುದೇವನು ಅರ್ಜುನನಿಂದ ಶ್ರೀಕೃಷ್ಣನ ಅಗಲುವಿಕೆಯನ್ನುತಿಳಿದು ಆತಕ್ಷಣವೇ ತನ್ನ ಪತ್ನಿಯರೊಂದಿಗೆ ಆಗ್ನಿಪ್ರವೇಶಮಾಡಿ ಮೂಲರೂಪ ಸೇರಿದನು. ಅರ್ಜುನನು ಶ್ರೀಕೃಷ್ಣ ಅಪ್ಪಣೆಮಾಡಿದಂತೆ ಅವನ ಹದಿನಾರು ಸಹಸ್ರ ಸತಿಯರನ್ನು ಬೇರೆ ಬೇರೆ ರಥಗಳಲ್ಲಿ ಕೂಡಿಸಿ ಹಸ್ತಿನಾವತಿಗೆ ಎಲ್ಲರನ್ನು ಕರೆದು ಕೊಂಡುಹೊರಟನು.

ಅರ್ಜುನ ದ್ವಾರಾವತಿಯಿಂದ ಹೊರಟ ತಕ್ಷಣವೇ ಶ್ರೀಕೃಷ್ಣ ಅಲ್ಲಿ ಸಲಿಲ ರೂಪದಿಂದ ನೆಲಸಿದನೋ ಎನ್ನುವಂತೆ ಹನ್ನೆರಡು ಯೋಜನದ ವಿಸ್ತಾರದ ದ್ವಾರಾವತಿಯೂ ಸಮುದ್ರರಾಜನ ಮಂದಿರದೊಳಗೆ ಮುಳುಗಿತು.

ಸಕಲ ಜೀವಿಗಳನ್ನು ನಿಷ್ಪಕ್ಷಪಾತದಿಂದ ಉದ್ಧಾರಮಾಡುವ ಸ್ವಾಮಿ ಅವರವರ ಗುಣದೋಶಗಗಳಿಗೆ ತಕ್ಕಂತೆ ರಕ್ಷೆ ಶಿಕ್ಷೆಗಳನ್ನು ಕೊಡುವವನಾದ್ದರಿಂದ ಪುಣ್ಯವತಿಯರಾದ ಸ್ತ್ರೀಯರ ಲೇಶಮಾತ್ರ ದೊಶವನ್ನು ಕಳೆದು ಅವರಿಗೆ ತನ್ನ ಲೋಕ ಕೊಡಲಿಕ್ಕಾಗಿ ಅರ್ಜುನನು ಶ್ರೀಕೃಷ್ಣನನ್ನು ಆಶ್ರಯಿಸಿದ್ದ ಸ್ತ್ರೀ ಸಮೂಹವನ್ನು ಕರೆತರುವಾಗ ದಾರಿಯಲ್ಲಿ ಮಹಾಪರಾಕ್ರಮ ಪ್ರಖ್ಯಾತನಾದ ಅರ್ಜುನನನ್ನು ಅಭೀಕರರೆಂಬ ಮ್ಲೇಂಛರು ಅಡ್ಡಗಟ್ಟಿ ಅವನನ್ನು ಸೋಲಿಸಿ ಸ್ತ್ರೀಯರೆಲ್ಲರನ್ನೂ ಹಿಡಿದುಕೊಂಡುಹೋದರು.

ಇವರೆಲ್ಲರೂ ಶ್ರೀಕೃಷ್ಣನ ಚರಣದಾಸ್ಯವನ್ನೇ ಅಪೇಕ್ಷಿಸಿಬಂದು ಸ್ವಾಮಿಯ ಸೇವೆಗಾಗಿಯೇ ಸಾಮೀಪ್ಯ ಸುಖಕ್ಕಾಗಿಯೇ ಹಾತೊರದವರಾದರೂ ತಾವೂ ಲಕ್ಷ್ಮೀದೇವಿಯರಿಗೆ ಸಮಾನರೆಂಬ ಅಜ್ಞಾನದಿಂದ ಮತ್ತರಾಗಿ ಒಮ್ಮೊಮ್ಮೆ ನಡೆದವರಾದ್ದರಿಂದ ಅವರ ದೋಶ ಪರಿಹಾರಕ್ಕಾಗಿ ಸ್ವಾಮಿ ಈ ಶಿಕ್ಷೆ ಅವರಿಗೆ ವಿಧಿಸಿದನು. ಮತ್ತು ಅರ್ಜುನನು ಶ್ರೀಕೃಷ್ಣನ ಮಹಿಮಾಪುರ್ಣತೆ ತಿಳಿದು ತಾನು ಅಸ್ವತಂತ್ರನೆಂಬ ಜ್ಞಾನ ಹೊಂದಿದವನಾದಾಗ್ಯೂ ಒಮ್ಮೊಮ್ಮೆ ಅವನಿಗೆ ತಾನೇ ಮಾಡಿದ್ದೇನೆಂಬ ಅಹಂಭಾವ ಬರುತ್ತಿದ್ದರಿಂದ ಅದರ ದೋಶನಿವಾರಣೆಗಾಗಿ ಅವನು ಒಬ್ಬ ಸಾಮನ್ಯ ಬೇಡನ ಕೈಲಿ ಸೋಲುವಂತೆ ಮಾಡಿದನು. ಮ್ಲೇಂಛರು ಅರ್ಜುನನ ಮೇಲೆ ಮೇರೆದಪ್ಪಿ ಬಂದರು. ಅರ್ಜುನನ ದಿವ್ಯ ಧನಸ್ಸು,ಗಾಂಡೀವ ಯಾವುದೂ ಅವನಿಗೆ ಸಹಕರಿಸದೆ ಕೈಕಳಚಿದವು. ಎಲ್ಲಾ ಆಯುಧಗಳು ದುರ್ಬಲವಾದಂತಾದವು ಅಕ್ಷಯ ಬತ್ತಳಿಕೆ ಬರಿದಾಯಿತು.

ಅರ್ಜುನನಿಗೆ ಆಶ್ಚರ್ಯವಾಯಿತು. ತನ್ನಲ್ಲಿತುಂಬಿದ್ದ ಸಕಲ ಸಂಪತ್ತುಗಳೂ ಶ್ರೀಕೃಷ್ಣನನ್ನೇ ಹಿಂಬಾಲಿಸಿ ಹೋದವೆಂದು ತಿಳಿದನು. ನನಗೆ ಬಲ, ಪರಾಕ್ರಮ,ಧೈರ್ಯ,ಶಕ್ತಿ ಎಲ್ಲವನ್ನು ಕೊಟ್ಟು ಆಯುದವನ್ನು ಕೊಟ್ಟ ನನ್ನ ಸ್ವಾಮಿ ನನ್ನ ಬಳಿ ಇದ್ದಿದ್ದರಿಂದ ಅವೆಲ್ಲಕ್ಕೂ ಅವನ ಮಹಿಮಾಶಕ್ತಿ ತುಂಬಿತ್ತು. ಎಲ್ಲವೂ ನನಗೆ ಜಯ ತಂದು ಕೊಡುತ್ತಿದ್ದವು. ಈಗಲು

ಅವೆಲ್ಲ ಸಂಪತ್ತು ನನ್ನಲಿದ್ದರೂ ದೈವಾನುಗ್ರಹ ಅವಕ್ಕೆತಪ್ಪಿಹೋಗಿರುವುದರಿಂದ ದುರ್ಬಲವಾದವು ಎಂದು ಕೊಂಡು ''ಸ್ವಾಮೀ! ಕೃಷ್ಣಾ!ನೀನು ಮುಖ್ಯಪ್ರಾಣನೊಂದಿಗೆ ನನ್ನಲ್ಲಿ ನೆಲಸಿರುವುದರಿಂದಲೇ ನಾನು ಬದುಕಿದ್ದೆನ ಎಮಕಿದ್ದರೂ ನನ್ನ ಅಜ್ಞಾನದಿಂದ ಸತ್ತಂತಾಗಿದೆ ನಿನ್ನ ವ್ಯಾಪ್ತತೆ ನಿನ್ನ ಸ್ವತಂತ್ರಕ್ಕೆ ಸುಜ್ಞಾನದಿಂದ ಚಿಂತಿಸದೆ ನಾನೀಗ ಒಬ್ಬಂಟಿಗ ನಾನೇ ಎಲ್ಲವನ್ನು ಮಾಡಬೇಕೆಂದು ತಿಳಿದ ಕಾರಣ ಈಗ ಅಸ್ವತಂತ್ರನಾದ ನನಗೆ ಒಂದು ಹುಲ್ಲು ಕಡ್ಡಿಯನ್ನು ಅಲ್ಲಾಡಿಸಲು ಆಗುತ್ತಿಲ್ಲ ಒಂದು ಮಣ್ಣಿನ ಹೆಂಟೆಯ ಏಟನ್ನು ಸಹಿಸಲಾಗುತ್ತಿಲ್ಲ''ಎಂದು ಪಶ್ಚಾತ್ತಾಪದಿಂದ ನೊಂದು ಮುಂದೆ ಮುಂದೆ ಹೆಜ್ಜೆ ಹಾಕುತ್ತಿದ್ದನು. ಭಕ್ತನ ಅಂತರಂಗದ ಆರ್ತತಗೆ ಕರುಣ ತೋರಿಸಿದ ಹರಿ ವೇದವ್ಯಾಸ ರೂಪದಿಂದ ದರ್ಶನವಿತ್ತಾಗ ಅರ್ಜುನನು ಅತೀವ ದುಃಖದಿಂದ ಅವರಪಾದಗಳ ಮೇಲೆ ಬಿದ್ದು ಸ್ವಾಮಿ!ನನ್ನ ಸರ್ವಸ್ವವಾದ ನನ್ನ ಪ್ರಭು ಶ್ರೀಕೃಷ್ಣ ನನ್ನನ್ನು ಬಿಟ್ಟು ಪರಂಧಾಮಕ್ಕೆ ಹೊರಟು ನನಗೆ ಸಾಮೀಪ್ಯ ಸುಖ ತಪ್ಪಿ ಹೋಯಿತು''ಎಂದು ದುಃಖದಿಂದ ಅಳುತ್ತಿದ್ದನು.

ವೇದವ್ಯಾಸರು ಅವನನ್ನು ಸಮಾಧಾನಮಾಡುತ್ತ ಪಾರ್ಥ ಸುಖ ದುಃಖ ಎರಡು ನಮ್ಮ ಮುಷ್ಠಿಯೊಳಗೆ ಮನೆಮಾಡಿಕೊಂಡುರುತ್ತವೆ. ನಾವು ನಿರ್ಲಿಪ್ತ ಭಾವದಿಂದ ಮುಷ್ಟಿ ಬಿಚ್ಚಿದ್ದರೆ ಅದು ನಮ್ಮ ಗೊಡವೆಗೆ ಬರದೆ ಓಡುತ್ತದೆ. ಅರ್ಜುನಾ! ನೀನು ನಿನ್ನ ಸ್ವಾಮಿಯಿಂದ ರಹಿತನಾಗಿದ್ದೇನೆಂದು ತಿಳಿದಿರುವುದರಿಂದ ನಿನಗೆ ಇಂಥ ದುಃಖ ಸಂಭವಿಸಿತು. ಕೃಷ್ಣ ನಿನ್ನಲ್ಲಿರುವುದರಿಂದಲೇ ನಿನಗೆ ಸ್ತ್ರೀ ಯರನ್ನು ಕರೆದು ಕೊಂಡು ಹಸ್ತಿನಾವತಿಗೆ ಹೊರಡುವ ಚೈತನ್ಯ ಬಂದಿತು. ಅವನ ಕೃಪೆ ಅವನ ಸಾಮಿಪ್ಯ ನಿನಗಿರುವುದರಿಂದಲೇ ನೀನು ನನ್ನ ಬಳಿ ನಿಂತು ನಿನ್ನ ಸ್ವಾಮಿಯ ವಿರಹ ದುಃಖ,ಅಪಜಯದ ದುಃಖಗಳನ್ನುನನ್ನ ಮುಂದೆ ತೋಡಿಕೊಳ್ಳುತ್ತಿರುವಿ. ಅಜ್ಞಾನವೇ ಅಪತ್ತು, ಸುಜ್ಞಾನವೇ ಸಂಪತ್ತು ಅನಂತ ರೂಪದಿಂದ ಆನಂದಪಡಿಸುವ ದೇವನು ವೈಕುಂಠದಲ್ಲಿ ಮಾತ್ರ ಸುಖಲೋಲುಪಾನದರೆ ಅವನು ಅನಂತನೆಂದೆನಿಸುತ್ತಿರಲಿಲ್ಲ. ಭಕ್ತವತ್ಸಲನೆಂಬ ಸ್ತುತಿಗೆ ಅವನು ಪಾತ್ರನಾಗುತ್ತಿರಲಿಲ್ಲ. ಅನೇಕ ರೂಪದಿಂದ ಸದಾ ನಿನ್ನ ಸನ್ನಿಹದಲ್ಲೇ ಇದ್ದು ನಿನಗೆ ಚೇತನ ತುಂಬುತ್ತಿದ್ದಾನೆಂದು ತಿಳಿದು ಅವನನ್ನು ಪ್ರತ್ಯಕ್ಷವಾಗಿ ನೋಡುವ ಭಾಗ್ಯಹೊಂದು. ವಿಶ್ವವ್ಯಾಪಿಯು ವಿಶ್ವನಾಥನೂ ಆದ ಪ್ರಭು ಆಗ ಇದ್ದ ಈಗ ಇಲ್ಲ ಎಂಬ ಅಜ್ಞಾನದಿಂದ ಅವನನ್ನು ಅಸತ್ಯ ಅಶಾಶ್ವತ ಎಂದು ತಿಳಿದು ಈ ಘೋರ ದುಃಖಕ್ಕೆ ಸಿಕ್ಕಿರುವಿ ಸ್ವಾಮಿಯ ಸಾಕ್ಷಾತ್ಕಾರದ ಸುಖ ನಿನಗೆ ಸದಾ ಬೇಕಾದರೆ ಅವನನ್ನು ವ್ಯಾಪ್ತ ಚಿಂತನೆಯಿಂದ ಸ್ಮರಿಸು ನಿನ್ನೊಡನೆ ಎಡಬಿಡದೆ ಇರುತ್ತಾನೆ''ಎಂದು ಹೇಳಿದಾಗ ಕಗ್ಗತ್ತಲೆಯಲ್ಲಿ ಸಿಕ್ಕುಬಿದ್ದು ಸುಗಮ ದಾರಿ ಸಿಗದೆ ಕಲ್ಲು ಮುಳ್ಳುಗಳ ಕೊರಕಲಲ್ಲಿ ಸಂಕಟದಿಂದ ನೆರಳಾಡುವಾಗ ಸೂರ್ಯೋದಯದ ಸುಖ ದೊರೆತು ಕಷ್ಟದ ಕೊರಕಲಿನಿಂದ ಮೇಲೆದ್ದು ಸುಖದ ಮಾರ್ಗಕಾಣುವಂತೆ ಅರ್ಜುನನಿಗೆ ಶ್ರೀವೇದವ್ಯಾಸರೆಂಬ ಅನಂತಸೂರ್ಯಮಹಿಮರ ದರ್ಶನ ಪಡೆದಾಗ ಅವರಿಂದ ಹೊರಟ ಸುಜ್ಞಾನ ಕಿರಣ ಸಂತಾಪ

ಸಹಸ್ರವನ್ನು ಸುಟ್ಟುಹಾಕಿತು ಅರ್ಜುನನು ಆಗ ಶ್ರೀಕೃಷ್ಣನ ಒಡನಾಟವನ್ನು ಮನದಲ್ಲಿ ಅನುಭವಿಸುತ್ತ ಮುಂದೆ ಹೊರಟನು.

ಮ್ಲೇಂಛರಿಗೆ ಸಿಕ್ಕಿದ್ದ ಹದಿನಾರುಸಹಸ್ರ ಸ್ತ್ರೀಯರೂ ಶ್ರೀಕೃಷ್ಣನನ್ನೆ ಸ್ಮರಿಸುತ್ತ ತಮ್ಮ ವಿಪತ್ತನ್ನು ನಿವಾರಿಸಿ ನನ್ನ ಪಾದದರ್ಶನ ಕೊಡು ಎಂದು ಆರ್ತರಾಗಿ ಮೊರೆಯಿಟ್ಟು ಪ್ರಾರ್ಥಿಸುತ್ತಿದ್ದಾಗ ಕರಣಾಳು ಕೃಷ್ಣ ತನ್ನ ಪಾದ ಸೇವೆಗಾಗಿಯೇ ತಮ್ಮ ತನು ಮನಗಳನ್ನು ಮೀಸಾಲಗಿರಿಸಿ ಕೊಂಡಿದ್ದ ಆಪುಣ್ಯ ವಿತಿಯರನ್ನು ಉದ್ದರಿಸಬೇಕೆಂಬ ಸಂಕಲ್ಪದಿಂದ ಮುಖ್ಯ ಪ್ರಾಣನನ್ನು ಕುರಿತು ನನ್ನ ಪಾದಾಶ್ರಯವನ್ನೇ ನಂಬಿ ನನ್ನನ್ನು ಪತಿ ಎಂದು ತಿಳಿದು ಆರಾಧನೆಮಾಡುತ್ತಿದ್ದ ಹದಿನಾರುಸಹಸ್ರ ಸತಿಯರು ತಮ್ಮ ದೋಶ ನಿವಾರಣೆಗಾಗಿ ಆಶಾಢ ಶುದ್ದ ಏಕಾದಶಿ ಅಥವಾ ಫಾಲ್ಗುಣ ಶುದ್ದ ಏಕಾದಶಿಯಂದು ನಿರಾಹಾರದಿಂದ ಸರಸ್ವತೀ ನದಿಯೊಳಗೆ ಸ್ನಾನ ಮಾಡಿ ದೇಹತ್ಯಾಗ ಮಾಡಿದಾಗ ನನ್ನ ಲೋಕ ಸೇರುತ್ತಾರೆಂದು ಆದೇಶ ನೀಡಿದಾಗ ಪರಮಾತ್ಮನ ಪತ್ನಿಯರೆನಿಸಿದ್ದ ಪತಿವ್ರತೆಯರೆಲ್ಲ ತಪಸ್ಸುಮಾಡುತ್ತಿದ್ದಾಗ ನೀವು ಶ್ರೀಕೃಷ್ಣನು ಅನುಗ್ರಹ ಮಾಡಿರುವಂತೆ ಆಶಾಢ ಶುದ್ದ ಏಕಾದಶಿ ಅಥಾವ ಫಾಲ್ಗುಣ ಶುದ್ದ ಏಕಾದಶಿ ನಿರಾಹಾರದಿಂದ ಸರಸ್ವತೀ ತೀರ್ಥ ಸ್ನಾನ ಮಾಡಿ ಅವನ ಲೋಕಕ್ಕೆ ಸೇರಿರಿ''ಎಂದು ಆಕಾಶವಾಣಿ ಕೇಳಿಸಿದಾಗ ಎಲ್ಲರೂ ಆನಂದದಿಂದ ಶ್ರೀಕೃಷ್ಣನನ್ನು ಕೊಂಡಾಡುತ್ತ ಜಪತಪಾನಷ್ಟಾನಗಳನ್ನೂ ತೀರ್ಥಸ್ನಾನವನ್ನೂ ಮಾಡಿ ಸ್ವಾಮಿಯ ಸನ್ನಿಧಾನದಲ್ಲಿ ಸೇರಿದರು.

ಇತ್ತ ಅರ್ಜುನನು ಕುರುಕ್ಷೇತ್ರದಲ್ಲಿ ಕೃತವರ್ಮನ ಮಗನಿಗೆ ಪಟ್ಟಾಭೀಷೇಕ ಮಾಡಿದನು. ಸಾರಸ್ವತ ದೇಶದಲ್ಲಿ ಸಾತ್ಯಕಿಯ ಮಗನಿಗೆ ಪಟ್ಟಾಭೀಷೇಕ ಮಾಡಿದನು. ಅನಿರುದ್ದನ ಮಗ ವಜ್ರನಿಗೆ ಯದುರಾಜ್ಯವನ್ನು ಮತ್ತು ಇಂದ್ರ ಪ್ರಸ್ಥವನ್ನು ಕೊಟ್ಟು ಮಧುರಾ ಪಟ್ಟಣದಲ್ಲಿ ಪಟ್ಟಾಭೀಷೇಕ ಮಾಡಿದನು. ಎಲ್ಲವನ್ನು ಶ್ರೀಕೃಷ್ಣನಾಜ್ಞೆಯಂತೆ ನಡೆಯಿಸಿದ ನಂತರ ಹಸ್ತಿನಾವತಿಗೆ ಬಂದನು.

ಧರ್ಮರಾಜನು ಅನೇಕ ಅಮಂಗಳಗಳನ್ನುರಾಜ್ಯದಲ್ಲಿ ಕಂಡನು. ದುರ್ನಿಮಿತ್ತಗಳನ್ನು ನೋಡಿದರೆ ಏಕೋ ಬಹಳ ಕಳವಳ ಆಗುತ್ತಿದೆ. ಶ್ರೀಕೃಷ್ಣನ ಶುಭ ಸನ್ನಿಧಾನ ನಮಗೆ ಎಲ್ಲಿ ತಪ್ಪುತ್ತದೋ ಎಂಬ ಚಿಂತೆ ಅರ್ಜುನ ಇನ್ನುಬರಲ್ಲಿಲ್ಲವೆಂಬ ಚಿಂತೆಯಿಂದ ಭಗವಂತನನ್ನು ಧ್ಯಾನಮಾಡುತ್ತ ಅರ್ಜುನನ ದಾರಿ ಕಾಯುತ್ತಿಲಿದ್ದಾಗ ಅರ್ಜುನ ಬಂದನು.

ಬಂದವನೇ ಸಂತೋಷದಿಂದ ನಮಸ್ಕಾರಮಾಡಲಿಲ್ಲ. ಶ್ರೀಕೃಷ್ಣನ ವಾರ್ತೆ ಸ್ವಾರಸ್ಯವಾಗಿ ಬಣ್ಣಿಸಲಿಲ್ಲ ಮುಖದಲ್ಲಿ ತೇಜಸ್ಸಿಲ್ಲ ಏಕೋ ಭಯವಾಯಿತು.

ಪಾರ್ಥಾ! ಶ್ರೀಕೃಷ್ಣನ ಮಂಗಳವಾರ್ತೆ ಏಕೆ ತಿಳಿಸುತ್ತಿಲ್ಲ? ಬೇಗಹೇಳು''ಎಂದನು

ಅರ್ಜುನನು ಪ್ರಭಾಸಕ್ಷೇತ್ರದಲ್ಲಿ ನೋಡಿದ ಯಾದವರ ದುರಂತಕಥೆ ಶ್ರೀಕೃಷ್ಣನು ಪರಂಧಾಮವನ್ನೈದಿದ ಸುದ್ದಿಯನ್ನು ಹೇಳಲಾರದೆ ಹೇಳಿದನಂತರ ಶ್ರೀವೇದವ್ಯಾಸರ ದರ್ಶನವಾದಮೇಲೆ ಅವರುತಿಳಿಸಿದ ವೈರಾಗ್ಯಭಾವದುಪದೇಶವನ್ನು ತಿಳಿಸಿ ಸುಮ್ಮನಾದನು.

ಧರ್ಮರಾಜನು ಶ್ರೀಕೃಷ್ಣನು ತಮಗೆ ಪ್ರತ್ಯಕ್ಷವಾಗಿ ನೀಡುತ್ತಿದ್ದ ಸಾನಿಧ್ಯ ಸೌಭಾಗ್ಯವನ್ನು ಕಳೆದುಕೊಂಡೆವೆಂದು ಎಲ್ಲರೊಡಗೂಡಿ ದುಃಖ ಪಡುತ್ತ ನಾವು ಶ್ರೀಕೃಷ್ಣ ಭುಮಂಡಲದಲ್ಲಿ ನಮಗೆ ಪ್ರತ್ಯಕ್ಷ ದರ್ಶನ ಕೊಡುವವರೆಗೂ ರಾಜ್ಯಭಾರ ಮಾಡುತ್ತೇವೆಂದು ಸಂಕಲ್ಪಮಾಡಿದಂತೆ ನಾವೀಗ ರಾಜ್ಯಭಾರದ ಆಡಳಿತ ನಿಲ್ಲಿಸಬೇಕು''ಎಂದು ಆತಕ್ಷಣವೇ ಸಿಂಹಾಸನದಿಂದಳಿದನು.

ಪಾಂಡವರು ಶ್ರೀಕೃಷ್ಣನ ಪಾದಮೂಲದಲ್ಲಿ ಮನಸ್ಸನ್ನು ಸೇರಿಸಿ ಆಗಲೇ ಲೌಕಿಕ ಸುಖವೆಲ್ಲವನ್ನು ತಮ್ಮಿಂದ ಕಿತ್ತೊಗೆದು ನಿರ್ಲಿಪ್ತಭಾವದಿಂದ ಪರೀಕ್ಷಿತನಿಗೆ ರಾಜ್ಯಸಿಂಹಾಸನ ಒಪ್ಪಿಸಿ ಅವನಿಗೆ ಪಟ್ಟಾಭಿಷೇಕ ಮಾಡಿದರು. ನಂತರ ಅಭಿಮನ್ಯು ಕುಮಾರ ಹಸ್ತಿನಾವತಿಯ ಅರಸನಾದನು. ಪಾಂಡವರು ''ಪರೀಕ್ಷಿದ್ರಾಜಾ! ಈಗ ನೀನು ಹಸ್ತಿನಾವತಿಯ ರಾಜನಾಗಿರುವಿ ಪ್ರಜಾಪಲಾನೆ ಸಧರ್ಮರಕ್ಷಣೆಯೊಂದಿಗೆ ಶ್ರೀಕೃಷ್ಣನ ಸತ್ಕಥನ ಸುಜ್ಞಾನಪರಿ ಪೂರ್ಣವಾದ ಶ್ರವಣ ಮನನಾದಿಗಳೆಂಬ ನವವಿಧ ಭಕ್ತಿ ಕುಸುಮಗಳನ್ನು ರಾಜ್ಯದಲ್ಲಿ ಯಥೇಚ್ಚವಾಗಿ ಬೆಳಸಿ ನಮ್ಮ ಮನೆ ಮನೋದೇವನಾದ ಶ್ರೀಕೃಷ್ಣನಿಗರ್ಪಿಸಿ ನಮ್ಮವಂಶದ ಸುವರ್ಣಮಯ ಕೀರ್ತಿ ಗೋಪುರಕ್ಕೆ ಕುಂದಣಕೆತ್ತಿದಂತೆ ಕಂಗೊಳಿಸು. ಅಧರ್ಮ ಪ್ರವರ್ತಕರಾದ ಮ್ಲೇಂಛರು ವರ್ಣಾಶ್ರಮಗಳನ್ನು ಕೊಡೆಸಿ ಧರ್ಮಕ್ಕೆ ಚ್ಯುತಿತರುತ್ತಾರಾದ್ದರಿಂದ ಅಧರ್ಮಿಗಳನ್ನು ಬಿಡದೆ ಧ್ವಂಸಮಾಡಿ ಸ್ವಚ್ಛ ಧರ್ಮ ನೆಲೆಗೊಳ್ಳುವಂತೆ ಮಾಡು ಹರಿಸರ್ವೋತ್ತಮತ್ವದ ಪರಿಶುದ್ಧ ಜ್ಞಾನದ ಸುವರ್ಣ ವೃಷ್ಟಿ ರಾಜ್ಯದಲ್ಲಿ ಆಗುವಂತೆ ಭಗವತ್ಸಾದನೆ ಸದಾ ನಡೆಯಲಿ''ಎಂದು ಉಪದೇಶಮಾಡಿ ರಾಜ್ಯವನ್ನು ಪರೀಕ್ಷಿದ್ರಾಜನ ಅಂತರ್ಗತನಾದ ಶ್ರೀನಾರಾಯಣನಿಗೆ ಅರ್ಪಿಸಿ ತಮ್ಮ ಸಕಲ ಕರ್ಮಗಳನ್ನು ಶ್ರೀಕೃಷ್ಣಾರ್ಪಣ ಮಾಡಿ ರಾಜವೈಭವದ ಉಡಿಗೆ ತೊಡಿಗೆಗಳೆಲ್ಲವನ್ನೂ ಕಳಚಿ ವಿರಕ್ತಿ ಭಾವದಿಂದ ನಾರುಡಿಗೆ ಧರಿಸಿ ದ್ರೌಪದಿಯೊಡಗೂಡಿ ಐದು ಜನರು ರಾಜ್ಯಕ್ಕೆ ಪ್ರದಕ್ಷಣಾಕಾರವಾಗಿ ಹಿಮವತ್ಪರ್ವತದ ದಿಕ್ಕಿನ ಕಡೆಗೆ ಹೊರಟರು.

## ಪಾಂಡವರ ಮಹಾಪ್ರಸ್ಥಾನ

ಪರಮಾತ್ಮ ಪರಂಧಾಮಕ್ಕೆ ಹೊರಟ ನಂತರ ಪಾಂಡವರೂ ಭುಮಂಡಲವನ್ನು ಬಿಟ್ಟು ಹೊರಡಲು ಸಂಕಲ್ಪಮಾಡಿ ಶ್ರೀಕೃಷ್ಣನ ಆಜ್ಞಾದೀಕ್ಷೆಯುಳ್ಳವಾರಾಗಿ ಹೊರಟರು. ಅರ್ಜುನನ ಪತ್ನಿ ಸುಭದ್ರಾದೇವಿ ಇನ್ನು ಉಳಿದವರ ಪತ್ನಿಯರನ್ನು ಹಸ್ತಿನಾವತಿಯಲ್ಲೇ ಬಿಟ್ಟು ದ್ರೌಪದೀ ಸಹಿತರಾದ ಐದು ಜನ ಪಾಂಡವರೂ ಮಹಾಪ್ರಸ್ಥಾನಕ್ಕಾಗಿ ಹೊರಟು ಸಿದ್ದರಾಗಿ ಹೋಗುವಾಗ ಧೃತರಾಷ್ಟ್ರನ ಮಗ ಯುಯುತ್ಸವನ್ನು ಕರೆದು ಪರೀಕ್ಷಿತನು ಇನ್ನು

ಚಿಕ್ಕವನು, ಆದ್ದರಿಂದ ಹಿರಿಯನಾದ ನೀನೆ ರಾಜ್ಯಭಾರಮಾಡು''ಎಂದು ಹೇಳಿ ಹೊರಟನು.

ಈಶಾನ್ಯದಿಕ್ಕಿನಲ್ಲಿ ಬರುತ್ತಿದ್ದರೆ ಅಗ್ನಿದೇವನು ಬಂದು ಅರ್ಜುನನನ್ನು ಕುರಿತು ''ಅರ್ಜುನಾ! ನಾನು ವರುಣನ ಕೈಲಿ ಗಾಂಡೀವಧನಸ್ಸನ್ನು ಕೇಳಿ ತಂದು ನಿನಗೆ ಕೊಟ್ಟಿದ್ದೆನು. ಈಗ ಅದನ್ನು ಕೊಡು ವರುಣನಿಗೆ ಕೊಡುತ್ತೆನೆ''

ಎಂದನು. ಅರ್ಜುನನಿಗೆ ಗಾಂಡೀವ ಎಂದರೆ ಬಹಳ ಅಭಿಮಾನ ಆದ್ದರಂದಲೇ ಎಲ್ಲವನ್ನು ತ್ಯಜಿಸಿ ವೈರಾಗ್ಯದಿಂದ ಬಂದಿದ್ದರೂ ಗಾಂಡೀವವನ್ನು ಮಾತ್ರ ಬಿಡದೆ ತಂದಿದ್ದ ಆದನ್ನು ಕೊಡಲು ಒಪ್ಪಲಿಲ್ಲ. ಆಗ ಧರ್ಮರಾಜನು ಅರ್ಜುನಾ ಸ್ವಾಮಿ! ಸನ್ನಿಧಾನ ಸಂಪತ್ತನ್ನೆ ಕಳೆದುಕೊಂಡಿರುವಾಗ ಆ ಜಡ ವಸ್ತುವಿನ ಮೇಲೇಕೆ ಅಷ್ಟು ಅಭಿಮಾನ? ನಮ್ಮ ಸಮೀಪದಲ್ಲಿರುವ ಸಕಲ ವಸ್ತುಗಳಲ್ಲು ಅಂತರ್ಗತನಾಗಿದ್ದ ಹರಿ ಅಗಲಿ ಹೋಗಿದ್ದಾನೆ ಈಗ ನಮಗೆ ಆದರಿಂದ ಎನೂ ಪ್ರಯೋಜನವಿಲ್ಲ'' ಎಂದಾಗ ಅರ್ಜುನನು ಅತೀವದುಃಖದಿಂದ ಅದನ್ನು ಸಮುದ್ರದೊಳಗೆ ಎಸೆದನು. ಆಗ ಅಗ್ನಿಯು ವರುಣಾನಿನ್ನ ಗಾಂಡೀವ ನಿನಗೆ ಸಂದಿದೆ'' ಎಂದು ಅದೃಶ್ಯನಾದನು.

ನಂತರ ಪಾಂಡವರು ಏಳು ದಿವುಸಗಳೊಳಗೆ ಸಪ್ತ ಸಮದ್ರ ಸಪ್ತ ದ್ವೀಪಗಳನ್ನು ಪ್ರದಕ್ಷಣೆಮಾಡಿ ಜಂಬೂದ್ವೀಪವನ್ನು ಸೇರಿ ಗಂಧಮಾದನ ಪರ್ವತಕ್ಕೆ ಬಂದರು. ಅಲ್ಲಿ ಭೀಮಸೇನನ ಹೆಂಡತಿಯಾದ ಭಾರತೀದೇವಿಯರು ಯೋಗಶಕ್ತಿಯಿಂದ ಜೀವನನ್ನು ಬ್ರಹ್ಮರಂಧ್ರಕ್ಕೆ ತಂದು ದೇಹವಿಯೋಗಮಾಡಿದರು.

ದ್ರೌಪದೀದೇವಿ ದೇಹತ್ಯಾಗಮಾಡಿದ ನಂತರ ಸಹದೇವ,ನಕುಲ,ಅರ್ಜುನ ಮೂರು ಮಂದಿಯು ದೇಹ ಬಿಟ್ಟರು. ನಾಲ್ಕು ಜನರು ಸತ್ತನಂತರ ಭೀಮಸೇನನು ಸರ್ವಜ್ಞಾನಾಗಿದ್ದರೂ ಧರ್ಮರಾಜನನ್ನು ಕುರಿತು ''ಅರಸಾ! ಚಿಕ್ಕವರು ದೊಡ್ಡವರ ಮುಂದೆ ಸಾಯುವುದು ದೋಶದಿಂದ ಎಂದು ಧರ್ಮಶಾಸ್ತ್ರವಿದೆ ಅವರು ಏನು ದೋಶ ಮಾಡಿದ್ದಾರೆ?'' ಎಂದು ಕೇಳಿದನು. ತಿಳಿದಿದ್ದರೂ ಏಕೆ ಕೇಳಿದನೆಂದರೆ ಸತ್ತವರ ಗುಣದೋಶಗಳನ್ನು ಮಾತನಾಡಿದರೆ ಅವರ ಋಣಕಡಿದು ಹೋಗುತ್ತದೆಂಬ ಧರ್ಮ ರಹಸ್ಯವನ್ನರಿತು ಕೇಳಿದನು.

ಧರ್ಮರಾಜನು ''ಭೀಮಾ! ದ್ರೌಪದಿಯಲ್ಲಿ ದೋಷವಿದ್ದಕಾರಣ ದೇಹ ಬಿಟ್ಟಳು. ಏನೆಂದರೆ ಹಿರಿಯನಾದ ನನಗಿಂತಲೂ ಅರ್ಜುನನಿಗೇ ಅಧಿಕ ಗೌರವ ಸಲ್ಲಿಸುತ್ತಿದ್ದಳು. ಆ ದೋಶದಿಂದ ಸತ್ತಿದ್ದಾಳೆ'' ಎಂದನು. ಆದರೆ ದ್ರೌಪದಿ ದೋಷ ರಹಿತಳು. ಭಾರತೀದೇವಿಯಲ್ಲಿ ಅಜ್ಞಾನಕ್ಕೆ ಆಸ್ಪದವಿಲ್ಲ. ಧರ್ಮರಾಜ-ಅರ್ಜುನ-ನಕುಲ-ಸಹದೇವರಲ್ಲಿ ಅರ್ಜುನನು ದೇವತಾಂಶದಲ್ಲಿ ಶ್ರೇಷ್ಟನಾದ್ದರಿಂದ ಅವನನ್ನು ಹೆಚ್ಚು ಗೌರವಿಸುತ್ತಿದ್ದಳು ಎಂಬ ಶ್ರೀಮದಾಚಾರ್ಯರ ವಾಕ್ಯ ನಮ್ಮ ಸಂದೇಹ ನಿವಾರಣೆ ಆಗುತ್ತದೆ. ನಕುಲನು ತಾನೇ

ಬಹಳ ಚೆಲುವನೆಂಬ ಅಹಂಭಾವದಿಂದ ದೋಶಿಯಾಗಿದ್ದನು. ಸಹದೇವನು ತಾನು ಬಹಳ ನೀತಿವಂತನೆಂಬ ಅಹಂಕಾರ ಉಳ್ಳವನಾಗಿದ್ದನು. ಆದ್ದರಿಂದ ಸತ್ತರು ಎಂದನು.

ನಂತರ ಭೀಮಸೇನನೂ ದೇಹಬಿಟ್ಟನು ಅವನು ಬಲವಂತನೆಂಬ ಅಹಂಕಾರ ಉಳ್ಳವನಾದ್ದರಿಂದಲೂ ಅಧಿಕ ಆಹಾರ ಸೇವನೆ ಮಾಡುತ್ತಿದ್ದನಾದ್ದರಿಂದ ಆದೋಶದಿಂದ ಸತ್ತನೆಂದು ಧರ್ಮರಾಜ ತಿಳಿದಿದ್ದರೂ ಭೀಮನಲ್ಲಿದ್ದ ಆ ಗುಣಗಳೂ ದೋಷವಲ್ಲವೆಂದೇ ತಿಳಿಯಬೇಕೆಂದು ಧರ್ಮರಹಸ್ಯ ಹೇಳುತ್ತದೆ. ಹೇಗೆಂದರೆ ಭೀಮಸೇನನಲ್ಲಿ ಜಠರಾಗ್ನಿ ಅಂಗುಷ್ಠ ಪ್ರಮಾಣದಲ್ಲಿರುವುದರಿಂದ ಅವನು ಅದಕ್ಕೆ ತಕ್ಕಷ್ಟು ಆಹಾರ ಸೇವನೆ ಮಾಡಬೇಕಾಗಿದ್ದೇ ಧರ್ಮವಾಗಿತ್ತು. ಭೀಮಸೇನನು ತಾನು ಬಲಿಷ್ಟನೆಂದು ತಿಳಿದಿದ್ದೂ ದೋಶವಲ್ಲ. ಹೇಗೆಂದರೆ ಅವನು ತನ್ನ ಬಲವನ್ನು ಶ್ರೀಕೃಷ್ಣನ ಮುಂದೆ ಅರ್ಪಣ ಮಾಡಿ ಸ್ವಾಮಿ! ನಿನ್ನ ಅನುಗ್ರಹವಿದ್ದರೆ ಈ ಬ್ರಹಾಂಡವನ್ನೇ ಎರಡು ಭಾಗ ಮಾಡಿ ತಾಳ ಬಾರಿಸಬಲ್ಲೆನು ಎಂದಾಗ ಶ್ರೀಕೃಷ್ಣನು ಭೀಮಾ! ನೀನು ಅದಕ್ಕಿಂತಲೂ ಹೆಚ್ಚು ಸಾಹಸವನ್ನು ಮಾಡಬಲ್ಲೆ ನಾನು ನಿನಗೆ ಅನುಗ್ರಹಸಿದ ಬಲದಲ್ಲಿ ಕುಗ್ಗಿಸಿ ಹೇಳಿರುವಿ ಎಂದು ದೇವೋತ್ತಮನೇ ಹೇಳಿರುವುದರಿಂದ ವಾಯುಸುತನ ವಾಕ್ಯದಲ್ಲಿ ದೋಷಾರೋಪಣೆಗೆ ಅವಕಾಶವೇ ಇಲ್ಲ. ದುರ್ಯೋಧನ ಕಲಿ ಆದ್ದರಿಂದ ಅವನನ್ನೂ ಹೇಗೆ ನಾಶಪಡಿಸದರೂ ಪುಣ್ಯವೇ ಪ್ರಾಪ್ತಿ. ಪಾಪಲೇಪವಿಲ್ಲ. ಈ ಎಲ್ಲಾ ಪ್ರಮಾಣಗಳಿಂದಲೂ ದ್ರೌಪದೀದೇವಿ ಮತ್ತು ಭೀಮಸೇನ ನಿರ್ದೋಷಿಗಳೆಂದು ತಿಳಿಯಬೇಕೆಂದು ಶುದ್ಧಶಾಸ್ತ್ರಜ್ಞರು ನಿರ್ಣಯಿಸಿರುವಂತೆ ಈ ವಾಕ್ಯ ಸಕಲ ಜೀವಿಗಳಿಗೂ ಮಂಗಳದಾಯಕವಾದದ್ದು.

ನಿರ್ದೋಶಿಗಳಾಗಿದ್ದರೆ ದೇಹ ಏಕೆಬಿಟ್ಟರು? ಎಂದರೆ ದೇಹದ ಕರ್ಮ ತೀರಿದ ನಂತರ ಆ ದೇಹದಿಂದ ಸ್ವರ್ಗಕ್ಕೆ ಹೋಗುವಂತಿಲ್ಲ ಪ್ರಾರಬ್ಧ ಕರ್ಮದಿಂದ ದೇಹ ತ್ಯಜಿಸಿದರು. ಧರ್ಮರಾಜ ಒಬ್ಬನು ದೇಹ ಬಿಡಲಿಲ್ಲ. ಅವನ ಹಿಂದೆ ಯಮಧರ್ಮರಾಜನು ನಾಯಿಯ ರೂಪದಿಂದ ಬರುತ್ತಿದ್ದನು. ಧರ್ಮರಾಜನು ನಾಯಿಯೊಡನೆ ಬರುತ್ತಿದ್ದಾಗ ಸ್ವರ್ಗ ಲೋಕದಿಂದ ನವರತ್ನ ಖಚಿತವಾದ ರಥ ಬಂದು ನಿಂತಿತು. 'ಧರ್ಮರಾಜಾ! ಬಾ ಈ ರಥ ಏರಿ ಸ್ವರ್ಗಕ್ಕೆ ಬರಬೇಕು' ಎಂದು ದೇವದೂತರು ಕರೆದಾಗ ಧರ್ಮರಾಯನು ''ಸ್ವಾಮಿ! ನಾನು ನನ್ನ ಸಹೋದರರು -ಸತಿ-ಎಲ್ಲರನ್ನು ಕಳೆದುಕೊಂಡು ಒಬ್ಬನೇ ಅನಾಥನಾಗಿ ದುಃಖದಿಂದ ಬರುವಾಗ ನನಗೆ ಸಮಾಧಾನ ಮಾಡಲಿಕ್ಕಾಗಿಯೇ ಬಂದಿತೋ ಎನ್ನುವಂತೆ ಈ ನಾಯಿ ನನ್ನ ಸಮೀಪಕ್ಕೆ ಬಂದು ನನ್ನನ್ನು ಎಡಬಿಡದೆ ಅನುಸರಿಸಿ ಬರುತ್ತಿದೆ. ನನ್ನನ್ನು ಅನುಸರಿಸಿದ ಯಾವ ಪ್ರಾಣಿಯೇ ಆಗಲಿ ಅವರನ್ನು ಬಿಡದೆ ನಾನು ಅನುಸರಿಸಬೇಕಾದ್ದೇ ಧರ್ಮವಾದ್ದರಿಂದ ಈ ನಾಯಿಯನ್ನು ಬಿಡಲು ನಾನು ಸಿದ್ದನಿಲ್ಲ ಎಂದನು. ''ಧರ್ಮರಾಜಾ! ನಿನ್ನ ಪುಣ್ಯ ನಿನಗೆ ಸ್ವರ್ಗ ಸುಖ ಅನುಭವಿಸಲು ಕರೆಯುತ್ತಿದೆ'' ನಾಯಿಯ ಕರ್ಮಫಲ ಏನೋ

ಅದು ಅನುಭವಿಸುತ್ತದೆ ಅದಕ್ಕೂ ನಿನಗೂ ಸಂಬಂಧವಿಲ್ಲ ಬಾ'' ಎಂದರು. ದುಶ್ಕರ್ಮ-ಸುಕರ್ಮಗಳು ಪ್ರಾರಬ್ಧಕರ್ಮದಿಂದ ಒದಗುತ್ತದೆ. ಈ ನಾಯಿ ದುಶ್ಕರ್ಮವನ್ನು ತ್ಯಜಿಸಿ ಪುಣ್ಯಮಾರ್ಗವನ್ನು ಹಿಡಿದು ಬರುತ್ತಿರುವುದರಿಂದ ಇದಕ್ಕೆ ನಾನು ಪುಣ್ಯ ಸಾಧನೆಯ ಸುಖ ಪ್ರಾಪ್ತವಾಗುವಂತೆ ಮಾಡಬೇಕು ಆದ್ದರಿಂದ ಇದಕ್ಕೆ ಪುಣ್ಯಲೋಕ ಪ್ರಾಪ್ತವಾಗುವವರೆಗೂ ನಾನು ಇದರ ಜೊತೆಯಲ್ಲಿ ಸಾಧನ ಮಾಡುತ್ತಲಿರುತ್ತೇನೆ. ನಂತರ ನಾಯಿಯೊಂದಿಗೆ ನಾನು ಸ್ವರ್ಗಲೋಕ ಸೇರುತ್ತೇನೆ ಎಂದನು.

ಧರ್ಮರಾಜನ ಅಂತಃಕರಣ ಧರ್ಮದೀಕ್ಷೆ ಪರಿಶುದ್ಧವಾದದ್ದು. ಯಮಧರ್ಮರಾಯನು ನಾಯಿಯ ರೂಪಹೊಂದಿ ಅವನನ್ನೂ ಹಿಂಬಾಲಿಸಿದ್ದನು. ಈಗ ಪ್ರತ್ಯಕ್ಷವಾಗಿ ''ಧರ್ಮರಾಜಾ! ನೀನು ಭೂಲೋಕದಲ್ಲಿ ಅವತರಿಸಿದಂದಿನಿಂದ ಇದುವರೆವಿಗೂ ಮಣ್ಣಿನ ವಾಸನೆಯ ಮಲಿನವಾದ ವಿಷಯ ಭೋಗದ ಸುಖಕ್ಕೆ ಒಳಗಾಗದೆ ಧರ್ಮದ ದಾರಿಯಲ್ಲೇ ಹೆಜ್ಜೆಹಾಕುತ್ತ ಬಂದಿರುವಿ. ನಿನ್ನ ಧರ್ಮ ಸಾಧನೆ ಅತ್ಯಮೋಘವಾದದ್ದು. ಆದ್ದರಿಂದಲೇ ಸ್ವಾಮಿಯ ಆಜ್ಞೆಯಂತೆ ನಿನ್ನ ಸ್ವಾಗತಕ್ಕಾಗಿ ಬಂದಿದ್ದೇನೆ . ನಿನ್ನ ಭಗವತಾಕಾರ್ಯ ಸಾಧನೆ ಶ್ರೀಹರಿಗೆ ಸುಪ್ರೀತವಾಯಿತು ಎಂದು ಹೇಳಿ ಹಸ್ತಲಾಘವದಿಂದ ಧರ್ಮರಾಜನನ್ನು ರಥದಲ್ಲಿ ಕೂಡಿಸಿಕೊಂಡು ಸ್ವರ್ಗಲೋಕಕ್ಕೆ ಖೇಚರ ಮಾರ್ಗದಿಂದ ಬಂದನು.

ದೇವದೂತರು ದುರ್ಯೋಧನಾದಿಗಳಿದ್ದ ವೀರಸ್ವರ್ಗವನ್ನು ತೋರಿಸಿದರು. ಅಲ್ಲಿ ದುರ್ಯೋಧನನು ತನ್ನ ಸಹೋದರರು ಮಿತ್ರ ಬಾಂಧವರೊಡನೆ ಸ್ವರ್ಗದಲ್ಲಿ ಸಂತೋಷಪಡುತ್ತಿದ್ದನು. ಅಲ್ಲಿ ಭೀಷ್ಮದ್ರೋಣಾದಿಗಳು ತನ್ನ ತಮ್ಮಂದಿರು ಯಾರು ಕಾಣಲಿಲ್ಲ. ದ್ರೌಪದಿಯೂ ಕಾಣಲಿಲ್ಲ. ಆಗ ಧರ್ಮರಾಯನು ರಥದಿಂದಿಳಿಯದೆ ಖಿನ್ನನಾಗಿರಲು ದೇವದೂತರು ಧರ್ಮರಾಜಾ ಇದು ಸ್ವರ್ಗ ಇಲ್ಲಿ ನೀನು ನಿನಗೆ ಬೇಕಾದ ರೀತಿಯಲ್ಲಿ ಸುಖ ಸಂತೋಷವನ್ನು ಹೊಂದಬಹುದು ಏಕೆ ಸಂದೇಹ? ಎಂದರು.

ಆಗ ಧರ್ಮರಾಜನು ಇದು ಅವೈಷ್ಣವರಿರುವ ಸ್ಥಳ ಆದ್ದರಿಂದ ದುರ್ಯೋಧನಾದಿಗಳಂಥ ವಿಷ್ಣುದ್ವೇಶಿಗಳ ಸಹವಾಸದಲ್ಲಿದ್ದರೆ ಸ್ವರ್ಗಸುಖವೂ ನನಗೆ ನರಕಕ್ಕೆ ಸಮಾನ ನಾನು ಒಲ್ಲೆನು ಎಂದನು. ಆಗ ವಿಷ್ಣುದೂತರು ''ಮಹಾತ್ಮಾ ಮತ್ತೆಲ್ಲಿ ಹೋಗುವಿ? ಎಂದರು. ನನಗೆ ಭಾಗವತೋತ್ತಮ ಸಂಘ ಸುಖಬೇಕು.

ನನ್ನ ಸಹೋದರರು ಭೀಷ್ಮದ್ರೋಣಾದಿಗಳಂಥ ವೈಷ್ಣವರ ಸಾಮೀಪ್ಯವೇ ಸ್ವರ್ಗಸುಖ ಅಲ್ಲಿಗೆ ಹೋಗುತ್ತೇನೆ ನೀವು ಏನೇ ಕೊಟ್ಟರೂ ನನಗೆ ಹರಿದ್ವೇಶಿಗಳ ಮುಖದರ್ಶನವೂ ಹಾನಿ ಎಂದು ನಿರಾಕರಿಸುತ್ತೇನೆ ಎಂದನು.

ಆಗ ಯಮಧರ್ಮರಾಯನು ''ದೇವ ದೂತರೇ! ನೀವು ಧರ್ಮರಾಯನನ್ನು

ಅವನ ಪ್ರಿಯಜನರ ಸಮೀಪಕ್ಕೆ ಕರೆದುಕೊಂಡು ಹೋಗಿ ಸೇರಿಸಿರಿ ಎಂದು ಆಜ್ಞೆ ಮಾಡಿದನು.

ಆಗ ಶ್ರೀಶನಿಚ್ಛೆಯಂತೆ ವಿಷ್ಣುದೂತರು ಧರ್ಮರಾಜನನ್ನು ಕರೆದೊಯ್ಯುವಾಗ ಮಿಥ್ಯಾಭೂತವಾದ ನರಕ ಲೋಕದ ಕಡೆ ಅವನ ದೃಷ್ಟಿ ಬೀಳುವಂತೆ ಕರೆದುಕೊಂಡು ಹೋಗುತ್ತಿದ್ದರು. ಘೋರ ಯಾತನೆಯಿಂದ ನರಳುತ್ತಿದ್ದ ದುರ್ಗಂಧ ತುಂಬಿದ ನರಕಲೋಕವನ್ನು ಧರ್ಮರಾಯನು ನೋಡಿದನು. ಆಗ ನರಕ ವಾಸಮಾಡುತ್ತಿದ್ದ ಪಾಪಜೀವಿಗಳಿಗೆ ಏನೋ ಒಂದು ವಿಧವಾದ ಅಪೂರ್ವ ಸುಖಾನಂದವಾಯಿತು. ಆಗ ಅವರೆಲ್ಲರೂ ಪುಣ್ಯಾತ್ಮಾ! ನೀನಾರೋ ಮಹಾ ಪುರಷನಂತೆ ಕಾಣುತ್ತಿ. ನೀವು ನಿನ್ನ ಪುಣ್ಯ ತುಂಬಿದ ದೃಷ್ಟಿಯಿಂದ ನಮ್ಮನ್ನು ನೋಡಿದಾಕ್ಷಣವೇ ನಮ್ಮ ಘೋರ ಹಿಂಸೆ ಶಾಂತವಾಯಿತು. ನಿನ್ನ ಪುಣ್ಯದುಸರಿನ ಸುಗಂಧದಿಂದ ನಮ್ಮ ಪಾಪದ ದುರ್ಗಂಧ ನಿವಾರಣೆ ಆಯಿತು. ''ತಂದೇ! ನೀನು ಇಲ್ಲೆ ಇದ್ದು ನಮ್ಮ ಸಂಕಟವನ್ನು ಪರಿಹಾರಮಾಡು'' ಎಂದು ಪ್ರಾರ್ಥಿಸಿಕೊಂಡಾಗ ಧರ್ಮರಾಯನು ಆ ಪಾಪ ಜೀವಿಗಳ ಸುಖವೇ ತನ್ನ ಸುಖವೆಂಬ ಕರುಣದಿಂದ ದೇವದೂತರು ಪುಣ್ಯಧಾಮಕ್ಕೆ ಬಲತ್ಕಾರದಿಂದ ಕರೆದುಕೊಂಡು ಹೋಗಲು ಎಳೆಯುತ್ತಿದ್ದರೂ ಧರ್ಮರಾಜನು ಕದಲದೆ ತನ್ನ ಕರುಣಾದೃಷ್ಟಿಯಿಂದ ನರಕವಾಸಿಗಳನ್ನು ನೋಡುತ್ತ ನಿಂತಿದ್ದನು. ಸ್ವರ್ಗದಲ್ಲಿದ್ದ ಮಿತ್ರರು ಬಾಂದವರು ಎಲ್ಲರೂ ''ಧರ್ಮರಾಜಾ! ನಾವೆಲ್ಲರೂ ಸ್ವರ್ಗದಲ್ಲಿದ್ದೇವೆ ನಿನಗಾಗಿ ಕಾಯುತ್ತಿದ್ದೇನೆ ಬಾ'' ಎಂದು ಕೂಗುತ್ತಿದ್ದರೂ ದೇವದೂತರು ಬಲವಂತಮಾಡುತ್ತಿದ್ದರೂ ನರಕವಾಸಿಗಳಿಗೆ ಸುಖ ಕೊಡಲಿಕ್ಕಾಗಿ ದುರ್ಗಂಧವನ್ನು ಸಹಿಸುತ್ತ ಆ ಪವಿತ್ರ ಸ್ಥಳದಲ್ಲಿ ಪವಿತ್ರಭಾವದಿಂದ ನಿಂತಿದ್ದನು. ಆಗ ಯಮಧರ್ಮರಾಜನು ಧರ್ಮರಾಜನನ್ನು ಕುರಿತು ವತ್ಸಾ! ನೀನು ನನ್ನ ಎಲ್ಲಾ ಪರೀಕ್ಷೆಯಲ್ಲೂ ಗೆದ್ದಿರುವಿ. ನೀನು ಮಹಾಧರ್ಮಾತ್ಮನಾದಾಗ್ಯೂ ಒಂದು ಸಣ್ಣ ಅಪರಾಧದಿಂದ ಈಗ ನಾವು ಮಿಥ್ಯಾಭೂತವಾಗಿ ನಿರ್ಮಿಸಿದ ನರಕದರ್ಶನ ನಿನಗೆ ಉಂಟಾಯಿತು. ಇದು ನಿಜವಾದ ನರಕವಲ್ಲ. ನಿನಗೆ ನರಕ ದರ್ಶನ ಏತಕ್ಕಾಗಿ ಉಂಟಾಯಿತೆಂದರೆ ದೇವದೇವೋತ್ತಮನಾದ ಶ್ರೀಕೃಷ್ಣನ ಮಾತಿನಲ್ಲೂ ನೀನು ನಿನ್ನ ಧರ್ಮಕ್ಕೆ ಚ್ಯುತಿ ಬರಬಾರದೆಂಬ ಭ್ರಾಂತಿಯಿಂದ ಸಂದೇಹ ಪಟ್ಟಿ. ಶ್ರೀಶನೇ ನಿನ್ನನ್ನು ಕುರಿತು ದ್ರೋಣನಿಗೆ ಅಶ್ವತ್ಥಾಮ ಸತ್ತನೆಂದು ಹೇಳು. ಅದು ನಿನಗೆ ದೋಷವಾಗುವುದಿಲ್ಲ ಎಂದು ಹೇಳಿದರೂ ನೀನು ಸಂದೇಹದಿಂದ ಸುಳ್ಳು ಹೇಳಲು ಒಪ್ಪಲಿಲ್ಲ ದೇವರ ವಚನದಲ್ಲೂ ನೀನು ಅನುಮಾನಪಟ್ಟ ಕಾರಣ ಕೃತಕವಾದ ನರಕ ನಿರ್ಮಾಣ ಮಾಡಿ ನಿನಗೆ ತೋರಿಸಿ ಅಲ್ಲಿ ಒಂದು ಮುಹೂರ್ತ ವಾಸ ಮಾಡುವಂತೆ ಮಾಡಿದೆವು ಎಂದು ಹೇಳಿ ನರಕ ಕಾಣದಂತೆ ಅದೃಶ್ಯ ಮಾಡಿದನು.

## ಪುಣ್ಯಲೋಕದಲ್ಲಿ ಪಾಂಡವರ ವೈಭವ

ಯಮಧರ್ಮರಾಜನು ಸ್ವರ್ಗಲೋಕಕ್ಕೆ ಧರ್ಮರಾಜನನ್ನು ಕರೆದುಕೊಂಡು ಹೋಗಿ ಅಲ್ಲಿ ಭೀಮ-ಅರ್ಜುನ-ನಕುಲ-ಸಹದೇವ ನಾಲ್ಕು ಜನರೂ ತಮ್ಮ ತಮ್ಮ ಉನ್ನತ ಸ್ಥಾನದಲ್ಲಿ ವಿರಾಜಿಸುತ್ತಿರುವುದನ್ನು ತೋರಿಸಿ. ಧರ್ಮರಾಜಾ! ನಿನ್ನ ಸಹೋದರರೆಂದು ನರಲೋಕದಲ್ಲಿ ಅವತರಿಸಿದ್ದ ಇವರು ದೋಷದಿಂದ ದೇಹತ್ಯಾಗ ಮಾಡಿದರೆಂದು ನೀನು ತಿಳಿದಿದ್ದಿ ನೀನು ತಿಳಿದಂತೆ ಇವರು ದೋಷಿಗಳಲ್ಲ. ನಿನ್ನ ಭ್ರಾಂತಿ ಜ್ಞಾನವನ್ನು ನಿವಾರಿಸಿಕೊಂಡು ಸ್ವಚ್ಛ ದೃಷ್ಟಿಯಿಂದ ನಿನ್ನ ಸಹೋದರರು ಉಚ್ಚಸ್ಥಾನವನ್ನು ಸೇರಿ ತಮ್ಮ ಪ್ರತಿಭೆಯಿಂದ ಪ್ರಕಾಶಿಸುವುದನ್ನು ನೋಡು ಎಂದು ದಿವ್ಯ ದೃಷ್ಟಿಕೊಟ್ಟನು.

ಧರ್ಮರಾಜನು ಆಗ ಆನಂದದಿಂದ ನೋಡಿದರೆ ಅವರೆಲ್ಲರೂ ದೇವತೆಗಳಿಂದ ಪೂಜೆಗೊಳ್ಳುತ್ತ ಎಲ್ಲರಿಂದಲೂ ವೈಭವದಿಂದ ವಾಲ್ಗೈಸಿಕೊಳ್ಳುತ್ತಿದ್ದರು. ಆಗ ಧರ್ಮರಾಜನು ಇವರಿಗೆ ಪಾಪದೋಷವಿಲ್ಲವೆಂದು ನಿಸ್ಸಂದೇಹದಿಂದ ತಿಳಿದನು. ತೇಜಸ್ಸಿನಿಂದ ದೇವತಾಸಮೂಹದ ಮಧ್ಯದಲ್ಲಿ ಶೋಭಿಸುತ್ತಿದ್ದ ತಮ್ಮಂದಿರನ್ನು ವಾತ್ಸಲ್ಯದಿಂದ ಆಲಂಗಿಸಿಕೊಳ್ಳಲು ಮುಂದೆ ಬಂದಾಗ ಯಮನು ಆಗ ಧರ್ಮರಾಜಾ! ಇವರನ್ನು ನಿನ್ನ ತಮ್ಮಂದಿರೆಂಬ ಅಭಿಮಾನದಿಂದ ವ್ಯಾಮೋಹಪಡಬೇಡ ಇವರು ದೇವತಾಮೂರ್ತಿಗಳು. ನಾರಾಯಣನು ಭೂಭಾರಹರಣ ಕಾರ್ಯಕ್ಕಾಗಿ ಕೃಷ್ಣಾವತಾರ ಮಾಡಿದಾಗ ಅವನ ಆಜ್ಞೆಯಂತೆ ಸಕಲ ದೇವತೆಗಳು ಅಂಗಭೂತರಾಗಿ ಭೂಮಿಯಲ್ಲಿ ಅವತರಿಸಿ ಅನೇಕ ಮಂದಿ ಭಗವದ್ವೇಷಿಗಳನ್ನು ಶ್ರೀಕೃಷ್ಣಾನುಗ್ರಹದಿಂದ ಕೊಂದು ಧರ್ಮರಕ್ಷಣೆಮಾಡಿ ನಾರಾಯಣನಿಗೆ ಅರ್ಪಿಸಿ ಮಹತ್ತಾದ ಪುಣ್ಯಕ್ಕೆ ಭಾಗಿಗಳಾದರು.

ಶ್ರೀಕೃಷ್ಣ ಪರಂಧಾಮಕ್ಕೆ ಹೊರಟನೆಂದು ತಿಳಿದಾಕ್ಷಣವೇ ಅಪ್ರಾಕೃತ ಶರೀರ ಉಳ್ಳ ಭಗವಂತನೇ ದೇಹನೀಗಿ ಪರಂಧಾಮಕ್ಕೆ ಹೋಗಿದ್ದಾನೆ. ಎಂದು ಅಜ್ಞಾನಿ ಜನರ ಮೋಹನಾರ್ಥವಾಗಿ ವಿಡಂಬನೆ ಮಾಡಿದ್ದರೂ ನಾವು ಸ್ವಾಮಿಯ ದಾಸರಾದ ಕಾರಣ ನರಲೋಕದವನು. ಹೇಗೆ ದೇಹ ಬಿಟ್ಟಂತೆ ತೋರಿಸಿದನೋ ನಾವು ಅದೇ ರೀತಿ ಹೋಗಬೇಕೆಂದು ದೇಹತ್ಯಾಗಮಾಡಿ ತಮ್ಮ ಮೂಲಸ್ಥಾನ ಸೇರಿದ್ದಾರೆ.

ಧರ್ಮರಾಯಾ! ನಿನಗಿನ್ನೂ ನರಲೋಕದ ವಿಷಯ ವಾಸನೆ ಪೂರ್ಣ ಕಳಚಿಲ್ಲ. ಮನುಷ್ಯ ದೇಹದಿಂದ ಸಂಪರ್ಕವಾದ ವ್ಯಾಮೋಹ ನಿನ್ನನ್ನು ಹೊಂದಿರುವುದರಿಂದ ನನ್ನ ತಮ್ಮಂದಿರು ನಿರ್ದೋಶಿಗಳು ಎಂದು ಸಂತೋಷದಿಂದ ಉತ್ಸಾಹಗೊಳ್ಳುತ್ತಿರುವಿ. ದುರ್ಯೋಧನನ ಸ್ವರ್ಗಸುಖ. ಅವನ ವೈಭವವನ್ನು ನೋಡಿ. ವಿಷ್ಣುದ್ವೇಶಿಗೂ ಇಂಥ ಪುಣ್ಯಲೋಕದಲ್ಲಿ ಹೇಗೆ ಸ್ಥಾನಸಿಕ್ಕಿತೆಂದು ದುಃಖ ಪಡುತ್ತಿರುವಿ. ಎಲ್ಲವೂ ದೇವತಾರಹಸ್ಯವೆಂಬ ಸುಜ್ಞಾನ ನಿನಗೆ ಬರಬೇಕಾದರೆ ಸ್ವರ್ಗದ ಪುಣ್ಯೋದಕದಲ್ಲಿ ಸ್ನಾನಮಾಡಿ ನರದೇಹವನ್ನು ತ್ಯಜಿಸಿ

ದೇವತಾ ದೇಹದಲ್ಲಿ ಸೇರು.

ದುರ್ಯೋಧನಾದಿಗಳ ಸ್ವರ್ಗದ ಸುಖ ಕ್ಷಣ ಹೊತ್ತು ಮಾತ್ರ ಕಿಂಚಿತ್ತು ಪುಣ್ಯ ಕಳೆದಾಕ್ಷಣವೇ ಅಂಧಂತಮಸ್ಸಿಗೆ ಸೇರಿ ಅಲ್ಲಿ ನಿರಂತರ ದುಃಖವನ್ನು ಅನುಭವಿಸುತ್ತಾರೆ. ಅವರಿಗೆ ಉದ್ಧಾರವೇ ಇಲ್ಲ ಎಂದನು. ಧರ್ಮರಾಜನು ವಾಯುದೇವರೊಡನೆ ಭೀಮನು ದ್ರೌಪದೀದೇವಿಯೊಡನೆ ಕುಳಿತಿರುವುದನ್ನು ಕಂಡನು. ಇಂದ್ರನೊಡನೆ ಕುಳಿತಿದ್ದ ಅರ್ಜುನನನ್ನು ಕಂಡನು. ಅಶ್ವಿನೀ ದೇವತೆಗಳ ಬಳಿ ನಕುಲ ಸಹದೇವರು ಕುಳಿತಿರುವುದನ್ನು ಕಂಡನು. ದ್ರೌಪದೀದೇವಿ ಭಾರತೀದೇವಿಯರ ಪೂರ್ಣ ಆವೇಶದಿಂದ ಮೂರುಲೋಕವನ್ನು ತನ್ನ ತೇಜಸ್ಸಿನಿಂದ ಬೆಳಗುತ್ತ ಅನೇಕ ದೇವತಾಸ್ತ್ರೀಯರಿಂದ ವಾಲ್ಗೈಸಿಕೊಳ್ಳುತ್ತಿರುವುದನ್ನು ನೋಡಿದ ಧರ್ಮರಾಜನು ಪೂರ್ವಸಂಸ್ಕಾರದಂತೆ ಅವಳನ್ನು ಸ್ನೇಹ ಪೂರ್ವಕವಾಗಿ ಸಲಿಗೆಯಿಂದ ಸಮೀಪಕ್ಕೆ ಹೋಗುವುದನ್ನು ಕಂಡ ಯಮಧರ್ಮರಾಜನು ಧರ್ಮರಾಜನನ್ನು ತಡೆದು ''ಧರ್ಮರಾಜಾ! ನಿನಗೆ ದ್ರೌಪದಿಯ ಸಮೀಪದಲ್ಲಿ ನಿಂತು ಆಕೆಯನ್ನು ನೋಡುವುದಕ್ಕೂ ಅಧಿಕಾರವಿಲ್ಲ. ಅವಳು ನಿನ್ನ ಪತ್ನಿ ಎಂಬ ವ್ಯಾಮೋಹದಿಂದ ಹೋಗಬೇಡ ದ್ರೌಪದಿ ದೇವೋತ್ತಮಳು. ನಿಮಗೆ ಆಕೆ ಪತ್ನಿಯಾಗಿದ್ದ ಕಾರಣವೇನೆಂದರೆ ನಿಮ್ಮ ದೇಹದಲ್ಲಿ ಮುಖ್ಯ ಪ್ರಾಣನ ಅಂಶ ವಿಶೇಷವಾದ್ದರಿಂದ ಸ್ಪರ್ಶ ಮಾಡುತ್ತಿದ್ದಿರಿ. ಭಾರತೀದೇವಿಯಲ್ಲಿ ಶಚಿ-ಶ್ಯಾಮಲ-ಉಷ-ಪಾರ್ವತಿ ನಾಲ್ಕು ಮಂದಿ ದೇವತಾಸ್ತ್ರೀಯರೂ ಇದ್ದ ಕಾರಣ ಭಾರತೀ ದೇವಿಯ ಆಶ್ರಯ ಪಡೆದು ಅವಳಲ್ಲಿದ್ದ ನಿಮ್ಮ ನಿಮ್ಮ ನಿಯತ ಪತ್ನಿಯರೊಂದಿಗೆ ನೀವು ಅಂಗಸಂಗದ ಸುಖ ಪಡೆಯುತ್ತಿದ್ದಿರಿ. ಅರ್ಜುನನು ನಿಮಗಿಂತಲೂ ವಿಶೇಷ ರೀತಿಯಲ್ಲಿ ಮುಖ್ಯಪ್ರಾಣನ ಆವೇಶ ಹೊಂದಿದ್ದ ಕಾರಣ ದ್ರೌಪದಿ ಅರ್ಜುನನನ್ನು ನಿಮಗಿಂತಲೂ ಅಧಿಕವಾಗಿ ಗೌರವಿಸುತ್ತಿದ್ದಳು. ಭಾರತೀದೇವಿ ತಾರತಮ್ಯನುಸಾರ ನಿಮ್ಮಲ್ಲಿ ಸ್ನೇಹಭಾವತೋರಿಸಿ ನಡೆಯುತ್ತಿದ್ದರಿಂದ ಅವಳಿಗೆ ದೋಷಾರೋಪಣೆಗೆ ಅವಕಾಶವಿಲ್ಲ. ಈಗ ಭಾರತೀದೇವಿಯಲ್ಲಿ ನಿಮ್ಮ ನಾಲ್ಕು ಜನ ಸತಿಯರ ಆವೇಶವೂ ಇಲ್ಲ ಅಚ್ಚಭಾರತಿ ಈಗ ಮುಖ್ಯಪ್ರಾಣನೊಬ್ಬನಿಗೇ ಪತ್ನಿ ಆಗಿದ್ದಾಳೆ. ನಿಮ್ಮ ನಾಲ್ಕರಲ್ಲೂ ಈಗ ಮುಖ್ಯ ಪ್ರಾಣನ ಆವೇಶವಿಲ್ಲ ಎಂದು ಹೇಳಿ ಧರ್ಮರಾಜನಿಗೆ ನರದೇಹದ ವಾಸನೆ ಕಳೆಯಲಿಕ್ಕಾಗಿ ಶ್ರೀಮನ್ನಾರಾಯಣನ ಸ್ಥನದಿಂದ ಹುಟ್ಟಿದ ದೇಹದಿಂದ ಧರ್ಮರಾಜನನ್ನು ಆಲಿಂಗನೆಮಾಡಿಕೊಂಡಾಗ ಧರ್ಮರಾಜನ ದೇಹಹೋಗಿ ಯಮಧರ್ಮರಾಜನಲ್ಲಿ ಐಕ್ಯಹೊಂದಿದನು. ಹೀಗೆ ಪಾಂಡವರು ತಮ್ಮ ತಮ್ಮ ಮೂಲರೂಪದಲ್ಲಿ ತಮ್ಮ ಪತ್ನಿಯರೊಂದಿಗೆ ಸ್ವರ್ಗಸುಖ ಅನುಭವಿಸುತ್ತಿರುವಾಗ ಶ್ರೀಕೃಷ್ಣನೂ ಅವರೊಂದಿಗೆ ಭೂಲೋಕದಲ್ಲಿ ಹೇಗೆ ಸ್ನೇಹಾಭಿಮಾನದಿಂದದ್ದನೋ ಅದೇ ರೀತಿ ಸ್ವರ್ಗದಲ್ಲೂ ಅವರೊಂದಿಗೆ ಕ್ರೀಡಾದಿಗಳನ್ನು ತೋರಿಸುತ್ತ ಸಂತೋಷಪಡಿಸುತ್ತಿದ್ದನು. ದುರ್ಯೋಧನಾದಿ ಧರ್ಮದ್ರೋಹಿಗಳು ಕ್ಷಣಹೊತ್ತಿನ ತಮ್ಮ ಅಲ್ಪ ಪುಣ್ಯತೀರಿದಾಕ್ಷಣವೇ ಅಂಧಂತ ಮಸ್ಸಿಗೆ ಸೇರಿದರು.

ಶುದ್ಧವಾದ ಧರ್ಮಶಾಸ್ತ್ರ ಹೇಳಿರುವಂತೆ ಸ್ವರ್ಗ ಮತ್ತು ನರಕಗಳಲ್ಲೂ ತಾರತಮ್ಯ ಉಂಟೆಂದು ತಿಳಿಯಬೇಕು. ಮುಖ್ಯಪ್ರಾಣನಿಗೆ ಸ್ವರ್ಗದಲ್ಲಿ ಅತಿಶಯಸುಖವುಂಟು ಹರಿದ್ವೇಶಿಗಳಿಗೂ ಹರಿಭಕ್ತದ್ವೇಶಿಗಳಿಗೂ ನರಕದಲ್ಲಿ ತಾರತಮ್ಯ ಪ್ರಕಾರ ನರಕ ದುಃಖಾದಿಗಳು ಒದಗುತ್ತವೆ. ತಮ್ಮ ಪಾಪಕರ್ಮಾನುಸಾರ ಕೆಲವರು ದೈತ್ಯರಾಗಿಯೂ ಕೆಲವರು ಪಿಶಾಚಿಗಳಾಗಿಯೂ ದಾನವರಾಗಿಯೂ - ರಾಕ್ಷಸರಾಗಿಯೂ ಹುಟ್ಟಿ ಪಾಪದ ಕೊಡ ತುಂಬಿದ ನಂತರ ಘೋರವಾದ ಅಂಧಂತಮಸ್ಸಿನಲ್ಲಿ ಬಿದ್ದು ನಿರಂತರ ಸಂಕಟದಿಂದ ನರಳುತ್ತಾರೆ. ತಮೋಯೋಗ್ಯರಾದ ದೈತ್ಯರು ಶುದ್ಧವೈಷ್ಣವ ಧರ್ಮಕ್ಕೆ ಅನಧಿಕಾರಿಗಳು. ದುಃಸ್ಸಾಹಸದಿಂದ ವೈಷ್ಣವ ಧರ್ಮವನ್ನು ಅವಲಂಬಿಸಿದರೂ ಹೋಮದ್ರವ್ಯವನ್ನು ನಾಯಿಮುಟ್ಟಿದಂತೆ ಅಸಜ್ಜನರಾದ ಪಾಪಿಗಳು ವೈಷ್ಣವ ಧರ್ಮ ಸಂಪರ್ಕಿಸಬಾರದೆಂದು ಸ್ವಾಮಿ ಬೌದ್ಧಾವತಾರದಿಂದ ದೈತ್ಯರನ್ನು ಅಧೋಗತಿಗೆ ಹಾಕಿದ ಅವನ ಕಾರುಣ್ಯದ ಸಿರಿಯನ್ನು ಎಷ್ಟು ವರ್ಣಿಸಿ ಸ್ತುತಿಸಿದರೂ ಸಾಲದು.

ಶ್ರೀ ಹರಿಯು ಕಲಿಮಲದೋಷದಿಂದ ನರಳುವ ಸಜ್ಜನರ ರಕ್ಷಣೆಗಾಗಿ ಮುಖ್ಯಪ್ರಾಣ-ಭೀಮ-ಮದ್ವರೆಂಬ ತಪೋತೇಜಸ್ಸಿನಲ್ಲಿ ಅಂತರ್ಗತನಾಗಿ ದೈತ್ಯರನ್ನು ವಿನಾಶಗೊಳಿಸಿ ಶುದ್ಧಾತ್ಮರನ್ನು ಸಂರಕ್ಷಿಸಿದ ಸತ್ಕಥನದ ಸಾರಾಮೃತವನ್ನು ಪಾನಮಾಡಿದವರೆ ಮಹಾತ್ಮರು. ತತ್ತ್ವಸಾರ ಭರಿತವಾದ ಅಂತರಾರ್ಥಗಳ ಆಳವನ್ನು ಪ್ರಮಾಣ ಪೂರ್ವಕವಾಗಿ ನಿಶ್ಪಕ್ಷಪಾತದಿಂದ ತಿಳಿಸಿ ಸುಜ್ಞಾನದ ಸುವರ್ಣವೃಷ್ಟಿಯಿಂದ ಸಮಸ್ತರನ್ನು ಸಂತೋಷಪಡಿಸಿ ಮಂಗಳದ ಮಳೆ ಕರೆದಿರುವ ಅಮರವಾಣಿ ಸಮಸ್ತ ಸಜ್ಜನರ ಮನದೋಟದಲ್ಲೂ ನೆಲೆ ನಿಂತು. ಸ್ವಚ್ಛಧರ್ಮದ ಪುಷ್ಪ ವಿಕಸಿತಗೊಂಡು ಪರಮಾತ್ಮನ ಪಾದಾರ್ಪಣೆಗೊಳ್ಳಲಿ ಮೋಕ್ಷ ಮಾರ್ಗಕ್ಕೆ ದೀವಟಿಗೆ ಆಗಲಿ ಎಂಬ ಶ್ರೀಮದ್ವಾಚಾರ್ಯ ಗುರಸಾರ್ವಭೌಮರ ಶುಭನುಡಿಗಳು ಲೋಕಕ್ಕೆ ಶ್ರೀರಕ್ಷೆ ಆಗಲಿ.

